# ಗಳಗನಾಥ

## ಸಮಗ್ರ ಸಾಹಿತ್ಯ

ಸಂಪುಟ ೫

ಕಾದಂಬರಿಗಳು






ಮನೋಹರ ಗ್ರಂಥ ಮಾಲಾ, ಧಾರವಾಡ.

'ಗಳಗನಾಥ ಸಮಗ್ರ ಸಾಹಿತ್ಯ'
ಎರಡನೆಯ ಮುದ್ರಣ ಸಂಪುಟ ಸಮಿತಿ

ಪ್ರಧಾನ ಸಂಪಾದಕರು
ಡಾ. ಎಂ.ಎಂ. ಕಲಬುರ್ಗಿ

ಸಂಪಾದಕ ಮಂಡಲಿ
ಪ್ರೊ. ದುಷ್ಯಂತ ನಾಡಗೌಡ
ಡಾ. ಹ.ವೆಂ. ಶಾಖಂಡಿಕಿ
ಡಾ. ರಮಾಕಾಂತ ಜೋಶಿ
ಶ್ರೀ ಸತೀಶ ಕುಲಕರ್ಣಿ
ಶ್ರೀ ವೆಂಕಟೇಶ ಬಿ. ಕುಲಕರ್ಣಿ
ಶ್ರೀ ಶ್ರೀಧರ ಎಸ್. ಜೋಶಿ

ಮೊದಲನೆಯ ಮುದ್ರಣ : ೧೯೯೯
ಎರಡನೆಯ ಮುದ್ರಣ : ೨೦೧೪

# ಗಳಗನಾಥ ಸಮಗ್ರ ಸಾಹಿತ್ಯ

## ಕಾದಂಬರಿಗಳು

ಸಂಪುಟ : ೫

## ಕ್ಷಾತ್ರ ತೇಜ
## ಸತ್ವಸಾರ
## ತಿಲೋತ್ತಮೆ
## ಧಾರ್ಮಿಕ ತೇಜ
## ರಾಣಾ ರಾಜಸಿಂಹ

ಗಳಗನಾಥ
(ವೆಂಕಟೇಶ ತಿರಕೋ ಕುಲಕರ್ಣಿ)



ಮನೋಹರ ಗ್ರಂಥ ಮಾಲಾ, ಧಾರವಾಡ.

**GALAGANATHA SAMAGRA SAHITYA**
(Complete works of GALAGANATHA)
Novels in Six Volumes
Vol - V
1. Kshaatra Teja
2. Satvasaara
3. Tilottame
4. Dhaarmika Teja
5. Raanaa Raja Simha

Chief Editor : Dr. M.M. Kalburgi

Publisher : **MANOHARA GRANTHA MALA**
Laxmi Bhavan, Subhas Road, Dharwad - 580 001.
Phone : 0836 - 2441822, 2441823
www.granthamala.com

Website Design : Weblogix, Dharwad

Printer : **Lakshmi Mudranalaya**
Chamarajpeth, Bangalore - 560018.
Phone : 080 - 26613123, 26618752

Edition : Second Year : 2014 Pages : XXXX + 706 = 746
Paper : 70 gsm N.S. Maplitho

Cover Design : artec, Dharwad

Founder Editor : Late G. B. Joshi
Literary Advisors : Girish Karnad, Giraddi Govindaraj
Editor-Publisher : Ramakant Joshi
Manager : Sameer R. Joshi

Price : Rs.2000/- ISBN : 978-93-81822-41-8
(One set of Six Volumes)

## ಪ್ರಕಾಶಕರ ಮಾತು

ಗಳಗನಾಥರು ಆಧುನಿಕ ಕನ್ನಡ ಸಾಹಿತ್ಯಕ್ಷೇತ್ರದ ಆದಿಪುರುಷರು. ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸಿದವರು. ತಮ್ಮ ಜೀವಿತ ಕಾಲದಲ್ಲಿ ಕನ್ನಡದಲ್ಲಿ ಕಾದಂಬರಿಗಳನ್ನು ಬರೆದು, ಸ್ವತಃ ಪ್ರಕಟಿಸಿ, ಚೀಲಗಳಲ್ಲಿ ತುಂಬಿಕೊಂಡು ಮನೆಮನೆಗೆ ಸಂಚರಿಸಿ ಮಾರಿದವರು. ಪ್ರಕಟನೆಯ ಪ್ರಪಂಚದಲ್ಲಿ ಕೈಸುಟ್ಟುಕೊಂಡು, ಸಾಲ ಸೋಲ ಮಾಡಿಕೊಂಡವರು. ಆದರೂ ತಮ್ಮ ಧ್ಯೇಯದಿಂದ ಒಂದಿಷ್ಟೂ ಅಲುಗಾಡದೆ ಮುನ್ನಡೆದವರು.

ಗಳಗನಾಥರ ಕಾಲಾನಂತರ ಅವರ ಕೃತಿಗಳೂ ಮಾರುಕಟ್ಟೆಯಿಂದ ಮಾಯವಾದವು. ಡಾ. ಎಂ.ಎಂ. ಕಲಬುರ್ಗಿಯವರು ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಸಮಯದಲ್ಲಿ 'ಗಳಗನಾಥ'ರ ಕಾದಂಬರಿಗಳ ಪುನರುಜ್ಜೀವನ ಕಾರ್ಯವನ್ನು ಕೈಗೊಂಡರು. 'ಸಂಯುಕ್ತ ಕರ್ನಾಟಕ'ದ ಮಾತೃಸಂಸ್ಥೆಯಾದ 'ಲೋಕ ಶಿಕ್ಷಣ ಟ್ರಸ್ಟ್' ಈ ಉದ್ದೇಶಕ್ಕಾಗಿ ೬ ಲಕ್ಷ ರೂ.ಗಳ ಆರ್ಥಿಕ ಸಹಾಯ ನೀಡಿದ್ದರ ಫಲವಾಗಿ, ೧೯೯೯ರಲ್ಲಿ ಅವರ ಪ್ರಧಾನ ಸಂಪಾದಕತ್ವದಲ್ಲಿ 'ಗಳಗನಾಥ ಕಾದಂಬರಿ ಸಮಗ್ರ' ಎಂಬ ಹೆಸರಿನಲ್ಲಿ ೬ ಸಂಪುಟಗಳನ್ನು ರಿಯಾಯಿತಿ ಬೆಲೆಯಲ್ಲಿ ಹೊರತರಲಾಯಿತು. ಎಲ್ಲ ಸಂಪುಟಗಳು ಅಲ್ಪ ಸಮಯದಲ್ಲಿ ಖರ್ಚಾಗಿ ಹೋದವು. ಹೀಗಾಗಿ ಕಳೆದ ೧೦ ವರ್ಷಗಳಿಂದ ಮತ್ತೆ ಗಳಗನಾಥರು ಮರೆಯಾಗುವ ಸಂದರ್ಭ ಒದಗಿತು.

ಡಾ. ಕಲಬುರ್ಗಿಯವರ ಪ್ರಕಾರ ಗಳಗನಾಥರನ್ನು ಮತ್ತೆ ಒಂದು ಶತಮಾನದ ವರೆಗೆ ಜನರ ಮನಸ್ಸಿನಲ್ಲಿ ಉಳಿಯುವಂತೆ ಮಾಡಬೇಕಾದರೆ, ಅವರ ಸಾಹಿತ್ಯವನ್ನು ಮರು ಮುದ್ರಿಸಿ ಹೊಸ ಜನಾಂಗಕ್ಕೆ ಲಭ್ಯವಾಗುವಂತೆ ಮಾಡುವುದಾಗಿದೆ. ಈ ದೃಷ್ಟಿಯಿಂದ ಸಮಗ್ರ ಕಾದಂಬರಿಗಳ ಜೊತೆಗೆ ಅವರ ಇತರ ಪ್ರಕಟಿತ ಮತ್ತು ಅಪ್ರಕಟಿತ ಸಾಹಿತ್ಯವನ್ನು ಹೊರತರುವ ಉದ್ದೇಶದಿಂದ ಅವರ ಮೊಮ್ಮಕ್ಕಳಾದ ಶ್ರೀ ವೆಂಕಟೇಶ ಬಿಷ್ಟಪ್ಪ ಕುಲಕರ್ಣಿ ಅವರನ್ನು ಸಂಪರ್ಕಿಸಲಾಗಿ, ಅವರು ಸಂತೋಷದಿಂದ ತಮ್ಮ ಹತ್ತಿರವಿದ್ದ ಗಳಗನಾಥರ ಹಸ್ತಪ್ರತಿಯ ಪೆಟ್ಟಿಗೆಯನ್ನೇ ಕೊಟ್ಟರು. ಅದರಲ್ಲಿ

ಮಹಾಭಾರತದ ಎಲ್ಲ ಪರ್ವಗಳ ಕನ್ನಡ ಭಾಷಾಂತರವಿದ್ದರೂ (ಎರಡು ಪರ್ವಗಳನ್ನು ಅವರು ತಮ್ಮ ಜೀವಿತ ಕಾಲದಲ್ಲಿಯೇ ಪ್ರಕಟಿಸಿದ್ದರು) ಹಸ್ತಪ್ರತಿಯು ಜೀರ್ಣಾವಸ್ಥೆಯಲ್ಲಿದ್ದು ಪುಟಗಳೆಲ್ಲ ಹರಡಿ ಹಂಚಿ ಹೋಗಿವೆ. ಅವನ್ನು ಸರಿಯಾಗಿ ಹೊಂದಿಸಿ, ಪ್ರಕಟನೆಗೆ ಯೋಗ್ಯ ಮಾಡುವುದೇ ಪ್ರಯಾಸದ ಕೆಲಸ. ಪ್ರಕಟಿತ ಇತರ ಕೃತಿಗಳನ್ನು ಶೋಧಿಸುವುದೂ ಇನ್ನೊಂದು ಕೆಲಸ. ಈ ಹೊಣೆಯನ್ನು ಡಾ. ಕಲಬುರ್ಗಿಯವರ ನೇತೃತ್ವದಲ್ಲಿ ಪ್ರೊ. ದುಷ್ಯಂತ ನಾಡಗೌಡ, ಡಾ. ಹ.ವೆಂ. ಕಾಖಂಡಿಕಿ, ಡಾ. ರಮಾಕಾಂತ ಜೋಶಿ, ಶ್ರೀ ಸತೀಶ ಕುಲಕರ್ಣಿ ಇವರು ಹೊತ್ತುಕೊಂಡಿದ್ದಾರೆ.

ಸ್ವತಃ ಸಾಹಿತಿಯಾಗಿರುವ ಶ್ರೀಮತಿ ಸುಧಾಮೂರ್ತಿಯವರದು ಕನ್ನಡ ಸಾಹಿತ್ಯದ ಜೀರ್ಣೋದ್ಧಾರ ವಿಷಯದಲ್ಲಿ ಅತ್ತಿಮಬ್ಬೆಯ ಪ್ರಜ್ಞೆ. 'ಗಳಗನಾಥ ಸಮಗ್ರ ಕಾದಂಬರಿ'ಗಳಷ್ಟೇ ಅಲ್ಲದೆ ಅವರ ಎಲ್ಲ ಕೃತಿಗಳನ್ನು ಒಟ್ಟಿಗೇ ತರಲು ಸೂಚಿಸಿ, ಅದರ ಆರ್ಥಿಕ ಭಾರವನ್ನು ತಮ್ಮ ಇನ್‌ಫೋಸಿಸ್ ಫೌಂಡೇಶನ್, ಬೆಂಗಳೂರು ಮೂಲಕ ಭರಿಸುವದಾಗಿ ತಿಳಿಸಿದರು.

ಮೊದಲ ಹಂತವಾಗಿ, ಈಗಾಗಲೇ ಪ್ರಕಟವಾದ ಗಳಗನಾಥರ ಕಾದಂಬರಿಗಳ ಆರು ಸಂಪುಟಗಳನ್ನು ಹೊರತರುತ್ತಿದ್ದೇವೆ. ನಂತರ ಅವರ ಇತರ ಪ್ರಕಟಿತ–ಅಪ್ರಕಟಿತ ಕೃತಿಗಳ ಸಂಪುಟಗಳನ್ನು ಹೊರತರುತ್ತೇವೆ. ಓದುಗರಿಗೆ ಭಾರವಾಗದ ಹಾಗೆ ಯೋಗ್ಯ ರಿಯಾಯಿತಿ ಬೆಲೆಯಲ್ಲಿ ಸಂಪುಟಗಳನ್ನು ಒದಗಿಸಲಾಗುತ್ತದೆ. ಕಾದಂಬರಿ ಸಂಪುಟಗಳನ್ನು ಈ ಮೊದಲು ಹಂಪಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದೆ. ಇವರೆಲ್ಲರಿಗೆ ಕೃತಜ್ಞರಾಗಿದ್ದೇವೆ.

ಗಳಗನಾಥರ ಇನ್ನೊಬ್ಬ ಮೊಮ್ಮಗನಾದ ಶ್ರೀಧರ ಶಂಕರಭಟ್ಟ ಜೋಶಿ ಇವರು ತಮ್ಮ ಹತ್ತಿರವಿದ್ದ ಗಳಗನಾಥರ ಕುಟುಂಬದ ಅಪರೂಪದ ಫೋಟೋವನ್ನು ನೀಡಿದ್ದಾರೆ.

ಬೆಂಗಳೂರಿನ ಲಕ್ಷ್ಮೀ ಮುದ್ರಣಾಲಯದವರು ಈ ಸಂಪುಟಗಳನ್ನು ಅತ್ಯಲ್ಪ ಸಮಯದಲ್ಲಿ ಮರುಮುದ್ರಣ ಮಾಡಿಕೊಟ್ಟಿದ್ದಾರೆ. ಸಂಪುಟಗಳ ಮುಖಪುಟವನ್ನು ಆರ್ಟೆಕ್, ಧಾರವಾಡ ಇವರು ಸಿದ್ಧಪಡಿಸಿದ್ದಾರೆ. ಇವರೆಲ್ಲರಿಗೂ ನಾನು ಆಭಾರಿ.

**– ರಮಾಕಾಂತ ಜೋಶಿ**

# ನಿಮ್ಮ ನೆನೆದಾಗಲೆ ಉದಯ

'ಗಳಗನಾಥ' ಹಾವೇರಿ ಜಿಲ್ಲೆಯ ಒಂದು ಹಳ್ಳಿ. ವೇಂಕಟೇಶ ತಿರಕೋ ಕುಲಕರ್ಣಿ ಯವರು ತಮ್ಮ ಈ ಹಳ್ಳಿಯ ಹೆಸರನ್ನು ಕಾವ್ಯನಾಮವಾಗಿ ಬಳಸುವ ಮೂಲಕ, ಅದನ್ನು ಕನ್ನಡ ಸಾಹಿತ್ಯದಲ್ಲಿ ಚಿರಸ್ಥಾಯಿಗೊಳಿಸಿದರು.

ಧಾರವಾಡದ ಗಂಡುಮಕ್ಕಳ ಟ್ರೇನಿಂಗ್ ಕಾಲೇಜು ಇವರ ಸಾಹಿತ್ಯಿಕ ವ್ಯಕ್ತಿತ್ವವನ್ನು, ಅಗಡಿಯ ಆನಂದಾಶ್ರಮ ಇವರ ಆಧ್ಯಾತ್ಮಿಕ ವ್ಯಕ್ತಿತ್ವವನ್ನು ರೂಪಿಸಿದವು. ಈ ಎರಡೂ ಆಯಾಮಗಳಿಗೆ ಆಧಾರವಾದುದು ಅವರ ಕನ್ನಡ ಶಾಲೆಯ ಶಿಕ್ಷಕ ವೃತ್ತಿ. ಹೊಸಗನ್ನಡ ಸಾಹಿತ್ಯಿಕ ಪರಿಸರವನ್ನು ಮೈಸೂರು ಪ್ರದೇಶದಲ್ಲಿ ರಾಜರ ಆಸ್ಥಾನ ವಿದ್ವಾಂಸರು ಸೃಷ್ಟಿಸಿದರೆ, ಉತ್ತರ ಕರ್ನಾಟಕದಲ್ಲಿ ಕನ್ನಡ ಶಾಲೆಯ ಮಾಸ್ತರರು ಸೃಷ್ಟಿಸಿದರು. ಇವರಲ್ಲಿ ಎದ್ದು ಕಾಣುವ ಹೆಸರು ಗಳಗನಾಥ ಮಾಸ್ತರರದು.

ಕನ್ನಡವನ್ನು ಸಾವಿರ ವರ್ಷಗಳಿಂದ ಆಳಿದ ಪದ್ಯಪ್ರಕಾರವನ್ನು ಹಿಂದೆ ಸರಿಸಿ, ಇತ್ತೀಚಿನ ನೂರು ವರ್ಷ ಅದನ್ನು ಆಳಿದುದು ಗದ್ಯಪ್ರಕಾರ. ಶಿವಕೋಟ್ಯಾಚಾರ್ಯ, ಹರಿಹರ, ನಯಸೇನರಂಥವರ ವೈಯಕ್ತಿಕ ಪ್ರಯತ್ನಗಳನ್ನು ಬಿಟ್ಟರೆ, ಸಾವಿರ ವರ್ಷದ ಸುದೀರ್ಘ ಅವಧಿಯಲ್ಲಿ ಕನ್ನಡ ಗದ್ಯ ತೆವಳುತ್ತಲೇ ಬಂದಿತು. ಮುದ್ದಣನಲ್ಲಿ ಆಧುನಿಕ ಗದ್ಯದ ಲಕ್ಷಣಗಳು ಕಂಡುಬಂದರೂ ಆ ಹಾದಿ ಒಂದು ಮಾರ್ಗವಾಗಿ ಬೆಳೆಯಲಿಲ್ಲ. ಆದರೆ ತಮ್ಮ ಸಾಹಿತ್ಯಕೃಷಿ ಮತ್ತು ಪತ್ರಿಕಾ ಸಾಹಿತ್ಯಕೃಷಿಗಳ ಮೂಲಕ ಆಧುನಿಕ ಗದ್ಯಮಾರ್ಗವನ್ನು ಸಿದ್ಧಗೊಳಿಸಿದವರಲ್ಲಿ ಮುಖ್ಯರೆನಿಸಿದ್ದಾರೆ, ಗಳಗನಾಥರು.

೨೦ನೆಯ ಶತಮಾನದಲ್ಲಿ ಈ ಗದ್ಯಯುಗವನ್ನು ಆಳಿದುದು ಕಾದಂಬರಿ. ಹೀಗಾಗಿ ಈ ಶತಮಾನವನ್ನು "ಕಾದಂಬರಿ ಪ್ರಧಾನಯುಗ"ವೆಂದು ಕರೆಯಬಹುದಾಗಿದೆ. ಇದು ನವೋದಯ, ಪ್ರಗತಿಶೀಲ, ನವ್ಯವೆಂಬ ಮೂರು ಹಂತಗಳಲ್ಲಿ ಸಾಗಿಬಂದಿದೆ. ಇವುಗಳಲ್ಲಿ ಪ್ರಗತಿಶೀಲವೆಂಬುದು ಒಂದು ಪ್ರಯೋಗವಾಗಿ ಉಳಿಯಿತೇ ಹೊರತು ಪರಂಪರೆಯಾಗಿ ಬೆಳೆಯಲಿಲ್ಲ. ಇತ್ತೀಚೆ ನವ್ಯ ಕಾದಂಬರಿ ಒಂದು ಪರಂಪರೆಯಾಗಿ ಬೆಳೆಯುತ್ತಲಿದ್ದರೂ ಅದರ ಸಂಖ್ಯೆ ಕಡಿಮೆ. ಆದುದರಿಂದ ಇಂದಿಗೂ ಕಾದಂಬರಿ ಕ್ಷೇತ್ರವನ್ನು ಬಹುಪಾಲು ವ್ಯಾಪಿಸಿದುದು, ನವೋದಯ ಪ್ರಜ್ಞೆಯ ಕಾದಂಬರಿ. ಈ ಪ್ರಜ್ಞೆಯ ಮೂಲಪುರುಷರಲ್ಲಿ ಮುಖ್ಯರೆನಿಸಿದ್ದಾರೆ, ಕಾದಂಬರಿ ಪಿತಾಮಹ ಗಳಗನಾಥರು.

ಕಾದಂಬರಿ ಸಾಹಿತ್ಯ, ಧಾರ್ಮಿಕ ಸಾಹಿತ್ಯ, ನಿಬಂಧ ಸಾಹಿತ್ಯ ನೆಲೆಗಳಲ್ಲಿ ದುಡಿದಿದ್ದರೂ "ಗಳಗನಾಥರೆಂದರೆ ಕಾದಂಬರಿ, ಕಾದಂಬರಿಯೆಂದರೆ ಗಳಗನಾಥರು" ಎಂಬಂತೆ ಇವರ ಹೆಸರು ಕಾದಂಬರಿಗೆ ಪರ್ಯಾಯುವೆನಿಸಿದೆ. ಸುಮಾರು ಐದು ಸಾವಿರ ಪುಟವ್ಯಾಪ್ತಿಯ ಕಾದಂಬರಿ ಸಾಹಿತ್ಯಸೃಷ್ಟಿ, ಕೆಲವೊಮ್ಮೆ ಒಂದು ಕಾದಂಬರಿಗೆ ಐದು ಆವೃತ್ತಿ, ಒಂದು ಆವೃತ್ತಿಗೆ ಐದು ಸಾವಿರ ಪ್ರತಿ, ಮಾರಾಟಕ್ಕೆ ಪುಸ್ತಕದ ಗಂಟುಹೊತ್ತು ಗ್ರಾಮದಿಂದ ಗ್ರಾಮಕ್ಕೆ ನಡೆಸಿದ ಸುತ್ತಾಟ-ಇವೆಲ್ಲವುಗಳಿಗೆ ಕನ್ನಡ ಕಾದಂಬರಿಯ ಇತಿಹಾಸದಲ್ಲಿ ಇಂದಿಗೂ ಏಕೈಕ ನಿದರ್ಶನವೆನಿಸಿದ್ದಾರೆ, ಗಳಗನಾಥರು.

ಒಂದು ಸಂಸ್ಕೃತಿಯ ಸಾಹಿತ್ಯ ಇನ್ನೊಂದು ಸಂಸ್ಕೃತಿಯಲ್ಲಿ ಮೊದಲು ಪ್ರವೇಶಿಸುವುದು, ಭಾಷಾಂತರದ ಮೂಲಕ. ಆಮೇಲೆ ಅದು ಭಾವಾಂತರ, ಸ್ವತಂತ್ರ ಸಾಹಿತ್ಯಗಳಿಗೆ ದಾರಿ ಮಾಡಿಕೊಡುತ್ತದೆ. ಇದಕ್ಕೆ ಅನುಗುಣವಾಗಿ ಆರಂಭದ ಕನ್ನಡ ಭಾವಗೀತೆ ಮತ್ತು ನಾಟಕಗಳು ಅನುವಾದದ ದಾರಿ ಹಿಡಿದೇ ಕನ್ನಡದೊಳಗೆ ಬಂದವು. ಅಂದರೆ ಇಂಗ್ಲಿಷ್‌ನಿಂದ ಕಾವ್ಯಸಾಹಿತ್ಯವನ್ನು, ಇಂಗ್ಲಿಷ್ ಮತ್ತು ಸಂಸ್ಕೃತಗಳಿಂದ ನಾಟಕಸಾಹಿತ್ಯವನ್ನು ಕನ್ನಡಿಗರು ಅನುವಾದಗೊಳಿಸಿಕೊಂಡರು. ಈ ಸಂದರ್ಭದ ಕಾದಂಬರಿ ಮಾತ್ರ, ಇಂಗ್ಲಿಷ್ ಅನುವಾದ ದಾರಿಯನ್ನು ಬಿಟ್ಟು, ಮರಾಠಿ, ಬೆಂಗಾಲಿ ಕಾದಂಬರಿಗಳ ಅನುವಾದದ ದಾರಿ ಹಿಡಿಯಿತು. ಐತಿಹಾಸಿಕ ಮತ್ತು ಸಾಮಾಜಿಕವೆಂಬ ಎರಡು ಮುಖ್ಯ ಕವಲುಗಳಲ್ಲಿ ಬಿಚ್ಚಿಕೊಂಡಿತು. ಇವುಗಳಲ್ಲಿ ಐತಿಹಾಸಿಕ ಕಾದಂಬರಿ ಲೋಕವನ್ನು ಸರಿಯಾಗಿ ರೂಪಿಸಿ, ಅದನ್ನು ಗುಣಾತ್ಮಕವಾಗಿ ಮತ್ತು ಗಾತ್ರಾತ್ಮಕವಾಗಿ ಬೆಳೆಸಿದವರು, ಗಳಗನಾಥರು.

೨೦ನೆಯ ಶತಮಾನ, ಭಾರತದಲ್ಲಿ ರಾಷ್ಟ್ರೀಯ ಪ್ರಜ್ಞೆ ಜಾಗೃತವಾಗುತ್ತಲಿದ್ದ ಸಂದರ್ಭ. ದೇಶಸೇವಕರಂತೆ ಸಾಹಿತಿಗಳೂ ಈ ಪ್ರಜ್ಞೆಯ ಉದ್ದೀಪನೆಗಾಗಿ ದುಡಿದರು. ಇಲ್ಲಿ ದೇಶಸೇವಕರು ಬ್ರಿಟಿಷರ ವಿರುದ್ಧ ನೇರವಾಗಿ ಚಳುವಳಿ ನಡೆಸಿದರೆ, ಬರಹಗಾರರು ಅವರಿಗೆ ಭೀತರಾಗಿ ಈ ಕಾರ್ಯವನ್ನು ಪರ್ಯಾಯವಾಗಿ ಪೂರೈಸಿದರು. ಅಂದರೆ ಬ್ರಿಟಿಷರ ದಬ್ಬಾಳಿಕೆಗೆ ಪರ್ಯಾಯವಾಗಿ, ಆ ಮೊದಲಿನ ಮುಸಲ್ಮಾನರ ಆಕ್ರಮಣವನ್ನು ಚಿತ್ರಿಸಿದರು. ಕಾದಂಬರಿ ಮಾಧ್ಯಮವನ್ನು ಈ ಚಿತ್ರಣಕ್ಕೆ ಬಳಸಿ, ರಾಷ್ಟ್ರೀಯ ಪ್ರಜ್ಞೆಯನ್ನು ಜಾಗೃತಗೊಳಿಸಿದವರಲ್ಲಿ ಗಣ್ಯರೆನಿಸಿದ್ದಾರೆ, ಗಳಗನಾಥರು.

ನವೋದಯ ಕಾಲದ ಸಾಹಿತ್ಯಕ್ಕೆ 'ಭಾವನೆ'ಯೇ ಮುಖ್ಯ ಭೂಮಿಕೆ. ಇದನ್ನು ಉದ್ದೀಪಿಸಿ, ರಸ ಉಕ್ಕಿಸುವುದೇ ಆ ಸಾಹಿತ್ಯದ ಗುರಿ. ಇದಕ್ಕೆ

ಹೇಳಿಮಾಡಿಸಿದ ಬರವಣಿಗೆಯಾಗಿದೆ. ಗಳಗನಾಥರ ಕಾದಂಬರಿ ಸಾಹಿತ್ಯ, ಗತಕಾಲೀನ ಮತ್ತು ಸಮಕಾಲೀನ ಪ್ರಜ್ಞೆಗಳ ಸಮನ್ವಯವಾಗಿರುವ ಇವರ ಕಾದಂಬರಿಗಳು, ೨೦ನೆಯ ಶತಮಾನದ ಪೂರ್ವಾರ್ಧದಲ್ಲಿ ಅಯಸ್ಕಾಂತದಂತೆ ಕಾರ್ಯ ಮಾಡಿದವು. ಹೀಗಾಗಿ ಗಳಗನಾಥರ ಕೃತಿಗಳು ಕೆಲವೇ ದಿನಗಳಲ್ಲಿ ಕನ್ನಡಿಗರ ಮನೆಮನೆಗಳಲ್ಲಿ, ಮನಮನಗಳಲ್ಲಿ, ತುಂಬಿ ನಿಂತವು. ಕ್ರಮೇಣ ಓದುವ ರುಚಿಸಂಸ್ಕಾರವನ್ನೂ ಕನ್ನಡ ಸಮಾಜದಲ್ಲಿ ಬೆಳೆಸಿದವು.

ಗಳಗನಾಥರ ಕಾದಂಬರಿಗಳ ವಸ್ತು ಸಾಮಾನ್ಯವಾಗಿ ಇತಿಹಾಸ. ದಾಖಲಾತ್ಮಕ ಇತಿಹಾಸವನ್ನು ಕಲಾತ್ಮಕ ಕಾದಂಬರಿಯನ್ನಾಗಿಸುವ ಕೌಶಲ ಅವರಿಗೆ ಕೈವಶವಾಗಿದ್ದಿತು. ಇದಕ್ಕೆ ನಿದರ್ಶನ, ಮಹಾಕಾವ್ಯದಂತೆ ಆ ಕಾಲಘಟ್ಟವನ್ನಾಳಿದ ಇವರ 'ಮಾಧವ ಕರುಣಾವಿಲಾಸ'. ಕರ್ನಾಟಕದ ಮೊದಲ "ಮಹಾಕಾದಂಬರಿ"ಯೆಂಬಂತೆ ರೂಪಗೊಂಡ ಇದರ ಎಡಬಲಗಳಲ್ಲಿ ಬೇರೆ ಬೇರೆ ಕಾದಂಬರಿಗಳು ಇವರಿಂದ ಹುಟ್ಟಿದವು. 'ಪ್ರಬುದ್ಧ ಪದ್ಮನಯನೆ'ಯಿಂದ (೧೮೯೮) 'ಸ್ವರಾಜ್ಯ ಸುಗಂಧ'ದ (೧೯೩೮) ವರೆಗಿನ ೪೦ ವರ್ಷಗಳ ಸುದೀರ್ಘ ಅವಧಿಯಲ್ಲಿ ಆ ಸಂಖ್ಯೆ ೨೨ನ್ನು ತಲುಪಿತು. ಇವುಗಳನ್ನು ಕನ್ನಡಿಗರಿಗೆ ಸಂಬಂಧಿಸಿದುವು ೨ ಸಂಪುಟ, ಮರಾಠರಿಗೆ ಸಂಬಂಧಿಸಿದುವು ೨ ಸಂಪುಟ, ರಜಪೂತರಿಗೆ ಸಂಬಂಧಿಸಿದುದು ೧ ಸಂಪುಟ, ಸಂಕೀರ್ಣ ವಸ್ತುವನ್ನೊಳಗೊಂಡುದು ೧ ಸಂಪುಟ – ಹೀಗೆ ೬ ಸಂಪುಟಗಳಲ್ಲಿ ಕೆಳಗಿನಂತೆ ಹಂಚಿ ಹಾಕಿದ್ದೇವೆ.

**ಕನ್ನಡಿಗರಿಗೆ ಸಂಬಂಧಿಸಿದ ಕಾದಂಬರಿಗಳು:**

| | ಪ್ರಥಮ ಆವೃತ್ತಿ | ಬಳಸಿದ ಆವೃತ್ತಿ |
|---|---|---|
| **ಸಂಪುಟ ೧** | | |
| ೧. ಮಾಧವ ಕರುಣಾ ವಿಲಾಸ | ೧೯೨೩ | ೧೯೬೪ |
| **ಸಂಪುಟ ೨** | | |
| ೧. ಕನ್ನಡಿಗರ ಕರ್ಮಕಥೆ | ೧೯೧೬ | ೧೯೬೯ |
| ೨. ಕುಮುದಿನಿ | ೧೯೧೬ | ೧೯೬೩ |
| ೩. ದುರ್ಗದ ಬಿಚ್ಚುಗತ್ತಿ | ೧೯೩೮ | ೧೯೩೮ |

**ಮರಾಠರಿಗೆ ಸಂಬಂಧಿಸಿದ ಕಾದಂಬರಿಗಳು:**

| | | |
|---|---|---|
| **ಸಂಪುಟ ೩** | | |
| ೧. ಈಶ್ವರೀ ಸೂತ್ರ | ೧೯೧೩ | ೧೯೪೭ |
| ೨. ಮರಾಟರ ಅಭ್ಯುದಯ | ೧೯೧೮ | ೧೯೬೨ |
| ೩. ಕಮಲ ಕುಮಾರಿ | ೧೯೧೦ | ೧೯೫೭ |

| | | |
|---|---|---|
| ೪. ಛತ್ರಪತಿ | ೧೯೧೯ | ೧೯೫೨ |
| **ಸಂಪುಟ ೪** | | |
| ೧. ಗೃಹಕಲಹ | ೧೯೨೧ | ೧೯೫೪ |
| ೨. ಶಿವಪ್ರಭುವಿನ ಪುಣ್ಯ | ೧೯೧೮ | ೧೯೬೧ |
| ೩. ಸ್ವರಾಜ್ಯ ಸುಗಂಧ | ೧೯೩೮ | ೧೯೬೩ |
| ೪. ಕುರುಕ್ಷೇತ್ರ | ೧೯೧೯ | ೧೯೫೬ |
| **ರಜಪೂತರಿಗೆ ಸಂಬಂಧಿಸಿದ ಕಾದಂಬರಿಗಳು:** | | |
| **ಸಂಪುಟ ೫** | | |
| ೧. ಕ್ಷಾತ್ರತೇಜ | ೧೯೧೪ | ೧೯೬೦ |
| ೨. ಸತ್ವಸಾರ | ೧೯೧೫ | ೧೯೫೫ |
| ೩. ತಿಲೋತ್ತಮೆ | ೧೯೧೭ | ೧೯೬೫ |
| ೪. ಧಾರ್ಮಿಕ ತೇಜ | ೧೯೨೮ | ೧೯೬೩ |
| ೫. ರಾಣಾ ರಾಜಾಸಿಂಹ | ೧೯೨೮ | ೧೯೫೨ |
| **ಸಂಕೀರ್ಣ ಕಾದಂಬರಿಗಳು:** | | |
| **ಸಂಪುಟ ೬** | | |
| ೧. ಪ್ರಬುದ್ಧ ಪದ್ಮನಯನೆ | ೧೮೯೮ | ೧೯೫೭ |
| ೨. ರಾಣೀ–ಮೃಣಾಲಿನಿ | ೧೯೧೧ | ೧೯೫೮ |
| ೩. ವೈಭವ | ೧೯೧೨ | ೧೯೬೦ |
| ೪. ಧರ್ಮರಹಸ್ಯ | ೧೯೧೪ | ೧೯೩೩ |
| ೫. ಸಂಸಾರಸುಖ | ೧೯೨೬ | ೧೯೫೯ |

ಈ ವಸ್ತು ವೈವಿಧ್ಯವನ್ನು ನೋಡಿದರೆ, ಕನ್ನಡದಲ್ಲಿ ಬರೆದ ಇವುಗಳ ಅಧ್ಯಯನ ವೆಂಬುದು ಕೇವಲ ಕರ್ನಾಟಕದ ಅಧ್ಯಯನವಲ್ಲ, ಕರ್ನಾಟಕ, ಮಹಾರಾಷ್ಟ್ರ, ರಾಜಸ್ತಾನ–ಹೀಗೆ ಭಾರತದ ವಿವಿಧ ಪ್ರಾಂತಗಳ ವೀರಪರಂಪರೆಯ ಅಧ್ಯಯನವೇ ಆಗಿದೆಯೆಂದು ಸ್ಪಷ್ಟವಾಗುತ್ತದೆ. ಹೀಗಾಗಿ, ಈ ಕಾದಂಬರಿಗಳು ಕನ್ನಡಿಗರ ವ್ಯಷ್ಟಿಪ್ರಜ್ಞೆಗೆ ಸೀಮಿತವಾಗಿ ನಿಲ್ಲದೆ, ಭಾರತೀಯ ಸಮಷ್ಟಿಪ್ರಜ್ಞೆಗೆ ಪೂರಕವೆಂಬಂತೆ ಕೆಲಸಮಾಡಿದವು. ಕರ್ನಾಟಕದ ಎಚ್ಚಮನಾಯಕ, ಅಳಿಯ ರಾಮರಾಯ, ವಿದ್ಯಾರಣ್ಯರಂತೆ, ಮಹಾರಾಷ್ಟ್ರದ ಶಿವಾಜಿ, ಸಮರ್ಥ ರಾಮದಾಸ, ರಾಜಸ್ತಾನದ ಪ್ರತಾಪಸಿಂಹ, ಉತ್ತರ ಪ್ರದೇಶದ ಪೃಥ್ವೀರಾಜರೂ ನಮ್ಮವರೆಂಬ ಭಾವವನ್ನು ಕನ್ನಡಿಗರಲ್ಲಿ ಬೆಳೆಸಿ, ಅಖಂಡ ಭಾರತದ ಪ್ರಜ್ಞೆಯನ್ನು ಅವರಲ್ಲಿ ಮೂಡಿಸಿದವು; ರಾಷ್ಟ್ರಜೀವನದ ಪುನಾರಚನೆಗೆ ನೆರವಾದವು. ಸಾಮಾನ್ಯವಾಗಿ ಯುದ್ಧವೇ ಎಲ್ಲ ಕಾದಂಬರಿಗಳ

ಕೇಂದ್ರಕಥೆಯಾಗಿದ್ದರೂ ಅವುಗಳಲ್ಲಿ ಭಾರತೀಯ ಸಂಸ್ಕೃತಿಸಂಕಥನದ ಶ್ರುತಿ ಉದ್ದಕ್ಕೂ ಕೇಳಿಬರುತ್ತಲಿರುವುದು ಒಂದು ವಿಶೇಷ.

'ಸದ್ಗುರು ಪ್ರಭಾವ' ಒಂದರ್ಥದಲ್ಲಿ ಗಳಗನಾಥರ ಆತ್ಮಚರಿತ್ರೆಯೆನಿಸಿದೆ. ಅವರ ಜೀವನ-ಸಾಹಿತ್ಯಜೀವನಗಳನ್ನು ತಿಳಿಸಿಕೊಡಲು ಅದಕ್ಕಿಂತ ಉತ್ತಮ ಸಾಧನ ಇನ್ನೊಂದಿಲ್ಲ. ಹೀಗಾಗಿ ಈ ಕೃತಿಯ ಆಯ್ದ ಭಾಗಗಳನ್ನು ಪ್ರತಿಯೊಂದು ಸಂಪುಟದ ಆರಂಭಕ್ಕೆ 'ಹೊಸತಿಲು' ಶೀರ್ಷಿಕೆಯೊಂದಿಗೆ ಸೇರಿಸಿದ್ದೇವೆ. ಈ ಕಾದಂಬರಿಗಳನ್ನು ಓದುವವರಿಗೆ ಯೋಗ್ಯ ಪ್ರವೇಶಿಕೆಯಂತೆ ಇದು ನೆರವಾಗುವುದೆಂದು ನಂಬಿದ್ದೇವೆ.

ಸಾಹಿತ್ಯವನ್ನು ಸೃಷ್ಟಿಸುವವನು ಸಾಹಿತಿಯಾದರೂ ಅದರ ವಾರಸುದಾರರು ಸಹೃದಯರು. ಈಗಿನಂತೆ ಪುಸ್ತಕ ಉತ್ಪಾದನೆಯ ಅನುಕೂಲವಿಲ್ಲದ ಪ್ರಾಚೀನ ಕಾಲದಲ್ಲಿಯೂ ಸಹೃದಯರು ಉತ್ತಮ ಸಾಹಿತ್ಯಕೃತಿಗಳನ್ನು ತಲೆಮಾರಿನಿಂದ ತಲೆಮಾರಿಗೆ ಪ್ರತಿ ಮಾಡುತ್ತ-ಮಾಡಿಸುತ್ತ ಬಂದಿದ್ದಾರೆ. ಹೀಗಿರುವಾಗ ಎಲ್ಲ ಬಗೆಯ ಅನುಕೂಲತೆಗಳನ್ನು ಹೊಂದಿರುವ ಇಂದಿನ ಕಾಲದವರಾದ ನಾವು, ಅವುಗಳ ಮರುಮುದ್ರಣ ವಿಷಯದಲ್ಲಿ ಹೆಚ್ಚು ಆಸಕ್ತಿ ವಹಿಸುವುದು ತೀರ ಸಹಜ. ಆದುದರಿಂದ ಪ್ರಾಚೀನ ಹಸ್ತಪ್ರತಿಗಳ ಪರಿಷ್ಕರಣ-ಮುದ್ರಣ-ಮರುಮುದ್ರಣದಂತೆ, ನವೋದಯ ಕಾಲೀನ ಯಂತ್ರಪ್ರತಿಗಳನ್ನು ಮತ್ತೆ ಮತ್ತೆ ಅಚ್ಚಿಸಿ ಓದುಗರಿಗೆ ಒದಗಿಸುತ್ತಲಿದ್ದೇವೆ.

ನಾನು ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿಯಾಗಿದ್ದ ಸಂದರ್ಭದಲ್ಲಿ ಗಳಗನಾಥರ ಎಲ್ಲ ೨೨ ಕಾದಂಬರಿಗಳನ್ನು ೬ ಸಂಪುಟಗಳಲ್ಲಿ ಮರು ಮುದ್ರಿಸಲು ನಿರ್ಧರಿಸಿದೆ. ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ಮಾತೃಸಂಸ್ಥೆಯಾದ 'ಲೋಕಶಿಕ್ಷಣ ಟ್ರಸ್ಟ್' ಕಾರ್ಯದರ್ಶಿಗಳಾಗಿದ್ದ ಶ್ರೀ ಕೆ. ಶಾಮರಾವ್ ಅವರ ಆರ್ಥಿಕ ನೆರವಿನಿಂದ ನನ್ನ ನಿರ್ಧಾರ ಕ್ಷಿಪ್ರದಲ್ಲಿ ಕೈಗೂಡಿತು (೧೯೯೯).

ಈಗ ಅಂಥದೇ ಅವಕಾಶ ಬೆಂಗಳೂರಿನ ಇನ್‌ಫೋಸಿಸ್ ಫೌಂಡೇಶನ್ ಅಧ್ಯಕ್ಷೆ ಶ್ರೀಮತಿ ಸುಧಾಮೂರ್ತಿಯವರ ಆರ್ಥಿಕ ನೆರವಿನಲ್ಲಿ ನಮ್ಮ ನಾಡಿನ ಪ್ರತಿಷ್ಠಿತ ಪ್ರಕಾಶನ ಸಂಸ್ಥೆಯಾದ "ಮನೋಹರ ಗ್ರಂಥ ಮಾಲೆ"ಯ ಮೂಲಕ ಒದಗಿಬಂದಿದೆ. ಇತ್ತೀಚೆ ಮರೆಯಬಾರದ ಮಹತ್ವದ ಗ್ರಂಥಗಳ ಮರು ಮುದ್ರಣಕಾರ್ಯವನ್ನು ಕೈಗೆತ್ತಿಕೊಂಡಿರುವ ಅದು, ಗಳಗನಾಥ ಕಾದಂಬರಿಗಳ ಈ ಆವೃತ್ತಿಗೆ ನನ್ನನ್ನು ಪ್ರಧಾನ ಸಂಪಾದಕನನ್ನಾಗಿಸಿದೆ.

ಈ ಸಂದರ್ಭದಲ್ಲಿ ಗಳಗನಾಥರ ಅಪ್ರಕಟಿತ ಕೃತಿಗಳು ಸಿಗಬಹುದೆ? ಎಂಬ ಪ್ರಶ್ನೆ ನಮ್ಮನ್ನು ಕಾಡಿತು. ಹಾವೇರಿಯಲ್ಲಿರುವ ಗಳಗನಾಥ ಕುಟುಂಬದವರನ್ನು ಎರಡು ಸಲ ಕಂಡರೂ ಸಿಕ್ಕಿದ್ದು, ಮಹಾಭಾರತದ ಅನುವಾದಗಳು. ಅದೂ ಕೆಲವು ಪರ್ವ ಜೀರ್ಣಸ್ಥಿತಿಯಲ್ಲಿ, ಕೆಲವು ಪರ್ವ ಅಪೂರ್ಣಸ್ಥಿತಿಯಲ್ಲಿ. ಗಳಗನಾಥರ ಮರಿಮೊಮ್ಮಗ ಶ್ರೀ ವೆಂಕಟೇಶ ಅವರು ಇವೆಲ್ಲವನ್ನು ನಮಗೆ ಒಪ್ಪಿಸಿದ್ದಲ್ಲದೆ, ಕಾದಂಬರಿಗಳನ್ನು ಈಗ ಮತ್ತೊಮ್ಮೆ ಮುದ್ರಿಸಲು ಒಪ್ಪಿಗೆ ನೀಡಿದರು.

೧೯೯೯ರ ಆವೃತ್ತಿಯುಲ್ಲಿ ನುಸುಳಿರಬಹುದಾದ ಅಚ್ಚಿನದೋಷಗಳನ್ನು ತಿದ್ದಲು ನಿರ್ಧರಿಸಿದೆವು. ಒಬ್ಬರಿಗೆ ಒಂದು ಕಾದಂಬರಿಯಂತೆ ೨೨ ಜನ ಓದುಗರಿಗೆ ಈ ಕೆಲಸ ವಹಿಸಿಕೊಟ್ಟೆವು. ಅವರು ಅಚ್ಚಿನ ದೋಷಗಳೊಂದಿಗೆ ಆ ಕಾಲದ ಶಬ್ದರೂಪಗಳನ್ನೂ (ಮರಾಟಾ>ಮರಾಠಾ) ತಿದ್ದಿದುದು ನಮ್ಮ ಗಮನಕ್ಕೆ ಬಂದಿತು. ಈ ತಿದ್ದುಪಡಿಯುಲ್ಲಿ ಹಳೆಯು ಶಬ್ದರೂಪಗಳಾವುವು ? ಅಚ್ಚಿನ ದೋಷಗಳಾವುವು ? ಎಂಬುದನ್ನು ನಿರ್ಧರಿಸಲು ಕೆಲವೆಡೆ ಸಾಧ್ಯವಾಗಲೇ ಇಲ್ಲ. ಆದುದರಿಂದ ಅಚ್ಚಿನ ದೋಷಗಳು ಕ್ವಚಿತ್ತಾಗಿರುವುದನ್ನು ಗಮನಿಸಿ, ಇದ್ದ ರೂಪದಲ್ಲಿಯೇ ೧೯೯೯ರ ಆವೃತ್ತಿಯನ್ನು ಪ್ರಕಟಿಸಲು ತೀರ್ಮಾನಿಸಿದೆವು. ನಮ್ಮ ಸುದೈವವೆಂಬಂತೆ ಹಳೆಯ ಆವೃತ್ತಿಯ ಸಿ.ಡಿಗಳನ್ನು ಬೆಂಗಳೂರಿನ ಲಕ್ಷ್ಮೀ ಮುದ್ರಣಾಲಯ ಸಂರಕ್ಷಿಸಿದ್ದಿತು. ಹೀಗಾಗಿ ಯಾವುದೇ ವ್ಯತ್ಯಾಸವಿಲ್ಲದೆ ೧೯೯೯ರ ಆವೃತ್ತಿಯ ಪಠ್ಯ ಈಗ ಹೊರಬರುತ್ತಿದೆ.

ಈಗ ನಾವು ಮಾಡಬೇಕಾದುದು ಪ್ರಸ್ತಾವನೆಯಲ್ಲಿ ಒಂದಿಷ್ಟು ವ್ಯತ್ಯಾಸ. ಇದನ್ನು ಮಾತ್ರ ಪೂರೈಸಿದ ಕಾರಣ, ಈ ಆವೃತ್ತಿಗಾಗಿ ನಾನು ವಿಶೇಷ ಶ್ರಮವಹಿಸಿಲ್ಲವೆಂದೇ ಹೇಳಬೇಕು. ಆದರೂ ಈ ಮೊದಲು ೧೯೯೯ರ ಆವೃತ್ತಿಯನ್ನು ೬ ಸಂಪುಟಗಳಲ್ಲಿ ವಿನ್ಯಾಸಗೊಳಿಸಿದುದನ್ನು, ಪ್ರಸ್ತಾವನೆ ಬರೆಯುವ ಮೂಲಕ ಅಂದು ಪರ್ಯಾಯವಾಗಿ ಸಾಹಿತ್ಯಿಕ ಶ್ರಮವಹಿಸಿದುದನ್ನು ಗಮನಿಸಿ, ಈ ಆವೃತ್ತಿಯ ಪ್ರಕಾಶನದಲ್ಲಿಯೂ ನನ್ನನ್ನು ತೊಡಗಿಸಿ ಕೊಂಡಿದ್ದಾರೆ. ಈ ಔದಾರ್ಯಕ್ಕಾಗಿ ಮನೋಹರ ಗ್ರಂಥಮಾಲೆಯ ಶ್ರೀ ರಮಾಕಾಂತ ಜೋಶಿ, ಶ್ರೀ ಸಮೀರ ಜೋಶಿ ಅವರಿಗೆ ಕೃತಜ್ಞನಾಗಿದ್ದೇನೆ.

**– ಡಾ. ಎಂ.ಎಂ. ಕಲಬುರ್ಗಿ**
ಪ್ರಧಾನ ಸಂಪಾದಕರು

ಆರ್ಥಿಕ ನೆರವು

**ಶ್ರೀಮತಿ ಸುಧಾ ಮೂರ್ತಿ**

ಅಧ್ಯಕ್ಷರು

ಇನ್ಫೋಸಿಸ್ ಫೌಂಡೇಶನ್, ಬೆಂಗಳೂರು.



ಕುಳಿತವರು:

೧) ಮಲ್ಹಾರ ದೀಕ್ಷಿತ (ಕಕ್ಕನವರ) [ಗಳಗನಾಥರ ಮೊದಲನೆಯ ಅಳಿಯ]

೨) ಗಳಗನಾಥರು [ವೆಂಕಟೇಶ ತಿರಕೋ ಕುಲಕರ್ಣಿ]

೩) ಶಂಕರ ಮಲ್ಹಾರ ಜೋಶಿ [ಗಳಗನಾಥರ ಎರಡನೆಯ ಅಳಿಯ]

ಮೊದಲ ಸಾಲಿನಲ್ಲಿ ನಿಂತ ಮಕ್ಕಳು: ಅಹಲ್ಯಾ ; ಬಿಷ್ಟಪ್ಪ (ಮೊದಲನೆಯ ಅಳಿಯನ ಮಕ್ಕಳು)

ಹಿಂದಿನ ಸಾಲಿನಲ್ಲಿ ನಿಂತವರು:

೧) ಸುಭದ್ರಕ್ಕ (ಗಳಗನಾಥರ ಮೊದಲನೆಯ ಮಗಳು)
[ಬಗಲಲ್ಲಿ ಮಗ-ಕೃಷ್ಣ ]

೨) ಗಳಗನಾಥರ ಹೆಂಡತಿ - ಗಂಗಾಬಾಯಿ

೩) ರೇಣುಕಾ (ಗಳಗನಾಥರ ಎರಡನೆಯ ಮಗಳು)

## ಹೊಸತಿಲು

ಶ್ರೀ ಸದ್ಗುರುಪ್ರಭಾವ ಪೋಷಿತನಾದ ವೇಂಕಟೇಶನೆಂಬ ಹೆಸರಿನ ನಾನು, ಶುಕ್ಲ ಯುಜುರ್ವೇದಾಂತರ್ಗತ ಕಣ್ವಶಾಖೆಯ ಸ್ಮಾರ್ತ ಬ್ರಾಹ್ಮಣನು. ನನ್ನ ಗೋತ್ರ ಕೌಂಡಿಣ್ಯ. ನನ್ನ ಪೂಜ್ಯ ಪಿತೃಗಳಲ್ಲಿ ನನ್ನ ತಂದೆಯವರ ಹೆಸರು ತ್ರಿವಿಕ್ರಮಭಟ್ಟರು; ಅಜ್ಜಂದಿರ ಹೆಸರು ರಾಮ ಭಟ್ಟರು; ಮುತ್ತಂದಿರ ಹೆಸರು ವೆಂಕಣಭಟ್ಟರು! ನನ್ನ ಕುಲದೈವತವು ಶ್ರೀ ಲಕ್ಷ್ಮೀವೇಂಕಟೇಶನು! ಪುಣ್ಯಶಾಲಿಗಳಾದ ನನ್ನ ಹಿರಿಯರ ಪುಣ್ಯದಿಂದಲೂ, ಭಗವಂತನಾದ ಶ್ರೀ ಲಕ್ಷ್ಮೀಪತಿಯ ಕೃಪೆ ಯಿಂದಲೂ ಕನ್ನಡಿಗರ ಸೇವಕನೆನಿಸಿರುವ ನಾನು, ಸನ್ಮಾನ್ಯರಾದ ಮೈಸೂರ ಕನ್ನಡಿಗರನ್ನೊಳ ಗೊಂಡಿರುವ ಸಮಸ್ತ ಕನ್ನಡಿಗರೆಂಬ ಇಷ್ಟದೈವತವನ್ನು ಆಧ್ಯಾತ್ಮಿಕ ಭಾವದಿಂದ ಭಕ್ತಿ ಪುರಸ್ಸರ ವಾಗಿ ಮೊದಲು ಅಭಿವಂದಿಸುವೆನು!

ನಾನು ಕೇವಲ ಗಾವಿಲನೆಂತಲೇ ಹೇಳಬಹುದು. ಯಾಕೆಂದರೆ, ನಾನು ಹುಟ್ಟಿದ ಹಾವನೂರೆಂಬ ನನ್ನ ಮಾತಾಮಹರ ಊರು ಹಳ್ಳಿಯು. ನಾನು ಬೆಳೆದ ನನ್ನ ಸ್ವಂತದ ಗಳಗನಾಥವೆಂಬ ಕ್ಷೇತ್ರಸ್ಥಾನವು ತೀರ ಸಣ್ಣ ಹಳ್ಳಿಯು. ನಾನು ಕಲಿತ ನಾಲ್ಕೂ ಪ್ರಾಥಮಿಕ ಶಾಲೆಗಳು ಒಂದಕ್ಕಿಂತ ಒಂದು ಸಣ್ಣವಾದ ಹಳ್ಳಿಯವೆ! ಇಂತಹ ಗಾವಿಲನಾದ ನನಗೆ ದೊರೆತ ಶ್ರೇಷ್ಠ ಶಿಕ್ಷಣವೆಂದರೆ, ಧಾರವಾಡ ಕನ್ನಡ ಟ್ರೇನಿಂಗ ಕಾಲೇಜದ ಮೂರು ವರ್ಷದ ಕೌದಿಯ ಚಂದದ ಹಂಡಬಂಡ ಶಿಕ್ಷಣವು! ನನ್ನ ಕನ್ನಡ ಭಾಷೆಯ ಜ್ಞಾನವು, ಕೇವಲ ಜನ್ಮಭಾಷೆಯೆಂಬ ಪ್ರಧಾನಕಾರಣದಿಂದ ವಿಸ್ತೃತವಾಗಬಹುದಾದಷ್ಟರ ಮಟ್ಟಿಗೆ ಬೆಳವಣಿಗೆ ಹೊಂದಿದ್ದು, ಕೊಂಕಣಸ್ಥರ ಸಹವಾಸದಿಂದ ತಿಳಿಯಬಹುದಾದಷ್ಟು ಮಹಾರಾಷ್ಟ್ರಭಾಷೆಯು ನನಗೆ ತಿಳಿಯುತ್ತಿರುವದು. ನನ್ನ ಸಂಸ್ಕೃತಭಾಷೆಯ ಜ್ಞಾನವು, ನಾನು ಟ್ರೇನಿಂಗ ಕಾಲೇಜದಲ್ಲಿಯ ಪರೀಕ್ಷೆಗಳಿಗಾಗಿ ಮೂರು ವರ್ಷ ಓದಿದ ತೀರ ಸಾಮಾನ್ಯವಾದ ತಾಳು ತಂತು ಇಲ್ಲದ ಪುಸ್ತಕೀಯ ಜ್ಞಾನದಲ್ಲಿ ಹರಿದು ಮುರಿದು ಉಳಿದದ್ದು. ಇಂಗ್ಲೀಷ ಭಾಷೆಯ ಮೂಲಾಕ್ಷರಗಳನ್ನೂ ಸಾಲಾಗಿ ಬರೆಯಲಿಕ್ಕೆ ನನಗೆ ಬರುವದಿಲ್ಲ. ಒಟ್ಟಿಗೆ, ನಾನು ನನ್ನ ಪೂಜ್ಯ ಕನ್ನಡಿಗರ ಮುಂದೆ ಸುಳ್ಳುಹೇಳಿ ಪಾಪಕ್ಕೆ ಯಾಕೆ ಗುರಿಯಾಗಲಿ? ನಾನು ಯಾವ ಭಾಷೆಯ ಅಥವಾ ಯಾವ ಶಾಸ್ತ್ರದ ಅಭ್ಯಾಸವನ್ನೂ ಸಂಕಲ್ಪಪೂರ್ವಕವಾಗಿ ಗುರುಮುಖದಿಂದ ಮಾಡಿದವನಲ್ಲವಾದ್ದರಿಂದ, ನನ್ನಲ್ಲಿ ಯಾವ ಪಾಂಡಿತ್ಯವೂ ಇರುವದಿಲ್ಲ, ಯಾವ

* ಇದು ಶ್ರೀ ಗಳಗನಾಥರ 'ಸದ್ಗುರು ಪ್ರಭಾವ' ಕೃತಿಯಿಂದ ಆಯ್ದ ಭಾಗವಾಗಿದೆ.

ಪದವೀಧರತ್ವವೂ ಇರುವದಿಲ್ಲ. ತೆರಪಿಲ್ಲದೆ ನನ್ನಲ್ಲಿ ವಾಸಮಾಡಿಕೊಂಡಿರುವದೆಂದರೆ ಪಾಮರತ್ವವು!

ಈ ಚಂದದ ನಾನು, ಟ್ರೇನಿಂಗ ಕಾಲೇಜದಿಂದ ಹೊರಬಿದ್ದ ಬಳಿಕ ಹಳ್ಳಿ ಶಾಲೆಯ ಮಾಸ್ತರನಾಗಿ ಏಕನಿಷ್ಠೆಯಿಂದ ದುಡಿಯತೊಡಗಿದೆನು. ಕೆಲಸದಲ್ಲಿ ನನ್ನ ಪ್ರೀತಿ ಹೆಚ್ಚು; ನನ್ನಷ್ಟಕ್ಕೆ ನಾನಿರುವದರಲ್ಲಿ ನನ್ನ ಆಸಕ್ತಿ ಬಹಳ. ಕೆಲಸ ಬಿಟ್ಟು, ಸಿಕ್ಕಾಗ ಸಿಕ್ಕತ್ತ ಸುಮ್ಮನೆ ಎಡತಾಕುವ ಚಾಳಿಯಂತು ನನಗೆ ಗೊತ್ತೇ ಇಲ್ಲ. ನಾನಾಯಿತು, ನನ್ನ ಕೆಲಸವಾಯಿತು ಎಂಬ ಚಂದದಿಂದ ನಡೆಯುವ ಮನುಷ್ಯನು ನಾನು. ಏನಾದರೂ ಹೊತ್ತು ಸಿಕ್ಕರೆ ನನ್ನ ಯೋಗ್ಯತೆಯ ಸಾಮಾನ್ಯ ಜನರೇ ಮನಮೆಚ್ಚಿ ಓದುವಂತಹ ಪುಸ್ತಕಗಳನ್ನು ಬರೆದರೆ ಬರೆಯುವೆನು. ನನ್ನ ಅನುಭವವನ್ನು ಮೀರದಿರುವ, ಬಹಳವಾದರೆ ಸ್ವಲ್ಪ ಕಾಲು ಎತ್ತರಿಸಿದಾಗ ನನ್ನ ಅನುಭವಕ್ಕೆ ನಿಲಕಬಹುದಾದಂತಹ ವಿಷಯಗಳನ್ನಲ್ಲದೆ, ಹೆಚ್ಚು ಗಹನವಾದ ವಿಷಯಗಳನ್ನು ನಾನು ಬರೆದವನಲ್ಲ, ಈಗಲೂ ಬರೆಯುವದಿಲ್ಲ! ಯಾಕೆಂದರೆ ಅಂತಹ ಘನವಾದ ಅನುಭವವೇ ನನಗಿರುವದಿಲ್ಲ! ಅಂದಬಳಿಕ ಸಾಮಾನ್ಯ ಜನರಲ್ಲಿ ಒಬ್ಬನಾಗಿರುವ ನಾನು ಬರೆದ ನನ್ನ ಅನುಭವದ ಸವಿಯಾದ ಸುಲಭ ಲೇಖಗಳನ್ನು, ನನಗೆ ಸಮಾನಧರ್ಮಿಗಳಾದ ಸಾಮಾನ್ಯಜನರು ಯಾಕೆ ಪ್ರೀತಿಯಿಂದ ಓದದೆ ಬಿಟ್ಟಾರು? ಅಂತಹ ನನ್ನ ಆ ಲೇಖಗಳು ಸಾಮಾನ್ಯ ಜನರನ್ನು ಸಂತೋಷಪಡಿಸದೆಯಾದರೂ ಯಾಕೆ ಬಿಟ್ಟಾವು ? ಒಟ್ಟಿಗೆ, ನಾನು ನನ್ನ ಜೀವನಾಧಾರವಾದ ಶಿಕ್ಷಣದ ಕೆಲಸವನ್ನು ನಿರ್ವಂಚನೆಯಿಂದ ಮನಸ್ಸಿಗೆ ಹಚ್ಚಿಕೊಂಡು ಮಾಡುತ್ತ, ನನ್ನ ಮನಸ್ಸನ್ನು ರಮಿಸುವ ವಿಷಯಗಳನ್ನಾಗಲಿ, ನನ್ನ ಮನಸ್ಸನ್ನು ಸಮಾಧಾನಪಡಿಸುವ ವಿಷಯಗಳನ್ನಾಗಲಿ, ಹೊತ್ತು ಸಿಕ್ಕರೆ ನಿರ್ವಂಚನೆಯಿಂದ ಮನಃಪೂರ್ವಕವಾಗಿ ಅನುಭವವನ್ನು ಮುಂದೆಮಾಡಿ ಬರೆಯುತ್ತ, ಯಾವಾಗ ಸಮಾಧಾನದಿಂದ, ಯಾವಾಗ ಅಸಮಾಧಾನದಿಂದ ಕಾಲಹರಣ ಮಾಡತೊಡಗಿದೆನು.

ಈ ಬಗೆಯ ಸಂಕುಚಿತ ಕಾರ್ಯಕ್ಷೇತ್ರದಲ್ಲಿ ಕಾಲಕ್ಷೇಪಮಾಡುವ ಬಡವನು ನಾನು, ಪ್ರತಿತಿಂಗಳ ಹದಿನೈದು ರೂಪಾಯಿಗಳ ತಲಬಿನಿಂದ ಮೂವತ್ತು ರೂಪಾಯಿ ತಲಬಿನ ವರೆಗೆ ಏರುತ್ತ ಏರುತ್ತ, ಮುಖ್ಯ ಶಿಕ್ಷಕನಾಗಿಯೇ ಸಣ್ಣಹಳ್ಳಿಯಿಂದ ದೊಡ್ಡಹಳ್ಳಿಗೆ ವರ್ಗವಾಗಿ ಹೋಗುತ್ತ ಹೋಗುತ್ತ, ಕಡೆಗೆ ನಲವತ್ತೈದು ರೂಪಾಯಿ ತಲಬಿನಿಂದ ಟ್ರೇನಿಂಗ್ ಕಾಲೇಜದ ಕನ್ನಡ ಉಪಶಿಕ್ಷಕನಾದೆನು. ಮುಂದೆ ಒಂದೆರಡು ತಿಂಗಳೊಳಗೆ ಅಲ್ಲಿ ತಿಂಗಳಿಗೆ ಐವತ್ತು ರೂಪಾಯಿಗಳು ದೊರೆಯಹತ್ತಲು, ನನ್ನಂತಹ ಧನ್ಯನು ನಾನೇ ಎಂದು ಅಭಿಮಾನ ಪಡತೊಡಗಿದೆನು. ಪಾಪ! ಬಡವರ ಅಲ್ಪ ಸಂತುಷ್ಟತೆ! ಈ ಅವಧಿಯಲ್ಲಿ ನನ್ನಿಂದ "ಪದ್ಮನಯನೆ" ಎಂಬ ಕಾದಂಬರಿಯು, "ಲಘುನಿಬಂಧ-ಸಂಗ್ರಹ" ಎಂಬ ಪ್ರಬಂಧ ಶಿಕ್ಷಣದ ಪುಸ್ತಕವು, "ಉತ್ತರರಾಮಚರಿತ್ರಸಾರ" "ಶ್ರೀ ಗಿರಿಜಾಕಲ್ಯಾಣ" ಎಂಬವೆರಡು ಪೌರಾಣಿಕ ಸಣ್ಣ ಪುಸ್ತಕಗಳು ಬೈಲಿಗೆ ಬೀಳಲು, "ಗಳಗನಾಥನು ನೆಟ್ಟಿಗೆ ಬರೆಯುವನೆಂ"ದು ಜನರು ಅನ್ನಹತ್ತಿದರು. ಈ ಅವಧಿಯಲ್ಲಿ ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ ಪ್ರತಿವರ್ಷದ ಉತ್ಸವದ ಕಾಲಕ್ಕೆ, ಅಧ್ಯಕ್ಷರಾಗಿರುತ್ತಿದ್ದ ಬಹುತರ ನಮ್ಮ ಮೈಸೂರ ಸನ್ಮಾನ್ಯ ವಿದ್ವಾಂಸರಾದ ಪದವೀಧರರ ಕೈಯಿಂದಲೇ ಒಂದು ವರ್ಷವೂ ತಪ್ಪದಂತೆ ೯-೧೦ ವರ್ಷ ಲೇಖನ ಭಾಷಣಗಳ

ಪರೀಕ್ಷೆಯಲ್ಲಿ ನಾನು ಉಚಿತಗಳನ್ನು ಪಡೆದದ್ದರಿಂದ ನನಗೆ "ಪಂಢರಪುರದ ವಾರಕರಿ" ಎಂದು ಆ ಸಂಘದವರು ವಿನೋದದಿಂದ ಅನ್ನುತ್ತಿದ್ದರು.

ಹೀಗೆ ನಾನು ಹಳ್ಳಿಯ ಸಣ್ಣ ಶಾಲೆಯಿಂದ ಟ್ರೇನಿಂಗ ಕಾಲೇಜದಂಥ ಗೌರವದ ಶಾಲೆಯ ವರೆಗೆ ಸಣ್ಣ ದೊಡ್ಡ ಶಾಲೆಗಳಲ್ಲಿ ಮನಃಪೂರ್ವಕ ಕೆಲಸ ಮಾಡುತ್ತ, ಪ್ರೀತಿಬಂದ ವಿಷಯಗಳನ್ನು ಬರೆಯುತ್ತ, ಸಂಘದ ಪಾರಿತೋಷಕಗಳಿಂದ ಉತ್ತೇಜನವನ್ನು ಹೊಂದುತ್ತ, ಅಭಿಮಾನದಿಂದ ಕಾಲಹರಣ ಮಾಡುತ್ತಿರುವಾಗ, ನನ್ನ ನೌಕರಿಯ ಮುದ್ದತ್ತು ಇಪ್ಪತ್ತು ವರ್ಷದ್ದಾಯಿತು. ನನ್ನ ಕೆಲಸದ ಬಗ್ಗೆ ನನ್ನ ಪೂಜ್ಯಗುರುಗಳಾದ ಕೈ. ವಾ. ರಾವಜಿ ರಾವ ಕರಂದಿಕರ ಪ್ರಿನ್ಸಿಪಾಲ ಟ್ರೇನಿಂಗ ಕಾಲೇಜ ಧಾರವಾಡರವರು "ಗಳಗನಾಥನು ಸಮರ್ಥ ಶಿಕ್ಷಕನು, ಗೊತ್ತಿದ್ದ ವಿಷಯವನ್ನು ಸವಿಯಾಗಿ ಬರೆಯುವವನು" ಎಂದು ಅನ್ನುತ್ತಿದ್ದರು! ಈ ಮಹನೀಯರೇ, ಪೂನಾದ ರಿಜನಲ್ ಟೆಕ್ಸ್ಟ ಬುಕ್ ಕಮೀಟಿಯಲ್ಲಿ ನನ್ನನ್ನು ಮೈಮುರಿದು ದುಡಿಸಿ, ನನಗೆ ಲೇಖನ ಕಲೆಯ ಹಿಡಿತಗಳು ತಿಳಿಯಲಿಕ್ಕೆ ಆಸ್ಪದ ಮಾಡಿಕೊಟ್ಟಿರುವರು. ನನ್ನ ಈ ತೇಜಸ್ವಿಗಳಾದ ಲೌಕಿಕ ಗುರುವರ್ಯರ ಸಹವಾಸವೂ, ಅವರ ಪ್ರಸನ್ನ ವಾಣಿಯ ಅಭಿಪ್ರಾಯವೂ ಈಗಲೂ ನನಗೆ ಸಂಜೀವನ ಮಂತ್ರಗಳಾಗಿ ನನ್ನಲ್ಲಿ ಕಾರ್ಯೋತ್ಸಾಹವನ್ನುಂಟು ಮಾಡುತ್ತಿರುವವು! ಹೀಗೆಯೇ ನಾನು ಇನ್ನೂ ಎರಡು ವರ್ಷ ಟ್ರೇನಿಂಗ್ ಕಾಲೇಜದ ಶಿಕ್ಷಕನಾಗಿದ್ದರೆ, ನನಗೆ ತಿಂಗಳಿಗೆ ಒಂದು ನೂರು ರೂಪಾಯಿ ಸಂಬಳವಾದರೂ ಆಗಿ, ನಾನೊಬ್ಬ ಗಣ್ಯಪುರುಷನಾಗುತ್ತಿದ್ದೆನು! ಯಾಕಂದರೆ, ದುಡ್ಡಿನಿಂದಲೇ ಮನುಷ್ಯನ ಯೋಗ್ಯತೆಯನ್ನು ಅಳೆಯುವ ಕಾಲವಿದು! ಆದರೆ ನನ್ನ ಏಕನಿಷ್ಠೆಯ ಪರಿಶ್ರಮಕ್ಕೆ ಅಷ್ಟು ಪ್ರತಿಫಲವು ದೊರೆಯುವ ಯೋಗವಿದ್ದಿಲ್ಲ. ಯಾಕಂದರೆ ನಾನು ಅಕಸ್ಮಾತ್ ಮೊದಲು ಒಂದು ವರ್ಷದ ಫರ್ಲೋ ರಜೆಯನ್ನೂ, ಆಮೇಲೆ ಒಂದು ವರ್ಷದ ಸಿಕ್ ರಜೆಯನ್ನೂ ಭೋಗಿಸಿ, ಇನ್ನೂ ಹತ್ತು ವರ್ಷದ ನೌಕರಿಯ ಮುದ್ದತ್ತು ಇರುತ್ತಿರುವಾಗ ಪ್ರಯತ್ನ ಪೂರ್ವಕ ಪೆನಶನ್ನು ಪಡೆದೆನು. ಈಗ ನನಗೆ ತಿಂಗಳಿಗೆ ಹತ್ತೊಂಭತ್ತು ರೂಪಾಯಿ, ಆರು ಆಣೆ ಪೆನಶನ್ನು ದೊರೆಯುತ್ತಿರುವದು.

## ನನ್ನ ಸದ್ಗುರುವು!

ಹೀಗೆ ಲಾಭಕಾಲದಲ್ಲಿ ನಾನು ಪೆನಶನ್ನು ಪಡೆದದ್ದಕ್ಕಾಗಿ ಒಬ್ಬರಿಲ್ಲೊಬ್ಬರಾದರೂ ಶಂಕಿಸಬಹುದಾಗಿದೆ. ಆದರೆ ನಾನು ಮಾಡುತ್ತಿದ್ದ ಅಧ್ಯಾಪಕ ಕೆಲಸದಲ್ಲಿ ಬೇಸರ ಮಾಡಿಯಾಗಲಿ, "ಇದರಲ್ಲೇನು ಲಾಭವಿಲ್ಲೆಂ"ಬ ಅಸಂತುಷ್ಟತೆಯಿಂದಲಾಗಿ, "ಅಚ್ಚ ಲೇಖಕನಾಗಿ ಸ್ವತಂತ್ರನೂ ದುಡ್ಡು ಗಳಿಸುವವನೂ ಎನಿಸಿಕೊಳ್ಳಬೇಕೆಂ"ಬ ಡೌಲಿನಿಂದಾಗಲಿ, "ದೇಶಭಕ್ತನೆನಿಸಿಕೊಳ್ಳಬೇಕೆಂ"ಬ ಉಬ್ಬಿನಿಂದಾಗಲಿ ನಾನು ನೌಕರಿಯನ್ನು ಬಿಟ್ಟವನಲ್ಲ. ಆದರೆ ಅಷ್ಟು ಹೊತ್ತಿಗೆ ಮೂರು ನಾಲ್ಕು ವರ್ಷಗಳಿಂದ ಅಗಡಿಯ ಆನಂದವನಸ್ಥ ಶ್ರೀ ಶೇಷಾಚಲ ಸಾಧುಗಳವರ ಸತ್ಸಹವಾಸವು ನನಗೆ ಒದಗಿ, ಆನಂದವನದಲ್ಲಿ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿದ ಉಪಾಧಿಯ ಬಾಧೆಗೆ ಅಹಂಕಾರದಿಂದ ನಾನು ಒಳಗಾಗಿದ್ದೆನು. ಆ ಪಾಠಶಾಲೆಯ ಯೋಗಕ್ಷೇಮಕ್ಕಾಗಿ ನಾನು ಆರಂಭಿಸಿದ್ದ

"ಸದ್ಬೋಧಚಂದ್ರಿಕೆ" ಎಂಬ ಮಾಸಪತ್ರಿಕೆಯನ್ನು ಸಾಗಿಸುವುದಕ್ಕೂ, ಪಾಠಶಾಲೆಯನ್ನು ನನ್ನ ಸ್ವಭಾವಕ್ಕನುಸರಿಸಿ ನಡಿಸಲಿಕ್ಕೂ ನನ್ನ ನೌಕರಿಯು ವಿಘ್ನ ಮಾಡತೊಡಗಿತು. ಹೀಗೆ ಎರಡು ಪ್ರಬಲ ಉಪಾಧಿಗಳ ಇರುಕಿನಲ್ಲಿ ಸಿಕ್ಕ ನಾನು, ಯಾವದೊಂದು ಉಪಾಧಿಯಿಂದ ಮುಕ್ತನಾಗದಿದ್ದರೆ ಪರಿಣಾಮವಾಗುವ ಹಾಗಿದ್ದಿಲ್ಲ. ಹೀಗಿರುವಾಗ ನನ್ನ ಹಿರಿಯರ ಪುಣ್ಯದಿಂದಲೂ, ಶ್ರೀ ಲಕ್ಷ್ಮೀಪತಿಯ ಕೃಪೆಯಿಂದಲೂ ನಾನು ನೌಕರಿಯ ಉಪಾಧಿಯಿಂದ ಮುಕ್ತನಾಗಿ, ಮಹಾಪುರುಷ-ಸಂಶ್ರಯದ ಭಾಗ್ಯವನ್ನು ಪಡೆದೆನು! ಈ ಭಾಗ್ಯ ಪ್ರಾಪ್ತಿಯ ಸುಮಂಗಲ ಕಾಲವು ನನಗೆ ಒದಗಿಬಾರದಿದ್ದರೆ, ಅಂದಿನಿಂದ ಇಂದಿನ ವರೆಗೆಯೆಂದರೆ ಇಪ್ಪತ್ತೈದು ವರ್ಷ ಅಖಂಡ ಭಾಷಾಸೇವೆ ಮಾಡಿದ ನಾನು, ದೊಡ್ಡ ವಿದ್ವಾಂಸರ ದರ್ಶನದಿಂದ ಧನ್ಯನಾಗಿ, ಬೆಂಗಳೂರಲ್ಲಿಯೇ ಇದ್ದು ಬಿಡುವಷ್ಟು ಭಾಗ್ಯವಂತನು ಆಗುತ್ತಿದ್ದಿಲ್ಲ! ಸದ್ಗುರು ಪ್ರಭಾವಕ್ಕೆ ಯಾವದು ತಾನೆ ಅಸಾಧ್ಯವು?

ಹೀಗೆ ನನ್ನ ಧನ್ಯತೆಗೆ ಕಾರಣನಾದ ಅಲೌಕಿಕ ಮಹಿಮೆಯ, ಹಾಗು ಅಗಾಧಸತ್ವದ ಅಗಡಿ ಆನಂದವನಸ್ಥ ಶ್ರೀ ಶೇಷಸದ್ಗುರುನಾಥನು, ನನ್ನ ಹಾಗೆಯೇ ಗಾವಿಲನು! ಆತನ ಗೋತ್ರವೂ ಕೌಂಡಿಣ್ಯ; ಆತನೂ ಶುಕ್ಲ ಯಜುರ್ವೇದಾಂತರ್ಗತ ಕಣ್ವಶಾಖೆಯ ಸ್ಮಾರ್ತ ಬ್ರಾಹ್ಮಣನು. ಲೌಕಿಕ ಯೋಗ್ಯತೆಯಲ್ಲಿಯೂ, ಓದು-ಬರಹದಲ್ಲಿಯೂ, ಕೆಲಸ-ಕೈಗಾರಿಕೆಗಳಲ್ಲಿಯೂ ನಮ್ಮಿಬ್ಬರು ಗುರುಶಿಷ್ಯರನ್ನು ಒರೆಗೆ ಹಚ್ಚಿ ನೋಡಿದರೆ, ಶಿಷ್ಯನಾದ ನಾನೇ ನನ್ನ ಗುರುವಿಗಿಂತ ಶ್ರೇಷ್ಠನು ! ಆದರೆ ಕೇವಲ ನನ್ನಂತಹ ಮೂಢ ಜನರ ಉದ್ಧಾರಕ್ಕಾಗಿ ಅವತರಿಸಿ, ಮೂಢರಿಗಿಂತಲೂ ಮೂಢನಾಗಿ ತೋರುತ್ತ, ಅಡ್ಡ ಹಾದಿಗೆ ಹೋಗುತ್ತಿರುವ ಶಿಷ್ಯರನ್ನು ಅವರಿಗೆ ತಿಳಿಯದಂತೆ ಹಾದಿಗೆ ಹಚ್ಚಲು ಸಮರ್ಥನಾದ ದೀನರಕ್ಷಕ-ಪತಿತಪಾವನ ಸದ್ಗುರುನಾಥನ-ನನ್ನ ಶ್ರೀ ಶೇಷ ಸದ್ಗುರುನಾಥನಿಗಿಂತಲೂ ಹೆಚ್ಚಿನವನು ಈ ಜಗತ್ತಿನಲ್ಲಿ ಮತ್ತಾವನಿರುವನು?

ನನ್ನ ಈ ಗಾವಿಲನಾದ ಶ್ರೀ ಸದ್ಗುರುನಾಥನು ಅತ್ಯಂತ ಗಂಭೀರನು; ನನ್ನಂತಹ ಪಾಮರನನ್ನೂ ಅಂಗೀಕರಿಸಿ ಆದರಿಸುವಷ್ಟು ಉದಾರನು, ಕರುಣಾಶಾಲಿಯು. ಆತನು ಜಗತ್ತನ್ನೇ ಈಶ್ವರಸ್ವರೂಪವಾಗಿ ನೋಡಿ ದಾಸಾನುದಾಸನಾಗಿ ಸೇವಕವೃತ್ತಿಯಿಂದ ನಡೆದುಕೊಳ್ಳುವವನು; ಬ್ರಾಹ್ಮಣರಿಂದ ಚಂಡಾಲರ ವರೆಗೆ ತಲೆಬಾಗಿ-ತಲೆಬಾಗಿ, ನಮಿಸಿ-ನಮಿಸಿ ಈಗಿನ ಅಹಂಕಾರಾವೃತ ಜಗತ್ತಿಗೆ ದಾಸಭಾವದ ಸೊಬಗನ್ನು ತೋರಿಸುವವನು; ಸದ್ವೃತ್ತಿರೂಪದ ತಾನು ಸ್ವಯಂಸಿದ್ಧ ರಾಜಾಧಿರಾಜನಾಗಿದ್ದರೂ, ಅನ್ಯರಿಗೆ "ಮಹಾರಾಜ, ಮಹಾರಾಜಾ" ಎಂಬ ವಿನಯೋಕ್ತಿಯಿಂದ ಸಂಬೋಧಿಸಿ, ಜನರ ಮಾನಸಿಕ ವಿಕಾರ ಗಳನ್ನು ಕುಗ್ಗ ಬಡಿದು ಕ್ಷಣದಲ್ಲಿ ಜನರ ಮನಸ್ಸನ್ನು ಶಾಂತಗೊಳಿಸಿ, ಅವರನ್ನು ಆನಂದಭಾಜನರನ್ನಾಗಿ ಮಾಡುವವನು; ನನ್ನ ಈ ಆನಂದವನವು ಭುಕ್ತಿ-ಮುಕ್ತಿಗಳ ನೆಲೆಗಟ್ಟೆಂದು ತನ್ನ ಸರ್ವ ವ್ಯಾಪಕ ಸೇವಾಧರ್ಮ-ಸುಲಭ ಸದ್ಬೋಧಗಳಿಂದ ಡಂಗುರ ಹೊಡೆದು ವಿವೇಕಿಗಳನ್ನು ಎಚ್ಚರಗೊಳಿಸುತ್ತ, ಸಾತ್ವಿಕ ರೀತಿಯಿಂದ ಲೋಕಸಂಗ್ರಹವನ್ನು ಮಾಡುವವನು; ನನ್ನಂತಹ ಪತಿತರಿಗಿಂತಲೂ ಪತಿತನಾಗಿ ಗಾಂಭೀರ್ಯದಿಂದ ನಡೆದುಕೊಂಡು ಪತಿತ ಶಿಕ್ಷಕಾಗ್ರೇಸರನಾಗಿ ಲೌಕಿಕರಿಗೆ ತನ್ನ ನೆಲೆಯನ್ನು ತಿಳಿಯಗೊಡದೆ, ಮಿಂಚಿಹೋಗಿ ಮುಮುಕ್ಷುಗಳಿಗೆ ಪಶ್ಚಾತ್ತಾಪನವನ್ನುಂಟುಮಾಡಿದವನು! ಇಂಥ ನನ್ನ

ಸದ್ಗುರುನಾಥನ ಅಗಾಧ ಮಹಿಮೆಯನ್ನು ವರ್ಣಿಸಲು ನಾನು ಹೇಗೆ ಸಮರ್ಥನಾದೇನು? ಆ ಮಹಾಮಹಿಮನನ್ನು ನಮಸ್ಕರಿಸುವ ಯೋಗ್ಯತೆಯಾದರೂ ನನ್ನಲ್ಲಿ ಇರುವದೆಯೇ?

ಇಂತಹ ಸದ್ಗುರುನಾಥನ ಆನಂದವನವೆಂಬ ಪವಿತ್ರ ತಪೋಭೂಮಿಯಲ್ಲಿ ಅಹಂಕಾರಿಯು ನಾನು, ಸದ್ಗುರುನಾಥನ ಶಿಷ್ಯನೆಂಬ ಮಹಾಹಂಕಾರದಿಂದ ಬಾಧಿತನಾಗಿ, ಅಖಂಡ ಹದಿಮೂರು ಹದಿನಾಲ್ಕು ವರ್ಷ ಸಕುಟುಂಬ ಸಪರಿವಾರ ವಾಸಿಸಿ ಏನೇನೋ ಕೆಲಸಗಳನ್ನು ಮಾಡಿಬಿಟ್ಟೆನು! ನನ್ನ ಅಕ್ಕರೆಯ 'ಸದ್ಬೋಧ ಚಂದ್ರಿಕೆ'ಯೆಂಬ ಮಾಸಪತ್ರಿಕೆಯು ಸದ್ಗುರುನಾಥನ ಕೃಪೆಯಿಂದ ನನ್ನ ಜ್ಯೇಷ್ಠಪುತ್ರಿಯಂತೆ ಆನಂದವನದಲ್ಲಿ ಹುಟ್ಟಿದಳು. ಆಕೆಯು ತನ್ನ ತೊದಲು ನುಡಿಯ ಸವಿಯ, ಹಾಗು ತನ್ನ ಕಿರಿ ಗೆಜ್ಜೆಗಳ ಇಂಚರದ ರೂಪದಿಂದ ಕರ್ನಾಟಕದ ಪ್ರದೇಶವನ್ನೆಲ್ಲ ಆಕ್ರಮಿಸುತ್ತ ಆಕ್ರಮಿಸುತ್ತ ಹನ್ನೆರಡು ವರ್ಷಗಳಲ್ಲಿ ಕಾಶಿಯಿಂದ ರಾಮೇಶ್ವರದ ವರೆಗಷ್ಟೇ ಅಲ್ಲ, ಏಡನದಂತಹ ಭರತಭೂಮಿಯ ಹೊರಭಾಗದಲ್ಲಿಯೂ ಇರುವ ಕನ್ನಡಿಗರಲ್ಲಿಯ ಏಳುಸಹಸ್ರ ಜನ ಚಂದಾದಾರರ ಮನಸ್ಸುಗಳನ್ನು ಎಳೆದುಕೊಂಡು, ತನ್ನ ಸವಿಯಾದ ಗೌರವದ ನುಡಿಗಳಿಂದ ಅವರನ್ನು ಆನಂದಪರವಶರಾಗಮಾಡಿ "ಅಹಹ! ಸದ್ಬೋಧಚಂದ್ರಿಕೆಯು!" ಎಂಬ ಉದ್ಗಾರವನ್ನು ಹೊರಡಿಸಿದಳು! ಇಂತಹ ಸತ್ಪುತ್ರಿಯ ಭಾಗ್ಯವನ್ನು ನಾನು ಭೋಗಿಸಿದ್ದಲ್ಲದೆ, ಹಿಂದಕ್ಕೆ ಟ್ರೇನಿಂಗ್ ಕಾಲೇಜಿನಲ್ಲಿ ೬೧ ಜನ ವಿದ್ಯಾರ್ಥಿಗಳಲ್ಲಿ ಒಬ್ಬನಾಗಿ, ಅಲ್ಲಿಯ ಬ್ರಾಹ್ಮಣ ಭೋಜನಗೃಹದಲ್ಲಿ ಭುಂಜಿಸುತ್ತ ಅಲ್ಲಿಯ ವಿದ್ಯಾಮಂದಿರದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ನಾನು, ನನ್ನ ಸದ್ಗುರುನಾಥನ ಪ್ರಭಾವದಿಂದ ಆನಂದವನದಲ್ಲಿ ಚತುಃಶಾಖೆಯ ಬ್ರಾಹ್ಮಣರ ಎಂಬತ್ತು ಜನ ವಿದ್ಯಾರ್ಥಿಗಳಿಗೆ ಅನ್ನವಸ್ತ್ರಗಳನ್ನು ಕೊಟ್ಟು, ವೇದಯಾಜ್ಞಿಕ-ಕಾವ್ಯಶಾಸ್ತ್ರಗಳ ಅಧ್ಯಾಪನ ಮಾಡಿಸುವ ಎಂಟುಜನ ಅಧ್ಯಾಪಕರ ಅನುಗ್ರಹಕ್ಕೆ ಪಾತ್ರನಾದ ಪುಣ್ಯವಂತನೆಂಬ ಅಹಂಕಾರದಿಂದ ಮೆರೆದೆನು! ಪೂಜ್ಯರೇ, ಸದ್ಗುರುನಾಥನ ಬಾಗಿಲು ಕಾಯುವ ನಮ್ಮ ನಾಯಿಗಳ ಈ ಭಾಗ್ಯದ ಭೋಗವನ್ನೂ, ಅಹಂಕಾರದ ಮೆರವಣಿಗೆಯನ್ನೂ ನೋಡಿ ನೀವು ಆಶ್ಚರ್ಯಪಡುವಿರೇನು? ಅಥವಾ ಈ ಗಳಗನಾಥನು ಎಂತಹ ಆತ್ಮಶ್ಲಾಘಿಯೆಂದು ಅಸಹ್ಯಪಡುವಿರೋ? ಆದರೆ, ಹೀಗೆ ನೀವು ಆಶ್ಚರ್ಯ-ಅಸಹ್ಯಗಳ ವಿಕಾರಕ್ಕೆ ಒಳಗಾಗದೆ, ಅಹಂಕಾರವು ಪಾಮರರ ಸ್ವಭಾವಗುಣವೆಂದು ತಿಳಿದು ಕರುಣಾಳುಗಳಾಗಿ, ನನ್ನ ಸದ್ಗುರುನಾಥನಂತೆ ನೀವೂ ನನ್ನನ್ನು ಅನುಗ್ರಹಿಸಿ ಧನ್ಯನಾಗಮಾಡುವಿರೆಂದು ನಾನು ತಿಳಿದಿರುವೆನು. ಯಾಕಂದರೆ, ತನ್ನ ಕಾರ್ಯದಲ್ಲಿಯ ಅಹಂಕಾರವು ತನ್ನ ಬಂಧನಕ್ಕೆ ಕಾರಣವಾಗಿರುವಂತೆ, ಶ್ರೀ ಗುರುವಿನ ಕಾರ್ಯದಲ್ಲಿಯ ಅಹಂಕಾರವು ತನ್ನ ಮೋಕ್ಷಕ್ಕೆ ಕಾರಣವಾಗಿರುವದೆಂದು ನಾನು ಕಲ್ಪಿಸಿಕೊಂಡಿರುವೆನು. ನನ್ನ ಸದ್ಗುರುನಾಥನು ಒಮ್ಮೆ ನನ್ನನ್ನು ಕುರಿತು ವಾತ್ಸಲ್ಯದಿಂದ "ಮಹಾರಾಜ, ಸ್ವಾಮಿಯ ಸಂಸಾರವು ನಿಮ್ಮ ಸಂಸಾರವು ಅಹುದಷ್ಟೆ?" ಎಂದು ಕೈಹಿಡಿದು ಕೇಳಲು, ಕಂಪಿತ ಹೃದಯದಿಂದ "ಹೌದು" ಎಂದು ನಾನು ಉತ್ತರ ಕೊಟ್ಟೆನು ! ಆಗ ಕರುಣಾಘನನಾದ ನನ್ನ ಸದ್ಗುರುನಾಥನು ಆನಂದದಿಂದ "ಹೋಗಿರಿ ಮಹಾರಾಜಾ ! ನಿಮ್ಮ ಸಂಸಾರವನ್ನು ಸ್ವಾಮಿಯು ತಲೆಯಲ್ಲಿ ಹೊತ್ತು ಮಾಡುವನು" ಎಂದು ಹೇಳಿದನು! ಮಹನೀಯರೇ, ಆ ಮಾಹಮಹಿಮನ ಈ ಮಾತಿನ ರಹಸ್ಯವನ್ನು ಪಾಮರನು ನಾನು ಏನು ತಿಳಿಯುವೆನು? ಮೇಲೆ ಹೇಳಿದಂತೆ

ಗುರುಕಾರ್ಯದಲ್ಲಿಯ, ಅರ್ಥಾತ್ ಪರೋಪಕಾರದಲ್ಲಿಯ ಅಹಂಕಾರವು ತಾರಕವಾದದ್ದೆಂದಿಷ್ಟು ಮಾತ್ರ ಹುಂಬಗುತ್ತಿಗೆಯಿಂದ ನಾನು ತಿಳಿದುಕೊಂಡು ಬಿಟ್ಟಿದ್ದೇನೆ! ಸನ್ಮಾನ್ಯರೇ, ಗುರುಕಾರ್ಯದಲ್ಲಿಯ ಅಹಂಕಾರವು ಮತ್ತೆ ಹುಟ್ಟಿ ಬರಲಾರದ ಹುರಿದ ಬೀಜದಂತಹ ಅಹಂಕಾರವಾಗಿರಬಹುದಲ್ಲವೆ?

ಹೀಗೆ ಆನಂದವನದಲ್ಲಿ ಸದ್ಬೋಧಚಂದ್ರಿಕೆಯ ಸೊಬಗಿನಲ್ಲಿಯೂ, ವೈದಿಕ ಪಾಠಶಾಲೆಯ ವೈಭದಲ್ಲಿಯೂ ಒಮ್ಮೆ ಸುಖಪಡುತ್ತಾ ಒಮ್ಮೆ ದುಃಖಪಡುತ್ತಾ ಆನಂದಪ್ರಾಪ್ತಿಗಾಗಿ ಹಂಬಲಿಸಿ ನಾನು ವ್ಯವಹರಿಸುತ್ತಿದ್ದಾಗ, ಶ್ರೀ ಸದ್ಗುರುನಾಥನ ನಿರ್ಯಾಣವಾಗಿ ಎರಡು ವರ್ಷಗಳಾದವು. ಆಗ ಏಳು ಸಹಸ್ರ ರೂಪಾಯಿ ಕೊಟ್ಟು ಸಂಗ್ರಹಿಸಿದ್ದ ಮುದ್ರಣದ ಸಾಧನಗಳಲ್ಲಿ ಮುಖ್ಯವಾದವನ್ನೂ, ಸದ್ಬೋಧ ಚಂದ್ರಿಕೆಯ ಮೇಲಿನ ಮಮಕಾರವನ್ನೂ ಬಿಟ್ಟು, ಶ್ರೀ ಗುರುತಂತ್ರದಿಂದ ನಾನು ಪಾಠಶಾಲೆಯೊಡನೆ ಆನಂದವನದಿಂದ ಹಾವೇರಿಗೆ ಬರಬೇಕಾಯಿತು! ಮಹಾಯುದ್ಧದ ಕಾಲ, ರೂಪಾಯಿ ಕೊಟ್ಟರೆ ಎರಡು ಸೇರು ಕಾಳು, ಕೇಳಿದ ಪದಾರ್ಥಗಳೆಲ್ಲ ಮಿತಿ ಮೀರಿ ತುಟ್ಟಿ, ಪಾಠಶಾಲೆಯ ನಲವತ್ತು ಜನ ವಿದ್ಯಾರ್ಥಿಗಳ ಎರಡು ಹೊತ್ತಿನ ಊಟ, ಎಂಟು ಜನ ಅಧ್ಯಾಪಕರ ಮಾಸಾಶನದ ಪ್ರತಿ ತಿಂಗಳ ಸರಾಸರಿ ೨೦೦ ರೂಪಾಯಿ ವೆಚ್ಚ, ಪ್ರಿಂಟಿಂಗ್ ಪ್ರೆಸ್ಸಿನ ನೌಕರರ ನೂರಾರು ರೂಪಾಯಿ ಪಗಾರ, ತನ್ಮಧ್ಯೆ ಎಂಟು ಸಹಸ್ರ ರೂಪಾಯಿ ಕೊಟ್ಟು ಮುದ್ರಣದ ಸಾಧನಗಳನ್ನು ಕೊಳ್ಳುವ ಪ್ರಸಂಗ, ಇವೆಲ್ಲ ತೊಂದರೆಗಳ ತಿಕ್ಕಾಟದಲ್ಲಿ ನನ್ನ ಇಬ್ಬರು ಹೆಣ್ಣುಮಕ್ಕಳ ಸಾಲಂಕೃತ ಕನ್ಯಾದಾನದ ಸುಯೋಗ! ಅಂದಬಳಿಕ ಕೇಳುವದೇನು? ಹೊಳೆಯ ನೀರು ಏರಿದಂತೆ ಗಳಗನಾಥನ ಸಾಲವು ಭರದಿಂದ ಏರತೊಡಗಿ, ಹದಿನಾಲ್ಕು ಸಾವಿರ ರೂಪಾಯಿಗಳವರೆಗೆ ಅದು ಏರಿತು! ಅಷ್ಟು ಹೊತ್ತಿಗೆ ಗಳಗನಾಥನ ಲೇಖನ ವ್ಯವಸಾಯದಿಂದ ಅರವತ್ತು ಸಹಸ್ರ ರೂಪಾಯಿಗಳ ಸಂಪಾದನವಾಗಿ, ಆ ಸಂಪಾದನದ ಬಹು ದೊಡ್ಡ ಭಾಗವು ವೈದಿಕ ಪಾಠಶಾಲೆ–ಗೋಶಾಲೆಗಳಿಗಾಗಿ ವೆಚ್ಚವಾಗಿ ಹೋಗಿದ್ದಿತು!

ಈ ದೀರ್ಘ ವೆಚ್ಚಕ್ಕಾಗಿ, ಗಳಗನಾಥನು ಅಸೂಯೆ ಪಟ್ಟದಿಲ್ಲ: ಅಥವಾ ನೀಗದಷ್ಟು ಸಾಲವಾದದ್ದಕ್ಕಾಗಿ ಆತನು ಎದೆಗುಂದಿದ್ದಿಲ್ಲ, ಆತನ ಪಾಠಶಾಲೆ–ಸದ್ಗುರು ಮಾಸಪತ್ರಿಕೆಗಳು ಸಾಗುವ ಹಾಗೆ ಹಾವೇರಿಯಲ್ಲಿ ಸಾಗಿದ್ದವು; ಆದರೆ ಗಳಗನಾಥನ ಸತ್ವಪರೀಕ್ಷೆಗಾಗಿಯೋ ಅನ್ನುವಂತೆ, ಸಂಸ್ಕೃತ ಪಾಠಶಾಲೆಯು ಈಗ ನಾಲ್ಕು ವರ್ಷಗಳ ಹಿಂದೆ ಅಕಸ್ಮಾತ್ ನಿಂತುಬಿಟ್ಟಿತು. ಆಗ ಮಾತ್ರ ಗಳಗನಾಥನಿಗೆ ಪರಮಾವಧಿ ದುಃಖವಾಯಿತು! ಯಾಕಂದರೆ; ಪಾಠಶಾಲೆಯನ್ನು ತನ್ನ ಗುರುಸೇವೆಯ ಮುಖ್ಯಾಂಗವೆಂದು ಆತನು ತಿಳಿದಿರುವನು. ಹೀಗಿರಲು, ಸದ್ಗುರು ಪ್ರಭಾವದಿಂದ ಆತನು ಕರ್ತವ್ಯಭ್ರಷ್ಟನಾಗದೆ, ಅನಿರ್ವಾಹಪಕ್ಷ ಸದ್ಗುರು ಮಾಸಪತ್ರಿಕೆಯನ್ನು ನಿಲ್ಲಿಸಿ, ತನ್ನಲ್ಲಿ ಸಂಗ್ರಹವಾಗಿದ್ದ ನಾಲ್ವತ್ತು ಸಹಸ್ರ ರೂಪಾಯಿಗಳ ಪುಸ್ತಕಗಳನ್ನು ಮಾರಿ ಸಾಲ ತೀರಿಸಿ, ಆಮೇಲೆ ಪಾಠಶಾಲೆ–ಸದ್ಗುರು ಮಾಸಪತ್ರಿಕೆಯನ್ನು ಪುನಃ ಆರಂಭಿಸಬೇಕೆಂದು ನಿಶ್ಚಯಿಸಿ, ತನ್ನ ವಾರ್ಧಕ್ಯದ ಕಡೆಗೆ ನೋಡದೆ, ಸ್ವತಃ ಪುಸ್ತಕಗಳನ್ನು ತಲೆಯ ಮೇಲೆ ಹೊತ್ತುಕೊಂಡು ಕರ್ನಾಟಕದಲ್ಲಿ ಮಾರಲಿಕ್ಕೆ ಹೊರಟನು! ಕೂಡಿ ಕೂಡಿದಾಗ ಆತನು ಮಾರಿದ ಪುಸ್ತಕಗಳ ಮಾರಾಟದಿಂದ ಧಾರವಾಡ ಜಿಲ್ಲೆಯ ಹತ್ತೇ ತಾಲೂಕುಗಳಲ್ಲಿ ಎಂಟು ಸಹಸ್ರ ರೂಪಾಯಿಗಳ ಸಾಲವು ತೀರಿ,

ಸದ್ಯಕ್ಕೆ ಆರುಸಾವಿರ ರೂಪಾಯಿಗಳ ಸಾಲವು ಮಾತ್ರ ಉಳಿದಿರುವದು! ಈ ಅವಸರದಲ್ಲಿ ಗಳಗನಾಥನು ಭಾಷಾಸೇವೆಯ ಅಂಗಗಳಾದ ಮೂರೂ ಕೆಲಸಗಳನ್ನು ಕ್ರಮವಾಗಿ ಮಾಡಬೇಕಾಯಿತು. ಅವುಗಳಲ್ಲಿ ಪುಸ್ತಕ ಬರೆದದ್ದು ಒಂದನೆಯ ಕೆಲಸವು; ಆ ಬರೆದ ಪುಸ್ತಕಗಳನ್ನು ಮುದ್ರಿಸುವುದಕ್ಕಾಗಿ ಸ್ವತಃ ಎರಡು ಸ್ಥಳಗಳಲ್ಲಿ (ಅಗಡಿ, ಹಾವೇರಿ), ಪ್ರೆಸ್ಸು ಇಟ್ಟದ್ದು ಎರಡನೆಯ ಕೆಲಸವು; ಬೇಗನೆ ಸಾಲ ತೀರಬೇಕೆಂದು ಆ ಮುದ್ರಿಸಿದ ಪುಸ್ತಕಗಳನ್ನು ತಲೆಯ ಮೇಲೆ ಹೊತ್ತು ಈಗ ಮಾರತೊಡಗಿರುವದು ಮೂರನೆಯ ಕೆಲಸವು! ಈ ಮೂರೂ ಕೆಲಸಗಳನ್ನು ಬೇರೆ ಬೇರೆಯವರು, ಅಂದರೆ, ಲೇಖಕರು-ಮುದ್ರಕರು-ವ್ಯಾಪಾರಿಗಳು ಮಾಡುವ ವಾಡಿಕೆಯೇ ವಿಶೇಷವಾಗಿ ಇರಲು, ಅವನ್ನೆಲ್ಲ ಅಭಿಮಾನ ತೊರೆದು ಕೈಮುಟ್ಟಿಮಾಡಿ ಧನ್ಯನಾಗುವ ಸುಯೋಗವನ್ನು ಸರ್ವೇಶ್ವರನು ಒದಗಿಸಿ ಕೊಟ್ಟದ್ದಕ್ಕಾಗಿ ನನಗೆ ಪರಮಾನಂದವಾಗಿರುವದು; ಯಾಕಂದರೆ ಪ್ರಾಮುಖ್ಯವಾಗಿ ಪುಸ್ತಕ ಮಾರುವಾಗ ನನಗಾದ ಅನುಭವದ ಲಾಭವನ್ನು ನಾನು ಇಷ್ಟೆಂದು ಹೇಳುವ ಹಾಗಿಲ್ಲ!

ಇನ್ನು ಉಳಿದಿರುವ ನನ್ನ ಆರು ಸಾವಿರ ರೂಪಾಯಿಗಳ ಸಾಲವು ತೀರಿ ಪುನಃ ಪಾಠಶಾಲೆಯೂ, ಸದ್ಗುರು ಮಾಸಪತ್ರಿಕೆಯೂ ಪ್ರಕಟವಾಗುವದರಲ್ಲಿ ಆಶ್ಚರ್ಯವಿಲ್ಲ; ಯಾಕಂದರೆ ಉತ್ತರ ಕರ್ನಾಟಕದ ಬೆಳಗಾವಿ, ವಿಜಾಪುರ, ಕಾರವಾರ ಎಂಬ ಮೂರು ಜಿಲ್ಹೆಗಳು ಹಾಗೇ ಉಳಿದಿರುವವು; ಲಲಿತ ಕನ್ನಡದ ನಾಲ್ವಡಿ ಕೃಷ್ಣನ ಮೈಸೂರ ಸಂಸ್ಥಾನವು ಹಾಗೇ ಉಳಿದಿರುವದು; ಅಲ್ಲದೆ ನೈಜಾಮಪ್ರಾಂತವಿರುವದು, ಬಳ್ಳಾರಿಯ ಜಿಲ್ಲೆಯಿರವದು; ಅಂದಬಳಿಕ ಚಿಂತಿಸವದೇಕೆ? ಆದರೆ ತಟ್ಟನೆ ಸಾಲ ತೀರಲಿಕ್ಕೆ ಮೈಸೂರು ಸಂಸ್ಥಾನವೇ ತಕ್ಕದ್ದೆಂದು ನನ್ನ ಮನಸ್ಸಿಗೆ ತೋರಿತು; ಯಾಕಂದರೆ ನನ್ನ ಸದ್ಬೋಧ ಚಂದ್ರಿಕೆಯ ಚಂದಾದಾರರ ಸಂಖ್ಯೆಯು ಏಳು ಸಾವಿರಕ್ಕೆ ಮುಟ್ಟಿದಾಗ, ಒಂದೇ ಮೈಸೂರ ಸಂಸ್ಥಾನದಲ್ಲಿ ಸರಾಸರಿ ಮೂರು ಸಹಸ್ರ ಜನ ಚಂದಾದಾರರಿದ್ದದು; ಇತ್ತಿತ್ತ ನಾನು ಸದ್ಗುರು ಎಂಬ ಮಾಸಪತ್ರಿಕೆಯನ್ನು ಹೊರಡಿಸತೊಡಗಲು, ಅದಕ್ಕೂ ಮೈಸೂರವರ ಬೇಡಿಕೆಯೇ ಹೆಚ್ಚು; ಇಡಿಯ ಕನ್ನಡಿಗರಲ್ಲಿ ಸದಭಿಪ್ರಾಯದ-ಅಭಿನಂದನದಿಂದ ನನ್ನನ್ನು ಉತ್ತೇಜನಗೊಳಿಸುವುದರಲ್ಲಿ ಮುಂದಾದವರೆಂದರೆ ನಮ್ಮ ಮೈಸೂರಿನವರೇ ! ಈ ಮುಂತಾದ ಕಾರಣಗಳಿಂದ ಯಾವಾಗಲೂ ಮೈಸೂರವರಲ್ಲಿ ನನ್ನ ವಿಶ್ವಾಸವು ಹೆಚ್ಚು. ವಾಚನಾಭಿರುಚಿಯುಳ್ಳವರೆಂದರೆ ಮೈಸೂರವರೇ ಎಂಬುದು ನನ್ನ ನಂಬಿಗೆ! ಆದ್ದರಿಂದ ಮೈಸೂರ ಪರಿಚಯವು ನನಗೆ ಪ್ರತ್ಯಕ್ಷವಾಗಿ ಇರದಿದ್ದರೂ, ಅಲ್ಲಿಗೆ ಹೋದರೆಯೇ ನನ್ನ ಸಾಲವು ಆಯಾಸವಿಲ್ಲದೆ ಬೇಗನೆ ಕುಳಿತಲ್ಲಿ ತೀರಬಹುದೆಂದು ತಿಳಿದು, ಸಂಗಡ ಮೂರು ಜನರನ್ನು ಸಹಾಯಕ್ಕಾಗಿ ಕರೆದುಕೊಂಡು ಕರ್ನಾಟಕದ ಕೇಂದ್ರವೆನಿಸುವ ಬೆಂಗಳೂರಿಗೆ ಈಗ ನಾಲ್ಕು ತಿಂಗಳ ಹಿಂದೆ ನಾನು ಪುಸ್ತಕಗಳನ್ನು ಹೊತ್ತುಕೊಂಡು ಬಂದುಬಿಟ್ಟೆನು; ಇಲ್ಲಿಗೆ ಬಂದ ಬಳಿಕ ಬೆಂಗಳೂರಿಗೆ ಕಲ್ಯಾಣಪುರಿಯೆಂಬ ಮತ್ತೊಂದು ಹೆಸರು ಇರುತ್ತದೆಂಬದು ನನಗೆ ಗೊತ್ತಾಗಲು, ನನ್ನಂತಹ ದಿನಹೋದ ದಣಿದ ಲೇಖಕನ ಕಲ್ಯಾಣವನ್ನು ಕಲ್ಯಾಣಪುರಿಯು ನಿಶ್ಚಯವಾಗಿ ಮಾಡುವದೆಂಬ ನಂಬಿಗೆಯು ನನ್ನಲ್ಲಿ ಉಂಟಾಗಿದ್ದರೆ ಆಶ್ಚರ್ಯವಲ್ಲ!

## ಬೆಂಗಳೂರು ಧನೌದಾರ್ಯವು

ಬೆಂಗಳೂರು ನಮ್ಮಂತಹ ಹಳ್ಳಿಯ ಜನರನ್ನು ಒಳಿತಾಗಿ ರಂಜಿಸುವಲ್ಲಿ ಸಂಶಯವಿಲ್ಲ. ಪುಸ್ತಕ ಮಾರಬಂದ ನಾನಂತು ಬೆಂಗಳೂರನ್ನು ನೋಡಿ ಹಿರಿ ಹಿರಿ ಹಿಗ್ಗಿದೆನು. ಅಲ್ಲಿಯ ಪ್ರಶಸ್ತವಾದ ಬೀದಿಗಳೇನು, ಸುಂದರ ಮನೆಗಳೇನು, ಸ್ವಚ್ಛತೆಯ ಸೊಬಗೇನು, ಜನರ ಚಟುವಟಿಕೆಯೇನು? ತೆರಪಿಲ್ಲದ ವಿವಿಧ ವಾಹನಗಳೇನು? ಇದಕ್ಕನ್ನಬೇಕು ನಾಗರಿಕತೆ! ಇಲ್ಲಿಯ ಜನರು ಮೃದು ನುಡಿಯವರು, ವಿನಯಭಾವದವರು, ಗುಣಗ್ರಾಹಿಗಳು; ನಾವು ಇಂತಹ ಪಂಥದವರೆಂಬುದು ಸ್ಪಷ್ಟವಾಗಿ ತಿಳಿಯುವಂತೆ ಧಾರ್ಮಿಕ ಬಾಹ್ಯ ಚಿಹ್ನಗಳನ್ನು ಸ್ಪಷ್ಟವಾಗಿ ಧರಿಸುವವರು! ಈ ಪಟ್ಟಣವನ್ನು ಕುರಿತು ನಾನು ನನ್ನ "ರಾಣೀ-ಮೃಣಾಲಿನೀ" ಕಾದಂಬರಿಯ ಪ್ರಸ್ತಾವನೆಯಲ್ಲಿ ವರ್ಣಿಸಿರುವಂತೆ ಇನ್ನೊಮ್ಮೆ ಇಲ್ಲಿಯೂ ವರ್ಣಿಸಿಬಿಡುವೆನು; ಯಾಕೆಂದರೆ ಆದರದಲ್ಲಿ ದ್ವಿರುಕ್ತಿಯು ಅವಶ್ಯವಾದದ್ದು, ಕರ್ನಾಟಕದಲ್ಲಿ ಇಷ್ಟು ಸುಸಂಸ್ಕೃತ ಪ್ರಜೆಗಳುಳ್ಳ ಪಟ್ಟಣವನ್ನು ನಾನು ನೋಡಿದ್ದು ಇದೇ ಮೊದಲು ಎಂದು ಹೇಳಬಹುದು. ಇಲ್ಲಿ ಎಲ್ಲಿ ನೋಡಿದರೂ ಪದವೀಧರರೂ, ಪಂಡಿತರೂ ಕಣ್ಣಿಗೆ ಬೀಳವರು; ಇಂಗ್ಲೀಷ ಭಾಷೆಯನ್ನು ಸುತರಾಂ ಅರಿಯದವರು ಅಪರೂಪವೆಂಬ ಹಾಗೆ ತೋರುವದು. ಅಕ್ಷರಸ್ಥರಲ್ಲದವರು ಇಲ್ಲಿ ಇಲ್ಲವೆಂತಲೇ ಹೇಳಬಹುದು. ಇಂಥ ಅಪರೂಪದ ಸುಸಂಸ್ಕೃತ ಸ್ಥಿತಿಗೆ ಇಲ್ಲಿಯ ಘನವಾದ ಸರಕಾರದಿಂದ ಒದಗಿಸಿಕೊಡಲಾಗಿರುವ ವಿದ್ಯಾಭ್ಯಾಸದ ಸಾಧನಗಳ ವೈಪುಲ್ಯವೇ ಕಾರಣವಾಗಿರುವದೆಂದು ನನಗೆ ತೋರುತ್ತದೆ. ಎಂತಹ ವಿದ್ಯಾಪೀಠವು, ಎಂತಹ ಕಾಲೇಜುಗಳು, ಎಷ್ಟು ಹೈಸ್ಕೂಲುಗಳು! ಮಿಡಲ ಸ್ಕೂಲು, ಪ್ರಾಯಮರಿ ಸ್ಕೂಲುಗಳಿಗಂತು ಅಳತೆಯಿಲ್ಲ! ಇಂತಹ ಸುಶಿಕ್ಷಣದಿಂದ ಸುಶಿಕ್ಷಿತರಾಗಿ ಉಚ್ಚಪದವಿಯನ್ನು ಹೊಂದಿದ ಈ ಪಟ್ಟಣದ ಮಹಾಜನರಲ್ಲಿ ನಿರಹಂಕಾರ, ಸೌಜನ್ಯ, ವಿನಯ, ಗುಣಗ್ರಾಹಕತೆ ಮುಂತಾದ ಸದ್ಗುಣಗಳು ತೋರುತ್ತಿದ್ದರೆ ಆಶ್ಚರ್ಯವೇನು? ವಾಚನಾಭಿರುಚಿಯು ಈ ಮೈಸೂರ ಪ್ರಾಂತದಲ್ಲಿಯಷ್ಟು ಕರ್ನಾಟಕದ ಇನ್ನಾವ ಬೇರೆ ಭಾಗದಲ್ಲಿಯೂ ಇಲ್ಲವೆಂಬುದನ್ನು ನನ್ನ ಮೂವತ್ತು ವರ್ಷದ ಲೇಖಿನ ವ್ಯವಸಾಯದ ಅನುಭವದಿಂದ ನಾನು ಹೇಳಬಲ್ಲೆನು.

ಇಂತಹ ಸೊಬಗಿನ ಬೆಂಗಳೂರಿಗೆ ಬಂದು ನನ್ನ ಪುಸ್ತಕದ ವ್ಯಾಪಾರವನ್ನು ಆರಂಭಿಸಿದೆನು; ಆದರೆ ನಾನು ಬೆಂಗಳೂರಿಗೆ ಬಂದ ಎಂಟು ಹತ್ತು ದಿನದ ಅನುಭವದಂತೆ ಮುಂದೆಯೂ ನನಗೆ ಅನುಭವ ಬಂದಿದ್ದರೆ, ಯಾವಾಗೋ ನಾನು ಬಂದ ಹಾದಿಗೆ ಸುಂಕವಿಲ್ಲೆಂದು ಪುಸ್ತಕ ಹೊತ್ತುಕೊಂಡು ತಿರುಗಿ ಊರಿಗೆ ಹೋಗಿಬಿಡುತ್ತಿದ್ದೆನು. ನಾನೂ, ನನ್ನ ಮೂವರು ಸಹಾಯಕರೂ, ಸ್ಥಳಿಕರೊಬ್ಬರೂ ಕೂಡಿ ಪುಸ್ತಕ ಮಾರಲು ಬೇಕಾದಷ್ಟು ಪ್ರಯತ್ನ ಮಾಡಿದೆವು; ಆದರೆ ನಿರಾಶೆಯ ಹೊರತು ಫಲವೇನು ಆಗಲಿಲ್ಲ! ಆಗ ನಮ್ಮ ಸಹಾಯಕರು- "ಇಲ್ಲಿ ಕನ್ನಡ ಪುಸ್ತಕಗಳ ಮೇಲೆ ಅಷ್ಟು ಆದರವಿಲ್ಲ! ನಮ್ಮ ಕಡೆಗೆ ನಿಮಗೆ ದಿನಾಲು ಇಪ್ಪತ್ತು ರೂಪಾಯಿ ಉತ್ಪನ್ನವಾಗುವ ಅನುಭವವಿದೆ; ಅಂದಬಳಿಕ ಸುಮ್ಮನೆ ಪಟ್ಟಣವಾಸದ ನಾಲ್ಕು ಜನರ ವೆಚ್ಚದ ತೊಂದರೆಗೆ ಒಳಗಾಗಿ ಯಾಕೆ ಇಲ್ಲಿ ಇರಬೇಕು? ಬೆಂಗಳೂರು ನೋಡಿದ ಹಾಗಾಯಿತು, ಬಂದಹಾಗೆ ಪುಸ್ತಕ ಹೊತ್ತುಕೊಂಡು ತಿರುಗಿ ಹೋಗಿಬಿಡುವದು ನಮಗೆ ನೆಟ್ಟಗೆ ಕಾಣುತ್ತದೆ. ಗಾಡಿಯ ವೆಚ್ಚದ ಮಟ್ಟಿಗೆ

ಯಾರಿಗಾದರೂ ಬುಕ್ಕಸೇಲರರಿಗೆ ಪುಸ್ತಕ ಕೊಟ್ಟು ಹೋಗಿಬಿಡೋಣ" ಎಂದು ಹೇಳಿದರು. ಕೂಡಲೆ ನಾನೂ ಅವರ ಮಾತಿಗೆ ಒಪ್ಪಿಕೊಂಡೆನು; ಆದರೆ ನನ್ನ ಮನಸ್ಸಿಗೆ ಮಾತ್ರ ಸಮಾಧಾನವಾಗಲಿಲ್ಲ! "ಬೆಂಗಳೂರಂತಹ ಅಚ್ಚ ಕನ್ನಡದ ಪಟ್ಟಣಕ್ಕೆ ಬಂದು ಏನೂ ಲಾಭ ಪಡೆಯದೆ ತಿರುಗಿ ಊರಿಗೆ ಹೋದರೆ ಜನರ ಮುಂದೆ ಏನು ಹೇಳಬೇಕು? ಬೆಂಗಳೂರ ಗೌರವವಾದರೂ ಏನು ಉಳಿದ ಹಾಗಾಗುವದು? ಶ್ರೀ ಸದ್ಗುರುನಾಥನು ನನ್ನ ಬೆನ್ನು ಬಿಟ್ಟನೆ? ಸದ್ಗುರುಪ್ರಭಾವವು ಅಡಗೀತೆ? 'ಈ ಮೊದಲೇ ಎಂಟು ಸಹಸ್ರ ರೂಪಾಯಿಗಳ ಸಾಲವನ್ನು ನಾನೇ ತೀರಿಸಿದೆನೇ'? ಎಂದು ಯೋಚಿಸುತ್ತಿರುವಾಗ, ಶ್ರೀ ಗುರುಪ್ರಭಾವದಿಂದ ನಾನು ನಮ್ಮವರ ಮುಂದೆ– "ನಾನು ಬೆಂಗಳೂರಲ್ಲಿ ಒಂದು ಸಹಸ್ರ ರೂಪಾಯಿಗಳನ್ನಾದರೂ ಸಂಪಾದಿಸದೆ ಊರಿಗೆ ಬರಲಿಕ್ಕಿಲ್ಲ; ಬೇಕಾದರೆ ನೀವು ಊರಿಗೆ ಹೋಗಬಹುದು" ಎಂದು ಹೇಳಿದೆನು! ಅಂದೇ ಬೆಂಗಳೂರಲ್ಲಿ ೨೫ ರೂಪಾಯಿಗಳ ಪುಸ್ತಕ ಮಾರಿದವು! ಅಂದಿನಿಂದ, ಅಂದರೆ ತಾರೀಖು ೧೧-೧೦-೨೭ನೇ ಇಸವಿಯಿಂದ ೨೭-೧-೨೮ನೆ ಇಸವಿಯವರೆಗೆ ಮೂರುವರೆ ತಿಂಗಳಲ್ಲಿ ಬೆಂಗಳೂರು ಹಾಗು ಬೆಂಗಳೂರು ಜಿಲ್ಹೆಯಲ್ಲಿ ಕೂಡಿ ಸರಾಸರಿ ಎರಡು ಸಾವಿರ ರೂಪಾಯಿಯ ಉತ್ಪತ್ತಿಯು ನನಗೆ ಆಯಿತು! ಒಂದು ಬೆಂಗಳೂರಲ್ಲಿ ಸಾವಿರದ ಐನೂರು ರೂಪಾಯಿಗಳ ಪುಸ್ತಕಗಳು ಮಾರಿದವು! ಶ್ರೀ ಸದ್ಗುರುನಾಥನು ಸತ್ಯಪ್ರತಿಜ್ಞನಲ್ಲವೆ? ಆತನ ಪ್ರಭಾವವು ಆಗಾಧವಾದದ್ದಲ್ಲವೆ? ಬೆಂಗಳೂರವರ ಈ ಔದಾರ್ಯಕ್ಕಾಗಿ ನಾನು ಎಷ್ಟು ಕೃತಜ್ಞನಾಗಿರಬಹುದು!

ಆದರೆ ಕೇವಲ ಒಂದುವರೆ ಸಾವಿರ ರೂಪಾಯಿಗಳ ಪುಸ್ತಕಗಳನ್ನು ಕೊಂಡದ್ದಕ್ಕಾಗಿ ನಮ್ಮ ಗೌರವದ ಬೆಂಗಳೂರಿಗೆ ನಾನು ಔದಾರ್ಯದ ಆರೋಪ ಮಾಡಿದ್ದರೆ, ನನ್ನ ಗಾವಿಲತನವು ಒಡೆದುಕಾಣದೆ ಹೋಗುತ್ತಿದ್ದಿಲ್ಲ. ಯಾಕಂದರೆ, ಬೆಂಗಳೂರು ಪಟ್ಟಣದ ವಿಸ್ತಾರವನ್ನೂ, ಅಲ್ಲಿಯ ಲಕ್ಷಾಂತರದ ಜನವಸತಿಯನ್ನೂ, ಅಲ್ಲಿ ಕಂಡುಬಂದ ಕನ್ನಡಭಾಷೆಯ ವಿಷಯದ ಗೌರವವನ್ನೂ, ಅಲ್ಲಿಯ ವಿದ್ಯಾಪ್ರಸಾರದ ವೇಗವನ್ನೂ, ಜನರ ವಿದ್ಯಾ ಪಕ್ಷಪಾತಿತ್ವವನ್ನೂ, ವಿದ್ವಾಂಸರ ವಿಪುಲತೆಯನ್ನೂ, ಗ್ರಂಥಕಾರರಿಗೆ ದೊರೆಯಬಹುದಾಗಿರುವ ಉತ್ತೇಜನದ ಸಾಧನಗಳನ್ನೂ ಮನಸ್ಸಿನಲ್ಲಿ ತಂದರೆ, ಒಂದು ಬೆಂಗಳೂರ ಔದಾರ್ಯದಲ್ಲಿ ನನ್ನ ಆರು ಸಹಸ್ರ ರೂಪಾಯಿಗಳ ಸಾಲವು ಸಹಜವಾಗಿ ತೀರತಕ್ಕದ್ದು; ಆದರೆ ಬೆಂಗಳೂರನ್ನೆಲ್ಲ ವ್ಯಾಪಿಸುವಷ್ಟು ಶಕ್ತಿಯು ನನ್ನಲ್ಲಿ ಇಲ್ಲದಿದ್ದರೆ, ಅದಕ್ಕೆ ಬೆಂಗಳೂರು ಏನು ಮಾಡಬೇಕು? ಆದರೆ ಬೆಂಗಳೂರಿಗೆ ನಾನು ಔದಾರ್ಯದ ಆರೋಪ ಮಾಡಿದ್ದರ ಮುಖ್ಯ ಕಾರಣವೇ ಬೇರೆ ಇರುವದು. ಅನ್ಯರ ಹಣದ ಕೊರತೆಯನ್ನು ಯಾವದೊಂದರ ಪ್ರತಿಫಲದ ರೂಪದಿಂದ ಪೂರಯಿಸಿ ಕೊಡುವ ಧನೌದಾರ್ಯಕ್ಕಿಂತ, ಅನ್ಯರ ಗುಣದ ಕೊರತೆಯನ್ನು ನಿಸ್ಪೃಹ ವೃತ್ತಿಯ ತಮ್ಮ ಸದ್ಗುಣಗಳ ಪ್ರದರ್ಶನದಿಂದ ಪೂರಯಿಸಿಕೊಡುವ ಗುಣೌದಾರ್ಯವು ಅತ್ಯಂತ ಶ್ರೇಷ್ಠವಾದದ್ದೆಂದು ನಾನು ಬರೆಯುವ ಕಾರಣವಿಲ್ಲ. ಇಂತಹ ಗುಣೌದಾರ್ಯವು ನನಗೆ ಬೆಂಗಳೂರಲ್ಲಿ ವಿಪುಲವಾಗಿ ಕಂಡುಬಂದದ್ದರಿಂದ, ನಾನು ಅದನ್ನು ಔದಾರ್ಯದ ಪಟ್ಟಣವೆಂದು ಕರೆದಿದ್ದೇನೆ. ಇನ್ನು ಅದರ ಧನೌದಾರ್ಯವನ್ನು ನಾನು

ಅಗೌರವಿಸುತ್ತಿರುವೆನೆಂದು ಮಾತ್ರ ಯಾರೂ ತಿಳಿಯಬಾರದು. ನನ್ನಂತಹ ಧನಾಕಾಂಕ್ಷಿಗಳಿಗಂತೂ ಧನದ ಔದಾರ್ಯವು ಅತ್ಯವಶ್ಯವಾದದ್ದು. ಅಂತಹ ಧನೌದಾರ್ಯವುಳ್ಳವರು ಕರ್ನಾಟಕದಲ್ಲಿರುವರೆಂಬ ನಂಬಿಗೆಯಿಂದಲೇ ನಾನು ಪುಸ್ತಕ ಹೊತ್ತುಕೊಂಡು ಕರ್ನಾಟಕದಲ್ಲಿ ತಿರುಗುತ್ತಲಿದ್ದೇನೆ; ಆದರೆ ಅಚ್ಚ ಕುಸುಬಿಯ ಎಣ್ಣೆಯಲ್ಲಿ, ಹಾಗು ಅಚ್ಚ ಆಕಳ ತುಪ್ಪದಲ್ಲಿ ಇರುವಂತಹ ಗುಣ–ತಾರತಮ್ಯವು ಅವೆರಡು ಬಗೆಯ ಔದಾರ್ಯಗಳಲ್ಲಿ ಇರುವದೆಂದು ಹೇಳುವದು ನನ್ನ ತಾತ್ಪರ್ಯವಾಗಿರುವದು! ಇನ್ನು ಗುಣೌದಾರ್ಯವು ಬೆಂಗಳೂರಲ್ಲಿ ಏನು ಕಂಡುಬಂದಿತೆಂಬದನ್ನು ಹೇಳುವೆನು.

ಹೇಗಾದರೂ ನಾನು ನನ್ನ ಯೋಗ್ಯತೆಯಂತೆ ಬಹುದಿವಸಗಳಿಂದ ಲೇಖನಗಳನ್ನು ಬರೆಯುತ್ತ ಬಂದವನಷ್ಟೆ? ಆದರೆ "ನನಗೆ ಸಾಲವು ಬಹಳವಾಯಿತಲ್ಲ" ಎಂಬ ಚಿಂತೆಯಿಂದ ಲೇಖಕನು ಹೋಗಿ ಪುಸ್ತಕ ಮಾರುವವನು ಆದದ್ದರಲ್ಲಿ, ನನ್ನ ಗುಣದ ಕೊರತೆಯಲ್ಲದೆ ಮತ್ತೇನು ಕಂಡುಬರುವದು? ಇದೊಂದು ಲೋಕಸೇವೆಯೆಂದು ತಿಳಿದು ಸರ್ವವೂ ಈಶ್ವರಾಧೀನವೆಂಬ ಭಾವದಿಂದ ನಿಸ್ಪೃಹನಾಗಿ ಲೇಖನ ಕಾರ್ಯವನ್ನು ಸಾಗಿಸುವವರು ಶ್ರೇಷ್ಠ ಲೇಖಕರು! ಅವರನ್ನು ಈಶ್ವರನ ಪ್ರತಿನಿಧಿಗಳೆಂತಲೂ ಕರೆಯಬಹುದು; ಆದರೆ ಅಂತಹ ಯೋಗ್ಯತೆಯಂತು ಇರಲಿ, ಹೊಸ ಪುಸ್ತಕ ಬರೆದರೆ ಸದ್ಗುರವು ಹೊಸ ದುಡ್ಡು ಕೊಡುವನೆಂದು ತಿಳಿಯದೆ, "ಸಾಲವಾಯಿತಲ್ಲ" ಎಂಬ ಚಿಂತೆಯಿಂದ ಬರೆಯುದನ್ನೇ ಬಿಟ್ಟುಕೊಟ್ಟು, ಸದ್ಗುರುಪ್ರಭಾವವನ್ನು ಮರೆತುಬಿಟ್ಟು; ಪುಸ್ತಕ ಮಾರತೊಡಗಿದ್ದು, ಗಳಗನಾಥನಲ್ಲಿಯ ಉದಾತ್ತಗುಣದ ಕೊರತೆಯೇ ಸರಿ. ಚಿಂತೆಯಲ್ಲಿದ್ದವರ ಸದ್ಗುಣಗಳು ಮರೆಯಾಗುವದು ಸ್ವಭಾವಿಕವಷ್ಟೆ? ಇನ್ನು ಗಳಗನಾಥನು ತನ್ನ ಜೀವನ ಸರ್ವಸ್ವವನ್ನೇ ಗುರುಪ್ರಭಾವ ರೂಪವಾಗಿ ವಾಗಾಡಂಬರದಿಂದ ಔಪಚಾರಿಕವಾಗಿಯಾದರೂ ಭಾವಿಸುತ್ತಿರುವಾಗ, ಆತನ ಆ ಪ್ರಧಾನ ಕರ್ತವ್ಯದ ಭ್ರಷ್ಟತೆಯಲ್ಲಿ ಕೂಡ ಶ್ರೀ ಸದ್ಗುರುಪ್ರಭಾವದಿಂದ ಪಂಡಿತಮೈತ್ರಿ, ಮಹಾಪುರುಷರ ಸಹವಾಸ, ವಿವಿಧ ವಿಷಯಗಳ ಜ್ಞಾನ ಮುಂತಾದ ಲಾಭಗಳು ಆದದ್ದು ಸ್ವತಂತ್ರವಾದದ್ದು! ಆದರೂ ಬೆಂಗಳೂರ ಪಂಡಿತ ಜನರ ದರ್ಶನಮಾತ್ರದ ಮೈತ್ರಿಯು ನನ್ನನ್ನು ಮತ್ತೆ ಲೇಖಕನಾಗಿ ಮಾಡಿದ ನೆವದಿಂದ, ನನ್ನ ಗುಣಾಂಶವನ್ನು ಜಾಗ್ರತಗೊಳಿಸಿದ ಉಪಕೃತಿಯನ್ನು ನಾನು ಎಂದೂ ಮರೆಯಲಾರೆನು!

ನಾನು ಬೆಂಗಳೂರಿನಲ್ಲಿ ಪುಸ್ತಕ ಮಾರಿದ್ದೆಂದರೆ, ಎರಡೇ ದಿವಸ! ಉಳಿದ ದಿವಸಗಳಲ್ಲೆಲ್ಲ ನಾನು ಪುಸ್ತಕಗಳನ್ನು ಬರೆದಿರುವೆನು. ದುಡ್ಡಿನ ಭಕ್ತನು ನಾನು ಒತ್ತಾಯದಿಂದಾದರೂ ಕಾದಂಬರಿ ಬರೆಯುವದೇ ಬಹಳವಾದದ್ದರಿಂದ, ಈಗ ಸರಾಸರಿ ನಾಲ್ಕು ತಿಂಗಳಲ್ಲಿ ಕ್ರೌನ ಅಷ್ಟಪತ್ರದ ೭೫೨ ಪುಟಗಳ ಕಾದಂಬರಿಗಳನ್ನು ಬರೆದಿರುವೆನು. ಅವುಗಳಲ್ಲಿ ೨೯೬ ಪುಟಗಳನ್ನೊಳಗೊಂಡಿರುವ "ರಾಣೀ ಮೃಣಾಲಿನಿ" ಎಂಬ ಐತಿಹಾಸಿಕ ಕಾದಂಬರಿಯೂ, ೧೩೬ ಪುಟಗಳ "ಮಹಾರಾಣಾ ರಾಜಸಿಂಹ" ಎಂಬ ಐತಿಹಾಸಿಕ ಕಾದಂಬರಿಯೂ ವಿಶ್ವಕರ್ನಾಟಕದ ಶ್ರೀ ಲಕ್ಷ್ಮೀನರಸಿಂಹ ಪ್ರೆಸ್ಸಿನಲ್ಲಿ ಪ್ರಿಂಟಾಗಿದ್ದು, ಅವುಗಳ ಎರಡೆರಡು ಸಾವಿರ ಪ್ರತಿಗಳು ಮಾರಾಟಕ್ಕೆ ಸಿದ್ಧವಾಗಿರುವವು. ಇನ್ನೊಂದು ೩೨೦ ಪುಟದ "ಧಾರ್ಮಿಕ ತೇಜ" ಅಥವಾ "ವರ ಹಿತದಕ್ಷತಾ" ಎಂಬ ಐತಿಹಾಸಿಕ

ಕಾದಂಬರಿಯು ಬರೆದು ಸಿದ್ಧವಾಗಿದ್ದು, ಹಣದ ಅನನುಕೂಲತೆಯ ಮೂಲಕ ಮುದ್ರಿಸದೆ ಹಾಗೇ ಉಳಿದಿರುವದು! ಹೀಗೆ ಸಂಪೂರ್ಣ ಪುಸ್ತಕವು ಬರೆದು ಛಾಪಿಸದೆ ಉಳಿದದ್ದು, ನಾನು ಮಾಸಪತ್ರಿಕೆಯ ಉಪಾಧಿಗೆ ಒಳಗಾದಾಗಿನಿಂದ ಇಂದಿನ ವರೆಗೆ ಇದೇ ಮೊದಲು ಎಂದು ಹೇಳಬಹುದು. ಈ ಕಾದಂಬರಿಯ ವಿಷಯವಲ್ಲದೆ, ಪ್ರಬಂಧ ರೂಪದ ೧೪೪ ಪುಟದ ವಿಷಯವನ್ನು ಬರೆದಿರುವೆನು. ಅದರಲ್ಲಿ ಈ "ಸದ್ಗುರು ಪ್ರಭಾವವು" ಒಂದಾಗಿದ್ದು, ಇನ್ನೆರಡು ಸಣ್ಣ ಭಾಷಣಗಳಿರುವವು. ಅವು– "ಗೀತೆಯ ಶ್ರವಣಾಧಿಕಾರ" "ಶ್ರೀ ವಿವೇಕಾನಂದರು ವೈದಿಕರಿಗೆ ಯಾರು?" ಎಂಬವು. ಒಟ್ಟಿಗೆ, ಪ್ರಬಂಧದ ಪುಟಗಳೆಲ್ಲ ಪ್ರಿಂಟಾಗಿರುವವೆಂದು ಹೇಳಬಹುದು. ಹೀಗೆ ನಾನು ಬೆಂಗಳೂರ ಪುಣ್ಯದಿಂದ ಶ್ರೀ ನಾಲ್ವಡಿ ಕೃಷ್ಣರಾಜರ್ಷಿಯ ಪುಣ್ಯಭೂಮಿಯಲ್ಲಿ ಒಟ್ಟಿಗೆ ೮೯೬ ಪುಟದ ವಿಷಯವನ್ನು ನಾಲ್ಕು ತಿಂಗಳಲ್ಲಿ ಬರೆದ ಹಾಗಾಗಿರುವದು. ಇವುಗಳಲ್ಲಿ "ರಾಣೀ ಮೃಣಾಲಿನಿ" ಎಂಬ ಪ್ರಥಮ ಪುಸ್ತಕವನ್ನು ಶ್ರೀಮದ್ಯುವರಾಜ ಕಂಠೀರವ ನರಸರಾಜರವರ ಅಭ್ಯುದಯಕ್ಕಾಗಿಯೂ, "ಮಹಾರಾಣಾ ರಾಜಸಿಂಹ" ಎಂಬ ದ್ವಿತೀಯ ಪುಸ್ತಕವನ್ನು ಶ್ರೀ ರಾಜಕುಮಾರ ಜಯಚಾಮರಾಜರವರ ಅಭ್ಯುದಯಕ್ಕಾಗಿಯೂ ನನ್ನ ಕುಲಸ್ವಾಮಿ ಯಾದ ಶ್ರೀ ಲಕ್ಷ್ಮೀ ವೆಂಕಟೇಶನ ಚರಣಗಳಿಗೆ ಅರ್ಪಿಸಿದಾಗ, ಆ ಭಗವಂತನ ಚರಣ ಕಮಲಗಳು ಮಲ್ಲಿಕಾ–ಚಂಪಕಗಳೆಂಬ ಎರಡು ಪುಸ್ತಕರೂಪ ಕುಸುಮಗಳಿಂದ ಅಲಂಕೃತ ಗಳಾದವು. ಇನ್ನು ಮೇಲೆ ಈ "ಸದ್ಗುರು ಪ್ರಭಾವ" ರೂಪವಾದ ತೃತೀಯ ಪುಸ್ತಕವನ್ನು ಶ್ರೀಮನ್ನಾಲ್ವಡಿ ಕೃಷ್ಣಭೂವರರ ಅಭ್ಯುದಯಕ್ಕಾಗಿ ಶ್ರೀ ಲಕ್ಷ್ಮೀವೆಂಕಟೇಶನ ಚರಣಗಳಿಗೆ ಅರ್ಪಿಸುವಾಗ, ಆತನ ಚರಣಕಮಲಗಳು ತುಲಸೀಪತ್ರದಿಂದ ಸುಶೋಭಿತವಾಗ ಬೇಕಾಗಿರುವದು! ಹೀಗೆ ಬೆಂಗಳೂರ ದರ್ಶನಮಾತ್ರದ ಪಂಡಿತ ಮೈತ್ರಿಯ ಯೋಗದಿಂದ ಬೆಂಗಳೂರಲ್ಲಿ ಪ್ರಕಟವಾಗುವ ಪುಸ್ತಕಗಳನ್ನೆಲ್ಲ ಇನ್ನು ಮುಂದೆ ಮೈಸೂರ ಸಂಸ್ಥಾನದ ಪ್ರಭುಗಳಾದ ಶ್ರೀಮನ್ನಾಲ್ವಡಿ ಕೃಷ್ಣ ದೊರೆಗಳವರ ಅಭ್ಯುದಯಕ್ಕಾಗಿ ಶ್ರೀ ಲಕ್ಷ್ಮೀಪತಿಯ ಚರಣಕಮಲಗಳಿಗೆ ವಿವಿಧ ಪುಷ್ಪರೂಪಗಳಾಗಿ ಅರ್ಪಿಸಬೇಕೆಂದು ಮಾಡಿದ್ದೇನೆ. ನನ್ನ ಆ ಮನೋದಯವನ್ನು ಪೂರ್ಣಮಾಡಲು ಶ್ರೀ ಸದ್ಗುರುಪ್ರಭಾವವು ಸಮರ್ಥವಾಗಿರುವದು!

**ಗಳಗನಾಥನ ಪುಸ್ತಕಗಳು**

ಕರ್ನಾಕಟವು ಪ್ರಾಮುಖ್ಯವಾಗಿ ನನ್ನನ್ನು ಕಾದಂಬರಿಕಾರನೆಂದು ಗುರುತಿಸು ತ್ತಿರುವದು ನನಗೆ ಅಭಿಮಾನದ ಸಂಗತಿಯು. ಆದರೂ ನನ್ನ ಮನಸ್ಸಿನ ಒಲವು ನೈತಿಕ– ಧಾರ್ಮಿಕ ಸುಲಭತತ್ವದ ವ್ಯವಹಾರೋಪಯುಕ್ತ ವಿಷಯಗಳ ಕಡೆಗೆ ವಿಶೇಷವಾಗಿ ಇರುವದು. ಈ ಮಾತಿನ ಜುಳುಕನ್ನು "ಸತ್ವಸಾರ" "ಕುಮುಧಿನಿ"ಯಂತಹ ನನ್ನ ಸ್ವತಂತ್ರ ಕಾದಂಬರಿಗಳಲ್ಲಿ ಅಲ್ಲಲ್ಲಿ ನೋಡಬಹುದಾಗಿದ್ದರೂ, "ಮಾಧವ ಕರುಣಾವಿಲಾಸ" ವೆಂಬ ನನ್ನ ವಿಸ್ತೃತವಾದ ಸ್ವತಂತ್ರ ಕಾದಂಬರಿಯ ಮಧ್ಯದಲ್ಲಿರುವ ಇಪ್ಪತ್ತೈದು ಪ್ರಕರಣಗಳು ಈ ಮಾತಿಗೆ ಸಾಕ್ಷಿಯನ್ನು ಕೊಡಬಹುದು. ಅಲ್ಲದೆ, ನನ್ನ ರೂಪಾಂತರದ, ಅಥವಾ ಭಾಷಾಂತರದ ಉಳಿದ ಕಾದಂಬರಿಗಳಲ್ಲಿಯೂ ಅಲ್ಲಲ್ಲಿ ಸುಲಭ ಬೋಧಪ್ರದ ವಿಷಯ ಗಳನ್ನು ಬುದ್ಧಿಪೂರ್ವಕ ನಾನು ಸೇರಿಸಿರುವೆನು. ನನ್ನ ಕಾದಂಬರಿಗಳಲ್ಲಿ ಬಹುತರ

ಒಬ್ಬ ಸತ್ಪುರಷನು ಇದ್ದೇ ಇರುವನು. ಆತನ ಯೋಗದಿಂದ ಸದ್ಬೋಧಗಳ ಲಾಭವು ವಾಚಕರಿಗೆ ಆಗುತ್ತಿರುತ್ತದೆ. ಕಾದಂಬರಿಗಳ ಹೊರತು ನಾನು ಬರೆದ ಉಪಯುಕ್ತ ಪ್ರಬಂಧಗಳೆಂದರೆ "ದಾಂಪತ್ಯ" "ಕುಟುಂಬ" "ನಿರ್ಯಾಣ ಮಹೋತ್ಸವ" "ಕನ್ಯಾಶಿಕ್ಷಕ" ಎಂಬ ಚಿಕ್ಕ ಪುಸ್ತಕಗಳು. ಇವಲ್ಲದೆ ಗೃಹಶಿಕ್ಷಣ, ನಮ್ಮ ದೇವರಪೂಜೆ, ದುಡ್ಡು, ಕಲಿತಾಂಡವ ಮೊದಲಾದ ಹತ್ತಿಪ್ಪತ್ತು ಸ್ಫುಟಲೇಖಗಳನ್ನು ಬರೆದಿರುವೆನು. ಮನಸ್ಸಿದ್ದರೂ ಹೆಚ್ಚಿನ ದೊಡ್ಡ ಪ್ರಬಂಧಗಳನ್ನು ಬರೆಯಲಿಕ್ಕೆ ನನಗೆ ಆಸ್ಪದವು ದೊರೆಯಲಿಲ್ಲ; ಯಾಕೆಂದರೆ ವೈದಿಕ ಪಾಠಶಾಲೆಯ ಪ್ರತಿ ತಿಂಗಳ ಸಾವಿರ ರೂಪಾಯಿಗಳ ವರೆಗಿನ ವೆಚ್ಚಕ್ಕೆ ಹಣವನ್ನು ಒದಗಿಸಿಕೊಡುವದಕ್ಕಾಗಿ ಕಾದಂಬರಿಗಳಿಗೆ ನನ್ನನ್ನು ಮಾರಿಕೊಳ್ಳಬೇಕಾಯಿತು! ನನ್ನ ಈ ಇಪ್ಪತ್ತು ವರ್ಷದ ಕಾದಂಬರೀ ಲೇಖನದಿಂದ ಕರ್ನಾಟಕದಲ್ಲಿ ವಾಚನಾಭಿರುಚಿಯು ಹೆಚ್ಚಿರುವದೆಂದು ಕನ್ನಡಿಗರ ಭಾವನೆಯಾದದ್ದನ್ನು ನಾನು ಕಿವಿಯಿಂದ ಕೇಳಿದ್ದೆನು: ಆದರೆ ಈಗ ಎರಡು ವರ್ಷಗಳಿಂದ ಊರೂರಿಗೆ ಹೋಗಿ ಪುಸ್ತಕ ಮಾರುತ್ತಿರುವಾಗ, ಹಳ್ಳಿಪಳ್ಳಿಗಳಲ್ಲಿಯೂ ನನ್ನ ಪುಸ್ತಕಗಳು ಇರುತ್ತಿರುವುದನ್ನೂ, ಸಾಧಾರಣವಾಗಿ ಅಕ್ಷರಸ್ತರಾದವರು ನನ್ನ ಒಂದಿಲ್ಲೊಂದು ಕಾದಂಬರಿಯನ್ನು ಓದಿರುವದನ್ನೂ ನೋಡಿ ನನಗೆ ಬಹಳ ಸಮಾಧಾನವಾಗುತ್ತಿರುವದು. ಈ ಮಾತಿನ ಅನುಭವವು ಬೆಂಗಳೂರಲ್ಲಿಯೂ ಪುಸ್ತಕ ಮಾರುತ್ತಿರುವ ನಮ್ಮವರಿಗೆ ಬಂದಿರುತ್ತದೆ. ಒಟ್ಟಿಗೆ ಕಾದಂಬರೀ ಲೇಖನದಿಂದ ಗಳಗನಾಥನು ಎಲ್ಲರ ಪರಿಚಯಸ್ತನಾಗಿರುವನು. ಹಿಂದೆಯೊಮ್ಮೆ ಹೇಳಿದಂತೆ, ನನ್ನ ಸದ್ಬೋಧ ಚಂದ್ರಿಕೆಯೆಂಬ ಮಾಸಪತ್ರಿಕೆಗೆ ಏಳು ಸಾವಿರ ಜನ ಚಂದಾದರರು ಕೂಡಿದ್ದಾಗ, ಕನ್ನಡಿಗರಿದ್ದ ಕರ್ನಾಟಕದ ಹೊರಗಿನ ಪ್ರಾಂತಗಳಲ್ಲಷ್ಟೇ ಅಲ್ಲ, ಹಿಂದುಸ್ಥಾನದ ಹೊರಗಿನ ಸ್ಥಳವಾದ ಏಡನದಲ್ಲಿಯೂ ಚಂದ್ರಿಕೆಯದೊಂದು ಪ್ರತಿಯು ಹೋಗುತ್ತಿದ್ದದ್ದು ಅಭಿಮಾನದ ಸಂಗತಿಯೇ ಸರಿ! ಅಲ್ಲದೆ ಈ ಮೈಸೂರ ಪ್ರಾಂತದಲ್ಲಿ ಮೆಟ್ರಿಕ್ಕಿಗೆ ಹಚ್ಚಿದ ನನ್ನ "ಧರ್ಮರಹಸ್ಯ" "ಕುಮುದಿನಿ" ಎಂಬೆರಡು ಕಾದಂಬರಿಗಳನ್ನು ವಿದ್ಯಾರ್ಥಿಗಳು ನಾಟಕ ರೂಪದಿಂದ ಪ್ರಯೋಗಮಾಡಿದ್ದು ಬಹು ಸಮಾಧಾನದ ಸಂಗತಿಯು !

ನನ್ನ ಕಾದಂಬರಿಗಳು ಇಷ್ಟು ಲೋಕಪ್ರಿಯವಾದದ್ದರ ಗುಟ್ಟನ್ನು ನಾನು ಈಗ ಹೇಳದೆ ಇರಲಾರೆನು. ಅಪ್ರಸಿದ್ಧ ನಾಯಕರಿದ್ದ ಕಾದಂಬರಿಗಳನ್ನು ಈವರೆಗೆ ನಾನು ಬರೆಯಲೇ ಇಲ್ಲ. ನನ್ನ ಕಾದಂಬರಿಗಳೊಳಗಿನ ನಾಯಕರೆಂದರೆ– "ವಿಜಯನಗರದ ರಾಜ್ಯಸ್ಥಾಪಕರಾದ ಮಾಧವಾಚಾರ್ಯರು, ಮಹಾರಾಷ್ಟ್ರ ರಾಜ್ಯಸ್ಥಾಪಕನಾದ ಶಿವಾಜಿ, ಅಕಬರನ ಕಾಲದಲ್ಲಿಯೂ ತನ್ನ ಸ್ವಾತಂತ್ರ್ಯವನ್ನು ಕಾಯ್ದುಕೊಂಡ ಮಹಾರಾಣಾ ಪ್ರತಾಪಸಿಂಹ, ಸುಪ್ರಸಿದ್ಧ ಪ್ರಾಚೀನ ಚಕ್ರವರ್ತಿಗಳಾದ ಅಶೋಕ–ಚಂದ್ರಗುಪ್ತರು, ಔರಂಗಜೇಬನಿಗೂ ತನ್ನ ಕೈತೋರಿಸಿದ ಸಾಧ್ವೀ ಚಂದ್ರಾವತೀ ರಾಣಿ; ಔರಂಗಜೇಬನ ಕಾಲದಲ್ಲಿಯೂ ಸ್ವಾತಂತ್ರ್ಯವನ್ನು ಸ್ಥಾಪಿಸಿದ ಛತ್ರಸಾಲ, ಕ್ಷತ್ರಿಯೋತ್ತಮನಾದ ರಾಣಾ ರಾಜಸಿಂಹ, ತಾಳೀಕೋಟೆಯ ಕಾಳಗದ ರಾಮರಾಜ ಮುಂತಾದ ಪ್ರಸಿದ್ಧ ಐತಿಹಾಸಿಕ ಪುರುಷರು! ಇವರ ಹೆಸರುಗಳನ್ನು ಕೇಳಿದ ಮಾತ್ರದಿಂದಲೇ ಜನರ ಮನಸ್ಸಿನಲ್ಲಿ ಆದರ–ಭಕ್ತಿಗಳು ಉತ್ಪನ್ನವಾಗುವವು. ಇಂತಹ ಪ್ರಸಿದ್ಧ ಐತಿಹಾಸಿಕ ಪುರುಷರಿಗೆ ಸಂಬಂಧಿಸಿದ ಪ್ರಸಂಗಗಳಿಂದಲೇ ವಾಚಕರಲ್ಲಿ ಉದಾತ್ತಗುಣಗಳ ಬೀಜಾರೋಪ–

ಪೋಷಣ-ಸಂವರ್ಧನಗಳು ಆಗುವವೆಂದು ನನ್ನ ನಂಬಿಗೆ. ಈ ನಂಬಿಗೆಯ ಮೂಲಕವಾಗಿಯೇ ಈವರೆಗೆ ನಾನು, ಅಪ್ರಸಿದ್ಧರಾದ ಕಲ್ಪಿತ ಸಾಮಾನ್ಯ ಜನರು ನಾಯಕರಾಗಿದ್ದ ಸಾಮಾಜಿಕ ಕಾದಂಬರಿಗಳನ್ನು ಒಂದೂ ಬರೆಯದಿರವದು. ಇನ್ನು ನಾನು ಬರೆದಿರುವ ಕಾಲ್ಪನಿಕ ಕಾದಂಬರಿಯೆಂದರೆ, ನಾನು ಮೊಟ್ಟ ಮೊದಲು ಬರೆದ "ಪ್ರಬುದ್ಧ ಪದ್ಮನಯನೆ"ಯೆಂಬುದೊಂದೇ ಒಂದು ಕಾದಂಬರಿಯು. ಅದರ ಐದು ಆವೃತ್ತಿಗಳು ಮುಗಿದು ಹೋಗಿ ಆರನೆಯ ಆವೃತ್ತಿಯನ್ನು ಈಗ ಹೊರಡಿಸಬೇಕಾಗಿದೆ! ಇರಲಿ, ಒಟ್ಟಿಗೆ ನನ್ನ ಕಾದಂಬರಿಗಳು ಇಷ್ಟು ಲೋಕಪ್ರಿಯವಾಗಲಿಕ್ಕೆ ಪ್ರಸಿದ್ಧ ಐತಿಹಾಸಿಕ ಪುರುಷರೇ ನಾಯಕರಾಗಿದ್ದ ಕಾದಂಬರಿಗಳನ್ನು ನಾನು ಬರೆದದ್ದು ಒಂದನೆಯ ಕಾರಣವು.

ಇನ್ನು ನನ್ನ ಕಾದಂಬರಿಗಳ ಲೋಕಪ್ರಿಯತೆಯ ಎರಡನೆಯ ಕಾರಣವೆಂದರೆ, ನಾನು ಭಾಷಾಪ್ರಭುತ್ವವನ್ನೂ, ವಿಷಯಯೋಜಕತೆಯ ಪ್ರಭುತ್ವವನ್ನೂ ಕಾಯ್ದುಕೊಂಡು ಕಾದಂಬರಿಗಳನ್ನು ಬರೆದದ್ದು. ಯಾವಪ್ರಾಂತದ ಭಾಷೆಯ ಅಧಿಕಾರಕ್ಕೂ ನಾನು ಒಳಗಾದವನಲ್ಲ. ನಾನು ನನ್ನ ಯೋಗ್ಯತೆಯಂತೆ ಬೇರೆಬೇರೆ ಪ್ರಾಂತಗಳ ಪ್ರಸಿದ್ಧ ಲೇಖಕರ ಕನ್ನಡ ಗ್ರಂಥಗಳನ್ನು ಓದುವಾಗ ನನ್ನಲ್ಲುಂಟಾದ ಭಾಷೆಗಳ ಪರಿಪಾಕದ ಸ್ವಾಭಾವಿಕವಾದ ಪ್ರಭುತ್ವದಿಂದ ನಾನು ಕಾದಂಬರಿಗಳನ್ನು ಬರೆದಿರುವೆನು. ನಾನು ಭಾಷೆಯ ಏಕೀಕರಣದ ಗೊಡವೆಗೂ ಹೋದವನಲ್ಲ; ಭಾಷೆಯ ಸಂಕರೀಕರಣದ ಗೊಡವೆಗೂ ಹೋದವನಲ್ಲ. ಭಿನ್ನ ಭಿನ್ನ ಭಾಷಾಸರಣಿಗಳ ಸುಪರಿಣಾಮದಿಂದ ನನ್ನ ಹುಟ್ಟು ಭಾಷೆಯಲ್ಲಾದ ಸಂಜೀವನೀಕರಣದ ಭಾಷೆಯಿಂದ ನಾನು ಕಾದಂಬರಿಗಳನ್ನು ಬರೆದಿರುತ್ತೇನೆ. ತಿರುಗಿ ಕೇಳಿದರೆ, ನನ್ನ ಕಾದಂಬರಿಗಳ ಲೋಕಪ್ರಿಯತೆಗೆ ನನ್ನ ಭಾಷಾಸರಣಿಯಾಗಲಿ, ನನ್ನ ಭಾಷಾ ಪಾಂಡಿತ್ಯ-ಪ್ರಾವಿಣ್ಯಗಳಾಗಲಿ ಕಾರಣಗಳಲ್ಲವೇ ಅಲ್ಲ. ಕೆಲವು ಪ್ರಾಂತಗಳಲ್ಲಿ ಕೆಲಮಟ್ಟಿಗೆ, ಕೆಲವು ಪ್ರಾಂತಗಳಲ್ಲಿ ಬಹುಮಟ್ಟಿಗೆ, ಕೆಲವು ಪ್ರಾಂತಗಳ ಸರ್ವಾಂಶದಿಂದ ನನ್ನ ಭಾಷೆಯು ಲೋಕಪ್ರಿಯವಾಗಿದ್ದರೂ, ನನ್ನ ಕಾದಂಬರಿಗಳ ಲೋಕಪ್ರಿಯತೆಗೆ ಆ ಭಾಷಾಮಾನ್ಯತೆಯು ಗೌಣಕಾರವೇ ಸರಿ. ನನ್ನ ಕಾದಂಬರಿಗಳ ಲೋಕಪ್ರಿಯತೆಯ ಮುಖ್ಯ ಕಾರಣವೆಂದರೆ, ಸಮಾಜವು ಮೆಚ್ಚುವಂತಹ ಕಾದಂಬರಿಗಳನ್ನೇ ಆರಿಸಿ, ಆ ಕಾದಂಬರಿಗಳಲ್ಲಿಯ ವಿಷಯಗಳ ಯೋಜನೆಯನ್ನು ವಾಚಕರ ಅನುಭವಕ್ಕೆ ನಡುವಂತೆ ಸಮರ್ಪಕವಾಗಿಯೂ, ಸುಂದರವಾಗಿಯೂ ಅಚ್ಚುಕಟ್ಟಿನಲ್ಲಿ ಮಾಡಿದ್ದು! ಲೇಖಕನು ಆರಿಸಿಕೊಂಡ ವಿಷಯಗಳ ಸೌಷ್ಠವದಲ್ಲಿ ಅವನ ಭಾಷೆಯ ಹುಳುಕುಗಳು ಮುಚ್ಚಿಹೋಗುವವೆಂಬುದನ್ನು ನಾನು ಅನುಭವದಿಂದ ಅರಿತಿರುವೆನು.

ಇನ್ನು ನನ್ನ ಕಾದಂಬರಿಗಳ ಲೋಕಪ್ರಿಯತೆಯ ಮೂರನೆಯ ಕಾರಣವೆಂದರೆ, ನಾನು ವಾಚಕರಲ್ಲಿ ಏಕೀಭವಿಸಿ ಕಾದಂಬರಿಗಳನ್ನು ಬರೆದದ್ದು. ನಾನು ವಾಚಕರಿಗಿಂತ ಶ್ರೇಷ್ಠನೆಂದಾಗಲಿ, ವಾಚಕರಿಗಿಂತ ಕನಿಷ್ಠನೆಂದಾಗಲಿ ತಿಳಿದು ಕಾದಂಬರಿಗಳನ್ನು ಬರೆದಿರುವದಿಲ್ಲ. ಬರೆಯುವಾಗ ನಾನು ವಾಚಕನಾಗಿರುವೆನು, ಓದುವಾಗ ವಾಚಕರು ಗಳಗನಾಥರಾಗುವರು. ಇದರಿಂದ ಗಳಗನಾಥನ ಮೆಚ್ಚಿಕೆಯೇ ವಾಚಕರ ಮೆಚ್ಚಿಕೆಯಾಗಿ ರುವದು. ಗಳಗನಾಥನು ಒಳ್ಳೆಯದೆಂದು ಬರೆದ ಕಾದಂಬರಿಯು ಗಳಗನಾಥನ ವಾಚಕರಿಗೆ

ಎಂದೂ ಕೆಟ್ಟದಾಗಿಯೇ ಇಲ್ಲ. ಇಷ್ಟು ಸ್ವಾವಲಂಬನದಿಂದ ನಾನು ಕಾದಂಬರಿಗಳನ್ನು ಬರೆದವನು. ನನ್ನ ಸ್ವಂತದ ಕಾದಂಬರಿಗಳಲ್ಲಂತು ನನ್ನ ಸ್ವಾವಲಂಬನವಿರುವದು ಸ್ವಾಭಾವಿಕವು; ಆದರೆ ಎಂತಹ ಪ್ರಸಿದ್ಧ ಕಾದಂಬರಿಕಾರರ ಕಾದಂಬರಿಗಳಿದ್ದರೂ, ಅವು ನನ್ನ ಹೃದಯವನ್ನು ಅಲ್ಲಾಡಿಸದಿದ್ದರೆ ಅಂತಹವನ್ನು ನನ್ನ ಕನ್ನಡಿಗರ ಕಣ್ಣು ಮುಂದೆ ನಾನು ಇಟ್ಟಿರುವದೇ ಇಲ್ಲ! ಮೊದಲು ನನ್ನ ಸಮಾಧಾನ, ಆಮೇಲೆ ನನ್ನ ವಾಚಕರ ಸಮಾಧಾನ! ನನ್ನ ಕಣ್ಣುಗಳಲ್ಲಿ ನೀರುಗಳನ್ನು ಉದುರಿಸಿದ ಕಾದಂಬರಿಗಳು ನಮ್ಮ ವಾಚಕರ ಕಣ್ಣುಗಳಲ್ಲಿ ನೀರು ಉದುರಿಸದೆ ಬಿಟ್ಟಿರುವದೇ ಇಲ್ಲ. ಇದೇ ಮಾತು ನನ್ನ ಹಾಗು ನನ್ನ ವಾಚಕರ ಎಲ್ಲ ವಿಚಾರ-ವಿಕಾರಗಳಿಗೂ ಹತ್ತುವದು! ನನ್ನ ಆಯುಷ್ಯದಲ್ಲಿ ನಾನು ಕೈ. ವಾ. ಆಪಟೆಯವರ "ಕಮಲಕುಮಾರಿ" ಎಂಬ ಒಂದು ಕಾದಂಬರಿಯ ಹೊರತು ಯಾವ ಕಾದಂಬರಿಯನ್ನೂ ಅಕ್ಷರಶಃ ಭಾಷಾಂತರ ಮಾಡಿರುವದಿಲ್ಲ. ಬೇಕಾದವರ ಕಾದಂಬರಿಯಿರಲಿ, ನಾನು ಹಾಗು ನನ್ನ ಕನ್ನಡಿಗರು, ಎಂಬ ಜೋಡನ್ನು ಮರೆಯದೆ ನಾನು ಕಾದಂಬರಿಯನ್ನು ಬೇಕಾದಲ್ಲಿ ಹಿಗ್ಗಿಸಿರುವೆನು. ಬೇಡಾದಲ್ಲಿ ಕುಗ್ಗಿಸಿರುವೆನು, ಬೇಕಾದಲ್ಲಿ ಹೊಸ ವಿಷಯವನ್ನು ಸೇರಿಸಿರುವೆನು, ಬೇಡಾದಲ್ಲಿ ಇದ್ದ ವಿಷಯವನ್ನು ತೆಗೆದುಹಾಕಿರುವೆನು. ಆ ಕಾದಂಬರಿಯೇ ನನ್ನ ಕೈಗೊಂಬೆಯಲ್ಲದೆ, ನಾನು ಕಾದಂಬರಿಯ ಕೈಗೊಂಬೆಯಾಗಿರುವದಿಲ್ಲ. ಇದರಿಂದಲೇ ನಾನು ಬರೆದಿರುವ ಕಾದಂಬರಿಗಳ ವಿಷಯವಾಗಿ ನನ್ನ ಮಮತ್ವವೂ, ನಮ್ಮ ಗಳಗನಾಥನು ಬರೆದ ಕಾದಂಬರಿಗಳೆಂಬ ಕಾರಣದಿಂದ ನಮ್ಮ ವಾಚಕ ಮಮತ್ವವೂ ಉಂಟಾಗಿ, ನಾನೂ ನನ್ನ ವಾಚಕರೂ ನನ್ನ ಕಾದಂಬರಿಗಳ ವಿಷಯದ ಮಮಕಾರದ ಸಂಬಂಧದಿಂದ ಏಕೀಭವಿಸಿ ಹೋಗಿರುವೆವು! ಕಾದಂಬರಿ ಬರೆಯುವಾಗ ವಾಚಕರ ಸ್ವರೂಪದ ಗಳಗನಾಥನೂ, ಕಾದಂಬರಿ ಓದುವಾಗ ಗಳಗನಾಥನ ಸ್ವರೂಪದ ವಾಚಕರೂ ಆಗಿ, ನಾವಿಬ್ಬರೂ ಕಾದಂಬರಿಗಳ ಸಾಮ್ರಾಜದಲ್ಲಿ ನಲಿದಾಡಿರುವೆವು! ಗಳಗನಾಥನ ಲೇಖನವೆಂದರೆ ವಾಚಕರು ಓದದೆ ಬಿಡಲಿಕ್ಕಿಲ್ಲ. ಕನ್ನಡಿಗರ ವಾಚನಾಭಿರುಚಿಯೆಂದರೆ ಗಳಗನಾಥನು ಬರೆಯದೆ ಬಿಡಲಿಕ್ಕಿಲ್ಲ. ಹೀಗೆ ನಾನೂ, ನನ್ನ ವಾಚಕರೂ ಒಂದುಗೂಡಿದ್ದರಿಂದ ಪರಸ್ಪರರ ವಿಷಯದ ಪ್ರೇಮಾದರಗಳು ಪರಸ್ಪರರಲ್ಲಿ ಉತ್ಪನ್ನವಾಗಿರುವವು. ಈ ಸ್ಥಿತಿಯೇ ಲೇಖನ ಕಲೆಯ ವೈಭವವು; ಈ ಸ್ಥಿತಿಯೇ ಮನೋಭೂಮಿಯನ್ನು ಬಿತ್ತಿ ಬೆಳೆಯುವ ಮರ್ಮವು! ಇಂತಹ ವೈಭವ-ಮರ್ಮಗಳು ಕೈಸೇರಲಿಕ್ಕೆ ಪಾಂಡಿತ್ಯಕ್ಕಿಂತ ತಪಸ್ಸೂ, ತಪಸ್ಸಿಗಿಂತ ದೈವೀಪ್ರಸನ್ನತೆಯ ಕಾರಣವಾದ ಸದ್ಗುರುಪ್ರಭಾವದಲ್ಲುಂಟಾದ ತನ್ನಲ್ಲಿಯ ತನ್ನ ಮರವೂ ಕಾರಣವೆಂದು ನನ್ನ ಭಾವನೆಯಂತು ಆಗಿರುವದು! "ಇದನ್ನು ನಾನು ಬರೆದಿಲ್ಲ, ದೇವರು ಬರೆಸಿರುವನು" ಎಂಬ ಕನಕದಾಸಾದಿ ಭಕ್ತಾಗ್ರೇಸರರ ಮಾತು, ಇಲ್ಲಿ ನನಗೆ ನೆನಪಾಗುವದು!

ಹೀಗೆ ನಾನು ಭಾಷೆಯ ಸಂಜೀವನವನ್ನು ಮಾಡಿಕೊಂಡು, ಭಾಷೆಯ ಹಾಗು ವಿಷಯದ ಪ್ರಭುವಾಗಿ, ಸ್ವಾವಲಂಬನದಿಂದ ಕನ್ನಡಿಗರಲ್ಲಿ ಶ್ರದ್ಧೆಯನ್ನಿಟ್ಟು ಪ್ರಸಿದ್ಧ ಪುರುಷರ ಕಾದಂಬರಿಗಳನ್ನು ಬರೆದಿರುವೆನು. ಇದರಿಂದ ನನಗೂ ನನ್ನ ಪ್ರಿಯವಾಚಕವರ್ಗಕ್ಕೂ ಆರಾಧ್ಯ-ಆರಾಧಕ ಭಾವವುಂಟಾದಂತಾಗಿರುತ್ತದೆ. ನಮ್ಮ ಈ ಪವಿತ್ರ ಭಾವಗಳಿಗೆ

ಶ್ರೀರಾಮ-ಶಬರಿಯರ ಭಾವವನ್ನು ಹೋಲಿಸಬಹುದು! ನಾನು ಶಬರಿಯು, ವಾಚಕರು ಶ್ರೀರಾಮರು; ನನ್ನ ಕಣ್ಣಿಗೆ ಬಿದ್ದ, ಅಥವಾ ನನ್ನ ಊರ್ಮಿಯಲ್ಲಿ ಸ್ಫುರಿಸಿದ ಕಾದಂಬರಿಗಳೇ ಶ್ರೀರಾಮರೂಪ ವಾಚಕವರ್ಗವೆಂಬ ನನ್ನ ಅಧಿದೈವತಕ್ಕೆ ಭಕ್ತಿಯಿಂದ ಅರ್ಪಿಸತಕ್ಕ ನನ್ನ ಬೋರೆಯ ಹಣ್ಣುಗಳು. ಪುಣ್ಯವಂತ ಶಬರಿಯು, ಇವು ಸೀಯೋ ಹುಳಿಯೋ ಎಂದು ನೋಡುವಾಗ ಸೇವ್ಯಭಕ್ತಿಯ ಅತಿರೇಕದಲ್ಲಿ ಇವು ಎಂಜಲಾದಾವೆಂಬ ಎಚ್ಚರಿಲ್ಲದೆ ಹಣ್ಣುಗಳನ್ನು ಕಡಿಕಡಿದು ನೋಡಿ ಹುಳಿಯಾದವುನ್ನು ಚಲ್ಲಿ ಕೊಟ್ಟು ಸೀಯಾದವನ್ನು ಶ್ರೀರಾಮರಿಗಾಗಿ ಇಟ್ಟುಕೊಂಡಳು. ಅಂತಹ ಕಡಿದು ನೋಡಿದ ಹಣ್ಣುಗಳನ್ನು ಭಕ್ತವಾತ್ಸಲ್ಯದ ಭರದಲ್ಲಿ ಎಂಜಲವೆಂಬ ಮಾತು ಮರೆತುಹೋಗಲು, ಶ್ರೀರಾಮರು ಅವನ್ನು ಭಕ್ಷಿಸಿದರು! ಆ ಸೇವ್ಯ-ಸೇವಕರಲ್ಲಿ ಪರಕೀಯ ಭಾವವಿದ್ದರಷ್ಟೇ ಎಂಜಲವಾಗುವದು! ಹೊಟ್ಟೆಯು ಹಸುಮಕ್ಕಳು ಉಂಡು ಉಳಿದದ್ದು ತಾಯಿಗೆಲ್ಲಿಯಾದರೂ ಎಂಜಲವೆ? ಭಕ್ತರಿಗೂ ದೇವರಿಗೂ ಇದೇ ಮಾತು! ಇನ್ನು ಶಬರಿಯ ಭಕ್ತಿಯು ನನ್ನಲ್ಲಿಲ್ಲವೆಂದು ನಾನು ಒಪ್ಪಿಕೊಳ್ಳುವೆನು. ಆದರೆ ಶ್ರೀರಾಮರ ಸೇವಕ ವಾತ್ಸಲ್ಯಕ್ಕಿಂತ ಹೆಚ್ಚಿನ ವಾತ್ಸಲ್ಯವು ನನ್ನ ವಿಷಯವಾಗಿ ನಮ್ಮ ಕನ್ನಡಿಗರಲ್ಲಿ ನಿಶ್ಚಯವಾಗಿ ಇರುತ್ತದೆ. ಯಾಕಂದರೆ ಬೇಗನೆ ಕಾದಂಬರಿ ಬರೆಯಬೇಕೆಂಬ ಅವಸರದಲ್ಲಿ ಒಂದೆರಡು ಸಾರೆ ಅಪಕ್ವರಸದ ಕಾದಂಬರಿಗಳನ್ನೇ ನಾನು ಕೊಡಲು, ಅವನ್ನೇ ಸವಿಯಾದ ಕಾದಂಬರಿಗಳಂತೆ ನಮ್ಮ ವಾಚಕರು ಪ್ರೀತಿಯಿಂದ ಓದಿದರು!

ಮಹನೀಯರೇ, ಕಾದಂಬರಿಗಳೆಂದರೆ ಕಡಿಮೆ ಯೋಗ್ಯತೆಯ ಗ್ರಂಥಗಳು, ಕಾದಂಬರಿಕಾರನೆಂದರೆ ಕಡಿಮೆ ಯೋಗ್ಯತೆಯ ಗ್ರಂಥಕಾರನು ಎಂಬ ತಿಳುವಳಿಕೆಯಿಂದ ನಾನು ಕಾದಂಬರಿಗಳನ್ನು ಬರೆದಿರುವದಿಲ್ಲ. ತಾತ್ವಿಕ ವಿಷಯಗಳೆಂಬ ಸಣ್ಣ ಕಹಿ ಗುಳಿಗೆಗಳನ್ನು ನವರಸಗಳ ಕಷಾಯದಲ್ಲಿ ಕೂಡಿಸಿ ಸರ್ವಗ್ರಾಹ್ಯವಾಗುವಂತೆ ಪೌಷ್ಟಿಕ ರಸಾಯನವಾಗ ಮಾಡುವ ಘನವಾದ ಯೋಗ್ಯತೆಯು ಕಾದಂಬರಿಕಾರರಲ್ಲಲ್ಲದೆ ಮತ್ತೊಬ್ಬ ಲೇಖಕರಲ್ಲಿ ಇರಲಾರದೆಂಬ ಅಹಂಕಾರದಿಂದ ನಾನು ಕಾದಂಬರಿಗಳನ್ನು ಬರೆದಿದ್ದೇನೆ! ಆದ್ದರಿಂದ ನನ್ನ ವಾಚಕವರ್ಗಕ್ಕೆ ಕಾದಂಬರಿಯೊಳಗಿನ ತತ್ವವೂ ಕಾದಂಬರಿಯಾಗಿಯೇ ಪರಿಣಮಿಸಿರುವದು. ಹೀಗೆ ಪರಿಣಾಮವಾಗಬೇಕೆಂಬುದನ್ನು ಲಕ್ಷಿಸದೆ ಬರೆದ ಕಾದಂಬರಿ ಕಾರನು ಗೌರವಶಾಲಿಯಾದ ರಸಿಕ ಕಾದಂಬರಿಕಾರನಲ್ಲವೇ ಅಲ್ಲ. ಕೆಲವು ಕಾದಂಬರಿ ಕಾರರು ಕೇವಲ ರಸಿಕರಿರಬಹುದು, ಕೆಲವು ಕಾದಂಬರಿಕಾರರು ಕೇವಲ ಗೌರವಶಾಲಿ ಗಳಿರಬಹುದು. ಕೇವಲ ರಸಿಕರಾದ ಕಾದಂಬರಿಕಾರರು ನನ್ನ "ಪ್ರಬುದ್ಧ ಪದ್ಮನಯನೆ" ಯಂತಹ ರಸಪ್ರಧಾನವಾದ ಸಾಮಾನ್ಯ ಜನಸೇವಿತ ಕಾದಂಬರಿಗಳನ್ನು ಬರೆಯಬಹುದು; ಕೇವಲ ಗೌರವಶಾಲಿಗಳಾದ ಕಾದಂಬರಿಕಾರರು ನನ್ನ "ಮಾಧವ ಕರುಣಾವಿಲಾಸ" ದಂತಹ ತತ್ವಪ್ರಧಾನವಾದ ತಾತ್ವಿಕ ಜನಸೇವಿತ ಕಾದಂಬರಿಗಳನ್ನು ಬರೆಯಬಹುದು. ಆದರೆ ಗೌರವಶಾಲಿಯಾದ ರಸಿಕ ಕಾದಂಬರಿಕಾರನಾಗಿಯೇ ಕಾದಂಬರಿಗಳನ್ನು ಬರೆಯುವದು ಶ್ರೇಯಸ್ಕರವೆಂದು ಭಾವಿಸಿ, ಸಾಧಿಸಿದ ಮಟ್ಟಿಗೆ ನಾನು ಕಾದಂಬರಿಗಳನ್ನು ಬರೆದಿರುತ್ತೇನೆ.

ನಾನು ಬರೆದಿರುವ ಕಾದಂಬರಿಗಳಲ್ಲಿ ಕನ್ನಡಿಗರವು, ಮರಾಟರವು, ರಜಪೂತರವು ಎಂಬ ಮೂರು ಬಗೆಯ ಕಾದಂಬರಿಗಳಿರುವವು. ಕನ್ನಡಿಗರವು ನಾಲ್ಕು, ಮರಾಟರವು ಏಳು, ರಜಪೂತರವು ಒಂಭತ್ತು, ಕಲ್ಪಿತವಾದದ್ದು ಒಂದು–ಹೀಗೆ ಒಟ್ಟು ಇಪ್ಪತ್ತೊಂದು ಕಾದಂಬರಿಗಳನ್ನು ಕೂಡಿ ಕ್ರೌನ ಅಷ್ಟ ಪತ್ರದ ೫೦೦೦ ಪುಟದ ಕಾದಂಬರೀ ವಿಷಯವನ್ನು ನಾನು ಬರೆದಿದ್ದೇನೆ. ಇವುಗಳಲ್ಲಿ ಯಾವ ಕಾದಂಬರಿಗಳು ಶ್ರೇಷ್ಠವೆಂದು ಯಾರಾದರೂ ಕನ್ನಡಿಗರು ಕೇಳಿದರೆ, ನಮ್ಮವರವೆಂಬ ದೃಷ್ಟಿಯಿಂದ ಕನ್ನಡಿಗರ ಕಾದಂಬರಿಗಳು, ನಮ್ಮ ನೆರೆಯವರವೆಂಬ ದೃಷ್ಟಿಯಿಂದ ಮರಾಟರ ಕಾದಂಬರಿಗಳು, ಕ್ಷಾತ್ರತೇಜದ ಉಗಮಸ್ಥಾನದವರೆಂಬ ದೃಷ್ಟಿಯಿಂದ ರಜಪೂತರ ಕಾದಂಬರಿಗಳು ಶ್ರೇಷ್ಠವೆಂದು ಮಾತ್ರ ನಾನು ಹೇಳಬಹುದಲ್ಲದೆ, ಅವರವರ ಅಭಿರುಚಿಯಂತೆ ಅವರವರ ಮನೋವೃತ್ತಿಗಳನ್ನು ತನ್ಮಯ, ತದ್ರೂಪ, ತದಾಕಾರವಾಗಿ ಮಾಡುವಲ್ಲಿ ಎಲ್ಲ ಕಾದಂಬರಿಗಳೂ ಬಹುತರ ಸಮಾನ ಯೋಗ್ಯತೆಯವೇ ಎಂದು ನಾನು ಹೇಳದೆ ಇರಲಾರೆನು. ಬಾಳೆಯಹಣ್ಣು, ಮಾವಿನಹಣ್ಣು, ದ್ರಾಕ್ಷಿಯಹಣ್ಣು, ಕಿತ್ತಳೆಹಣ್ಣು, ಪೇರಲಹಣ್ಣು ಮೊದಲಾದ ರಸಪುಷ್ಟವಾದ ಹಣ್ಣುಗಳಲ್ಲಿ ಯಾವದು ಶ್ರೇಷ್ಠವೆಂದು ಹೇಗೆ ಹೇಳಬೇಕು? ಅವವುಗಳ ರುಚಿ ಅವವಕ್ಕೆ! ಅವರವರ ಅಭಿರುಚಿಯಂತೆ ಆಯಾ ಹಣ್ಣುಗಳು ಅವರವರಿಗೆ ಶ್ರೇಷ್ಠವಾದವೆಂತಲೇ ಹೇಳಬೇಕಾಗುವದು. ಒಟ್ಟಿಗೆ, ಸರ್ವ ಸಮೀಚೀನ ಫಲಗಳು ಸರ್ವರಿಗೂ ಸೇವ್ಯವಾಗಿರುವಂತೆ, ನನ್ನ ಸರ್ವ ಕಾದಂಬರಿಗಳು ಎಲ್ಲರೂ ಓದತಕ್ಕವಾಗಿರುವವೆಂಬುದು ಅನುಭವದ ಸಂಗತಿಯು! ನಾನೊಂದು ಹೊಸ ಕಾದಂಬರಿಯನ್ನು ಪ್ರಕಟಿಸಲು, ಅದನ್ನು ಓದಿದ ಕೆಲವು ರಸಿಕ ವಾಚಕರು ನನ್ನನ್ನು ಕಂಡಾಗ–"ಈಗ ನೀವು ಪ್ರಕಟಿಸಿದ ಕಾದಂಬರಿಯು ಹಿಂದಿನ ಎಲ್ಲ ಕಾದಂಬರಿಗಳಗಿಂತ ಸವಿ" ಎಂದು ಹೇಳುತ್ತಿರುವದನ್ನು ಕೇಳಿ ನಾನು ಕೌತುಕಪಟ್ಟಿರುವೆನು. ಇತ್ತಿತ್ತಕಡೆಯ ಒಂದೆರಡು ಕಾದಂಬರಿಗಳ ವಿಷಯವಾಗಿ ಕೆಲ ಕೆಲವರು ಅಲ್ಪಸ್ವಲ್ಪ ಮೂಗು ಮುರಿದುದನ್ನು ನಾನು ಬಲ್ಲೆನು. ಅದರಿಂದ ನನ್ನ ಹಾಗು ನನ್ನ ವಾಚಕರ ಹೃದಯೈಕ್ಯವು ಚನ್ನಾಗಿ ತೋರುತ್ತಿರುವದು. ಮಹನೀಯರೇ, ದುಡ್ಡಿಗಾಗಿ ಭರದಿಂದ ಕಾದಂಬರಿಗಳನ್ನು ಬರೆಯತೊಡಗಿದಾಗ ಎಲ್ಲ ಉತ್ತಮ ಕಾದಂಬರಿಗಳನ್ನೇ ಬರೆದೇನೆಂಬ ಪ್ರತಿಜ್ಞೆಯು ನಡೆಯಲಿಕ್ಕಿಲ್ಲವೆಂಬ ಮಾತನ್ನು ನಾನು ಬರೆಯುವ ಕಾರಣವಿಲ್ಲ. ನನ್ನ ಆ ಮೂಗು ಮುರಿಸಿಕೊಂಡ ಕಾದಂಬರಿಗಳು, ನನ್ನ "ಈಶ್ವರೀ ಸೂತ್ರ" "ಕಮಲಕುಮಾರಿ" "ಕುಮುದಿನಿ" "ಧರ್ಮರಹಸ್ಯ" ಗಳಂಥ ಹದಿನೇಳು ಹದಿನೆಂಟು ಸುರಸ ಕಾದಂಬರಿಗಳ ಸ್ವಾದವನ್ನು ಒಂದರ ಹಿಂದೊಂದರಂತೆ ಸವಿದ ನಾಲಿಗೆಯ ರಸಮತ್ತತೆಯ ದೃಷ್ಟಿಯಿಂದ ಮೂಗು ಮುರಿಸಿಕೊಂಡಿರುವವೆಂಬದನ್ನು ಮಾತ್ರ ಮರೆಯಬಾರದು! ಒಟ್ಟಿಗೆ, ಹಡೆದವರಿಗೆ ಹಂದಿಯೂ ಮುದ್ದಾಗಿ ತೋರುತ್ತಿರಲು, ಬಹುಜನರ ಪ್ರೇಮಕ್ಕೆ ಪಾತ್ರವಾಗಿರುವ ಕಾದಂಬರಿಗಳನ್ನು, ಜನರು ಮತ್ತೂ ಅವನ್ನು

೧. ಇದೇ 'ಸದ್ಗುರು ಪ್ರಭಾವ' ಕೃತಿಯ ಕೊನೆಯಲ್ಲಿ ಕನ್ನಡಿಗರಿಗೇ ಸಂಬಂಧಿಸಿದವು–೪, ಮರಾಠರಿಗೆ ಸಂಬಂಧಿಸಿದವು–೮, ರಜಪೂತರಿಗೆ ಸಂಬಂಧಿಸಿದವು–೫, ಸಂಕೀರ್ಣ–೫. ಹೀಗೆ ೨೨ ಕಾದಂಬರಿಗಳನ್ನು ಗಳಗನಾಥರೇ ದಾಖಲಿಸಿದ್ದಾರೆ. ನಾವು ಈ ದಾಖಲೆಯನ್ನು ಅನುಸರಿಸಿದ್ದೇವೆ.

ಸೇವಿಸಿ ಕಾದಂಬರೀ ನಾಯಕರ ಉದಾತ್ತವೃತ್ತಿಯ ಲಾಭ ಮಾಡಿಕೊಳ್ಳಲೆಂಬ ಉದ್ದೇಶದಿಂದ ಇಷ್ಟು ಸವಿಮಾಡಿ ವರ್ಣಿಸಿದ್ದಕ್ಕಾಗಿ ನಾನು ಮಹನೀಯರಲ್ಲಿ ಕ್ಷಮೆಯನ್ನು ಯಾಚಿಸುವೆನು!

ಸಾಧಾರಣವಾಗಿ ಭರತಭೂಮಿಯೇ ಈಗ ಶ್ವವೃತ್ತಿಯಲ್ಲಿರುತ್ತಿರಲು, ತದಂತರ್ಗತ ಕರ್ನಾಟಕವು ಆ ವೃತ್ತಿಗೆ ಹೊರಗಾಗಿರುವದೆಂದು ಹೇಗೆ ಹೇಳಬೇಕು? ಯಾವುದೊಂದು ರಾಷ್ಟ್ರಕ್ಕಾಗಲಿ, ಯಾವುದೊಂದು ಜನಾಂಗಕ್ಕಾಗಲಿ ಬ್ರಾಹ್ಮವೃತ್ತಿ, ಕ್ಷಾತ್ರವೃತ್ತಿ, ವೈಶ್ಯವೃತ್ತಿ, ಶೂದ್ರವೃತ್ತಿ, ಶ್ವವೃತ್ತಿ ಎಂಬ ನಾಲ್ಕು ವೃತ್ತಿಗಳು ಚಕ್ರನೇಮಿಕ್ರಮದಿಂದ ಅಂಟಿಕೊಳ್ಳತಕ್ಕವೆ! ಯಾಕಂದರೆ ಈ ವೃತ್ತಿಪರಿವರ್ತನವು ಸೃಷ್ಟಿಯ ಸಾಂಸಿದ್ಧಿಕ ಧರ್ಮವಾಗಿರುವದು. ಶ್ವವೃತ್ತಿಯ ಮುಂದಿನ ಮೆಟ್ಟಲವೇ ನಾಶಕಾರಕವಾದ ಗ್ಲಾನಿಯು! ಅಂತಹ ಗ್ಲಾನಿಯ ಪ್ರಸಂಗ ಒದಗಿದಾಗೆಲ್ಲ ಕಲ್ಪಾಂತದ ವರೆಗೆ ಭಗವದವತಾರವಾಗಿ ಗ್ಲಾನಿಯು ದೂರವಾಗುತ್ತಿರುವದೆಂದು ನಮ್ಮ ವೈದಿಕ ಮತದ ಸಿದ್ಧಾಂತವು! ಒಟ್ಟಿಗೆ, ಗ್ಲಾನಿಯು ಕಾಲದಲ್ಲಿ ಪ್ರಬಲ ವಿಭೂತಿಯ ಸಹವಾಸದಿಂದ ಯಾವದೊಂದು ರಾಷ್ಟ್ರವಾಗಲಿ, ಜನಾಂಗವಾಗಲಿ, ವ್ಯಕ್ತಿಯಾಗಲಿ ತನ್ನ ಗ್ಲಾನಿಯನ್ನು ಕಳೆದುಕೊಂಡು ತನ್ನ ಅಧಿಕಾರದಂತೆ ಉಚ್ಚವೃತ್ತಿಯನ್ನು ತಳೆದು ವ್ಯವಸ್ಥಿತವಾಗುತ್ತಿರುವದು. ಬ್ರಾಹ್ಮ, ಕ್ಷಾತ್ರ, ವೈಶ್ಯ, ಶೂದ್ರ ಎಂಬೀ ನಾಲ್ಕು ವೃತ್ತಿಗಳು ವ್ಯವಸ್ಥಿತವಾದವುಗಳೆಂತಲೂ, ಅವುಗಳ ಬೆರಿಕೆಯು ತಕ್ಕ ಪ್ರಮಾಣದಿಂದ ರಾಷ್ಟ್ರದಲ್ಲಿ ಆಗಿರುವಾಗ ಅವೆಲ್ಲ ವೃತ್ತಿಗಳು ರಾಷ್ಟ್ರಪೋಷಕಗಳೆಂತಲೂ, ಹಾಗಿರದಾಗ ರಾಷ್ಟ್ರಘಾತಕಗಳೆಂತಲೂ ಆರ್ಯರ ಸಿದ್ಧಾಂತವಿರುವದರಿಂದ, ಆ ವೃತ್ತಿಗಳನ್ನು ಸಮಾನ ಯೋಗ್ಯತೆಯ ರಾಷ್ಟ್ರಘಟಕಗಳೆಂದು ತಿಳಿದು ಅವನ್ನು ಆ ನಮ್ಮ ಪೂಜ್ಯ ಪೂರ್ವಜರು ನಿಷ್ಕರ್ಷವಾಗಿ ಸ್ಥಿರಪಡಿಸಿರುವರು. ಅಂದಬಳಿಕ ಕರ್ನಾಟಕದಲ್ಲಿ ಈಗ ವಿಪುಲವಾಗಿರುವ ಶ್ವವೃತ್ತಿಯು ನಾಶವಾಗಿ ಯಾವದೊಂದು ವ್ಯವಸ್ಥಿತ ವೃತ್ತಿಯು ಬರಬೇಕಾದರೆ, ಅದರಲ್ಲಿಯೂ ಈಗ ಬೇಕಾಗಿರುವ ಬ್ರಹ್ಮವೃತ್ತಿಯ ಸಂಸ್ಕರಣದ ಕ್ಷಾತ್ರವೃತ್ತಿಯು ಬರಬೇಕಾದರೆ ಶ್ರೀ ಸಮರ್ಥ ರಾಮದಾಸರ ಶಿಷ್ಯನಾದ ಶಿವ ಛತ್ರಪತಿಯ, ಶ್ರೀ ವಿದ್ಯಾರಣ್ಯರ ಶಿಷ್ಯನಾದ ಹುಕ್ಕ ದೊರೆಯ, ಶ್ರೀ ವೈಕುಂಠಯೋಗಿ–ಶ್ರೀ ಪ್ರಾಣನಾಥ ಪ್ರಭುಗಳಂತಹ ಸತ್ಪುರುಷರ ಶಿಷ್ಯರಾದ ಹಲವು ರಜಪೂತ ವೀರರ ಕಾದಂಬರಿಗಳನ್ನು ಕನ್ನಡಿಗರು ಓದಲೇಬೇಕಾಗವದು. ಹಾಗೆ ಮಾಡದೆ ಶ್ವವೃತ್ತಿಯಲ್ಲಿ ಅಗ್ರೇಸರರಾದವರ, ಅಥವಾ ಉನ್ನತ ವಿಷಯಸುಖ ಮಗ್ನರಾದವರ ನಾಯಕತ್ವದ ಕಾದಂಬರಿಗಳನ್ನು ಓದಿದರೆ, ರಾಷ್ಟ್ರದ ವ್ಯಕ್ತಿಗಳಲ್ಲಿ ವ್ಯವಸ್ಥಿತ ವೃತ್ತಿಗಳ ಪೋಷಣವು ಸರ್ವಥಾ ಆಗಲಾರದು, ಯಾಕಂದರೆ, ಉಂಡದ್ದೇ ತೇಗಿನಲ್ಲಿ ಬರುವದು ವಾಡಿಕೆಯ ನಿಯಮವಾಗಿರುವದು. ಆದ್ದರಿಂದ ತಮ್ಮ ರಾಷ್ಟ್ರದ, ಅಥವಾ ಜನಾಂಗದ, ಇಲ್ಲವೆ ವ್ಯಕ್ತಿಯ ಕಲ್ಯಾಣವಾಗಬೇಕೆಂದು ಬಯಸುವವರು, ಆಬಾಲ ವೃದ್ಧರಿಗೆ, ವಿಶೇಷವಾಗಿ ವಿದ್ಯಾರ್ಥಿ ದಶೆಯಲ್ಲಿರುವವರಿಗೆ ಇಂತಹ ತೇಜಸ್ವಿತೆಯ ಕಾದಂಬರಿಗಳ ವಾಚನದ ಯೋಗವು ಒದಗಿಬರುವಂತೆ ಬುದ್ಧಿಪೂರ್ವಕ ವ್ಯವಸ್ಥೆ ಮಾಡತಕ್ಕದ್ದು. ಇಂತಹ ಮನಃಸಂಸ್ಕರಣದ, ಹಾಗು ಮನ ಉಜ್ಜೀವನೀಕರಣದ ಕಾದಂಬರಿಗಳನ್ನು ಓದುವದರಿಂದ ಮನುಷ್ಯನ ಮನೋಭೂಮಿಯಲ್ಲಿ ಸ್ವಾಭಿಮಾನದ ಅಂಕುರವು ಉತ್ಪನ್ನವಾಗುವದು; ಆದರೆ

ಅದರೊಡನೆ ನಾಸ್ತಿಕಭಾವದ, ಗುರುಹಿರಿಯರ ಅವಹೇಳನದ, ಧರ್ಮಹೀನತೆ-ಸ್ವಚ್ಛಂದ ವೃತ್ತಿಗಳ ಕೆಟ್ಟ ಕಸಗಳು ಮಾತ್ರ ಮೊಳೆಯಲಾರವು! ಇಂತಹ ಕಾದಂಬರಿಗಳನ್ನು ಓದುವವರ ಮನಸ್ಸಿನಲ್ಲಿ ದುಷ್ಟ ಶಾಸನದ ತ್ವೇಷವು ಉತ್ಪನ್ನವಾಗುವದು; ಆದರೆ ಆ ತ್ವೇಷವು ಗರ್ವದ ಸಂಪರ್ಕದಿಂದ ಒರಟಿಯೂ, ಸ್ವಾರ್ಥದ ವಿಷದಿಂದ ಕ್ರೂರವೂ ಮಾತ್ರ ಆಗಲಾರದು! ಇಂತಹ ಕಾದಂಬರಿಗಳನ್ನು ಓದುವರಿಂದ ಮನುಷ್ಯನು ದೃಢನಿಶ್ಚಯದವನಾಗುವನು; ಆದರೆ ಅವನ ಸ್ವಭಾವವು ಕಠೋರವೂ, ವಿಕ್ಷಿಪ್ತವೂ ಮಾತ್ರ ಆಗಲಾರದು! ಇಂತಹ ಕಾದಂಬರಿಗಳನ್ನು ಓದುವದರಿಂದ ಮನುಷ್ಯನು ತೇಜಸ್ವಿಯಾಗವನು; ಆದರೆ ಅವನ ಹೃದಯವು ಉಗ್ರವೂ, ನಡತೆಯು ತಾಪದಾಯಕವೂ ಆಗಲಾರದು! ಒಟ್ಟಿಗೆ ಇಂತಹ ಕಾದಂಬರಿಗಳನ್ನು ಓದುವವರು ಧರ್ಮಶ್ರದ್ಧೆಯುಳ್ಳವರೂ, ರಾಜನಿಷ್ಠರೂ, ಗುರುಹಿರಿಯುರನ್ನು ಮನ್ನಿಸುವವರೂ, ಪರೋಪಕರಾದ ಬುದ್ಧಿಯುಳ್ಳವರೂ, ತೇಜಸ್ವಿಗಳೂ, ದುಷ್ಟಶಾಸನ ಧುರೀಣರೂ, ಕಾದಂಬರಿ ಓದುತ್ತಿರುವಾಗಿನ ಮಟ್ಟಿಗಾದರೂ ನಿಶ್ಚಯವಾಗಿ ಆಗಿರವರೆಂದು ಅನುಭವದಿಂದ ಹೇಳಬಹುದು!

ಒಟ್ಟಿಗೆ, ಗಳಗನಾಥನು ಇಂತಹ ಕಾದಂಬರಿಗಳನ್ನಲ್ಲದೆ ಹಿಂದೆ ಹೇಳಿರುವಂತೆ "ಭಾಗವತಾಮೃತ" "ಶೈವಸುಧಾರ್ಣವ" "ತುಲಸೀ ರಾಮಾಯಣಾಮೃತ" ಎಂಬ ಪೌರಾಣಿಕ ಗ್ರಂಥಗಳನ್ನೂ, ಕೆಲವು ಪ್ರಬಂಧಗಳನ್ನೂ ಕೂಡಿ ಒಟ್ಟಿಗೆ ಕ್ರೌನ ಅಷ್ಟಪತ್ರದ ಸರಾಸರಿ ೮೦೦೦ ಪುಟಗಳ ವಿಷಯವನ್ನು ಬರೆದಿರುವನು.

. ಈ ಮೇರೆಗೆ ಮೈಸೂರನಾಡಿನವರ ಅನುಗ್ರಹದಿಂದ ನನ್ನ ಸಾಲತೀರಿದ ಬಳಿಕ, ಅದರ ಶ್ರೇಯಸ್ಸನ್ನು ಧರ್ಮಿಷ್ಠ ಪ್ರಭುಗಳಾದ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರ ಚರಣಗಳಿಗೆ ಅರ್ಪಿಸಬೇಕೆಂದು ಮಾಡಿದ್ದೇನೆ. ಆಮೇಲೆ "ಅರಮನೆಯಿಂದ ಗುರುಮನೆ" ಎಂಬಂತೆ, ಮೈಸೂರ ನಾಡಿನಲ್ಲಿಯ ಸರ್ವಮತಗಳ ಧರ್ಮಪೀಠಸ್ಥ ಶ್ರೀಗಳವರ ಚರಣದರ್ಶನದಿಂದ ಪುನೀತನಾಗಿ ಪುನಃ ವೈದಿಕ ಪಾಠಶಾಲೆಯನ್ನು ಆರಂಭಿಸಲು ದಿವ್ಯಸನ್ನಿಧಿಗಳ ಆಶೀರ್ವಾದ ಪಡೆದು ಧನ್ಯವಾಗಬೇಕೆಂದು ಆತುರಪಡುತ್ತಿರುವೆನು! ನನ್ನ ಈ ಪ್ರಾರ್ಥನೆ-ಈ ಇಚ್ಛೆ-ಈ ಆತುರಗಳನ್ನು ಸಫಲಗೊಳಿಸಲು, ನನ್ನ ಕುಲಸ್ವಾಮಿಯಾದ ಶ್ರೀ ಲಕ್ಷ್ಮೀವೆಂಕಟೇಶನು ಸಮರ್ಥನಿರುವನು!

## ಗಳಗನಾಥರ ಕಾದಂಬರಿಗಳು

### ಕನ್ನಡಿಗರಿಗೆ ಸಂಬಂಧಿಸಿದುವು

**೧. ಮಾಧವ-ಕರುಣಾವಿಲಾಸ-೧೯೨೩:** ತನ್ನ ವಿಶೇಷ ಗುಣಗಳಿಂದ ಕನ್ನಡಿಗರ ಆದರಕ್ಕೆ ಪಾತ್ರವಾಗಿರುವ ಈ ಸುರಸವಾದ ಅತಿ ಗೌರವದ ತತ್ತ್ವ ಪ್ರಕಾಶಕ ಸ್ವತಂತ್ರ ಐತಿಹಾಸಿಕ ಕಾದಂಬರಿಯು, ಡೆಮ್ಮಿ ಅಷ್ಟಪತ್ರದ ಆರುನೂರು ಪುಟಗಳುಳ್ಳದ್ದಾಗಿರುವದು. ಮೂರು ವರ್ಷಗಳಿಂದ ಬಹು ಶ್ರಮಪಟ್ಟು ಬರೆದಿರುವ ಈ ಘನತರವಾದ ಕಾದಂಬರಿಯನ್ನು ಪ್ರತ್ಯಕ್ಷ ಶ್ರೀ ಮಾಧವಾಚಾರ್ಯರೇ (ಶ್ರೀ ವಿದ್ಯಾರಣ್ಯರೇ)

ಮಾಡುವರೋ ಇಲ್ಲವೊ ಎಂಬ ಶಂಕೆಯು ಅವನನ್ನು ಬಾಧಿಸುತ್ತಿತ್ತು. ಅದರಂತೆ ತನ್ನ ತರುವಾಯ ತನ್ನ ಮಕ್ಕಳು ತನ್ನ ಸ್ವಾತಂತ್ರ್ಯರಕ್ಷಣದ, ಹಾಗು ಮನೆತನದ ಪಾವಿತ್ರ್ಯರಕ್ಷಣದ ಕುಲವ್ರತವನ್ನು ನಡಿಸುವರೋ ಇಲ್ಲವೋ ಎಂದು ಆತನು ಆಲೋಚಿಸುತ್ತಿದ್ದನು. ಇದಲ್ಲದೆ, ತಾನು ಈ ವರೆಗೆ ಹಲವು ಬಗೆಯ ಕಷ್ಟಗಳನ್ನು ಅನುಭವಿಸಿ ಪ್ರಯತ್ನಪಟ್ಟರೂ ಪೂರ್ಣವಾಗದ ತನ್ನ ಮನೋದಯಗಳನ್ನು, ಮುಂದಿನವರು ಸಫಲಗೊಳಿಸುವರೋ ಇಲ್ಲವೋ ಎಂಬ ಅಪನಂಬಿಗೆಯು ಆತನ ಹೃದಯದಲ್ಲಿ ಕುದಿಯುತ್ತಿತ್ತು. ಇವೆಲ್ಲ ಮಾನಸಿಕ ತಾಪಗಳಿಂದ ಆತನ ಬೇನೆಯು ಹೆಚ್ಚಾಗುತ್ತ ಹೋಯಿತು. ತಮ್ಮ ಮಹಾರಾಣಾನು ಈ ಬೇನೆಯಿಂದ ಪಾರಾದಾನೆಂಬ ಆಶೆಯು ಯಾರಿಗೂ ಉಳಿಯಲಿಲ್ಲ. ಶೂರನೂ, ಧೀರನೂ, ಗಂಭೀರನೂ ಆದ ಈ ಪುರುಷನ ಮರಣಕಾಲದ ಸ್ಥಿತಿಯನ್ನು ಭಾಟರು ಬಹು ಹೃದಯದ್ರಾವಕವಾಗಿ ವರ್ಣಿಸಿರುತ್ತಾರೆ. ಈ ಅದ್ವಿತೀಯ ಪುರುಷನು ಮರಣೋನ್ಮುಖನಾಗಿ ಹಾಸಿಗೆಯ ಮೇಲೆ ಮಲಗಿಕೊಂಡಿರುವಾಗ, ಆತನ ಸುತ್ತು ಮುತ್ತು ಆತನ ಪರಮವಿಶ್ವಾಸದ, ಹಾಗು ಪ್ರಾಣಕ್ಕೆ ಪ್ರಾಣಕೊಡುವ, ಅದರಂತೆ ಆತನ ಆಶಾ–ವೈಭವಗಳ ಆಧಾರ ಸ್ತಂಭದಂತೆಯಿದ್ದ ಎಷ್ಟೋ ಶೂರ ಸರದಾರರೂ–ಮಿತ್ರರೂ ಕುಳಿತಿದ್ದರು. ತಮ್ಮ ಸ್ವಾಮಿಯ ಈ ದೇಹಾವಸಾನದ ಸ್ಥಿತಿಯನ್ನು ನೋಡಿ ಅವರಿಗೆ ಬಹಳ ದುಃಖವಾಗಿತ್ತು; ಆದರೆ ಅವರು ತಮ್ಮ ರಾಣಾನಿಗೆ ಕ್ಲೇಶವೂ–ದುಃಖವೂ ಆಗಬಾರದೆಂದು ತಮ್ಮ ದುಃಖವನ್ನೆಲ್ಲ ನುಂಗಿಕೊಂಡು ಬಹು ಗಾಂಭೀರ್ಯದಿಂದ ರಾಣಾನಕಡೆಗೆ ನೋಡುತ್ತ ಸುಮ್ಮನೆ ಕುಳಿತುಕೊಂಡಿದ್ದರು; ಆದರೂ ರಾಣಾನು ಸಮಾಧಾನಪಡದೆ ತಳಮಳಿಸುತ್ತಲಿದ್ದನು. ಆತನ ಜೀವಕ್ಕೆ ಸಮಾಧಾನವಾಗದೆ ಆತನ ಚಿತ್ತವೃತ್ತಿಯು ಉಕ್ಕಿಬಂದು, ಪುನಃ ಆತನು ದೈನ್ಯದಿಂದ ಬಿದ್ದುಕೊಳ್ಳುತ್ತಿದ್ದನು.

ಹೀಗೆ ಕೆಲವು ಹೊತ್ತಿನವರೆಗೆ ರಾಣಾನು ವ್ಯಥೆಪಡುವದನ್ನು ನೋಡಿ ಸಾಳುಂಬ್ರ್ಯದ ಠಾಕೂರನು ಮುಂದಕ್ಕೆ ಬಂದು ರಾಣಾನನ್ನು ಕುರಿತು—''ಮಹಾರಾಜರೇ, ಜೀವಕ್ಕೆ ಯಾಕೆ ಕ್ಲೇಶವಾಗುತ್ತದೆ? ಸಮಾಧಾನದಿಂದ ಪ್ರಾಣವು ಯಾಕೆ ಹೋಗಲೊಲ್ಲದು?'' ಎಂದು ಕೇಳಲು, ಪ್ರತಾಪನು ಕುಗ್ಗಿದ ದನಿಯಿಂದ—ನನ್ನ ತರುವಾಯ ನನ್ನ ದೇಶವು ಮೊಗಲರ ಕೈಸೇರಬಾರದು. ಈ ಮಾತಿನ ನಂಬಿಗೆಯನ್ನು ಯಾರಾದರೂ ಮಾಡಿಕೊಟ್ಟರೆ, ನಾನು ಸುಖದಿಂದ ಪ್ರಾಣ ಬಿಡುವೆನು. ಮಗನು ತಂದೆಯ ಇಚ್ಛೆಯನ್ನು ಪೂರ್ಣಮಾಡುವದರಿಂದ ಪಿತೃಋಣದಿಂದ ಮುಕ್ತನಾಗುವನು; ಆದರೆ ನನ್ನ ಮಗನಾದ ಅಮರಸಿಂಹನು ನನ್ನಂತೆ ಕಷ್ಟವನ್ನನುಭವಿಸಿ ನನ್ನ ಬಯಕೆಯನ್ನು ಪೂರ್ಣಮಾಡುವನೆಂಬ ನಂಬಿಗೆಯು ನನಗಿಲ್ಲ. ಇದಕ್ಕೆ ಕಾರಣವುಂಟು. ಕೈಬಿಟ್ಟು ಹೋಗಿದ್ದ ರಾಜ್ಯವು ನನಗೆ ದೊರೆತರೂ ನಾನು ಗುಡಿಸಿಲಿನಲ್ಲಿಯೇ ಇರುತ್ತಿರುವೆ ನಷ್ಟೇ? ನಮ್ಮ ಅಮರಸಿಂಹನು ಒಮ್ಮೆ ಬಗ್ಗಿ ಗುಡಿಸಿಲಿನೊಳಗೆ ಬಾರದೆ, ಸೆಟಕೊಂಡು ಬಂದದ್ದರಿಂದ ಆತನ ಮುಂಡಾಸವು ಗಳಕ್ಕೆ ತಾಕಿ ಕೆಳಗೆ ಬೀಳಲು, ಆತನಿಗೆ ಸಂತಾಪವಾಯಿತು; ಆತನು ಮರುದಿವಸ ಆ ಗುಡಿಸಲು ಕಿತ್ತು ಅಲ್ಲಿ ಅರಮನೆ ಕಟ್ಟಿಸಲಿಕ್ಕೆ ನನ್ನ ಅನುಮತಿಯನ್ನು ಕೇಳಿದನು! ಹೊತ್ತು ಬಂದಹಾಗೆ ಹೋಗುವದನ್ನು ನಮ್ಮ ಅಮರನು ಅರಿಯನು;

ಅಂದಬಳಿಕ ಆತನು ನನ್ನ ಬಯಕೆಯನ್ನು ಹ್ಯಾಗೆ ಪೂರ್ಣಮಾಡ್ಯಾನು? ನನ್ನ ಕೈಸೇರದೆ ಉಳಿದಿದ್ದ ಚಿತ್ತೂರನ್ನು ಆತನು ಹ್ಯಾಗೆ ಕೈವಶಮಾಡಿಕೊಂಡಾನು? ನಮ್ಮ ಪ್ರಿಯ ಠಾಕೂರರೇ, ಸರದಾರರೇ, ಮಿತ್ರರೇ, ಚಂದಾವತಕೃಷ್ಣ ಹೀಗಿರಲು ನಿಮ್ಮ ರಾಣಾನ ಜೀವವು ಸಮಾಧಾನದಿಂದ ಹೋಗಬಹುದೋ? ಎಂದು ಕೇಳಿದನು. ಇಷ್ಟು ಮಾತಾಡುವದರೊಳಗೆ ರಾಣಾನಿಗೆ ಆಯಾಸವಾಗಿ ಆತನು ಕಣ್ಣುಗಳನ್ನು ಮುಚ್ಚಿದನು. ಆತನಿಗೆ ಗ್ಲಾನಿಯು ಬಂದಂತಾಯಿತು. ಅದನ್ನು ನೋಡಿ ಎಲ್ಲರೂ ಅಸಮಾಧಾನಪಡುತ್ತಿರಲು, ರಾಣಾನು ಚೇತರಿಸಿ ಕಣ್ಣು ತೆರೆದು ಎಲ್ಲರನ್ನು ನೋಡಹತ್ತಿದನು. ಘೋರ ಸಮರದಲ್ಲಿ ದೀನನಾಗದ ಆ ವೀರನ ಮುಖದಲ್ಲಿ ಇಂದು ದೈನ್ಯವು ತೋರುತ್ತಿತ್ತು. ಅದನ್ನು ನೋಡಿ ವೃದ್ಧ ಚಂದಾವತನು—ಮಹಾಪ್ರಭುವೇ? ತಮ್ಮ ಸೇವಕರಾದ ನಾವೆಲ್ಲರು ಜೀವದಿಂದಿರಲು, ತಮಗೆ ಚಿಂತೆಯೇಕೆ? ತಮ್ಮ ಕುಲವ್ರತವನ್ನು ಮುಂದಕ್ಕೆ ಸಾಗಿಸದಂಥ ಕೃತಘ್ನರು ತಮ್ಮ ಸೇವಕರಲ್ಲಿ ಯಾರೂ ಇರುವದಿಲ್ಲ. ಪ್ರಭುಗಳು ಶಾಂತರಾಗಬೇಕು!

ಪ್ರತಾಪಸಿಂಹ—ಪ್ರಿಯ ಚಂದಾವತಕೃಷ್ಣ! ಶಾಂತಿಯನ್ನು ತಾಳಬೇಕೆಂಬದು ನನಗೆ ತಿಳಿಯುತ್ತದೆ; ಆದರೆ ಶಾಂತವಾಗಲಿಕ್ಕೆ ನನಗೆ ಬರಲೊಲ್ಲದು. ನನ್ನ ಹೃದಯವು ಶಾಂತವಾಗ ಬೇಕಾದರೆ ಅಂಥ ಶಾಂತಮೂರ್ತಿಯ ದರ್ಶನವೂ ಸದ್ಬೋಧವೂ ನನಗೆ ಆಗಲಿಕ್ಕೆ ಬೇಕು; ಲೋಕಮಾತೆಯಾದ ಸಾತ್ವಿಕೆಯೂ, ಲೋಕ ಪಿತೃವಾದ ತಪೋಧನನೂ ಕಷ್ಟಕಾಲದಲ್ಲೆಲ್ಲ ನನ್ನನ್ನು ಸಮಾಧಾನಗೊಳಿಸುತ್ತ ಬಂದಿರುವರು; ಆದರೆ ದುರ್ದೈವಿಯಾದ ಪ್ರತಾಪನು ಮರಣೋನ್ಮುಖ ನಾಗಿರಲು, ಅವರು ದರ್ಶನಕೊಡಲೊಲ್ಲರಲ್ಲ! ಹಾ! ಹತಭಾಗ್ಯನಾದ ಪ್ರತಾಪಾ! ಮರಣವು ಸಹ ನಿನಗೆ ಸುಖದಿಂದ ಬರುವಂತೆಯಿಲ್ಲವೇ? ಅಂತೇ ಆ ಮಹಾತ್ಮರ ದರ್ಶನವು ಅಂತ್ಯಕಾಲದಲ್ಲಿ ನಿನಗೆ ಆಗಲೊಲ್ಲದು! ಚಂದಾವತಕೃಷ್ಣ ಅಂದು ದರ್ಬಾರದಲ್ಲಿ ದರ್ಶನ ಕೊಟ್ಟು, ಸದ್ಬೋಧಮಾಡಿ ಆ ದೈವೀ ದಂಪತಿಗಳು ಈಗ ಯಾಕೆ ದರ್ಶನಕೊಡಲೊಲ್ಲರು! ಅವರ ದರ್ಶನದ ಹೊರತು ನನಗೆ ಶಾಂತಿಯು ಪ್ರಾಪ್ತವಾಗದು! ಹಾಯ್! ಹಾಯ್! ಮಹಾತ್ಮರಾದ ಸಾತ್ವಿಕಾ–ತಪೋಧನರೇ, ಎತ್ತ ಅಡಗಿದಿರಿ!

ಈ ಮೇರೆಗೆ ನುಡಿದು, ಪ್ರತಾಪನು ಆಯಾಸದಿಂದ ಮತ್ತೆ ಕಣ್ಣು ಮುಚ್ಚಿದನು! ಬಿಮ್ಮನೆ ದಣಿದವನಂತೆ ಅವನ ಮೋರೆಯು ಬಿವತಿತು. ಕೆಲಹೊತ್ತಿನ ಮೇಲೆ ಆ ಮರಣೋನ್ಮುಖನು ಉಶ್ಶೆಂದು ಉಸುರ್ಗರೆದು, ಕಣ್ದೆರೆದು ನೋಡಲು, ಸಾತ್ವಿಕಾ–ತಪೋಧನರ ಮೂರ್ತಿಗಳು ಆತನ ಕಣ್ಣಿಗೆ ಬಿದ್ದವು. ಕೂಡಲೆ ಪ್ರತಾಪನಿಗೆ ಹೊಸ ಜೀವಬಂದಂತಾಗಿ ಆತನು ಆವೇಶದಿಂದ ಎದ್ದು ಕುಳಿದು, ಆ ಪುಣ್ಯಮೂರ್ತಿಗಳನ್ನು ಭಕ್ತಿಯಿಂದ ವಂದಿಸಿದನು. ಯಾವ ಆಪ್ತರನ್ನು ನೋಡಿದರೂ ಆಗದ ಸಮಾಧಾನ, ಆ ದಂಪತಿಗಳನ್ನು ನೋಡಿ ಪ್ರತಾಪನಿಗೆ ಆಯಿತು! ಇಲ್ಲಿಯವರೆಗೆ ಪ್ರತಾಪನ ಕಣ್ಣೊಳಗಿಂದ ಸುರಿಯುತ್ತಿದ್ದ ದುಃಖಾಶ್ರುಗಳು ಈಗ ಆನಂದಾಶ್ರುಗಳ ರೂಪವನ್ನು ಹೊಂದಿದವು! ಆತನ ಕಂಠವು ಬಿಗಿದು ಮಾತುಗಳು ಹೊರಡದಾದವು. ಅಲ್ಲಿ ನೆರೆದವರ ಲಕ್ಷವನ್ನು ಆ ಪುಣ್ಯಮೂರ್ತಿಗಳು ಎಳಕೊಂಡರು. ದುಃಖದ

ಭಾವನೆಯು ಯಾರ ಹೃದಯದಲ್ಲಿಯೂ ಉಳಿದಿದ್ದಿಲ್ಲ. ಶಾಂತಿಯ ಸಾಮ್ರಾಜ್ಯವು ಅಲ್ಲಿ ನೆಲಿಸಿದಂತಾಗಿತ್ತು! ಪ್ರಿಯವಾಚಕರೇ, ಸತ್ಪುರುಷರ ದರ್ಶನದಿಂದ ಸ್ವಾಭಾವಿಕವಾಗಿ ಆಗುವ ಸತ್ಪರಿಣಾಮವನ್ನು ಕುರಿತು ನೀವು ವಿಚಾರಿಸತಕ್ಕದು. ಇಷ್ಟು ಜನ ಆಪ್ತರಿಷ್ಟರಿದ್ದರೂ ಅವರಿಂದ ಪ್ರತಾಪನಿಗೆ ಸಮಾಧಾನವಾಗಿದ್ದಿಲ್ಲ. ಅಂಥ ಮಹತ್ವದ ಯೋಗ್ಯತೆಯ ರಾಣಾನಾದರೂ ತನ್ನ ಪರಿವಾರಕ್ಕೆ ಸಮಾಧಾನವನ್ನುಂಟು ಮಾಡಲು ಸಮರ್ಥನಾಗಲಿಲ್ಲ. ಹೀಗಿರಲು, ಪ್ರತಾಪನಿಗೂ-ಆತನ ಪರಿವಾರಕ್ಕೂ ಕೂಡಿಯೇ ದರ್ಶನಮಾತ್ರದಿಂದ ತತ್‌ಕ್ಷಣ ಶಾಂತಿಪ್ರದಾನಮಾಡಿದ ಸತ್ಪುರುಷರ ಆಪದ್ಬಂಧುತ್ವವನ್ನೇನೆಂದು ವರ್ಣಿಸಬೇಕು? ಆ ತೇಜೋಮೂರ್ತಿಗಳ ಆಕಸ್ಮಿಕಾಗಮನದಿಂದ ಎಲ್ಲರ ಆಧಿವ್ಯಾಧಿಗಳು ಲಯಹೊಂದಿದವು. ಪರವಶತೆಯು ಎಲ್ಲರನ್ನು ಆವರಿಸಿತು. ಯಾರ ಮುಖದಿಂದಲೂ ಪಿಟ್ಟೆಂದು ಶಬ್ದಗಳು ಹೊರಡಲಿಲ್ಲ. ಒಂದು ಕ್ಷಣವೇ ಆಗಲೊಲ್ಲದೇಕೆ, ಸತ್ಸಮಾಗಮದ ಯೋಗದಿಂದ ವಿಕಾರರಹಿತವಾದ ಆನಂದವನ್ನು ಎಲ್ಲರೂ ಅನುಭವಿಸಿದರು. ಅಷ್ಟರಲ್ಲಿ ಸಾತ್ವಿಕೆಯು ಪ್ರತಾಪನ ಬಳಿಯಲ್ಲಿ ಕುಳಿತು ಆತನ ಮೈ ಮೇಲೆ ಕೈಯಾಡಿಸಿ ಕರುಣಾರ್ದ್ರ ಹೃದಯದಿಂದ—ಪುತ್ರಾ ಘನತರವಾದ ಯೋಗ್ಯತೆಯ ಮಹಾರಾಣಾ, ''ಜಾತಸ್ಯಮರಣಂ ಧ್ರುವಂ'' ಎಂಬಂತೆ ಎಂದಾದರೊಂದು ದಿನ ಪ್ರಾಣಿಮಾತ್ರರಿಗೆ ಸಿದ್ಧವಾಗಿದ್ದ ಮರಣವು ಇಂದು ನಿನಗೆ ಬಂದಿತೇ? ಧನ್ಯನು, ನೀನು ಪರಮಧನ್ಯನು! ಕರ್ತವ್ಯತತ್ಪರನಾಗಿ, ಸತ್ವಕ್ಕೆ ಭಂಗವನ್ನು ತಂದುಕೊಳ್ಳದೆ ಇಹಲೋಕದ ಯಾತ್ರೆಯನ್ನು ಮುಗಿಸಿ, ಕರ್ತವ್ಯದ ಪರಿಸಮಾಪ್ತಿಯಾಗಲಿಲ್ಲೆಂದು ತಳಮಳಿಸುತ್ತ ಮರಣೋನ್ಮುಖನಾಗಿರುವ ನೀನು, ಪರಮ ಧನ್ಯನು ಕಂಡೆಯಾ! ನೀನು ಅಂಥ ಧನ್ಯನಾದದ್ದರಿಂದಲೇ ನಾವು ಇದ್ದಲ್ಲಿಂದ ನಿನಗೆ ಅಂತ್ಯಕಾಲದಲ್ಲಿ ದರ್ಶನಕೊಡಬೇಕಾಯಿತು. ಪ್ರಾಣಿಗಳು ಏನಾದರೂ ಮಾಡಿ ಹುಟ್ಟಿ, ಏನಾದರೂ ಮಾಡುತ್ತ ಜೀವಿಸಿ, ಏನಾದರೂ ಮಾಡುವದಕ್ಕಾಗಿ ಮರಣಹೊಂದುವದೇ ಬಹಳ; ಆದರೆ ಭಾಗ್ಯಶಾಲಿಯಾದ ಪುತ್ರಾ ನೀನು ಈ ಸಾಮಾನ್ಯ ನಿಯಮಕ್ಕೆ ಹೊರಗಾದ ಅಲೌಕಿಕ ಪುರುಷನಿರುತ್ತೀ. ನೀನು ಮೇವಾಡದ ಸ್ವಾತಂತ್ರ್ಯರಕ್ಷಣ ಮಾಡಲಿಕ್ಕೆ ಅನುಕೂಲವಾದ ಕರ್ಮವನ್ನು ಮಾಡಿ ಹುಟ್ಟಿ, ಮೇವಾಡದ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುತ್ತ ಜೀವಿಸಿ, ಮೇವಾಡದ ಸ್ವಾತಂತ್ರ್ಯದ ಕಾರ್ಯವು ಪೂರ್ಣವಾಗಲಿಲ್ಲೆಂದು ಮರಗುತ್ತ ಮುಂದೆ ಕಾರ್ಯವು ಹ್ಯಾಗಾದೀತೆಂಬ ಯೋಚನೆಯಿಂದ ಪ್ರಾಣಬಿಡುತ್ತಿರುವೆಯಲ್ಲ! ಅಹಹ! ಪುತ್ರಾ ನಿನ್ನ ಈ ಭೂತ-ವರ್ತಮಾನ-ಭವಿಷತ್ಕಾಲದ ಏಕಕ್ರಿಯೆಯು, ನಿಜವಾಗ ನಿನ್ನ ಉದ್ಧಾರಕ್ಕೆ ಕಾರಣವಾಗುವದು. ನಿನ್ನಂಥ ಕ್ರಿಯಾವಂತರೇ ಸದ್ಗುರುವಿನ ಕೃಪೆಗೆ ಅಥವಾ ಈಶ್ವರ ಕೃಪೆಗೆ, ಪಾತ್ರರಾಗುವರು. ಮಹಾತ್ಮನಾದ ಪುತ್ರಾ ನಿನಗೆ ಶಾಶ್ವತಶಾಂತಿಯು ದೊರಕುವ ಕಾಲವು ತೀರ ಸಮೀಪಿಸಿರುತ್ತದೆ, ಅದಕ್ಕಾಗಿಯೇ ಮಹಾಪುರುಷರಾದ ತಪೋಧನರು ನಿನ್ನ ಬಳಿಗೆ ಬಂದಿದ್ದಾರೆ. ಅವರ ಸದ್ಬೋಧ ಶ್ರವಣದಿಂದ ನೀನು ಧನ್ಯನಾಗು! ಕೃತಕೃತ್ಯನಾಗು!! ಮುಕ್ತನಾಗು!!!

ಸಾತ್ವಿಕೆಯ ಈ ಮಾತುಗಳನ್ನು ಕೇಳಿ ಪ್ರತಾಪನ ಅಂತಃಕರಣವು ಪ್ರಫುಲ್ಲಿತವಾಯಿತು. ಆತನ ಅಂತ್ಯಕಾಲದ ವೇದನೆಗಳು ಇಲ್ಲವಾದವು, ಆತನು ಸಶಕ್ತನಂತೆ ಎದ್ದುಕುಳಿತು, ಸಾತ್ವಿಕೆಯನ್ನು ವಂದಿಸಿ—ಜಗನ್ಮಾತೇ, ಮರಣದ ಪಂಥವನ್ನು ಹಿಡಿದಿದ್ದ ಪ್ರತಾಪನ ಸಂಜೀವನವು ನಿನ್ನ ಬೋಧಾಮೃತದಿಂದ ಆಯಿತು. ನಾನು ಧನ್ಯನೇ ಸರಿ; ಆದರೆ ತಾಯೀ, ನಾನು ಮಾಡಿದ ಮಹತ್ಕೃತ್ಯವೇನು? ಮೇವಾಡವನ್ನು ಹಾಳುಗೆಡವಿದೆನು, ಪ್ರಜೆಗಳಿಗೆ ತಾಪಕೊಟ್ಟೆನು, ಆಪ್ತೇಷ್ಟರನ್ನು ಕಷ್ಟಪಡಿಸಿದೆನು, ನನ್ನ ಹೆಂಡಿರುಮಕ್ಕಳನ್ನು ಬಳಲಿಸಿದೆನು, ನಾನು ಕಟಕಟ ಕಂದಿದೆನು, ಭೂತದಯೆಗೆ ವಿರುದ್ಧವಾಗಿ ರಕ್ತದ ಕಾಲಿವೆಯನ್ನು ಹರಿಸಿದೆನು. ತಾಯೀ, ಅಧಮನಾದ ನಾನು ದೇವ–ಬ್ರಾಹ್ಮಣರನ್ನು ಸೇವಿಸಲಿಲ್ಲ; ಪರೋಪಕಾರವನ್ನು ಮಾಡಲಿಲ್ಲ; ಸಾತ್ವಿಕವೃತ್ತಿಯನ್ನು ತಾಳಿ ಶತ್ರು–ಮಿತ್ರ ಸಮಭಾವದಿಂದ ಸಾಧುವೆನಿಸಿಕೊಳ್ಳಲಿಲ್ಲ. ಇಂಥ ನೀಚನು ನಾನು ತಪೋಧನರ ಬೋಧಗ್ರಹಣಕ್ಕೆ ಹ್ಯಾಗೆ ಯೋಗ್ಯನಾಗುವೆನು? ''ನನ್ನ ಕರ್ತವ್ಯ ನನ್ನ ಕರ್ತವ್ಯವೆಂ''ದು ಹಂಬಲಿಸುತ್ತ ಕರ್ತವ್ಯದಕ್ಷತೆಯ ನೆವದಿಂದ ಕೊಡಬಾರದ ತಾಪವನ್ನು ಮಂದಿಗೆ ಕೊಟ್ಟೆನು, ನಾನೂ ಅನುಭವಿಸಿದೆನು. ಹೀಗೆ ಕರ್ತವ್ಯಮೂಢನಾದ ನನಗೆ ಏನೂ ತಿಳಿಯಲೊಲ್ಲದು. ಕರುಣಾಳುಗಳಾದವರು ಅನುಗ್ರಹಿಸಿ, ಯೋಗ್ಯಬೋಧದಿಂದ ನನಗೆ ಶಾಶ್ವತ ಶಾಂತಿಯನ್ನುಂಟು ಮಾಡಿದರೆ ಮಾಡಬೇಕು, ಎಂದು ಪ್ರಾರ್ಥಿಸಿ, ಆತನು ಅತ್ಯಂತ ದೈನ್ಯದಿಂದ ಕೈಜೋಡಿಸಿ ತಲೆಬಾಗಿಸಿ ಕುಳಿತುಕೊಂಡನು. ಆಗ ತಪೋಧನನು ಪ್ರತಾಪಸಿಂಹನನ್ನು ಕುರಿತು ಗಾಂಭೀರ್ಯದಿಂದ—ಪ್ರತಾಪಾ, ನಿನ್ನ ಯಥಾರ್ಥವಾದ ವಿಚಾರಸರಣಿಯನ್ನೂ, ಸತ್ಯನಿರೂಪಣವನ್ನೂ ಕೇಳಿ ನನಗೆ ಬಹಳ ಸಮಾಧಾನವಾಗಿದೆ. ಪುತ್ರಾ ನೀನು ಈವೊತ್ತಿನವರೆಗೆ ಮಾಡಿದ ತಪಶ್ಚರ್ಯವನ್ನು ಹಳಿದುಕೊಂಡು, ದೇವಬ್ರಾಹ್ಮಣರ ಸೇವೆಮಾಡಲಿಲ್ಲೆಂತಲೂ, ಸಾಧುವೃತ್ತಿಯವನಾಗಲಿಲ್ಲೆಂತಲೂ ಮರುಗುವದನ್ನು ನೋಡಿ ನನಗೆ ಕೌತುಕವಾಗುತ್ತದೆ! ಇದು ಕೇಳಿಕೆಯ ಮಾತಿನ ಚೇಷ್ಟೆಯು; ಯಾಕಂದರೆ ದೇವರ ಸೇವೆಯನ್ನು ಮಾಡಲಿಕ್ಕೆ ದೇವರ ಗುರುತೂ, ಬ್ರಾಹ್ಮಣರ ಸೇವೆಮಾಡಲಿಕ್ಕೆ ಬ್ರಾಹ್ಮಣರ ಗುರುತೂ ಇರಬೇಕಾಗುತ್ತದೆ. ಅವೆರಡರ ಗುರುತೂ ನಿನಗೆ ಇದ್ದಂತೆ ತೋರುವದಿಲ್ಲ; ಇದ್ದರೆ ಮರಣಕಾಲದಲ್ಲಿ ನಿನಗೆ ಅಸಂತುಷ್ಟತೆಯ ಈ ತಾಪವು ಆಗುತ್ತಿದ್ದಿಲ್ಲ. ಅಪ್ಪಾ, ಸರ್ವತ್ರ ಸಮಭಾವವು ಸಾಧುತ್ವದ ಲಕ್ಷಣವಾದ್ದರಿಂದ, ಸಾಧುತ್ವವು ಹಾದಿಯ ಮೇಲೆ ಬಿದ್ದಿಲ್ಲ. ''ಶುನಿಚೈವಶ್ವ ಪಾಕೇಚಪಂಡಿತಾಃ ಸಮದರ್ಶಿನಃ'' ಎಂಬ ಭಗವಂತನ ಉಕ್ತಿಯಂತೆ, ಬ್ರಹ್ಮನಿಷ್ಠನಾಗಲಿಕ್ಕೆ ಸರ್ವತ್ರ ಸಮಭಾವವು ಬೇಕಾಗುತ್ತದೆ. ಆ ಸಮಭಾವವು ನಿನಗೆ ಎಲ್ಲಿ ಅದೆ? ಅಕಬರಬಾದಶಹನನ್ನು ನೀನು ಶತ್ರುವೆಂದು ತಿಳಿಯುವೆ; ಚಂದಾವತಕೃಷ್ಣನನ್ನು ಮಿತ್ರನೆಂದು ತಿಳಿಯುವೆ; ಆದರೂ ನಾನು ನಿನ್ನನ್ನು ಮಹಾತ್ಮನೆಂತಲೇ ತಿಳಿಯುವೆನು. ಮಾತಿನಿಂದ ಪರವೇದಾಂತವನ್ನು ಬೊಗಳುವ ಅಧಮಾಧಮರಿಗಿಂತ ನಿನ್ನ ಯೋಗ್ಯತೆಯು ಬಹು ದೊಡ್ಡದಿರುತ್ತದೆ. ಪುತ್ರಾ, ಬ್ರಹ್ಮನಿಷ್ಠೆಯ ಯೋಗ್ಯತೆಯ ಪಾವಟಿಗೆಯನ್ನು ಏರಿ ಹೋಗಲಿಕ್ಕೆ ಸ್ವನಿಷ್ಠೆ ಸ್ವಕರ್ತವ್ಯ ನಿಷ್ಠೆ ಸನ್ನಿಷ್ಠೆ ಎಂಬ ಮೂರು ಪಾವಟಿಗೆಯನ್ನು ಏರಿ ಹೋಗಬೇಕಾಗುತ್ತದೆ.

ನಾಲ್ಕನೆಯ ಪಾವಟಿಗೆಯೇ ಬ್ರಹ್ಮನಿಷ್ಠೆಯು, ಅಂದರೆ ಸರ್ವತ್ರ ಸಮಭಾವವು. ಇಂಥ ಭಾವನೆಯುಳ್ಳ ಪ್ರಲ್ಹಾದನಂಥ ಭಗವದ್ಭಕ್ತರೇ ''ಸರ್ವಂ ವಿಷ್ಣುಮಯಂ ಜಗತ್'' ಎಂಬ ತಮ್ಮ ಅನುಭವದ ಮಾತನ್ನು ಒಡನುಡಿದು ತೋರಿಸಿರುವರು! ಅಂಥ ಬ್ರಹ್ಮಾನುಭವವಿಲ್ಲದ ನಿನಗೆ, ವೇದಾಂತಿಗಳ ಮಾತಿನಿಂದಾಗುವ ಪ್ರಯೋಜನವೇನು? ಆದರೂ ನೀನು ಆರಂಭದ ಸ್ವನಿಷ್ಠೆ, ಸ್ವಕರ್ತವ್ಯನಿಷ್ಠೆಯೆಂಬ ಎರಡು ಮಹತ್ವದ ಪಾವಟಿಗೆಗಳನ್ನು ಏರಿರುತ್ತೀ; ಅಂದರೆ ನೀನು ಮಾಡತಕ್ಕ ಕೆಲಸವನ್ನು ಮಾಡಿರುತ್ತೀ. ಇನ್ನು ಮುಂದಿನ ಎರಡು ಪಾವಟಿಗೆಗಳನ್ನೇರುವ ಕೆಲಸವು ನಿನ್ನದಲ್ಲ; ಸದ್ಗುರುವಿನದು. ಮೊದಲಿನ ಎರಡು ಪಾವಟಿಗೆಗಳನ್ನು ಏರಿದವರಿಗೇ ಸದ್ಗುರುವಿನ ದರ್ಶನವಾಗಿ ಅವರಲ್ಲಿ ಸನ್ನಿಷ್ಠೆಯು ಉತ್ಪನ್ನವಾಗುವದು. ಆಮೇಲೆ ಸದ್ಗುರು ಕೃಪೆಯಿಂದ ಸರ್ವತ್ರ ಸಮಭಾವವು, ಅಥವಾ ಬ್ರಹ್ಮನಿಷ್ಠೆಯು ಪ್ರಾಪ್ತವಾಗುವದು!

ಪುತ್ರಾ, ಇನ್ನು ನಾನು ನಿನಗೆ ಈ ನಾಲ್ಕೂ ಪ್ರಕಾರದ ನಿಷ್ಠೆಗಳ ವಿವೇಚನವನ್ನು ಸ್ವಲ್ಪದರಲ್ಲಿ ಮಾಡುವೆನು, ಕೇಳು. ಸ್ವನಿಷ್ಠೆಯೆಂದರೆ ತನ್ನಲ್ಲಿ ತನ್ನ ನಂಬಿಗೆಯು, ಅಂದರೆ ನಾನು ಕರ್ತೃತ್ವಶಾಲಿಯೆಂಬ ಭಾವನೆಯು; ಅಥವಾ ನಿಜವಾದ ಅಹಂಕಾರವು. ನಾನು ಕಃಪದಾರ್ಥವು, ನನ್ನಲ್ಲಿ ಯಾವ ಯೋಗ್ಯತೆಯೂ ಇಲ್ಲ, ನನ್ನಿಂದ ಯಾವ ಕೆಲಸವೂ ಆಗುವದಿಲ್ಲ, ಇಂಥ ಹೇಡಿಯಾದ ನನಗೆ ಒಣ ಉಸಾಬರಿಯು ಯಾಕೆ ಬೇಕು, ಅನ್ನುವವರು ಸ್ವನಿಷ್ಠೆಯುಳ್ಳವರಲ್ಲ, ಇವರು ತೀರ ಅಧಮರು! ಇವರ ಮನುಷ್ಯ ಜನ್ಮವು ನಿರರ್ಥಕವಾದದ್ದು. ಮೂರ್ತಿಮಂತ ಪ್ರತಾಪಾ, ಇಂಥ ಹೇಡಿತನವು ನಿನ್ನ ಆಯುಷ್ಯದಲ್ಲಿ ನಿನ್ನ ಅನುಭವಕ್ಕೆ ಬಾರದ್ದರಿಂದಲೇ, ಅಕಬರನಂಥ ಅಲೌಕಿಕ ಸಾಮರ್ಥ್ಯವುಳ್ಳ ಸಮರ್ಥ ಸಾರ್ವಭೌಮನ ಸಂಗಡ ನೀನು ಇಪ್ಪತ್ತೈದು ವರ್ಷ ಒಂದೇಸವನೆ ಕಾದಿದೆ! ಈ ಸ್ವನಿಷ್ಠೆಯು, ಅಥವಾ ಸ್ವಾವಲಂಬನವು ನಿನ್ನಲ್ಲಿ ಇದ್ದದ್ದರಿಂದಲೇ ನಿನ್ನಲ್ಲಿ ಸ್ವಕರ್ತವ್ಯ ನಿಷ್ಠೆಯು ಉತ್ಪನ್ನವಾಯಿತು. ಪುಣ್ಯಶಾಲಿಯಾದ ನೀನು, ಮೇವಾಡದ ಸ್ವಾತಂತ್ರ್ಯರಕ್ಷಣ ರೂಪವಾದ ಆಸ್ವ ಕರ್ತವ್ಯವನ್ನು ಮಾಡುವಾಗ ನಿನ್ನನ್ನು, ಅಂದರೆ ಸ್ವನಿಷ್ಠೆಯನ್ನು ಮರೆತುಬಿಟ್ಟೆ; ಅಂದರೆ ನಿನ್ನ ಸುಖದ–ಅದೇಕೆ, ನಿನ್ನ ಜೀವಿತದ ಹಂಗನ್ನು ಸಹ ಬಿಟ್ಟುಬಿಟ್ಟೆ! ಧನ್ಯ ಪುರುಷನೇ, ದೇಹಪಾತವಾದರೂ ಅಕಬರನಿಗೆ ಶರಣುಹೋಗಲಿಕ್ಕಿಲ್ಲೆಂಬ ಹಟವನ್ನು ಮರಣಪರ್ಯಂತರ ನಡಿಸಿದ ನೀನು ಸಾಮಾನ್ಯ ಕರ್ತವ್ಯನಿಷ್ಠನೇ! ಇನ್ನು ಮೇಲೆ ಸದ್ಗುರುವಿನ ದೃಷ್ಟಿಯು ನಿನ್ನ ಮೇಲೆ ಬಿದ್ದು ''ಮಂತ್ರಮೂಲಂ ಗುರೋರ್ವಾಕ್ಯಂ ಮೋಕ್ಷಮೂಲಂ ಗುರೋಃ ಕೃಪಾ'' ಎಂಬಂತೆ ಗುರುವಚನದಲ್ಲಿ ಶ್ರದ್ಧೆಯನ್ನು ಇಟ್ಟು ಸ್ವಕರ್ತವ್ಯ ನಿಷ್ಠೆಯನ್ನು ನೀನು ಮರೆತರೆ, ಸ್ವನಿಷ್ಠೆ–ಸ್ವಕರ್ತವ್ಯ ನಿಷ್ಠೆಗಳೆರಡೂ ನಿನ್ನಲ್ಲಿ ನಷ್ಟವಾದಂತಾಗಿ, ಅವುಗಳ ಸ್ಥಳದಲ್ಲಿ ಸನ್ನಿಷ್ಠೆಯು ಉತ್ಪನ್ನವಾಗುವದು; ಆಮೇಲೆ ಶ್ರೀ ಗುರುಕೃಪೆಯಿಂದ ಬ್ರಹ್ಮನಿಷ್ಠೆಯು, ಅಂದರೆ ಸರ್ವತ್ರ ಸಮಭಾವನೆಯು, ಉತ್ಪನ್ನವಾಗುವದು; ಒಟ್ಟಿಗೆ, ಸ್ವನಿಷ್ಠೆಯು ನಷ್ಟವಾಗದೆ, ಸ್ವಕರ್ತವ್ಯ ನಿಷ್ಠೆಯೂ, ಸ್ವಕರ್ತವ್ಯನಿಷ್ಠೆಯು ನಷ್ಟವಾಗದೆ, ಸನ್ನಿಷ್ಠೆಯೂ, ಸನ್ನಿಷ್ಠೆಯು ನಷ್ಟವಾಗದೆ ಸರ್ವತ್ರ ನಿಷ್ಠೆ ಅಂದರೆ ಬ್ರಹ್ಮನಿಷ್ಠೆಯು ಉತ್ಪನ್ನವಾಗುವದಿಲ್ಲ. ಬ್ರಹ್ಮನಿಷ್ಠನಿಗೆ ಮಾತ್ರ ಸರ್ವತ್ರ ಸಮಭಾವವು! ಉಳಿದವರಿಗೆ ಅದರ ಸುದ್ದಿಯೇಕೆ?

ಪುತ್ರ್ರಾ ಇದನ್ನರಿಯದ ಅಧಮಾಧಮರಿಗೆ ಚಂಚಲ ವೃತ್ತಿಯ ಮರವೇದಾಂತಿಗಳ ಮಾತನ್ನು ಕೇಳಿ, ನಿನ್ನನ್ನು ಹಳಿದುಕೊಳ್ಳುತ್ತೀಯಲ್ಲ! ಕೃತಿಯಿಲ್ಲದೆ ಬರಿಯ ಬಾಯಿಂದ ವೇದಾಂತ ಹೇಳುವವರು, ಕೈಲಾಗದವರೂ, ಚಂಚಲರೂ, ವಂಚಕರೂ, ದುರಾಚಾರಿಗಳೂ ಇರುತ್ತಾರೆ; ಅವರ ಮಾತನ್ನು ನಂಬಲಾಗದು. ಅವರಲ್ಲಿ ಸ್ವನಿಷ್ಠೆ- ಸ್ವಕರ್ತವ್ಯ ನಿಷ್ಠೆಗಳೆರಡೂ ಇರುವದಿಲ್ಲ. ಅದರ ಹುಳಕನ್ನು ಮುಚ್ಚಿಕೊಳ್ಳುವದಕ್ಕಾಗಿ ಅವರು ಸಾಧುಗಳ ಸೋಗು ಹಾಕಿಕೊಂಡು, ''ನನಗೇನು ಸ್ವಾತಂತ್ರ್ಯವಿದೆ? ಸರ್ವತಂತ್ರಸ್ವತಂತ್ರನು ಈಶ್ವರನಿದ್ದಾನೆ. ನಾನು ಮಾಡುತ್ತೇನೆನ್ನುವದು ಅಹಂಕಾರವು, ವೃಥಾಭಿಮಾನವು; ಜಗತ್ತು ಮೋಹವಶವಾದದ್ದರಿಂದ ಇದು ನನ್ನದು, ಇದನ್ನು ನಾನು ಮಾಡುತ್ತೇನೆ, ಎಂದು ದುಡಿದು ದುಡಿದು ವ್ಯರ್ಥವಾಗಿ ದಣಿದು ಬಂಧನಕ್ಕೊಳಗಾಗುವದು.'' ಇತ್ಯಾದಿ ಒಂದಲ್ಲ-ಎರಡಲ್ಲ ನೂರಾರು ಹಾಳ ವೇದಾಂತದ ಮಾತುಗಳನ್ನಾಡುತ್ತ, ದುಡಿಯಲಾರದೆ, ಹಚ್ಚಗಿದ್ದಲ್ಲಿ ಮೇದು-ಬೆಚ್ಚಗಿದ್ದಲ್ಲಿ ಮಲಗುತ್ತ ವಿಧಿನಿಷೇಧಗಳಿಲ್ಲದೆ ಮನಸ್ಸಿಗೆ ಬಂದ ಹಾಗೆ ನಡೆಯುತ್ತ ನಾಚಿಕೆಯಿಲ್ಲದೆ ಬಾಯಿಗೆ ಬಂದ ಹಾಗೆ ಬೊಗಳುತ್ತ ಯಾವ ನಿಷ್ಠೆಯ ಗಂಧವೂ ಇಲ್ಲದೆ, ಕ್ರಿಮಿ-ಕೀಟಕಗಳಂತೆ ಕಾಲಹರಣ ಮಾಡುವವರ ಮಾತುಗಳನ್ನು ನೆನಿಸಿ, ಮುಮೂಕ್ಷ ಮಾರ್ಗವನ್ನವಲಂಬಿಸಲು ಅಧಿಕಾರಿಯಾದ ನೀನು ವ್ಯರ್ಥ ಕ್ಲೇಶಪಡಬೇಡ! ಪುತ್ರ್ರಾ ಸಂಪೂರ್ಣ ಮೇವಾಡವನ್ನು ಜಯಿಸಿದ ನಿನಗೆ, ಚಿತ್ತೂರನ್ನು ತಕ್ಕೊಳ್ಳುವದು ಅಸಾಧ್ಯವಿದ್ದಿಲ್ಲ; ಆದರೆ ಸಂಪೂರ್ಣ ಕಾರ್ಯವನ್ನು ನೀನೇ ಮಾಡಿಬಿಟ್ಟರೆ, ನಿನ್ನ ಮಗನಾದ ಅಮರಸಿಂಹನು ಮಾಡುವದೇನು? ನೀನು ಬಿತ್ತಿದ ಸ್ವಾತಂತ್ರ್ಯ ಪ್ರೀತಿಯ ವೃಕ್ಷವು ನಿನ್ನ ಕಾಲಕ್ಕೆ ಫಲಿಸಿ ಹೋಗಬೇಕೆ? ನಿನ್ನ ಮಗನಾದ ಈ ಅಮರಸಿಂಹನೂ ಕೀರ್ತಿಶಾಲಿಯಾಗಬೇಕೆಂಬ ಉದ್ದೇಶದಿಂದಲೇ ಚಿತ್ತೂರು ನಿನ್ನ ಕೈಸೇರಿರುವದಿಲ್ಲ! ಯಾಕೆ ಅಮರಸಿಂಹ, ಮರಣೋನ್ಮುಖನಾದ ನಿನ್ನ ತಂದೆಗೆ ಏನೆಂದು ಹೇಳುವೆ, ಹೇಳು!

ಈ ಮೇರೆಗೆ ನುಡಿದು ತಪೋಧನನು ಅಮರಸಿಂಹನನ್ನು ನೋಡಲು, ಆತನು ತಪೋಧನನನ್ನು ಭಕ್ತಿಯಿಂದ ವಂದಿಸಿ, ವೀರಾಸನ ಹಾಕಿ ಕೈಜೋಡಿಸಿ ತಂದೆಯನ್ನು ಕುರಿತು— ಪೂಜ್ಯನಾದ ಮಹಾರಾಣಾಜೀ, ತಂದೆಯ ಮರಣಕಾಲದ ಇಚ್ಛೆಯನ್ನು ಪೂರ್ಣಮಾಡಲಾರದ ಮಗನು ಅಧಮಾಧನಲ್ಲವೆ? ನನ್ನ ಮಾತಿನಲ್ಲಿ ವಿಶ್ವಾಸವಿಡಬೇಕು, ಪ್ರತಿಜ್ಞಾ ಪೂರ್ವಕವಾಗಿ ಹೇಳುತ್ತೇನೆ, ನಾನು ಮರಣಪರ್ಯಂತವಾಗಿ ಚಿತ್ತೂರನ್ನು ಉದ್ಧರಿಸಲು ಯತ್ನಮಾಡುವೆನು! ಈ ಮಾತನ್ನು ಧರ್ಮಸಾಕ್ಷಿಯಾಗಿ ಹೇಳುವೆನು. ನಿಮ್ಮ ಆತ್ಮಬಲವು ನನಗೆ ಸಹಾಯ ಮಾಡಲಿ, ಎಂದು ನುಡಿಯುತ್ತಿರಲು, ತಪೋಧನನು ಪ್ರತಾಪನ ತಲೆಯ ಮೇಲೆ ಕೈಯಿಟ್ಟು, ಕೃಪಾದೃಷ್ಟಿಯಿಂದ ಆತನನ್ನು ನೋಡಿದನು!! ಆಗ ಮಹಾರಾಣಾನ ಆತ್ಮವು ಶಾಂತವಾಯಿತು. ಆತನ ಮುಖದ ಮೇಲಿನ ಪ್ರೇತಕಳೆಯು ಹೋಗಿ ದೈವೀತೇಜಸ್ಸು ಮಿನುಗಹತ್ತಿತು. ಪುಣ್ಯಶಾಲಿಯಾದ ಆ ಅಲೌಕಿಕ ಪುರುಷನು ಅಮರ ಸಿಂಹನೇ ಮೊದಲಾದ ತನ್ನ ಎಲ್ಲ ಪರಿವಾರವನ್ನು ಪ್ರಸನ್ನ ಮುದ್ರೆಯಿಂದ ನೋಡಿ ಸಮಾಧಾನದಿಂದ ಕಣ್ಣುಗಳನ್ನು ಮುಚ್ಚಿದನು! ಕೂಡಲೆ ಯಾವದೋ ಒಂದು ವಿಧದ ಆನಂದದಿಂದ ಎಲ್ಲರ ಹೃದಯದಲ್ಲಿ ಕಂಪವು ಉಂಟಾಗಿ, ಒಂದು ಕ್ಷಣ

ಎಲ್ಲರೂ ವಿಸ್ಮೃತಿಯನ್ನು ಹೊಂದಿರಲು, ಸಾತ್ವಿಕಾ–ತಪೋಧನರಿಬ್ಬರೂ ಪ್ರತಾಪನ ಪವಿತ್ರವಾದ ಆತ್ಮವನ್ನು ತಮ್ಮ ಅಖಂಡಾತ್ಮದಲ್ಲಿ ಐಕ್ಯವಮಾಡಿಕೊಂಡರು! ಪ್ರತಾಪನ ಹಾಸ್ಯಮುಖದ ಪ್ರಸನ್ನತೆಯನ್ನು ನೋಡಿದರೆ, ಆತನು ಮರಣಹೊಂದಿರುವನೆಂಬದು ಯಾರೂ ಅನ್ನುವ ಹಾಗಿದ್ದಿಲ್ಲ. "ದೇಹತ್ಯಾಗಿತಾ ಕೀರ್ತಿಮಾಗೇ ಉರಾವೀ" ಎಂಬ ರಾಮದಾಸೋಕ್ತಿಯಂತೆ, ಸತ್ವಸಾರವಾದ ಪ್ರತಾಪನು ಕೀರ್ತಿಶೇಷನಾದದ್ದರಿಂದ, ಆತನ ಜಡದೇಹ–ವ್ಯಾಪಾರದ ಪರಿಸಮಾಪ್ತಿಯಾದರೂ, ಆತನು ಕೀರ್ತಿರೂಪದಿಂದ ಈಗಲೂ ಜೀವಿಸಿರುವನೆಂತಲೇ ಹೇಳಬೇಕಾಗುವದು!!

**ಸಮಾಪ್ತ**

# ಪ್ರಸ್ತಾವನೆ

ದುಃಖಪರ್ಯವಸಾಯಿಯಾದ ಈ ಕಾದಂಬರಿಯು ಮುಗಿದದ್ದಕ್ಕಾಗಿ ಸಮಾಧಾನ ಪಡಬೇಕಾಗಿದೆ; ಯಾಕಂದರೆ ದುಃಖಪಡುವವರ ಸಹವಾಸದಿಂದ ನಾವೂ ದುಃಖಪಡಬೇಕಾಗುತ್ತದೆ. ಈವರೆಗೆ ಚಂದ್ರಿಕೆಯ ದ್ವಾರದಿಂದ ಪ್ರಸಿದ್ಧವಾಗಿದ್ದ ಹಲವು ಕಾದಂಬರಿಗಳಲ್ಲಿ ಈ ''ತಿಲೋತ್ತಮಾ'' ಎಂಬ ಕಾದಂಬರಿಯು ಮನೋರಂಜನದ ದೃಷ್ಟಿಯಿಂದ ಕೆಲವರಿಗೆ ಅಷ್ಟು ಉಜ್ವಲವಾಗಿ ತೋರದಿದ್ದರೂ, ಇದರೊಳಗಿನ ಆಯೇಷೆ, ತಿಲೋತ್ತಮೆ, ಉಸ್ಮಾನ, ಜಗತ್ಸಿಂಗ ಮೊದಲಾದ ಸದ್ಗುಣಮಂಡಿತ ಪಾತ್ರಗಳ ಯೋಗದಿಂದ ಇದು ಬಹು ಮಹತ್ವದ್ದಾಗಿರುವದೆಂದು ನಾವು ಹೇಳದೆ ಇರಲಾರೆವು.

ದಂಪತಿಗಳು ಪರಸ್ಪರ ''ತಿಲೋತ್ತಮಾ–ಜಗತ್ಸಿಂಗ''ರಂತೆ ಪ್ರೇಮ ಮಾಡಬೇಕೆಂದು ನಾವು ಇಚ್ಛಿಸುವೆವು. ಪರಸ್ಪರ ವಿಷಯವಾಗಿರುವ ಅಂಥ ಪ್ರೇಮವನ್ನೇ ನಾವು ಸರಸ ಪ್ರೇಮವೆಂದು ಕರೆಯುತ್ತೇವೆ. ಅಂಥ ಪ್ರೇಮವೇ ದಂಪತಿಗಳಿಗೆ ಸುಖ–ಸಾಮ್ರಾಜ್ಯಗಳನ್ನೊದಗಿಸಿ ಕೊಡುತ್ತದೆ. ಆಯೇಷೆಯ ಪ್ರೇಮವು ಜಗತ್ಸಿಂಗನಲ್ಲಿ ಎಷ್ಟು ಬಲವತ್ತರವಾಗಿದ್ದರೂ, ಅದಕ್ಕೆ ಜಗತ್ಸಿಂಗನ ಪ್ರೇಮವು ಜೋಡಾಗದ್ದರಿಂದ, ಆಯೇಷೆಯ ಒಂಟಿಗವಾದ ಆ ಪ್ರೇಮವನ್ನು ನಾವು ನಿರಸ ಪ್ರೇಮವೆಂತಲೇ ಕರೆಯುವೆವು; ಅದರಂತೆ ಆಯೇಷೆಯ ಮೇಲಿದ್ದ ಉಸ್ಮಾನನ ಪ್ರೇಮವೂ ನಿರಸವಾದದ್ದೇ ಸರಿ; ಯಾಕಂದರೆ, ಆ ಆಯೇಷೆ–ಉಸ್ಮಾನರ ಪ್ರೇಮದಿಂದ ಕಡೆಗೂ ಯಾರಿಗೂ ಸುಖವಾಗಲಿಲ್ಲ!

ಆದರೂ ''ಆಯೇಷಾ–ಉಸ್ಮಾನ''ರವರಲ್ಲಿದ್ದಂಥ ಉಜ್ವಲವಾದ ನಿಷ್ಕಾಮ ಪ್ರೇಮವನ್ನು ತಮ್ಮ ತಮ್ಮ ಕರ್ತವ್ಯಗಳಲ್ಲಿ ಪ್ರತಿಯೊಬ್ಬರೂ ವಹಿಸಬೇಕೆಂದು ನಾವು ಆಗ್ರಹದಿಂದ ಹೇಳುತ್ತೇವೆ. ಕೇವಲ ಫಲಾಪೇಕ್ಷೆಯಿಂದ ಕರ್ಮ ಮಾಡುವದಕ್ಕಿಂತ ''ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ'' ಎಂಬ ಭಗವದ್ಗೀತೆಯ ಉಕ್ತಿಯಂತೆ, ಫಲವು ಆಗಲಿ–ಆಗದಿರಲಿ, ಅತ್ಯುತ್ತಮ ರೀತಿಯಿಂದ ತನ್ನ ಕರ್ತವ್ಯವನ್ನು ಮಾಡುವಂಥ ನಿಷ್ಕಾಮ

ವಾದ ಕರ್ತವ್ಯ ಪ್ರೇಮವನ್ನು ಪ್ರತಿಯೊಬ್ಬರು ವಹಿಸಬೇಕು. ಅಂಥ ಮಹಾತ್ಮರಿಂದಲೇ ಮಹಾಕಾರ್ಯಗಳು ನೆರವೇರುವವು. ಕರ್ತವ್ಯತತ್ಪರತೆಗೆ ತಕ್ಕ ಫಲವಾಗಿದ್ದರೆ, ನಿರುತ್ಸಾಹಿಗಳಾಗಿ ಕರ್ತವ್ಯಭ್ರಷ್ಟರಾಗುವದು ನೀಚತನವೇ ಸರಿ.

ಆನಂದವನ, ೯-೩-೧೭

ವಿಧೇಯ,
**ಗಳಗನಾಥ**

# ವ್ಯಾಮೋಹ

ಸಾಮ್ರಾಟ್ - ಶಿಖಾಮಣಿಯಾದ ಅಕಬರನ ಆಳಿಕೆಯ ಕಾಲವು. ರಾಜಾ ಮಾನಸಿಂಗನಂಥ ಸ್ವಾಮಿನಿಷ್ಠ ಮಹಾ ಪ್ರತಾಪಿಯು ಆ ಮೊಗಲ ಬಾದಶಹನ ಪಕ್ಷಪಾತಿಯಾಗಿ ಬಂಗಾಲ-ಬಿಹಾರ-ಓಡಿಸಾ ಪ್ರಾಂತಗಳೊಳಗಿನ ಪಠಾಣರ ರಾಜ್ಯಗಳನ್ನು ಒಂದೊಂದಾಗಿ ನಷ್ಟಪಡಿಸುತ್ತ ಮೊಗಲ ಸಾಮ್ರಾಜ್ಯವನ್ನು ಹಬ್ಬಿಸತೊಡಗಿರುತ್ತಾನೆ. ಸನ್ 1591ನೇ ಇಸವಿಯ ಬೇಸಿಗೆಯ ಕಟ್ಟಕಡೆಯ ಭಾಗವು ಒದಗಿದೆ. ಒಂದು ದಿನ ಇಳಿಹೊತ್ತಿನ ಸಮಯ. ಒಬ್ಬ ತರುಣನು ಅಶ್ವಾರೂಢನಾಗಿ, ವಿಷ್ಣುಪುರದಿಂದ ಶಹಾಬಾದಕ್ಕೆ ಹೋಗುವ ಮಾರ್ಗವನ್ನು ಹಿಡಿದು ಭರದಿಂದ ಸಾಗತೊಡಗಿರುತ್ತಾನೆ. ಆ ನವಯೌವನ ಸಂಪನ್ನನ ಪ್ರತಾಪದ ರಭಸಕ್ಕೂ, ಸೌಂದರ್ಯದ ಸೊಬಗಿಗೂ ತಲೆದೂಗುತ್ತಿರುವಂತೆ, ಮಾರ್ಗದ ಎಡಬಲದ ಗಿಡ-ಬಳ್ಳಿಗಳು ಮೆಲ್ಲಮೆಲ್ಲನೆ ಅಲ್ಲಾಡತೊಡಗಿರುತ್ತವೆ. ಮಂದಮಾರುತನು ಸುಳ್ಳನೆ ಸುಳಿಯುತ್ತ ಸುಖ ಸ್ಪರ್ಶವನ್ನುಂಟು ಮಾಡತೊಡಗಿರುತ್ತಾನೆ. ವನ-ಪುಷ್ಪಗಳ ಘಮಘಮಿಸುವ ವಾಸನೆಯು ಸುತ್ತುಮುತ್ತು ಇಡಗಿದೆ. ಇಂಥ ಸುಖಮಯ ಸಮಯದಲ್ಲಿ ತರುಣನು ಉಲ್ಲಾಸದಿಂದ ಸಾಗಿದ್ದನು. ಆ ತೇಜಸ್ವಿಯ ವೈಭವಕ್ಕೆ ಎಣೆಯಿದ್ದಿಲ್ಲ; ಅಧಿಕಾರಕ್ಕೆ ಕೊರತೆಯಿದ್ದಿಲ್ಲ; ಅಬ್ಬರಕ್ಕೆ ಅಳವು ಇದ್ದಿಲ್ಲ. ತನ್ನ ಸತ್ವಾತಿಶಯದಿಂದ ದಶದಿಕ್ಕುಗಳು ತತ್ತರಿಸುತ್ತಿರುವಂತೆ ಆ ವೀರ ಶಿರೋಮಣಿಗೆ ಭಾಸವಾಗುತ್ತಿತ್ತು ತಾನು ಏಕಾಕಿಯಾಗಿರುವೆನೆಂಬ ಭಯವು ಲೇಶವಾದರೂ ಆತನನ್ನು ಸೋಂಕಿದ್ದಿಲ್ಲ.

ಹೀಗಿರುವಾಗ ಹೊತ್ತು ಮುಣುಗತೊಡಗಿತು. ಕಾರಿರುಳ ಕತ್ತಲೆಯ ಸಾಮ್ರಾಜ್ಯ ಕಾಲವು ಸಮೀಪಿಸಿತು. ಅಷ್ಟರಲ್ಲಿ ಮೋಡವು ಕವಿದು ಒಮ್ಮೆಲೆ ಬಿರುಗಾಳಿ ಬಿಟ್ಟು ಕಣ್ಣು ಮೂಗುಗಳನ್ನು ದೂಳವು ಮುಸುಕಲು, ತರುಣನು ತತ್ತರಿಸಿದನು. ಕುದುರೆಯ ಗತಿಯು ಕುಂಠಿತವಾಯಿತು. ಕಣ್ಣು ಮುಚ್ಚಿಕೊಂಡೇ ಮಾರ್ಗವನ್ನು ಕ್ರಮಿಸಬೇಕಾದ್ದರಿಂದ ದಾರಿಯು ತಪ್ಪಿತು. ಹೀಗೆ ಅತ್ಯಂತ ಪ್ರತಿಕೂಲ ಸ್ಥಿತಿಯಲ್ಲಿ ತರುಣನು ಒಂದು ತಾಸು ಮಾರ್ಗವನ್ನು ಕ್ರಮಿಸಿದನು. ಎತ್ತಕಡೆಗೆ ಸಾಗಬೇಕೆಂಬದು ಆತನಿಗೆ ತಿಳಿಯಲೊಲ್ಲದು. ದಿಂಗ್ಮೂಢನಾಗಿ ಆತನು ಕುದುರೆ ಒಯ್ದತ್ತ ಸಾಗಹತ್ತಿದನು. ಬರಬರುತ್ತ ಮೋಡವು ಗದ್ದರಿಸಿ ಪಳಪಳ ಹನಿಗಳು ಉದುರಹತ್ತಿದವು. ಆದರೆ ಬಿರುಗಾಳಿಯ ಹೊಡತಕ್ಕೆ ಮೋಡಗಳು ಚದರಿ ಹೋದದ್ದರಿಂದ ಮಳೆಯ ಅಬ್ಬರವು ಕುಗ್ಗಿತು. ಬರಬರುತ್ತ ಗಾಳಿಯೂ ಕಡಿಮೆಯಾಗಹತ್ತಿತು. ಚಿಟಿಚಿಟಿ ಹತ್ತಿದ ಹನಿಯಿಂದ

ಹುಡಿಯು ಕುಳಿತುಕೊಳ್ಳಲು, ಮಾರ್ಗಕ್ರಮಣವು ಸುಸೂತ್ರವಾಗಿ ಸಾಗತೊಡಗಿತು. ತರುಣನು ಒತ್ತರದಿಂದ ಸಾಗುತ್ತಿರುವಾಗ ಬಹುದೂರದಲ್ಲಿ ಒಂದು ದೀಪವು ಕಾಣಿಸಹತ್ತಿತು. ಆದರೆ ಆ ದೀಪದ ಸುಳವು ಹಿಡಿದು ವೇಗದಿಂದ ಸಾಗಿದ್ದ ತರುಣನು, ಒಂದು ಕ್ಷಣದಲ್ಲಿ ಶೈಲೇಶ್ವರವೆಂಬ ಶಿವಾಲಯದ ಬಾಗಿಲಿಗೆ ಹೋಗಿ ನಿಂತುಕೊಂಡನು.

ಕತ್ತಲೆಯು ಮುಸುಕಿದ್ದರಿಂದ ಶಿವಾಲಯದ ಬಾಹ್ಯ ಸೌಂದರ್ಯವು ತರುಣನ ಕಣ್ಣಿಗೆ ಬೀಳುವಹಾಗಿದ್ದಿಲ್ಲ; ಆದರೆ ದೀಪದ ಪ್ರಕಾಶದಲ್ಲಿ ಶಿವಾಲಯದ ಒಳಭಾಗವು ತರುಣನ ಮನಸ್ಸನ್ನು ಚನ್ನಾಗಿ ರಮಿಸಿತು. ಶಿವಾಲಯದ ಗರ್ಭಗುಡಿಯಲ್ಲೊಂದು, ಮಧ್ಯರಂಗದಲ್ಲಿಯೊಂದು, ಮುಂಭಾಗದಲ್ಲಿಯೊಂದು ಹೀಗೆ ಮೂರು ದೀಪಗಳು ನಿಚ್ಚಳವಾಗಿ ಉರಿಯುತ್ತಿದ್ದವು. ಮುಂಭಾಗದಲ್ಲಿ ಸೇವಕ ಪರಿವಾರವು ಇಳಿದುಕೊಂಡಿದ್ದು, ಶಿವಾಲಯದ ಹೊರಗೆ ಒಂದು ಬೆಟ್ಟದಂಥ ಕುದುರೆಯು, ತರುಣನ ಕುದುರೆಯನ್ನು ನೋಡಿ ಕಾಲು ಕೆದರಿ ಹೇಕರಿಸ ತೊಡಗಿತು. ತರುಣನು ಕುದುರೆಯನ್ನು ಇಳಿದು ಅದನ್ನು ಎಲ್ಲಿ ಕಟ್ಟಬೇಕೆಂದು ಯೋಚಿಸುತ್ತಿರಲು, ಗುಡಿಯೊಳಗಿದ್ದ ಸೇವಕರಲ್ಲಿ ಒಬ್ಬನು ಅವಸರದಿಂದ ಬಂದು ವಿನಯದಿಂದ ತರುಣನಿಗೆ ಮುಜುರೆಮಾಡಿ ಆತನ ಕುದುರೆಯನ್ನು ಹಿಡಕೊಂಡು ಕಟ್ಟಹೋದನು. ಅಷ್ಟರಲ್ಲಿ ಮತ್ತೊಬ್ಬ ಸೇವಕನು ಕುದುರೆಯ ಜೀನು ಇಳಿಸತೊಡಗಿದನು. ಇನ್ನೊಬ್ಬನು ಕುದುರೆಯ ಮೇವು–ದಾಣಿಗಳ ವ್ಯವಸ್ಥೆ ಮಾಡತೊಡಗಿದನು. ಸೇವಕರ ಈ ಸೌಜನ್ಯವನ್ನೂ, ಅತಿಥಿ ಸೇವಾ ತತ್ಪರತೆಯನ್ನೂ ನೋಡಿ ತರುಣನು ಬಹಳ ಸಮಾಧಾನಪಟ್ಟನು. ಆತನು ಅತ್ಯಂತ ಕೃತಜ್ಞತೆಯಿಂದ ಆ ಸೌಜನ್ಯ ಸ್ವಭಾವದ ಸೇವಕರನ್ನು ಮನಸ್ಸಿನಲ್ಲಿ ಅಭಿವಂದಿಸುತ್ತ ಆನಂದ ಮುದ್ರೆಯಿಂದ ಗುಡಿಯ ಮಧ್ಯರಂಗವನ್ನು ಹೋಗಲು, ಒಂದು ದಿವ್ಯ ನೋಟವು ಆತನ ಕಣ್ಣಿಗೆ ಬಿದ್ದು ತಟ್ಟನೆ ಆತನ ಹೃದಯದಲ್ಲಿ ಭಕ್ತಿರಸವು ಉಕ್ಕೇರತೊಡಗಿತು. ದೀಪದ ಕಾಂತಿಯನ್ನು ಅಡಗಿಸುವ ದಿವ್ಯ ಕಾಂತಿಯುಳ್ಳ ಒಂದು ಶಾಂತಮೂರ್ತಿಗೆ, ಆ ತರುಣನು ಸಾಷ್ಟಾಂಗವಾಗಿ ಎರಗಿದನು. ಕೂಡಲೆ ಆ ಶಾಂತಮೂರ್ತಿಯ ನಗೆಮೊಗದಿಂದ ''ವಿಜಯೀಭವ, ಆಯುಷ್ಮಾನ್‌ಭವ'' ಎಂಬ ಆಶೀರ್ವಚನವು ಹೊರಡಲು, ಆ ಮಂಗಲೋಕ್ತಿಯಲ್ಲಿ ಸ್ತ್ರೀಯರ ಮಂಜುಲವಾದ ಕಂಕಣ ಧ್ವನಿಯು ಬೆರೆತು, ಸರಸವಾದ ಆ ಮಿಶ್ರಧ್ವನಿಯು ತರುಣನ ಕರ್ಣರಂಧ್ರವನ್ನು ಪ್ರವೇಶಿಸಿ, ಆತನನ್ನು ಧನ್ಯನನ್ನಾಗಿಯೂ, ಕುತೂಹಲಪೂರ್ಣನನ್ನಾಗಿಯೂ ಮಾಡಿತು. ತರುಣನು ಉತ್ಸುಕತೆಯಿಂದ ಎದ್ದುನಿಂತು ಮತ್ತೊಮ್ಮೆ ಆ ಶಾಂತಮೂರ್ತಿಯನ್ನು ಅತ್ಯಂತ ಲೀನತೆಯಿಂದ ನೋಡಿ, ಆ ಕಂಕಣ ಧ್ವನಿಯು ಎಲ್ಲಿಯದೆಂದು ಸುತ್ತುಮುತ್ತು ನೋಡಲು, ಆ ಶಾಂತಮೂರ್ತಿಯ ಎಡೆಗಡೆಯಲ್ಲಿ ಇಬ್ಬರು ಸುಂದರಿಯರು ಕೌತುಕದಿಂದ ತನ್ನನ್ನು ನೋಡುತ್ತ ಮರ್ಯಾದೆಯಿಂದ ಎದ್ದು ನಿಂತುಕೊಂಡಿದ್ದರು. ಅವರಲ್ಲಿ ಅತ್ಯಂತ ಸುಂದರಿಯಾದ ಒಬ್ಬ ತರುಣಿಯ ತರಲ ಕಟಾಕ್ಷದಿಂದ ತರುಣನ ಕೆಚ್ಚುಗಟ್ಟಿದ ಹೃದಯವು ಕಂಪಿಸಿ, ಅದರಲ್ಲಿ ಆ ಸುಂದರಿಯ ದಿವ್ಯಮೂರ್ತಿಯು ಸ್ಥಿರವಾಗಿ ಬಿಂಬಿಸಿತು.

ಇದರಿಂದ ತರುಣನ ಮನಸ್ಸು ಇತ್ತಂಡವಾಯಿತು. ಋಷಿ ಸದೃಶವಾದ ಆ ಶಾಂತ ಮೂರ್ತಿಯಲ್ಲಿ ಆತನ ಭಕ್ತಿಯು ಉತ್ಪನ್ನವಾದದ್ದು ಆಶ್ಚರ್ಯವಲ್ಲ. ಅದು ವೇದ ಧರ್ಮಿಯಾದ ಆ ತರುಣನ ಶೀಲವೇ ಆಗಿತ್ತು. ಆದರೆ ತರುಣಿಯರ ಕಟಾಕ್ಷಕ್ಕೆ ಎಂದೂ ಹಣಿಯದೆ ಇದ್ದ ತನ್ನ ಹೃದಯವು, ಇಂದು ಆ ಸುಂದರ ತರುಣಿಯ ಸಂದರ್ಶನ ಮಾತ್ರದಿಂದ ಕಂಗಿಸಿದ್ದನ್ನು ನೋಡಿ ಆತನಿಗೆ ಪರಮಾಶ್ಚರ್ಯವಾಯಿತು. ತಾನು ಯುದ್ಧದಲ್ಲಿ ಯಾವಾಗಲೂ ಜಯಶೀಲನಾಗಬೇಕು; ದ್ವಂದ್ವಯುದ್ಧದಲ್ಲಿ ಮಹಾ ಮಹಾ ಸಮರ್ಥರನ್ನು ನೆಲಕ್ಕುರುಳಿಸಬೇಕು. ಎಂಬಿವೇ ಮೊದಲಾದ ಪೌರುಷ ವಿಚಾರಗಳಿಂದ ಯುದ್ಧ ಕೌಶಲ್ಯವನ್ನೂ, ಮೈ ಕಸುವನ್ನೂ ಮನಮುಟ್ಟಿ ಬೆಳೆಸುತ್ತಲಿದ್ದ ಆ ತರುಣನು, ಹೆಂಗಳೆಯರ ಓರೆ ನೋಟದ ಬಲೆಗೆ ಇಂದಿನವರೆಗೆ ಸಿಕ್ಕಿದ್ದಿಲ್ಲ. ಅಥವಾ ಇಂದಿನವರೆಗೆ ಯಾವ ಸುಂದರಿಯೂ ಆ ನೀತಿ ವಿಶಾರದನಾದ ತರುಣನನ್ನು ಬಲೆಯಲ್ಲಿ ಹಿಡಿಯಲಿಕ್ಕೆ ಸಮರ್ಥಳಾಗಿದ್ದಿಲ್ಲವೆಂತಲೇ ಹೇಳಬಹುದು; ಆದರೆ ಇಂದು ಮಾತ್ರ ಆ ತರುಣನ ಹೃದಯವು ಅಭೇದ್ಯವಾಗಿ ಉಳಿಯಲಿಲ್ಲ. ಸತ್ಪುರುಷ ಸನ್ನಿಧಿಯಲ್ಲಿ ತನ್ನ ಮನಸ್ಸು ಹೀಗೆ ಒಬ್ಬ ಅಪರಿಚಿತ ಸುಂದರಿಯ ಮೇಲೆ ಹರಿಹಾದದ್ದನ್ನು ನೋಡಿ ತರುಣನು ಮನಸ್ಸಿನಲ್ಲಿ ನಾಚಿದನು. ಪರಸ್ತ್ರೀಯನ್ನು ಪಾಪಬುದ್ಧಿಯಿಂದ ನೋಡಿದ ಮಹಾದೋಷಕ್ಕೆ ತಾನು ಎಲ್ಲಿ ಪಾತ್ರನಾಗುವೆನೋ ಎಂದು ಬೆದರಿದನು. ಆತನು ತರುಣಿಯ ಮೇಲೆ ಹರಿಯುತ್ತಿರುವ ತನ್ನ ಮನಸ್ಸನ್ನು ಬಿಗಿಹಿಡಿದು ಪಶ್ಚಾತ್ತಾಪದಿಂದ ಆ ಶಾಂತಮೂರ್ತಿಯನ್ನು ನೋಡತೊಡಗಿದನು. ಆದರೂ ಮನಸ್ಸು ತರುಣಿಯ ಕಡೆಗೆ ಹರಿಯಹತ್ತಿತು. ಅಷ್ಟರಲ್ಲಿ ಆ ತೋಜೋಮೂರ್ತಿಯು ಗಂಭೀರ ಸ್ವರದಿಂದ ಆ ತರುಣನನ್ನು ಕುರಿತು—''ಜಗತ್ಸಿಂಹ, ಬಾ, ಇತ್ತ ಕುಳಿತುಕೊಳ್ಳು. ನಿಮ್ಮ ತಂದೆಯಾದ ಅಂಬರಾಧೀಶ್ವರ ಮಾನಸಿಂಹರವರಿಗೆ ಕ್ಷೇಮವೇ? ಅಕಬರ ಬಾದಶಹನ ಪಕ್ಷಪಾತಿಗಳಾದ ಆ ರಜಪೂತ ಶ್ರೇಷ್ಠರ ಸ್ವಾಮಿಭಕ್ತಿಯ ರಾಜಕಾರ್ಯಗಳು ನಿರ್ವಿಘ್ನವಾಗಿ ನಡೆದಿರುವವೇ? ಓಡಿಸಾ ಪ್ರಾಂತದಲ್ಲಿ ಮೊಗಲರನ್ನು ಮೀರಿ ನಿಂತಿರುವ ಕಾತಲುಖಾನನನ್ನು ಬಗ್ಗು ಬಡಿಯುವದಕ್ಕಾಗಿ ಅವರು ಯತ್ನಿಸುತ್ತಿರುವರು. ಕಾತಲುಖಾನನ ಅಳವನ್ನು ಗುಪ್ತರೀತಿಯಿಂದ ತಿಳಕೊಂಡು ಬರುವದಕ್ಕಾಗಿ ವೇಷಾಂತರದಿಂದ ನಿನ್ನನ್ನು ನಿಮ್ಮ ತಂದೆಯವರು ಕಳಿಸಿದ್ದರೆಂದು ಕೇಳಿದ್ದೇನೆ. ನೀನು ಹೋದ ಕಾರ್ಯವು ಚನ್ನಾಗಿ ಸಾಧಿಸಿತಷ್ಟೆ? ನೀನು ಇಲ್ಲಿ ಯಾವ ಮಾತಿನಿಂದಲೂ ಸಂಕೋಚಪಡಲಾಗದೆಂತಲೂ, ಯಾವ ಸಂಶಯ–ವಿಕಲ್ಪಗಳಿಗೂ ಗುರಿಯಾಗಲಾಗದೆಂತಲೂ, ನಾನು ನಮ್ಮ ವೃತ್ತಾಂತವನ್ನು ನಿನಗೆ ತಿಳಿಸುತ್ತೇನೆ. ನಿನಗೆ ನನ್ನ ಪರಿಚಯುವಿಲ್ಲದಿದ್ದರೂ ನಿನ್ನ ಪರಿಚಯವು ನನಗೆ ಚೆನ್ನಾಗಿ ಇರುತ್ತದೆ. ನನ್ನನ್ನು ಜನರು ಅಭಿರಾಮಸ್ವಾಮಿಯೆಂದು ಕರೆಯುವರು. ಮಂದಾರಣಗಡದ ಒಡೆಯರಾದ ವಿರೇಂದ್ರಸಿಂಹರವರು ನನ್ನನ್ನು ಕುಲಗುರುಗಳೆಂದು ತಿಳಿಯುವರು. ಈ ತಿಲೋತ್ತಮೆಯು ವೀರೇಂದ್ರಸಿಂಹರ ಮಗಳು. ಇನ್ನೂ ಈಕೆಯ ಲಗ್ನವಾಗಿರುವದಿಲ್ಲ. ಈ ವಿಮಲಾ ದೇವಿಯು ವಿರೇಂದ್ರಸಿಂಹರ ಹೆಂಡತಿಯು. ವೀರೇಂದ್ರ ಸಿಂಹರವರು ಅಕಬರ ಬಾದಶಹನ ಪಕ್ಷಪಾತಿಗಳಾದದ್ದರಿಂದ, ಅವರು ಪಠಾಣ ಕಾತಲೂಖಾನನ ಶತ್ರುಗಳೂ,

ಮೊಗಲ ಬಾದಶಹರ, ಅರ್ಥಾತ್ ಮಾನಸಿಂಹರವರ ಮಿತ್ರರೂ ಆಗಿದ್ದಾರೆ. ಮಾರ್ಗತ್ವೇನ ನಾವು ಈ ಶಿವಾಲಯದಲ್ಲಿ ಇಳಿದುಕೊಳ್ಳಬೇಕಾಯಿತು. ಅನಾಯಾಸವಾಗಿ ನಿನ್ನ ದರ್ಶನ ವಾದದ್ದರಿಂದ ನಮ್ಮೆಲ್ಲರಿಗೆ ಬಹಳ ಸಂತೋಷವಾಗಿದೆ. ಪರಕೀಯ ಭಾವವನ್ನು ಎಣಿಸದೆ ನೀನು ನಮ್ಮ ಆತಿಥ್ಯವನ್ನು ಸ್ವೀಕರಿಸತಕ್ಕದ್ದು.

ಅಭಿರಾಮಸ್ವಾಮಿಗಳ ಯಥಾರ್ಥವಾದ ಈ ಸ್ಪಷ್ಟೋಕ್ತಿಗಳನ್ನು ಕೇಳಿ ಜಗತ್ಸಿಂಗನಿಗೆ ಆಶ್ಚರ್ಯವಾಯಿತು. ನಾನು ಎಂದೂ ಇವರನ್ನು ನೋಡದೆಯಿರುವಾಗ ನನ್ನ ಪರಿಚಯವು ಇಷ್ಟು ಸ್ಪಷ್ಟವಾಗಿ ಇವರಿಗೆ ಹ್ಯಾಗಾಗಿರಬಹುದೆಂದು ಆತನು ಯೋಚಿಸತೊಡಗಿದನು. ಇನ್ನೂ ತಿಲೋತ್ತಮೆಯ ಲಗ್ನವಾಗಿಲ್ಲೆಂಬ ಮಾತು ಆತನ ಕಿವಿಗೆ ಬಹು ಇಂಪಾಗಿ ಕೇಳಿಸಿತು. ಈ ಮಾತಿನಿಂದ ಆತನಲ್ಲಿ ತಿಲೋತ್ತಮೆಯ ವಿಷಯವಾಗಿ ನಿಷ್ಕಾರಣವಾದ ಆಪ್ತಭಾವವು ಉತ್ಪನ್ನವಾಯಿತು. ಆತನು ಉತ್ಸುಕತೆಯಿಂದ ಮತ್ತೊಮ್ಮೆ ತಿಲೋತ್ತಮೆಯ ಕಡೆಗೆ ನೋಡಿದನು. ಆಗ ಅವರಿಬ್ಬರ ದೃಷ್ಟಿಯ ಸಮ್ಮೇಲನವಾಗಲು, ಪರಸ್ಪರರಲ್ಲಿ ದೃಢತರವಾದ ಪ್ರೇಮವು ಉತ್ಪನ್ನವಾಯಿತು. ಜಗತ್ಸಿಂಗನ ಘನವಾದ ಯೋಗ್ಯತೆಯನ್ನೂ, ಸರ್ವಗುಣ ಸಂಪನ್ನತೆಯನ್ನೂ ಚಾಣಾಕ್ಷಳಾದ ವಿಮಲಾದೇವಿಯು ತಿಳಿದು, ತನ್ನ ತಿಲೋತ್ತಮೆಗೆ ಈತನು ಯೋಗ್ಯವರನೆಂದು ಭಾವಿಸಿದಳು; ಆದರೆ ಈತನು ತನ್ನ ಅಳಿಯನಾಗುವದು ಅಸಂಭವವೆಂಬ ವಿಚಾರದಿಂದ ಆಕೆಯು ವ್ಯಸನಪಟ್ಟಳು. ತಮ್ಮಂಥ ಕ್ಷುದ್ರ ಸಂಸ್ಥಾನಿಕರ ಮಗಳನ್ನು ಮಾನಸಿಂಹನಂಥ ಘನವಂತನು ತನ್ನ ಸೊಸೆಯನ್ನಾಗಿ ಮಾಡಿಕೊಳ್ಳುವದು ಅಸಂಭವವೆಂದು ವಿಮಲೆಯು ಭಾವಿಸಿದ್ದು ಯೋಗ್ಯವೇ ಆಗಿತ್ತು. ಅಕಬರನ ಬಲಗೈಯೆನಿಸಿ, ಆತನ ಅರ್ಧ ಸಾಮ್ರಾಜ್ಯದ ಅಭಿವೃದ್ಧಿಗೆ ಕಾರಣನೆಂಬ ಕೀರ್ತಿಯನ್ನು ಪಡೆದ ಮಾನಸಿಂಹನ ಘನತರವಾದ ಯೋಗ್ಯತೆಯೆತ್ತ, ವೀರೇಂದ್ರ ಸಿಂಹನಂಥ ಸಣ್ಣ ಸಂಸ್ಥಾನಿಕನ ಸರ್ವಸಾಧಾರಣ ಯೋಗ್ಯತೆಯೆತ್ತ? ಆದರೆ ಸ್ವಾಭಾವಿಕವಾದ ಪ್ರೇಮೋತ್ಪತ್ತಿಗೆ ಅಧಿಕಾರ–ವೈಭವಾದಿಗಳು ಪ್ರಧಾನಕಾರಣಗಳಲ್ಲ. ಜನ್ಮತಃ ಅಂಧವೆನಿಸುವ ಪ್ರೇಮವು, ಯಾರಲ್ಲಿ ಯಾವಾಗ ನೆಲೆಗೊಳ್ಳುವದೆಂಬದನ್ನು ಹೇಳಲವಶ್ಯಕವು. ಈ ಮಾತು, ತಿಲೋತ್ತಮೆಯ ವಿಷಯವಾಗಿ ಜಗತ್ಸಿಂಗನಲ್ಲಿ ಹುಟ್ಟಿದ ಪ್ರೇಮಕ್ಕೆ ಚನ್ನಾಗಿ ಸಂಬಂಧಿಸುವದು. ತಿಲೋತ್ತಮೆಯು ಕ್ಷುದ್ರ ಸಂಸ್ಥಾನಿಕನ ಮಗಳೆಂಬದರ ಹಂಗು ಇಲ್ಲದೆ ಜಗತ್ಸಿಂಗನ ಪ್ರೇಮವು ತಿಲೋತ್ತಮೆಯಲ್ಲಿ ದೃಢವಾಗಿ ಕುಳಿತುಕೊಂಡಿತು. ತಿಲೋತ್ತಮೆಯಾದರೂ ಜಗತ್ಸಿಂಗನನ್ನು ಮನಸಾ ಪತಿಯೆಂದು ವರಿಸಿದಳು. ತಿಲೋತ್ತಮೆಯೆಂಬ ಹೆಸರನ್ನು ಸಾರ್ಥಕವಾಗಿ ಮಾಡುವ ಆ ಪ್ರಮದೆಯ ಸೌಂದರ್ಯಾತಿಶಯಕ್ಕೆ ಮರುಳಾಗಿ ಬಹುಜನ ಸಂಸ್ಥಾನಿಕರು ಆಕೆಯ ಪಾಣಿಗ್ರಹಣಕ್ಕೆ ಆತುರಪಡುತ್ತಲಿದ್ದರು; ಆದರೆ ತಿಲೋತ್ತಮೆಗೆ ಈವರೆಗೆ ಒಬ್ಬ ತರುಣನೂ ತನ್ನ ಪಾಣಿಗ್ರಹಣಕ್ಕೆ ಯೋಗ್ಯನಾಗಿ ತೋರಿದ್ದಿಲ್ಲ. ಜಗತ್ಸಿಂಗನ ದರ್ಶನವಾದ ಕೂಡಲೆ ಆತನ ಕುಲ–ಶೀಲಗಳನ್ನು ತಿಳಿದುಕೊಳ್ಳದೆ, ಕೈಯೊಳಗಿನ ತುತ್ತು ನೆಟ್ಟಗೆ ಬಾಯಿಗೆ ಹೋಗುವಂತೆ, ತಿಲೋತ್ತಮೆಯ ಪ್ರೇಮವು ಜಗತ್ಸಿಂಗನಲ್ಲಿ ಆಶ್ರಯವನ್ನು ಪಡೆಯಿತು. ಮುಂದೆ ಗುರುಮುಖದಿಂದ ಜಗತ್ಸಿಂಗನ ಯೋಗ್ಯತೆಯು ಗೊತ್ತಾದದ್ದರಿಂದ ಆ ಸುಂದರಿಯು ತನ್ನನ್ನು

ಧನ್ಯಳೆಂದು ಭಾವಿಸಿ, ಜಗತ್ಸಿಂಗನ ಹೊರತು ಅನ್ಯ ಪುರುಷನ ಪಾಣಿಗ್ರಹಣ ಮಾಡಲಿಕ್ಕಿಲ್ಲೆಂದು ಮನಸ್ಸಿನಲ್ಲಿ ನಿಶ್ಚಯಿಸಿದಳು.

ಈ ಮೇರೆಗೆ ಆ ತರುಣ–ತರುಣಿಯರಲ್ಲಿ ಪರಸ್ಪರ ಪ್ರೇಮವು ಉತ್ಪನ್ನವಾಗಿ ಅವರ ದೃಢತರ ಸಂಬಂಧವಾಗಲಿಕ್ಕೆ ಒಂದು ಕ್ಷಣವು ಕೂಡ ಹತ್ತಲಿಲ್ಲ. ಮಾನಸಿಕ ಕಾರ್ಯಗಳೇ ಅಷ್ಟು ವೇಗತರವಾದವುಗಳು. ಅಭಿರಾಮ ಸ್ವಾಮಿಗಳ ಮಾತುಗಳನ್ನು ಕೇಳಿ ತರುಣನು ಆಶ್ಚರ್ಯ ಮಗ್ನನಾಗಿ ವಿಚಾರಮಾಡುತ್ತ ನಿಂತ ಅಲ್ಪಾವಧಿಯಲ್ಲಿಯೇ ಅವರಿಬ್ಬರ ಮನಸ್ಸಿನ ಈ ಸಮ್ಮೇಲನದ ವ್ಯಾಪಾರವಾಯಿತು. ಇದನ್ನು ಮಹಾಜ್ಞಾನಿಗಳಾದ ಅಭಿರಾಮ ಸ್ವಾಮಿಗಳು ಮನಸ್ಸಿನಲ್ಲಿ ತಿಳಕೊಂಡು ಸಮಾಧಾನಪಟ್ಟರು. ಅವರು ಅಕಸ್ಮಾತ್ತಾಗಿ ಒದಗಿದ ಈ ಅಪೂರ್ವವಾದ ಸುಂದರ ಯೋಗಕ್ಕಾಗಿ ಮನಸ್ಸಿನಲ್ಲಿ ಕೌತುಕಪಡುತ್ತಿರಲು, ಜಗತ್ಸಿಂಗನು ಅವರನ್ನು ಕುರಿತು—ಮಹಾತ್ಮರೇ, ತಮ್ಮ ಮಾತುಗಳಿಗೆ ಉತ್ತರಕೊಡುವ ಯೊಗ್ಯತೆಯು ನನಗಿಲ್ಲ, ತಪೋಧನರಾದ ತಮ್ಮಂಥ ತ್ರಿಕಾಲಜ್ಞಾನಿಗಳಿಗೆ ತಿಳಿಯದ ಮಾತು ಯಾವದಿರುವದು? ತಮ್ಮ ಆಶೀರ್ವಾದದಿಂದ ನಮ್ಮ ಹಿರಿಯರು ಕ್ಷೇಮದಿಂದಿರುವರು. ಅವರ ಸ್ವಾಮಿಭಕ್ತಿಯ ರಾಜಕಾರ್ಯಗಳು ತಡೆಯಿಲ್ಲದೆ ನಡೆದಿರುತ್ತವೆ. ನಾನು ಹೋದ ಕಾರ್ಯವೂ ಚೆನ್ನಾಗಿ ಸಾಧಿಸಿರುವದು. ಇಂದು ಮಹಾಪುರುಷರ ಚರಣ ದರ್ಶನವಾದದ್ದರಿಂದ ನಾನು ಧನ್ಯನಾದೆನು; ಆದರೆ ಮಹನೀಯರೇ, ಸತ್ಪುರುಷರ ಸನ್ನಿಧಿಯಲ್ಲಿ ನನ್ನ ಮನಸ್ಸು ಚಂಚಲವಾದದ್ದಕ್ಕಾಗಿ ನನಗೆ ಬಹಳ ಅಸಮಾಧಾನವಾಗಿದೆ. ಮನಸ್ಸೇ ಬಂಧನಕ್ಕೂ, ಮೋಕ್ಷಕ್ಕೂ ಕಾರಣವಾಗಿರುವದೆಂತಲೂ, ವಿಷಯಾಸಕ್ತಿಯೇ ಬಂಧನವು, ವಿಷಯದಲ್ಲಿಯ ಅನಾಸಕ್ತಿಯೇ ಮೋಕ್ಷವು ಎಂತಲೂ, ಭಗವಂತನು ಗೀತೆಯಲ್ಲಿ ಹೇಳಿರುವನೆಂದು ದೊಡ್ಡವರ ಮುಖದಿಂದ ಕೇಳಿರುತ್ತೇನೆ. ಸತ್ಸಮಾಗಮದಿಂದ ನಿಸ್ಸಂಗತ್ವವು ಪ್ರಾಪ್ತವಾಗುವದರ ಬದಲು, ನನ್ನ ಮನಸ್ಸು ಮೋಹಾಸಕ್ತವಾಗುವದಲ್ಲ! ಇದರ ಕಾರಣವೇನಿರಬಹುದು? ಮೂಢನಾದ ನಾನು ಪಶ್ಚಾತ್ತಾಪದಿಂದ ಶರಣುಬಂದಿದ್ದೇನೆ. ನನ್ನ ಮನಸ್ಸನ್ನು ಶಾಂತಗೊಳಿಸಬೇಕು.

ಈ ಮೇರೆಗೆ ಸರಳ ಹೃದಯದ ಜಗತ್ಸಿಂಗನು ಸಂಕೋಚವಿಲ್ಲದೆ ತಟ್ಟನೆ ಆಡಿದ ಮಾತುಗಳನ್ನು ಕೇಳಿ ಅಭಿರಾಮಸ್ವಾಮಿಗಳು ಕೌತುಕಪಟ್ಟು ನಗೆಮೊಗದಿಂದ ಆತನನ್ನು ಕುರಿತು—ವತ್ಸ, ಜಗತ್ಸಿಂಗ, ನಿನ್ನ ಸರಳ ಹೃದಯವೂ, ಸ್ಪಷ್ಟೋಕ್ತಿಯೂ ನಿನ್ನ ಪೌರುಷಕ್ಕೆ ಬಹಳವಾಗಿ ಒಪ್ಪುತ್ತವೆ. ಯಾವ ಅನುಭವವೂ ಇಲ್ಲದ ನೀನು ದೊಡ್ಡವರ ಮಾತುಕೇಳಿ, ಅದರಂತೆ ನನ್ನ ಸ್ಥಿತಿಯಾಗಲಿಲ್ಲೆಂದು ಪಶ್ಚಾತ್ತಾಪಪಡುವದು ಸರಿಯಲ್ಲ, ತಮ್ಮಾ ಸಂಗದ ಅನುಭವವೇ ಇಲ್ಲದ ನಿನಗೆ ನಿಸ್ಸಂಗದ ಕಲ್ಪನೆಯೇಕೆ? ದೊಡ್ಡವರ ಬೋಧವನ್ನು ಕೇಳಿದ ಮಾತ್ರದಿಂದ, ಅಥವಾ ಅವರ ಬೋಧ ವಚನಗಳನ್ನು ಗಟ್ಟಿಮಾಡಿ ಬಾಯಿಂದ ಉಚ್ಚರಿಸಿದ ಮಾತ್ರದಿಂದ ದೊಡ್ಡವರ ಮಾತಿನ ಅನುಭವವು ನಿನಗೆ ಬರಲಾರದು. ಈ ಕಲಿಯುಗದಲ್ಲಿ ಜನರ ನಾಲಿಗೆಗಳು ಉದ್ದವಾಗಿರುತ್ತವಲ್ಲದೆ, ಕೈಗಳು ಉದ್ದವಾಗಿರುವದಿಲ್ಲ; ಅಂದರೆ, ವೇದಾಂತವು ಜನರ ಬಾಯಿಯಲ್ಲಿರುತ್ತದಲ್ಲದೆ, ಕೃತಿಯಲ್ಲಿ ತೋರಬರುವದಿಲ್ಲ, ದೊಡ್ಡ ದೊಡ್ಡ ವೇದಾಂತ

ಗ್ರಂಥಗಳನ್ನು ಓದಿದ ಮಾತ್ರದಿಂದ, ಅಥವಾ ವೇದಾಂತ ವಿಷಯವನ್ನು ಸರಸವಾಗಿ ಬೋಧಿಸಿದ ಮಾತ್ರದಿಂದ ನಾವು ಜ್ಞಾನಿಗಳಾದೆವೆಂದು ದುರಭಿಮಾನಪಡುವವರು ಎಂದಿಗೂ ನೆಲೆಗಾಣುವದಿಲ್ಲ. ಜಗತ್ಸಿಂಗ, ದುಡ್ಡು ಕೊಟ್ಟರೆಲ್ಲ ನೂರು ಕುಳ್ಳುಗಳು ಸಿಗುತ್ತವೆ; ಆದರೆ ಸುಟ್ಟುಕೊಳ್ಳುವವರಿಲ್ಲದಿದ್ದರೆ ಕುಳ್ಳು ಸಿಕ್ಕ ಪ್ರಯೋಜನವೇನು ಹೇಳು? ಅದರಂತೆ, ಸದ್ಬೋಧಗಳನ್ನು ವಿಪುಲವಾಗಿ ಕೇಳಿದರೂ, ಆ ಬೋಧ ವಚನಗಳಂತೆ ನಡೆಯುವದಕ್ಕಾಗಿ ತಪಶ್ಚರ್ಯ ಮಾಡದಿದ್ದರೆ, ಆ ಬೋಧ ವಚನಗಳನ್ನು ಕೇಳಿ ಪ್ರಯೋಜ ನವೇನು? ಪಾಪ, ಇನ್ನೂ ತುಟಿಯ ಹಾಲು ಆರದ ನೀನು, ಇಂಥ ಭ್ರಾಂತಿಗೆ ಈಡಾಗಬೇಡ. ನಿನ್ನ ಮನಸ್ಸು ಈಗ ವ್ಯಾಮೋಹಕ್ಕೊಳಗಾದದ್ದು ಅಯೋಗ್ಯವಲ್ಲ; ಯಾಕಂದರೆ, ಅದು ಅಯೋಗ್ಯಸ್ಥಾನದಲ್ಲಿ ಮೋಹಿಸಿರುವದಿಲ್ಲ. ದುಷ್ಯಂತನು ಶಕುಂತಲೆಗೆ ಮೋಹಿಸಿದಂತೆ ನೀನು ಈಗ ತಿಲೋತ್ತಮೆಗೆ ಮೋಹಿಸಿರುತ್ತೀ. ಬಲವತ್ತರವಾದ ಸತ್ಸಂಗದಿಂದ ನಿಸ್ಸಂಗ ಸ್ಥಿತಿಯು ಪ್ರಾಚೀನ ಪುಣ್ಯದಿಂದ ಸಾಧಕನಿಗೆ ತಾನೇ ಪ್ರಾಪ್ತವಾಗಬೇಕಲ್ಲದೆ, ನಾನು ನಿಸ್ಸಂಗವಾಗಬೇಕೆಂದು ವ್ಯರ್ಥ ಪೇಚಾಡಿದರೆ ಯಾವನೂ ನಿಸ್ಸಂಗನಾಗಲಾರನು. ಹೀಗಾಗಬೇಕೆಂದು ಮಾಡಿದ್ದೆಲ್ಲ ವೇಷವಾಗ ಬಹುದಲ್ಲದೆ ಸತ್ಯಸ್ವರೂಪವಾಗಲಾರದು. ಒಮ್ಮೆಲೆ ಮೋಹವನ್ನು ಬಿಡುವದಕ್ಕಿಂತ, ಅಯೋಗ್ಯ ವಿಷಯದಲ್ಲಿ ಮೋಹವುಂಟಾಗದಂತೆ ಜಾಗರೂಕನಾಗಿರುವದು ಪ್ರಥಮ ಸಾಧನವು. ನೀನು ಮಹಾ ಕುಲೀನನಾದದ್ದರಿಂದಲೂ, ಸತ್ಸಂಗದಲ್ಲಿ ಗೃಹಶಿಕ್ಷಣವನ್ನು ಹೊಂದುತ್ತ ನೀನು ದೊಡ್ಡವನಾಗಿ ರುವದರಿಂದಲೂ ಸ್ವೇಚ್ಛಾವೃತ್ತಿಯ ನರಪಶುಗಳಂತೆ ಅಯೋಗ್ಯ ಸ್ಥಾನದಲ್ಲಿ ನಿನಗೆ ಮೋಹವು ಉತ್ಪನ್ನವಾಗುವ ಸಂಭವವೇ ಇಲ್ಲ. ಜಗತ್ಸಿಂಗ, ತಿಲೋತ್ತಮೆಯನ್ನು ನಿನ್ನ ಸಲುವಾಗಿಯೇ ಬ್ರಹ್ಮದೇವನು ಸೃಷ್ಟಿಸಿರುವನೆಂದು ತಿಳಿ. ನಿಮ್ಮಿಬ್ಬರಲ್ಲಿ ಪರಸ್ಪರರ ವಿಷಯವಾಗಿ ಹುಟ್ಟಿದ ಸ್ವಾಭಾವಿಕ ಪ್ರೇಮವು ಏನು ಮಾಡಿದರೂ ನಷ್ಟವಾಗಲಾರದು. ಬ್ರಹ್ಮಸಂಕಲ್ಪವನ್ನು ಮೀರುವವರು ಯಾರಿರುವರು? ಆದ್ದರಿಂದ, ತಿಲೋತ್ತಮೆಯ ಪಾಣಿಗ್ರಹಣವನ್ನು ನೀನು ಮಾಡಲೇಬೇಕು; ಆದರೆ ಈ ಯೋಗವು ಈಗಲೇ ಒದಗುವ ಹಾಗಿಲ್ಲ. ಅದು ಪರಿಣಾಮದಲ್ಲಿ ಸುಖಕರವಾಗಿದ್ದರೂ ಸದ್ಯಕ್ಕೆ ಕಷ್ಟದಾಯಕವಾಗಿರುತ್ತದೆ. ಆದ್ದರಿಂದ ನೀನು ಬೆಳಗಾಗುತ್ತಲೆ ನಿನ್ನ ತಂದೆಯ ಬಳಿಗೆ ಹೋಗು. ಪಠಾಣರ ಶಾಸನದ ಕೆಲಸವು ಮುಗಿದ ಬಳಿಕ ತಿಲೋತ್ತಮೆಯ ಸಹವಾಸವು ನಿನಗೆ ಸುಖಪ್ರದವಾಗುವದು. ಅಲ್ಲಿಯವರೆಗೆ ನಿನ್ನ ಮನಸ್ಸು ಎಷ್ಟು ಜಗ್ಗಿದರೂ ತಿಲೋತ್ತಮೆಯ ಗೊಡವಿಗೆ ನೀನು ಹೋಗಬೇಡ, ಪುನಃ ಆಕೆಯ ದರ್ಶನವು ಕೂಡ ನಿನಗೆ ನಿಷೇಧವೆಂದು ತಿಳಿ. ತಿಲೋತ್ತಮೆಯ ವಿವಾಹಕ್ಕೆ ನಿನ್ನ ಹಿರಿಯರ ಅನುಮತಿಯೂ ಬೇಕಾಗಿರುವದು.

ಈ ಮೇರೆಗೆ ಅಭಿರಾಮಸ್ವಾಮಿಗಳು, ತನ್ನ ಮನಸ್ಸಿನೊಳಗಿದ್ದದ್ದನ್ನು ಬಿಚ್ಚಿ ಹೇಳಿ, ತಿಲೋತ್ತಮೆಯ ಪಾಣಿಗ್ರಹಣಕ್ಕೆ ಒಪ್ಪಿಗೆಯಿತ್ತದ್ದಕ್ಕಾಗಿ ಜಗತ್ಸಿಂಗನಿಗೆ ಪರಮಾನಂದವಾಯಿತು. ತಿಲೋತ್ತಮೆಯೂ ತನ್ನನ್ನು ಧನ್ಯಳೆಂದು ತಿಳಿದು, ಗುರುಗಳಾದ ಅಭಿರಾಮಸ್ವಾಮಿಗಳು ತನ್ನನ್ನು ಅನುಗ್ರಹಿಸಿದ್ದಕ್ಕಾಗಿ ಶತಶಃ ಅವರನ್ನು ಮನಸ್ಸಿನಿಂದ ಅಭಿವಂದಿಸಿದಳು. ತನ್ನ ಮಗಳಿಗೆ ಯೋಗ್ಯ

ವರನು ಅನಾಯಾಸವಾಗಿಯೇ ಸಿಕ್ಕಿದ್ದಕ್ಕಾಗಿ ವಿಮಲಾದೇವಿಗೂ ಪರಮಾನಂದವಾಯಿತು. ಹೀಗೆ ಆ ಶಿವಾಲಯದಲ್ಲಿ ಆನಂದದ ಸಾಮ್ರಾಜ್ಯವು ಉಂಟಾದಂತೆಯಾಗಿದ್ದರೂ, ತಿಲೋತ್ತಮೆಯ ಪಾಣಿಗ್ರಹಣ ಕಾರ್ಯದಲ್ಲಿ ವಿಲಂಬವಾಗುವದನ್ನು ನೋಡಿ ವಿಮಲಾದೇವಿಗೆ ಸ್ವಲ್ಪ ಅಸಮಾಧಾನವಾಯಿತು. ಆಕೆಯು ಅಭಿರಾಮಸ್ವಾಮಿಗಳನ್ನು ಕುರಿತು ವಿನಯದಿಂದ— ಮಹಾಸ್ವಾಮಿ, ತಮ್ಮ ಆಜ್ಞೆಯು ಶಿರಸಾ ವಂದ್ಯವಾಗಿರುವದು; ಆದರೆ ದೇಶದ ಈಗಿನ ಸ್ಥಿತಿಯನ್ನೂ, ತಿಲೋತ್ತಮೆಯ ರೂಪ–ಲಾವಣ್ಯಗಳನ್ನೂ, ನಮ್ಮ ಕ್ಷುದ್ರ ಬಲವನ್ನೂ ಮನಸ್ಸಿನಲ್ಲಿ ತಂದು ವಿಚಾರಿಸಿದರೆ, ತಿಲೋತ್ತಮೆಯು ಒಬ್ಬ ಬಲಿಷ್ಠನ ಪಾಣಿಗ್ರಹಣವನ್ನು ಆದಷ್ಟು ಬೇಗನೆ ಮಾಡಿಬಿಡುವದು ನನಗೆ ಹಿತಕರವಾಗಿ ತೋರುತ್ತದೆ. ಅವಿವಾಹಿತರಾದ ಸುಂದರ ತರುಣಿಯರಿಗೆ ದುಷ್ಟ ಮುಸಲ್ಮಾನರಿಂದ ಯಾವ ಕಾಲಕ್ಕೆ ಎಂಥ ಮಾನಹಾನಿಯ ಪ್ರಸಂಗವು ಒದಗೀತೆಂಬದನ್ನು ಹೇಳಲಾಗುವದಿಲ್ಲ. ಅಲ್ಲಾಉದ್ದೀನನ ಕಾಲದಿಂದ ಸ್ತ್ರೀ ವಿಷಯಕವಾದ ಅನಿಷ್ಟ ವರ್ತನಗಳು ಮುಸಲ್ಮಾನರಿಂದ ಬಹಳವಾಗಿ ಒದಗುತ್ತ ಬಂದಿರುತ್ತವೆ. ತಿಲೋತ್ತಮೆಯ ಪಾಣಿಗ್ರಹಣದ ಆಶೆಯು ಬಹುಜನ ರಜಪೂತ ಸಂಸ್ಥಾನಿಕರಲ್ಲಿಯೂ ಉತ್ಪನ್ನವಾಗಿದ್ದು ಅವರು ತಿಲೋತ್ತಮೆಯ ಪ್ರಾಪ್ತಿಗಾಗಿ ಹಲವು ಮುಖಗಳಿಂದ ಯತ್ನಿಸತೊಡಗಿರುತ್ತಾರೆ. ಹೀಗೆ ತಿಲೋತ್ತಮೆಯು ಬಹುಜನರ ಆಶೆಗೆ ಗುರಿಯಾಗಿರುವಾಗ ನಾವು ಆಕೆಯ ವಿವಾಹವನ್ನು ಆದಷ್ಟು ಬೇಗನೆ ಮಾಡಿ ಬಿಡುವದು ನೆಟ್ಟಗೆ ಕಾಣುತ್ತದೆ. ಅನಾಯಾಸವಾಗಿ ಈಶ್ವರನು ಸುಯೋಗವನ್ನು ಒದಗಿಸಿಕೊಟ್ಟಿರುವನು. ಈಗಲ್ಲದಿದ್ದರೂ ಇನ್ನು ತಿಂಗಳ ಮೇಲೆಯಾದರೂ ತಿಲೋತ್ತಮೆಯ ವಿವಾಹಯೋಗವು ಒದಗಿಬರುವಂತೆ ಅನುಗ್ರಹಿಸ ಬೇಕೆಂದು ಪ್ರಾರ್ಥಿಸುವೆನು.

ವಿಮಲಾದೇವಿಯ ಮಾತುಗಳು ಅಯೋಗ್ಯವಾದವುಗಳಿದ್ದಿಲ್ಲವಾದರೂ ದೊಡ್ಡವರ ಮಾತಿನಲ್ಲಿ ವಿಶ್ವಾಸವಿಟ್ಟು ಆಕೆಯು ಸಮಾಧಾನ ತಾಳಬೇಕಾಗಿತ್ತು; ಆದರೆ ಸಾಂಸಾರಿಕರಿಗೆ ಅಂಥ ತಾಳ್ಮೆಯೂ, ದೃಢವಾದ ವಿಶ್ವಾಸವೂ ಹ್ಯಾಗೆ ಉಂಟಾಗಬೇಕು? ಸಾಂಸಾರಿಕರು, ದೊಡ್ಡವರು ಹೇಳಿದ ಮಾತುಗಳಲ್ಲಿ ತಮಗೆ ಅನುಕೂಲವಾದವುಗಳನ್ನು ಮಾತ್ರ ಕೇಳುವರು, ಪ್ರತಿಕೂಲವಾಗಿ ಹೇಳಿದ ಮಾತುಗಳನ್ನು ಉಪಾಯಾಂತರದಿಂದ ಮೀರಲಿಕ್ಕೆ ಯತ್ನಿಸುವರು. ವಿಮಲಾದೇವಿಯ ಸ್ಥಿತಿಯು ಹೀಗೆಯೇ ಆಯಿತು. ಅಭಿರಾಮ ಸ್ವಾಮಿಗಳು ಆಕೆಯ ಮಾತಿಗೆ ಅಡ್ಡಹೋಗಲಿಲ್ಲ, ಯೋಗ್ಯವಾದ ಸೂಚನೆಗಳನ್ನು ಮಾಡುವದು ದೊಡ್ಡವರ ಕೆಲಸವಲ್ಲದೆ, ತಮ್ಮ ಮಾತು ನಡೆಯಬೇಕೆಂದು ಆಗ್ರಹ ಮಾಡುವದು ಅವರ ಕೆಲಸವಲ್ಲ. ಅದರಂತೆ ಅಭಿರಾಮ ಸ್ವಾಮಿಗಳು ವಿಮಲಾದೇವಿಗೆ—ಅಹುದು, ನೀವನ್ನುವದು ಸುಳ್ಳಲ್ಲ. ನಿಮ್ಮ ಮಾತನ್ನು ನಾನು ಅಲ್ಲಗಳೆ ಯುವದಿಲ್ಲ, ಯೋಗವಿದ್ದಂತೆ ಆಗಲಿ. ಬ್ರಹ್ಮ ಸಂಕಲ್ಪವನ್ನು ತಪ್ಪಿಸುವದು ಯಾರಿಂದಲೂ ಆಗದು. ಜಗತ್ಸಿಂಗನ ಒಪ್ಪಿಗೆಯಿದ್ದರೆ, ಇನ್ನು ತಿಂಗಳಮೇಲೆ ತಿಲೋತ್ತಮೆಯ ವಿವಾಹ ಸಮಾರಂಭವನ್ನು ಜರುಗಿಸಬಹುದು. ಈಗಿನ ಯುದ್ಧ ಪ್ರಸಂಗದಲ್ಲಿ ಮಾನಸಿಂಗರವರು ಮಾತ್ರ ಮಗನ ವಿವಾಹಕ್ಕೆ ಒಪ್ಪಿಗೆ ಕೊಡಲಿಕ್ಕಿಲ್ಲ; ಮೇಲಾಗಿ ನಮ್ಮಂಥ ಸಣ್ಣ ಸಂಸ್ಥಾನಿಕರೊಡನೆ ಸಂಬಂಧ ಮಾಡಲಿಕ್ಕೂ ಅವರು ಒಪ್ಪಿಕೊಳ್ಳಲಿಕ್ಕಿಲ್ಲ, ಎಂದು ನುಡಿದು

ಅವರು ಸುಮ್ಮನಾದರು. ಜಗತ್ಸಿಂಗನಾದರೂ ತಿಲೋತ್ತಮೆಯ ವಿವಾಹವನ್ನು ಬೇಗನೆ ಮಾಡಿಕೊಳ್ಳುವದಕ್ಕಾಗಿ ಆತುರಪಡುತ್ತಿದ್ದನು. ಆದ್ದರಿಂದ ಆತನು ವಿಮಲಾದೇವಿಯ ಮಾತನ್ನು ನಿಷೇಧಿಸದೆ, ಮೌನದಿಂದಿದ್ದು ಆಕೆಯ ಮಾತಿಗೆ ತನ್ನ ಅರ್ಧ ಸಮ್ಮತಿಯನ್ನಿತ್ತ ಹಾಗೆ ಮಾಡಿದನು. ಪರೇಂಗಿತಜ್ಞರಾದ ಅಭಿರಾಮಸ್ವಾಮಿಗಳು ಭವಿತ್ಯವನ್ನು ತಪ್ಪಿಸುವದು ಶಕ್ಯವಲ್ಲೆಂದು ಬಗೆದು ಸುಮ್ಮನಿದ್ದುಬಿಟ್ಟರು.

## ಸಹಜಪ್ರೇಮ

ಮರುದಿನ ಜಗತ್ಸಿಂಗನು ಅಭಿರಾಮಸ್ವಾಮಿಗಳ ಅಪ್ಪಣೆಯಿಂದ ಹೊರಡಲು ಸಿದ್ಧನಾದನು. ಅಂದಿನಿಂದ ಒಂದು ತಿಂಗಳಿಗೆ ಮಂದಾರಣಗಡಕ್ಕೆ ವಿವಾಹಾರ್ಥವಾಗಿ ಆತನು ಬರಬೇಕೆಂದು ಗೊತ್ತಾಗಿತ್ತು. ಜಗತ್ಸಿಂಗನು ವೇಗದಿಂದ ಮಾರ್ಗವನ್ನು ಕ್ರಮಿಸಿ, ಜಹಾನಾಬಾದದಲ್ಲಿ ಸೈನ್ಯದ ಬೀಡು ಬಿಟ್ಟುಕೊಂಡು ಕುಳಿತಿದ್ದ ತನ್ನ ತಂದೆಯ ಬಳಿಗೆ ಹೋದನು. ಬಂಡುಖೋರನಾದ ಕಾತಲುಖಾನನ ಐವತ್ತುಸಾವಿರ ಪಠಾಣ ಸೈನ್ಯವು ಘಾರಪುರದ ಬಳಿಯಲ್ಲಿರುತ್ತದೆಂಬ ಸುದ್ದಿಯು ಮಗನಿಂದ ಮಾನಸಿಂಹ ಮಹಾರಾಜರಿಗೆ ಗೊತ್ತಾಯಿತು. ಕೂಡಲೆ ಆ ಅಂಬರಾಧೀಶ್ವರನು ದರ್ಬಾರು ನೆರೆಸಿದನು. ಶೂರರು ಉಚಿತಾಸನಗಳಲ್ಲಿ ಕುಳಿತುಕೊಂಡಿದ್ದರು. ಆಗ ಮಾನಸಿಂಹನು ಪಠಾಣರ ಶಾಸನ ಮಾಡುವದನ್ನು ಕುರಿತು ಸ್ಫೂರ್ತಿಯು ಉತ್ಪನ್ನವಾಗುವಂತೆ ಮಾಡಲು, ದರ್ಬಾರದೊಳಗಿನ ವೀರರ ಬಾಹುಗಳು ಸ್ಫುರಣಗೊಂಡವು. ಪಠಾಣರ ಶಾಸನ ಮಾಡಲು ನಾವು ಸಿದ್ಧರಿರುತ್ತೇವೆಂಬ ಭಾವವನ್ನು ಬಹು ಜನರು ವ್ಯಕ್ತಮಾಡಿದರು. ಈ ಪ್ರಸಂಗದಲ್ಲಿ ವೀರಾಗ್ರಣಿ ಯಾದ ಜಗತ್ಸಿಂಗ ನಿಂದ ಸುಮ್ಮನಿರುವದಾಗಲಿಲ್ಲ. ಆತನ ಮನಸ್ಸನ್ನು ತಿಲೋತ್ತಮೆಯು ಸಂಪೂರ್ಣವಾಗಿ ಆಕರ್ಷಿಸಿಕೊಂಡದ್ದರಿಂದ, ಇನ್ನು ಒಂದು ತಿಂಗಳಮೇಲೆ ಆಕೆಯ ಪಾಣಿಗ್ರಹಣ ಮಾಡುವದು ಅವಶ್ಯವಾಗಿರಲು, ತಾನು ಈ ಯುದ್ಧದ ಗೊಂದಲದಲ್ಲಿ ಸೇರುವದು ಯೋಗ್ಯ ವಲ್ಲೆಂದು ತಿಳಿದು, ಮೊದಮೊದಲು ಆತನು ಸುಮ್ಮನಿದ್ದನು. ಆದರೆ ದರ್ಬಾರದೊಳಗಿನ ಅಂದಿನ ಉಜ್ವಲ ಪ್ರಸಂಗವನ್ನು ನೋಡಿ, ಅವನ ಸ್ವಾಭಾವಿಕವಾದ ಕ್ಷಾತ್ರತೇಜವು ಪ್ರಕಟವಾದದ್ದರಿಂದ, ವೀರಾವೇಶದಲ್ಲಿ ಆತನು ತಿಲೋತ್ತಮೆಯನ್ನು ಮರೆತು ಸಭೆಯಲ್ಲಿ ಎದ್ದುನಿಂತು–ಮಹಾರಾಜ, ನಾನು ಐದುಸಾವಿರ ರಜಪೂತ ಸೈನ್ಯದೊಡನೆ ಹೋಗಿ, ಪಠಾಣರನ್ನು ಸುವರ್ಣರೇಖಾ ನದಿಯ ಆಚೆಯ ಕಡೆಗೆ ಅಟ್ಟಿಬರುವೆನು, ಎಂದು ಪ್ರತಿಜ್ಞಾಪೂರ್ವಕವಾಗಿ ನುಡಿದು, ಸಭಾ ತಾಂಬೂಲವನ್ನು ಸ್ವೀಕರಿಸಿದನು. ವೀರೋಚಿತವಾದ ಮಗನ ಈ ಕೃತಿಯನ್ನು ನೋಡಿ ಮಾನಸಿಂಹನಿಗೆ ಬಹಳ ಸಂತೋಷವಾಯಿತು. ಆಗ ಜಗತ್ಸಿಂಗನು ತಂದೆಯ ಅಪ್ಪಣೆಯನ್ನು ಪಡೆಯುವದಕ್ಕಾಗಿ ಆತನ ಚರಣಕ್ಕೆರಗಲು, ಮಾನಸಿಂಹನು ಅಭಿಮಾನದಿಂದ ವಾತ್ಸಲ್ಯ ಪೂರ್ವಕವಾಗಿ ಆತನನ್ನು ಹಿಡಿದೆತ್ತಿ ಉತ್ಸಾಹದಿಂದ ಆತನಿಗೆ ಅಪ್ಪಣೆ ಕೊಟ್ಟು ಕಳುಹಿದನು.

ತಂದೆಯ ಅಪ್ಪಣೆಯಂತೆ ಜಗತ್ಸಿಂಗನು ಸೈನ್ಯದೊಡನೆ ದಂಡಯಾತ್ರೆಗೆ ಹೊರಟನು. ಆತನು ಆಕಸ್ಮಿಕವಾಗಿ ಪಠಾಣರ ಮೇಲೆ ಬೀಳಲು, ಘೋರವಾದ ಕದನಕ್ಕೆ ಆರಂಭವಾಯಿತು. ಕಾತಲುಖಾನನ ಪಠಾಣ ಸೈನ್ಯದವರು ರಜಪೂತರಿಗೆ ಸೊಪ್ಪು ಹಾಕುವಹಾಗಿದ್ದಿಲ್ಲ; ಆದರೆ ಅವರು ಎಚ್ಚರಗಟ್ಟಿರುವಾಗ ಜಗತ್ಸಿಂಗನು ಆಕಸ್ಮಿಕವಾಗಿ ಅವರ ಮೇಲೆ ಬಿದ್ದದ್ದರಿಂದ ಅವರ ಸೈನ್ಯದ ಪ್ರಾಣ ಹಾನಿಯು ವಿಶೇಷವಾಗಿ ಆಗಹತ್ತಿತ್ತು. ಜಗತ್ಸಿಂಗನ ಸೈನ್ಯವು ಸಂಖ್ಯೆಯಿಂದ ಕಡಿಮೆಯಿದ್ದರೂ, ಆರಿಸಿದ ಆತನ ಸೈನಿಕರು ಯುದ್ಧವ್ಯಾಪಾರದಲ್ಲಿ ಒಳಿತಾಗಿ ನುರಿತವ ರಾಗಿದ್ದರು; ಮೇಲಾಗಿ ಸ್ವತಃ ಜಗತ್ಸಿಂಗನು ಅಲೌಕಿಕ ವೀರರಲ್ಲಿ ಗಣಿಸಲ್ಪಡುತ್ತಿದ್ದನು. ಇಂಥ ಗುಣ ಪರಿಪೂರ್ಣವಾದ ರಜಪೂತ ಸೈನ್ಯಕ್ಕೆ ಬಂಡುಗಾರರಾದ ಪಠಾಣರು ಈಡಾಗಲಿಲ್ಲ. ದಿನದಿನಕ್ಕೆ ಯುದ್ಧದಲ್ಲಿ ಅವರು ಹಣ್ಣಾಗ್ಗಹತ್ತಿದರು. ಅವರಿಗೆ ನೆಲೆಯೂರಿ ನಿಲ್ಲಲಿಕ್ಕೆ ಆಸ್ಪದವು ದೊರೆಯದಾಯಿತು. ಹೀಗೆಯೇ ಇನ್ನು ಕೆಲವು ದಿನ ಜಗತ್ಸಿಂಗನು ಎಡೆಬಿಡದೆ ಪಠಾಣರ ಬೆನ್ನುಹತ್ತಿದ್ದರೆ, ಆತನ ಪ್ರತಿಜ್ಞೆಯು ಸಹಜವಾಗಿ ನೆರವೇರುವ ಹಾಗಿತ್ತು. ಪಠಾಣರು ಸುವರ್ಣರೇಖಾ ನದಿಯ ಆಚೆಗೆ ಅಟ್ಟಲ್ಪಡು ತ್ತಿದ್ದರಷ್ಟೇ ಅಲ್ಲ, ಅವರು ಜಗತ್ಸಿಂಗನಿಗೆ ನಿಶ್ಚಯವಾಗಿ ಶರಣು ಬರುತ್ತಿದ್ದರು; ಆದರೆ ತಿಲೋತ್ತಮೆಯ ವಿವಾಹಕ್ಕಾಗಿ ಮಂದಾರಣಗಡಕ್ಕೆ ಹೋಗುವ ಕಾಲವು ಸಮೀಪಿಸಿದಂತೆ, ಜಗತ್ಸಿಂಗನ ಮನಸ್ಸು ಚಂಚಲವಾಗತೊಡಗಿತು. ಸ್ತ್ರೀ ವ್ಯಾಮೋಹವೇ ಕಾರ್ಯಘಾತಕವು, ಅದರಲ್ಲಿ ಸಮರ ಭೂಮಿಯಲ್ಲಿಯಂತೂ ಆ ಅವಸಾನ ಘಾತಕವೃತ್ತಿಗೆ ಸರ್ವಥಾ ಆಸ್ಪದವು ದೊರೆಯತಕ್ಕದ್ದಲ್ಲ; ಆದರೆ ದುರ್ದೈವದಿಂದ ಜಗತ್ಸಿಂಗನಂಥ ಕೆಚ್ಚೆದೆಯ ನಿಷ್ಠುರ ಪ್ರತಿಜ್ಞೆಯ ವೀರನು ಕೂಡ ತಿಲೋತ್ತಮೆಯ ವ್ಯಾಮೋಹಕ್ಕೆ ಒಳಗಾದನು. ಇದರಿಂದ ಆತನ ಸತ್ವವು ಕಡಿಮೆಯಾಗುತ್ತ ಹೋದದ್ದರಿಂದ, ಪಠಾಣರಿಗೆ ಸ್ವಲ್ಪ ವಿಶ್ರಾಂತಿಯು ದೊರೆತಂತಾಯಿತು. ಅಷ್ಟರಲ್ಲಿ ಗೊತ್ತಾದ ದಿವಸವು ಬಂದೊದಗಲು, ಜಗತ್ಸಿಂಗನು ಪ್ರಸಂಗವನ್ನು ಲಕ್ಷಿಸದೆ, ವಿವಾಹವಾದ ಕೂಡಲೆ ಬರೋಣವೆಂದು ತಿಳಿದು, ತನ್ನ ಸೈನ್ಯದಲ್ಲಿಯ ಮುಖ್ಯಸ್ಥನಿಗೆ ಯಾವದೋ ಒಂದು ನೆವಹೇಳಿ ತಾನು ಮಂದಾರಣಗಡದ ಕಡೆಗೆ ಸಾಗಿದನು. ಆತನ ಕುದುರೆಯು ಗಡದ ಸನಿಯಕ್ಕೆ ಹೋಗುತ್ತಿರಲು, ಪೂರ್ವ ಸಂಕೇತದಂತೆ ಸ್ವತಃ ವಿರೇಂದ್ರಸಿಂಹನು ಮರ್ಯಾದೆಯಿಂದ ಬಂದು ಅಳಿಯನನ್ನು ದುರ್ಗದೊಳಗೆ ಕರಕೊಂಡು ಹೋದನು.

ತನ್ನ ಈ ವಿವಾಹವು ತನ್ನ ತಂದೆಯ ಮನಸ್ಸಿಗೆ ಬರುವ ಹಾಗಿದ್ದಿಲ್ಲೆಂಬುದು ಸ್ವತಃ ಜಗತ್ಸಿಂಗನಿಗೆ ಗೊತ್ತಿದ್ದರಿಂದ, ಆತನು ತನ್ನ ವಿವಾಹಕ್ಕೆ ತಂದೆಯ ಒಪ್ಪಿಗೆಯನ್ನು ಕೇಳುವಹಾಗಿದ್ದಿಲ್ಲ. ತಂದೆಯ ಘನವಂತಿಕೆಯೂ, ಕುಲಾಭಿಮಾನವೂ, ಕಾರ್ಯದಕ್ಷತೆಯೂ ಜಗತ್ಸಿಂಗನಿಗೆ ಗೊತ್ತಿದ್ದವು; ಆದ್ದರಿಂದ ಇಂಥ ಯುದ್ಧದ ದಿವಸಗಳಲ್ಲಿ ವೀರೇಂದ್ರಸಿಂಹನಂಥ ಕ್ಷುದ್ರ ಸಂಸ್ಥಾನಿಕನ ಮಗಳನ್ನು ಲಗ್ನವಾಗುವದಕ್ಕೆ ತಂದೆಯು ಒಪ್ಪಿಕೊಳ್ಳುವದಿಲ್ಲೆಂದು ತಿಳಿದು, ಈ ವಿವಾಹವನ್ನು ಗುಪ್ತವಾಗಿಯೇ ಮಾಡಿಕೊಳ್ಳಬೇಕೆಂದು ಆತನು ನಿಶ್ಚಯಿಸಿದ್ದನು; ಆದರೆ ಬೆಕ್ಕು ಕಣ್ಣು ಮುಚ್ಚಿ ಹಾಲು ಕುಡಿಯುವದನ್ನು ಮಂದಿಯು ನೋಡುವದಿಲ್ಲವೆ? ಅದರಂತೆ

ಜಗತ್ಸಿಂಗನ ಈ ಲಗ್ನದ ಒಳಸಂಚು ಅವನ ಸೈನ್ಯದೊಳಗಿನ ಜನರಿಗೆ ಗೊತ್ತಿತ್ತು. ಬಂಡುಗಾರರಾದ ಪಠಾಣರಂತು ಗುಪ್ತಚಾರರ ಮುಖಾಂತರ ಈ ಲಗ್ನದ ವರ್ತಮಾನವನ್ನು ನಿಸ್ಸಂಶಯವಾಗಿ ತಿಳಿದುಕೊಂಡಿದ್ದರು. ಜಗತ್ಸಿಂಗನು ಒಬ್ಬನೇ ಗುಪ್ತವಾಗಿ ಮಂದಾರಣಗಡಕ್ಕೆ ಹೊರಟದ್ದನ್ನು ತಿಳಿದು, ಪಠಾಣರು ತಾವು ಗುಪ್ತವಾಗಿ ಮಂದಾರಣಗಡಕ್ಕೆ ಒಮ್ಮೆಲೆ ಮುತ್ತಿಗೆ ಹಾಕಿ ಗಡದೊಳಗಿನವರನ್ನೆಲ್ಲ ಸೆರೆ ಹಿಡಿಯಬೇಕೆಂದು ನಿಶ್ಚಯಿಸಿದರು. ಈ ಕಾರ್ಯವನ್ನು ತಪ್ಪದೆ ಸಾಧಿಸಿಕೊಂಡರೆ, ಮಾನಸಿಂಹನು ಬಹು ಮಟ್ಟಿಗೆ ಹಣ್ಣಿಗೆ ಬರುವನೆಂದು ಅವರು ನಿಶ್ಚಯಿಸಿದ್ದರು. ಈ ಕಾರ್ಯಕ್ಕಾಗಿ ಅವರು ತಮ್ಮ ಆರಿಸಿದ ಸೈನ್ಯವನ್ನು ಕಾದು ಇಟ್ಟುಬಿಟ್ಟಿದ್ದರೆಂದು ಹೇಳಬಹುದು. ಹೀಗೆ ಮುಖ್ಯ ಸೈನ್ಯವನ್ನು ಕಾದಿಟ್ಟಿದ್ದರಿಂದ ಪಠಾಣರ ಸೈನ್ಯದ ಕಸುವು ಕಡಿಮೆಯಾಗಿ, ಅವರು ಯುದ್ಧದಲ್ಲಿ ಹಿಮ್ಮೆಟ್ಟಲಿಕ್ಕೆ ಬಹುಮಟ್ಟಿಗೆ ಕಾರಣವಾಗಿತ್ತು. ಪಠಾಣರು ತಾವು ಯೋಚಿಸಿದಂತೆ ತಮ್ಮ ಸೈನ್ಯವನ್ನು ಬಹು ಗುಪ್ತರೀತಿಯಿಂದ ಸಾಗಿಸಿಕೊಂಡು ಬಂದು, ಲಗ್ನದ ದಿವಸ ಮಧ್ಯರಾತ್ರಿಯಲ್ಲಿ ದುರ್ಗವನ್ನು ಪ್ರವೇಶಿಸಬೇಕೆಂದು ಹೊಂಚುಹಾಕಿದ್ದರು. ತಮ್ಮ ಈ ಗುಪ್ತಕಾರ್ಯಕ್ಕೆ ಅನುಕೂಲವಾಗಲಿಕ್ಕೆ ದುರ್ಗದೊಳಗಿನ ಕೆಲವು ಜನರನ್ನು ದುಡ್ಡುಕೊಟ್ಟು ಒಡಕೊಂಡಿದ್ದರು. ಈ ಸುದ್ದಿಯು ಜಗತ್ಸಿಂಗನಿಗಾಗಲಿ, ವೀರೇಂದ್ರಸಿಂಹನಿಗಾಗಲಿ ಗೊತ್ತಾಗಿದ್ದಿಲ್ಲ. ಲಗ್ನ ಸಮಾರಂಭದ ಸೌರಣೆಯಲ್ಲಿ ಎಲ್ಲರೂ ತೊಡಗಿದ್ದರು; ಆದರೆ ಈ ಪ್ರಸಂಗದಲ್ಲಿ ಅಭಿರಾಮಸ್ವಾಮಿಗಳು ದುರ್ಗದಲ್ಲಿ ಇಲ್ಲದ್ದರಿಂದ, ಲಗ್ನ ಸಮಾರಂಭದಲ್ಲಿ ವಿರಸವಾದಂತಾಗಿತ್ತು. ಅವರು ಎಲ್ಲಿ ಇರುವರೆಂಬದು ಯಾರಿಗೂ ಗೊತ್ತಿದ್ದಿಲ್ಲ.

ನಿಯಮಿಸಿದ ದಿವಸ ಜಗತ್ಸಿಂಗನು ತಪ್ಪದೆ ಬಂದದ್ದರಿಂದ ಗಡದೊಳಗಿನವರಿಗೆ ಬಹಳ ಸಂತೋಷವಾಗಿತ್ತು. ಅವರಲ್ಲಿ ವಿಮಲಾದೇವಿಗೂ, ತಿಲೋತ್ತಮೆಗೂ ಸ್ವರ್ಗವು ಮೂರೇ ಗೇಣು ಉಳಿದಿತ್ತು. ತನ್ನ ಮಗಳು ಜಗತ್ಸಿಂಗನಂಥ ಘನವಂತನ ಕೈ ಹಿಡಿದದ್ದರಿಂದ, ವೀರೇಂದ್ರಸಿಂಹನು ಬಹು ಉತ್ಸಾಹದಿಂದ ಲಗ್ನ ಸಮಾರಂಭದ ಕಾರ್ಯದಲ್ಲಿ ತೊಡಗಿದ್ದನು; ಆದರೆ ಈ ಮಂಗಲ ಕಾರ್ಯದಲ್ಲಿ ಅಭಿರಾಮಸ್ವಾಮಿಗಳು ಇಲ್ಲದೆಯಿದ್ದದ್ದು ಆತನಿಗೆ ದುರ್ಲಕ್ಷಣವಾಗಿ ತೋರಿ, ಅದಕ್ಕಾಗಿ ಆತನಿಗೆ ಆಗಾಗ್ಗೆ ಅಸಮಾಧಾನವಾಗುತ್ತಿತ್ತು; ಆದರೂ ಲಗ್ನ ಸಮಾರಂಭದ ಯಾವತ್ತು ವಿಧಿಗಳು ಯಥಾಸಾಂಗವಾಗಿ ನಡೆಯಹತ್ತಿದವು. ಮಂದಾರಣಗಡದ ಜನರು ಮಹೋತ್ಸವ ಮಗ್ನರಾಗಿದ್ದರು. ಜೇಷ್ಠ ಶುದ್ಧ ಪಂಚಮಿಯ ರಾತ್ರಿಯು. ಚಂದ್ರನು ಅದೇ ಮುಣುಗ ತೊಡಗಿರುತ್ತಾನೆ. ಅಷ್ಟರಲ್ಲಿ ಲಗ್ನ ಸಮಾರಂಭದ ಕಾರ್ಯಗಳೆಲ್ಲ ಮುಗಿದು, ಜಗತ್ಸಿಂಗನು ಏಕಾಂತ ಗೃಹವನ್ನು ಪ್ರವೇಶಿಸಿದನು. ಅಲಂಕೃತವಾಗಿದ್ದ ಆ ಏಕಾಂತ ಗೃಹದಲ್ಲೆಲ್ಲ ಸುಗಂಧವು ಇಡಿಗಿದೆ, ದೀಪಜ್ಯೋತಿಗಳಿಂದ ಅದು ಸುಪ್ರಕಾಶಿತವಾಗಿ ಲಕಲಕಿಸುತ್ತಲಿದೆ, ಲೋಕ ಸುಂದರಿಯಾದ ತಿಲೋತ್ತಮೆಯು ಲಜ್ಜೆಯಿಂದ ತಲೆಬಾಗಿ ನೆಲವನ್ನು ನೋಡುತ್ತ ಒಂದು ಮೂಲೆಯಲ್ಲಿ ನಿಂತಿದ್ದಾಳೆ, ಇನ್ನೂ ಜಗತ್ಸಿಂಗನು ಆ ತರುಣಿಯನ್ನು ಪ್ರೇಮ ಭರದಿಂದ ಬಿಗಿಯಾಗಿ ಅಪ್ಪಿಕೊಳ್ಳ ತಕ್ಕವನು; ಅಷ್ಟರೊಳಗೆ ದುರ್ಗದಲ್ಲಿ ಕಲಕಲ ಧ್ವನಿಯುಂಟಾಗಿ, ಜನರ ಆರ್ತಧ್ವನಿಯು ಕೇಳಿಸಹತ್ತಿತು. ಪಠಾಣರ ದೀನ ದೀನವೆಂಬ

ಧ್ವನಿಯು ಅಂತಗೃಹದ ಸಮೀಪದಲ್ಲಿಯೇ ಆಗಹತ್ತಿತು. ಆಗ ತಿಲೋತ್ತಮೆಯು ಭಯದಿಂದ ಜಗತ್ಸಿಂಗನ ಕೊರಳಿಗೆ ಬಿದ್ದಳು. ಅಷ್ಟರಲ್ಲಿ ವಿಮಲಾದೇವಿಯು ಓಡುತ್ತ ಬಂದು, ಅಂತಗೃಹದ ಬಾಗಿಲಲ್ಲಿ ನಿಂತು ರೋದನಮಾಡುತ್ತಿರಲು, ಜಗತ್ಸಿಂಗನು ಆಕೆಯನ್ನು ಒಳಗೆ ಕರಕೊಂಡು ಸುದ್ದಿಯೇನೆಂದು ಕೇಳಿದನು.

ಆಗ ವಿಮಲಾದೇವಿಯು ಜಗತ್ಸಿಂಗನನ್ನು ಕುರಿತು—ವತ್ಸ, ಜಗತ್ಸಿಂಗ, ಮಹಾತ್ಮರಾದ ಅಭಿರಾಮಸ್ವಾಮಿಗಳ ಮಾತುಮೀರಿ ವಿವಾಹ ಕಾರ್ಯವನ್ನು ಹಮ್ಮಿದ್ದು ಮಹಾಪರಾಧ ವಾಯಿತು. ಈ ಅನಿಷ್ಟ ಪ್ರಸಂಗವು ಒದಗುವದನ್ನು ತಿಳಿದೇ, ಆ ಮಹಾಪುರುಷರು ಎಲ್ಲಿಯೋ ಮಾಯವಾಗಿರುವರು. ದುಷ್ಟ ಪಠಾಣರು ಯಾವ ಮಾಯದಿಂದಲೋ ದುರ್ಗವನ್ನು ಪ್ರವೇಶಿಸಿ ನಿನ್ನ ಮಾವಂದಿರನ್ನು ಸೆರೆಹಿಡಿದರು. ಆ ಕಠಿಣ ಹೃದಯರಾದ ಯವನರು, ಅಗೋ ಇತ್ತ ಕಡೆಗೇ ಬಂದರು! ನಾವು ನಿನ್ನನ್ನು ಎಂಥ ಸಂಕಟಕ್ಕೆ ಗುರಿಮಾಡಿದೆವಲ್ಲ! ನಮ್ಮ ಗತಿಯೇನಾದರೂ ಆಗಲೊಲ್ಲದೇಕೆ; ಆದರೆ ವೀರಾಗ್ರಣಿಯಾದ ನೀನೂ, ನನ್ನ ಪಂಚಪ್ರಾಣವಾದ ತಿಲೋತ್ತಮೆಯೂ ದುಷ್ಟ ಯವನರ ಕೈಸೇರುವ ಹೊತ್ತು ಬಂದಿತು! ನೀನು ಮಹಾ ಪರಾಕ್ರಮಿ ಯೆಂಬದನ್ನು ನಾನು ಬಲ್ಲೆನಾದರೂ, ಸಹಾಯ ರಹಿತನಾದ ನಿನ್ನೊಬ್ಬನ ಆಟವು ಕ್ರೂರ ಪಠಾಣರ ಹಿಂಡಿನ ಮುಂದೆ ಏನು ನಡೆಯುವದು? ಬಾಳಾ, ಜಗತ್ಸಿಂಹಾ, ನೀನು ಇನ್ನು ಹ್ಯಾಗೆ ಮಾಡುವೆ? ಪಠಾಣರು ತೀರ ಸನಿಯಕ್ಕೆ ಬಂದರಲ್ಲ ಎಂದು ಜಗತ್ಸಿಂಗನನ್ನು ವಾತ್ಸಲ್ಯ ದಿಂದ ಸಂತಯಿಸುತ್ತಿರಲು, ತಿಲೋತ್ತಮೆಯು ತನ್ನ ತಾಯಿಯನ್ನು ಅಪ್ಪಿಕೊಂಡು ರೋದನ ಮಾಡಹತ್ತಿದಳು. ತಿಲೋತ್ತಮೆಯ ಹೃದಯವು ಅತ್ಯಂತ ಕೋಮಲವಾದದ್ದು, ಅದು, ಪತಿಯ ಅನಿಷ್ಟ ಪ್ರಸಂಗದ ಕಲ್ಪನೆಯ ಆಘಾತದಿಂದ ಬಹಳ ಗಾಸಿಯಾಗಿತ್ತೆಂದು ಹೇಳಬಹುದು. ಇತ್ತ ಧೀರನಾದ ಜಗತ್ಸಿಂಗನು ತನ್ನ ಕೊರಳಿಗೆ ಬಿದ್ದಿರುವ ಇಬ್ಬರು ಸ್ತ್ರೀಯರನ್ನು ಸಂರಕ್ಷಿಸುವದಕ್ಕಾಗಿ ಪಠಾಣರೊಡನೆ ಕಾದಲಿಕ್ಕೆ ತಟ್ಟನೆ ಎದುರಾದನು. ತನ್ನ ನೂತನ ಪತಿಯು ಅಸಹಾಯ ಶೂರನಾಗಿ ಪಠಾಣರೊಡನೆ ಹಿಂಜರಿಯದೆ ಕಾದುವ ಪರಿಯನ್ನು ನೋಡಿ, ತಿಲೋತ್ತಮೆಯಂಥ ಕೋಮಲ ಹೃದಯದ ಸುಂದರಿಯಲ್ಲಿಯೂ ವೀರಾವೇಶವು ಉತ್ಪನ್ನವಾಗಿ, ಆಕೆಯು ಶಸ್ತ್ರರಹಿತಳಾಗಿದ್ದರೂ ಪತಿಯ ಸಹಾಯಕ್ಕಾಗಿ ಮುಂದುವರಿದಳು; ಆದರೆ ಜಗತ್ಸಿಂಗನಿಗೆ ಅಕಸ್ಮಾತ್ ದೊಡ್ಡ ಗಾಯವಾಗಿ ಆತನು ಮೂರ್ಛಿತನಾಗಿ ನೆಲಕ್ಕೆ ಬೀಳಲು, ತಿಲೋತ್ತಮೆಯೂ ಅವನೊಡನೆ ಮೈಮರೆತು ನೆಲಕ್ಕುರುಳಿದಳು. ಹೀಗೆ ತನಗೆ ಆಶ್ರಯಭೂತವಾಗಿರುವ ವೃಕ್ಷದೊಡನೆ ಮಲ್ಲಿಗೆಯ ಬಳ್ಳಿಯೂ ನೆಲಕ್ಕುರುಳುವಂತೆ, ತನ್ನ ನೂತನ ಪತಿಯೊಡನೆ ನೆಲಕ್ಕುರುಳಿದ ತಿಲೋತ್ತಮೆಯನ್ನು ನೋಡಿ, ವಿಮಲಾದೇವಿಯು ದುಃಖಿತಳಾದಳು. ಆಕೆಯು ಶೋಕಾತಿಶಯದಿಂದ ದಿಕ್ಕುಗೆಟ್ಟು, ಮುಂದುಗಾಣದೆ ನಿಂತುಕೊಂಡಿರಲು, ಪಠಾಣರು ಆ ಮೂವರನ್ನು ಸೆರೆಹಿಡಿದರು.' ಅಂದಿನ ಒಂದು ದಿನದ ರಾತ್ರಿಯಲ್ಲಿ ಮಂದಾರಣಗಡವು ಪಠಾಣರ ಹಾವಳಿಯಿಂದ ಶೂನ್ಯ ಪ್ರಾಯವಾಯಿತು!

ಮುಂದೆ ಬಹಳ ಹೊತ್ತಿನಮೇಲೆ ಜಗತ್ಸಿಂಗನು ಎಚ್ಚತ್ತು ನೋಡಲು, ತಾನು ಯಾವದೋ ಒಂದು ಶಾಂತವಾದ ಗೃಹದಲ್ಲಿ ಮಂಚದ ಮೇಲೆ ಮಲಗಿರುವಂತೆ ತೋರಿತು. ಕನಸಿನಿಂದ ಎಚ್ಚತ್ತವನಂತೆ ಆ ತರುಣನು ಪೂರ್ಣ ಸ್ಮೃತಿಯನ್ನು ಪಡೆದಾಗ, ತಾನು ಯುದ್ಧದಲ್ಲಿ ಗಾಯಪಟ್ಟು ಮೂರ್ಛಿತನಾದದ್ದು ನೆನಪಾಗಿ, ತನ್ನ ಬಳಿಯಲ್ಲಿ ತಿಲೋತ್ತಮೆಯೂ, ವಿಮಲಾದೇವಿಯೂ ಇಲ್ಲದಿರುವದನ್ನು ನೋಡಿ ಬಹಳವಾಗಿ ನೊಂದುಕೊಂಡನು. ಅವರಿಬ್ಬರು ಯವನರ ಕೈ ಸೇರಿದರೆಂದು ನೆನಿಸಿ ಆತನು ಬಹಳ ಅಸಮಾಧಾನಪಟ್ಟನು. ತನ್ನ ಪಂಚಪ್ರಾಣವಾಗಿದ್ದ ತಿಲೋತ್ತಮೆಯು ಪಠಾಣರ ದುರ್ವರ್ತನಕ್ಕೆ ಗುರಿಯಾದಳಲ್ಲ ಎಂದು ಆತನು ತಳಮಳಿಸಿದನು. ಅಭಿರಾಮಸ್ವಾಮಿಗಳ ಮಾತನ್ನು ಮೀರಿ, ತನ್ನ ತಂದೆಯ ಒಪ್ಪಿಗೆಯನ್ನು ಪಡೆಯದೆ ತಿಲೋತ್ತಮೆಯ ಲಗ್ನಮಾಡಿಕೊಳ್ಳಲಿಕ್ಕೆ ಯತ್ನಿಸಿದ್ದು ಅನರ್ಥಕ್ಕೆ ಕಾರಣವಾಯಿತೆಂದು ಪಶ್ಚಾತ್ತಾಪ ಪಟ್ಟನು. ಆತನು ತನ್ನ ಸುತ್ತುಮುತ್ತು ಲಕ್ಷಪೂರ್ವಕವಾಗಿ ನೋಡಲು, ಒಬ್ಬ ದಾಸಿಯು ಬೀಸಣಿಕೆಯಿಂದ ತನಗೆ ಗಾಳಿಯನ್ನು ಹಾಕುತ್ತಿದ್ದು, ಇನ್ನೊಬ್ಬ ದಾಸಿಯು ಆಜ್ಞಾಧಾರಕ ವೃತ್ತಿಯಿಂದ ಸುಮ್ಮನೆ ನಿಂತುಕೊಂಡಿದ್ದಳು. ಇವರಲ್ಲದೆ ಮತ್ತೊಬ್ಬ ಲೋಕೋತ್ತರ ಸುಂದರಿಯು ತನ್ನ ಗಾಯಗಳಿಗೆ ಕೈಮುಟ್ಟಿ ಮುಲಾಮು ಹಚ್ಚುತ್ತಿದ್ದಳು. ಕೆಲವಂಶದಿಂದ ತಿಲೋತ್ತಮೆಯ ರೂಪವನ್ನು ಕೂಡ ಹೀಯಾಳಿಸುವಂಥ ಆಕೆಯ ಸುಂದರ ರೂಪವನ್ನು ನೋಡಿ, ಈ ಪುಣ್ಯವಂತಳು ಯಾವಳಿರಬಹುದೆಂದು ಜಗತ್ಸಿಂಗನು ಆಲೋಚಿಸ ತೊಡಗಿದನು. ಯಃಕಶ್ಚಿತ ಸ್ತ್ರೀಯಲ್ಲೆಂಬದು ಆ ಪ್ರಮದೆಯ ಮುಖಚರ್ಯದಿಂದ ಒಡೆದು ಕಾಣೆಸುತ್ತಿತ್ತು. ಮೇಲಾಗಿ ಆ ಸುಂದರಿಯು ಮುಸಲ್ಮಾನಳೆಂಬದೂ ಆಕೆಯ ಉಡಿಗೆ–ತೊಡಿಗೆ ಮೊದಲಾದವುಗಳ ಮೇಲಿಂದ ಜಗತ್ಸಿಂಗನಿಗೆ ಗೊತ್ತಾಯಿತು. ತಾನು ಎಂದೂ ನೋಡದೆಯಿದ್ದ ಹಾಗು ತನ್ನ ಜಾತಿಯವಳಲ್ಲದ, ವಿಶೇಷವಾಗಿ ತನ್ನ ಜಾತಿಯವರನ್ನು ಕಾಫರರೆಂದು ತಿರಸ್ಕರಿಸುವ ಮುಸಲ್ಮಾನ ಜಾತಿಯ ದೊಡ್ಡ ಮನೆತನದ ಹೆಣ್ಣುಮಗಳು, ಆಪ್ತಳಂತೆ ಯಾವ ಎಗ್ಗೂ ಇಲ್ಲದೆ ಕೈಮುಟ್ಟಿ ತನ್ನ ಗಾಯಗಳಿಗೆ ಮುಲಾಮು ಹಚ್ಚುತ್ತಿರುವದನ್ನು ನೋಡಿ ಜಗತ್ಸಿಂಗನು ಮತ್ತಿಷ್ಟು ಗೊಂದಲದಲ್ಲಿ ಬಿದ್ದನು. ಪರಕೀಯಳಾದ ಸ್ತ್ರೀಯಿಂದ ಹೀಗೆ ಉಪಚಾರ ಮಾಡಿಸಿಕೊಳ್ಳುವದು ಆತನಿಗೆ ಸಂಕೋಚವಾಗತೊಡಗಿತು. ಆತನು ಕೃತಜ್ಞತೆಯಿಂದ ಮೇಲಕ್ಕೆ ಎದ್ದು ಆ ಸುಂದರಿಯ ಉಪಕಾರವನ್ನು ಸ್ಮರಿಸಿ, ಇಷ್ಟು ದೊಡ್ಡ ಉಪಕಾರದ ಭಾರವನ್ನು ಹೊರಲು ನಾನು ಶಕ್ತನಲ್ಲೆಂದು ಸುಂದರಿಗೆ ಹೇಳಿಕೊಳ್ಳಬೇಕೆಂದು ಆತನು ಯತ್ನಿಸುತ್ತಿರಲು, ಸುಂದರಿಯು ಆತನ ಯತ್ನವನ್ನು ನಡೆಯಗೊಡಲಿಲ್ಲ. ನೀವು ಈಗ ಮೇಲಕ್ಕೆ ಏಳುವದರಿಂದ ಕಟ್ಟಿದ ಗಾಯಗಳು ಸಡಲಿ ರಕ್ತವು ಸುರಿಯಬಹುದಾದ್ದರಿಂದ, ಸುಮ್ಮನೆ ಮಲಗಿಕೊಳ್ಳಬೇಕೆಂದು ಜಗತ್ಸಿಂಗನಿಗೆ ಬೇಡಿಕೊಂಡಳು. ಆಕೆಯು ಮಂಜುಳ ಧ್ವನಿಯಿಂದ ವಿನಯಪೂರ್ವಕವಾಗಿ ಮಾಡಿಕೊಂಡ ವಿನಂತಿಯನ್ನು ಮನ್ನಿಸದೆಯಿರುವದು ಜಗತ್ಸಿಂಗನಿಂದ ಆಗಲಿಲ್ಲ; ಆತನು ಅನಿರ್ವಾಹ ಪಕ್ಷ ಸುಮ್ಮನೆ ಆ ಸುಂದರಿಯಿಂದ ಗಾಯಗಳನ್ನು ಕಟ್ಟಿಸಿ ಕೊಳ್ಳಹತ್ತಿದನು.

ಆ ತರುಣಿಯನ್ನು ನೋಡಿ ಜಗತ್ಸಿಂಗನು ವಿಚಾರಮಗ್ನನಾಗಿದ್ದನು. ಈಕೆಯು ಯಾರಿರಬಹುದು? ನನ್ನನ್ನು ಇಲ್ಲಿಗೆ ಯಾರು ಕರಕೊಂಡು ಬಂದಿರಬಹುದು? ತಿಲೋತ್ತಮೆಯೂ, ವಿಮಲಾದೇವಿಯೂ ಎಲ್ಲಿ ಹೋಗಿರಬಹುದು? ಈ ತರುಣಿಯನ್ನು ಕೇಳಿದರೆ ಎಲ್ಲ ವೃತ್ತಾಂತವು ಗೊತ್ತಾಗಬಹುದೆ? ಈಕೆಯನ್ನು ನಾನು ಏನೆಂದು ಮಾತಾಡಿಸಲಿ? ಎಂದು ಆತನು ಯೋಚಿಸುತ್ತ ಕಡೆಗೆ ಗಟ್ಟಿಮನಸ್ಸು ಮಾಡಿ ವಿನಯದಿಂದ ಆ ಸುಂದರಿಯನ್ನು ಕುರಿತು—ಭಾಗ್ಯಶಾಲಿನಿಯೇ. ನೀನು ಯಾರು? ನನ್ನ ಆಪ್ತರಿಗಿಂತಲೂ ವಿಶೇಷವಾದ ಆಸಕ್ತಿಯಿಂದ ನನ್ನನ್ನು ನೀನು ಉಪಚರಿಸಲು ಕಾರಣವೇನು? ನನ್ನನ್ನು ಇಲ್ಲಿಗೆ ಯಾರು ಕರತಂದರು? ಮಂದಾರಣಗಡದ ಅಂತರ್ಗೃಹದೊಳಗೆ ನನ್ನ ಬಳಿಯಲ್ಲಿದ್ದ ತಿಲೋತ್ತಮೆಯೂ, ವಿಮಲಾದೇವಿಯೂ ಎಲ್ಲಿಗೆ ಹೋದರು? ಈ ಸಂಗತಿಗಳನ್ನು ಕುರಿತು ನಿನಗೆ ಗೊತ್ತಿದ್ದದ್ದನ್ನು ಹೇಳಿದರೆ ಬಹಳ ಉಪಕಾರವಾಗುವದು. ಅದರಲ್ಲಿ ನಿನ್ನಂಥ ಪುಣ್ಯವಂತಳ ಪರಿಚಯವಾಗದಿದ್ದರೆ ನನಗೆ ಎಷ್ಟುಮಾತ್ರವೂ ಸಮಾಧಾನವಾಗಲರಿಯದು, ಎಂದು ನುಡಿಯಲು, ಆ ಯವನ ತರುಣಿಯು ವೀಣಾನಾದವನ್ನು ಹೀಯಾಳಿಸುವ ತನ್ನ ಮಂಜುಳ ಧ್ವನಿಯಿಂದ ಜಗತ್ಸಿಂಗನನ್ನು ಕುರಿತು—ಪುಣ್ಯವಂತನಾದ ರಾಜಪುತ್ರನೇ, ನಾನು ನವಾಬ ಕಾತಲೂಖಾನನ ತಮ್ಮನ ಮಗಳು. ನನ್ನ ಹೆಸರು ಆಯೇಷೆ. ನಿಮ್ಮ ಸೇವೆ ಮಾಡಬೇಕೆಂದು ನನ್ನ ಮನಸ್ಸಿಗೆ ತೋರಿದ್ದರಿಂದ, ಯಥಾಶಕ್ತಿ ನಿಮ್ಮನ್ನು ಉಪಚರಿಸತೊಡಗಿರುತ್ತೇನೆ. ನೀವು ನವಾಬ ಕಾತಲೂಖಾನನ, ಅಂದರೆ ನಮ್ಮ ಕಕ್ಕನ ಕಾರಾಗೃಹದಲ್ಲಿ ಇರುತ್ತೀರಿ. ತಿಲೋತ್ತಮೆಯೂ, ವಿಮಲಾದೇವಿಯೂ ನಮ್ಮ ಕಕ್ಕನ ಕಾರಾಗೃಹದಲ್ಲಿಯೇ ಇರುವರು; ಆದರೆ ನಿಮಗೆ ಅವರಿಬ್ಬರ ದರ್ಶನವು ಈಗ ಆಗಲಾರದು. ಮಂದಾರಣಗಡದ ವೀರೇಂದ್ರಸಿಂಹರವರನ್ನು ನಮ್ಮ ಕಕ್ಕನು ಗಲ್ಲಿಗೆ ಹಾಕಿಸಿದನು; ಆದರೆ ಅಂಥ ಪ್ರಸಂಗವು ನಿಮಗಾಗಲಿ, ತಿಲೋತ್ತಮಾ-ವಿಮಲಾದೇವಿ ಯವರಿಗಾಗಲಿ ಬರುವಹಾಗಿಲ್ಲ. ಮಂದಾರಣಗಡದ ಮುತ್ತಿಗೆಗೆ ನವಾಬ ಉಸ್ಮಾನಖಾನನೊಡನೆ ನಾನೂ ಪುರುಷವೇಷದಿಂದ ಬಂದಿದ್ದೆನು. ನೀವು ಅಂತರ್ಗೃಹದಲ್ಲಿ ಪಠಾಣರೊಡನೆ ಶೌರ್ಯದಿಂದ ಕಾದಿದ್ದನ್ನು ನೋಡಿದಾಗಿನಿಂದ ನಿಮ್ಮ ವಿಷಯವಾಗಿ ನನ್ನ ಮನಸ್ಸು ಸುಪ್ರಸನ್ನವಾಗಿದೆ. ನಿಮ್ಮನ್ನೂ ತಿಲೋತ್ತಮಾ ವಿಮಲಾದೇವಿಯವರನ್ನೂ ಕಾರಾಗೃಹದಿಂದ ಮುಕ್ತಮಾಡಲು ನಾನು ಸಮರ್ಥಳಾಗಿದ್ದೇನೆ. ಈಗ ನಿಮ್ಮ ಒಪ್ಪಿಗೆಯಿದ್ದರೆ ಹೇಳಿರಿ, ಈಗಲೇ ನಿಮ್ಮನ್ನು ಬಂಧಮುಕ್ತರಾಗಮಾಡುವೆನು, ಅನ್ನಲು, ಜಗತ್ಸಿಂಗನು ಆಶ್ಚರ್ಯಮಗ್ನನಾದನು. ಒಬ್ಬ ಸ್ತ್ರೀಯ ಗುಪ್ತಾಲೋಚನೆಯಿಂದ ಕಳ್ಳನಂತೆ ಕಾರಾಗೃಹದಿಂದ ಮುಕ್ತನಾಗಲಿಕ್ಕೆ ಆತನು ಒಪ್ಪಿಕೊಳ್ಳಲಿಲ್ಲ. ಆತನು ಆಯೇಷೆಯ ದೊಡ್ಡಿಸ್ತನವನ್ನು ಹೊಗಳ ಹತ್ತಲು, ಆಕೆಯು ಒಪ್ಪಿಕೊಳ್ಳದೆ, ಜಗತ್ಸಿಂಗನನ್ನು ಕುರಿತು—ರಾಜಕುಮಾರರೇ, ಹೆಚ್ಚಿಗೆ ಆಯಾಸ ಮಾಡಿಕೊಳ್ಳಬೇಡಿರಿ. ಕಾರಾಗೃಹದಲ್ಲಿರುವವರೆಗೆ ಆಯೇಷೆಯು ನಿಮ್ಮ ಸೇವಾ ತತ್ಪರಳಾಗಿರುವಳು. ತಾವು ಬಂಧಮುಕ್ತರಾಗಲಿಕ್ಕೆ ಒಪ್ಪದಿದ್ದರೆ, ಅದೊಂದು ಲಾಭವೆಂತಲೇ ಆಕೆಯು ಭಾವಿಸುವಳು, ಎಂದು ನುಡಿಯುತ್ತಿರಲು, ಹಿಂದಿನಿಂದ ಯಾರೋ ''ನವಾಬಜಾದಿ, ಬಹಳ ಒಳ್ಳೆಯ ಕೆಲಸವು'' ಎಂದು ಹಂಗಿಸಿದರು!

ಈ ವಕ್ರೋಕ್ತಿಯನ್ನು ಕೇಳಿ ಜಗತ್ಸಿಂಗನೂ, ಆಯೇಷೆಯೂ ಅತ್ತಕಡೆಗೆ ನೋಡಲು, ಉಸ್ಮಾನನು ಕಣ್ಣಿಗೆ ಬಿದ್ದನು. ಉಸ್ಮಾನನು ಕಾತಲೂಖಾನನ ಮಗನು. ಆತನು ತರುಣನೂ, ಸುರೂಪಿಯೂ, ಶೂರನೂ, ಮಹಾ ನೀತಿವಂತನೂ ಇದ್ದನು. ಆಯೇಷೆಯಲ್ಲಿ ಆತನ ಪ್ರೇಮ ಬಹಳ. ಆಯೇಷೆಯ ಪಾಣಿಗ್ರಹಣಕ್ಕಾಗಿ ಆತನು ಆತುರಪಡುತ್ತಿದ್ದನು. ಆಯೇಷೆಯು ಈ ಪರಿಯಾಗಿ ಜಗತ್ಸಿಂಗನನ್ನು ಪ್ರೀತಿಸುವದು ಉಸ್ಮಾನನ ಅಸೂಯೆಗೆ ಕಾರಣವಾಗಿತ್ತು. ರಾತ್ರಿ ಪರಪುರುಷನ ಬಳಿಯಲ್ಲಿದ್ದು ಆತನ ಶುಶ್ರೂಷೆ ಮಾಡುತ್ತ ಈ ಪರಿ ಮಾತಾಡುವದು ಕುಲೀನತೆಗೂ, ಪಾತಿವ್ರತ್ಯಕ್ಕೂ ಕುಂದುತರುವ ಮಾತೆಂಬದನ್ನು ತೋರಿಸುವದಕ್ಕಾಗಿಯೇ ಉಸ್ಮಾನನು ಹೀಗೆ ವಕ್ರೋಕ್ತಿಯನ್ನು ಆಡಿದ್ದನು. ಈ ಮರ್ಮವನ್ನು ಅರಿತು ಸರಳ ಹೃದಯದ ಸುಶೀಲೆಯಾದ ಆಯೇಷೆಯು ಉಸ್ಮಾನನನ್ನು ಕುರಿತು—''ಉಸ್ಮಾನ, ಒಳ್ಳೆಯ ಕೆಲಸವೇನು?'' ಎಂದು ಕೇಳಲು, ಆತನು ವ್ಯಂಗೋಕ್ತಿಯಿಂದ—''ರಾತ್ರಿ ಒಬ್ಬಳೇ ಸೆರೆಯಾಳಿನ ಸಂಗಡ ಏಕಾಂತವಾಡುವದು ನವಾಬನ ಮಗಳಿಗೆ ಬಹಳವಾಗಿ ಒಪ್ಪುತ್ತದಲ್ಲವೆ'' ಎಂದು ಕೇಳಿದನು. ಇದರಿಂದ ಆಯೇಷೆಯ ಹೃದಯಕ್ಕೆ ಬಹಳ ವ್ಯಥೆಯಾಯಿತು. ಆಕೆಯು ಉಸ್ಮಾನನನ್ನು ಕುರಿತು ಸ್ಪಷ್ಟವಾಗಿ—ಉಸ್ಮಾನ, ಇನ್ನು ಸಂಕೋಚವೇಕೆ? ಯಾವ ಮಾತನ್ನು ಹೊರಗೆಡವಿ ತೋರಿಸುವ ಅವಶ್ಯವಿದ್ದಿಲ್ಲವೋ, ಆ ಮಾತನ್ನು ಈಗ ಆಡಿ ತೋರಿಸುವ ಪ್ರಸಂಗವನ್ನು ನೀನು ಒದಗಿಸಿಕೊಟ್ಟಿದ್ದರಿಂದ, ಸ್ಪಷ್ಟವಾಗಿ ಆಡಿಬಿಡುತ್ತೇನೆ, ಚನ್ನಾಗಿ ಕೇಳು. ಈ ಸೆರೆಯಾಳು ನನ್ನ ಪ್ರಾಣೇಶ್ವರನಿರುತ್ತಾನೆಂಬುದನ್ನು ಚೆನ್ನಾಗಿ ಲಕ್ಷ್ಯದಲ್ಲಿಡು. ಹಾಗಲ್ಲದಿದ್ದರೆ ಈ ರಾಜಕುಮಾರರ ಸಂಗಡ ಆಯೇಷೆಯು ಈ ಪ್ರಕಾರ ಎಂದೂ ನಡೆದುಕೊಳ್ಳುತ್ತಿದ್ದಿಲ್ಲ. ಮಂದಾರಣಗಡದ ಅಂತರ್ಗೃಹದಲ್ಲಿ ನಿನ್ನೊಡನೆ ನಾನು ಪುರುಷ ವೇಷದಿಂದ ಬಂದಾಗ ಈ ರಾಜಕುಮಾರನನ್ನು ನೋಡಿ ನನ್ನ ಹೃದಯವು ಇವರಲ್ಲಿ ಅನುರಕ್ತವಾಯಿತು. ಇನ್ನು ನನ್ನ ಆ ಹೃದಯದಲ್ಲಿ ಅನ್ಯಪುರುಷನಿಗೆ ಆಸ್ಪದವು ಸರ್ವಥಾ ದೊರೆಯಲಾರದು. ನಾನು ಬದುಕಿರುವವರೆಗೆ ಅನ್ಯ ಪುರುಷನನ್ನು ಕಣ್ಣೆತ್ತಿ ನೋಡಲಾರೆನು. ನಾನು ಮುಸಲ್ಮಾನ ಸ್ತ್ರೀಯೂ–ಜಗತ್ಸಿಂಗರವರು ರಜಪೂತ ಪುರುಷರೂ ಇರುವದರಿಂದ, ನಮ್ಮಿಬ್ಬರ ದಾಂಪತ್ಯ ಸಂಬಂಧಕ್ಕೆ ದೊಡ್ಡ ವಿಘ್ನವಿರುತ್ತಿದ್ದರೂ, ಜಗತ್ಸಿಂಗರೇ ನನ್ನ ಪ್ರಾಣೇಶ್ವರರೆಂಬ ನನ್ನ ಭಾವನೆಯಲ್ಲಿ ಎಂದೂ ಅಂತರವಾಗಲಾರದು. ಇನ್ನೊಂದು ಕ್ಷಣದ ಮೇಲೆ ಜಗತ್ಸಿಂಗರವರು ನನ್ನ ಕಣ್ಣಮರೆ ಯಾಗಿ, ನನ್ನ ಮರಣಪರ್ಯಂತರ ನನಗೆ ಅವರ ದರ್ಶನವಾಗದಿದ್ದರೂ, ಅವರು ನನ್ನ ಮುಖಾವ ಲೋಕನ ಮಾಡದೆ ಅನ್ಯ ಸ್ತ್ರೀಯರಲ್ಲಿ ರಮಮಾಣರಾದರೂ, ರಣಭೂಮಿಯಲ್ಲಿ ಅವರು ದೇಹ ಬಿಟ್ಟರೂ, ಅವರು ನನ್ನನ್ನು ದ್ವೇಷಿಸಿದರೂ ಅವರು ನನ್ನ ಪ್ರಾಣೇಶ್ವರರೇ ಆಗಿರುವರು! ನನ್ನ ಪತಿಪ್ರೇಮದಲ್ಲಿ ಎಂದೂ ಅಂತರವಾಗಲಿಕ್ಕಿಲ್ಲ. ನಾನು ಯಾವಾಗಲೂ ಅವರ ಪ್ರೇಮವನ್ನಿಚ್ಛಿಸುವ ದಾಸಿಯಾಗಿರುವೆನು. ನನ್ನ ಹೃದಯ ಮಂದಿರದಲ್ಲಿ ಅವರನ್ನು ಸ್ಥಿರವಾಗಿರಿಸಿಕೊಂಡು ಯಾವಾಗಲೂ ಅವರನ್ನು ಆರಾಧಿಸುತ್ತಿರುವೆನು. ಉಸ್ಮಾನ, ನಾನು ಇವರೊಡನೆ ಏಕಾಂತವನ್ನೇನು ಆಡುತ್ತಿದ್ದೆನೆಂಬದನ್ನು ಹೇಳುತ್ತೇನೆ ಕೇಳು. ನಾನು ಇವರಿಗೆ

ನಿಮ್ಮನ್ನೂ, ತಿಲೋತ್ತಮಾ- ವಿಮಲಾದೇವಿಯವರನ್ನೂ ಬಂಧಮುಕ್ತ ಮಾಡುವೆನೆಂದು ಹೇಳಿದೆನು. ಒಪ್ಪಿಕೊಂಡಿದ್ದರೆ ಇವರನ್ನಂತು ಇಷ್ಟುಹೊತ್ತಿಗೆ ಮುಕ್ತ ಮಾಡಿಸಿ ಬಿಡುತ್ತಿದ್ದೆನು. ಹಾಗಾಗಿಷ್ಟರೆ ನಿನಗೆ ಇವರ ನಖದ ದರ್ಶನವು ಕೂಡ ಆಗುತ್ತಿದ್ದಿಲ್ಲ ಉಸ್ಮಾನ, ಪ್ರಸಂಗ ಒದಗಿದರೆ ನನ್ನ ಕಕ್ಕಂದಿರ ಮುಂದೆ ನಾನು ಹೀಗೆಯೇ ಹೇಳತಕ್ಕವಳು, ಎಂದು ನುಡಿದು, ರಾಜಪುತ್ರನಾದ ಜಗತ್ಸಿಂಗನನ್ನು ಕುರಿತು ವಿನಯದಿಂದ—''ನಾನು ನಿರ್ಲಜ್ಜೆಯಿಂದ ತಮ್ಮ ಮುಂದೆ ಆಡಿದ ಈ ಮಾತುಗಳಿಗಾಗಿ ನನ್ನನ್ನು ಕ್ಷಮಿಸಬೇಕು. ಉಸ್ಮಾನನು ನನ್ನ ಹೃದಯವನ್ನು ಪೀಡಿಸದಿದ್ದರೆ, ನನ್ನ ಕಾಮದಗ್ಧ ಹೃದಯವು ಎಂದಿಗೂ ನಿಮ್ಮ ಕಣ್ಣಿಗೆ ಬೀಳುತ್ತಿದ್ದಿಲ್ಲ. ಬಹಳ ಹೇಳುವದೇನು? ಕಾಲತ್ರಯದಲ್ಲಿ ಯಾರ ಕಿವಿಗೂ ಈ ಮಾತು ಮುಟ್ಟುತ್ತಿದ್ದಿಲ್ಲ ಎಂದು ನುಡಿದು, ಪುನಃ ಆಕೆಯು ಉಸ್ಮಾನನ ಕಡೆಗೆ ತಿರುಗಿ- ''ಅಣ್ಣಾ ಉಸ್ಮಾನಾ, ತಂಗಿಯನ್ನು ಪ್ರೀತಿಸುವಂತೆ ನೀನು ನನ್ನನ್ನು ಪ್ರೀತಿಸುವದರಲ್ಲಿ ಅಂತರಿಸಬೇಡ,'' ಎಂದು ನುಡಿದು, ಆಕೆಯು ಅಲ್ಲಿಂದ ತಟ್ಟನೆ ಹೊರಟುಹೋದಳು. ಉಸ್ಮಾನನಾದರೂ ಹತಬದ್ಧನಾಗಿ ಅಲ್ಲಿಂದ ಹೊರಬಿದ್ದು ನಡೆದನು.

## ಆಯೇಷೆಯ ಪೌರುಷ

ಆಯೇಷೆಯು ಅಲೌಕಿಕ ಗುಣವತಿಯಾಗಿದ್ದಳು. ಆಕೆಯ ಸದ್ಗುಣಗಳ ಯೋಗದಿಂದ ಆಕೆಯ ಸೌಂದರ್ಯಕ್ಕೆ ವಿಲಕ್ಷಣ ಗೌರವವುಂಟಾಗಿತ್ತು. ಆಯೇಷೆಯನ್ನು ಬಹುಮಾನ ಪೂರ್ವಕವಾಗಿ ಆದರಿಸದವರೇ ವಿರಲ. ಆಕೆಯ ನೀತಿ-ನಿಷ್ಠುರತೆಯ ವರ್ಚಸ್ಸು ಎಲ್ಲರ ಮೇಲೆ ಬಿದ್ದಿತ್ತು. ಆಯೇಷೆಯು ನವಾಬ ಕಾತಲೂಖಾನನ ಪಂಚಪ್ರಾಣವಾಗಿದ್ದಳು. ಖಾನನು ಮಗಳ ಮಾತನ್ನು ಉಗುಳುಹಾಕಿ ದಾಟುತ್ತಿದ್ದಿಲ್ಲ. ನಿರರ್ಥಕ ಮಾತುಗಳು ಆಯೇಷೆಯ ಮುಖದಿಂದ ಎಂದೂ ಹೊರಡವು. ತಂದೆಯ ಬಳಿಯಲ್ಲಿಯ ಆಕೆಯ ಬೇಡಿಕೆಗಳು ಪರೋಪಕಾರಕ್ಕೆ ಸಂಬಂಧಿಸಿದವಾಗಿರುತ್ತಿದ್ದವು. ಆಕೆಯು ಇಪ್ಪತ್ತೆರಡು ವರ್ಷದವಳಾಗಿದ್ದರೂ ಲಗ್ನ ಮಾಡಿ ಕೊಳ್ಳಬೇಕೆಂಬ ವಿಚಾರವು ಆಕೆಯ ಮನಸ್ಸಿನಲ್ಲಿ ಹುಟ್ಟಿದ್ದಿಲ್ಲ. ಸದ್ಗುಣಗಳ ಪುತ್ತಳಿಯೆನಿಸುವ ಆ ಸೌಂದರ್ಯದ ಖನಿಯನ್ನು ಸ್ವಾಧೀನಪಡಿಸಿಕೊಂಡೇನೆಂಬ ನಂಬಿಗೆಯು ಯಾವ ಪುರುಷ ಶ್ರೇಷ್ಠನಲ್ಲಿಯೂ ಇದ್ದಿಲ್ಲವೆಂದು ಹೇಳಬಹುದು. ಆಯೇಷೆಯಂಥ ಅಲೌಕಿಕ ಸ್ತ್ರೀಯ ಪಾಣಿ ಗ್ರಹಣಕ್ಕೆ ತಾವು ಯೋಗ್ಯರಲ್ಲೆಂದು ಭಾವಿಸುವ ಪುರುಷರೇ ವಿಶೇಷವಾಗಿದ್ದರು. ಆಯೇಷೆಯು ಪುರುಷರ ಬಾಹ್ಯಾಡಂಬರಕ್ಕೇ ಅಥವಾ ಐಶ್ವರ್ಯಬಲಗಳಿಗೆ ಮೆಚ್ಚತಕ್ಕವಳಿದ್ದಿಲ್ಲ. ಇಂಥ ಕೃತ್ರಿಮವಾದ ಯಾವ ಸಾಧನಗಳಿಂದಲೂ ಆಯೇಷೆಯಲ್ಲಿ ವೈವಾಹಿಕ ಪ್ರೇಮವು ಉಂಟಾಗುವ ಹಾಗಿದ್ದಿಲ್ಲ. ಅಂತೇ ಉಸ್ಮಾನನಂಥ ಸರ್ವಗುಣ ಸಂಪನ್ನನಾದ ತರುಣನು ಬಹು ಪ್ರಯತ್ನ ಪೂರ್ವಕವಾಗಿ ಯತ್ನಿಸುತ್ತಲಿದ್ದರೂ ಆಯೇಷೆಯು ಆತನಿಗೆ ತನ್ನ ಹೃದಯದಲ್ಲಿ

ಸ್ಥಳವನ್ನು ಕೊಟ್ಟಿದ್ದಿಲ್ಲ. ಉಸ್ಮಾನನಲ್ಲಿ ಯಾವ ಕುಂದು-ಕೊರತೆಗಳನ್ನೂ ಎಣಿಸುವ ಹಾಗಿದ್ದಿಲ್ಲ. ಮೇಲಾಗಿ ಅವರಿಬ್ಬರು ಚಿಕ್ಕಂದಿನಿಂದ ಒಂದೇ ಮನೆಯಲ್ಲಿ ಕೂಡಿ ಆಡಿದವರು. ಇಂಥವನನ್ನು ಲಗ್ನವಾಗದ ಆಯೇಷೆಯು ಅತ್ಯಂತ ದುರ್ಲಭಳೆಂದು ಯಾಕೆ ಬರೆಯಬೇಕು? ಇಂಥ ದುರ್ಲಭಳಾದ ಆಯೇಷೆಯು ದರ್ಶನಮಾತ್ರದಿಂದ ಜಗತ್ಸಿಂಗನಿಗೆ ತನ್ನ ಹೃದಯದಲ್ಲಿ ಸ್ಥಳವನ್ನಿತ್ತದ್ದು ಪರಮಾಶ್ಚರ್ಯವಲ್ಲವೆ? ''ಮನೋಹಿ ಜನ್ಮಾಂತರ ಸಂಗತಿಜ್ಞಂ'' ಎಂಬ ಕಾಲಿದಾಸೋಕ್ತಿಯಂತೆ ಆಯೇಷೆಯ ಮನಸ್ಸಿನ ಜನ್ಮಾಂತರ ಸಂಗತಿಯ ಜ್ಞಾನದಿಂದ ಅದು ಜಗತ್ಸಿಂಗನಲ್ಲಿ ಆಶ್ರಯವನ್ನು ಪಡೆದಿರಬಹುದು. ಆಯೇಷಾ-ಜಗತ್ಸಿಂಗರಲ್ಲಿ ಅಂಥ ಜನ್ಮಾಂತರದ ಸಂಬಂಧವೇನಾದರೂ ಇದ್ದಹೊರತು ಆಯೇಷೆಯು ಜಗತ್ಸಿಂಗನನ್ನು ತನ್ನ ಪ್ರಾಣೇಶ್ವರನೆಂದು ತಿಳಿದುಕೊಳ್ಳುವದು ಯುಕ್ತಿಗೆ ಹೊರಗಾದದ್ದೇ ಸರಿ.

ಜಗತ್ಸಿಂಗನು ಆಯೇಷೆಯ ಗೌರವಕ್ಕೆ ಸರಿಯಾಗಿ ಆಕೆಯನ್ನು ಪ್ರೀತಿಸಲಿ-ಪ್ರೀತಿಸದಿರಲಿ, ಆಯೇಷೆಯಂತು ಜಗತ್ಸಿಂಗನ ವಿಷಯವಾಗಿ ನಿರ್ಹೇತುಕವಾದ ಉತ್ಕಟ ಪ್ರೇಮವನ್ನು ವಹಿಸಿದ್ದಳು. ಜಗತ್ಸಿಂಗನ ಸೇವೆಯಲ್ಲಿ ಆಕೆಗೆ ಪರಮಾನಂದವಾಗುತ್ತಿತ್ತು, ಜಗತ್ಸಿಂಗನನ್ನು ಅಗಲಿ ಇರುವದು ಆಕೆಗೆ ಬಹು ಕಷ್ಟದಾಯಕವಾಗುತ್ತಿತ್ತು. ಆಕೆಯು ಜಗತ್ಸಿಂಗನ ಬಂಧವಿಮೋಚನದ ಉಪಾಯಗಳನ್ನು ಚಿಂತಿಸತೊಡಗಿದಳು. ಜಗತ್ಸಿಂಗನು ಓಡಿ ಹೋಗಲಿಕ್ಕೆ ಒಡಂಬಟ್ಟಿದ್ದರೆ, ಆಕೆಯು ಯಾವಾಗೋ ಆತನನ್ನು ಸೆರೆಮನೆಯಿಂದ ಪಾರುಮಾಡುತ್ತಿದ್ದಳು; ಆದರೆ ಕಳ್ಳತನವು ಜಗತ್ಸಿಂಗನಿಗೆ ಸೇರದ್ದರಿಂದ, ಆಯೇಷೆಯು ಆತನ ಬಂಧವಿಮೋಚನಕ್ಕೆ ಅನ್ಯೋಪಾಯಗಳನ್ನು ಯೋಚಿಸಬೇಕಾಯಿತು. ತನ್ನ ಕಕ್ಕನಾದ ಕಾತಲೂಖಾನನ ಮನಸ್ಸನ್ನು ಒಲಿಸಿಕೊಂಡ ಹೊರತು ಪ್ರಸಿದ್ಧ ರೀತಿಯಿಂದ ಜಗತ್ಸಿಂಗನ ಬಂಧವಿಮೋಚನವಾಗಲಿಕ್ಕೆ ಮಾರ್ಗವಿದ್ದಿಲ್ಲ. ಕಕ್ಕನು ತನ್ನ ಮಾತನ್ನು ಕೇಳುತ್ತಿದ್ದರೂ, ಮೊಗಲ, ಪಠಾಣರಲ್ಲಿ ಅತ್ಯಂತ ದ್ವೇಷವಿರುವಾಗ, ಮೊಗಲ ಪಕ್ಷಪಾತಿಯಾದ ಜಗತ್ಸಿಂಗನಂಥ ಗೌರವದ ಮನುಷ್ಯನ ಬಂಧವಿಮೋಚನಕ್ಕೆ ಆತನು ಒಪ್ಪಿಕೊಳ್ಳುವನೋ ಇಲ್ಲವೋ ಎಂಬ ಸಂಶಯವು ಆಯೇಷೆಯನ್ನು ಬಾಧಿಸಹತ್ತಿತ್ತು. ಆಕೆಯು ಹಲವು ಹಂಚಿಕೆಗಳನ್ನು ಹಾಕಿ ನೋಡಿದಳು; ಆದರೆ ಒಂದೂ ಬಗೆಹರಿಯಲಿಲ್ಲ. ಹೀಗಿರುವಾಗ, ಒಂದು ದಿನ ಕಾತಲೂ ಖಾನನು ಬೇಟೆಗಾಗಿ ಹೊರಟನು. ಆತನಿಗೆ ಬೇಟೆಯ ಲಕ್ಕು ಬಹಳ. ಹುಲಿಯ ಬೇಟೆಯಲ್ಲಿ ಆತನು ಒಳ್ಳೆಯ ಪ್ರಸಿದ್ಧನಾಗಿದ್ದನು. ಆನೆಯ ಮೇಲೆ ಕುಳಿತು ಹುಲಿಯ ಬೇಟೆಯಾಡುವ ಘಾತಕ ಪ್ರಸಂಗಕ್ಕಂತು ಆತನು ಬಹಳವಾಗಿ ಮೆಚ್ಚಿದ್ದನು. ಇಂಥ ಪ್ರಸಿದ್ಧ ಬೇಟೆಗಾರನು ತನ್ನ ಪರಿವಾರದೊಡನೆ ಬೇಟೆಗೆ ಹೊರಡಲು, ಆಯೇಷೆಯೂ ಆತನನ್ನು ಹಿಂಬಾಲಿಸಿದಳು. ಆಯೇಷೆಯ ಪೌರುಷವೃತ್ತಿಯನ್ನು ನೋಡಿದರೆ, ಆಕೆಯು ಸ್ತ್ರೀ ಜಾತಿಗೆ ಅಪವಾದ ವಾಗಿದ್ದಳೆಂದು ತಿಳಿಯಬೇಕಾಗುವದು; ಯಾಕಂದರೆ, ಸ್ತ್ರೀಯರಲ್ಲಿ ಆಯೇಷೆಯಂಥ ಪೌರುಷ ವೃತ್ತಿಯವರು ಸಿಗುವದು ತೀರ ದುರ್ಲಭವು. ಆಕೆಯು ಮಹಾ ಧೈರ್ಯಶಾಲಿಯೂ, ಯುದ್ಧಕಲೆಯನ್ನು ಒಳಿತಾಗಿ ಬಲ್ಲವಳೂ ಇದ್ದಳು. ಅಡಿಗೆ ಮಾಡುವಲ್ಲಿಯಂತು ಆಕೆಯನ್ನು

ಯಾವ ಹೆಂಗಸೂ ಸರಿಗಟ್ಟುವಂತೆ ಇದ್ದಿಲ್ಲ. ಆಕೆಯು ಕೈಮುಟ್ಟಿ ಮಾಡಿದ ಅಡಿಗೆಯನ್ನು ಉಂಡವರು ಪರಮ ಸಂತುಷ್ಟರಾಗುತ್ತಿದ್ದರು; ಆದರೆ ಆಯೇಷೆಯಂಥ ಸದ್ಗುಣ ಸಮುಚ್ಚಯದ ನವಾಬ ಜಾದಿಗೆ ಅಡಿಗೆ ಮಾಡುವ ಪ್ರಸಂಗಗಳು ಹ್ಯಾಗೆ ಬರಬೇಕು? ಆ ತೀಕ್ಷ್ಣ ಬುದ್ಧಿಯ ಹೆಣ್ಣುಮಗಳು ತನ್ನವರ ಸಂತೋಷಕ್ಕಾಗಿ ತನ್ನ ಸಂತೋಷ ಬಂದಾಗ ಅಡಿಗೆ ಮಾಡಿದರೆ, ಅದೊಂದು ಸುಯೋಗವೆಂದು ಉಣ್ಣುವವರು ತಿಳಿಯುತ್ತಿದ್ದರು.

ಕಕ್ಕನ ಮನಸ್ಸನ್ನು ಒಲಿಸಿಕೊಳ್ಳುವದಕ್ಕಾಗಿ ಆಯೇಷೆಯು ಬುದ್ಧಿಪೂರ್ವಕವಾಗಿ ಆತನ ಪ್ರೀತಿಯ ಪದಾರ್ಥಗಳನ್ನು ಮಾಡಿಕೊಂಡು, ಅವನ್ನು ಸಂಗಡ ತಕ್ಕೊಂಡು ಬೇಟೆಗೆ ಹೊರಟಿದ್ದಳು. ಆಯೇಷೆಯು ಮಹಾ ನಿರ್ಧಾರದ ಮನುಷ್ಯಳು. ಹಿಡಿದ ಕೆಲಸವನ್ನು ಮಾಡದೆ ಎಂದೂ ಬಿಡುವವಳಲ್ಲ. ಕಾತಲೂಖಾನನು ಬೇಟೆಗಾಗಿ ಸಂಚರಿಸುತ್ತಿರುವಾಗ, ಆಯೇಷೆಯೂ, ಉಸ್ಮಾನನೂ ಆತನ ಮೈ ನೆರಳಿನಂತೆ ಆತನ ಬೆನ್ನುಹತ್ತಿ ತಿರುಗುತ್ತಿದ್ದರು. ಮಧ್ಯಾಹ್ನವಾಯಿತು. ಅಷ್ಟರಲ್ಲಿ ಕಾತಲೂಖಾನನು ಅಂದು ಪೆಟ್ಟಿನ ಮೇಲೆ ಪೆಟ್ಟು ಮೂರು ಹುಲಿಗಳನ್ನು ಕೊಂದದ್ದರಿಂದ ಆವೇಶಗೊಂಡಿದ್ದನು. ಆತನ ಬೇಟೆಯ ಉತ್ಸಾಹವು ಕುಗ್ಗಲೊಲ್ಲದು. ಆತನ ಅನುಯಾಯಿಗಳು ಬೇಟೆಯಾಡಿ ದಣಿದಿದ್ದರು. ತಮ್ಮ ಒಡೆಯನು ಯಾವಾಗ ಬೇಟೆಯನ್ನು ಮುಗಿಸುವನೋ ಎಂದು ಹಾದಿಯ ನೋಡುತ್ತಿದ್ದರು. ತಮ್ಮ ತಂದೆಯ ಅಂದಿನ ಬೇಟೆಯ ಉತ್ಸಾಹವನ್ನು ನೋಡಿ, ಉಸ್ಮಾನನೂ, ಆಯೇಷೆಯೂ ಉತ್ಸಾಹಗೊಂಡಿದ್ದರು. ಇನ್ನೊಂದು ಹುಲಿಯನ್ನು ಹೊಡೆದು, ಮನೆಗೆ ಹೋಗಬೇಕೆಂದು ಕಾತಲೂಖಾನನು ನಿಶ್ಚಯಿಸಿ, ಹುಲಿಯನ್ನು ಹುಡುಕಹತ್ತಿದನು. ಬಹಳ ಹೊತ್ತಾದರೂ ಹುಲಿಯು ಸಿಗಲಿಲ್ಲ. ಅಷ್ಟರಲ್ಲಿ ಕಾತಲೂಖಾನನ ಆನೆಯು ನಿಶ್ಯಂಕೆಯಿಂದ ಒಂದು ಕೊಳ್ಳವನ್ನು ಇಳಿಯುತ್ತಿರಲು, ಒಂದು ಭಯಂಕರವಾದ ಹುಲಿಯು ನೆರೆಯ ಪೆಳೆಯೊಳಗಿಂದ ಆರ್ಭಟಿಸಿತು. ಆ ಆರ್ಭಾಟದ ಅಬ್ಬರಕ್ಕೆ ಆನೆಯು ಬೆದರಿ ಹಿಂದಕ್ಕೆ ಸರಿಯುತ್ತಿರಲು, ಹುಲಿಯು ಆನೆಯ ಕುಂಭಸ್ಥಳಕ್ಕೆ ನೆಗೆಯಿತು. ಈ ಅವಸರದಲ್ಲಿ ಕಾತಲೂ ಖಾನನು ಹುಲಿಗೆ ಇರಿದ ಬರ್ಚಿಯ ಇರಿತದ ಗುರಿ ತಪ್ಪಿ ಬರ್ಚಿಯು ಕೈಜಾರಿ ಕೆಳಗೆ ಬಿದ್ದಿತು. ತುಬಾಕಿಯನ್ನು ತಕ್ಕೊಂಡು ಹೊಡೆಯುವಷ್ಟರೊಳಗೆ ಹುಲಿಯು ಆನೆಯ ಕುಂಭಸ್ಥಳವನ್ನು ತನ್ನ ನಖಪಂಜರ ಗಳಿಂದ ಸೀಳಹತ್ತಿತು. ಆಗ ಆನೆಯು ಘೀಳಿಡುತ್ತ ನೆಲಕ್ಕೆ ಕುಳಿತುಕೊಳ್ಳುತ್ತಿರಲು, ಹುಲಿಯು ಮತ್ತೊಮ್ಮೆ ಹಾರಿ ಕಾತಲೂಖಾನನ ಗಂಟಲಕ್ಕೆ ಬಾಯಿ ಹಾಕಲಿಕ್ಕೆ ಹವಣಿಸಹತ್ತಿತು. ಅದನ್ನು ನೋಡಿ ಖಾನನು ಬೆದರಿದನು. ಅವನ ಕಸುವು ಕಡಿಮೆಯಾಗಹತ್ತಿತು. ತಾನು ಹುಲಿಯ ಬೇಟೆಯಲ್ಲಿ ಮಹಾ ಪ್ರವೀಣನೆಂದು ಹೆಮ್ಮೆ ಪಡುತ್ತಿದ್ದದ್ದೇ ಇಂದು ತನ್ನ ನಾಶಕ್ಕೆ ಕಾರಣ ವಾಯಿತೆಂದು ಆತನು ತಿಳಿದನು. ಆತನ ಬರ್ಚಿಯಂತು ಕೆಳಗೆ ಬಿದ್ದುಹೋಗಿತ್ತು, ಆಗ ತುಬಾಕಿಯ ಉಪಯೋಗವು ಆಗುವಹಾಗಿದ್ದಿಲ್ಲ; ಖಡ್ಗವನ್ನು ಹಿರಿಯಲಿಕ್ಕೆ ಅವಕಾಶವು ದೊರೆಯಲೊಲ್ಲದು. ಇದರಿಂದ ಖಾನನು ನಿರಾಶೆಪಟ್ಟು, ಹುಲಿಯೊಡನೆ ಕುಸ್ತಿಯ ಹಿಡಿಯಬೇಕೆಂದು ನೆಲಕ್ಕೆ ದುಮುಕುತ್ತಿರಲು, ಹುಲಿಯ ಹಣೆಗೆ ಆಯೇಷೆಯ ಗುಂಡು

ತಾಕಿ ಅದು ಆರ್ಭಟಿಸುತ್ತ ನೆಲಕ್ಕುರುಳಿ, ಪ್ರಾಣಸಂಕಟವನ್ನು ತಾಳಲಾರದೆ ಅದು ರೊಚ್ಚಿನಿಂದ ಖಾನನ ಮೇಲೆ ಮತ್ತೆ ದುಮುಕಿತು, ಅಷ್ಟರಲ್ಲಿ ಆಯೇಷೆಯು ಮಂಜುಳ ಸ್ವರದಿಂದ ''ಕಕ್ಕಾ ಹೆದರಬೇಡಿರಿ'' ಎಂದು ನುಡಿಯುತ್ತ ಬರ್ಚಿಯಿಂದ ಹುಲಿಯ ಹೊಟ್ಟೆಗೆ ಇರಿದಳು. ಅಷ್ಟರಲ್ಲಿ ಉಸ್ಮಾನನೂ ಅಲ್ಲಿಗೆ ಬಂದು ಹುಲಿಗೆ ಖಡ್ಗ ಪ್ರಹಾರ ಮಾಡಿದನು. ಕೂಡಲೆ ಹುಲಿಯು ನೆಲಕ್ಕುರುಳಿ ಕಾತಲೂಖಾನನು ದೊಡ್ಡ ಗಂಡಾಂತರದಿಂದ ಪಾರಾದನು.

ಜಗತ್ಸಿಂಗನ ಮೇಲಿದ್ದ ಆಯೇಷೆಯ ಪ್ರೇಮವೇ ಅಷ್ಟು ಪವಿತ್ರವಾದದ್ದೂ, ಬಲವತ್ತರವಾದದ್ದೂ ಇತ್ತೆಂದು ಹೇಳಬೇಕಾಗುವದು; ಅಂತೇ ಆಯೇಷೆಯು ಹೊತ್ತು ಸಾಧಿಸಿ ಹುಲಿಗೆ ಗುಂಡು ಹಾಕಿ, ಕೂಡಲೆ ಅದನ್ನು ಬರ್ಚಿಯಿಂದ ಇರಿದು ಪ್ರಾಣದಾನ ಮಾಡಿದ ಭಾರವನ್ನು ಕಕ್ಕನ ಮೇಲೆ ಹೊರಿಸಿದಳು. ಆಗ ಕಾತಲೂಖಾನನು ಅತ್ಯಂತ ಕೃತಜ್ಞತೆಯಿಂದ ಮಗಳನ್ನು ತಬ್ಬಿಕೊಂಡು—''ನನ್ನ ಕುಲದೀಪವಾದ ಆಯೇಷೆಯೇ, ನೀನು ಇಂದು ನನಗೆ ಪ್ರಾಣದಾನ ಮಾಡಿದೆ. ನೀನಿಲ್ಲದಿದ್ದರೆ ನಾನು ನಿಶ್ಚಯವಾಗಿ ಹುಲಿಯ ಬಾಯಿಗೆ ತುತ್ತಾಗುತ್ತಿದ್ದೆನು. ನಿನ್ನ ಉಪಕಾರಕ್ಕೆ ನಾನೇನು ಪ್ರತ್ಯುಪಕಾರ ಮಾಡಲಿ? ಏನು ಮಾಡಿದರೆ ನಿನಗೆ ಸಂತೋಷ ವಾಗುವದು. ಹೇಳು'' ಎಂದು ಹೇಳಲು, ಆಯೇಷೆಯು—ಅಪ್ಪಾ, ತಂದೆಯ ಮೇಲೆ ಮಗಳು ಮಾಡುವ ಉಪಕಾರವೇನು? ಹೊತ್ತಿಗೆ ನಿಮ್ಮ ಸಹಾಯಕ್ಕೆ ನಾನು ಒದಗಿದ್ದಕ್ಕಾಗಿ ನನಗೆ ಬಹಳ ಸಂತೋಷವಾಗಿರುತ್ತದೆ. ಇದಕ್ಕೂ ಹೆಚ್ಚಿನ ಸಂತೋಷವು ನನಗೆ ಬೇರೆ ಯಾತರಿಂದಲೂ ಆಗುವಹಾಗಿಲ್ಲ, ಸದ್ಯಕ್ಕೆ ನೀವು ಬಹಳವಾಗಿ ದಣಿದಿರುವಿರಿ. ನಿಮಗೆ ಹಸಿವೆಯೂ ಆಗಿರಬಹುದು. ಮೊದಲು ಊಟ ಮಾಡಿ ಆಮೇಲೆ ನನ್ನ ಯೋಗಕ್ಷೇಮವನ್ನು ತಕ್ಕೊಳ್ಳಿರಿ. ಎಂದು ಹೇಳಿದಳು. ಇದನ್ನು ಕೇಳಿ ಕಾತಲೂಖಾನನು ಆಯೇಷೆಯ ಸೌಜನ್ಯಕ್ಕೂ ಪ್ರೇಮಕ್ಕೂ ಸಂತೋಷಪಟ್ಟು, ಆಕೆ ತಂದಿದ್ದ ಮಿಷ್ಟಾನ್ನಗಳನ್ನು ಉಂಡು ಪರಮಾನಂದ ಪಟ್ಟನು. ಖಾನನು ಆಯೇಷೆಯ ಮೇಲೆ ಸುಪ್ರಸನ್ನನಾಗಿದ್ದನು. ನೀನು ಏನಾದರೂ ಕೇಳಿಕೊಳ್ಳಬೇಕೆಂದು ಆಯೇಷೆಗೆ ದುಂಬಾಲು ಬಿದ್ದನು. ಆಯೇಷೆಯಾದರೂ ಇದೇ ಹಾದಿಯನ್ನು ನೋಡುತ್ತಿದ್ದಳು. ಆಕೆಯು ಖಾನನನ್ನು ಕುರಿತು ವಿನಯದಿಂದ—ಕಕ್ಕಂದಿರೇ, ತಮ್ಮ ಆಗ್ರಹವಿರುವದರಿಂದ ನಾನಾದರೂ ಆಸೆಯಿಂದ ಕೇಳಿ ಕೊಳ್ಳುತ್ತಿರುವೆನು. ನನ್ನ ಮಗಳು ಬಹು ಅಯೋಗ್ಯಳೆಂದು ತಿರಸ್ಕರಿಸದೆ ನನ್ನನ್ನು ಕ್ಷಮಿಸಬೇಕು. ನನ್ನ ಮೇಲೆ ತಾವು ಪ್ರಸನ್ನವಾದದ್ದೇ ನಿಜವಿದ್ದರೆ, ಜಗತ್ಸಿಂಗನನ್ನೂ, ಆತನ ಸಂಗಡಿಗರಾದ ತಿಲೋತ್ತಮಾ-ವಿಮಲಾದೇವಿಯರನ್ನೂ ಬಂಧಮುಕ್ತ ಮಾಡಿ ಬಿಟ್ಟುಕೊಡುವ ಕೃಪೆಮಾಡಬೇಕು. ಹಿರಿಯರಾದ ತಮ್ಮ ಮುಂದೆ ಮುಚ್ಚುಮರೆ ಮಾಡುವದು ನನ್ನ ಶೀಲವಲ್ಲ, ತಮಗೆ ಯೋಗ್ಯ ವಾಗಿಯೇ ತೋರಲಿ, ಅಯೋಗ್ಯವಾಗಿಯೇ ತೋರಲಿ, ನನ್ನ ಮನಸ್ಸು ಜಗತ್ಸಿಂಗನಲ್ಲಿ ಅನುರಕ್ತವಾಗಿ ರುವದರಿಂದ, ಇನ್ನು ನಾನು ಅನ್ಯ ಪುರುಷರ ಪಾಣಿಗ್ರಹಣಕ್ಕೆ ಅಯೋಗ್ಯ ಳಾಗಿರುತ್ತೇನೆ. ನನಗೆ ಅವಿವಾಹಿತ ಸ್ಥಿತಿಯಲ್ಲಿಯೇ ಜನ್ಮ ತಳೆಯುವ ಪ್ರಸಂಗ ಒದಗಿದರೂ ಚಿಂತೆಯಿಲ್ಲ. ಜಗತ್ಸಿಂಗನನ್ನು ಪ್ರತಿಬಂಧದೊಳಗಿಂದ ಬಿಡಿಸುವ ಪ್ರಸಂಗ ಒದಗಿರದಿದ್ದರೆ, ತಮ್ಮ ಕರ್ಣಗಳಿಗೆ ಕಠೋರವಾಗಿ ತೋರುವ ಈ ಮಾತುಗಳನ್ನು ನಾನು ಸರ್ವಥಾ ಆಡುತ್ತಿದ್ದಿಲ್ಲ.

ನಾನು ಲಗ್ನದ ಪ್ರಸಕ್ತಿಯನ್ನೇ ತಮ್ಮ ಮುಂದೆ ತೆಗೆಯದೆ, ಅವಿವಾಹಿತಳಾಗಿ ಜನ್ಮವನ್ನು ಕಳೆಯುತ್ತಿದ್ದೆನು.

ಈ ಮೇರೆಗೆ ನುಡಿದು, ಲಜ್ಜೆಯಿಂದ ತಲೆಬಾಗಿಸಿಕೊಂಡು ನಿಂತು ಆಯೇಷೆಯು ಕಣ್ಣೀರು ಸುರಿಸಹತ್ತಲು, ಅದನ್ನು ನೋಡಿ ಕಾತಲೂಖಾನನು ಬೆರಗಾಗಿ ಸುಮ್ಮನೆ ಕುಳಿತುಬಿಟ್ಟನು. ಬಹಳ ಹೊತ್ತಿನವರೆಗೆ ಆತನ ಮುಖದಿಂದ ಶಬ್ದಗಳೇ ಹೊರಡಲಿಲ್ಲ. ವಿಚಾರಾಂತರದಲ್ಲಿ ಆತನು ವಿವೇಕದಿಂದ ಆಯೇಷೆಯನ್ನು ಕುರಿತು—ವತ್ಸೆ, ನಿನ್ನ ಕೃತಿಯು ನನ್ನ ಮನಸ್ಸಿಗೆ ಬಾರದಿದ್ದರೂ, ಪವಿತ್ರ ಪ್ರೇಮದ ವಿಷಯವು ಅತಿ ಸೂಕ್ಷ್ಮವಾಗಿರುವದರಿಂದ, ನಿನ್ನ ಮೇಲೆ ನಾನು ಸಿಟ್ಟಾಗುವದಿಲ್ಲ; ಇದಲ್ಲದೆ ಧೈರ್ಯದಿಂದ ನೀನು ನನ್ನ ಮುಂದೆ ಸತ್ಯಸ್ವರೂಪವನ್ನು ತೆರೆದಿಟ್ಟದ್ದಕ್ಕಾಗಿ ನಿನ್ನನ್ನು ನಾನು ಬಹಳವಾಗಿ ಶ್ಲಾಘಿಸುವೆನು. ಮಗುವೇ, ಜಗತ್ಸಿಂಗನು ನಮ್ಮ ವೈರಿಯಿದ್ದರೂ ಆತನು ಮುಸಲ್ಮಾನನಾದರೂ ಆಗಿದ್ದರೆ, ಒಂದು ಪಕ್ಷದಲ್ಲಿ ಸಮಾಧಾನ ಪಡಬಹುದಾಗಿತ್ತು; ಆದರೆ ಇನ್ನು ನನ್ನ ಸಮಾಧಾನ–ಅಸಮಾಧಾನಗಳನ್ನು ತಕ್ಕೊಂಡು ಮಾಡುವದೇನು? ನಿನಗೆ ವಚನ ಕೊಟ್ಟಂತೆ ನಾನು ಜಗತ್ಸಿಂಗನನ್ನೂ, ತಿಲೋತ್ತಮಾ–ವಿಮಲಾದೇವಿಯರನ್ನೂ ಕಾರಾಗೃಹದಿಂದ ಮುಕ್ತರಾಗ ಮಾಡುವೆನು. ಪ್ರೇಮದ ವಿಷಯದಲ್ಲಿ ಒತ್ತಾಯವು ಕೆಲಸದ್ದಲ್ಲವಾದದ್ದರಿಂದ, ನೀತಿಸಂಪನ್ನಳಾದ ನೀನು ನಿನ್ನ ಮನಸ್ಸಿಗೆ ಬಂದಂತೆ ಮಾಡಬಹುದು. ಸದ್ಯಕ್ಕೆ ತಿಲೋತ್ತಮಾ–ವಿಮಲಾದೇವಿಯರನ್ನು ಬಿಡುತ್ತೇನೆ. ಮೊಗಲರೊಡನೆ ಒಪ್ಪಂದವಾದ ಬಳಿಕ ಜಗತ್ಸಿಂಗನನ್ನು ಬಿಡುವೆನು. ನಿನ್ನ ಮಾತನ್ನು ನಡಿಸುವದಕ್ಕಾಗಿಯೇ ನಾನು ನಾಳೆ ರಾಜಾ ಮಾನಸಿಂಗರವರನ್ನು ಸಂಧಿಗಾಗಿ ಯಾಚಿಸುವೆನು. ಯಾವ ಮಾತಿಗೂ ನೀನು ಅಸಮಾಧಾನಪಡಬೇಡ. ಅನೀತಿಕಾರಕವಾದ ಯಾವ ಪಾಪಕೃತ್ಯವೂ ನಿನ್ನಿಂದ ಸಂಘಟಿಸಿರುವದಿಲ್ಲ ಎಂದು ಹೇಳಿ ಆತನು ತನ್ನ ಎಲ್ಲ ಪರಿವಾರದೊಡನೆ ತನ್ನ ಪಾಳಯಕ್ಕೆ ತೆರಳಿದನು. ಕೂಡಲೆ ಆತನ ಅಪ್ಪಣೆಯಿಂದ ತಿಲೋತ್ತಮೆಯೂ, ವಿಮಲಾದೇವಿಯೂ ಬಂಧಮುಕ್ತರಾದರು.

ತಿಲೋತ್ತಮೆಯ ಕೋಮಲ ಹೃದಯವನ್ನು ವಾಚಕರು ಬಲ್ಲರಷ್ಟೆ. ಆಕೆಯು ಮಹಾ ಪತಿವ್ರತೆಯೂ, ಪತಿಭಕ್ತಿಪರಾಯಣಳೂ ಆಗಿದ್ದಳು. ಕಾರಾಗೃಹದಲ್ಲಿರುವಾಗ ಪತಿಯ ಚಿಂತನದ ಹೊರತು ಅನ್ಯ ವಿಷಯಗಳನ್ನು ಆಕೆಯು ಚಿಂತಿಸಳು. ಕಾರಾಗೃಹದಲ್ಲಿ ಕೇವಲ ಔದಾಶೀನ್ಯ ದಿಂದ ಆಕೆಯ ಕಾಲಹರಣವಾಗುತ್ತಿತ್ತು. ಸ್ವಚ್ಛಂದ ವೃತ್ತಿಯ ಪಠಾಣರು ಕೂಡ ಆ ಕೋಮಲೆಯ ದೈನ್ಯ ಮುದ್ರೆಯನ್ನು ನೋಡಿ ಮರಗುತ್ತಿದ್ದರಲ್ಲದೆ, ಆಕೆಯ ವಿಷಯವಾಗಿ ದುರ್ಬುದ್ಧಿಯನ್ನು ತಾಳುತ್ತಿದ್ದಿಲ್ಲ. ಸ್ವತಃ ಕಾತಲೂಖಾನನು ತಿಲೋತ್ತಮೆಯನ್ನೂ ವಿಮಲಾದೇವಿಯನ್ನು ತನ್ನ ಜನಾನಖಾನೆಯಲ್ಲಿ ಸೇರಿಸಿಕೊಳ್ಳಬೇಕೆಂದು ಮಾಡಿದ್ದನು; ಆದರೆ ತಿಲೋತ್ತಮೆಯ ಮುಖವನ್ನು ನೋಡಿದಕೂಡಲೆ ಆತನ ಆ ದುಷ್ಟ ಬುದ್ಧಿಯು ಅಳಿದು ಹೋಗಿ, ಅವನು ತನ್ನ ವಿಚಾರವನ್ನು ಬಿಟ್ಟುಬಿಟ್ಟಿದ್ದನು. ತಿಲೋತ್ತಮೆಯ ವಿಷಯವಾಗಿ ಆತನು ಒಂದು ಪ್ರಕಾರದ ಪೂಜ್ಯ ಬುದ್ಧಿಯನ್ನು ತಾಳಿದ್ದನು. ಹೀಗಿರುವಾಗ

ತಿಲೋತ್ತಮೆಯು, ಆಯೇಷೆಯ ದೀರ್ಘ ಪ್ರಯತ್ನದಿಂದ ಕಾರಾಗೃಹ ದಿಂದ ಮುಕ್ತಳಾಗಲು, ಆಕೆಯು ಕಾರಾಗೃಹದಲ್ಲಿರುವ ತನ್ನ ಪತಿಯ ದರ್ಶನಕ್ಕಾಗಿ ಆತುರಪಟ್ಟಳು. ಪತಿಯ ಬಳಿಗೆ ಹೊರಟಿರುವಾಗ ಆಕೆಯ ಹೃದಯವು ಆನಂದಾತಿಶಯದಿಂದ ಉಕ್ಕಿ ಬರುತ್ತಲಿತ್ತು. ತನ್ನನ್ನು ನೋಡಿದ ಕೂಡಲೆ ಪತಿಯು ಆನಂದಪಟ್ಟು, ತನ್ನನ್ನು ಸಂತೈಸಬಹುದೆಂದು ಆಕೆಯು ಭಾವಿಸುತ್ತಲಿದ್ದಳು. ನಿಷ್ಪಾಪಳಾದ ಆ ಸುಂದರಿಯು ಪತಿಯ ಬಳಿಗೆ ಹೊರಟಿರುವಾಗ ಆಕೆಯ ಹಾದಿಯೇ ಸಾಗಲೊಲ್ಲದು. ಸಮೀಪದಲ್ಲಿದ್ದ ಕಾರಾಗೃಹವು ಆಕೆಗೆ ಬಹು ದೂರವಾಗಿ ತೋರಿತು. ಆಕೆಯು ಅತ್ಯಂತವಾದ ಆತುರತೆಯಿಂದಲೂ, ಪತಿ ವಿಷಯಕವಾದ ಸುಮಂಗಲ ಕಲ್ಪನೆಗಳಿಂದಲೂ ಉಲ್ಲಾಸಪಟ್ಟವಳಾಗಿ ಪತಿಯ ಬಳಿಗೆ ಆಸ್ಥೆಯಿಂದ ಹೋದಳು. ಆದರೆ ಜಗತ್ಸಿಂಗನು ಆಕೆಯನ್ನು ಕಣ್ಣೆತ್ತಿ ನೋಡಲಿಲ್ಲ. ಸಂತಯಿಸುವದಂತು ಒತ್ತಟ್ಟಿಗೇ ಉಳಿಯಿತು.

ಕೈಯಲ್ಲಿ ಸಿಕ್ಕ ಹಿಂದೂ ತರುಣ ಸ್ತ್ರೀಯರ ವಿಷಯವಾಗಿ ಮುಸಲ್ಮಾನರ ಮನಸ್ಸು ಅಪವಿತ್ರ ವಾಗಿರುತ್ತದೆಂದು ತಿಳಿಯುವದು ಹಿಂದೂ ಜನರ ವಾಡಿಕೆಯಾಗಿತ್ತು. ಈ ವಾಡಿಕೆಯ ತಿಳುವಳಿಕೆ ಯಂತೆ ಜಗತ್ಸಿಂಗನು ತಿಲೋತ್ತಮೆಯ ಪಾತಿವ್ರತ್ಯದ ವಿಷಯವಾಗಿ ಸಂಶಯ ಗ್ರಸ್ತನಾಗಿದ್ದನು. ತಿಲೋತ್ತಮೆಯ ಮೇಲಿದ್ದ ಆತನ ದೃಢತರವಾದ ಪ್ರೇಮವೇ ಆತನ ಸಂಶಯದ ಹೆಚ್ಚಳಕ್ಕೆ ಕಾರಣವಾಗಿತ್ತು. ಸೆರೆಮನೆಯಲ್ಲಿಯ ವಾಸದಲ್ಲಿ ಆತನಿಗೆ ಎರಡನೆಯ ಉದ್ಯೋಗ ಗಳೇನು ಇಲ್ಲದ್ದರಿಂದ, ಇಲ್ಲದ ದುಷ್ಕಲ್ಪನೆಗಳನ್ನು ಆತನು ಕಲ್ಪಿಸಿಕೊಂಡು ತನ್ನ ಮನಸ್ಸನ್ನು ಕಲುಷಿತವಾಗಿ ಮಾಡಿಕೊಂಡಿದ್ದನು. ಮೊದಲೇ ರಜಪೂತರಲ್ಲಿ ಸ್ತ್ರೀಯರ ಪಾತಿವ್ರತ್ಯಕ್ಕೆ ಗೌರವವು ಹೆಚ್ಚು, ಅದರಲ್ಲಿ ಮಾನಸಿಂಹನಂಥ ಕುಲೀನ ರಜಪೂತನ ಮಗನ ಹೆಂಡತಿಯ ಪಾತಿವ್ರತ್ಯದ ವಿಷಯದ ವಿಚಾರವು; ಅಂದಬಳಿಕ ಕೇಳುವದೇನು? ದುಷ್ಟ ಕಲ್ಪನೆಯಿಂದ ಪೀಡಿತನಾದ ಜಗತ್ಸಿಂಗನಿಗೆ ತಿಲೋತ್ತಮೆಯ ಮುಖಾವಲೋಕನವು ತ್ರಾಸದಾಯಕವಾಯಿತು. ಆತನು ತಿರಸ್ಕಾರದಿಂದ ತಿಲೋತ್ತಮೆಯನ್ನು ಕೆಕ್ಕರಿಸಿ ನೋಡಿ–ತಿಲೋತ್ತಮೇ, ಕುಲೀನಳಾದ ರಜಪೂತ ತರುಣಿಯು ಮುಸಲ್ಮಾನರ ಸೆರೆಯಲ್ಲಿದ್ದು, ತನ್ನ ಪವಿತ್ರತೆಯನ್ನು ಸಿದ್ಧಮಾಡಿದ ಹೊರತು ನಿನ್ನ ಹಾಗೆ ನಿರ್ಲಜ್ಜೆಯಿಂದ ಪತಿಯ ಎದುರಿಗೆ ನಿಂತುಕೊಳ್ಳಲಾರಳು. ಹೋಗು, ಅಪವಿತ್ರಳಾದ ನಿನ್ನ ಮುಖಾವಲೋಕನವನ್ನು ಕೂಡ ನಾನು ಮಾಡಲಾರೆನು. ಇನ್ನುಮೇಲೆ ನೀನು ಕಾತಲೂಖಾನನ ಜನಾನಖಾನೆಯಲ್ಲಿ ಆತನ ಪ್ರೀತಿ ಪಾತ್ರಳಾಗಿರುವದೇ ಯೋಗ್ಯವು. ಇನ್ನು ಅಂಬರಾಧೀಶ್ವರನಾದ ಮಾನಸಿಂಹನ ಮಗನು ನಿನ್ನೊಡನೆ ಭಾಷಣ ಮಾಡಲಾರನು, ಎಂದು ನುಡಿದು, ಉಸುರ್ಗಳೆದು ಸಂತಾಪದಿಂದ ಉರಿಯಹತ್ತಿದನು.

ಪತಿಯ ಈ ಕಠೋರ ವಚನಗಳನ್ನು ಕೇಳಿ ತಿಲೋತ್ತಮೆಯ ಎದೆಯೊಡೆದು ನೀರಾಯಿತು. ಆಕೆಯು ಭಯದಿಂದ ಕಂಪಿಸಹತ್ತಿದಳು. ಆಕೆಯ ಕಣ್ಣುಗಳು ಕತ್ತಲು ಗೂಡಿಸಿದವು; ಕಾಲುಗಳು ತತ್ತರಿಸಿದವು. ಪತಿಯ ಕಟ್ಟಕಡೆಯ ಶಬ್ದವು ಕಿವಿಗೆ ಬಿದ್ದಕೂಡಲೆ ದುಃಖಾತಿಶಯದಿಂದ ಆಕೆಯು ಮೈಮರೆತು ನೆಲಕ್ಕೆ ಬಿದ್ದಳು; ಆದರೆ ಜಗತ್ಸಿಂಗನಿಗೆ ದಯೆಬರಲಿಲ್ಲ, ಆತನು ತಿಲೋತ್ತಮೆಯನ್ನು ಎಬ್ಬಿಸಲಿಲ್ಲ, ವಜ್ರದಂತೆ ಕಠಿಣ

ಹೃದಯವುಳ್ಳವನಾಗಿ ಆತನು ತಿಲೋತ್ತಮೆಯನ್ನು ಮನಸ್ಸಿನಲ್ಲಿ ತಿರಸ್ಕರಿಸುತ್ತ ಸಂತಾಪ ಪಡುತ್ತಲಿದ್ದನು. ಅಷ್ಟರಲ್ಲಿ ಆಯೇಷೆಯು ಅಲ್ಲಿಗೆ ಬಂದು, ಈ ಅನರ್ಥವನ್ನು ನೋಡಿ ಕನಿಕರಪಟ್ಟಳು. ಆಕೆಯು ಅತ್ಯಂತ ವಾತ್ಸಲ್ಯದಿಂದ ತಿಲೋತ್ತಮೆಯನ್ನು ಉಪಚರಿಸಿ ಎಬ್ಬಿಸಿ ಕುಳ್ಳಿರಿಸಿದಳು. ಆದರೆ ತಿಲೋತ್ತಮೆಗೆ ಪ್ರಜ್ಞೆಯಿದ್ದಿಲ್ಲ, ಆಕೆಯು ಭ್ರಮಿಷ್ಠಳಂತೆ ಆಗಿದ್ದಳು. ಆಯೇಷೆಯು ಆಗ ಹೆಚ್ಚಿಗೆಯೇನು ಮಾತಾಡದೆ, ಜಗತ್ಸಿಂಗನಿಗೆ— ರಾಜಪುತ್ರರೇ, ತಿಲೋತ್ತಮೆಯು ಸಾಮಾನ್ಯ ಸ್ತ್ರೀಯಳಲ್ಲ ಅಂತೇ ಆಕೆಯು ಈವರೆಗೆ ಪಠಾಣರ ಕಾರಾಗೃಹದಲ್ಲಿ ಪತಿಧ್ಯಾನ ಪರಾಯಣಳಾಗಿ ತನ್ನ ಪಾತಿವ್ರತ್ಯವನ್ನು ಕಾಯ್ದುಕೊಂಡಿರುವಳು. ಇಲ್ಲದಿದ್ದರೆ ಇಷ್ಟುಹೊತ್ತಿಗೆ ನಮ್ಮ ಕಕ್ಕನ ರಾಣೀವಾಸದಲ್ಲಿ ಸೇರ್ಪಡೆಯಾಗಿ ಹೋಗುತ್ತಿದ್ದಳು. ಈ ಪುಣ್ಯವಂತಳ ಮಂಗಳಕಾರಕವಾದ ಮುಖವನ್ನು ನೋಡಿದ ಕೂಡಲೆ, ಕಾತಲೂಖಾನನ ದುಷ್ಟ ಬುದ್ಧಿಯು ನಾಶವಾಗಿ, ಆತನಲ್ಲಿ ತಿಲೋತ್ತಮೆಯ ವಿಷಯವಾಗಿ ಪೂಜ್ಯ ಬುದ್ಧಿಯು ಉತ್ಪನ್ನವಾಯಿತು. ಇರಲಿ, ಸದ್ಯಕ್ಕೆ ಈಕೆಯನ್ನೂ ವಿಮಲಾದೇವಿಯನ್ನೂ ಬಂಧಮುಕ್ತಮಾಡಿ ಕಳಿಸುವೆನು. ತಮ್ಮ ದರ್ಶನಕ್ಕಾಗಿ ಧಾವಿಸಿ ಬಂದಿದ್ದ ತಿಲೋತ್ತಮೆಯ ಅವಸ್ಥೆಯು ಹೀಗಾದದ್ದನ್ನು ನೋಡಿ ನನಗೆ ಬಹಳ ವ್ಯಸನವಾಗುತ್ತದೆ, ಎಂದು ನುಡಿದು, ಆಕೆಯು ತಿಲೋತ್ತಮೆಯನ್ನು ಕರಕೊಂಡು ಹೊರಟು ಹೋದಳು. ಇತ್ತ ಜಗತ್ಸಿಂಗನು ಆಯೇಷೆಯ ಈ ಮಾತುಗಳನ್ನು ಕೇಳಿ ತನ್ನ ಕಠಿಣ ಹೃದಯವನ್ನು ಹಳಿದುಕೊಳ್ಳುತ್ತ ಪಶ್ಚಾತ್ತಾಪ ಪಡಹತ್ತಿದನು.

## ಸಮರ್ಪಕ ಬೋಧ

ಈ ಮೇರೆಗೆ ತಿಲೋತ್ತಮೆಯ ವಿಷಯವಾಗಿ ಆಯೇಷೆಯು ಪಟ್ಟ ಒಳ್ಳೆಯ ಅಭಿಪ್ರಾಯವನ್ನು ಕೇಳಿ ಜಗತ್ಸಿಂಗನಿಗೆ ಬಹಳ ಪಶ್ಚಾತ್ತಾಪವಾಯಿತು. ತನ್ನನ್ನೇ ನಂಬಿ ಬಹು ಕಷ್ಟದಿಂದ ಕಾರಾಗೃಹವಾಸ ಮಾಡಿ, ಅತ್ಯಂತವಾದ ಪ್ರೇಮದ ಹಂಬಲದಿಂದ ತನ್ನ ಬಳಿಗೆ ಬಂದಿರುವ ಆ ಸುಂದರಿಯ ಗುಣದೋಷಗಳನ್ನು ವಿಚಾರಿಸದೆ, ದುರಭಿಮಾನದಿಂದ ಆಕೆಯನ್ನು ತಿರಸ್ಕರಿಸಿದ್ದಕ್ಕಾಗಿ ಆತನು ಮರಮರನೆ ಮರುಗಿದನು. ಜಗತ್ಸಿಂಗನಂಥ ಸರಳ ಹೃದಯದ ತರುಣನ ಗತಿಯು ಹೀಗೆಯೇ ಸರಿ. ಅವರ ಮನಸ್ಸಿನಲ್ಲಿ ಯಾವದೊಂದು ವಿಚಾರವಾಗಲಿ, ವಿಕಾರವಾಗಲಿ, ಕಲ್ಪನೆಯಾಗಲಿ ಉತ್ಪನ್ನವಾದರೆ ತೀರಿತು, ಅದು ಬಡಬಡ ದೊಡ್ಡದಾಗಿ ಅದರ ಭವ್ಯ ಸ್ವರೂಪವು ಜನರ ಕಣ್ಣಿಗೆ ಬಿತ್ತೆಂದು ತಿಳಿಯಬೇಕು. ಅಂಥವರಿಗೆ ಸಾವಧಾನದ ಸುದ್ದಿಯೇ ಗೊತ್ತಿರುವದಿಲ್ಲ, ಅದರಲ್ಲಿ ಸ್ವಸ್ತ್ರೀಯ ವಿಷಯದ ಕೆಟ್ಟ ಕಲ್ಪನೆಯು ಮನಸ್ಸಿನಲ್ಲಿ ಹೊಳೆದರೆ ತೀರಿತು, ಅದನ್ನೇ ಅವರು ನಿಜವೆಂದು ದೃಢವಾಗಿ ನಂಬಿ, ವಿಕಾರವಶವಾಗುವರು. ಇಂಥವರಿಗೆ ತಮ್ಮ ತಪ್ಪು ತಿಳಿಯಲು ಪಶ್ಚಾತ್ತಾಪವಾಗುವದೂ ತಡವಲ್ಲ, ಹೀಗೆ ಒಮ್ಮೆ ವಿಕಾರವಶವಾಗಿ ಸಂತಾಪಗೊಳ್ಳುವದೂ, ಒಮ್ಮೆ ವಿಚಾರವಶರಾಗಿ

ಪಶ್ಚಾತ್ತಾಪ ಪಡುವದೂ ಸರಳ ಹೃದಯದ ನಿರ್ಧಾರ ಸ್ವಭಾವದ ತರುಣರ ಪಾಲಿಗೆ ಮೇಲೆ ಮೇಲೆ ಬರುವದರಿಂದ, ಅವರು ಬಹಳ ಗಾಸಿಯಾಗುವರು. ಸದ್ಯಕ್ಕೆ ಜಗತ್ಸಿಂಗನ ಸ್ಥಿತಿಯು ಹೀಗೆಯೇ ಆಗಿತ್ತು. ಆತನು ತನ್ನ ಕಠೋರತನಕ್ಕಾಗಿ ವ್ಯಸನಪಡುತ್ತ ಸುಮ್ಮನೆ ಕುಳಿತಿದ್ದನು. ತಿಲೋತ್ತಮೆಯನ್ನು ಕಂಡು ಯಾವಾಗ ಸಮಾಧಾನಪಡಿಸೇನೆನ್ನುವ ಹಾಗೆ ಆತನಿಗೆ ಆಗಿತ್ತು; ಆದರೆ ಪರಾಧೀನನಾದ ಆತನಿಗೆ ಏನು ಮಾಡಲಿಕ್ಕೂ ಬರುವಹಾಗಿದ್ದಿಲ್ಲ. ಆತನು ತನ್ನ ದುರವಸ್ಥೆಯನ್ನು ಹಳಿದುಕೊಳ್ಳುತ್ತ ಕುಳಿತಿರಲು, ಆಯೇಷೆಯು ಪುನಃ ಅಲ್ಲಿಗೆ ಬಂದಳು. ಆಕೆಯನ್ನು ನೋಡಿದ ಕೂಡಲೆ ಜಗತ್ಸಿಂಗನಿಗೆ ತನ್ನ ಒಬ್ಬ ಪರಮ ಆಪ್ತಳನ್ನು ಕಂಡಂತೆ ಸಂತೋಷವಾಗುತ್ತಿತ್ತು. ಆಕೆಯು ಉಸ್ಮಾನನ ಮುಂದೆ ಜಗತ್ಸಿಂಗನೇ ತನ್ನ ಪತಿಯೆಂದು ಹೇಳಿದ್ದನ್ನು ಆ ತರುಣ ರಜಪೂತನು ಕಿವಿಮುಟ್ಟಿ ಕೇಳಿದ್ದನು. ಇಂಥ ಸದ್ಗುಣಗಳ ಮೂರ್ತಿಯೂ, ಲೋಕೋತ್ತರ ಸುಂದರಿಯೂ ಆದ ಆಕೆಯಲ್ಲಿ ತನ್ನ ಮನಸ್ಸು ಪತ್ನೀಭಾವವನ್ನು ವಹಿಸಿ ಆನಂದಪಡದ್ದನ್ನು ನೋಡಿ ಆತನಿಗೆ ಆಶ್ಚರ್ಯವಾಗುತ್ತಿತ್ತು. ಆಯೇಷೆಯ ಇಚ್ಛೆಯಂತೆ ಆತನು ''ನಾನು ನಿನ್ನನ್ನು ಪತ್ನಿಯೆಂದು ಭಾವಿಸುವೆನೆ''ಂದು ಆಕೆಯ ಮುಂದೆ ಎಂದೂ ಹೇಳಿದ್ದಿಲ್ಲ; ಹಾಗೆ ಹೇಳುವದಂತು ಇರಲಿ, ಆಯೇಷೆಯ ಮಾತಿಗೆ ತೋರಿಕೆಗಾದರೂ ಸಂತೋಷವನ್ನು ವ್ಯಕ್ತಮಾಡಿದ್ದಿಲ್ಲ. ಹೀಗಿದ್ದರೂ ಜಗತ್ಸಿಂಗನ ಮೇಲಿನ ಆಯೇಷೆಯ ಪ್ರೇಮವು ರವಷ್ಟಾದರೂ ಕಡಿಮೆಯಾಗಿದ್ದಿಲ್ಲ. ಇದನ್ನು ಸ್ಮರಿಸಿ, ಜಗತ್ಸಿಂಗನು ಆಯೇಷೆಯ ಪ್ರೇಮ ದಾರ್ಢ್ಯಕ್ಕಾಗಿ ಆಶ್ಚರ್ಯಪಡುತ್ತ ಚಂಚಲ ಪ್ರೇಮದ ತಾನು ತಿಲೋತ್ತಮೆಯನ್ನು ನಿಷ್ಕಾರಣ ತಿರಸ್ಕರಿಸಿದ್ದಕ್ಕಾಗಿ ಬಹಳವಾಗಿ ನಾಚಿದನು. ಆಗ ಆಯೇಷೆಯು ಪ್ರೇಮಪೂರ್ಣವಾದ ದೃಷ್ಟಿಗಳಿಂದ ಜಗತ್ಸಿಂಗನನ್ನು ನೋಡಿ ಮುಗುಳುನಗೆಯಿಂದ—

ಆಯೇಷೆ—ನಿಮ್ಮ ತರುಣ ಪುರುಷರ ಪ್ರೇಮವು ಎಷ್ಟು ಚಂಚಲವದು! ನೀವು ಮಂದಾರಣಗಡದಲ್ಲಿ ತಿಲೋತ್ತಮೆಯ ಪ್ರೇಮಪಾಶದಲ್ಲಿ ಸಿಕ್ಕಿದನ್ನು ನಾನು ಕಣ್ಣುಮುಟ್ಟಿ ನೋಡಿರುವೆನು; ಆದರೆ ಈಗ ನೀವು ಏನೂ ವಿಚಾರಮಾಡದೆ ತಿಲೋತ್ತಮೆಯ ಮೇಲಿನ ಪ್ರೇಮವನ್ನು ನಷ್ಟಪಡಿಸಿಕೊಂಡವರಂತೆ ಆಕೆಯನ್ನು ತಿರಸ್ಕರಿಸಿ, ನಿರಪರಾಧಿಯಾದ ಆ ಸುಕುಮಾರಿಯ ಹೃದಯಕ್ಕೆ ತಾಪವನ್ನುಂಟುಮಾಡಿದಿರಲ್ಲ! ಇದು ನ್ಯಾಯವೊ?

ಜಗತ್ಸಿಂಗ—ಸ್ತ್ರೀಯರಿಗೆ ಪಾತಿವ್ರತ್ಯವೇ ಅಲಂಕಾರವು. ಪ್ರಾಣಾಂತ ಸಮಯ ಒದಗಿದರೂ ಆ ಅಲಂಕಾರವನ್ನು ಕಳೆದುಕೊಳ್ಳದ ಸ್ತ್ರೀಯೇ ಆದರಣೀಯಳು. ಪರಸ್ತ್ರೀ ಲಂಪಟರಾದ ಮುಸಲ್ಮಾನರ ಸೆರೆಮನೆಯಲ್ಲಿ ಬಹುದಿವಸ ಇದ್ದು ದೇಹತ್ಯಾಗ ಮಾಡದೆಯಿದ್ದ ತಿಲೋತ್ತಮೆಯನ್ನು ಪರಿಶುದ್ಧಳೆಂದು ನಾನು ಹ್ಯಾಗೆ ತಿಳಿಯಬೇಕು? ನಾಯಿ ಮುಟ್ಟಿದ ಗಡಿಗೆಯಂತೆ ಪತಿವ್ರತೆಯಲ್ಲದ ಸ್ತ್ರೀಯು ಎಲ್ಲರಿಂದ ತಿರಸ್ಕರಿಸಲ್ಪಡುವವಳೇ ಸರಿ.

ಆಯೇಷೆ—ನಿಮ್ಮ ಮಾತನ್ನು ನಾನು ಸರ್ವಥಾ ಒಪ್ಪಿಕೊಳ್ಳುವೆನು; ಆದರೆ ಪರಗೃಹ ವಾಸಮಾಡಿ ಬದುಕಿ ಉಳಿದ ಮಾತ್ರದಿಂದ ಸ್ತ್ರೀಯು ಅಪವಿತ್ರಳೇ ಎಂದು ನೀವು ಭಾವಿಸುವದೂ, ಮುಸಲ್ಮಾನರೆಲ್ಲರೂ ಪರಸ್ತ್ರೀ ಲಂಪಟರೇ ಇರುವರೆಂದು ನೀವು

ತಿಳಕೊಂಡಿರುವದೂ ನನ್ನ ಮನಸ್ಸಿಗೆ ಬರುವದಿಲ್ಲ. ಪಾತಿವ್ರತ್ಯದ ಭಂಗವಾಗುವ ಪ್ರಸಂಗ ಒದಗಿದ್ದ ಪಕ್ಷದಲ್ಲಿ ತಿಲೋತ್ತಮೆಯ ಮುಖವು ತಿರುಗಿ ನಿಮ್ಮ ಕಣ್ಣಿಗೆ ನಿಶ್ಚಯವಾಗಿ ಬೀಳುತ್ತಿದ್ದಿಲ್ಲ. ಆಕೆಯು ನಿಶ್ಚಯವಾಗಿ ಪ್ರಾಣತ್ಯಾಗ ಮಾಡುತ್ತಿದ್ದಳು. ಆ ಗುಣಸುಂದರಿಯು ಇಂದು ನಿಮ್ಮ ಕಣ್ಣಿಗೆ ಬೀಳಲಿಕ್ಕೆ ನಮ್ಮ ಕಕ್ಕಂದಿರಾದ ಕಾತಲೂಖಾನರ ಸದ್ಗುಣವು ಕಾರಣವೆಂಬದನ್ನು ನೀವು ಮರೆಯಬೇಡಿರಿ. ನಮ್ಮ ಕಕ್ಕಂದಿರು ತಿಲೋತ್ತಮೆಯನ್ನು ತನ್ನ ಮಗಳೆಂದು ಭಾವಿಸಿರುವರು. ಅವರು ಹಾಗೆ ಭಾವಿಸಿದ್ದರಿಂದಲೇ ನನ್ನ ವಿನಂತಿಯನ್ನು ಮನ್ನಿಸಿ ನಿಮ್ಮನ್ನು ಬೇಗನೆ ಅವರು ಕಾರಾಗೃಹದಿಂದ ಮುಕ್ತಮಾಡುವರು. ಈಗ ಒಡಂಬಡಿಕೆಯನ್ನು ಮಾಡಿಕೊಳ್ಳಬೇಕೆಂದು ನಿಮ್ಮ ತಂದೆಯವರ ಕಡೆಗೆ ಅವರು ತಮ್ಮ ವಕೀಲನನ್ನು ಕಳಿಸಿರುವರು. ಒಡಂಬಡಿಕೆಯಾದ ಕೂಡಲೆ ನಿಮ್ಮ ಬಂಧವಿಮೋಚನೆಯಾಗುವದು.

ಜಗತ್ಸಿಂಗ—ನಿಮ್ಮ ಕಕ್ಕಂದಿರ ನಡತೆಯನ್ನು ನಾನು ಕೇಳಿಬಲ್ಲೆನು; ಅವರು ಇಷ್ಟು ಪರನಾರೀ ಸೋದರರಲ್ಲ. ಹಿಂದೂ ಸ್ತ್ರೀಯರಂತೂ ಅವರ ಪಾಪವಾಸನೆಯ ಬಲೆಗೆ ಸಿಲುಕದೆ ಪಾರಾಗಲಾರರು.

ಆಯೇಷೆ—ಅದು ಹ್ಯಾಗೆ ಇರಲಿ, ತಿಲೋತ್ತಮೆಯ ವಿಷಯವಾಗಿ ಅವರ ಮೇಲೆ ಕೆಟ್ಟ ಆರೋಪ ಹೊರಿಸುವವರ ನಾಲಿಗೆಗೆ ಹುಳ ಬೀಳುವದೇ ಸರಿ. ತಿಲೋತ್ತಮೆಯ ಮುಖವನ್ನು ನೋಡಿದ ಕೂಡಲೆ ಅವರಿಗೆ ನನ್ನನ್ನು ನೋಡಿದಂತೆ ಆಗಿ, ''ಬೇಟಾ ಆಯೇಷಾ'' ಎಂದು ಅವರು ಒಮ್ಮೆ ಕರೆದರು. ನಮ್ಮ ಕಕ್ಕಂದಿರ ಬಾಯಿಂದ ಹೊರಟ ಶಬ್ದವು ಎಂದೂ ಸುಳ್ಳಾಗಲಾರದು. ಒಮ್ಮೆ ಅವರ ಹೃದಯದಲ್ಲಿ ಮೂಡಿದ ಭಾವನೆಯು ಎಂದೂ ಅಳಿಸಲಾರದು. ಒಮ್ಮೆ ಅವರು ತಿಲೋತ್ತಮೆಯನ್ನು ಮಗಳೆಂದು ಭಾವಿಸಿದ್ದು ಭಾವಿಸಿ ಹೋಯಿತು. ತಿರುಗಿ ಆ ಭಾವನೆಯಲ್ಲಿ ಅಂತರವಾದರೆ ಕಾತಲೂಖಾನರ ಚಿತ್ತಸ್ಥೈರ್ಯಕ್ಕೂ, ಪ್ರಾಮಾಣಿಕತನಕ್ಕೂ ಕೊರತೆ ಬಂದೀತು. ಜಗತ್ಸಿಂಗ, ಈ ಆಯೇಷೆಯು ಕಾತಲೂಖಾನನ ಮಗಳಲ್ಲವೆ? ನಿಮ್ಮ ವಿಷಯವಾಗಿ ಉತ್ಪನ್ನವಾಗಿರುವ ಆಕೆಯ ಪತಿಭಾವನೆಯು, ನೀವು ಆಕೆಯನ್ನು ಪ್ರೀತಿಸಲಿ–ಪ್ರೀತಿಸದಿರಲಿ, ಆದರಿಸರಿ–ಆದರಿಸದಿರರಿ, ಆಕೆಯ ಮನಸ್ಸಿಗೆ ವಿಷಾದವಾಗಬೇಕೆಂದು ಒಬ್ಬ ಸ್ತ್ರೀಯನ್ನು ಲಗ್ನವಾಗಿರಿ, ಸಾವಿರ ಸ್ತ್ರೀಯರನ್ನು ಲಗ್ನವಾಗಿರಿ, ಎಂದೂ ನಷ್ಟವಾಗದು. ತನ್ನ ಭಾವನೆಯನ್ನು ಕಾಯ್ದುಕೊಂಡು ತದನುಸಾರವಾಗಿ ವರ್ತಿಸುವದಕ್ಕಾಗಿ ಪರಿಪರಿಯ ಕಷ್ಟಗಳನ್ನು ಭೋಗಿಸುವದೇ ಕಾತಲೂಖಾನನ ಮಗಳಾದ ಆಯೇಷೆಯ ಶೀಲವು. ಬಹಳ ಮಾತುಗಳಿಂದೇನು? ಕಾಲತ್ರಯದಲ್ಲಿ ಆಯೇಷೆಯ ಮುಖದಿಂದ ಅಸತ್ಯ ವಾಣಿಯು ಹೊರಡದು. ಅದಕ್ಕೆ ಅಲ್ಲಾನೇ ಸಾಕ್ಷಿಯು! ಇದೇ ಮಾತನ್ನು ನನ್ನ ಕಕ್ಕನ ವಿಷಯವಾಗಿ ನೀವು ನಿಜವೆಂದು ತಿಳಿಯಿರಿ.

ಜಗತ್ಸಿಂಗ—ಆಯೇಷೇ, ನಿನ್ನ ಗುಣಗಳನ್ನು ನಾನು ಬಲ್ಲೆನು. ನಿನ್ನ ಸದ್ಗುಣಗಳ ವರ್ಚಸ್ಸಿನಿಂದ ನನ್ನ ಕಣ್ಣುಗಳು ಕುಕ್ಕುತ್ತಿರುವವು. ನಿನ್ನ ಮಾತುಗಳ ವಿಷಯವಾಗಿ ನನ್ನಲ್ಲಿ ಬೇರೆ ಕಲ್ಪನೆಯಿಲ್ಲ. ತಿಲೋತ್ತಮೆಯನ್ನು ತಿರಸ್ಕರಿಸಿದ್ದಕ್ಕಾಗಿ ನನಗೆ ಬಹಳ ಪಶ್ಚಾತ್ತಾಪವಾಗಿರುತ್ತದೆ. ಈ ಅಪರಾಧಕ್ಕೆ ಶಿಕ್ಷೆ ಏನೆಂಬದನ್ನು ನೀನೇ ವಿಧಿಸು.

ಆಯೇಷೆ—ನಾನೇನು ಇದಕ್ಕೆ ಶಿಕ್ಷೆಯನ್ನು ವಿಧಿಸುವದು? ನೀವು ಬಂಧವಿಮೋಚನೆಯನ್ನು ಹೊಂದಿದಕೂಡಲೆ ತಿಲೋತ್ತಮೆಯನ್ನು ಲಗ್ನ ಮಾಡಿಕೊಳ್ಳಬೇಕು; ಮತ್ತು ಆ ಲಗ್ನಕ್ಕೆ ನನ್ನನ್ನು ಕರೆಸಬೇಕು. ಇದೇ ನಿಮಗೆ ಶಿಕ್ಷೆಯು!

ಆಯೇಷೆಯು ವಿಧಿಸಿದ ಈ ಶಿಕ್ಷೆಯನ್ನು ಕೇಳಿ ಜಗತ್ಸಿಂಗನು ಆಕೆಯ ಸರಳ ಹೃದಯಕ್ಕೂ, ನಿರ್ಮಾತ್ಸರ್ಯದ ಸ್ವಭಾವಕ್ಕೂ ಬಹಳವಾಗಿ ಮೆಚ್ಚಿದನು; ಆದರೆ ಆಕೆಯನ್ನು ಲಗ್ನವಾಗುವದಕ್ಕೆ ಆತನ ಮನಸ್ಸು ಹರಿಯಲಿಲ್ಲ. ಜಗತ್ಸಿಂಗನ ವಿಷಯವಾಸನಾ ತೃಪ್ತಿಗಾಗಿ ಬಹುಜನ ಹೆಂಡಿರನ್ನು ಲಗ್ನವಾಗುವಂಥ ಸರ್ವಸಾಧಾರಣ ಮನುಷ್ಯನಾಗಿದ್ದಿಲ್ಲ. ತನ್ನ ಧರ್ಮಪತ್ನಿಗೆ ನಿಜವಾದ ಪ್ರೇಮ ಸರ್ವಸ್ವವನ್ನು ಅರ್ಪಿಸುವ ಮಹಾತ್ಮನಾಗಿದ್ದನು. ಆತನನ್ನು ಏಕಪತ್ನೀವ್ರತದಲ್ಲಿ ಶ್ರೀರಾಮಚಂದ್ರನಿಗೆ ಹೋಲಿಸಬಹುದು. ಜಗತ್ಸಿಂಗನು ಪ್ರೇಮ ಸರ್ವಸ್ವವನ್ನು ತಿಲೋತ್ತಮೆಗೆ ಕೊಟ್ಟುಬಿಟ್ಟದ್ದರಿಂದ, ಅನ್ಯ ಸ್ತ್ರೀಯನ್ನು ಪತ್ನೀಭಾವದಿಂದ ಪ್ರೀತಿಸಲಿಕ್ಕೆ ಆತನಲ್ಲಿ ಪ್ರೇಮವೇ ಉಳಿದಿದ್ದಿಲ್ಲ. ಜಗತ್ಸಿಂಗನ ಸುದೈವದಿಂದ ತಿಲೋತ್ತಮೆಯು, ಆತನ ಮನಸ್ಸನ್ನು ಯಾವ ಮಾತಿನಲ್ಲಿಯೂ ಎರಡನೆಯ ಸ್ತ್ರೀಯ ಕಡೆಗೆ ಹರಿಯಗೊಡದಂಥ ಸದ್ಗುಣ ಪರಿಪೂರ್ಣ ಸುಂದರ ಸ್ತ್ರೀಯಾಗಿದ್ದಳು. ಈ ಜಗತ್ತಿನೊಳಗೆ ಗುಣಪರಿಪೂರ್ಣತೆಯಲ್ಲಿ ಇಲ್ಲಿಗೆ ಮುಗಿಯಿತೆಂದು ಮೇರೆಯನ್ನು ತೋರಿಸುವ ಸರ್ವಶ್ರೇಷ್ಠ ವಸ್ತುವು ದೊರೆಯುವದು ದುರ್ಲಭವೆಂಬಂತೆ, ತಿಲೋತ್ತಮೆಯನ್ನು ತಲೆಮೆಟ್ಟಿ ಹಾರುವಂಥ ಸ್ತ್ರೀಯರು ಮತ್ತೊಬ್ಬರಿದ್ದಿಲ್ಲೆಂದು ಹೇಳುವದು ಸಾಹಸದ ಮಾತಾಗಿದ್ದರೂ, ಸದ್ಗುಣ ಸಮುಚ್ಚಯದಲ್ಲಿ ತಿಲೋತ್ತಮೆಯನ್ನು ಹೋಲುವ ಅನ್ಯ ಸ್ತ್ರೀಯು ಸಿಗುವದು ದುರ್ಲಭವೆಂತಲೇ ನಾವು ಸ್ಪಷ್ಟವಾಗಿ ಹೇಳುವೆವು; ಆದರೆ ಆಯೇಷೆಯು ಮಾತ್ರ ಕೆಲವು ಸಂಗತಿಗಳಲ್ಲಿ ತಿಲೋತ್ತಮೆಯನ್ನು ಮೀರಿದವಳಿದ್ದಳು. ಅಂಥ ಲೋಕೋತ್ತರ ಯೋಗ್ಯತೆಯ ತರುಣಿಯು ತಾನಾಗಿ ತನ್ನನ್ನು ಪ್ರೀತಿಸುತ್ತಿರಲು, ಆಕೆಯನ್ನು ನಿರಾಕರಿಸುವಾಗ ಜಗತ್ಸಿಂಗನು ಪಶ್ಚಾತ್ತಾಪಪಡುತ್ತಿದ್ದನು. ಶ್ರೀರಾಮಚಂದ್ರನಿಗೆ ಸೀತಾಮಾತೆಯ ಹೊರತು ಅನ್ಯಸ್ತ್ರೀಯರ ಪಾಣಿಗ್ರಹಣ ಮಾಡುವ ಪ್ರಸಂಗ ಒದಗಿದಾಗ ಆತನು ಆ ಧನ್ಯರಾದ ಸ್ತ್ರೀಯರಿಗೆ—''ಈ ರಾಮಾವತಾರದಲ್ಲಿ ನಾನು ಏಕಪತ್ನೀವ್ರತಸ್ಥನಾಗಿರುವೆನು, ಮುಂದೆ ಕೃಷ್ಣಾವತಾರದಲ್ಲಿ ಬಹುಪತ್ನಿಗಳ ಸ್ವೀಕಾರಕ್ಕೆ ಯೋಗವಿರುವದರಿಂದ, ಆಗ ನಿಮ್ಮ ಪಾಣಿಗ್ರಹಣ ಮಾಡುವೆನೆಂ''ದು ವಚನ ಕೊಡಬೇಕಾಯಿತು. ಅದರಂತೆ ಜಗತ್ಸಿಂಗನು ಆಯೇಷೆಯ ಸದ್ಗುಣ–ಸೌಂದರ್ಯಗಳಿಗೆ ಒಮ್ಮೊಮ್ಮೆ ಲುಬ್ಧನಾಗುತ್ತಿದ್ದರೂ, ಈ ಜನ್ಮದಲ್ಲಿ ತಾನು ತನ್ನ ಪ್ರೇಮವನ್ನೆಲ್ಲ ತಿಲೋತ್ತಮೆಗೆ ಕೊಟ್ಟುಬಿಟ್ಟಿರುವದರಿಂದ, ಆಯೇಷೆಯ ಪಾಣಿಗ್ರಹಣಕ್ಕೆ ಈ ಜನ್ಮದಲ್ಲಿಯಂತು ಆಸ್ಪದವಿಲ್ಲೆಂದು ನಿಶ್ಚಯಿಸಿದ್ದನು. ಈ ಮಾತನ್ನು ಚಾಣಾಕ್ಷಳಾದ ಆಯೇಷೆಯು ಅರಿತದ್ದರಿಂದ, ಈ ಜನ್ಮದಲ್ಲಿ ತಾನು ಜಗತ್ಸಿಂಗನನ್ನು ಮನಸಾಧ್ಯಾನಿಸುತ್ತ ಬ್ರಹ್ಮಚರ್ಯ ವ್ರತದಿಂದಲೇ ಕಾಲಹರಣ ಮಾಡತಕ್ಕದ್ದೆಂದು ನಿಶ್ಚಯಿಸಿದ್ದಳು.

ಹೀಗಿರುವಾಗ ಮುಂದೆ ಸ್ವಲ್ಪ ದಿವಸಗಳಲ್ಲಿ ಪಠಾಣ ಕಾತಲೂಖಾನನಿಗೂ, ರಾಜಾ ಮಾನಸಿಂಹನಿಗೂ ಒಡಂಬಡಿಕೆಯಾದದ್ದರಿಂದ ಪಠಾಣ ಮೊಗಲರಲ್ಲಿಯ ಯುದ್ಧವು ನಿಲ್ಲಲು, ಜಗತ್ಸಿಂಗನು ಕಾರಾಗೃಹದಿಂದ ಮುಕ್ತನಾದನು. ಒಂದು ದಿನ ಜಗತ್ಸಿಂಗನು ಕಾರಾಗೃಹದಲ್ಲಿ ತಿಲೋತ್ತಮೆಯನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ವಿಚಾರದಿಂದ ತಾನು ಆಕೆಯನ್ನು ತಿರಸ್ಕರಿಸಿದ್ದಕ್ಕಾಗಿ ಪಶ್ಚಾತ್ತಾಪಪಡುತ್ತ ಕುಳಿತಿರಲು, ಆಯೇಷೆಯು ಆತನ ಬಳಿಗೆ ಬಂದಳು. ಆಕೆಯ ಸಂಗಡ ಉಸ್ಮಾನನೂ ಬಂದಿದ್ದನು. ಆಯೇಷೆಯು ಜಗತ್ಸಿಂಗನನ್ನು ಕುರಿತು– ರಾಜಪುತ್ರ ಜಗತ್ಸಿಂಗ, ನೀವು ಇಂದಿನಿಂದ ಕಾರಾಗೃಹದಿಂದ ಮುಕ್ತರಾದಿರಿ. ನಿಮ್ಮಂಥ ಸದ್ಗುಣಿಗಳು ರಾಜಕಾರಣದ ಮೂಲಕ ಇಷ್ಟುದಿನ ಕಾರಾಗೃಹ ದುಃಖವನ್ನು ಭೋಗಿಸಬೇಕಾಯಿತು. ಅದಕ್ಕಾಗಿ ನಮ್ಮೆಲ್ಲರಿಗೆ ಬಹಳ ಪಶ್ಚಾತ್ತಾಪವಾಗಿದೆ. ಈಗ ಮೊಗಲರಿಗೂ, ಪಠಾಣರಿಗೂ ಸಖ್ಯವಾಗಿರುವದರಿಂದ ನೀವು ನಮ್ಮ ಮಿತ್ರರಾದಿರಿ. ಈವರೆಗೆ ನಮ್ಮಿಂದ ಉಪಾಯವಿಲ್ಲದೆ, ಅಥವಾ ಪ್ರಮಾದದಿಂದ ಘಟಿಸಿದ ಅಪರಾಧಕ್ಕಾಗಿ ನಮ್ಮನ್ನು ಕ್ಷಮಿಸಬೇಕು. ಯಾವ ಕಾರಣದಿಂದೇ ಆಗಲಿ ಇಷ್ಟುದಿನ ನಿಮ್ಮಂಥ ಗುಣಿಜನರ ಸಹವಾಸವಾದದ್ದರಿಂದ ನಾವು ಧನ್ಯರಾದೆವೆಂತಲೇ ಹೇಳುವೆವು. ಈಗ ನಮ್ಮ ಕಕ್ಕಂದಿರಾದ ಕಾತಲೂಖಾನರವರು ಬಹುಮಾನಪೂರ್ವಕವಾಗಿ ನಿಮ್ಮನ್ನು ಕರೆತರುವದಕ್ಕಾಗಿ ತಮ್ಮ ಚಿಕ್ಕಮಕ್ಕಳಾದ ಈ ನಬಾಬ ಉಸ್ಮಾನಖಾನರವರನ್ನೂ, ನನ್ನನ್ನೂ ಕಳಿಸಿದ್ದಾರೆ ಎಂದು ಹೇಳಿ, ಜಗತ್ಸಿಂಗನಿಗೆ ಮಂಗಲ ಸ್ನಾನವನ್ನು ಮಾಡಿಸಿ, ಬಹುಮಾನಾದಿ ವಸ್ತ್ರಾಭರಣಗಳನ್ನುಡಿಸಿ ತೊಡಿಸಿ, ಮಿಷ್ಟಾನ್ನ ಭೋಜನವಾದ ನಂತರ ಆತನನ್ನು ಕಾತಲೂಖಾನನ ಬಳಿಗೆ ಕರಕೊಂಡು ಹೋದರು. ಖಾನನು ಜಗತ್ಸಿಂಗನನ್ನು ನೋಡಿದಕೂಡಲೆ ಆಸನದಿಂದ ಎದ್ದು ಹೋಗಿ, ಆತನನ್ನು ಮರ್ಯಾದೆಯಿಂದ ಕೈಹಿಡಿದು ಕರತಂದು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡನು. ಕುಶಲ ಪ್ರಶ್ನೆಗಳಾದ ಮೇಲೆ ಖಾನನು ಜಗತ್ಸಿಂಗನನ್ನು ಕುರಿತು—ರಾಜಕುಮಾರ ಜಗತ್ಸಿಂಗಜೀ, ನಿಮ್ಮ ಪರಾಕ್ರಮದ ಸುದ್ದಿಗಳನ್ನು ನಾನು ಕೇಳಿ ಬಲ್ಲೆನು. ನಿಮ್ಮಂಥ ವೀರ ಶಿರೋಮಣಿಗಳು ಯುದ್ಧದಂಥ ಸೂಕ್ಷ್ಮ ಪ್ರಸಂಗದಲ್ಲಿ ತಿಲೋತ್ತಮೆಯ ಮೋಹಪಾಶದಲ್ಲಿ ಸಿಕ್ಕು ಕಾರಾಗೃಹ ವಾಸವನ್ನು ಭೋಗಿಸಿದ್ದಕ್ಕಾಗಿ ನನಗೆ ಬಹಳ ಖೇದವಾಗುತ್ತದೆ; ಆದರೂ ನಿಮ್ಮಂಥ ಅಲೌಕಿಕ ಪುರುಷರಿಗೆ ತಿಲೋತ್ತಮೆ ಲಾಭವಾದದ್ದು ಬಹಳ ಸಂತೋಷವು. ತಿಲೋತ್ತಮೆಯನ್ನು ನಾನು ಮಗಳಂತೆ ನಡಿಸಿಕೊಂಡಿರುವೆನು. ಆಕೆಯು ನನ್ನ ಪ್ರೀಯ ಆಯೇಷೆಗೆ ಸರಿಯಾದವಳು. ಜಗತ್ಸಿಂಗ, ಇನ್ನು ನೀವು ಹೋಗಿರಿ. ತಿಲೋತ್ತಮೆಯನ್ನು ಮದುವೆಯಾಗಿ ಸಂಸಾರ ಸುಖವನ್ನು ಭೋಗಿಸಿ, ಪ್ರಸಿದ್ಧ ಅಂಬರಾಧೀಶ್ವರ ಮಾನಸಿಂಹರವರ ವಂಶವನ್ನು ಅಭಿವೃದ್ಧಿಗೊಳಿಸಿರಿ. ಕಾತಲೂಖಾನನು ಸದ್ಯಕ್ಕೆ ನಿಮ್ಮ ಮಿತ್ರನಿರುತ್ತಾನೆ. ನಮ್ಮೊಳಗಿನ ಈ ಮಿತ್ರತ್ವವು ದೃಢವಾಗಿ ಇರಬೇಕೆಂದು ನಾನು ಇಚ್ಛಿಸುವೆನು, ಎಂದು ಆದರಪೂರ್ವಕವಾದ ಮಾತುಗಳನ್ನಾಡಿ ಜಗತ್ಸಿಂಗನನ್ನು ಕಳಿಸಿಕೊಟ್ಟನು.

ಸುಶೀಲೆಯಾದ ಆಯೇಷೆಗೆ ಜಗತ್ಸಿಂಗನ ವಿಯೋಗದಿಂದ ಬಹಳ ಅಸಮಾಧಾನ ವಾಯಿತು. ಆಕೆಯು ತನ್ನ ಪ್ರಾಣೇಶ್ವರನನ್ನು ಹೃದಯದಲ್ಲಿ ಸ್ಥಾಪಿಸಿ, ಹಗಲಿರುಳು ಆತನನ್ನು

ಧ್ಯಾನಿಸಹತ್ತಿದಳು. ಇತ್ತ ಜಗತ್ಸಿಂಗನು ಅಶ್ವಾರೂಢನಾಗಿ ಕಾತಲೂಖಾನನು ಕಳಿಸಿದ್ದ ಪರಿಜನರೊಡನೆ ಮಂದಾರಣಗಡದ ಹಾದಿಯನ್ನು ಹಿಡಿದು ಸಾಗಿದನು. ತಾನು ತಂದೆಯ ಆಜ್ಞೆಯನ್ನು ಮೀರಿ ತಿಲೋತ್ತಮೆಯ ಹಂಬಲಕ್ಕೆ ಬಿದ್ದು ಸೆರೆಮನೆಯ ಸೊಬತಿಯಾದದ್ದರಿಂದ, ದಿಲ್ಲಿ ಬಾದಶಹನ ವಿಜಯ ಸಂಪಾದನೆಗೆ ದೊಡ್ಡ ವಿಘ್ನವುಂಟಾಗಿರಲು, ಸ್ವಾಮಿನಿಷ್ಠನಾದ ತನ್ನ ತಂದೆ ಮಾನಸಿಂಹನು ತನಗೆ ಏನು ಶಾಸನ ಮಾಡುವನೋ ಎಂದು, ಜಗತ್ಸಿಂಗನು ಅಂಜುತ್ತಲಿದ್ದನು, ಆಗಿನ ಅಕಬರನ ಆಳಿಕೆಯಲ್ಲಿ ಮಾನಸಿಂಹನಂಥ ತೇಜಸ್ವಿಗಳು ಇಡಿಯ ದರ್ಬಾರದಲ್ಲಿ ಮತ್ತೊಬ್ಬರಿದ್ದಿಲ್ಲವೆಂದು ಹೇಳಬಹುದಾಗಿತ್ತು, ಅಕಬರನ ಸಾಮ್ರಾಜ್ಯದಲ್ಲಿ ಅರ್ಧ ಸಾಮ್ರಾಜ್ಯದ ಸಂಪಾದನೆಯ ಶ್ರೇಯಸ್ಸು ಮಾನಸಿಂಹನ ಪಾಲಿಗೆ ಇತ್ತು, ಸ್ವತಃ ಅಕಬರ ಬಾದಶಹನು ಕೂಡ ಮಾನಸಿಂಹನ ಸಂಗಡ ಬಹುಮಾನಪೂರ್ವಕವಾಗಿ ನಡೆದುಕೊಳ್ಳುತ್ತಿದ್ದನು. ಮಾನಸಿಂಹನು ಮುನಿದರೆ ಅನ್ಯರಿಗೆ ಕಾಯುವದು ಬಹು ಕಷ್ಟವಾಗಿತ್ತು, ಇಂಥ ದರ್ಪದ ತಂದೆಯ ಬಳಿಗೆ ಅಪರಾಧಿಯಾದ ನಾನು ಹ್ಯಾಗೆ ಹೋಗಲೆಂದು ಜಗತ್ಸಿಂಗನು ಆಲೋಚಿಸ ಹತ್ತಿದ್ದನು; ಹ್ಯಾಗಿದ್ದರೂ ತಂದೆಯ ಕಡೆಗೆ ಹೋಗದಿರುವದು ಆತನಿಗೆ, ಯೋಗ್ಯವಾಗಿ ತೋರಲಿಲ್ಲ, ಅತ್ತ ತಿಲೋತ್ತಮೆಯು ಆತನ ಮನಸ್ಸನ್ನು ಆಕರ್ಷಿಸಹತ್ತಿದ್ದಳು. ಪಠಾಣರೊಡನೆ ಒಪ್ಪಂದವಾದದ್ದರಿಂದ ಮಂದಾರಗಡವು ವೀರೇಂದ್ರಸಿಂಹನ ಹೆಂಡತಿಯಾದ ವಿಮಲಾದೇವಿಯ ವಶಕ್ಕೆ ಹೋದದ್ದರಿಂದ ತಿಲೋತ್ತಮೆಯೊಡನೆ ವಿಮಲಾದೇವಿಯು ಈಗ ಮಂದಾರಗಡದೊಳಗೇ ಇರುತ್ತಿದ್ದಳು. ಈ ಸಂಗತಿಯು ಆಯೇಷೆಯ ಮುಖದಿಂದ ಜಗತ್ಸಿಂಗನಿಗೆ ಗೊತ್ತಾಗಿತ್ತು, ಆದ್ದರಿಂದ ಆತನು ಈಗ ತಾನು ತಂದೆಯ ಬಳಿಗೆ ಹೋಗಬೇಕೋ, ತಿಲೋತ್ತಮೆಯ ಬಳಿಗೆ ಹೋಗಬೇಕೋ ಎಂದು ಆಲೋಚಿಸಹತ್ತಿದನು. ಹೀಗೆ ಆಲೋಚಿಸುತ್ತ ಆತನು ಮಾರ್ಗವನ್ನು ಕ್ರಮಿಸುತ್ತಿರುವಾಗ, ಅಕಸ್ಮಾತ್ತಾಗಿ ಆತನಿಗೆ ಅಭಿರಾಮಸ್ವಾಮಿಗಳ ದರ್ಶನವಾಯಿತು. ಆಗ ಜಗತ್ಸಿಂಗನು ಕುದುರೆಯನ್ನಿಳಿದು ಸ್ವಾಮಿಗಳನ್ನು ಅಭಿವಂದಿಸಿ ಕೈಜೋಡಿಸಿ ನಿಂತುಕೊಳ್ಳಲು, ಅಭಿರಾಮ ಸ್ವಾಮಿಗಳು ಆಶೀರ್ವಚನಪೂರ್ವಕವಾಗಿ ಜಗತ್ಸಿಂಗನ ಯೋಗಕ್ಷೇಮವನ್ನು ವಿಚಾರಿಸಿ, ತಿಲೋತ್ತಮೆಯು ಮಂದಾರಣಗಡದಲ್ಲಿ ಬೇನೆಯಿಂದ ಬಳಲುತ್ತಿರುವಳೆಂದು ಹೇಳಿದರು.

ತಂದೆಯ ಕಡೆಗೆ, ಹಾಗು ತಿಲೋತ್ತಮೆಯ ಕಡೆಗೆ ತೂಗಾಡುತ್ತಿದ್ದ ಜಗತ್ಸಿಂಗನ ಮನಸ್ಸು ಅಭಿರಾಮಸ್ವಾಮಿಗಳ ಮಾತಿನಿಂದ ತಿಲೋತ್ತಮೆಯ ಕಡೆಗೆ ವಿಶೇಷವಾಗಿ ಒಲಿಯಿತು. ತಂದೆಯ ಮುಂದೆ ನಿಂತುಕೊಳ್ಳಲಿಕ್ಕೆ ಮೊದಲೇ ಹೆದರುತ್ತಿದ್ದ ಆತನು ತಿಲೋತ್ತಮೆಯ ಯೋಗಕ್ಷೇಮವನ್ನು ತಕ್ಕೊಳ್ಳುವ ನೆವದಿಂದ ಮಂದಾರಣಗಡಕ್ಕೆ ತೆರಳಿದನು. ಜಗತ್ಸಿಂಗನು ಕಾರಾಗೃಹದಲ್ಲಿ ತಿಲೋತ್ತಮೆಯನ್ನು ತಿರಸ್ಕರಿಸಿದಾಗ, ಆ ಕೋಮಲ ಹೃದಯದ ತರುಣಿಯು ಪರಿತಾಪಗೊಂಡು ಬೇನೆಬಿದ್ದಳು. ಆ ಚಿತ್ತ ಪರಿತಾಪದಿಂದ ಆಕೆಯು ದಿನದಿನಕ್ಕೆ ಕ್ಷೀಣವಾಗತೊಡಗಿದಳು. ಅಷ್ಟರಲ್ಲಿ ಜಗತ್ಸಿಂಗನು ಆಕೆಯ ಬಳಿಗೆ ಹೋದನು. ತನ್ನ ಪ್ರೀಯಳ ಕೃಶಾಂಗವನ್ನೂ, ಆಕೆಯ ನಿಸ್ತೇಜವಾದ ಮುಖವನ್ನೂ ನೋಡಿ ಜಗತ್ಸಿಂಗನ ಎದೆಯೊಡೆದು

ನೀರಾಯಿತು. ತನ್ನ ಕೃತಘ್ನತೆಗಾಗಿ ಆತನು ತನ್ನನ್ನು ಬಹಳವಾಗಿ ಹಳಿದುಕೊಂಡನು. ಇಂಥ ದುರವಸ್ಥೆಯಲ್ಲಿಯ ತಿಲೋತ್ತಮೆಯನ್ನು ಬಿಟ್ಟು ಹೋಗಲಿಕ್ಕ ಅವನ ಕಾಲುಗಳು ಏಳದಾದವು. ತಿಲೋತ್ತಮೆಗೆ ನೆಟ್ಟಗಾಗುವವರೆಗೆ ತಾನು ತಂದೆಯ ಬಳಿಗೆ ಹೋಗಬಾರದೆಂದು ಆತನು ನಿಶ್ಚಯಿಸಿದನು. ತನ್ನ ಅಪರಾಧವನ್ನು ಕ್ಷಮಿಸುವದಕ್ಕಾಗಿ ಆತನು ತಿಲೋತ್ತಮೆಯನ್ನು ಪರಿಪರಿಯಾಗಿ ಪ್ರಾರ್ಥಿಸಿದನು. ತನ್ನ ಪತಿಯು ತನ್ನನ್ನು ಹೀಗೆ ಪ್ರೀತಿಸಹತ್ತಿದ್ದೇ ಆಕೆಗೆ ಮಹೌಷಧಿಯಾಯಿತು. ಆಕೆಯು ದಿನದಿನಕ್ಕೆ ಆರೋಗ್ಯವನ್ನು ಪಡೆಯಹತ್ತಿದಳು. ಅತಿ ಪರಿಚಯದಿಂದ ತಿಲೋತ್ತಮೆಯ ಸದ್ಗುಣಗಳ ಪರಿಚಯವು ಜಗತ್ಸಿಂಗನಿಗೆ ದಿನದಿನಕ್ಕೆ ಆಗಹತ್ತಲು, ಆತನು ಆ ಸುಂದರಿಯನ್ನು ಬಿಟ್ಟು ಕದಲದಾದನು. ಹೀಗಾಗುತ್ತ ಕೆಲವು ದಿನಗಳಲ್ಲಿ ತಿಲೋತ್ತಮೆಯು ಪೂರ್ಣ ಆರೋಗ್ಯವನ್ನು ಪಡೆಯಲು, ಎಲ್ಲರಿಗೂ ಸಂತೋಷವಾಯಿತು.

ಜಗತ್ಸಿಂಗನೊಡನೆ ತಿಲೋತ್ತಮೆಯ ವಿವಾಹವನ್ನು ಸಮಾರಂಭದಿಂದ ಮಾಡಬೇಕೆಂಬ ಇಚ್ಛೆಯು ವಿಮಲಾದೇವಿಗೂ, ಮಂದಾರಣಗಡದ ಪ್ರಜೆಗಳಿಗೂ ಉತ್ಪನ್ನವಾಯಿತು. ಈ ಮಾತನ್ನು ಕುರಿತು ವಿಮಲಾದೇವಿಯು ಅಭಿರಾಮಸ್ವಾಮಿಗಳನ್ನು ಕೇಳಲು ಅವರು—"ದೇವೀ, ನಾನು ನಿನಗೆ ಒಮ್ಮೆ ಹೇಳಿದ್ದೇನೆ. ಮೊಗಲರ ಹಾಗು ಪಠಾಣರ ಯುದ್ಧವು ಮುಗಿಯುವವರೆಗೆ ತಿಲೋತ್ತಮೆಯ ವಿವಾಹದಿಂದ ಸುಖವಾಗುವಹಾಗಿಲ್ಲ, ಸದ್ಯಕ್ಕೆ ಆಗಿರುವ ಒಡಂಬಡಿಕೆಯು ಯುದ್ಧದ ಸಮಾಪ್ತಿಯ ಲಕ್ಷಣವೆಂದು ತಿಳಿಯಬೇಡ. ಮೊನ್ನೆ ಆಕಸ್ಮಿಕವಾಗಿ ಕಾತಲೂಖಾನನು ಮರಣಹೊಂದಿದನು. ತಾರುಣ್ಯದಲ್ಲಿರುವ ಆತನ ಇಬ್ಬರು ಮಕ್ಕಳು ಈ ಒಡಂಬಡಿಕೆಯನ್ನು ಮುರಿಯದೆ ಬಿಡರು. ಪಠಾಣರು ಸ್ವಾತಂತ್ರ್ಯ ಪ್ರಿಯರು. ಪಾರತಂತ್ರ್ಯವು ಅವರಿಗೆ ಮರಣ ಪ್ರಾಯವು; ಆದ್ದರಿಂದ ಬೇಗನೆ ಮೊಗಲರಿಗೂ, ಪಠಾಣರಿಗೂ ಯುದ್ಧವು ಪ್ರಾರಂಭ ವಾಗುವದು. ಆ ಯುದ್ಧವು ಮುಗಿದ ಬಳಿಕ ಲಗ್ನ ಮಹೋತ್ಸವವನ್ನು ಮಾಡುವದು ಯೋಗ್ಯವು. ಮೇಲಾಗಿ ಲಗ್ನಸಮಾರಂಭಕ್ಕೆ ಮಾನಸಿಂಹರ ಒಪ್ಪಿಗೆಯು ಅವಶ್ಯವಿರುತ್ತದೆ. ಅವರು ಯುದ್ಧದ ನಿರ್ಣಯವಾಗುವವರೆಗೆ ಮಗನ ವಿವಾಹಕ್ಕೆ ಎಂದಿಗೂ ಒಪ್ಪಿಗೆಯನ್ನು ಕೊಡಲಿಕ್ಕಿಲ್ಲ; ಆದ್ದರಿಂದ ವಿಮಲಾದೇವಿ, ಸದ್ಯಕ್ಕೆ ವಿವಾಹ ಪ್ರಸಕ್ತಿಯನ್ನು ಬಿಡು. ಜಗತ್ಸಿಂಗನು ತಂದೆಯ ಬಳಿಗೆ ಹೋಗಿ, ಆತನ ಕ್ಷಮೆಗೆ ಪಾತ್ರನಾಗಿ, ಮುಂದೆ ಬೇಗನೆ ಒದಗಬೇಕಾಗಿರುವ ಪಠಾಣರ ಯುದ್ಧದಲ್ಲಿ ಪರಾಕ್ರಮವನ್ನು ತೋರಿಸಿ ತನ್ನ ಲಗ್ನಕ್ಕೆ ತಂದೆಯ ಒಪ್ಪಿಗೆಯನ್ನು ಪಡೆಯಲಿ, ಎಂದು ಹೇಳಿದರು. ಆದರೆ, ಭವಿತವ್ಯವನ್ನು ತಪ್ಪಿಸುವವರು ಯಾರು? ವಿಮಲಾ ದೇವಿಯ ಆಗ್ರಹದಿಂದ ತಿಲೋತ್ತಮೆಯ ವಿವಾಹ ಸಮಾರಂಭವು ಪೂರ್ಣವಾಯಿತು. ವಿವಾಹಕ್ಕೆ ಆಯೇಷೆಯೂ ಬಂದಿದ್ದಳು.

ತಿಲೋತ್ತಮೆಯೊಡನೆ ಆದ ಜಗತ್ಸಿಂಗನ ವಿವಾಹವನ್ನು ನೋಡಿ ಆಯೇಷೆಯು ಕೌತುಕಪಟ್ಟಳು. ಜಗತ್ಸಿಂಗನು ಆಯೇಷೆಯನ್ನು ಕೃತಜ್ಞತೆಯಿಂದ ಬಹಳವಾಗಿ ಮನ್ನಿಸಿದನು. ತಿಲೋತ್ತಮಾ–ಆಯೇಷೆಯರಲ್ಲಿ ಪರಸ್ಪರ ಅಕೃತ್ರಿಮ ಸ್ನೇಹವು ಹೆಚ್ಚಿತು. ಜಗತ್ಸಿಂಗನು ತನ್ನ

ಪಾಣಿಗ್ರಹಣ ಮಾಡಿದಂತೆ ಆಯೇಷೆಯ ಪಾಣಿಗ್ರಹವನ್ನೂ ಮಾಡಬೇಕೆಂದು ತಿಲೋತ್ತಮೆಯ ಮನಸ್ಸಿನಲ್ಲಿ ಸಂಪೂರ್ಣವಾಗಿ ಇತ್ತು; ಆದರೆ ಜಗತ್ಸಿಂಗನು ಅದಕ್ಕೆ ಒಪ್ಪಲಿಲ್ಲ. ಒಂದು ದಿನ ಮಧ್ಯರಾತ್ರಿಯ ಸಮಯವು; ಆಯೇಷೆಯು ತನ್ನ ಶಯನಗೃಹದಲ್ಲಿ ಒಬ್ಬಳೇ ಮಲಗಿ ಕೊಂಡಿದ್ದಳು. ಆಗ ಆಕೆಯ ಮನಸ್ಸಿನಲ್ಲಿ ಬಗೆಬಗೆಯ ವಿಚಾರಗಳು ಉತ್ಪನ್ನವಾದುದ್ದರಿಂದ, ಆಕೆಗೆ ನಿದ್ದೆಯು ಬರಲೊಲ್ಲದು. ತನ್ನ ಸ್ಥಿತಿಯನ್ನು ಸ್ಮರಿಸಿ ಆಕೆಗೆ ಬಹಳ ಪಶ್ಚಾತ್ತಾಪವಾಯಿತು. ಆಕೆಯು ಮನಸ್ಸಿನಲ್ಲಿ— ನನ್ನನ್ನು ಜಗತ್ಸಿಂಗನು ಲಗ್ನಮಾಡಿಕೊಳ್ಳುವ ಹಾಗಿಲ್ಲ, ನಾನು ಜಗತ್ಸಿಂಗನ ಹೊರತು ಅನ್ಯರನ್ನು ಲಗ್ನವಾಗುವ ಹಾಗಿಲ್ಲ. ನಾನು ಲಗ್ನಮಾಡಿಕೊಳ್ಳದೆ ಬ್ರಹ್ಮಚರ್ಯದಿಂದ ಇದ್ದೇನೆಂದರೆ, ಉಸ್ಮಾನನು ನನ್ನನ್ನು ಬಹಳವಾಗಿ ಪ್ರೀತಿಸುತ್ತ ನನ್ನ ಪ್ರಾಪ್ತಿಗಾಗಿ ತಾಪಪಡಹತ್ತಿದ್ದಾನೆ. ಆತನಿಗೆ ತಾಪಕೊಡುತ್ತ ಆತನ ಬಳಿಯಲ್ಲಿ ಇರುವದಾದರೂ ಹ್ಯಾಗೆ? ಉಸ್ಮಾನನು ನನ್ನ ಹೊರತು ಬೇರೆಯವರನ್ನು ಲಗ್ನವಾಗಲಿಕ್ಕಿಲ್ಲೆಂದು ನಿಶ್ಚಯಿಸಿರುವನು. ಹಾಯ್ ಹಾಯ್! ದೈವದ ವಿಚಿತ್ರ ಗತಿಯೇ? ನಾನು ಜಗತ್ಸಿಂಗನನ್ನು ಪ್ರೀತಿಸುತ್ತಿರುವಾಗ ಜಗತ್ಸಿಂಗನು ನನ್ನನ್ನು ಪ್ರೀತಿಸಲೊಲ್ಲನು; ಅತ್ತ ಉಸ್ಮಾನನು ನನ್ನನ್ನು ಪ್ರೀತಿಸುತ್ತಿರುವಾಗ ನಾನು ಉಸ್ಮಾನನನ್ನು ಪ್ರೀತಿಸಲೊಲ್ಲೆನು. ಇಂಥ ಇಕ್ಕಟ್ಟಿನ ಪ್ರಸಂಗದಲ್ಲಿ ಜೀವದಿಂದಿರುವದಕ್ಕಿಂತ, ವಿಷಪಾನದಿಂದ ದೇಹತ್ಯಾಗ ಮಾಡುವದು ನೆಟ್ಟಗೆ, ಎಂದು ಯೋಚಿಸಿ ತನ್ನ ಬೆರಳೊಳಗಿಟ್ಟುಕೊಂಡಿದ್ದ ಉಂಗುರದೊಳಗಿನ ವಿಷವನ್ನು ಕುಡಿದು ದುಃಖದಿಂದ ಮುಕ್ತಳಾಗಬೇಕೆಂದು ಉಂಗುರವನ್ನು ತಕ್ಕೊಂಡಳು. ಅಷ್ಟರಲ್ಲಿ ಪುನಃ ಆಕೆಯ ಮನಸ್ಸಿನಲ್ಲಿ ವಿಚಾರವು ಉತ್ಪನ್ನವಾಗಿ—''ಅಲ್ಲಾನು ಹೀಗೆ ಮಾಡುವದಕ್ಕಾಗಿಯೇ ನನ್ನನ್ನು ಈ ಜಗತ್ತಿನಲ್ಲಿ ಹುಟ್ಟಿಸಿರುವನೋ? ನಾನು ಈ ಜಗತ್ತಿನಲ್ಲಿ ಹುಟ್ಟಿ ಬಂದು ಭೋಗಿಸತಕ್ಕ ದುಃಖಗಳನ್ನು ಭೋಗಿಸದಿದ್ದರೆ, ನಾನು ಹೆಂಗಸಾಗಿ ಹುಟ್ಟಿಯಾದರೂ ಫಲವೇನು? ನನ್ನ ಲಗ್ನಕ್ಕೆ ಬಂದ ಆಯೇಷೆಯು ಹೀಗೆ ಪ್ರಾಣತ್ಯಾಗ ಮಾಡಿದಳೆಂದು ತಿಳಿದರೆ ಜಗತ್ಸಿಂಗನಿಗೆ ದುಃಖವಾದೀತಲ್ಲ. ನನ್ನ ಪ್ರಿಯನಿಗೆ ದುಃಖವಾಗುವ ಕೆಲಸವನ್ನು ನಾನು ಯಾಕೆ ಮಾಡಬೇಕು? ಎಂದು ಅಂದುಕೊಂಡಳು, ಇಂಥ ಪ್ರಸಂಗವೇ ಪುನಃ ಬರಬೇಡೆಂದು ಆ ಉಂಗುರವನ್ನು ಕೋಟೆಯ ಕಂದಕದಲ್ಲಿ ಬಿಸಾಟಿದಳು.

## ಕರ್ಮಫಲ

ವಿವಾಹ ಕಾರ್ಯವಾದ ಬಳಿಕ ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ಆಯೇಷೆಯು ಜಗತ್ಸಿಂಗನ ಒಪ್ಪಿಗೆಯಿಂದ ತನ್ನ ಸ್ಥಳಕ್ಕೆ ತೆರಳಿದಳು. ಇತ್ತ ನವವಧುವಾದ ತಿಲೋತ್ತಮೆಯೊಡನೆ ಜಗತ್ಸಿಂಗನು ವಿಲಾಸ ಸುಖವನ್ನು ಭೋಗಿಸಹತ್ತಿದನು. ಸದ್ಗುಣ ಸಂಪನ್ನಳೂ, ಲೋಕೋತ್ತರ ಸುಂದರಿಯೂ, ಸಾಧ್ವಿಯೂ ಆದ ತಿಲೋತ್ತಮೆಯ ಸಹವಾಸವು

ಆತನಿಗೆ ಸ್ವರ್ಗವಾಸಕ್ಕಿಂತ ಅಧಿಕವಾಯಿತು. ದಾರುಕೇಶ್ವರ ನದಿಯ ದಂಡೆಯಲ್ಲಿ ಸೈನ್ಯದ ಬಿಡು ಬಿಟ್ಟುಕೊಂಡು ವಾಸಮಾಡಿದ್ದ ರಾಜಾಮಾನಸಿಂಹನು, ಪಠಾಣರೊಡನೆ ಒಡಂಬಡಿಕೆಯಾಗಿ ಯುದ್ಧವು ಒಮ್ಮೆಲೆ ನಿಂತುಹೋದದ್ದರಿಂದ, ತನ್ನ ಠಾಣ್ಯವನ್ನು ಕಿತ್ತು ಪಾಟಣಾಕ್ಕೆ ಹೋಗಿದ್ದನು. ಹೀಗೆ ತನ್ನ ತಂದೆಯು ದಾರುಕೇಶ್ವರ ತೀರದಿಂದ ಹೊರಟು ಹೋಗುವಾಗ ಜಗತ್ಸಿಂಗನು ಆತನ ದರ್ಶನಕ್ಕೆ ಸಹ ಹೋಗಲಿಲ್ಲ. ಈಗ ಕುಮಾರ ಜಗತ್ಸಿಂಗನ ತಲೆಯ ಮೇಲೆ ಸಾಮ್ರಾಜ್ಯದ ಯಾವ ಭಾರವೂ ಇದ್ದಿಲ್ಲ. ಆತನ ಮನಸ್ಸಿಗೆ ಬಂದಲ್ಲಿ ಇರಲಿಕ್ಕೆ ಆತನಿಗೆ ಅಧಿಕಾರವಿತ್ತು; ಆದರೆ ಮಂದಾರಣಗಡದಲ್ಲಿ ತಿಲೋತ್ತಮೆಯ ಸಮಾಗಮವು ಸುಖದಲ್ಲಿಯೇ ಬಹುತರ ಆತನ ಕಾಲಹರಣವಾಗುತ್ತಿತ್ತು, ಆತನ ಸೈನಿಕರಿಗೆ ಕೆಲಸವೇನು ಇಲ್ಲದ್ದರಿಂದ ಅವರು ದಾರುಕೇಶ್ವರ ನದಿಯ ತೀರದಲ್ಲಿ ಆಲಸ್ಯದಿಂದ ಕಾಲಹರಣ ಮಾಡುತ್ತಿದ್ದರು.

ಒಂದು ದಿನ ಸಾಯಂಕಾಲದ ಸಮಯವು ನಾಲ್ಕು ತಾಸು ರಾತ್ರಿಯಾಗಿದೆ. ಜಗತ್ಸಿಂಗನು ಉನ್ನತವಾದ ಒಂದು ಸುಂದರ ಅಂತಪುರದ ಮುಂಬದಿಯಲ್ಲಿ ಒಬ್ಬನೇ ಅತ್ತಿಂದಿತ್ತ ಇತ್ತಿಂದತ್ತ ಓಡಾಡಹತ್ತಿದ್ದಾನೆ. ಭಯಗ್ರಸ್ತನಾಗಿರುವಂತೆ ಆತನ ಮುಖಮುದ್ರೆಯಿಂದ ತೋರುತ್ತಲಿದೆ. ಆತನ ಸುತ್ತುಮುತ್ತಲಿದ್ದ ಯಾವ ಸುಂದರ ವಸ್ತುಗಳಿಂದಲೂ ಆತನ ಮನಸ್ಸು ರಮಿಸದಾಗಿದೆ. ವಾಚಕರೇ, ತನ್ನ ತನು–ಮನೋ–ಧನಗಳನ್ನು ಅರ್ಪಿಸಿ, ಪ್ರೇಮಾತಿಶಯದಿಂದ ತಿಲೋತ್ತಮೆಯು ಸೇವಾ ತತ್ಪರಳಾಗಿರುವಾಗ ಜಗತ್ಸಿಂಗನ ವೃತ್ತಿಯು ಹೀಗೆ ಯಾಕಾಗಿರಬಹುದು! ಆತನಿಗೆ ತಿಲೋತ್ತಮೆಯ ಸಮಾಗಮವಾಗಿ ಇನ್ನೂ ಒಂದು ತಿಂಗಳು ಸಹ ಪೂರ್ಣವಾಗಿದ್ದಿಲ್ಲ, ಆತನಿಗೆ ಯಾತರ ಕೊರತೆಯೂ ಇದ್ದಿಲ್ಲ. ಹೀಗಿದ್ದು ಆತನು ಈಗ ಅತ್ಯಂತ ಭಯಗ್ರಸ್ತನಾಗಿದ್ದನು. ಹೀಗಿರುವಾಗ ತಿಲೋತ್ತಮೆಯು ಮಂದಗಮನದಿಂದ ಜಗತ್ಸಿಂಗನ ಬಳಿಗೆ ಬಂದು ಅತ್ಯಂತ ವಿನಯದಿಂದ—

ತಿಲೋತ್ತಮೆ—ಬರಲಿಕ್ಕೆ ನನ್ನಿಂದ ತಡವಾಗಲಿಲ್ಲವಷ್ಟೇ?

ಜಗತ್ಸಿಂಗ—ನಿನಗೆ ಬರಲಿಕ್ಕೆ ತಡವಾಗದಿದ್ದರೂ, ನಿನ್ನ ವಿಯೋಗವು ನನಗೆ ದುಸ್ಸಹವಾಗಿರುವದರಿಂದ, ನೀನು ಅಲ್ಪಕಾಲ ನನ್ನನ್ನು ಅಗಲಿ ಹೋದರೂ ನನಗೆ ಅಸಮಾಧಾನವಾಗುವದು.

ತಿಲೋತ್ತಮೆ—ನನ್ನ ಮೇಲಿನ ಈ ಪರಮಾನುಗ್ರಹಕ್ಕಾಗಿ ನಾನು ಕೃತಜ್ಞಳಾಗಿರುವೆನು.

ಜಗತ್ಸಿಂಗ—ಸುಶೀಲೇ, ನಿನ್ನ ಕೃತಜ್ಞತೆಗೆ ಪಾತ್ರನಾದ ನಾನು ಧನ್ಯನೇ ಸರಿ. ನಾನು ಬಹು ಪುಣ್ಯಶಾಲಿಯಾದದ್ದರಿಂದಲೇ ನಿನ್ನಂಥ ಅಮೂಲ್ಯ ರತ್ನದ ಲಾಭವು ನನಗಾಗಿರುತ್ತದೆ. ನಳ ಪತ್ನಿಯಾದ ದಮಯಂತಿಯಂತೆ ನೀನು ದೇವಾದಿಕರಿಗೂ ದುರ್ಲಭಳಾಗಿರುವಾಗ, ಕ್ಷುದ್ರ ಮಾನವನಾದ ನನಗೆ ನೀನು ಲಭಿಸಿದ್ದು ನನ್ನ ಪ್ರಾಚೀನ ಪುಣ್ಯವಲ್ಲದೆ ಮತ್ತೇನು?

ತಿಲೋತ್ತಮೆ—ಪ್ರಾಣನಾಥ, ತಾವು ನನ್ನನ್ನು ಹೀಗೆ ಗೌರವಿಸುವದನ್ನು ನೋಡಿ ನನಗೆ ಬಹಳ ನಾಚಿಕೆ ಬರುತ್ತದೆ. ಅಂಬರಾಧೀಶ್ವರ ಮಾನಸಿಂಹರವರ ಜ್ಯೇಷ್ಠ ಪುತ್ರರ ಯೋಗ್ಯತೆಯ ಮಾನದಿಂದ, ನಾನು ಎಷ್ಟು ಕ್ಷುದ್ರಳಿರುವೆನೆಂಬದನ್ನು ಅರಿತಿರುವೆನು. ನಾನೆಂದರೆ,

ಮಂದಾರಣಗಡದ ಒಬ್ಬ ನಾಯಕನ ಮಗಳು! ಯುವರಾಜರ ದಾಸಿಯ ದಾಸಿಯಾಗಲಿಕ್ಕೂ ಯೋಗ್ಯಳಲ್ಲ. ಹೀಗಿದ್ದು, ಯುವರಾಜರು ಚರಣದೆಡೆಯಲ್ಲಿ ಆಶ್ರಯ ಕೊಟ್ಟಿರುವದರಿಂದ, ನನ್ನನ್ನು ಮಹಾ ಭಾಗ್ಯಶಾಲಿನಿಯೆಂದು ನಾನು ಭಾವಿಸಿರುವೆನು. ನನ್ನ ಪಾಣಿಗ್ರಹಣ ಮಾಡುವ ಅವಸರದಲ್ಲಿ ತಾವು ಮಾವಂದಿರಾದ ಮಾನಸಿಂಹರವರ ಒಪ್ಪಿಗೆಯನ್ನು ಕೂಡ ಪಡೆಯಲಿಲ್ಲ. ಇದರಿಂದ ಅವರು ನಿಮ್ಮ ಮೇಲೆ ಸಿಟ್ಟು ಸಹ ಆಗಿರಬಹುದು! ಇದನ್ನೆಲ್ಲ ವಿಚಾರಿಸಲು, ತಾವು ನನ್ನ ಮೇಲೆ ಮಾಡಿದ ಅನುಗ್ರಹವು ಸಾಮಾನ್ಯವಾದದ್ದೇ?

ಹೀಗೆ ತಿಲೋತ್ತಮೆಯು ತಂದೆಯ ನೆನಪು ಮಾಡಿಕೊಟ್ಟದ್ದರಿಂದ ಜಗತ್ಸಿಂಗನ ಮೋರೆಯು ಕಪ್ಪಿಟ್ಟಿತು. ಆತನು ಅತ್ಯಂತ ಭಯಗ್ರಸ್ತನಾಗಿ ತಿಲೋತ್ತಮೆಯು ಕೈ ಹಿಡಿದು ಕರಕೊಂಡು ಹೋಗಿ ಪಲ್ಲಂಗದ ಮೇಲೆ ಕುಳ್ಳಿರಿಸಿ—

ಜಗತ್ಸಿಂಗ—ಪ್ರಾಣೇಶ್ವರೀ, ನನ್ನ ಹಿರಿಯರು ನನ್ನ ಮೇಲೆ ನಿಶ್ಚಯವಾಗಿ ಸಿಟ್ಟಾಗಿರುವರು. ಅವರು ರಜಪೂತ ವೀರರು, ತಮ್ಮ ಮನಸ್ಸಿನ ಭಾವನೆಯಂತೆ ಅವರು ಕಾರ್ಯಮಾಡದೆ ಎಂದೂ ಬಿಡರು. ಅವರ ಯೋಗ್ಯತೆಯೂ, ಸಾಮರ್ಥ್ಯವೂ ಸಾಮಾನ್ಯ ವಾದದ್ದಲ್ಲ. ಪ್ರತ್ಯಕ್ಷ ಅಕಬರ ಬಾದಶಹರು ಸಹ ನಮ್ಮ ತಂದೆಯ ಕೈಯಲ್ಲಿರುವವರೆಂದು ಹೇಳಿದರೆ ಅತಿಶಯೋಕ್ತಿಯಾಗದು.

ತಿಲೋತ್ತಮೆ—(ಅತ್ಯಂತ ಭಯದಿಂದ ಮೆಲ್ಲನೆ) ಹಾಗಿದ್ದರೆ, ತಾವು ಈಗಾದರೂ ಜಾಗರೂಕರಾಗಬಾರದೇನು?

ಜಗತ್ಸಿಂಗ—ಪ್ರಿಯೇ, ಇನ್ನು ಜಾಗರೂಕವಾಗಿ ಮಾಡುವದೇನು? ನಿನ್ನ ಸಮಾಗಮದ ಮುಂದೆ ರಾಜ್ಯಪದವನ್ನು ಕೂಡ ತುಚ್ಛವೆಂದು ನಾನು ತಿಳಿಯುವೆನು. ಘೋರಾರಣ್ಯದಲ್ಲಿ ಒಂದು ಗಿಡದ ಬುಡದಲ್ಲಿ ನಿನ್ನೊಡನೆ ವಾಸಿಸುವದು ನನಗೆ ಪರಮ ಸುಖಪ್ರದವಾಗಿರುವದು; ಆದರೆ ಮಹಾ ಸಮರ್ಥನಾದ ನನ್ನ ತಂದೆಯ ಕೈಯೊಳಗಿಂದ ನಾನು ಪಾರಾಗಿ ಹೋಗುವದೆತ್ತ? ನಾನು ಪಾತಾಳವನ್ನು ಸೇರಿದರೂ ಆತನು ನೆಲ ಬಗ್ಗಿಸಿ, ನನ್ನನ್ನು ಹುಡುಕಿಸಬಹುದು.

ತಿಲೋತ್ತಮೆ—ಮಹಾರಾಜ, ಮಾನಸಿಂಹರವರು ತಮ್ಮ ತಂದೆಯಲ್ಲವೆ? ಅಂಥ ಭಯಂಕರ ಶಿಕ್ಷೆಯನ್ನಾದರೂ ಅವರು ತಮಗೆ ಏನು ಮಾಡುವರು?

ಜಗತ್ಸಿಂಗ—ಸುಶೀಲೆ, ನನ್ನ ತಂದೆಯು ಮೋಹದಿಂದ ಅಂಥ ಭಯಂಕರ ಶಿಕ್ಷೆಯನ್ನು ಮಾಡಲಿಕ್ಕಿಲ್ಲ; ಆದರೆ ಅಭಿಮಾನಿಗಳಾದ ರಜಪೂತರ ಮನಸ್ಸಿನ ಸ್ಥಿತಿಯು ಹೀಗೆಂದು ಹೇಳುವದು ಕಠಿಣವು. ಮಾನಸಿಂಹರವರು ಪ್ರಸಂಗವಶಾತ್ ನನಗೆ ರಾಜದ್ರೋಹಿಯೆಂದು ತಿಳಿದು ಮರಣ ಶಿಕ್ಷೆಯನ್ನು ವಿಧಿಸಬಹುದು. ಹಾಗೆ ಮಾಡದಿದ್ದರೂ, ಕಾರಾಗೃಹವಾಸದ ಶಿಕ್ಷೆಯಂತು ನನಗೆ ತಪ್ಪಲಿಕ್ಕಿಲ್ಲ; ಆದರೆ ಮರಣಕ್ಕಿಂತಲೂ ನಿನ್ನ ವಿಯೋಗ ದುಃಖವು ನನಗೆ ದುಸ್ಸಹವಲ್ಲವೆ?

ತಿಲೋತ್ತಮೆ—ಮಹಾರಾಜರೇ, ನನ್ನ ಕಾಲದಲ್ಲಿ ತಮಗೆ ಎಂಥ ಕಷ್ಟವು ಒದಗಿತಲ್ಲ! ಇಂಥ ಪ್ರಸಂಗದಲ್ಲಿ ದೈವಹೀನೆಯಾದ ನಾನು ನಿಮಗೇನು ಸಹಾಯ ಮಾಡುವಹಾಗಿದ್ದೇನೆ.

ಹಿರಿಯರು ನಿಮಗೆ ಮರಣ ಶಿಕ್ಷೆಯನ್ನು ವಿಧಿಸಿದರೆ, ನನ್ನ ಪಾಲಿಗೂ ಮರಣವು ಸಿದ್ಧವಾದದ್ದೆಂದು ತಿಳಿಯಿರಿ. ನಿಮಗೆ ಕಾರಾಗೃಹವಾಸದ ಶಿಕ್ಷೆಯಾದರೆ, ನಾನು ನಿಮ್ಮ ಹಿರಿಯರ ಬಳಿಯಲ್ಲಿ ದಾಸಿಯಂತೆ ಸೇವಾ ತತ್ಪರಳಾಗಿ ಕಾಲಹರಣ ಮಾಡುವೆನು. ಇದಕ್ಕಿಂತ ಹೆಚ್ಚಿಗೆ ನನ್ನಿಂದೇನು ಆಗುವಹಾಗಿದೆ?

ಈ ಮೇರೆಗೆ ನುಡಿದ ತಿಲೋತ್ತಮೆಯ ಮಾತುಗಳನ್ನು ಕೇಳಿ ಜಗತ್ಸಿಂಗನು ಆಕೆಯನ್ನು ಆಲಿಂಗಿಸಿ—ಪ್ರಿಯೇ, ಹೆದರಬೇಡ. ಯಾವ ಸ್ಥಿತಿಯಲ್ಲಿಯೂ ನಮ್ಮ ಪ್ರೇಮದಲ್ಲಿ ಕೊರತೆಯುಂಟಾಗದು. ನಿನ್ನ ಆಶೆಯಿಂದ ನಾನು ಬೇಕಾದಂಥ ಕಷ್ಟವನ್ನು ಸಂತೋಷದಿಂದ ಭೋಗಿಸುವೆನು. ಕರ್ಮಭೋಗವು ತಪ್ಪಿದ್ದಲ್ಲವಷ್ಟೆ? ಆದರೆ ಪ್ರಿಯೆ, ಎಷ್ಟು ಸಮಾಧಾನ ಮಾಡಿಕೊಂಡರೂ ಯಾಕೋ ನನ್ನ ಮನಸ್ಸಿಗೆ ಸಮಾಧಾನವೇ ಆಗಲೊಲ್ಲದು. ಇರಲಿ, ಇನ್ನು ನಾವು ಈ ವಿಚಾರವನ್ನೇ ಬಿಟ್ಟುಬಿಡೋಣ, ಎಂದು ನುಡಿದು, ಇಬ್ಬರೂ ಸುಮ್ಮನೆ ಮಲಗಿಕೊಂಡರು. ಯಾರ ಮನಸ್ಸಿಗೂ ಸಮಾಧಾನವಿಲ್ಲದ್ದರಿಂದ ಅವರಿಗೆ ನಿದ್ರೆಯು ಬರಲಿಲ್ಲ. ಅವರು ಬಹುಕಷ್ಟದಿಂದ ಅಂದಿನ ರಾತ್ರಿಯನ್ನು ಕಳೆದರು. ಬೆಳಗಿಗೆ ಇನ್ನು ಎರಡು ತಾಸು ಅವಕಾಶವಿರಬಹುದು; ಅಷ್ಟರಲ್ಲಿ ತಿಲೋತ್ತಮೆಯು ಅದೇ ಕಣ್ಣಿಗೆ ಕಣ್ಣು ಹಚ್ಚಿದಳು; ಆದರೆ ನಿದ್ರೆಯ ಸುದ್ದಿಯನ್ನರಿಯದ ಜಗತ್ಸಿಂಗನು, ತಿಲೋತ್ತಮೆಗೆ ಎಚ್ಚರವಾಗದಂತೆ ಮೆಲ್ಲಗೆ ಆಕೆಯ ಬಾಹುಪಾಶವನ್ನು ಬಿಡಿಸಿಕೊಂಡು ಹಾಸಿಗೆಯಿಂದೆದ್ದು ಅಂತರ್ಗೃಹದಿಂದ ಹೊರಗೆ ಬಂದನು. ಬೆಳಗಿನ ಸ್ವಚ್ಛವಾದ ಹವೆಯಲ್ಲಿ ಅಶ್ವಾರೂಢನಾಗಿ ಯಥೇಚ್ಛ ಸಂಚರಿಸಿ ಮನಸ್ಸನ್ನು ರಮಿಸಿಕೊಳ್ಳಬೇಕೆಂದು ತಿಳಿದು ಆತನು ಅಶ್ವಶಾಲೆಗೆ ಹೋದನು. ಆತನು ತನ್ನ ಪ್ರೀತಿಯ ಕುದುರೆಯನ್ನು ಸಜ್ಜುಮಾಡಿಕೊಂಡು ಕೋಟೆಯ ಹೊರಗೆ ಬರುವದರೊಳಗೆ ಅರುಣೋದಯವಾಯಿತು. ಬೆಳಗಿನ ತಂಗಾಳಿಯಿಂದ ಆತನ ಮನಸ್ಸಿಗೆ ಸ್ವಲ್ಪ ವಿಶ್ರಾಂತಿಯುಂಟಾಯಿತು. ಆದರೆ ಆತನ ಮನಸ್ಸಿನ ಔದಾಸೀನ್ಯವು ಕಡಿಮೆಯಾಗಿದ್ದಿಲ್ಲ. ಆತನ ಕಣ್ಣುಗಳು ಉರಿಯುತ್ತಿದ್ದವು, ಆಕಳಿಕೆಗಳು ಬರುತ್ತಿದ್ದವು. ಆತನ ಬಿಳಿಯ ಕುದುರೆಯ ಚಿರಪರಿಚಿತವಾದ ಭಾರವನ್ನು ವಹಿಸಿಕೊಂಡು ತನ್ನ ಒಡೆಯನಿಗೆ ಸುಖವಾಗುವಂತೆ ಆನಂದದಿಂದ ಮಾರ್ಗವನ್ನು ಕ್ರಮಿಸಹತ್ತಿತು.

ಹೀಗೆ ಜಗತ್ಸಿಂಗನು ದುರ್ಗದಿಂದ ಹೊರಬಿದ್ದು ಹೋಗುತ್ತಿರುವಾಗ, ತಿಲೋತ್ತಮೆಯ ಅಂತರ್ಗೃಹದ ಕಡೆಗೆ ಹೊರಳಿ ನೋಡದೆಯಿರುವದು ಆತನಿಂದ ಆಗಲಿಲ್ಲ. ಆತನು ಬಹು ಕಷ್ಟದಿಂದ ಅತ್ತ ಹೊರಳಿ ನೋಡಲು, ತಿಲೋತ್ತಮೆಯು ಕಿಡಕಿಯಲ್ಲಿ ನಿಂತು ತನ್ನ ಕಡೆಗೆ ನೋಡುತ್ತ ಕಣ್ಣೀರು ಸುರಿಸುತ್ತಿದ್ದಳು. ಆಕೆಯ ಮೋರೆಯು ಬಾಡಿತ್ತು, ಕಣ್ಣುಗಳು ಕೆಂಪಾಗಿದ್ದವು. ಅಸ್ತವ್ಯಸ್ತವಾಗಿ ಹರವಿದ ಕೇಶಗಳು ಮೋರೆಯಮೇಲೆ ಬಂದಿದ್ದವು. ಅದನ್ನು ನೋಡಿದ ಕೂಡಲೆ ಜಗತ್ಸಿಂಗನ ಅಸುವು ಅಳಿದಂತಾಯಿತು. ಆತನು ತನ್ನ ಕುದುರೆಯನ್ನು ನಿಲ್ಲಿಸಿ, ಶೋಕಾತಿಶಯದಿಂದ ತಿಲೋತ್ತಮೆಯ ಕಡೆಗೆ ನೋಡಹತ್ತಿದನು. ಸ್ವಲ್ಪ ಹೊತ್ತು ಇಬ್ಬರೂ ನಿಶ್ಚಲರಾಗಿ ನಿಂತುಬಿಟ್ಟಿದ್ದರು. ಬಳಿಕ ಜಗತ್ಸಿಂಗನು, ''ನಾನು ಇದೇ ಈಗ ಬರುವೆನೆ''ಂದು

ಸನ್ನೆಯಿಂದ ತಿಲೋತ್ತಮೆಗೆ ತಿಳಿಸಿದನು; ಆದರೆ ಮುಂದಕ್ಕೆ ಹೋಗುವ ಇಚ್ಛೆಯು ಆತನಿಗಾಗಲೊಲ್ಲದು. ಜಗತ್ಸಿಂಗನ ದೃಷ್ಟಿಯು ತನ್ನ ಕಡೆಗೆ ಇರುವದನ್ನು ನೋಡಿ ತಿಲೋತ್ತಮೆಯು ಆತನಿಗೆ ನಮಸ್ಕಾರ ಮಾಡಿದಳು. ಬೇಗನೆ ಬರಬೇಕೆಂದು ಆತನಿಗೆ ತನ್ನ ಕೊರಳ ಆಣೆಯನ್ನಿಟ್ಟಳು. ಅದನ್ನು ನೋಡಿ ಜಗತ್ಸಿಂಗನಾದರೂ ತಲೆಹಾಕಿ ಸಮ್ಮತಿಯನ್ನು ಪ್ರಕಟಿಸಿ, ಒಳಗೆ ಹೋಗಬೇಕೆಂದು ಸನ್ನೆಯಿಂದ ತಿಲೋತ್ತಮೆಗೆ ತಿಳಿಸಿದನು; ಆದರೆ ತಿಲೋತ್ತಮೆಯು ಅಲ್ಲಿಂದ ಕದಲಲಿಲ್ಲ. ಎವೆಯಿಕ್ಕದೆ ಜಗತ್ಸಿಂಗನನ್ನು ನೋಡುತ್ತ ನಿಂತಲ್ಲಿ ನಿಂತುಬಿಟ್ಟಳು. ಆಕೆಯ ಕಣ್ಣೊಳಗಿಂದ ಒಂದೇಸವನೆ ನೀರುಗಳು ಸುರಿಯಹತ್ತಿದವು. ಅದನ್ನು ನೋಡಿ ಜಗತ್ಸಿಂಗನು ಮುಂದಕ್ಕೆ ಸಾಗದಾದನು; ಆದರೆ ಈಗ ತಿರುಗಿ ಬರೋಣವೆಂದು ಅಂದುಕೊಂಡು ಆತನು ಕುದುರೆಯನ್ನು ಚಬಕದಿಂದ ಒಮ್ಮೆ ಹೊಡೆದನು. ಕೂಡಲೆ ಅದು ವಾಯು ವೇಗದಿಂದ ಮುಂದಕ್ಕೆ ಸಾಗಿತು. ಈಗ ಜಗತ್ಸಿಂಗನು ಮಂದಾರಣಗಡದ ಕಡೆಗೆ ಹೊರಳಿ ನೋಡಲು, ತಿಲೋತ್ತಮೆಯೂ ಕಾಣಲಿಲ್ಲ, ಆಕೆಯ ಅಂತರ್ಗೃಹವೂ ಕಾಣಲಿಲ್ಲ.

ಜಗತ್ಸಿಂಗನ ಕುದುರೆಯು ವಾಯುವೇಗದಿಂದ ಮಾರ್ಗವನ್ನು ಕ್ರಮಿಸುತ್ತಿತ್ತು. ಜಗತ್ಸಿಂಗನು ತನ್ನ ರಮಣಿಯ ಕಲ್ಯಾಣಕಾರಕ ಗುಣಗಳನ್ನು ಒಂದೊಂದಾಗಿ ನೆನಿಸುತ್ತ ಆಕೆಯ ಮನಸ್ಸನ್ನು ನೋಯಿಸಿದ್ದಕ್ಕಾಗಿ ಪಶ್ಚಾತ್ತಾಪಪಡುತ್ತ ಪರಾಧೀನನಂತೆ ಕುದುರೆ ಒಯ್ದತ್ತ ಸಾಗಿದ್ದನು. ಅಷ್ಟರಲ್ಲಿ ದೂರ ಎಷ್ಟೋ ಕುದುರೆಗಳ ಕೊಳಗಗಳ ಸಪ್ಪಳವಾಗುತ್ತಿರುವಂತೆ ಆತನಿಗೆ ಭಾಸವಾಯಿತು. ಆತನು ಸಪ್ಪಳವಾಗುತ್ತಿರುವ ದಿಕ್ಕಿಗೆ ಆಲಿಸಿ ಕೇಳಹತ್ತಿದನು. ಬರಬರುತ್ತ ದೂಳವು ಕಾಣಹತ್ತಿತು. ಆ ಸೈನ್ಯವು ಯಾರದಿರಬಹುದೆಂಬದರ ಅನುಮಾನವು ಜಗತ್ಸಿಂಗನಿಗೆ ಆಗಲೊಲ್ಲದು. ಸ್ವಲ್ಪ ಮುಂದಕ್ಕೆ ಹೋಗುತ್ತಿರಲು, ರಜಪೂತ ಸವಾರರು ಆತನ ಎದುರಿಗೆ ಬರಹತ್ತಿದರು. ಜಗತ್ಸಿಂಗನ ಕುದುರೆಯು ಅವರ ಗುರುತು ಹಿಡಿದು ಉಲ್ಲಾಸದಿಂದ ಹೇಕರಿಸಹತ್ತಿತು. ಬರಬರುತ್ತ ಜಗತ್ಸಿಂಗನಿಗೂ ಎದುರಿನ ಸೈನಿಕರ ಗುರುತು ಹತ್ತಿತು. ಅವರು ತನ್ನ ತಂದೆಯ ಸೈನ್ಯದೊಳಗಿನವರೆಂಬದನ್ನು ಆತನು ಅರಿತನು; ಆದರೆ ಅವರನ್ನು ನೋಡಿ ಸಮಾಧಾನವಾಗುವದರ ಬದಲು, ಜಗತ್ಸಿಂಗನಿಗೆ ಭಯವು ಉತ್ಪನ್ನವಾಯಿತು. ಆತನ ಹೃದಯವು ಕಂಪಿಸಿ ಚಿತ್ತವು ಚಂಚಲವಾಯಿತು. ತನ್ನನ್ನು ಹಿಡಕೊಂಡು ಬರುವದಕ್ಕಾಗಿಯೇ ತನ್ನ ತಂದೆಯ ಈ ಸೈನ್ಯವನ್ನು ಕಳಿಸಿರುವನೆಂದು ಆತನು ತರ್ಕಿಸಿದನು. ದೂರದಿಂದ ಸೈನ್ಯವು ದೊಡ್ಡದೆಂದು ತೋರಿದರೂ, ಅದು ಸನಿಯಕ್ಕೆ ಬರಲು, ಅದರಲ್ಲಿ ಐವತ್ತು ಜನ ಕುದುರೆಯ ಸವಾರರು ಮಾತ್ರ ಇದ್ದರು. ಅವರು ಭವ್ಯ ಶರೀರಿಗಳು, ಯುದ್ಧವಿಶಾರದರು, ಶಸ್ತ್ರಧಾರಿಗಳು ಇದ್ದರು; ಆದರೆ ರಣಧೀರನಾದ ಜಗತ್ಸಿಂಗನು ಇಂಥ ಶೂರ ಸೈನಿಕರನ್ನು ನೋಡಿ ಹೇಡಿತನದಿಂದ ಹೆದರಲಿಲ್ಲ. ಆತನು ರಣಶೂರನಿದ್ದನು. ವೀರ ರಜಪೂತ ಕುಲದಲ್ಲಿ ಆತನ ಜನ್ಮವಾಗಿದ್ದು, ಆತನು ಕುಲಭೂಷಣನಾಗಿದ್ದನು. ಆತನಿಗೆ ಮರಣದ ಭಯವು ಲೇಶವಾದರೂ ಇದ್ದಿಲ್ಲ; ಆದರೆ ಕೇವಲ ಮಾನಸಿಂಹನ ಭಯವು ಆತನನ್ನು ಬಾಧಿಸುತ್ತಿತ್ತು. ತನ್ನ ತಂದೆಯ ಕ್ರೋಧದ ಸ್ವರೂಪವನ್ನು ಆತನು ಅರಿತಿದ್ದನು. ಆ ಚಿಕ್ಕ ಸೈನ್ಯದ ಮುಂದೆ ಅದರ ನಾಯಕನು

ಇದ್ದನು. ಜಗತ್ಸಿಂಗನಿಗೂ ಆ ಸೈನ್ಯಕ್ಕೂ ಸ್ವಲ್ಪ ಅಂತರ ಉಳಿದಿರುವಾಗ, ಆ ಸೇನಾ ನಾಯಕನೂ, ಜಗತ್ಸಿಂಗನೂ ಒಬ್ಬರನ್ನೊಬ್ಬರು ನೋಡಿದರು. ಸೇನಾನಾಯಕನ ಅಪ್ಪಣೆಯ ಮೇರೆಗೆ ಯಾವತ್ತು ಸವಾರರು ತಮ್ಮ ಕುದುರೆಗಳ ಕಡಿವಾಣಗಳನ್ನು ಜಗ್ಗಿ ಹಿಡಿದು ಅವನ್ನು ನಿಲ್ಲಿಸಿದರು. ಆ ಮೇಲೆ ಎಲ್ಲರೂ ತಮ್ಮ ತಮ್ಮ ಖಡ್ಗಗಳನ್ನು ಎದೆಗೆ ಹಚ್ಚಿಕೊಂಡು—''ಅಕಬರ ಬಾದಶಹರ ಜಯಜಯ ಕಾರವು! ಮಾನಸಿಂಹ ಮಹಾರಾಜರವರ ಜಯಜಯಕಾರವು!!'' ಎಂದು ಜಯಘೋಷ ಮಾಡಿದರು. ಆಗ ಜಗತ್ಸಿಂಗನೂ ತನ್ನ ಹೃದಯಕ್ಕೆ ಖಡ್ಗವನ್ನು ಹಚ್ಚಿಕೊಂಡು—''ಅಕಬರ ಬಾದಶಹರ ಜಯಜಯಕಾರವು! ಮಾನಸಿಂಹ ಮಹಾರಾಜರ ಜಯಜಯಕಾರವು!! ಎಂದು ಜಯಘೋಷ ಮಾಡಿ ಸಹಾನುಭೂತಿಯನ್ನು ವ್ಯಕ್ತಮಾಡಿದನು. ಬಳಿಕ ಜಗತ್ಸಿಂಗನು ಸೇನಾ ನಾಯಕನನ್ನು ಕುರಿತು—ಮಥುರಾಸಿಂಹ, ವಿಶೇಷ ವರ್ತಮಾನವೇನು? ಶಹಾನುಶಹರವರಿಗೆ ಕ್ಷೇಮವಷ್ಟೇ? ಮಹಾರಾಜರು ಸುಖರೂಪರಾಗಿರುವರೆ, ಎಂದು ಕೇಳಲು, ಮಥುರಾಸಿಂಹನು ತನ್ನ ಕುದುರೆಯಿಂದ ಇಳಿದು ಕೈಜೋಡಿಸಿ— ''ಮಹಾರಾಜ ಭಗವಂತನ ಕೃಪೆಯಿಂದ ಎಲ್ಲಿಯೂ ಅಮಂಗಲದ ಸುದ್ದಿಯಿರುವದಿಲ್ಲ, ಎಂದು ಹೇಳಿದನು. ಅಷ್ಟರಲ್ಲಿ ಒಬ್ಬ ಸಿಪಾಯಿಯು ಮಥುರಾಸಿಂಹನ ಕುದುರೆಯನ್ನು ಹಿಡಕೊಳ್ಳಲು, ಆ ನಾಯಕನು ಜಗತ್ಸಿಂಗನ ಬಳಿಗೆ ಬಂದು ಬಹು ಆದರದಿಂದ ಪ್ರಣಾಮ ಮಾಡಿ, ತನ್ನ ಮುಂಡಾಸದೊಳಗಿಂದ ಒಂದು ಪತ್ರವನ್ನು ತೆಗೆದು ಜಗತ್ಸಿಂಗನ ಕೈಯಲ್ಲಿ ಕೊಟ್ಟನು. ತನ್ನ ತಂದೆಯ ಸೈನ್ಯವನ್ನು ನೋಡಿದಾಗಲೇ ಏನಾದರೂ ಅನಿಷ್ಟ ಪ್ರಸಂಗವು ಒದಗಿರುವದೆಂದು ಯುವರಾಜರು ತರ್ಕಿಸಿದ್ದನು. ಈಗ ತಂದೆಯ ಪತ್ರವು ಕೈಯಲ್ಲಿ ಬಂದ ಬಳಿಕಂತು ಆತನ ಭಯವು ಹೆಚ್ಚಿತು. ಕೈಗಳು ನಡುಗುತ್ತಿರಲು, ಜಗತ್ಸಿಂಗನು ಪತ್ರವನ್ನು ಒಡೆದು ಓದಹತ್ತಿದನು. ಇನ್ನು ತನ್ನ ಸುಖದ ದಿವಸಗಳು ಮುಗಿದವೆಂದು ಆತನು ತರ್ಕಿಸಿದ್ದು ನಿಜವಾಯಿತು. ತಂದೆಯ ಅಪ್ಪಣೆಯನ್ನು ಓದುವದಾದ ಮೇಲೆ ಜಗತ್ಸಿಂಗನು ಮಥುರಾ ಸಿಂಹನನ್ನು ಕುರಿತು—

ಜಗತ್ಸಿಂಗ—ಮಥುರಾಸಿಂಹ, ಮಹಾರಾಜರು ನನ್ನನ್ನು ಕುರಿತು ಮತ್ತೇನು ಆಜ್ಞಾಪಿಸಿರುವರು?

ಮಥುರಾಸಿಂಹ—ಮಹಾರಾಜ, ನಾನು ತಮ್ಮ ಚರಣ ಸೇವಕನು, ಪತ್ರದಲ್ಲಿ ಬರೆದದ್ದಕ್ಕಿಂತ ಹೆಚ್ಚಿಗೆಯೇನೂ ಹೇಳಿರುವದಿಲ್ಲ; ಆದರೆ ವಿಶೇಷವಿಷ್ಟೆ; ತಮ್ಮ ದರ್ಶನವಾದ ಕೂಡಲೆ ತಾವು ಇದ್ದ ಸ್ಥಿತಿಯಲ್ಲಿ ಇದ್ದಹಾಗೆಯೇ ತಮ್ಮನ್ನು ಹಿಡಕೊಂಡು ಬರುವದಕ್ಕೆ ಮಹಾರಾಜರ ಅಪ್ಪಣೆಯಾಗಿದೆ; ಆದ್ದರಿಂದ ತಾವು ಈಗ ಹೀಗೆಯೇ ನನ್ನ ಸಂಗಡ ಬರಬೇಕಾಗುವದು.

ಜಗತ್ಸಿಂಗ—ಈಗ ಎಲ್ಲಿಗೆ ಬರಬೇಕು?

ಮಥುರಾಸಿಂಹ—ಪಾಟಣಾದಲ್ಲಿರುವ ಮಹಾರಾಜರ ಬಳಿಗೆ.

ಜಗತ್ಸಿಂಗ—ಇಂದು ಒಂದು ದಿನ ದುರ್ಗದಲ್ಲಿದ್ದು ನಾಳೆ ಬಂದರೆ?

ಮಥುರಾಸಿಂಹ—(ಕೈ ಜೋಡಿಸಿ) ತಾವು ಅಪ್ಪಣೆಯನ್ನು ಪಾಲಿಸಲಿಕ್ಕೆ ಸ್ವಲ್ಪ ಹಿಂದೆಮುಂದೆ ನೋಡಿದರೆ, ಅಥವಾ ಅದಕ್ಕೆ ಸ್ವಲ್ಪ ಸ್ವಲ್ಪ ವಿಘ್ನವನ್ನುಂಟು ಮಾಡಿದರೆ ತಮ್ಮನ್ನು ಸೆರೆಹಿಡಿದು ಕರತರಬೇಕೆಂದು ಮಹಾರಾಜರ ಅಪ್ಪಣೆಯಾಗಿದೆ.

ಜಗತ್ಸಿಂಗ—ಮಂದಾರಣಗಡದಲ್ಲಿ ನನ್ನವರು ಕೆಲವರಿರುತ್ತಾರೆ. ಅವರನ್ನು ಕಂಡು ಅವರಿಗೆ ಹೇಳಿಬರಲಿಕ್ಕೂ ಆಸ್ಪದವಿಲ್ಲವೋ?

ಮಥುರಾಸಿಂಹ— (ಕೈ ಜೋಡಿಸಿ) ನಾನು ತಮ್ಮ ದಾಸನು, ಕ್ಷಮಿಸಬೇಕು. ತಮಗೆ ಸ್ವಲ್ಪವೂ ಅವಕಾಶ ಕೊಡಲಾಗದೆಂದು ಮಹಾರಾಜರು ನನ್ನನ್ನು ಆಜ್ಞಾಪಿಸಿದ್ದಾರೆ.

ಇನ್ನು ಹೆಚ್ಚು ಮಾತು ಬಳಿಸುವದರಲ್ಲಿ ಅರ್ಥವಿಲ್ಲೆಂದು ಜಗತ್ಸಿಂಗನು ತಿಳಿದನು. ಒಬ್ಬ ರಾಜದ್ರೋಹಿಯನ್ನು ಆಜ್ಞಾಪಿಸುವಂತೆ ತನ್ನ ತಂದೆಯು ತನ್ನನ್ನು ಆಜ್ಞಾಪಿಸಿರುವನೆಂದು ಆತನು ಭಾವಿಸಿದನು. ಆತನು ಮಥುರಾಸಿಂಹನನ್ನು ಕುರಿತು—''ಮಹಾರಾಜರ ಆಜ್ಞೆಯನ್ನು ಉಲ್ಲಂಘಿಸುವವರು ಈ ಭರತಖಂಡದಲ್ಲಿ ಯಾರಿರುವರು? ನಾನಂತು ಅವರ ಕ್ಷುದ್ರನಾದ ಸೇವಕನು; ಆದರೆ ಮಥುರಾಸಿಂಗಜೀ, ನಾನು ನಿಮ್ಮನ್ನೊಂದು ಮಾತು ಕೇಳುತ್ತೇನೆ, ಅದನ್ನು ಹೇಳುವಿರಾ? ನಾನು ಈಗ ಯುದ್ಧಕ್ಕೆ ಸನ್ನದ್ಧನಾಗಿ ನಿಂತುಕೊಂಡರೆ, ಏನು ಮಾಡಬೇಕೆಂದು ನಿಮಗೆ ಹಿರಿಯರ ಅಪ್ಪಣೆಯಾಗಿದೆ? ಅನ್ನಲು, ಅದಕ್ಕೆ ಮಥುರಾಸಿಂಹನು—ಮಹಾರಾಜ, ತಮ್ಮ ಪ್ರಶ್ನೆಗೆ ಉತ್ತರಕೊಡುವ ಯೋಗ್ಯತೆಯು ನನಗಿಲ್ಲ, ತಾವು ಜೀವದಿಂದ ಸಿಗಲಿ, ಮರಣ ಹೊಂದಿ ಸಿಗಲಿ ಸಿಕ್ಕಹಾಗೆ ಹಿಡತರಬೇಕೆಂದು ಮಹಾರಾಜರ ಅಪ್ಪಣೆಯಾಗಿದೆ, ಎಂದು ಹೇಳಿದನು.

ತನ್ನ ವಿಷಯವಾಗಿ ಮಹಾರಾಜರು ಎಷ್ಟು ಕಠಿಣ ಹೃದಯರಾಗಿರುವರೆಂಬದನ್ನು ಜಗತ್ಸಿಂಗನು ತಿಳಕೊಂಡನು. ಆತನು ಪುನಃ ಮಥುರಾಸಿಂಹನನ್ನು ಏನೂ ಕೇಳಲಿಲ್ಲ, ಮಹಾರಾಜರ ಎದುರಿಗೆ ಹೋಗಿ ನಿಂತಬಳಿಕ ಭೋಗಿಸಬೇಕಾದ ಶಿಕ್ಷೆಯನ್ನು ಭೋಗಿಸಿದ ರಾಯಿತು. ಸುಮ್ಮನೆ ಅವರ ಆಜ್ಞೆಗೆ ವಿರುದ್ಧವಾಗಿ ನಡೆಯಲು ಯತ್ನಿಸುವದರಲ್ಲಿ ಅರ್ಥವಿಲ್ಲ, ಈಶ್ವರಾಜ್ಞೆಯನ್ನಾದರೂ ಮೀರಬಹುದು; ಆದರೆ ಮಾನಸಿಂಹರವರ ಸೈನಿಕರು ಮಾನಸಿಂಹರ ಆಜ್ಞೆಯನ್ನು ಮೀರಲಾರರು. ಅವರು ತಮ್ಮ ಪ್ರಭುವಿನ ಅಪ್ಪಣೆಯಂತೆ ನಡೆದೇ ತೀರತಕ್ಕವರು; ಅಂದಬಳಿಕ ಈಗ ವ್ಯರ್ಥವಾಗಿ ಮಥುರಾಸಿಂಹನ ಸಂಗಡ ಅರೆದಾಡುವದರಲ್ಲಿ ಅರ್ಥವೇನು? ಎಂದು ಯೋಚಿಸಿ, ಮಥುರಾ ಸಿಂಹನನ್ನು ಕುರಿತು—ನಡೆಯಿರಿ ಮಥುರಾಸಿಂಹ, ಇನ್ನು ವ್ಯರ್ಥ ತಡಮಾಡುವದರಿಂದ ಪ್ರಯೋಜನವಿಲ್ಲ; ಆದರೆ ನನ್ನ ಸೈನಿಕರೂ ಸೇವಕರೂ ದಾರುಕೇಶ್ವರದ ತೀರದಲ್ಲಿ ಶಹಾಬಾರದಲ್ಲಿ ಇರುವರು, ಅವರ ಗತಿಯೇನು? ಎಂದು ಕೇಳಲು, ಮಥುರಾಸಿಂಹನು– ''ನಾನು ಅವರ ಯೋಗ್ಯವ್ಯವಸ್ಥೆ ಮಾಡುವೆನು'' ಎಂದು ಹೇಳಿ, ಒಬ್ಬ ಸೈನಿಕನಿಗೆ ಅಪ್ಪಣೆಯಿತ್ತು ಅತ್ತಕಡೆಗೆ ಕಳಿಸಿದನು. ಸೈನಿಕನು ಅತ್ತಕಡೆಗೆ ಹೋಗುತ್ತಿರಲು, ಜಗತ್ಸಿಂಗನು ಆತನನ್ನು ಕುರಿತು—ನೀನು ಮಂದಾರಣಗಡದ ಮೇಲಿಂದ ಹಾದು ಹೋಗುತ್ತಿದ್ದರೆ, ''ತಂದೆಯ ಆಜ್ಞೆಯಂತೆ ಜಗತ್ಸಿಂಗನು ಪಾಟಣಾಕ್ಕೆ ಹೋದನೆಂಬ ಸುದ್ದಿಯನ್ನು

ಅಲ್ಲಿ ತಿಳಿಸು'' ಎಂದು ಹೇಳಿದನು. ಆ ಮೇಲೆ ಮಧುರಾಸಿಂಹನು ತನ್ನ ಸೈನ್ಯದಲ್ಲಿ ಎರಡು ಭಾಗಗಳನ್ನು ಮಾಡಿದನು. ಬಳಿಕ ಪ್ರತಿ ಒಂದು ಭಾಗವು ಆತನ ಅಪ್ಪಣೆಯಿಂದ ಸಾಲ್ಗೊಂಡು ನಡೆಯುತ್ತಿರಲು, ಅವುಗಳ ಮಧ್ಯದಲ್ಲಿ ಜಗತ್ಸಿಂಗನೊಡನೆ ಮಧುರಾಸಿಂಹನು ನಡೆದನು.

ಮಾರ್ಗವನ್ನು ಕ್ರಮಿಸುವಾಗ ಜಗತ್ಸಿಂಗನು ತಿಲೋತ್ತಮೆಯನ್ನು ನೆನಿಸಿ ಬಹಳವಾಗಿ ವ್ಯಥೆಪಟ್ಟನು. ತಾನು ಮಂದಾರಣಗಡವನ್ನು ಬಿಟ್ಟು ಬರುವಾಗ ತನ್ನ ಪ್ರಿಯಳ ಒಪ್ಪಿಗೆಯನ್ನು ಪಡೆಯದೆ, ಆಕೆಗೆ ನಿದ್ರೆ ಹತ್ತಿದಾಗ ಕಳ್ಳನಂತೆ ನಡೆದ ತನ್ನ ಕಠಿಣ ಹೃದಯಕ್ಕಾಗಿ ಆತನು ತನ್ನನ್ನು ಬಹಳವಾಗಿ ಹಳಿದುಕೊಂಡನು. ಕಣ್ಣೀರು ಸುರಿಸುತ್ತಿದ್ದ ತನ್ನ ಪ್ರಿಯಳ ಬಾಡಿದ ಮೋರೆಯೂ, ಬೇಗನೆ ಬರಬೇಕೆಂದು ಆಕೆಯು ತನಗೆ ಇಟ್ಟಕೊರಳ ಆಣೆಯೂ ಭಯಗೊಂಡು ಭಕ್ತಿ ಪೂರ್ವಕವಾಗಿ ಆಕೆಯು ತನಗೆ ಮಾಡಿದ ಪ್ರಣಾಮವೂ, ಈಗ ಜಗತ್ಸಿಂಗನ ಕಣ್ಣಿಗೆ ಕಟ್ಟಿ, ಶೋಕಾತಿಶಯದಿಂದ ಆತನ ಕುತ್ತಿಗೆಯ ನರಗಳು ಬಿಗಿದವು. ಮಧುರಾಸಿಂಹನ ಮುಂದೆ ಗಟ್ಟಿಯಾಗಿ ಅಳುವದಂತು ಇರಲಿ, ಕಣ್ಣೀರು ಸುರಿಸಲಿಕ್ಕೂ ಬಾರದ್ದರಿಂದ, ಜಗತ್ಸಿಂಗನ ದುಃಖವು ಆತನನ್ನು ಬಹಳವಾಗಿ ನೋಯಿಸಹತ್ತಿತು. ತಿಲೋತ್ತಮೆಯ ಒಂದೊಂದೇ ಸುಗುಣಗಳೂ, ಅಕೃತ್ರಿಮ ಪ್ರೇಮವೂ, ಸುಲಲಿತ ಭಾಷಣಗಳೂ, ಮನೋಹರ ನಡತೆಗಳೂ ಜಗತ್ಸಿಂಗನ ಮನಸ್ಸಿಗೆ ಹೊಳೆದು, ಆತನನ್ನು ಮೂಢನಾಗ ಮಾಡಿದವು. ಬರಬರುತ್ತ ಯುವರಾಜನು ಭ್ರಮಿಷ್ಟನಂತಾದನು; ಆದರೆ ತಾನು ತಂದೆಯ ಸೆರೆಯಾಳಾಗಿ ಮಧುರಾಸಿಂಹ ನೊಡನೆ ನಡೆದಿರುವೆನೆಂಬ ಎಚ್ಚರವು ಮಾತ್ರ ಆತನಿಗೆ ಪೂರ್ಣವಾಗಿ ಇದ್ದದ್ದರಿಂದ, ಎಚ್ಚರಗೇಡಿತನದ ಕೃತಿಗಳು ಆತನಿಂದ ಒದಗಲಿಲ್ಲ. ಮಾರ್ಗವನ್ನು ನಡೆಯುವಾಗ ಒಬ್ಬರೂ ಚಕಾರ ಶಬ್ದ ನುಡಿಯುತ್ತಿದ್ದಿಲ್ಲ. ಒಬ್ಬೊಬ್ಬರು ಒಂದೊಂದು ಬಗೆಯ ವಿಚಾರದಲ್ಲಿ ಮಗ್ನರಾಗಿ ಹೋಗಿದ್ದರು. ಪ್ರತ್ಯಕ್ಷ ಯುವರಾಜನಾದ ಜಗತ್ಸಿಂಗನಿಗೊದಗಿದ ಪ್ರಸಂಗವನ್ನು ನೋಡಿ, ಸ್ವಾಮಿಭಕ್ತ ಮಧುರಾಸಿಂಹನು ಬಹಳ ಉದಾಸೀನನಾಗಿದ್ದನು. ತನ್ನ ಒಡೆಯನ ಸಂಗಡ ಮಾತಾಡುವದಂತು ಇರಲಿ, ಒಡೆಯನ ಕಡೆಗೆ ನೋಡುವ ಮನಸ್ಸು ಸಹ ಆತನಿಗಾಗಲಿಲ್ಲ. ಮಾನಸಿಂಹನ ಕಠಿಣ ತರವಾದ ಆಜ್ಞೆಯ ಪ್ರಭಾವದ ಮೂಲಕ ತನಗೆ ಯುವರಾಜನ ಒಂದು ಬೇಡಿಕೆಯನ್ನಾದರೂ, ಪೂರ್ಣಮಾಡಲಿಕ್ಕೆ ಬರಲಿಲ್ಲೆಂದು ಮಧುರಾಸಿಂಹನು ಮನಸ್ಸಿನಲ್ಲಿ ವ್ಯಸನಪಡುತ್ತಿದ್ದನು. ಉಳಿದ ಸೈನಿಕರು ಮಾನಸಿಂಹನ ನ್ಯಾಯನಿಷ್ಠುರತೆಗಾಗಿ ಭಯಗೊಂಡು ಸುಮ್ಮನೆ ಮಾರ್ಗವನ್ನು ಕ್ರಮಿಸುತ್ತಲಿದ್ದರು. ಹೀಗೆ ಎಲ್ಲರು ಚಿಂತಾಮಗ್ನರಾಗಿರುವಾಗ ಅವರವರ ಕುದುರೆಗಳು ತಮ್ಮ ಚಿರಪರಿಚಿತವಾದ ಭಾರಗಳನ್ನು ಹೊತ್ತುಕೊಂಡು ದ್ರುತಗಮನದಿಂದ ಮಾರ್ಗವನ್ನು ಕ್ರಮಿಸುತ್ತಲಿದ್ದವು.

# ನ್ಯಾಯನಿಷ್ಠುರತೆ

ಇತ್ತ ಮಾನಸಿಂಹನು ತನ್ನ ಮಗನ ಮೇಲೆ ಬಹಳ ಸಿಟ್ಟಾಗಿದ್ದನು. ತನ್ನ ಮಗನು ಪಠಾಣರ ಸೆರೆಯಾಳಾದಾಗಲೇ ಮಾನಸಿಂಹನಿಗೆ ಆತನ ಕೃತಿಗಳೆಲ್ಲ ಗೊತ್ತಾಗಿದ್ದವು. ತನ್ನ ಪ್ರಸಿದ್ಧ ಕುಲೀನ ಮನೆತನದೊಡನೆ ಮಂದಾರಣಗಡದಂಥ ಕ್ಷುದ್ರ ಸಂಸ್ಥಾನಿಕನ ಸಂಬಂಧ ವಾದದ್ದು ಮಾನಸಿಂಹನಿಗೆ ಬಹಳ ಅಪಮಾನಾಸ್ಪದವಾಗಿ ತೋರಿತು. ವೀರೇಂದ್ರಸಿಂಹನನ್ನು ಈ ಅಂಬರಾಧೀಶ್ವರನು ನೀಚನೆಂದು ಭಾವಿಸುತ್ತಿದ್ದನು. ವೀರೇಂದ್ರನೊಡನೆ ಭಾಷಣ ಮಾಡುವದು ಸಹ ಆತನಿಗೆ ಸೇರುತ್ತಿದ್ದಿಲ್ಲ. ತನ್ನ ಅನುಮತಿಯನ್ನು ಪಡೆಯದೆ, ಅಥವಾ ಲಗ್ನಮಾಡಿಕೊಳ್ಳುತ್ತೇನೆಂಬ ಸುದ್ದಿಯನ್ನು ಸಹ ತನಗೆ ಹೇಳದೆ ಮಗನು ತಿಲೋತ್ತಮೆಯನ್ನು ಲಗ್ನವಾದದ್ದರಿಂದಂತು ಮಾನಸಿಂಹನು ಸಿಟ್ಟು ಬೆಂಕಿಯಾಗಿದ್ದನು. ಆದರೂ ಆ ಸಿಟ್ಟನ್ನು ಹೊರಗೆ ತೋರಿಸದೆ ಮಾನಸಿಂಹನು ಅದನ್ನೆಲ್ಲ ನುಂಗಿಕೊಂಡನು. ಮಗನು ಈಗ ಎಲ್ಲಿ ಇರುವನು, ಏನು ಮಾಡುವನು ಎಂಬ ಉಸಾಬರಿಯನ್ನು ಕೂಡ ಆತನು ಬಿಟ್ಟುಬಿಟ್ಟಿದ್ದನು. ತಾವು ಬಾದಶಹರ ನೌಕರರಿದ್ದು, ಬಾದಶಹನ ಹಿತವನ್ನು ಕೆಡಿಸಿ ತನ್ನ ಮಗನು ಸ್ವಾರ್ಥವನ್ನು ಸಾಧಿಸಿಕೊಂಡದ್ದರಿಂದ ಆತನು ರಾಜದ್ರೋಹದ ಶಿಕ್ಷೆಗೆ ಪಾತ್ರನೆಂದು ಆ ಸ್ವಾಮಿನಿಷ್ಠ ರಜಪೂತನು ನಿರ್ಧರಿಸಿದನು. ತನ್ನ ಸೈನ್ಯವು ಬೀಡುಬಿಟ್ಟಲ್ಲಿ ತಾನು ಇರದೆ, ಜಗತ್ಸಿಂಗನು ಮಂದಾರಣಗಡದಲ್ಲಿ ಇರಹತ್ತಿದ್ದು ಮಾನಸಿಂಹನಿಗೆ ಅಕ್ಷಮ್ಯ ಅಪರಾಧವಾಗಿ ತೋರಿತು. ಇಂಥ ಮಹಾಪರಾಧಿಯಾದ ಮಗನನ್ನು ಶಿಕ್ಷಿಸದಿದ್ದರೆ, ತನ್ನ ಪಾಲಿಗೆ ಪಕ್ಷಪಾತ ದೋಷವು ಬಂದು ತನ್ನ ವರ್ಚಸ್ಸು ಕಡಿಮೆಯಾಗುವದೆಂದು ಆ ಅಭಿಮಾನಿಯು ಭಾವಿಸಿದನು. ಈ ಭಾವನೆ ಯಿಂದಲೇ ಆತನು ತನ್ನ ಮಗನನ್ನು ನ್ಯಾಯಾಸನದ ಮುಂದೆ ನಿಲ್ಲಿಸಿ ವಿಚಾರಿಸಿ ಯೋಗ್ಯ ಶಿಕ್ಷೆಯನ್ನು ವಿಧಿಸುವದಕ್ಕಾಗಿ ಆತನನ್ನು ಹಿಡಿತರಲು, ಮೇಲೆ ಹೇಳಿದಂತೆ ಐವತ್ತು ಜನ ಶೂರ ರಜಪೂತ ರಾವುತರೊಡನೆ ಮಥುರಾಸಿಂಹನನ್ನು ಕಳಿಸಿದ್ದನು. ಅದರಂತೆ ಮಥುರಾಸಿಂಹನು ಜಗತ್ಸಿಂಗನೊಡನೆ ಪಾಟಣಾಕ್ಕೆ ಬಂದು ತಲುಪಿದನು.

ಹೀಗಿರುವಾಗ ಒಂದು ದಿನ ರಾಜಾ ಮಾನಸಿಂಹನು ಪಾಟಣಾದಲ್ಲಿ ದರ್ಬಾರು ನೆರೆಸಿದನು. ಅಂದು ದರ್ಬಾರದಲ್ಲಿ ಜನರ ಸಂದಣಿಯು ವಿಶೇಷವಾಗಿತ್ತು. ಇಂದಿನ ದರ್ಬಾರ ದಲ್ಲಿ ಏನಾದರೂ ಅಸಂಭವ ಸಂಗತಿಯು ಒದಗುವದೆಂದು ದರ್ಬಾರದ ಜನರು ತರ್ಕಿಸುತ್ತಲಿದ್ದರು. ಪ್ರತ್ಯಕ್ಷ ಮಾನಸಿಂಹನ ಹಿರಿಯ ಮಗನ ಅಪರಾಧದ ವಿಚಾರಣೆಯು ಈ ದಿನದ ದರ್ಬಾರದಲ್ಲಿ ಆಗತಕ್ಕದ್ದಿದ್ದದ್ದರಿಂದ ಜನರ ಕೌತುಕಕ್ಕೆ ಕಳೆಯೇರಿತ್ತು. ಪಟ್ಟಣದೊಳಗಿನ ಕೆಲವು ಜನರು ಈ ನ್ಯಾಯವಿಚಾರವನ್ನು ಕೇಳುವದಕ್ಕಾಗಿಯೇ ಬುದ್ಧಿಪೂರ್ವಕವಾಗಿ ದರ್ಬಾರಕ್ಕೆ ಬಂದಿದ್ದರು. ದರ್ಬಾರದಲ್ಲಿ ಬರಲಿಕ್ಕೆ ಯಾರಿಗೂ ಪ್ರತಿಬಂಧವಿಲ್ಲದ್ದರಿಂದ ದರ್ಬಾರವು ಜನಸಮೂಹದಿಂದ ಸ್ವಾಭಾವಿಕವಾಗಿಯೇ ತುಂಬಿಹೋಗಿತ್ತು. ನಿಯಮಿತ ವೇಳೆಯಲ್ಲಿ ನೌಬತ್ತು ಬಾರಿಸಹತ್ತಿತು. ಬೇರೆ ವಾದ್ಯಗಳ ಧ್ವನಿಗಳು ನಾಲ್ಕೂ ಕಡೆಗೆ ಪಸರಿಸಿದವು. ವಾದ್ಯ ಧ್ವನಿಗಳು

ನಿಂತಕೂಡಲೆ ಮಹಾರಾಜರ ಮಾರ್ಗವನ್ನು ನಿರೀಕ್ಷಿಸುತ್ತ ದರ್ಬಾರದ ಜನರು ಸುಮ್ಮನೆ ಕುಳಿತುಕೊಂಡರು. ಮಹಾ ಪ್ರತಾಪಿಯಾದ ಅಂಬರಾಧೀಶ್ವರ ಮಾನಸಿಂಹ ಮಹಾರಾಜರು ಧೀರಗಂಭೀರ ಗಮನದಿಂದ ಸಭಾಸ್ಥಾನವನ್ನು ಪ್ರವೇಶಿಸಿದರು. ಅವರ ಬೆನ್ನ ಹಿಂದೆಯೇ ಅವರ ಅನುಚರರೂ, ಸೇನಾಪತಿಗಳೂ, ಸಭಾಸದರೂ ಬಂದರು. ಅವರೆಲ್ಲರ ಮೋರೆಗಳು ಬಾಡಿದ್ದವು. ಏನಾದರೂ ಭಯಂಕರ ಪ್ರಸಂಗವು ಒದಗುವದೆಂಬ ವಿಚಾರದಿಂದ ಅವರು ದುಃಖಿತರಾಗಿದ್ದರು. ಸಿದ್ಧ ಮಾಡಿದ್ದ ಸಿಂಹಾಸನದಲ್ಲಿ ಮಾನ ಸಿಂಹ ಮಹಾರಾಜರು ಕುಳಿತು ಕೊಂಡ ಕೂಡಲೆ ಉಳಿದವರು ತಮ್ಮ ತಮ್ಮ ಮರ್ಯಾದೆಯಂತೆ ಆಸನಗಳಲ್ಲಿ ಕುಳಿತುಕೊಂಡರು. ಮಾನಸಿಂಹನ ಮುಖದಲ್ಲಿ ಇಂದು ವಿಲಕ್ಷಣವಾದ ಗಾಂಭೀರ್ಯವು ಒಪ್ಪುತ್ತಿತ್ತು ಸಿಂಹಾಸನದಲ್ಲಿ ಕುಳಿತಕೂಡಲೆ ಆತನು—"ಅಪರಾಧಿಯನ್ನು ತಂದು ನಿಲ್ಲಿಸಿರಿ" ಎಂದು ಆಜ್ಞಾಪಿಸಿದನು.

ದರ್ಬಾರದೊಳಗಿನ ಜನರೆಲ್ಲ ಚಂಚಲ ಚಿತ್ತರಾದರು. ಅವರ ಮೋರೆಗಳಲ್ಲಿ ಚಿಂತೆಯ ಲಕ್ಷಣಗಳು ಹೆಚ್ಚಿದವು. ಅವರು ತೇಜೋಹೀನರಾಗಿ, ಬಾಗಿಲ ಕಡೆಗೆ ನೋಡಹತ್ತಿದರು. ಕಾವಲುಗಾರರಿಂದ ಸುತ್ತುಗಟ್ಟಲ್ಪಟ್ಟ ಜಗತ್ಸಿಂಗನು ಸಭೆಯಲ್ಲಿ ಬರತೊಡಗಿದನು. ಯಾವತ್ತು ಜನರ ಕಣ್ಣುಗಳಲ್ಲಿ ನೀರು ಸುರಿಯಹತ್ತಿದವು. ದರ್ಬಾರದಲ್ಲಿ ಅಷ್ಟು ದಟ್ಟಣೆಯಾಗಿದ್ದರೂ ಶಾಂತತೆಯೂ, ಸ್ತಬ್ಧತೆಯೂ ಮೂರ್ತಿಮತ್ತಾಗಿ ನೆಲೆಗೊಂಡಿದ್ದವು. ದರ್ಬಾರದಲ್ಲಿ ಗಟ್ಟಿಯಾಗಿ ಮಾತಾಡುವದಂತು ಇರಲಿ, ಬಳಿಯಲ್ಲಿದ್ದವರ ಸಂಗಡ ಮೆಲ್ಲನೆ ಮಾತಾಡುವ ಧೈರ್ಯವು ಕೂಡ ಯಾರಿಗೂ ಇದ್ದಿಲ್ಲ. ಅಪರಾಧಿಯಾದ ಜಗತ್ಸಿಂಗನನ್ನು ಮಹಾರಾಜರ ಮುಂದೆ ನಿಲ್ಲಿಸಿದ ಮೇಲೆ ಅವರು ಮಗನನ್ನು ಕುರಿತು ಗಂಭೀರ ಸ್ವರದಿಂದ—ಸೆರೆಯಾಳಾದ ಜಗತ್ಸಿಂಗನೇ, ನೀನು ಮಹಾಪರಾಧಿಯಾಗಿರುವೆ. ನೀನು ನಮ್ಮ ಮನೆತನದ ಸಂಬಂಧದಿಂದ, ಹಾಗು ಬಾದಶಹರ ಸಂಬಂಧದಿಂದ ಹೀಗೆ ಎರಡು ಬಗೆಯ ಅಪರಾಧಗಳನ್ನು ಮಾಡಿರುತ್ತೀ. ಮೊದಲು ಮನೆತನದ ಸಂಬಂಧದ ಅಪರಾಧವನ್ನು ವಿಚಾರಿಸಿ ಶಿಕ್ಷೆಯನ್ನು ವಿಧಿಸಿದ ಬಳಿಕ, ನಿನ್ನ ರಾಜಕೀಯ ಅಪರಾಧವನ್ನು ವಿಚಾರಿಸುವೆನು, ಎಂದು ಹೇಳಿದನು. ಆಗ ಜಗತ್ಸಿಂಗನು ಏನೂ ಮಾತಾಡದೆ, ಮತ್ತಿಷ್ಟು ತಲೆ ಬಾಗಿಸಿ ಸುಮ್ಮನೆ ನಿಂತುಕೊಂಡನು. ಅಷ್ಟರಲ್ಲಿ ಒಬ್ಬ ವೃದ್ಧ ಮೊಗಲ ಸರದಾರನು ತನ್ನ ಆಸನದಿಂದ ಎದ್ದು ನಿಂತು, ಪದ್ಧತಿಯಂತೆ ಮಾನಸಿಂಹ ಮಹಾರಾಜನಿಗೆ ವಿನಯದಿಂದ ಮುಜುರೆ ಮಾಡಿ—ಮಹಾರಾಜರು ನನ್ನ ಅಪರಾಧವನ್ನು ಕ್ಷಮಿಸಬೇಕು. ಮನೆತನಕ್ಕೆ ಸಂಬಂಧಿಸಿದ ಕುಮಾರರ ಅಪರಾಧಗಳನ್ನು ಕೂಡಿದ ದರ್ಬಾರ ದಲ್ಲಿ ವಿಚಾರಿಸುವದು ಯೋಗ್ಯವಲ್ಲ ವಿಚಾರ ಮಾಡುವದೇ ಮಹಾರಾಜರ ಮನಸ್ಸಿನಲ್ಲಿದ್ದರೆ, ನಮ್ಮೆಲ್ಲರಿಗೆ ದರ್ಬಾರದಿಂದ ಹೊರಟು ಹೋಗಲು ಅಪ್ಪಣೆಯಾಗಬೇಕು, ಎಂದು ಬೇಡಿ ಕೊಂಡನು. ಅದಕ್ಕೆ ಮಾನಸಿಂಹನು— ಇಲ್ಲ ಯಾರೂ ದರ್ಬಾರದಿಂದ ಹೊರಗೆ ಹೋಗುವ ಕಾರಣವಿಲ್ಲ, ಈ ಸೆರೆಯಾಳಿನ, ಮನೆತನಕ್ಕೆ ಸಂಬಂಧಿಸಿದ ಅಪರಾಧವು ಅವನ ರಾಜಕೀಯ ಅಪರಾಧಕ್ಕೆ ಅತಿ ನಿಕಟವಾಗಿ ಸಂಬಂಧಿಸಿರುತ್ತದೆ; ಆದ್ದರಿಂದ ಆ ಮೊದಲಿನ ಅಪರಾಧವನ್ನು ವಿಚಾರಿಸುವದೆಂದರೆ, ಈತನ ರಾಜಕೀಯ ಅಪರಾಧವನ್ನು ವಿಚಾರಿಸಿದ ಹಾಗೆಯೇ ಇರುತ್ತದೆ.

ಮಹಾರಾಜರ ಈ ಮಾತುಗಳನ್ನು ಕೇಳಿ, ಆ ವೃದ್ಧ ಸರದಾರನು ಉಪಾಯಗಾಣದೆ ಸುಮ್ಮನೆ ಕುಳಿತುಕೊಂಡನು. ಎಲ್ಲ ಜನರು ಪಾಷಾಣ ಮೂರ್ತಿಗಳಂತೆ, ತಮ್ಮ ತಮ್ಮ ಸ್ಥಳಗಳಲ್ಲಿ ಚಲಿಸದೆ ಕುಳಿತುಕೊಂಡು ಬಿಟ್ಟರು. ಇನ್ನು ಮಹಾರಾಜರು ಹ್ಯಾಗೆ ವಿಚಾರಿಸುವರೆಂಬದರ ಕಡೆಗೆ ಎಲ್ಲರ ಲಕ್ಷವಿತ್ತು. ಆಗ ಮಹಾರಾಜರು—

ಮಾನಸಿಂಹ—ಎಲೈ ಅಪರಾಧಿಯೇ, ಈಗ ನಾನು ಕೇಳುವ ಪ್ರಶ್ನೆಗಳಿಗೆ ನೀನು ನಿಜವಾದ ಉತ್ತರಗಳನ್ನು ಕೊಡದಿದ್ದರೆ, ನಿನ್ನ ಅಪರಾಧದ ಸ್ವರೂಪವು ಬಹಳ ಭಯಂಕರ ವಾಗುವದು.

ಜಗತ್ಸಿಂಗ— (ಅಹಂಕಾರದಿಂದ) ಮಹಾರಾಜರು ಹೀಗೆ ಸೂಚಿಸುವ ಕಾರಣವಿಲ್ಲ. ಜಗತ್ಸಿಂಗನ ಮುಖದಿಂದ ಸುಳ್ಳು ಮಾತುಗಳು ಎಂದೂ ಹೊರಡವು.

ಮಾನಸಿಂಹ—ಹೀಗೋ? ವೀರೇಂದ್ರಸಿಂಹನ ಕೋಟೆಯಲ್ಲಿ ಆತನ ಮನೆಯ ಹೆಂಗಸ ರೊಡನೆ ಪಠಾಣರು ನಿನ್ನನ್ನು ಸೆರೆ ಹಿಡಿದಿದ್ದರೋ ಇಲ್ಲವೋ?

ಜಗತ್ಸಿಂಗ—ಹೌದು, ಸೆರೆ ಹಿಡಿದದ್ದು ನಿಜವು.

ಮಾನಸಿಂಹ—ಪಠಾಣರ ಸೆರೆಯಲ್ಲಿದ್ದಾಗ ನೀನು ಕಾತಲೂಖಾನನ ಮಗಳಾದ ಆಯೇಷೆಯನ್ನು ಪ್ರೀತಿಸುತ್ತಿದ್ದಿಯೋ ಇಲ್ಲವೋ?

ಜಗತ್ಸಿಂಗ—ಮಹಾರಾಜರೇ, ಈ ಪ್ರಶ್ನದ ಉತ್ತರವನ್ನು ಸ್ವಲ್ಪದರಲ್ಲಿ ಕೊಡಲಿಕ್ಕೆ ನನಗೆ ಬರುವಹಾಗಿಲ್ಲ, ಇದಕ್ಕಾಗಿ ನನ್ನನ್ನು ಕ್ಷಮಿಸುವದಾಗಬೇಕು. ನವಾಬ ಕಾತಲೂಖಾನನ ಮಗಳು ನನ್ನ ಅತ್ಯಂತ ಹಿತಕರ್ತ್ರುವಾಗಿರುವಳು. ಈದಿನ ಸೆರೆಯವನಾಗಿಯೇ ಆಗಲೊಲ್ಲದೇಕೆ, ನಾನು ತಮ್ಮ ಮುಂದೆ ಜೀವದಿಂದ ಬದುಕಿ ನಿಂತುಕೊಳ್ಳಲಿಕ್ಕೆ ಆ ನವಾಬ ಕುವರಿಯ ದೀರ್ಘ ಪ್ರಯತ್ನವೇ ಕಾರಣವಾಗಿರುವದು. ಗಾಯಹೊಂದಿ ಸೆರೆಮನೆಯಲ್ಲಿ ನರಳುತ್ತ ಮಲಗಿದ್ದಾಗ ಆ ಆಯೇಷೆಯು, ಹಡೆದ ತಾಯಿಯಂತೆ, ಬೆನ್ನಿನಲ್ಲಿ ಬಿದ್ದ ತಂಗಿಯಂತೆ, ಮಾಡಿಕೊಂಡ ಹೆಂಡತಿಯಂತೆ ನನ್ನ ಸೇವಾ ಸೂತ್ರುಗಳನ್ನು ಮಾಡಿದಳು. ಅದರಿಂದಲೇ ನಾನು ಈಗ ಜೀವಿಸಿರುವೆನು. ಆ ದೇವಿಯ ಮೇಲೆ ನನ್ನ ದೃಢವಾದ ಶ್ರದ್ಧೆಯಿರುವದು, ಆಕೆಯನ್ನು ನಾನು ಸಂಪೂರ್ಣವಾಗಿ ವಿಶ್ವಾಸಿಸುವೆನು. ನನಗಿಂತಲೂ ಶ್ರೇಷ್ಠಳೆಂದು ಆಕೆಯನ್ನು ನಾನು ಭಾವಿಸುವೆನು. ಆಕೆಯ ದಯಾಪೂರ್ಣ ದೃಷ್ಟಿಗಳನ್ನು ನೋಡುವ ಧೈರ್ಯವು ಕೂಡ ನನಗೆ ಆಗುವದಿಲ್ಲ. ಆಕೆಯನ್ನು ನಾನು ಒಬ್ಬ ಪೂಜ್ಯ ದೇವತೆಯೆಂದು ಭಾವಿಸುವೆನು; ಆದರೆ ಗುಣವತಿಯಾದ ಆ ನವಾಬ ಕುವರಿಯ ಪ್ರೇಮವು ಅಧಮಾಧಮನಾದ ನನ್ನ ಮೇಲೆ ಸಂಪೂರ್ಣವಾಗಿ ಕುಳಿತಿರುವದೆಂಬ ಸಂಗತಿಯು ದುರ್ದೈವ ದಿಂದ ನನಗೆ ಗೊತ್ತಾಗಲು, ನನ್ನ ಎದೆಯು ದಸಕ್ಕೆಂದಿತು; ಶರೀರದಲ್ಲಿ ಕಂಪವು ಉತ್ಪನ್ನವಾಯಿತು. ನನಗೆ ಮೋಹಿಸಿದ್ದರಿಂದ ಆ ಗುಣ ಸುಂದರ ತರುಣಿಯ ಕೋಮಲ ಹೃದಯಕ್ಕೆ ಎಷ್ಟು ವ್ಯಥೆಯಾಗುತ್ತಿರಬಹು ದೆಂಬದನ್ನು ನಾನು ಕಲ್ಪಿಸಲಾರೆನು. ಆ ದಯಾಮಯ ಸುಂದರಿಯ ಪ್ರೇಮಕ್ಕೆ ಪ್ರತಿಯಾಗಿ ನಾನು ಆಕೆಯನ್ನು ಸ್ವಲ್ಪವಾದರೂ ಪ್ರೀತಿಸಿ, ಆಕೆಯ ಮನಸ್ಸನ್ನು ಸ್ವಲ್ಪಮಟ್ಟಿಗಾದರೂ

ಸಮಾಧಾನಪಡಿಸಲು ಶಕ್ತನಾಗಿದ್ದರೆ, ನನ್ನನ್ನು ಧನ್ಯನೆಂದು ಭಾವಿಸುತ್ತಿದ್ದೆನು; ಆದರೆ ಆಕೆಯಮೇಲೆ ನನ್ನ ಪ್ರೀತಿಯೇ ಕುಳಿತುಕೊಳ್ಳಲೊಲ್ಲದು. ನನ್ನ ಮೇಲಿದ್ದ ಆಕೆಯ ಪ್ರೇಮವನ್ನು ಕಡಿಮೆ ಮಾಡಲಿಕ್ಕೆ ಬರುವಹಾಗಿದ್ದರೆ, ಏನಾದರೂ ಮಾಡಿ ನಾನು ಅದನ್ನು ಕಡಿಮೆ ಮಾಡುತ್ತಿದ್ದೆನು; ಆದರೆ ಏನು ಮಾಡಿದರೂ ನನ್ನ ಮೇಲಿನ ಆಕೆಯ ಪ್ರೇಮವು ಕಡಿಮೆಯಾಗುವ ಹಾಗಿಲ್ಲ!

ಮಾನಸಿಂಹ—(ತಿರಸ್ಕಾರದ ಸ್ವರದಿಂದ) ಇದೆಯೋ ನಿನ್ನ ಸತ್ಯಮಾತಿನ ರೀತಿಯು! ಆಯೇಷೆಯಂಥ ಸದ್ಗುಣ ಪೂರ್ಣ ಸುಂದರಿಯು ಮನಮುಟ್ಟಿ ಪ್ರೀತಿಸುತ್ತಿರಲು, ಅದಾವ ತರುಣನು ಆಕೆಯನ್ನು ಪ್ರೀತಿಸದೆಯಿದ್ದಾನು? ಜಗತ್ಸಿಂಗ, ಇಂಥ ಹುಚ್ಚುಮಾತಿಗೆ ನಾನು ಮರುಳಾದೇನೆಂದು ನೀನು ಕಲ್ಪಿಸಿಯಾದರೂ ಹ್ಯಾಗೆ?

ಜಗತ್ಸಿಂಗ—ಮಹಾರಾಜ, ತಾವು ಸಮರ್ಥರಿರುವಿರಿ; ಶಾಸನ ಮಾಡಲಿಕ್ಕೂ, ಪಾಲನ ಮಾಡಲಿಕ್ಕೂ ತಮಗೆ ಸಂಪೂರ್ಣ ಅಧಿಕಾರವಿರುವದು; ಆದರೆ ಜಗತ್ಸಿಂಗನ ಮುಖದಿಂದ ಅಸತ್ಯವಾಣಿಯು ಮಾತ್ರ ಎಂದಿಗೂ ಹೊರಡದು. ಆಯೇಷೆಯ ಮೇಲೆ ಪ್ರೇಮ ಮಾಡುವ ದಿಲ್ಲಂಬ ಮಾತು ಎಷ್ಟು ಮಾತ್ರವೂ ಸುಳ್ಳಲ್ಲ

ಮಾನಸಿಂಹ—(ಕಠೋರ ಸ್ವರದಿಂದ) ಅದಿರಲಿ, ವೀರೇಂದ್ರಸಿಂಹನ ಮಗಳು ತಿಲೋತ್ತಮೆಯು ನಿನ್ನ ಉಪಪತ್ನಿಯಾಗಿರುವಳಲ್ಲವೆ?

ಇದನ್ನು ಕೇಳಿ ಜಗತ್ಸಿಂಗನ ಚಿತ್ತವು ಚಂಚಲವಾಯಿತು; ಆತನ ಮೈಮೇಲಿನ ಕೂದಲುಗಳು ನೆಟ್ಟಗಾದವು; ಆದರೂ ಆತನು ಧೈರ್ಯ ತಾಳಿ ತಂದೆಯನ್ನು ಕುರಿತು—''ಮಹಾರಾಜ, ತಾವು ನ್ಯಾಯಾನ್ಯಾಯಗಳನ್ನು ನಿರ್ಣಯಿಸುವಲ್ಲಿ ಪ್ರತ್ಯಕ್ಷ ಧರ್ಮ ಮೂರ್ತಿಗಳಾಗಿರುತ್ತೀರಿ. ತಾವು ಈಗ ಮಾಡಿದ ಪ್ರಶ್ನೆಕ್ಕೆ ನಾನು ಉತ್ತರವನ್ನು ಕೊಡಲಾರೆನು. ವೀರೇಂದ್ರಸಿಂಹನ ಮಗಳು ನನ್ನ ಉಪಪತ್ನಿಯಲ್ಲ, ಧರ್ಮಪತ್ನಿಯಾಗಿರುತ್ತಾಳೆ. ಪವಿತ್ರ ಮಂತ್ರಾನುಷ್ಠಾನ ಸಹಿತವಾಗಿ ಅಗ್ನಿ-ಬ್ರಾಹ್ಮಣರ ಸಮಕ್ಷ ನಾನು ಆಕೆಯ ಪಾಣಿಗ್ರಹಣ ವನ್ನು ಮಾಡಿ, ಆಕೆಯನ್ನು, ನನ್ನ ಸಹಧರ್ಮಿಣಿಯಾಗಿ ಮಾಡಿಕೊಂಡಿರುತ್ತೇನೆ, ಎಂದು ನುಡಿಯುತ್ತಿರಲು, ಮಾನಸಿಂಹನು ಅತ್ಯಂತ ಕ್ರುದ್ಧನಾಗಿ—ನರಾಧಮನೇ! ರಜಪೂತ ಕುಲಕಲಂಕನೇ! ನರಕದೊಳಗಿನ ಕೆಟ್ಟ ಹುಳವೇ!!! ಈ ಪಾಪವನ್ನು ನನ್ನ ಮುಂದೆ ಉಚ್ಚರಿಸುವಾಗ ನಿನ್ನ ನಾಲಿಗೆಯು ಯಾಕೆ ಕಡಿದು ಬೀಳಲೊಲ್ಲದು? ನಿನಗೆ ನಾಚಿಕೆ ಹೇಗೆ ಬರಲಿಲ್ಲ? ಏನಂದಿ? ವೀರೇಂದ್ರಸಿಂಹನ ಕನ್ಯೆಯು ನಿನ್ನ ಧರ್ಮ ಪತ್ನಿಯಿರುವಳೇ? ತಿಲೋತ್ತಮೆಯು ಉಪಪತ್ನಿಯೆಂದು ನೀನು ಹೇಳಿದ್ದರೆ, ನಿನ್ನ ಆ ಅಪರಾಧವನ್ನು ನಾನು ಕ್ಷಮಿಸುತ್ತಿದ್ದೆನು. ಆದರೆ ನೀಚತನದಿಂದ ನೀನು ಆ ಅಧಮ ವಂಶೋತ್ಪನ್ನಳನ್ನು ಧರ್ಮಪತ್ನಿ ಯೆಂದು ಬೊಗಳುತ್ತೀ! ತಂದೆಯ ಅನುಮತಿಯನ್ನು ಪಡೆಯದೆ, ಆತನ ಆಶೀರ್ವಾದವನ್ನು ಗ್ರಹಿಸದೆ, ಯಾವ ಅಧಮ ಪುತ್ರನು ನೀಚ ಕುಲೋತ್ಪನ್ನಳಾದ ಕನ್ಯೆಯೊಡನೆ ವಿವಾಹ ಮಾಡಿಕೊಳ್ಳುವನೋ, ಆತನನ್ನು ತ್ಯಜಿಸುವದೇ ಯೋಗ್ಯವಾಗಿರುತ್ತದೆ; ಅದ್ದರಿಂದ ಇಂದಿನಿಂದ

ನೀನು ನನ್ನ ಮಗನಲ್ಲ, ನಾನು ನಿನ್ನ ತಂದೆಯಲ್ಲ. ಈವೊತ್ತಿನಿಂದ ನೀನು ಮಾನಸಿಂಹನ ಮಗನೆಂದು ಜನರ ಮುಂದೆ ಹೇಳಿಕೊಳ್ಳಹತ್ತಿದರೆ, ನಿಶ್ಚಯವಾಗಿ ನಿನ್ನನ್ನು ಶೂಲಕ್ಕೇರಿಸುವೆನು.

ಸಭೆಯಲ್ಲಿ ಕುಳಿತ ಜನರೆಲ್ಲ ತೆಪ್ಪಗೆ ಮಾನಸಿಂಹನ ಅಪ್ಪಣೆಯನ್ನು ಕೇಳುತ್ತಲಿದ್ದರು. ಅಂಜಿಕೆಯಿಂದ ಅವರು ಮಿಟ್ಟನೆ ಮಿಸುಕದೆ ಸುಮ್ಮನೆ ಕುಳಿತಿದ್ದರು. ಅಷ್ಟರಲ್ಲಿ ಮಾನಸಿಂಹನು ಜಗತ್ಸಿಂಗನನ್ನು ಕುರಿತು—ಇನ್ನು ನಿನ್ನ ರಾಜಕೀಯ ಅಪರಾಧದ ವಿಚಾರಣೆಯನ್ನು ಮಾಡಬೇಕಾಗಿರುವದು. ನೀನು ಬಾದಶಹನ ಒಬ್ಬ ಪ್ರಮುಖ ಸೇನಾಪತಿಯಿದ್ದು, ನಿನ್ನ ತಲೆಯ ಮೇಲೊಂದು ದೊಡ್ಡ ಜವಾಬ್ದಾರಿಯ ಕೆಲಸವಿರುತ್ತಿರಲು, ಅಕಸ್ಮಾತ್ತಾಗಿ ಒಬ್ಬಾನೊಬ್ಬ ಕಳ್ಳನಂತೆ ಎರಡನೆಯವರ ಕೋಟೆಯೊಳಗೆ, ಆ ಕೋಟೆಯ ಒಡೆಯನ ಒಪ್ಪಿಗೆಯಿಲ್ಲದೆ ನೀನು ಯಾಕೆ ಹೊಕ್ಕೆ? ಎಂದು ಕೇಳಿದನು. ಆಗ ಜಗತ್ಸಿಂಗನು ಸುಮ್ಮನೆ ತಲೆ ತಗ್ಗಿಸಿ ನಿಂತುಕೊಂಡಿದ್ದನು. ಆತನ ದೃಷ್ಟಿಗಳು ಭೂಮಿಯ ಕಡೆಗಿದ್ದವು. ಆಗ ಮಾನಸಿಂಹನು ಮಗನಿಗೆ— ''ಐದುಸಾವಿರ ಸೈನ್ಯವನ್ನು ಸಂಗಡ ಕರಕೊಂಡು ಪಠಾಣರನ್ನು ಓಡಿಸುವ ಪ್ರತಿಜ್ಞೆ ಮಾಡಿಯೂ ನೀನು ಕಾರ್ಯಘಾತ ಮಾಡಿದೆ. ನೀಚನಾದ ನೀನು ಸ್ವಾಮಿಯ ಕಾರ್ಯವನ್ನು ಸಾಧಿಸದೆ, ಸ್ವಚ್ಛಂದದಿಂದ ಒಬ್ಬ ಸ್ತ್ರೀಯ ವಿಲಾಸ ಪಾಶದಲ್ಲಿ ಸಿಕ್ಕಿಕೊಂಡು ಬಿದ್ದದ್ದು ಅಪರಾಧವಲ್ಲವೋ? ಅನ್ನಲು, ಈ ಮಾತನ್ನು ಕೇಳಿಯೂ ಜಗತ್ಸಿಂಗನು ಸುಮ್ಮನೆ ನಿಂತುಕೊಂಡಿದ್ದನು. ಆಗ ಮಾನಸಿಂಹನು ಮತ್ತೆ ಮಗನನ್ನು ಕುರಿತು— ''ಪಠಾಣರ ಸೆರೆಮನೆಯಿಂದ ಬಿಡುಗಡೆ ಹೊಂದಿದ ಬಳಿಕಾದರೂ ನೀನು ನಿನ್ನ ಸೈನ್ಯವನ್ನು ತಕ್ಕೊಂಡು ನನ್ನ ಬಳಿಗೆ ಬರಬೇಕಾಗಿತ್ತು; ಮತ್ತು ನಿನ್ನ ದಂಡಿನ ಭಾವಣಿಯ್ನನು ಬಿಟ್ಟು ಎರಡನೆಯ ಕಡೆಗಿರುವಾಗ ನೀನು ನನ್ನ ಅಪ್ಪಣೆಯನ್ನು ಕೇಳಿಕೊಳ್ಳಬೇಕಾಗಿತ್ತು, ಹೀಗೆ ಯಾಕೆ ಮಾಡಲಿಲ್ಲ? ಎಂದು ಗದ್ದರಿಸಲು, ಆದರೂ ಜಗತ್ಸಿಂಗನು ಸುಮ್ಮನೆ ನಿಂತುಕೊಂಡಿದ್ದನು. ಆಗ ಪುನಃ ಮಾನಸಿಂಹನು ಮಗನನ್ನು ಕುರಿತು—''ನಮ್ಮ ಸೈನ್ಯದ ತಳವು ಕಿತ್ತಿದಾಗ ಸೈನ್ಯದ ಪದ್ಧತಿಯಂತೆ ನೀನು ನಮ್ಮ ಸೈನ್ಯದ ಸಂಗಡ ಯಾಕೆ ಬರಲಿಲ್ಲ? ಪರವಾನಿಗೆಯಿಲ್ಲದೆ ಇಷ್ಟು ದಿವಸ ನೀನು ನಿನ್ನ ಸೈನ್ಯವನ್ನು ಬಿಟ್ಟು ಮಂದಾರಣಗಡದಲ್ಲಿ ಯಾಕೆಯಿದ್ದೆ?'' ಎಂದು ಕೇಳಿದನು. ಆದರೂ ಜಗತ್ಸಿಂಗನು ಒಂದು ತುಟಿಯನ್ನು ಎರಡು ಮಾಡಲಿಲ್ಲ, ಆಗ ಮಾನಸಿಂಹನು ಅತ್ಯಂತ ಕ್ರೋಧಸಂತಪ್ತನಾಗಿ ಮಗನಿಗೆ—''ಎಲೈ ಅಧಮಾಧಮಾ, ಮಾತಾಡು, ನಿನ್ನಂಥ ರಾಜದ್ರೋಹಿಗೆ ದೇಹಾಂತ ಪ್ರಾಯಶ್ಚಿತ್ತವೇ ಯೋಗ್ಯವಾದ ಶಿಕ್ಷೆಯು,'' ಎಂದು ನುಡಿದನು.

ನ್ಯಾಯನಿಷ್ಠುರನಾದ ಮಾನಸಿಂಹನು ಉಚ್ಚರಿಸಿದ ಈ ಕಠೋರತರವಾದ ಶಿಕ್ಷೆಯನ್ನು ಕೇಳಿ ಸಭಿಕರು ತತ್ತರಿಸಿದರು. ಆಗ ಮೊದಲಿನ ಆ ವೃದ್ಧ ಮೊಗಲ ಸರದಾರನು ಎದ್ದುನಿಂತು, ಅತ್ಯಂತ ವಿನಯದಿಂದ ಸಲಾಮು ಮಾಡಿ, ಆ ಅಂಬರಾಧೀಶ್ವರನನ್ನು ಕುರಿತು— ''ಹುಜೂರ, ನಾನು ಒಂದು ಅರ್ಜಿಯನ್ನು ಮಾಡಬೇಕೆಂದು ಇಚ್ಛಿಸುತ್ತೇನೆ. ಕುಮಾರರು ತಮ್ಮ ಪುತ್ರರಿರುತ್ತಾರೆ'' ಅನ್ನಲು, ಮಾನಸಿಂಹನು ಗಂಭೀರ ಸ್ವರದಿಂದ—''ಈ ಅಧಮನಿಗೆ ನನ್ನ ಮಗನೆಂದು ಯಾರು ಅನ್ನುವರು? ನನ್ನ ಮಗನು ಹೀಗೆ ಕರ್ತವ್ಯಹೀನನೂ,

ರಾಜದ್ರೋಹಿಯೂ ಆಗಲಾರನು. ಈತನ ಶರೀರ ಸಂಬಂಧವನ್ನು ಕಡಿದುಕೊಳ್ಳುವ ದಕ್ಕಾಗಿಯೇ, ನಾನು ಮೊದಲು ಈತನ ಮನೆತನದ ಸಂಬಂಧದ ಅಪರಾಧದ ವಿಚಾರಣೆಯನ್ನು ಮಾಡಿದೆನು. ಹಾಗೆ ನಾನು ವಿಚಾರ ಮಾಡಿದಾಗಲೇ ನನಗೆ ಇದ್ದ ಈತನ ಪುತ್ರತ್ವದ ಸಂಬಂಧವು ನಷ್ಟವಾಯಿತು, ಎಂದು ಹೇಳಿದನು. ಆಗ ಪುನಃ ಆ ವೃದ್ಧ ಮೊಗಲ ಸರದಾರನು ಎದ್ದು ನಿಂತು —''ಗರೀಬಪರವರ, ಹ್ಯಾಗಿದ್ದರೂ ಕುಮಾರನ ಪಾಲಕರು ತಾವೇ ಇರುತ್ತೀರಿ. ಒಂದು ಪಕ್ಷದಲ್ಲಿ ಅಪರಾಧದ ಮಾನದಿಂದ ತಾವು ವಿಧಿಸಿದ ಶಿಕ್ಷೆಯು ಯೋಗ್ಯವಾಗಿದ್ದರೂ, ಮಹಾರಾಜರು ಸ್ವಲ್ಪ ದಯಾದ್ರರಾಗಬೇಕು. ಕುಮಾರರ ವಯಸ್ಸು ತೀರ ಚಿಕ್ಕದಾಗಿರುವದರ ಕಡೆಗೂ ಲಕ್ಷಕೊಡಬೇಕು, ಎಂದು ಬೇಡಿಕೊಂಡನು. ಆಗ ಮಾನಸಿಂಹನು ವಿಚಾರಮಗ್ನನಾಗಿ ಕೆಲಹೊತ್ತು ಸುಮ್ಮನೆ ಕುಳಿತುಕೊಂಡಮೇಲೆ, ಜಗತ್ಸಿಂಗನನ್ನು ಕುರಿತು—''ಏ! ಉಂಡಮನೆ ಗಳ ಎಣಿಸುವ ನೀಚನೇ, ಕೃತಘ್ನಾ, ಕೇಳು. ನಿನ್ನ ಅಪರಾಧವನ್ನು ವಿಚಾರಿಸಿದರೆ, ನಿನಗೆ ಮರಣ ಶಿಕ್ಷೆಯ ಹೊರತು ಬೇರೆ ಶಿಕ್ಷೆಯು ಯೋಗ್ಯವಾದದ್ದಲ್ಲ. ಆದರೂ ನಿನ್ನ ವಯಸ್ಸನ್ನು ನೋಡಿ, ನಿನ್ನ ವಿಷಯವಾಗಿ ದಯಾಳುವಾಗಿ, ಮರಣ ಪರ್ಯಂತ ಕಾರಾಗೃಹವಾಸದ ಶಿಕ್ಷೆಯನ್ನು ನಿನಗೆ ವಿಧಿಸುತ್ತೇನೆ. ಸೇನಾಪತೀ, ಈ ಅಪರಾಧಿಯ ಉಡಿಗೆ-ತೊಡಿಗೆಗಳನ್ನು ಸೆಳೆದುಕೊಂಡು, ನನ್ನ ಎದುರಿಗೆ ಇವನ ಕೈಕಾಲುಗಳಿಗೆ ಬೇಡಿಗಳನ್ನು ಹಾಕಿ ಸೆರೆಮನೆಗೆ ಎಳೆದುಕೊಂಡು ನಡೆಯಿರಿ. ಎಂದು ಆಜ್ಞಾಪಿಸಿದನು. ಮಾನಸಿಂಹನ ಆಜ್ಞೆಯಂತೆ ಕಾರ್ಯವಾಗಲಿಕ್ಕೆ ವಿಲಂಬ ವಾಗಲಿಲ್ಲ, ಜಗತ್ಸಿಂಗನು ಸೆರೆಯಾಳಿನ ಉಡಿಗೆ-ತೊಡಿಗೆಗಳನ್ನು ಧರಿಸಿದನು. ಆತನ ಕೈಕಾಲುಗಳಿಗೆ ಬೇಡಿಗಳನ್ನು ಹಾಕಿದರು. ದರ್ಬಾರದ ಜನರ ಕಣ್ಣುಗಳಲ್ಲಿ ಅಶ್ರುಗಳುದುರಿದವು! ಯಾವತ್ತು ಸೇನಾನಾಯಕರು ಮೋರೆ ತಗ್ಗಿಸಿದರು. ಕಾವಲುಗಾರರು ಜಗತ್ಸಿಂಗನನ್ನು ಕಾರಾಗೃಹಕ್ಕೆ ಕರಕೊಂಡು ನಡೆದರು. ಬಳಿಕ ಮಾನಸಿಂಹನು ಸಿಂಹಾಸನದಿಂದ ಏಳಲು, ಸಭೆಯ ವಿಸರ್ಜನವಾಯಿತು.

## ಉಸ್ಮಾನಖಾನನು

ಹೀಗೆ ತನ್ನ ಮಗನಾದ ಜಗತ್ಸಿಂಗನಿಗೆ ಮರಣಪರ್ಯಂತ ಕಾರಾಗೃಹದ ಶಿಕ್ಷೆಯನ್ನು ವಿಧಿಸಿ, ರಾಜಾ ಮಾನಸಿಂಹನು ತನ್ನ ನ್ಯಾಯನಿಷ್ಠುರತೆಯನ್ನು ವ್ಯಕ್ತಮಾಡುತ್ತಿರಲು, ಅತ್ತ ಪಠಾಣರು ತಾವು ಮಾನಸಿಂಹನೊಡನೆ ಮಾಡಿಕೊಂಡಿದ್ದ ಒಡಂಬಡಿಕೆಯು ಅಪಮಾನಕರವಾದದ್ದೆಂದು ತಿಳಿದು, ಅದನ್ನು ಮುರಿಯುವದಕ್ಕೆ ಯೋಚಿಸುತ್ತಲಿದ್ದರು. ಈ ಕಾಲದಲ್ಲಿ ಪಠಾಣರು ಓಡಿಸಾ ಪ್ರಾಂತ ದೊಳಗಿನ ಸ್ವರ್ಣಗಡವನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡಿದ್ದರು. ಕಾತಲೂ ಖಾನನ ಹಿರಿಯ ಮಗನಾದ ಸುಲೇಮಾನಖಾನನೂ, ಚಿಕ್ಕ ಮಗನಾದ ಉಸ್ಮಾನಖಾನನೂ, ಸಾಕು ಮಗಳಾದ ಆಯೇಷೆಯೂ ಆ ರಾಜಧಾನಿಯಲ್ಲಿ

ವಾಸಿಸುತ್ತಿದ್ದರು. ಒಡಂಬಡಿಕೆಯಾಗಿ ಯುದ್ಧವು ನಿಂತು ಹೋದದ್ದರಿಂದ ರಾಜಧಾನಿಯೊಳಗಿನ ಜನರು ಸಮಾಧಾನದಿಂದ ಕಾಲಹರಣ ಮಾಡುತ್ತಿದ್ದರು. ಕಾತಲೂಖಾನನ ಇಬ್ಬರು ತರುಣ ರಾಜಕುಮಾರರಲ್ಲಿ ರಾಜ್ಯದ ವಿಷಯವಾಗಿ ಕಲಹವು ಉತ್ಪನ್ನವಾಗಬಾರದೆಂದು, ಮಾನಸಿಂಹನು ಖ್ವಾಜಾ ಇಸಾಖಾನನೆಂಬ ಚತುರನಾದ ವೃದ್ಧನನ್ನು ಮುಖ್ಯ ವಜೀರನನ್ನಾಗಿ ನಿಯಮಿಸಿ, ಯಾವತ್ತು ರಾಜ್ಯಕಾರಭಾರವನ್ನು ಆತನಿಗೆ ಒಪ್ಪಿಸಿದ್ದನು. ಖ್ವಾಜಾ ಇಸಾಖಾನನ ದಕ್ಷತೆಯ ಕಾರಬಾರದಿಂದ ಎಲ್ಲಿಯೂ ಅಸಂತೋಷವು ತೋರಿಬರದೆ, ರಾಜ್ಯದಲ್ಲಿ ಸುಖ-ಶಾಂತಿಗಳು ನೆಲೆಗೊಳ್ಳಹತ್ತಿದ್ದವು; ಆದರೆ ಕಾತಲೂಖಾನನ ಇಬ್ಬರು ಮಕ್ಕಳ ಸ್ವಭಾವವು ಪರಸ್ಪರರ ಅತ್ಯಂತ ವಿರುದ್ಧವಾಗಿದ್ದದ್ದರಿಂದ, ಈ ಸುಖ-ಶಾಂತಿಗಳು ಸ್ಥಿರವಾದಾವೆಂಬ ಲಕ್ಷಣವು ತೋರುತ್ತಿದ್ದಿಲ್ಲ. ಹಿರಿಯನಾದ ಸುಲೇಮಾನಖಾನನು ಅತ್ಯಂತ ವಿಷಯಾಸಕ್ತನಾಗಿದ್ದನು. ತರತರದ ಮದ್ಯಗಳನ್ನು ಕುಡಿಯುವದರಲ್ಲಿಯೂ, ವೇಶ್ಯೆಯರ ಸಹವಾಸದಲ್ಲಿಯೂ ಅವನ ಕಾಲಹರಣವಾಗುತ್ತಿತ್ತು. ಹೀಗೆ ವಿಷಯಲೋಲುಪತೆಯಲ್ಲಿ ಆಯುಷ್ಯವನ್ನು ಕಳೆಯುವದೇ ತನ್ನ ಆಯುಷ್ಯದ ಸಾರವೆಂತಲೂ, ಇದೇ ಸುಖದ ಪರಮಾವಧಿಯೆಂತಲೂ ಆತನು ತಿಳಿದಿದ್ದನು. ತನ್ನ ಸುಖಸಾಧನದ ಪದಾರ್ಥಗಳನ್ನೆಲ್ಲ ಆತನು ಪ್ರಯತ್ನಪೂರ್ವಕವಾಗಿ ಸಂಗ್ರಹಿಸಿಕೊಂಡು, ಅವುಗಳ ಉಪಭೋಗದಲ್ಲಿ ರಾಜ್ಯಕಾರಭಾರದ ಕಡೆಗೆ ಹಣಿಕಿ ಸಹ ನೋಡದಾದನು; ಆದರೆ ಅಣ್ಣನ ಈ ಸ್ಥಿತಿಯು ಉಸ್ಮಾನಖಾನನಿಗೆ ಸೇರುತ್ತಿದ್ದಿಲ್ಲ. ಹೀಗೆ ವಿಷಯಾಸಕ್ತತೆಯಿಂದ ಕಾಲಕಳೆಯುವದು ತೀರ ಅಯೋಗ್ಯವೆಂದು ಆತನು ತಿಳಿಯುತ್ತಿದ್ದನು. ಆತನ ಈ ತಿಳುವಳಿಕೆಗೆ ಒಪ್ಪುವಂತೆ ಆತನ ನಡತೆಯು ಅತ್ಯಂತ ತೇಜಸ್ವಿಯಾಗಿತ್ತು. ಪಠಾಣ ಕುಲದಲ್ಲಿ ಹುಟ್ಟಿ ಸಮರ ಪಾಂಡಿತ್ಯವನ್ನು ತೋರಿಸದೆ, ತರುಣ ಸ್ತ್ರೀಯರ ಮುತ್ತಿಗೆಯಿಂದ ತೇಜೋಹೀನಾಗುವದು ಅತ್ಯಂತ ನೀಚತನವೆಂದು ಆತನು ತಿಳಿಯುತ್ತಿದ್ದನು!

ಈ ತಿಳುವಳಿಕೆಯ ಮೂಲಕ ಉಸ್ಮಾನನು ಬಹುಕಷ್ಟದಿಂದ ಕಾಲಹರಣ ಮಾಡುತ್ತಿದ್ದನು. ಮೊಗಲರು ಚಕ್ರವರ್ತಿಗಳಾಗಿ ದಿಲ್ಲಿಯಲ್ಲಿ ಆಳುವದನ್ನು ನೋಡಿ ಆತನ ಅಂತಃಕರುಣವು ವ್ಯಥಿತವಾಗುತ್ತಿತ್ತು. ಮೊಗಲರಿಗಿಂತ ಮೊದಲು ಪಠಾಣರೇ ಹಿಂದೂ ಜನರನ್ನು ಗೆದ್ದು, ದಿಲ್ಲಿಯ ಬಾದಶಾಹಿಯ ಪದವಿಯನ್ನು ಸಂಪಾದಿಸಿ ನೂರಾರು ವರ್ಷ ಆಳಿದರೆಂಬ ಮಾತನ್ನು ಆತನು ಮರೆತಿದ್ದಿಲ್ಲ. ಮೊಗಲ ಬಾದಶಹರ ಮೂಲ ಪುರುಷನಾದ ಬಾಬರಶಹನು ಪಠಾಣರನ್ನು ಗೆದ್ದು ಬಾದಶಾಹಿಯ ಪದವಿಯನ್ನು ತಾನು ಕಸಿದುಕೊಂಡಿದ್ದರೂ, ಮೊಗಲರ ಈ ಕೃತಿಯು ಉಸ್ಮಾನನ ಅಭಿಮಾನದ ಸ್ವಭಾವದ ದೃಷ್ಟಿಯಿಂದ ನ್ಯಾಯವಾಗಿ ತೋರುತ್ತಿದ್ದಿಲ್ಲ. ಕಾಲ ಮಹಿಮೆಯಿಂದ ಪಠಾಣರ ವರ್ಚಸ್ಸು ದುರ್ದೈವದಿಂದ ಕಡಿಮೆಯಾದರೂ, ಹಿಂದುಸ್ಥಾನದ ಬಾದಶಾಹಿಯ ಪದವಿಯ ಉಪಭೋಗದ ಹಕ್ಕು ಅವರಿಗೇ ಇರತಕ್ಕದ್ದೆಂದು ಉಸ್ಮಾನನು ತಿಳಿಯುತ್ತಿದ್ದನು. ಪ್ರಯತ್ನ ಮಾಡಿದರೆ, ಪುನಃ ಪಠಾಣರ ಭಾಗ್ಯೋದಯವಾಗಿ, ಅವರು- ಮತ್ತೆ ಬಾದಶಾಹಿಯ ಪದವಿಯನ್ನು ಯಾಕೆ ಪಡೆಯಲಿಕ್ಕಿಲ್ಲೆಂದು ಆತನು ತನ್ನೊಳಗೆ ಕೇಳಿಕೊಳ್ಳುತ್ತಿದ್ದನು. ಈಗಿನ ಹೀನಾವಸ್ಥೆಯಲ್ಲಿ ಕೊಳೆಯುತ್ತ

ಬಿದ್ದುಕೊಳ್ಳುವದು ಹೇಡಿತನದ ಲಕ್ಷಣವೆಂದು ಉಸ್ಮಾನನು ಗಟ್ಟಿಮುಟ್ಟಿಯಾಗಿ ತಿಳಕೊಂಡಿದ್ದನು; ಆದ್ದರಿಂದ, ಮಾನಸಿಂಹನೊಡನೆ ಆದ ಒಡಂಬಡಿಕೆಯಿಂದ ಆತನು ತೀರ ಅಸಂತುಷ್ಟನಾಗಿದ್ದನು. ಮಾನಸಿಂಹನ ಒಡಂಬಡಿಕೆಯನ್ನು ಮುರಿಯುವದು ಅಶಕ್ಯವಲ್ಲೆಂದು ಆತನು ತಿಳಿಯುತ್ತಿದ್ದನು. ತನ್ನ ತಂದೆಯಾದ ಕಾತಲೂಖಾನನ ಆಕಸ್ಮಿಕ ಮರಣದಿಂದ ನಾಲ್ಕೂಕಡೆ ಗುಂಟಾದ ಗೊಂದಲ, ಮಾನಸಿಂಹನ ಪ್ರಚಂಡವಾದ ಯುದ್ಧ ಸೌರಣೆ ಮೊದಲಾದವುಗಳನ್ನು ವಿಚಾರಿಸಿ, ನಿರ್ವಾಹವಿಲ್ಲದೆ ಆ ತರುಣ ಉಸ್ಮಾನನು ಮಾನಸಿಂಹನೊಡನೆ ಒಡಂಬಡಿಕೆ ಮಾಡಿಕೊಂಡಿದ್ದನು. ಆದ್ದರಿಂದ ಈ ಕಾರಣಗಳು ನಷ್ಟವಾದಕೂಡಲೆ ಒಡಂಬಡಿಕೆಯನ್ನು ಮುರಿಯಬೇಕೆಂದು ಆತನು ಹವಣಿಸುತ್ತಿದ್ದನು. ಈ ಹವಣಿಕೆಯ ಮೂಲಕ ಆತನಿಗೆ ಎಳ್ಳಷ್ಟು ಸಮಾಧಾನವಿದ್ದಿಲ್ಲ. ಆತನು ಯಾವಾಗಲೂ ಉದಾಸೀನನಾಗಿರುತ್ತಿದ್ದನು.

ಉಸ್ಮಾನನ ಈ ಔದಾಸೀನ್ಯಕ್ಕೆ ''ಆಯೇಷೆಯೂ'' ಒಂದು ಕಾರಣವಾಗಿದ್ದಳು. ಆ ಲಾವಣ್ಯ ಪ್ರತಿಮೆಯು ಆತನ ಜೀವನ ಸರ್ವಸ್ವವನ್ನು ಹರಣ ಮಾಡಿದ್ದಳು. ಆ ಸುಂದರಿಯ ತದೇಕ ಧ್ಯಾನದಲ್ಲಿ ಆ ತರುಣನು ಮಗ್ನನಾಗಿರುತ್ತಿದ್ದನು; ಆದರೆ ಆಯೇಷೆಯು ಮಾತ್ರ ಉಸ್ಮಾನನನ್ನು ಪತಿಭಾವನೆಯಿಂದ ಪ್ರೀತಿಸದೆ, ಬಂಧು ಭಾವನೆಯಿಂದ ಪ್ರೀತಿಸುತ್ತಿದ್ದಳು. ಆ ಲೋಕೋತ್ತರ ಸುಂದರಿಯು ತನ್ನ ಹೃದಯವನ್ನು ಸಂಪೂರ್ಣವಾಗಿ ಜಗತ್ಸಿಂಗನಿಗೆ ಕೊಟ್ಟುಬಿಟ್ಟದ್ದನ್ನು ವಾಚಕರು ಬಲ್ಲರು. ಜಗತ್ಸಿಂಗನು ಆಯೇಷೆಯನ್ನು ಪತ್ನೀ ಭಾವದಿಂದ ಪ್ರೀತಿಸದಿದ್ದರೂ, ಜಗತ್ಸಿಂಗನಲ್ಲಿದ್ದ ಆಯೇಷೆಯ ಪತಿ ಭಾವನೆಯು ಎಂದೂ ನಷ್ಟವಾಗದಷ್ಟು ದೃಢವಾಗಿ ಇತ್ತು. ಇಂಥ ಅಲೌಕಿಕ ಸ್ತ್ರೀಯಾದ ಆಯೇಷೆಯನ್ನು ಕಾತಲೂಖಾನನ ಮಗಳೆಂದು ಹಿಂದೆಯೊಮ್ಮೆ ಹೇಳಿದ್ದು ವಾಚಕರ ಸ್ಮರಣದಲ್ಲಿರಬಹುದು; ಆದರೆ ಆಯೇಷೆಯು ಕಾತಲೂಖಾನನ ಹೊಟ್ಟೆಯ ಮಗಳಲ್ಲ. ಆಕೆಯು ಪಠಾಣ ಕುಲದಲ್ಲಿ ಸಹ ಹುಟ್ಟಿದವಳಲ್ಲ. ಕಾತಲೂಖಾನನ ಕಾಶ್ಮೀರ ದೇಶದ ಬೇಗಮಳು, ತನ್ನ ತಮ್ಮನ ಮಗಳಾದ ಆಯೇಷೆಯನ್ನು ಚಿಕ್ಕಂದಿನಿಂದ ಸಂರಕ್ಷಿಸಿ, ಆಕೆಯನ್ನು ಮಗಳೆಂದು ತಿಳಿದುಕೊಂಡಿದ್ದಳು; ಆದ್ದರಿಂದ ಆಯೇಷೆಯ ಗುಣಗಳಿಗೆ ಲುಬ್ಧನಾಗಿದ್ದ ಕಾತಲೂಖಾನನೂ ಆಕೆಯನ್ನು ತನ್ನ ಮಗಳೆಂದು ಭಾವಿಸಿದ್ದನು. ಕಾಶ್ಮೀರಿ ಬೇಗಮಳು ಮೊಗಲ ಕುಲದಲ್ಲಿ ಹುಟ್ಟಿದವಳಾಗಿದ್ದರೂ, ಪಠಾಣ ಕಾತಲೂಖಾನನಿಗೆ ಮರುಳಾಗಿ ಆತನ ಬೇಗಮಳಾಗಿದ್ದಳು. ಈ ಬೇಗಮಳ ಹೊಟ್ಟೆಯಲ್ಲಿ ಮಕ್ಕಳಿಲ್ಲದ್ದರಿಂದ ಆಯೇಷೆಯನ್ನೇ ಆಕೆಯು ಮಗಳೆಂದು ತಿಳಿದು ಕೊಂಡಿದ್ದಳು. ಎಲ್ಲ ಜನರು ಆಯೇಷೆಯನ್ನು ನವಾಬನ ಮಗಳೆಂತಲೇ ತಿಳಿಯುತ್ತಿದ್ದರು. ಆಯೇಷೆಯೂ, ಉಸ್ಮಾನನೂ ಸ್ವಲ್ಪ ಹೆಚ್ಚುಕಡಿಮೆ ಓರಿಗೆಯವರಾಗಿದ್ದರು. ಚಿಕ್ಕಂದಿನಿಂದ ಅವರು ನವಾಬನ ಮಹಾಲಿನಲ್ಲಿ ಕೂಡಿ ಆಡಿದ್ದರು. ಆಯೇಷೆಯು ರೂಪದಲ್ಲಿ ಅತಿ ಸುಂದರಿಯಾ, ಶಿಕ್ಷಣ–ಸಾಹಸಗಳಲ್ಲಿ ಅತಿ ವಿಖ್ಯಾತಳೂ, ಬುದ್ಧಿ–ಸಾಮರ್ಥ್ಯ–ಸದ್ಗುಣಗಳಲ್ಲಿ ಅಸಾಧಾರಣಳೂ ಇದ್ದಳು. ಆಕೆಯು ಪ್ರಬುದ್ಧಳಾಗುತ್ತ ಹೋದಂತೆ, ಆಕೆಯ ಮೇಲಿನ ಉಸ್ಮಾನನ ಚಿಕ್ಕಂದಿನ ಪ್ರೇಮವು ರೂಪಾಂತರಿಸುತ್ತ ಹೋಗಿ, ಕಡೆಗೆ ಆತನು ಆಯೇಷೆಯ ದಾಸನಾದನು; ಆದರೆ ಉಸ್ಮಾನನ

ಮೇಲಿನ ಆಯೇಷೆಯ ಚಿಕ್ಕಂದಿನ ಪ್ರೇಮವು ಮಾತ್ರ ಎಷ್ಟುಮಾತ್ರವೂ ರೂಪಾಂತರವನ್ನು ಹೊಂದಲಿಲ್ಲ!

ಸಾಯುವ ಮೊದಲು ಕಾತಲೂಖಾನನು ಆಯೇಷೆಗೆ ವಿಪುಲವಾದ ಸಂಪತ್ತನ್ನು ಕೊಟ್ಟಿದ್ದನು. ಅಷ್ಟು ಸಂಪತ್ತನ್ನು ಆತನು ತನ್ನ ಹೊಟ್ಟೆಯ ಮಕ್ಕಳಿಗೆ ಸಹ ಕೊಟ್ಟಿದ್ದಿಲ್ಲ. ಅದಲ್ಲದೆ ಪಂಜಾಬ ಪ್ರಾಂತದೊಳಗಿನ ತನ್ನ ತಂದೆಯ ಜಹಗೀರಿನ ದೊಡ್ಡ ಉತ್ಪನ್ನವು ಆಯೇಷೆಯ ಕೈಸೇರಿತ್ತು. ಉಸ್ಮಾನನು ಆಯೇಷೆಯನ್ನು ಮನಮುಟ್ಟಿ ಪ್ರೀತಿಸುತ್ತಿರುವನೆಂಬ ಮಾತು ಕಾತಲೂಖಾನನಿಗೂ, ಕಾಶ್ಮೀರಿ ಬೇಗಮಳಿಗೂ ಪೂರಾ ಗೊತ್ತಿತ್ತು. ಆಯೇಷೆಯ ಮಾತು–ಕಥೆಗಳ ಮೇಲಿಂದಲೂ, ನಡತೆ–ನಡಾವಳಿಗಳ ಮೇಲಿಂದಲೂ ಆಕೆಯ ಪ್ರೇಮವಾದರೂ ಉಸ್ಮಾನಖಾನನ ಮೇಲೆಯೇ ಇರುತ್ತದೆಂದು ಜನರು ತಿಳಿದಿದ್ದರು. ಆಯೇಷೆಯು ಯಾವಾಗಲೂ ಉಸ್ಮಾನಖಾನನ ಕಲ್ಯಾಣವನ್ನು ಚಿಂತಿಸುತ್ತಿದ್ದಳು. ಆಕೆಯು ಮಹತ್ವದ ಸೂಕ್ಷ್ಮ ಕೆಲಸದಲ್ಲಿ ಉಸ್ಮಾನನಿಗೆ ಆಲೋಚನೆ ಹೇಳುತ್ತಿದ್ದು, ಆತನ ಸುಖ–ದುಃಖಗಳಿಗೂ ಆಕೆಯು ಪಾಲುಗಾರಳಾಗುತ್ತಿದ್ದಳು. ಇವುಗಳ ಮೇಲಿಂದ ಜನರು ಉಸ್ಮಾನನನ್ನೇ ಆಯೇಷೆಯು ಲಗ್ನ ಮಾಡಿಕೊಳ್ಳುವಳೆಂದು ತರ್ಕಿಸಿದ್ದರು; ಆದರೆ ಪರಿಸ್ಥಿತಿಯು ಇದಕ್ಕೆ ತೀರ ವಿರುದ್ಧವಾಗಿತ್ತು. ಹಿಂದೆ ಹೇಳಿದಂತೆ ಆಯೇಷೆಯು ಉಸ್ಮಾನ ನನ್ನು ತನ್ನ ಒಡಹುಟ್ಟಿದ ಅಣ್ಣನೆಂದು ತಿಳಿದು ಪ್ರೀತಿಸುತ್ತಿದ್ದಳು; ಆದರೆ ಇದು ಯಾರಿಗೂ ಗೊತ್ತಾಗಲಿಲ್ಲ. ಪರಕೀಯರಾದ ಸ್ತ್ರೀ–ಪುರುಷರು ಒಬ್ಬರನ್ನೊಬ್ಬರು ವಿಶೇಷವಾಗಿ ಪ್ರೀತಿಸ ಹತ್ತಲು, ವಿಪರೀತ ಭಾವನೆಯಾಗುವದೇ ಲೌಕಿಕದಲ್ಲಿ ಹೆಚ್ಚು. ಆಯೇಷೆಗೆ ಈಗ ವಿಪುಲವಾದ ಸಂಪತ್ತು ಪ್ರಾಪ್ತವಾಗಿರುವದರಿಂದ, ಈಗ ಆಕೆಗೂ, ಉಸ್ಮಾನನಿಗೂ ಲಗ್ನವಾದರೆ ಅವರ ಸುಖಕ್ಕೆ ಜೋಡಿಲ್ಲೆಂದು ನವಾಬ ಕಾತಲೂಖಾನನೂ, ಕಾಶ್ಮೀರದ ಬೇಗಮಳೂ ಸಹ ತಿಳಿಯುತ್ತಿದ್ದರು; ಆದರೆ ಕಾತಲೂಖಾನನಿಗೆ ತನ್ನ ಈ ತಿಳುವಳಿಕೆಯು ಕೇವಲ ತಪ್ಪಾದದ್ದೆಂಬದರ ಅನುಭವ ವಾಗುವದರೊಳಗೇ ಆತನು ಪರಲೋಕಕ್ಕೆ ತೆರಳಿದನು. ತನ್ನ ಮೇಲೆ ಆಯೇಷೆಯ ಪ್ರೇಮವು ಎಷ್ಟು ದೃಢವಾಗಿರುತ್ತದೆಂಬದನ್ನು ಉಸ್ಮಾನನು ತಿಳಿದಿದ್ದರೂ, ಆಯೇಷೆಯು ತನ್ನ ಪ್ರೇಮದ ಸ್ವರೂಪವನ್ನು ಉಸ್ಮಾನನ ಮುಂದೆ ಸಂಕೋಚವಿಲ್ಲದೆ ಬಿಚ್ಚಿ ಹೇಳಿದ್ದರಿಂದ, ಆತನಿಗೆ ಬಹಳ ವ್ಯಸನವಾಗಿತ್ತು.

ಹೀಗೆ ವ್ಯಸನಪಡುತ್ತ ಉಸ್ಮಾನನು ಒಂದು ದಿನ ಸ್ವರ್ಣಗಡದೊಳಗಿನ ಒಂದು ಭವ್ಯವಾದ ಮಂದಿರದಲ್ಲಿ ಒಬ್ಬನೇ ಕುಳಿತಿದ್ದನು. ದಾರುಣವಾದ ಕ್ಲೇಶ ಭಾರದಿಂದ ಆತನಿಗೆ ತನ್ನ ಜೀವವು ಬೇಡಾಗಿತ್ತು. ಆಗ ಹೊರಗೆ ಒಂಬತ್ತು ತಾಸು ಆಗಿರಬಹುದು. ಅಷ್ಟರಲ್ಲಿ ನಗಾರಿಯು ಬಾರಿಸ ಹತ್ತಿತು. ಉಸ್ಮಾನನು ತಟ್ಟನೆ ಎದ್ದು ಮಂದಿರದ ಬಾಗಿಲಿಗೆ ಬರುತ್ತಿರಲು, ಉದ್ದ ಗಡ್ಡದ ವೃದ್ಧ ವಜೀರನಾದ ಖ್ವಾಜಾ ಇಸಾಖಾನನು ಆತನಿಗೆ ಎದುರಾದನು. ಉಸ್ಮಾನನು ವಜೀರನ ಆದರಾ ತಿಥ್ಯವನ್ನು ಉಚಿತವಾಗಿ ಮಾಡಿದನು. ಖ್ವಾಜಾ ಇಸಾಖಾನನೂ ಉಸ್ಮಾನನಿಗೆ ಉಚಿತವಾದ ಮನ್ನಣೆಯನ್ನು ಮಾಡಿದನು. ಉಸ್ಮಾನನು ವಜೀರನ ಕೈಹಿಡಿದು ಒಳಗೆ

ಕರಕೊಂಡುಹೋಗಿ ಆತನನ್ನು ಉಚಿತವಾದ ಆಸನದಲ್ಲಿ ಕೂಡ್ರಿಸಿ ತಾನು ಬಳಿಯಲ್ಲಿ ಕುಳಿತುಕೊಂಡನು. ವಜೀರನು ಕುಳಿತಬಳಿಕ ಉಸ್ಮಾನಖಾನನು ಆತನನ್ನು ಕುರಿತು–

ಉಸ್ಮಾನ– ಏನಾದರೂ ಹೊಸ ಸುದ್ದಿಯು ಇರುವದೋ?

ಖ್ವಾಜಾ ಇಸಾಖಾನ– ಜಗತ್ಸಿಂಗನ ಕಾರಾಗೃಹವಾಸದ ಸಂಗತಿಯು ತಮಗೆ ಗೊತ್ತಿರಬಹುದು.

ಉಸ್ಮಾನ–ಹೌದು, ಅದು ಗೊತ್ತಾಗಿರುವದು; ಆದರೆ ಅದರಿಂದ ನಮ್ಮ ಲಾಭ–ಹಾನಿಗಳೇನಿರುವವು?

ಖ್ವಾಜಾ ಇಸಾಖಾನ– ಯಾಕೆ? ಅದರಿಂದ ಲಾಭ–ಹಾನಿಗಳು ಯಾಕೆ ಇರುವದಿಲ್ಲ? ಮಾನಸಿಂಹ ಮಹಾರಾಜರು ನಮ್ಮೊಡನೆ ಮಾಡಿಕೊಂಡಿದ್ದ ಒಡಂಬಡಿಕೆಯು ಅಕಬರ ಬಾದಶಹರ ಮನಸ್ಸಿಗೆ ಬಂದಿರುವದಿಲ್ಲೆಂದು ಕೇಳುತ್ತೇನೆ; ಆದರೆ ಮಾನಸಿಂಹರವರು ಮಾಡಿದ ಒಡಂಬಡಿಕೆ ಯನ್ನು ಬಾದಶಹರಿಗೆ ಮುರಿಯಲಿಕ್ಕೆ ಬರುವಹಾಗಿಲ್ಲ. ಜಗತ್ಸಿಂಗನು ನಮ್ಮ ಸೆರೆಯಲ್ಲಿರುವಾಗ ಆತನಿಗೆ ನಾವು ಯಾವಬಗೆಯ ತ್ರಾಸವನ್ನೂ ಕೊಡದೆ, ಆತನನ್ನು ಬಹುಮಾನಪೂರ್ವಕವಾಗಿ ನಡಿಸಿಕೊಂಡಿರುತ್ತೇವೆ. ಈ ಸಂಗತಿಯನ್ನು ಆ ರಾಜಕುಮಾರನು ಅಕಬರಬಾದಶಹರ ಮುಂದೆ ಹೇಳಿ ನಮ್ಮೊಡನೆ ಈಗಿದ್ದ ಒಡಂಬಡಿಕೆಯನ್ನು ದೃಢಪಡಿಸ ಬಹುದಾಗಿತ್ತು. ಈ ಪ್ರಸಂಗದಲ್ಲಿ ಜಗತ್ಸಿಂಗನು ಸೆರೆಮನೆಯ ಸೋಬತಿಯಾದದ್ದರಿಂದ, ನಮಗೆ ಒಂದುಬಗೆಯ ಹಾನಿಯಾದಂತಾ ಗಲಿಲ್ಲವೆ!

ಉಸ್ಮಾನ—ವಜೀರಸಾಹೇಬ, ಒಡಂಬಡಿಕೆಯನ್ನು ಸ್ಥಿರಪಡಿಸುವದರಲ್ಲಿ ನಮಗೇನು ಲಾಭವು ತೋರುವದಿಲ್ಲ. ನಾವು ಯುದ್ಧಮಾಡಿ ನೀರಿನ ಹಾಗೆ ದುಡ್ಡನ್ನೂ, ಅನಂತ ಪ್ರಾಣ ಹಾನಿಯನ್ನೂ ಮಾಡಿಕೊಂಡು ಗಳಿಸಿದ ಸಮಗ್ರ ಬಂಗಾಲ ಪ್ರಾಂತವನ್ನು ಈ ಕೆಟ್ಟ ಒಡಂಬಡಿ ಕೆಯ ಯೋಗದಿಂದಲೇ ಕಳಕೊಳ್ಳಬೇಕಾಯಿತು; ಜಗನ್ನಾಥ ಮಂದಿರವನ್ನೂ, ಪುರಿ ಪಟ್ಟಣವನ್ನೂ ಮೊಗಲರಿಗೆ ಒಪ್ಪಿಸಬೇಕಾಯಿತು; ಅತ್ಯಂತ ಲಜ್ಜಾಸ್ಪದವಾದ ಈ ಒಡಂಬಡಿಕೆ ಯನ್ನು ವಿಘಾತಕವಾದದ್ದೆಂದು ತಿಳಿಯಬೇಕಾಗುವದು! ಅಕಬರ ಬಾದಶಹನು ಈ ಒಡಂಬಡಿಕೆಯನ್ನು ಮುರಿದರೆ ನೆಟ್ಟಗಲ್ಲವೆ? ಇದಕ್ಕಿಂತ ಆನಂದದಾಯಕ ಪ್ರಸಂಗವು ಬೇರೆ ಯಾವದಿರುವದು?

ಖ್ವಾಜಾಇಸಾಖಾನ– (ಸ್ವಲ್ಪಹೊತ್ತು ಆಲೋಚಿಸಿ) ನಾನು ಈ ಸಂಬಂಧದಿಂದ ಹುಜೂರಿನ ಸಂಗಡ ವಾದ ಹೂಡಲು ಇಚ್ಛಿಸುವದಿಲ್ಲ. ತಾವೇ ವಿಚಾರಮಾಡಿ ನೋಡತಕ್ಕದ್ದು. ಈಗಿನ ಕಾಲವು ನಮ್ಮ ಪಠಾಣ ಜನರಿಗೆ ಸ್ವಲ್ಪ ಪ್ರತಿಕೂಲವಿದ್ದಂತೆ ಕಾಣುತ್ತದೆ.

ಉಸ್ಮಾನ—ನೀವಾಡುವ ಮಾತು ನಿಜವಾದದ್ದು. ಮಾನಸಿಂಹನಿಗೆ ಎದುರಾಗಿ ಕಾದು ವಷ್ಟು ಸಾಮರ್ಥ್ಯವು ಈಗ ನಮ್ಮಲ್ಲಿರುವದಿಲ್ಲ; ಆದರೆ ಅಂಥ ಸಾಮರ್ಥ್ಯವನ್ನು ಉಂಟು ಮಾಡಿಕೊಳ್ಳಲಿಕ್ಕೆ ನಾವು ಎಂದಾದರೂ ಪ್ರಯತ್ನ ಮಾಡಿರುವೆವೋ?

ಖ್ವಾಜಾ ಇಸಾಖಾನ—ನನ್ನ ಮೈತುಂಬ ಕೆಲಸಗಳಿರುತ್ತವೆ. ಮುಪ್ಪಿನ ಕಾಲದಲ್ಲಿ ಯುದ್ಧದಂಥ ಜವಾಬುದಾರಿಯ ಕೆಲಸವನ್ನು ಮಾಡಲಿಕ್ಕೆ ನನಗೆ ಕೂಡುವದಿಲ್ಲ, ಏನು ಮಾಡಬೇಕು?

ಉಸ್ಮಾನ—ನಿಜವು. ನಿಮ್ಮ ವಿಚಾರ ಪದ್ಧತಿಯು ನಿಮ್ಮ ವಯೋಮಾನಕ್ಕೆ ಯೋಗ್ಯವಾದದ್ದಿರುತ್ತದೆ. ಮುಪ್ಪಿನ ಕಾಲದಲ್ಲಿ ಯುದ್ಧದ ಗೊಂದಲದಲ್ಲಿ ಬೀಳದಿರುವದೇ ಯೋಗ್ಯವು. ಒಡಂಬಡಿಕೆಯು ಸ್ಥಿರವಾಗಿ ರಾಜ್ಯದಲ್ಲಿ ನಾಲ್ಕೂಕಡೆಗೆ ಶಾಂತತೆಯು ಉಂಟಾಗಬೇಕೆಂದು ನೀವು ಇಚ್ಛಿಸುವದು ಸ್ವಾಭಾವಿಕವು; ಆದರೆ ನನ್ನನ್ನು ಕ್ಷಮಿಸಬೇಕು. ನಾನು ಈ ಒಡಂಬಡಿಕೆಯನ್ನು ಅತ್ಯಂತ ನಿಂದ್ಯವೆಂದು ಭಾವಿಸುತ್ತೇನೆ. ಪ್ರಸಂಗ ಒದಗಿದ ಕೂಡಲೆ ಈ ಒಡಂಬಡಿಕೆಯನ್ನು ಒತ್ತಟ್ಟಿಗೆ ಕಟ್ಟಿ ಇಟ್ಟು, ನಾನು ಮೊಗಲರೊಡನೆ ಯುದ್ಧವು ಹೂಡುವೆನು; ಆದರೆ ಈಗಿನಿಂದಲೇ ಎಲ್ಲ ಸಿದ್ಧತೆಯನ್ನು ಮಾಡುವದು ಅವಶ್ಯವಾಗಿರುವದರಿಂದ, ನಾನು ಅದೇ ಉದ್ಯೋಗದಲ್ಲಿ ತೊಡಗುವೆನು. ಎಲ್ಲ ಸಿದ್ಧತೆಯು ಸರಿಯಾಗಿ ಆದಬಳಿಕ ತಮಗೆ ತಿಳಿಸುವೆನು.

ಖ್ವಾಜಾ ಇಸಾಖಾನ—ಈ ಕಾಲದಲ್ಲಿ ಈ ವಿಷಯವನ್ನು ಕುರಿತು ಯೋಗ್ಯ ಆಲೋಚನೆಯನ್ನು ಹೇಳಲಿಕ್ಕೆ ನಾನು ತೀರ ಅಸಮರ್ಥನು. ಮಾನಸಿಂಹ ಮಹಾರಾಜರವರು ಯಾತ್ರೆಯ ಸಲುವಾಗಿ ಪುರಿಗೆ ಬರುತ್ತಿರುವರೆಂಬ ಸುದ್ದಿಯಿರುತ್ತದೆ.

ಉಸ್ಮಾನ—ಕಾಫರರಾದ ಹಿಂದುಗಳು ಕಲ್ಲಿನ ಮೂರ್ತಿಗಳನ್ನು ದೇವರೆಂದು ಪೂಜಿಸುವರು; ಆದರೆ ಮೊಗಲರ ಬೀಗನಾದ ಮಾನಸಿಂಹನೂ ಇಂಥ ಮೂರ್ತಿ ಪೂಜೆಯ ಸಲುವಾಗಿ ಬರುತ್ತಿರುವನೆಂಬ ಮಾತು ಹ್ಯಾಗೆ ಸಂಭವವಾಗಿರುವದು?

ಖ್ವಾಜಾ ಇಸಾಖಾನ—ಮಾನಸಿಂಹರವರು ಒಳ್ಳೇ ವೈಭವದಿಂದ ಯಾತ್ರೆಗೆ ಬರುತ್ತಿರುವರೆಂಬ ಸುದ್ದಿಯಂತು ಬಂದಿದೆ.

ಉಸ್ಮಾನ– ಬರಲು, ಒಡಂಬಡಿಕೆಯಂತೆ ನಾವು ಪುರಿಯನ್ನು ಮೊಗಲರಿಗೆ ಬಿಟ್ಟು ಕೊಟ್ಟಿರುತ್ತೇವೆ. ಅಂದಬಳಿಕ ಬಂಗಾಲದ ಸುಭೇದಾರನಾದ ಮಾನಸಿಂಹನು ವೈಭವದಿಂದಾದರೂ ಬರಲಿ, ಬಿಕ್ಕೆ ಬೇಡುತ್ತಾದರೂ ಬರಲಿ, ಅದರ ಗೊಡವೆ ನಮಗೇನು?

ಖ್ವಾಜಾ ಇಸಾಖಾನ—ಹೀಗೆಂದರೆ ಹ್ಯಾಗಾದೀತು? ನಾವು ಮೊಗಲರ ಮಾಂಡಲೀಕತ್ವವನ್ನು ಒಪ್ಪಿಕೊಂಡಿರುವದರಿಂದ, ಮಾನಸಿಂಹರವರು ನಮ್ಮ ಓಡಿಸಾ ಪ್ರಾಂತದೊಳಗಿಂದ ಹಾದು ಹೋಗುವಾಗ, ನಮ್ಮ ಪ್ರಾಂತದ ಹದ್ದು ಮುಗಿಯುವವರೆಗೆ ಅವರ ಆದರಾತಿಥ್ಯವನ್ನು ನಾವು ಸರಿಯಾಗಿ ಮಾಡಿ, ನಾವು ಅವರ ಸಂಗಡ ಹೋಗಬೇಕಾಗುವದು. ಮಾನಸಿಂಹ ಮಹಾರಾಜರವರು ಅಕಬರ ಬಾದಶಹರ ಪ್ರತಿನಿಧಿಗಳಾದದ್ದರಿಂದ, ಮಾನಸಿಂಹರವರಿಗಾದ ಮಾನಾಪಮಾನಗಳು ಅಕಬರ ಬಾದಶಹರಿಗೆ ಸಂಬಂಧಿಸುವವು.

ಈ ಮಾತುಗಳನ್ನು ಕೇಳಿ ಉಸ್ಮಾನಖಾನನು ಕುಳಿತವನು ಎದ್ದುನಿಂತು, ಇತ್ತಿಂದತ್ತ ಅತ್ತಿಂದಿತ್ತ ಓಡಾಡಹತ್ತಿದನು. ಕೆಲಹೊತ್ತಿನ ಮೇಲೆ ಆತನು ಸಂತಾಪದಿಂದ ವಜೀರನನ್ನು

ಕುರಿತು– ಅಷ್ಟು ಅಪಮಾನವು ನನ್ನಿಂದ ಎಷ್ಟು ಮಾತ್ರವೂ ಸಹನವಾಗಲಿಕ್ಕಿಲ್ಲ. ಮಾನಸಿಂಹನು ಶೂರನಿರಬಹುದು, ಬಹಾದ್ದೂರನಿರಬಹುದು, ಆತನ ಮೇಲೆ ಅಕಬರ ಬಾದಶಹನ ಸಂಪೂರ್ಣ ಭಾರವೂ ಇರಬಹುದು; ಇದಲ್ಲದೆ ಆತನು ಅಕಬರ ಬಾದಶಹನ ಪ್ರತ್ಯಕ್ಷ ಬೀಗನೂ ಇರಬಹುದು; ಆದರೆ ಇಷ್ಟು ಇದ್ದರೂ ನಾವು ಆತನನ್ನು ಅಕಬರ ಬಾದಶಹನ ಗುಲಾಮನೆಂತಲೇ ತಿಳಿಯುವೆವು! ಸದ್ಯಕ್ಕೆ ನಾವು ಬಲಹೀನರಾಗಿದ್ದರೂ ಸ್ವತಂತ್ರರಾಗಿರುತ್ತೇವೆ. ತನ್ನ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವದಕ್ಕಾಗಿ, ತನ್ನ ಪ್ರತ್ಯಕ್ಷ ತಂಗಿಯನ್ನು ಅಕಬರ ಬಾದಶಹನ ಮನೆಹೋಗಿಸಿ, ತನ್ನ ಧರ್ಮದ ಹಾಗು ಕುಲದ ಗೌರವವನ್ನು ಕಳೆದುಕೊಂಡ ಆ ಮಾನಸಿಂಹನ ಮುಂದೆ ಉಸ್ಮಾನಖಾನನು ತನ್ನ ಮಸ್ತಕವನ್ನು ಎಂದಿಗೂ ಬಾಗಿಸಲಾರನು. ಈಗ ನಮಗೆ ವಿಪರೀತಕಾಲವು ಒದಗಿರುವದು; ಒದಗಲೊಲ್ಲದೇಕೆ? ನಾವು ಇಂದಿನವರೆಗೆ ಯುದ್ಧ ಮಾಡುತ್ತಲೇ ಬಂದಿದ್ದೇವೆ; ಆದ್ದರಿಂದಲೇ ನಾವು ಸ್ವತಂತ್ರರಿರುತ್ತೇವೆ. ಜಯಾಪಜಯಗಳು ಯಾರ ಸ್ವಾಧೀನವೂ ಅಲ್ಲ; ಆದ್ದರಿಂದ ಓಡಿಸಾದ ಸ್ವತಂತ್ರ ರಾಜರು ಮಾನಸಿಂಹನಂಥ ಅಕಬರ ಬಾದಶಹನ ಗುಲಾಮನ ಜೋಡುಗಳನ್ನು ತಲೆಯಮೇಲೆ ಇಟ್ಟುಕೊಂಡು ಕುಣಿಯಲಿಕ್ಕೆ ಎಂದೂ ಇಚ್ಛಿಸುವದಿಲ್ಲ.

ಖ್ವಾಜಾ ಇಸಾಖಾನ—ಮಾನಸಿಂಹರವರ ಕಡೆಯಿಂದ ಒಂದು ಪತ್ರವೂ ಬಂದಿರುತ್ತದೆ.

ಈ ಮೇರೆಗೆ ನುಡಿದ ಜ್ವಾಜಾ ಇಸಾಖಾನನು ಒಂದು ಪತ್ರವನ್ನು ಉಸ್ಮಾನಖಾನನ ಕೈಯಲ್ಲಿ ಕೊಟ್ಟನು. ಅದನ್ನು ಮಾನಸಿಂಹನು ಖ್ವಾಜಾ ಇಸಾಖಾನನ ಹೆಸರಿನಿಂದ ಬರೆದಿದ್ದನು. ಆ ಪತ್ರದ ಮುಖ್ಯ ಆಶಯವು–ಮಾನಸಿಂಹ ಮಹಾರಾಜರು ತೀರ್ಥಯಾತ್ರೆಯನ್ನು ಮಾಡುತ್ತ ಪುರುಷೋತ್ತಮ ಕ್ಷೇತ್ರಕ್ಕೆ ಹೋಗುವರು. ಅವರ ಹಾದಿಯು ಓಡಿಸಾ ಪ್ರಾಂತದ ಸೀಮೆಯಲ್ಲಿಯೇ ಇರುವದು. ಮಹಾರಾಜರು ಓಡಿಸಾ ಪ್ರಾಂತದೊಳಗಿಂದ ಹಾದು ಹೋಗುವಾಗ, ಓಡಿಸಾದ ಇಬ್ಬರು ನವಾಬರೂ ಅವರನ್ನು ಕಾಣುವರೆಂದು ಆಶಿಸಲಾಗುವದು ಎಂಬದಾಗಿತ್ತು. ಉಸ್ಮಾನನು ಪತ್ರವನ್ನು ಓದಿ ವಜೀರನ ಕೈಯಲ್ಲಿ ಕೊಟ್ಟು,

ಉಸ್ಮಾನ—ಇಂದು ವಿಚಾರಮಾಡಿ, ಇದರ ಉತ್ತರವನ್ನು ನಾಳೆ ಕೊಡುವೆನು.

ಖ್ವಾಜಾ ಇಸಾಖಾನನ—ಆಗಬಹುದು; ನಾನು ಇನ್ನು ಹೋಗುತ್ತೇನೆ; ಆದರೆ ಹೋಗು ವಾಗ ತಮಗೆ ಸೂಚಿಸುವದೇನಂದರೆ–ಮಾನಸಿಂಹ ಮಹಾರಾಜರು ಕೇವಲ ಜಗತ್ಸಿಂಗನ ಮಾತಿ ನಿಂದಲೇ ಪಾಟಣಾದ ಒಡಂಬಡಿಕೆಯನ್ನು ಮಾಡಿಕೊಂಡಿರುತ್ತಾರೆ. ಈ ಒಡಂಬಡಿಕೆಯಿಂದಲೇ ನಾವು ಓಡಿಸಾದ ರಾಜರಾಗಿರುವೆವೆಂಬದನ್ನು ಮರೆಯಲಾಗದು. ಓಡಿಸಾದ ನವಾಬಗಿರಿಯನ್ನು ಒಪ್ಪಿಕೊಳ್ಳುವದರಕೂಡ ಮೊಗಲರ ಸ್ವಾಮಿತ್ವವನ್ನೂ ನಾವು ಒಪ್ಪಿಕೊಳ್ಳಬೇಕಾಗುವದು. ಒಡಂಬಡಿಕೆಯ ಕಾಲದಲ್ಲಿ ನಾವೇ ಕಾಣಿಕೆಯನ್ನು ತಕ್ಕೊಂಡು ಮಾನಸಿಂಹ ಮಹಾರಾಜರ ಬಳಿಗೆ ಹೋಗಿದ್ದೆವು. ಮಾನಸಿಂಹರವರು ಎಂಥ ಮನುಷ್ಯರಿದ್ದರೂ, ನಾವಾಗಿಯೇ ಅವರೊಡನೆ ಒಡಂಬಡಿಕೆ ಮಾಡಿಕೊಂಡಿರುತ್ತೇವೆಂಬದನ್ನು ಮರೆಯಲಾಗದು. ದಿಲ್ಲೀಶ್ವರನ ಹಸ್ತಕರಾಗಿ ಓಡಿಸಾ ರಾಜ್ಯಕಾರಭಾರ ಮಾಡಲು ನಾವು

ಒಪ್ಪಿಕೊಂಡಿರುತ್ತೇವೆ. ಇಷ್ಟು ಅಲ್ಪ ಕಾಲದಲ್ಲಿ ತಾವು ಈ ಸಂಗತಿಗಳನ್ನು ಮರೆಯುವದು ನೆಟ್ಟಗಲ್ಲ.

ಉಸ್ಮಾನ—ಸರಿಸರಿ, ಇದನ್ನೆಲ್ಲ ನಾನು ಎಂದೂ ಮರೆಯುವದಿಲ್ಲ. ಈ ಅವಮಾನದ, ಹಾಗು ಅಗೌರವದ ಸಂಗತಿಗಳು ನನ್ನ ಸ್ಮೃತಿಪಟಲದೊಳಗಿಂದ ಎಂದೂ ಅಳಿಸಿ ಹೋಗಲಾರವು. ಅಲ್ಲಾನ ಕೃಪೆಯಿಂದ ಈ ಕಲಂಕಗಳು ಬೇಗನೆ ತೊಳೆದು ಹೋಗಬಹುದು!

ಖ್ವಾಜಾ ಇಸಾಖಾನ—ನಮ್ಮ ಸಿದ್ಧತೆಯು ಪೂರ್ಣವಾಗುವವರೆಗೆ ನಾವು ದಿಲ್ಲೀಶ್ವರನ ಸತ್ಕಾರವನ್ನು ಮಾಡಲೇಬೇಕಾಗುವದು. ಇಲ್ಲದಿದ್ದರೆ ಬಾದಶಹನೊಡನೆ ಯುದ್ಧ ಮಾಡುವದು ಇಂದೇ ನಮ್ಮ ಪಾಲಿಗೆ ಬಂದೀತು. ನಾನು ಬೇಡಿಕೊಳ್ಳುವದಿಷ್ಟೇ, ಏನು ಮಾಡುವದನ್ನು ವಿಚಾರಪೂರ್ವಕವಾಗಿ ಮಾಡಬೇಕು. ನನ್ನ ಅವಸ್ಥೆಯಂತು ತಮಗೆ ಗೊತ್ತೇ ಇರುತ್ತದೆ. ಮುಪ್ಪು ನನ್ನನ್ನು ಪೂರ್ಣವಾಗಿ ಆವರಿಸಿದ್ದು, ನನ್ನದೊಂದು ಕಾಲು ಕಬರಸ್ಥಾನದಲ್ಲಿ ಇಟ್ಟಹಾಗಾಗಿರುತ್ತದೆ. ನಾನು ಜೀವದಿಂದಿರುವವರೆಗೆ ನೀವು ಸುಖದಿಂದಿದ್ದದ್ದನ್ನು ನೋಡಬೇಕೆಂದು ಇಚ್ಛಿಸುತ್ತೇನೆ. ನಾನು ಬದುಕಿರುವವರೆಗೆ ನೀವು ಯುದ್ಧದ ಉಸಾಬರಿಗೆ ಹೋಗಬೇಡಿರಿ. ಇದರ ಮೇಲೆ ನಿಮ್ಮ ಇಚ್ಛೆಯು! ಒಳ್ಳೇದು ಬರುತ್ತೇನೆ.

ಈ ಮೇರೆಗೆ ನುಡಿದು ಆ ವೃದ್ಧ ವಜೀರನು ಹೊರಟುಹೋದನು.

## ಕೃಷ್ಣಸರ್ಪವು

ಇತ್ತ ಉಸ್ಮಾನನು ಅಸಮಾಧಾನದಿಂದ ಹೊರಹೊರಟನು. ಆತನ ಮನಸ್ಸಿನಲ್ಲಿ—ಎಷ್ಟು ಅವಮಾನವಿದು! ಕೇವಲ ಸ್ವತಂತ್ರರಾಗಿದ್ದ ನಾವು, ಮೊಗಲರ ಮಾಂಡಲೀಕರಾಗಿ ಹೋದೆವಲ್ಲ! ನಮ್ಮ ಹಿರಿಯರಾದ ನವಾಬ ಕಾತಲೂಖಾನರವರು ಇದೇ ಮಾನಸಿಂಹನನ್ನು ಗೆದ್ದು, ಆತನ ಮಗನನ್ನು ಸೆರೆಹಿಡಿದು ಬಂಗಾಲದೊಳಗಿನ ವಿಷ್ಣುಪುರದವರೆಗೆ ತಮ್ಮ ಅಧಿಕಾರವನ್ನು ಸ್ಥಾಪಿಸಿದ್ದಿಲ್ಲವೆ? ಜಗತ್ಸಿಂಗನನ್ನು ನಾವಾಗಿ ಬಂಧಮುಕ್ತ ಮಾಡದಿದ್ದರೆ, ಮಾನಸಿಂಹನು ಎಷ್ಟು ಕಷ್ಟಪಡಬೇಕಾಗುತ್ತಿತ್ತು! ಆದರೆ ಏನು ಮತಾಡಬೇಕು; ಹಿರಿಯರು ಅಕಸ್ಮಾತ್ತಾಗಿ ಮರಣ ಹೊಂದಿದ್ದರಿಂದ, ಎಲ್ಲ ಕೆಲಸವು ಕೆಟ್ಟುಹೋಯಿತು! ಇಲ್ಲದಿದ್ದರೆ ನಮ್ಮ ಉಪಟಲಕ್ಕೆ ಮಾನಸಿಂಹನು ಕಾಲುದೆಗೆಯಬೇಕಾಗುತ್ತಿತ್ತು, ಎಲ್ಲ ಬಂಗಾಲ ಪ್ರಾಂತವು ನಮ್ಮ ಅಧೀನವಾಗುತ್ತಿತ್ತು! ಹಿರಿಯರ ಮರಣದಿಂದ ನಮಗೆ ಅಸಮಾಧಾನವಾಗಿರಲು, ಇಂಥ ಪ್ರಸಂಗದಲ್ಲಿ ಪ್ರಬಲ ಶತ್ರುವಿನೊಡನೆ ಕಾದುವದು ಯೋಗ್ಯವಲ್ಲೆಂದು ತಿಳಿದು ನಾವು ಒಡಂಬಡಿಕೆ ಮಾಡಿಕೊಂಡಿರುತ್ತೇವಲ್ಲದೆ, ಯುದ್ಧ ಮಾಡಲಿಕ್ಕೆ ಹೆದರಿ ಒಡಂಬಡಿಕೆಯನ್ನು ಮಾಡಿಕೊಂಡಿರುವದಿಲ್ಲ. ಯುದ್ಧಕ್ಕೆ ಹೆದರುವದು ಪಠಾಣರ ಶೀಲವೇ ಅಲ್ಲ, ಯುದ್ಧಕ್ಕೆ ಪಠಾಣರು ಎಂದೂ ವಿಮುಖರಾಗಲಾರರು; ಮೊಗಲರ ಚಂಡುಗಳನ್ನು ಕೊಯ್ಯಲಿಕ್ಕೆ ಅವರು ಎಂದೂ ಹಿಂದುಮುಂದು

ನೋಡಲಾರರು. ತನ್ನ ಮಗನಾದ ಜಗತ್ಸಿಂಗನನ್ನು ಅತ್ಯಂತ ಔದಾರ್ಯದಿಂದ ತನ್ನ ಬಿಡಾರಕ್ಕೆ ಕಳಿಸಿಕೊಟ್ಟಿರಲು, ಮಾನಸಿಂಹನು ನಮ್ಮನ್ನು ಕೇವಲ ಮಾಂಡಲೀಕರಾಗ ಮಾಡಿದ್ದು ಉಚಿತವಲ್ಲ. ಇಂದಿನ ಪತ್ರದಲ್ಲಿ ನಮಗೆ ಆಜ್ಞಾಪತ್ರವನ್ನು ಬರೆದಂತೆ ಬರೆಯದೆ, ಆತನು ನಮಗೆ—"ನಾವು ಓಡಿಸಾದೊಳಗಿಂದ ಯಾತ್ರೆಗೆ ಹೋಗುತ್ತೇವೆ; ಹೊಸ ನವಾಬರಬ್ಬರೂ ನಮ್ಮನ್ನು ಕಂಡು ಸಂತೋಷಪಡಿಸಬಹುದೆಂದು ಇಚ್ಛಿಸುವೆವು" ಎಂದು ಬರೆದಿದ್ದರೆ, ಎಷ್ಟೋ ಸೌಮ್ಯವಾಗುತ್ತಿತ್ತು, ನಾವು ಅವಶ್ಯವಾಗಿ ಕಾಣಿಕೆಯನ್ನು ತಕ್ಕೊಂಡು ಭೆಟ್ಟಿಗೆ ಹೋಗುತ್ತಿದ್ದೆವು; ದಿನದಿನಕ್ಕೆ ಪರಸ್ಪರರಲ್ಲಿ ಪ್ರೇಮ ವೃದ್ಧಿಯೂ ಆಗಬಹುದಾಗಿತ್ತು; ಆದರೆ ಉನ್ಮತ್ತ ಮಾನಸಿಂಹನು ಹಾಗೆ ಯಾಕೆ ಮಾಡುವನು? ಆಗಲಿ, ಆತನ ಉನ್ಮತ್ತತನಕ್ಕೆ ನಾವಾದರೂ ಯಾಕೆ ಸೊಪ್ಪು ಹಾಕಬೇಕು? ನಮ್ಮ ಅಣ್ಣನಾದ ಸುಲೇಮಾನಖಾನನಂತು ಕೇವಲ ವಿಷಯಾಸಕ್ತನು. ಆತನಿಗೆ ರಾಜ್ಯಕಾರಭಾರದ ಗೊಡವೆಯೇ ಬೇಡ. ಆತನು ಮಾನಸಿಂಹನ ಭೆಟ್ಟಿಗೆ ಹೋಗುವಹಾಗಿಲ್ಲ, ಹೋದರೆ ನಾನು ಹೋಗಬೇಕು. ಈ ಮಾತಂತು ಆಗುವಹಾಗಿಲ್ಲ. ಯಾವನಾದರೂ ಒಬ್ಬ ಯೋಗ್ಯ ಅಧಿಕಾರಿ ಯನ್ನು ನಿಯಮಿಸಿ, ಮಾನಸಿಂಹನ ಯೋಗ ಕ್ಷೇಮವನ್ನು ತಕ್ಕೊಂಡರಾಯಿತು. ನಜರಾಣೆಯನ್ನು ಮಾತ್ರ ಕಳಿಸುವದಿಲ್ಲ; ಆದರೆ ಇದೆಲ್ಲ ಸರಿ. ಆಯೇಷೆಯು ಜಗತ್ಸಿಂಗನಿಗೆ ತನ್ನನ್ನು ಒಪ್ಪಿಸಿರುವಳಲ್ಲ. ಇದಕ್ಕೇನು ಮಾಡಬೇಕು? ಜಗತ್ಸಿಂಗನು ಆಯೇಷೆಯನ್ನು ಪ್ರೀತಿಸದಿರುವದು ಇದ್ದದ್ದರಲ್ಲಿ ನೆಟ್ಟಗೆಂದು ತಿಳಿಯ ಬೇಕಾಗುತ್ತದೆ; ಆದರೆ ಯಾತರ ನೆಟ್ಟಗೆ? ಜಗತ್ಸಿಂಗನು ಜೀವದಿಂದಿರುವವರೆಗೆ ಆಯೇಷೆಯು ಅನ್ಯರಿಗೆ ತನ್ನ ಹೃದಯವನ್ನು ಕೊಡುವಹಾಗಿಲ್ಲ. ಜಗತ್ಸಿಂಗನು ನಮ್ಮ ಕೈಯಲ್ಲಿ ಸಿಕ್ಕಿದ್ದಾಗ್ಗೇ ಆತನನ್ನು ನಾವು ಕೊಂದುಬಿಟ್ಟಿದ್ದರೆ, ಎಷ್ಟು ನೆಟ್ಟಗಾಗುತ್ತಿತ್ತಲ್ಲ? ಇದರಿಂದ ಆಯೇಷೆಯ ಮನಸ್ಸನ್ನು ಒಲಿಸಿಕೊಳ್ಳಲಿಕ್ಕೆ ನನಗೆ ಬಹಳ ಅನುಕೂಲವಾಗುತ್ತಿತ್ತು.

ಈ ಪ್ರಕಾರದ ವಿಚಾರಗಳ ತೆರೆಗಳೊಡನೆ ತೇಲುತ್ತ ಉಸ್ಮಾನನು ಅಂತಃಪುರದಲ್ಲಿ ನಡೆದಿರಲು, ಅಷ್ಟರಲ್ಲಿ—"ಉಸ್ಮಾನ, ಬೇಟಾ ಉಸ್ಮಾನ" ಎಂಬ ಶಬ್ದಗಳು ಒಬ್ಬ ರಮಣಿಯ ಮಂಜುಲ ಕಂಠದಿಂದ ಹೊರಟು, ಉಸ್ಮಾನನ ಕರ್ಣರಂಧ್ರವನ್ನು ಪ್ರವೇಶಿಸಿದವು. ಆಗ ದನಿಯು ಕೇಳಬರುವ ದಿಕ್ಕಿಗೆ ಉಸ್ಮಾನನು ಹೊರಳಿ ನೋಡಲು, ಒಂದು ಕೋಣೆಯಲ್ಲಿ ಪ್ರೌಢ ವಯಸ್ಸಿನ ಒಬ್ಬ ಸುಂದರಿಯು ಆತನ ಕಣ್ಣಿಗೆ ಬಿದ್ದಳು. ಆಕೆಯನ್ನು ನೋಡಿದ ಕೂಡಲೆ ಉಸ್ಮಾನನು ಅತ್ಯಂತವಾದ ಮಾತೃಭಕ್ತಿಯಿಂದ ಆಕೆಯ ಬಳಿಗೆ ಹೋದನು. ಆ ಸುಂದರಿಯು ಕಾತಲೂಖಾನನ ಬೇಗಮೆಯಾದ್ದರಿಂದ ಉಸ್ಮಾನನಿಗೆ ಮಲತಾಯಿಯಾಗಿದ್ದಳು. ಕಾಶ್ಮೀರೀ ಬೇಗಮಳೆಂದು ಹಿಂದೆ ವಾಚಕರು ಆಕೆಯ ಗುರುತು ಮಾಡಿಕೊಂಡಿರುವರು. ಕಾಶ್ಮೀರೀ ಬೇಗಮೆಯು ಆಯೇಷೆಯ ಹಡೆದ ತಾಯಿಯಂತೆ ಇದ್ದದ್ದರಿಂದ, ಉಸ್ಮಾನನಿಗೆ ಆ ಬೇಗಮೆಯು ಬಹಳ ಆದರಣೀಯ ಳಾಗಿದ್ದಳು. ಆಕೆಯನ್ನು ನೋಡಿದ ಕೂಡಲೆ ಉಸ್ಮಾನನು ತಲೆಬಾಗಿಸಿ ವಂದಿಸುತ್ತಿರಲು, ಬೇಗಮೆಯು ಆತನನ್ನು ಕುರಿತು—"ಉಸ್ಮಾನ, ನಾನು ನಿಮ್ಮ ಹಾದಿಯನ್ನೇ ನೋಡುತ್ತಿದ್ದೆನು. ನೀವು ಬಂದರೆ ನನ್ನ ಬಳಿಗೆ ನಿಮ್ಮನ್ನು ಕಳಿಸಿಕೊಡಬೇಕೆಂದು ನಿಮ್ಮ ಮಾಸಾಹೇಬರ ಮುಂದೆಯೂ ನಾನು ಹೇಳಿ ಬಂದಿದ್ದೆನು!!"

ಉಸ್ಮಾನ—(ವಿನಯದಿಂದ) ಮಾಸಾಹೇಬರ ಆಜ್ಞೆಯೇನಿರುವದು?

ಬೇಗಮ್—ಹೀಗೆ ನಿಂತನಿಂತಲ್ಲಿಯೇ ಕೇಳಿದರೆ ನಾನೇನು ಹೇಳಲಿ? ನಿಮ್ಮ ಸಂಗಡ ಆಡುವ ಮಾತುಗಳು ಬಹಳ ಇರುತ್ತವೆ. ಇವನ್ನು ನೀವು ಕುಳಿತೇ ಕೇಳಬೇಕಾಗಿರುವದು. ನನ್ನ ಮಹಾಲಿಗೆ ನಡೆಯಿರಿ; ಅಲ್ಲಿ ಒಂದು ಗಳಿಗೆ ಕುಳಿತುಕೊಂಡರೆ, ನಾನು ಎಲ್ಲ ಸಂಗತಿಯನ್ನು ಹೇಳುವೆನು. ಯಾಕೆ? ನನ್ನ ಮಹಾಲಿಗೆ ಬರಲಿಕ್ಕೆ ನಿಮಗೆ ಸಂಕೋಚವಾಗುವದೇನು? ನವಾಬ ಸಾಹೇಬರ ಅಂತರ್ಗೃಹದಲ್ಲಿ ಅವರ ಮಕ್ಕಳ–ಮರಿಗಳಿಗೆ ಓಡಾಡಲಿಕ್ಕೆ ಪ್ರತಿಬಂಧ ವಿರುವದಿಲ್ಲ. ನಾನಂತು ನಿಮ್ಮನ್ನು ಹೊಟ್ಟೆಯ ಮಗನಿಗಿಂತ ಹೆಚ್ಚೆಂದು ತಿಳಿಯುತ್ತೇನೆ; ಯಾಕೆ, ಬರುತ್ತೀರಷ್ಟೇ?

ಉಸ್ಮಾನ—(ವಿಚಾರಮಗ್ನನಾಗಿ) ನೀವು ನನಗೆ ಮಲತಾಯಿಯಾಗಿದ್ದರೂ, ನಿಮ್ಮನ್ನು ನಾನು ಹಡೆದ ತಾಯಿಯಂತಲೇ ತಿಳಿದಿರುವೆನು. ಮೇಲಾಗಿ ನೀವು ಆಯೇಷೆಯ ತಾಯಿಯೆನಿಸಿಕೊಳ್ಳುತ್ತೀರಿ; ಆದ್ದರಿಂದ ನಿಮ್ಮ ಸನ್ಮಾನ ಮಾಡುವದು ನನ್ನ ಕರ್ತವ್ಯವಾಗಿರುತ್ತದೆ. ಮಹಾಲಿನಲ್ಲಿ ಬರುವದು ಪದ್ಧತಿಗೆ ವಿರುದ್ಧವಾಗಿದ್ದರೂ, ತಮ್ಮ ಆಜ್ಞೆಯನ್ನು ನಾನು ಎಂದೂ ಉಲ್ಲಂಘಿಸಲಾರೆನು.

ಬೇಗಮ್—ಮಗುವೆ ನಡೆ! ಇದರಲ್ಲಿ ಪದ್ಧತಿಯ ವಿರುದ್ಧವೇನಿರುವದು? ನಾನಾಗಿ ಕರೆಯುವದರಿಂದ ಪದ್ಧತಿಗೆ ವಿರುದ್ಧವಾಗಿ ಆಚರಿಸಿದಂತಾಗುವದಿಲ್ಲ. ಮೇಲಾಗಿ ಕಾಯದೆಯನ್ನು ಮಾಡುವದು, ಮುರಿಯುವದು ಈಗ ನಿಮ್ಮ ಕೈಯೊಳಗಿರುತ್ತದೆ. ನ್ಯಾಯಾನ್ಯಾಯಗಳನ್ನು ವಿಚಾರಿಸುವ ಅಧಿಕಾರವು ಈಗ ನಿಮ್ಮ ಕಡೆಗೇ ಇರುವದರಿಂದ ನಿಮಗೆ ಅಂಜಿಕೆ ಯಾತರದು?

ಬೇಗಮಳ ಅಪ್ಪಣೆಯಂತೆ ಉಸ್ಮಾನನು ಆಕೆಯನ್ನು ಹಿಂಬಾಲಿಸಿ ಮಹಾಲಿಗೆ ನಡೆದನು. ಮಹಾಲಿನೊಳಗೆ ಹೋದ ಬಳಿಕ ಒಂದು ರತ್ನಗಂಬಳಿಯ ಮೇಲೆ ಸ್ವಲ್ಪ ಅಂತರದಿಂದ ಅವರಿಬ್ಬರು ಕುಳಿತುಕೊಂಡರು. ಆಗ ಬೇಗಮಳು—"ನಾನು ಆಯೇಷೆಯ ಸಂಬಂಧದಿಂದ ಹೇಳುವ ಮಾತುಗಳನ್ನು ನಿಮ್ಮ ಮುಂದೆ ಹೇಳುತ್ತೇನೆ," ಅನ್ನಲು, ಉಸ್ಮಾನನ ಎದೆಯು ಡವಡವ ಹಾರಹತ್ತಿತು. ಆಗ ಅವನು,

ಉಸ್ಮಾನ—ಹೇಳುವದಾಗಬೇಕು.

ಬೇಗಮ್—ಆಯೇಷೆಯ ಕಕ್ಕನ ಆಸ್ತಿಯು ಪಂಜಾಬದಲ್ಲಿದ್ದು, ಅದರ ಮಾಲಕಳು ಆಯೇಷೆಯೇ ಇರುತ್ತಾಳೆಂಬ ಮಾತು ನಿಮಗೆ ಗೊತ್ತಿರುತ್ತದಷ್ಟೇ?

ಉಸ್ಮಾನ—ಹೌದು, ಬಹಳ ದಿವಸದ ಹಿಂದೆ ಕೇಳಿದಹಾಗೆ ನನ್ನ ನೆನಪಿನಲ್ಲಿರುತ್ತದೆ, ಬಹಳ ದಿವಸವಾದದ್ದರಿಂದ ಸ್ಪಷ್ಟ ಸ್ಮರಣವಿರುವದಿಲ್ಲ.

ಬೇಗಮ್—ಹೌದು, ಬಹಳ ದಿವಸಗಳಾದದ್ದೇನೋ ನಿಜ. ಆಯೇಷೆಯ ಕಕ್ಕನು ಸತ್ತು ಹತ್ತುವರ್ಷಗಳಾಗಿ ಹೋದವು. ನಿಮ್ಮ ಹಿರಿಯರು ಯೋಗ್ಯ ಮನುಷ್ಯರನ್ನು ಕಳಿಸಿ ಇಲ್ಲಿಯವರೆಗೆ ಆ ಆಸ್ತಿಯ ಯೋಗ್ಯ ವ್ಯವಸ್ಥೆಯನ್ನು ಮಾಡಿದರು. ಈಗ ಆಯೇಷೆಯು ವಯಸ್ಸಿಗೆ ಬಂದದ್ದರಿಂದ ತನ್ನ ಆಸ್ತಿಯನ್ನು ತನ್ನ ವಶಕ್ಕೆ ತಕ್ಕೊಳ್ಳದಿದ್ದರೆ ಸರಕಾರದವರು

ತಮ್ಮ ವಶಕ್ಕೆ ತಕ್ಕೊಳ್ಳ ಬೇಕಾಗುತ್ತದೆಂದು ಪಂಜಾಬದ ಅಧಿಕಾರಿಯಿಂದ ನಿಮ್ಮ ವಜೀರರ ಕಡೆಗೆ ಬರೆದು ಬಂದಿರುತ್ತದೆ. ಒಬ್ಬ ನವಾಬರ ಜಿಂದಿಗೆಯಷ್ಟು ಆಯೇಷೆಯ ಜಿಂದಿಗೆಯು ಇರುವದು. ಅದರ ವ್ಯವಸ್ಥೆಯನ್ನು ಹ್ಯಾಗೆ ಮಾಡಬೇಕು? ನಿಮ್ಮ ಹೊರತು ಆ ಆಸ್ತಿಯ ವ್ಯವಸ್ಥೆಯನ್ನು ಯಾರೂ ಮಾಡುವ ಹಾಗಿಲ್ಲ

ಉಸ್ಮಾನ—ನೀವು ಹ್ಯಾಗೆ ವ್ಯವಸ್ಥೆ ಮಾಡಬೇಕನ್ನುತ್ತೀರಿ?

ಬೇಗಮೆ—ನಾನು ವ್ಯವಸ್ಥೆ ಮಾಡುವದೇನು? ನೀವು ಮಾಡಿದ್ದೇ ನನಗೆ ಸಮ್ಮತವು; ಆದರೆ ಆಯೇಷೆಯು ಪಂಜಾಬಕ್ಕೆ ಹೋಗಲು ಇಚ್ಛಿಸುವಳು. ಬಂಗಾಲಕ್ಕೆ ಹೋಗಿ ಬಂದಂದಿನಿಂದ ಆಕೆಯ ಪ್ರಕೃತಿಯು ಅಸ್ವಸ್ಥವಾಗಿದೆ. ನವಾಬ ಸಾಹೇಬರ ಮರಣದಿಂದಲೋ, ಬೇರೆ ಯಾವ ಕಾರಣದಿಂದಲೋ ತಿಳಿಯದು; ಆಕೆಯು ದಿನದಿನಕ್ಕೆ ಸೊರಗುತ್ತ ನಡೆದಿರುವಳು, ಆಕೆಗೆ ಊಟ–ಉಡಿಗೆಗಳು ಬೇಡ, ವಸ್ತ್ರಾಭರಣಗಳು ಬೇಡ, ಯಾವಾಗಲೂ ಔದಾಸೀನ್ಯ ದಿಂದ ಕಾಲಕಳೆಯುವಳು. ಯಾವಾಗಲೂ ನೆಲದ ಮೇಲೆಯೇ ಕುಳಿತುಕೊಳ್ಳುವಳು. ಪಂಜಾಬಕ್ಕೆ ಹೋದಬಳಿಕ ನನಗೆ ವಿಶ್ರಾಂತಿಯು ದೊರೆಯಬಹುದೆಂದು ಆಕೆಯು ಅನ್ನುವಳು. ನನಗಾದರೂ ಹಾಗೆಯೇ ತೋರುತ್ತದೆ.

ಉಸ್ಮಾನ—ಬಹಳ ಅಸಮಾಧಾನದ ಸಂಗತಿಯು! ಆಯೇಷೆಯ ಆಸ್ತಿಯ ವ್ಯವಸ್ಥೆಯನ್ನು ಹ್ಯಾಗಾದರೂ ಮಾಡಬಹುದು. ಆಯೇಷೆಯ ತಂದೆಯ ಮೇಲೆ ಅಕಬರ ಬಾದಶಹನ ಕೃಪೆಯಿತ್ತೆಂದು ನಾನು ಕೇಳಿದ್ದೇನೆ. ಬಾದಶಹನಿಗೆ ಆಯೇಷೆಯ ಪರಿಚಯವೂ ಇರುವದು; ಬಾದಶಹರ ದರ್ಬಾರದೊಳಗಿನ ದೊಡ್ಡ ದೊಡ್ಡ ಜನರ ಪರಿಚಯವೂ ಆಯೇಷೆಗೆ ಇರುತ್ತದೆ; ಅಂದಬಳಿಕ ಆಕೆಯ ಆಸ್ತಿಯ ವ್ಯವಸ್ಥೆಯ ಚಿಂತೆಯು ನನಗಿಲ್ಲ, ಆದರೆ ಆಯೇಷೆಯು ಇಲ್ಲಿಂದ ಹೊರಟು ಹೋಗಿಬಿಟ್ಟರೆ, ಒಮ್ಮೆಲೆ ದೀಪ ತೆಗೆದ ಹಾಗಾದೀತಲ್ಲ

ಬೇಗಮೆ—ಉಸ್ಮಾನ, ಆಯೇಷೆಯ ಮೇಲೆ ನಿಮ್ಮ ಪ್ರೇಮವು ವಿಶೇಷವಾಗಿರುವದು. ನಿಮ್ಮಿಬ್ಬರ ಲಗ್ನ ಮಾಡುವದಕ್ಕಾಗಿ ನವಾಬ ಸಾಹೇಬರ ಮುಂದೆ ನಾನು ಎಷ್ಟೋ ಸಾರೆ ಪ್ರಸ್ತಾಪಿಸಿದ್ದೆನು. ಅವರ ಮನಸ್ಸಿಗೂ ಆ ಮಾತು ಬಂದಿತ್ತು; ಆದರೆ ದುರ್ದೈವದಿಂದ ಆ ಯೋಗವು ಒದಗಿ ಬರಲಿಲ್ಲ, ನಿಮ್ಮಿಬ್ಬರ ವಿವಾಹವಾಗಬೇಕೆಂದು ನಾನು ಇಚ್ಛಿಸುತ್ತೇನೆ; ಆದರೆ ಏನು ಮಾಡಬೇಕು? ಅತ್ತ ಆಯೇಷೆಯು ಹಗಲು–ರಾತ್ರಿ ದುಃಖಿಸುತ್ತಿರುವಳು; ಇತ್ತ ನೀವು ಯಾವ ಆಲೋಚನೆಯಲ್ಲಿಯೋ ಏನೋ, ಸದಾ ಮಗ್ನರಾಗಿರುತ್ತೀರಿ. ಆಯೇಷೆಯು ಅರಗಳಿಗೆ ಅಗಲಿದರೆ ಸೈರಿಸದ ನೀವು, ಇತ್ತಿತ್ತ ಅಂತರ್ಗೃಹಕ್ಕೆ ಬರುವದನ್ನೇ ಬಿಟ್ಟುಬಿಟ್ಟಿರಿ; ಆಯೇಷೆಯ ಯೋಗಕ್ಷೇಮವನ್ನು ವಿಚಾರಿಸದಾದಿರಿ. ನಿಮ್ಮಿಬ್ಬರ ಅವಸ್ಥೆಯನ್ನು ನೋಡಿ ನನ್ನ ಎದೆಯೊಡೆದು ನೀರಾಗುತ್ತದೆ.

ಉಸ್ಮಾನ—ಮಾಸಾಹೇಬ, ಇದರಲ್ಲಿ ನನ್ನ ಅಪರಾಧವೇನೂ ಇರುವದಿಲ್ಲ, ಇಂದಿಗೂ ನಾನು ನನ್ನ ಪ್ರಾಣವನ್ನು ಆಯೇಷೆಯ ಮೇಲೆ ನಿವಾಳಿಸಿ ಒಗೆಯುವ ಹಾಗಿದ್ದೇನೆ; ಆದರೆ ಆಯೇಷೆಯ ಹೃದಯದಲ್ಲಿ ಭಯಂಕರವಾದ ಅಗ್ನಿಯು ಪ್ರಜ್ವಲಿಸುತ್ತಿರುವದು. ಅದರಲ್ಲಿ

ನಾವಿಬ್ಬರು ಸುಟ್ಟು ಹೋಗುವೆವಲ್ಲದೆ, ಅದರ ಶಕೆಯು ನಿಮಗೂ ಸ್ವಲ್ಪ ಬಡೆಯಬಹುದಾಗಿದೆ. ಆಯೇಷೆಯು ಈಗ ಎಲ್ಲಿರುವಳು? ಆಕೆಯ ಅಸ್ವಸ್ಥತೆಯನ್ನು ಕೇಳಿ ನನಗೆ ಬಹಳ ಅಸಮಾಧಾನವಾಗಿದೆ. ಆಕೆಯನ್ನು ಕಂಡಹೊರತು ನನಗೆ ಸಮಾಧಾನವಾಗುವಂತೆ ಇಲ್ಲ. ಆಕೆಯನ್ನು ಮಾತಾಡಿಸಿ ಆಕೆಯ ವಿಚಾರವನ್ನು ಕೇಳಿಕೊಂಡ ಮೇಲೆ ಆಕೆಯ ಆಸ್ತಿಯ ವ್ಯವಸ್ಥೆಯನ್ನು ಕುರಿತು ನಿಮ್ಮೊಡನೆ ಪ್ರಸ್ತಾಪಿಸುವೆನು.

ಈ ಮೇರೆಗೆ ನುಡಿದು, ಉಸ್ಮಾನನು ಬೇಗಮ ಸಾಹೇಬರನ್ನು ಯಥೋಚಿತವಾಗಿ ಸನ್ಮಾನಿಸಿ, ಅವರ ಅನುಮತಿಯನ್ನು ಪಡೆದು ಆಯೇಷೆಯ ಬಳಿಗೆ ಹೊರಟನು. ಆತನು ಆಯೇಷೆಯನ್ನು ನಾಲ್ಕೂ ಕಡೆಗೆ ಹುಡುಕಿದನು; ಆದರೆ ಆಕೆಯ ಗೊತ್ತು ಹತ್ತಲಿಲ್ಲ. ಅಷ್ಟರಲ್ಲಿ ಒಬ್ಬ ದಾಸಿಯು ಆತನನ್ನು ಕಂಡು, ಪದ್ಧತಿಯಂತೆ ಪ್ರಣಾಮ ಮಾಡಿ, ಆಯೇಷೆಯು ಮಹಾಲಿನ ತೀರ ಹಿಂದುಗಡೆಯ ಕೋಣೆಯಲ್ಲಿ ಇರುವಳೆಂದು ಹೇಳಿದಳು. ಉಸ್ಮಾನನು ದಾಸಿಯ ಬೆನ್ನು ಹತ್ತಿ ನಡೆದನು. ಆಯೇಷೆಯಿರುವ ಕೋಣೆಯನ್ನು ತೋರಿಸಿ ದಾಸಿಯು ಹಿಂದುರಿಗಿದಳು. ಖಾನನೂ ಆ ಕೋಣೆಯಲ್ಲಿ ಕಾಲಿಟ್ಟನೋ ಇಲ್ಲವೋ ಕೂಡಲೆ ಹಿಂದಿರುಗಿದನು. ಅಲ್ಲಿ ಆಯೇಷೆಯು ಒಬ್ಬಳೇ ಮಲಗಿದ್ದಳು; ಆಕೆಗೆ ಗಡದ್ದು ನಿದ್ರೆಹತ್ತಿತ್ತು; ಆಕೆಯ ಮೈಮೇಲಿನ ವಸ್ತ್ರಗಳು ಅಸ್ತವ್ಯಸ್ತವಾಗಿದ್ದವು. ಈ ಸ್ಥಿತಿಯಲ್ಲಿ ಆಕೆಯ ಬಳಿಗೆ ಹೋಗುವದು ಉಚಿತವಲ್ಲವೆಂದು ನೀತಿವಂತನಾದ ಉಸ್ಮಾನನು ತಿಳಿದು ಹಿಂದಿರುಗಿದ್ದನು. ಸಂಗಮವರಿಯ ಕಲ್ಲಿನ ನೆಲಗಟ್ಟಿನ ಮೇಲೆ ಒಂದು ಮಖಮಲಿನ ತಲೆಗಿಂಬು ಇಟ್ಟುಕೊಂಡು ಆ ಭುವನ ಸುಂದರಿಯು ನೆಲದ ಮೇಲೆಯೇ ಮಲಗಿಕೊಂಡಿದ್ದಳು. ವಿಶ್ವದೊಳಗಿನ ಯಾವತ್ತು ಶೋಭೆಯೂ, ಸೃಷ್ಟಿಯೊಳಗಿನ ಎಲ್ಲ ರಮಣೀಯತೆಯೂ, ಸೃಷ್ಟಿಕರ್ತನ ಯಾವತ್ತು ಕೌಶಲ್ಯವೂ ಆ ನಿದ್ರಿತಳಾದ ಸುಂದರಿಯ ದೇಹದಲ್ಲಿ ಒಟ್ಟುಗೂಡಿದಂತೆ ಆಗಿದ್ದವು! ಉಸ್ಮಾನನು ಸೌಜನ್ಯದಿಂದ ಕೋಣೆಯ ಹೊರಗೆ ಬಂದು ನಿಂತಿದ್ದರೂ, ಆ ಸುಂದರಿಯ ಲೋಕೋತ್ತರ ಸೌಂದರ್ಯವನ್ನು ಕಣ್ಣುತುಂಬ ನೋಡಿ ನೇತ್ರಗಳ ಸಾಫಲ್ಯವನ್ನು ಮಾಡಿಕೊಳ್ಳದೆಯಿರುವದು ಆತನಿಂದ ಆಗಲೊಲ್ಲದು. ಆತನು ಅಲ್ಲಿಂದ ತಿರುಗಿ ಹೋಗದಾದನು. ಆ ಸೌಂದರ್ಯಶಾಲಿಯನ್ನು ಇನ್ನೊಮ್ಮೆ ಕಣ್ಣುತುಂಬ ನೋಡಬೇಕೆಂದು ಆತನು ಆತುರಪಡಹತ್ತಿದನು. ತನ್ನ ಹೃದಯೇಶ್ವರಿಯ ದರ್ಶನವು ಇನ್ನೊಮ್ಮೆ ಆದಹೊರತು, ಆತನ ಕಾಲುಗಳು ಅಲ್ಲಿಂದ ಕಿತ್ತದಾದವು. ಆತನು ಹೊರಗಿನಿಂದಲೇ ಆಯೇಷೆಯ ಸೌಂದರ್ಯವನ್ನು ನೋಡಹತ್ತಿದನು. ಬರಬರುತ್ತ ಆತನು ಪರವಶನಾದನು.

ಹೀಗೆ ಪರವಶನಾಗಿ ಉಸ್ಮಾನನು ಆಯೇಷೆಯನ್ನು ಎವೆಯಿಕ್ಕದೆ ನೋಡುತ್ತಿರುವಾಗ, ಆಕೆಯ ಎದೆಯಮೇಲೆ ಏನೋ ಕರ್‍ರಗೆ ಉದ್ದಕ್ಕೆ ಬಿದ್ದಹಾಗೆ ಕಾಣಹತ್ತಿತ್ತು. ಅದೊಂದು ಹಗ್ಗವಿರಬಹುದೋ, ಅಥವಾ ಆ ಸುಂದರಿಯ ಕೃಷ್ಣ ಕೇಶಗಳದೊಂದು ಸೆಳಕು ಇರಬಹುದೋ ಎಂದು ಉಸ್ಮಾನನು ತರ್ಕಿಸಹತ್ತಿದನು. ಹಗ್ಗವೆನ್ನಬೇಕೆಂದರೆ ಅದು ಬಹಳ ಕರ್‍ರಗೆ ಇತ್ತು; ಕೇಶಗಳ ಶಳಕೆನ್ನಬೇಕೆಂದರೆ ಅದು ಬಹಳ ಉದ್ದವಾಗಿದ್ದು, ಆಕೆಯ ಶಿರಸ್ಸಿಗೆ ಅದರ

ಸಂಬಂಧವಿದ್ದಿಲ್ಲ. ಅಂದಬಳಿಕ ಇದು ಏನಿರಬಹುದು? ಹೀಗೆಂದು ಖಾನನು ಆಲೋಚಿಸುತ್ತಿದ್ದನು. ಅಷ್ಟರಲ್ಲಿ ಆ ಕರಿಯ ಪದಾರ್ಥವು ಸರಿದಾಡಹತ್ತಲು, ಖಾನನು ಮೆಟ್ಟಿಬಿದ್ದನು. ಆತನ ಎದೆಯು ದಸಕ್ಕೆಂದಿತು! ಆಯೇಷೆಯ ಸೌಂದರ್ಯವನ್ನು ನೋಡುವ ಆತನ ಇಚ್ಛೆಯು ನಷ್ಟವಾಯಿತು. ಆತನು ಗಾಬರಿಯಾಗಿ, ಹತ್ತರ ಬರಲು ದಾಸಿಗೆ ಕೈ ಸನ್ನೆ ಮಾಡಿದನು. ದಾಸಿಯು ಹತ್ತರ ಬಂದಕೂಡಲೆ ಖಾನನು ಆಕೆಯನ್ನು ಕುರಿತು—ನವಾಬ ಕುವರಿಯು ಮಲಗಿರುವದರಿಂದ, ನಾನು ಒಳಗೆ ಹೋಗಲಿಕ್ಕೆ ಬರುವದಿಲ್ಲ; ಆದರೆ ನೀನು ಕಾಲ ಸಪ್ಪಳವಾಗದಂತೆ ಮೆಲ್ಲಗೆ ಹೋಗಿ, ಆಕೆಯ ಎದೆಯ ಮೇಲೆ ಕರ್‍ರಗೆ ಕಾಣುವದು ಏನಿರುತ್ತದೆಂಬದನ್ನು ಬೇಗನೆ ನೋಡಿಕೊಂಡು ಬಾ. ಹು, ಹೋಗು, ಬೇಗನೆ ಹೋಗು, ಎಂದು ಒತ್ತರಿಸಲು, ದಾಸಿಯು ಕಾಲ ಸಪ್ಪಳ ಮಾಡದೆ ಮೆಲ್ಲಗೆ ಒಳಗೆ ಹೋದಳು; ಆದರೆ ಒಳಗೆ ಹೋದವಳು ಕೂಡಲೆ ಹೊರಗೆ ಬಂದಾಗ ಅಂಜಿಕೆಯಿಂದ ಆಕೆಯ ಮೋರೆಯು ಹುಚ್ಚು ಇಟ್ಟಿತ್ತು, ಮೊದಮೊದಲು ಆಕೆಯ ಬಾಯಿಂದ ಅಕ್ಷರಗಳೇ ಹೊರಡಲೊಲ್ಲವು. ಉಸ್ಮಾನನು ಆಕೆಗೆ ಸ್ವಲ್ಪ ಧೈರ್ಯ ಹೇಳಿದಮೇಲೆ ಆಕೆಯು ಖಾನನನ್ನು ಕುರಿತು—ಸಂಕಟವು ಬಹು ಭಯಂಕರವಾದದ್ದಿರುವದು. ನವಾಬ ಕುವರಿಯು ಸ್ವಲ್ಪ ಅಲ್ಲಾಡಿದರೆ ಸಾಕು, ಆಕೆಯ ಪ್ರಾಣಾಂತವಾಗುವದು. ಆಕೆಯ ಎದೆಯ ಮೇಲೆ ದೊಡ್ಡ ಕೃಷ್ಣ ಸರ್ಪವು ಮಲಗಿರುವದು!

ದಾಸಿಯ ಮುಖದಿಂದ ಹೊರಟ ಶಬ್ದಗಳು ಕಿವಿಗೆ ಬಿದ್ದಕೂಡಲೆ ಖಾನನು ಕ್ಷಣಮಾತ್ರ ವಿಚಾರಮಾಡಿದನು. ಕೂಡಲೆ ಆತನು ಪಶ್ಚಿಮ ದಿಕ್ಕಿಗೆ ಮೋರೆ ತಿರುಗಿಸಿ ಒಮ್ಮೆ ಅಲ್ಲಾನನ್ನು ಪ್ರಾರ್ಥಿಸಿದನು. ಈ ಮೇಲೆ ಆತನು ದಾಸಿಗೆ—''ಗದ್ದಲ ಗಿದ್ದಲ ಮಾಡೀ'' ಎಂದು ಹೇಳಿ, ಆತನು ಕೋಣೆಯೊಳಗೆ ಹೋಗಿ ನೋಡಿದನು. ಸಾಕ್ಷಾತ್ ಯಮಸ್ವರೂಪಿಯಾದ ಕೃಷ್ಣಸರ್ಪವು ಆಯೇಷೆಯ ಎದೆಯಮೇಲೆ ಬಿದ್ದುಕೊಂಡಿತ್ತು, ಸ್ವಲ್ಪ ಅಲ್ಲಾಡಿದರೆ ಸಾಕು, ಆ ಕೃಷ್ಣಸರ್ಪವು ಆಯೇಷೆಯನ್ನು ಕಚ್ಚದೆ ಬಿಡುವ ಹಾಗಿದ್ದಿಲ್ಲ; ಆದರೂ ಧೀರನಾದ ಉಸ್ಮಾನನು ಹೆದರಲಿಲ್ಲ, ಆತನು ಮನಸ್ಸಿನಲ್ಲಿ– ಈ ಕೃಷ್ಣಸರ್ಪವು ಕಡಿದಮೇಲೆ ಈಕೆಯ ಪ್ರಾಣವು ಹೋಗುವದು; ಹೀಗೆ ವಿಷದ ಪ್ರಖರತೆಯಿಂದ ಈ ಸಂಸಾರ ಸಾರ ರತ್ನವು ನನ್ನ ಕಣ್ಣುಮರೆಯಾಗುವಾಗ, ನಾನು ಅದನ್ನು ಕಾಯ್ದುಕೊಳ್ಳದೆ ಇರಬಹುದೆ? ಆಯೇಷೆಯು ಈ ಮೇರೆಗೆ ಸರ್ಪ ದಂಶದಿಂದ ನಷ್ಟವಾಗುವದೇ ನಿಶ್ಚಯವಿದ್ದರೆ, ಆಕೆಗಿಂತ ಮೊದಲು ನಾನು ಸಾಯಲಿಕ್ಕೆಬೇಕು; ನಿಶ್ಚಯವಾಗಿ ಈ ಉಸ್ಮಾನನಿಗೆ ಆಯೇಷೆಗಿಂತ ಮೊದಲು ಮೃತ್ಯುವು ಬರಲಿಕ್ಕೇಬೇಕು!! ಇಷ್ಟು ಅಂದುಕೊಂಡು ಖಾನನು ಬಹು ಚಾಪಲ್ಯದಿಂದ ಕೃಷ್ಣಸರ್ಪದ ಬಾಲವನ್ನು ಹಿಡಿದು ಸರಕ್ಕನೆ ಆ ಸುಂದರಿಯ ಎದೆಯ ಮೇಲಿಂದ ಎಳೆದು ಕೋಣೆಯ ಹೊರಗೆ ಅದನ್ನು ಸೆಳೆದೊಗೆದನು. ಕೃಷ್ಣಸರ್ಪವು ಹೊರಗೆ ಹೋಗಿ ಅಪ್ಪಳಿಸಿತು; ಅದು ಸಿಟ್ಟಿನಿಂದ ಹೆಡೆದೆಗೆದು ಅರ್ಭಟಿಸುತ್ತಿರುವಷ್ಟರಲ್ಲಿ ಖಾನನು ಹೊರಗೆ ಬಂದನು. ಸರ್ಪವು ಅತ್ಯಂತವಾದ ದ್ವೇಷದಿಂದ ಆತನ ಮೈಮೇಲೆ ಏರಿಹೋಯಿತು. ಖಾನನಾದರೂ ಹಿಂದಕ್ಕೆ ಸರಿಯಲಿಲ್ಲ, ಆ ಕೃಷ್ಣಸರ್ಪದ ಪೆಟ್ಟನ್ನು ತಪ್ಪಿಸಿಕೊಂಡು, ಒಮ್ಮೆಲೆ ಅದರ ಹೆಡೆಯನ್ನು ಒಳ್ಳೇ ಕಸುವಿನಿಂದ ಅದು ಉಲುಕದಂತೆ

ಗಟ್ಟಿಯಾಗಿ ಹಿಡಿದನು. ತನ್ನ ಇಚ್ಛೆಯಂತೆ ಖಾನನನ್ನು ಕಡಿಯಲಿಕ್ಕೆ ಸರ್ಪಕ್ಕೆ ಬಾರದಾಯಿತು. ಕೃಷ್ಣಸರ್ಪವಾದರೂ ತನ್ನ ಹೆಡೆಯ ಹಿಡಿತವನ್ನು ಸಡಲಿಸುವದಕ್ಕಾಗಿ ಒಂದು ಹಂಚಿಕೆಯನ್ನು ಮಾಡಿತು. ಅದು ತನ್ನ ಶರೀರದ ಉಳಿದ ಭಾಗವನ್ನು ಖಾನನ ಕೈಗೆ ಸುತ್ತುಹಾಕಿ ಬಿಮ್ಮನೆ ಬಿಗಿಯಹತ್ತಿತು.

ಇಷ್ಟಾದರೂ ಖಾನನು ಬೆದರಲಿಲ್ಲ; ಎದೆಗುಂದಲಿಲ್ಲ, ತನ್ನ ಬುದ್ಧಿಯನ್ನು ಚಂಚಲವಾಗಗೊಡಲಿಲ್ಲ. ಆತನು ತನ್ನ ಕೈಯನ್ನು ಮೇಲಕ್ಕೆತ್ತಿ ದೇವರನ್ನು ಕುರಿತು ಭಕ್ತಿಯಿಂದ— ಎಲೈ ಪರವರದಿಗಾರ, ಅಲ್ಲಾ, ನಿನ್ನ ಲೀಲೆಯು ಅಗಾಧವಾದದ್ದು! ಈ ಕ್ಷುದ್ರವಾದ ದುಷ್ಟ ಜಂತುವಿನ ಕೈಯೊಳಗಿಂದ ಆಯೇಷೆಯ ಪ್ರಾಣವನ್ನು ನೀನೇ ಬದುಕಿಸಿದೆ. ನಿನ್ನ ಕೃಪಾಲುತ್ವವೇ ಕಾರಣವಲ್ಲದೆ, ಆಯೇಷೆಯ ಪ್ರಾಣವನ್ನು ಬದುಕಿಸಲಿಕ್ಕೆ ನಾನು ಎಷ್ಟರವನು! ಎಂದು ನುಡಿದನು. ಇದನ್ನೆಲ್ಲ ನೋಡುತ್ತ ದಾಸಿಯು ಒಂದು ಮೂಲೆಯಲ್ಲಿ ಥರಥರ ನಡುಗುತ್ತ ನಿಂತುಕೊಂಡಿದ್ದಳು. ಉಸ್ಮಾನನ ಕೈಯು ಬರಬರುತ್ತ ಬಹಳವಾಗಿ ಸೇದಹತ್ತಿತು. ದಾಸಿಯು ಅದನ್ನು ನೋಡಿ ಅಂಜುತ್ತಂಜುತ್ತ ಉಸ್ಮಾನನ್ನು ಕುರಿತು—ಜಹಾಪನಾಹ, ತಮ್ಮ ಧೈರ್ಯದ ಪರಮಾವಧಿಯಾಯಿತು; ಆದರೆ ಇನ್ನು ಮುಂದೆ ಏನು ಮಾಡಬೇಕು? ಈ ಹಾವು ನಿಮ್ಮ ಕೈಯನ್ನು ಹ್ಯಾಗೆ ಬಿಡಬೇಕು? ಯಾರನ್ನಾದರೂ ಕರೆಯಲೇನು? ಕೈಯನ್ನು ಬಿಡಿಸಿಕೊಳ್ಳಲಿಕ್ಕೆ ನಿಮಗಂತು ಬರುವ ಹಾಗಿಲ್ಲ; ಯಾಕಂದರೆ ನಿಮ್ಮ ಬಲಗೈಯನ್ನೇ ಅದು ಬಿಗಿಯಾಗಿ ಸುತ್ತಿಕೊಂಡು ಬಿಟ್ಟಿರುತ್ತದೆ, ಎಂದು ನುಡಿಯಲು, ಉಸ್ಮಾನನು—ಮೋತೀ, ಬೆದರಬೇಡ, ಎಡಗೈಯಿಂದ ನಾನು ಹಾವಿನ ಸುತ್ತುಗಳನ್ನು ಬಿಡಿಸಿಕೊಂಡೇನು? ಆದರೆ ಈ ದುಷ್ಟ ಸರ್ಪದ ಸಂಪೂರ್ಣ ನಾಶವು ಬೇಗನೆ ಆಗಬೇಕಾಗಿದೆ, ಆದ್ದರಿಂದ ನೀನು ಒಳಗೆ ಹೋಗಿ ಒಂದು ಕಠಾರಿಯನ್ನು ತಕ್ಕೊಂಡು ಬಾ. ಇದನ್ನು ಚೂರುಚೂರು ಮಾಡುತ್ತೇನೆ. ನನಗೇನಾಗುತ್ತದೆ? ನೀನು ಯಾರನ್ನೂ ಕರೆಯುವ ಗೊಡವಿಗೆ ಹೋಗಬೇಡ. ಕರೆದರೆ ಬೇಗಮುಸಾಹೇಬರ ಹೊರತು ಉಳಿದವರು ಅಂತರ್ಗೃಹದಲ್ಲಿ ಬರುತ್ತಾರಾದರೂ ಹ್ಯಾಗೆ? ಬೇಗಮು ಸಾಹೇಬರು ಬಂದರೆ ಅವರೂ ಗಾಬರಿಯಾಗಿ ನಿಂತುಕೊಂಡಾರು; ಆದ್ದರಿಂದ ತಡಮಾಡದೆ ನೀನು ಕಠಾರಿಯನ್ನು ತಕ್ಕೊಂಡು ಬಾ, ಎಂದು ಹೇಳಿದನು.

ಕಠಾರಿಯನ್ನು ತರುವದಕ್ಕಾಗಿ ದಾಸಿಯು ಹೊರಟು ಹೋದಳು. ಸರ್ಪದ ಬಿಗತದಿಂದ ಉಸ್ಮಾನನ ಕೈಯು ಬಹಳ ಸೇದಹತ್ತಿತು; ಆದರೂ ಅವನು ಅದರ ಬಾಯನ್ನು ಬಿಡಲಿಲ್ಲ. ದಾಸಿಯು ಕಠಾರಿಯನ್ನು ತಕ್ಕೊಂಡು ಬರಲು, ಖಾನನು ಆಕೆಯನ್ನು ಕುರಿತು– ನೀನು ಇನ್ನು ಬಳಿಯಲ್ಲಿ ನಿಂತುಕೊಳ್ಳಬೇಡ. ಮತ್ತೆ ಅಂಜಿಕೊಂಡೀ. ಕೋಣೆಯೊಳಗೆ ಹೋಗಿ ನವಾಬ ಕುವರಿಯ ಬಳಿಯಲ್ಲಿ ಕುಳಿತುಕೋ, ಆಕೆಗೆ ಎಚ್ಚರಾಗಗೊಡಬೇಡ. ಒಂದು ಪಕ್ಷದಲ್ಲಿ ಆಕೆಗೆ ಎಚ್ಚರವಾದರೂ ಇಲ್ಲಿ ಹೊರಗೆ ನಡಿದಿರುವದನ್ನು ಮಾತ್ರ ಆಕೆಗೆ ತಿಳಿಯಗೊಡಬೇಡ, ಎಂದು ಹೇಳಲು, ''ಜೀ ಸರಕಾರ'' ಎಂದು ದಾಸಿಯು ಅಲ್ಲಿಂದ ಹೊರಟು ಹೋದಳು; ಆದರೆ ಖಾನನು ಕಠಾರಿಯಿಂದ ಹಾವನ್ನು ಹ್ಯಾಗೆ ಸೀಳುವನೆಂಬದನ್ನು ನೋಡುವ ಕುತೂಹಲದಿಂದ

ಆಕೆಯು ಅಲ್ಲಿಯೇ ಬಾಗಿಲ ಮರೆಯಲ್ಲಿ ನಿಂತುಕೊಂಡು ನೋಡಹತ್ತಿದಳು. ಖಾನನು ಎಡಗೈಯಲ್ಲಿ ಕಠಾರಿಯನ್ನು ತಕ್ಕೊಂಡು ಸರ್ಪದ ತುಂಡುಗಳನ್ನು ಮಾಡಹತ್ತಿದನು. ಎಂಥ ಭಯಂಕರ ಕೆಲಸವದು! ಅವನ ಎಂಥ ಸಾಹಸವದು! ಎಂಥ ಪ್ರಸಂಗಾವಧಾನವದು! ಸರ್ಪವನ್ನು ತುಂಡರಿಸಲಿಕ್ಕೆ ಖಾನನಿಗೆ ಬಹಳಹೊತ್ತು ಬೇಕಾಗಲಿಲ್ಲ, ತನ್ನ ಕೈಗೆ ಕಠಾರಿಯು ಹತ್ತದಂತೆ ಸರ್ಪವನ್ನು ತುಂಡರಿಸಬೇಕಾದದ್ದರಿಂದ, ಸರ್ಪದ ಪೂರಾ ತುಂಡುಗಳಾಗದಂತೆ ಆತನು ಬಹು ಜಾಗ್ರತೆಯಿಂದ ಕೆಲಸ ಮಾಡಬೇಕಾಯಿತು. ಸರ್ಪದ ದೇಹವು ಒಂದು ಮಾಲೆಯಂತೆ ಕಾಣಹತ್ತಿತು. ಆದರೆ ರಕ್ತದಿಂದ ಖಾನನ ವಸ್ತ್ರವು ತೊಯ್ದವು. ಆ ಸರ್ಪ ದೇಹಮಾಲೆಯು ನೆಲದವರೆಗೆ ಜೋತಾಡಹತ್ತಿದರೂ ಖಾನನು ಸರ್ಪದ ಬಾಯನ್ನು ಬಿಟ್ಟಿದ್ದಿಲ್ಲ. ಬಾಯ ಬಳಿಯ ಬಹು ದೊಡ್ಡ ಭಾಗವು ತುಂಡರಿಸದೆ ಹಾಗೆಯೇ ಉಳಿದಿತ್ತು, ಆ ಭಾಗವೇ ಬಹು ಭಯಂಕರವಾದದ್ದಿತ್ತು, ಖಾನನು ಮೊದಲು ತನ್ನ ಎಡಗೈಯೊಳಗಿನ ಕಠಾರಿಯನ್ನು ಚಲ್ಲಿಕೊಟ್ಟನು! ಕೃಷ್ಣಸರ್ಪದ ಮುಖವು ಈಗ ಹೆಸರಿಗೆ ಮಾತ್ರ ದೇಹಕ್ಕೆ ಅಂಟಿಕೊಂಡ ಹಾಗೆ ಆಗಿತ್ತು; ಆದರೂ ಅದು ಇನ್ನೂ ಖಾನನನ್ನು ಕಡಿಯುವದಕ್ಕಾಗಿ ಬಾಯಿ ತೆರೆಯುತ್ತ ಒದ್ದಾಡುತ್ತಲಿತ್ತು, ಆಗ ಖಾನನು ಮುಖವನ್ನು ಗಟ್ಟಿಯಾಗಿ ಹಿಡಿದು, ಬಹು ಎಚ್ಚರದಿಂದ ಅದನ್ನು ದೂರ ಚಲ್ಲಿಕೊಟ್ಟು, ತನ್ನ ಮೈಯನ್ನು ತೊಳಕೊಳ್ಳುವದಕ್ಕಾಗಿ ಉದ್ಯಾನದಲ್ಲಿದ್ದ ಸರೋವರಕ್ಕೆ ಹೋದನು; ಆದರೂ ಸರ್ಪವು ಅವನ ಕಡೆಗೆ ಸಿಟ್ಟಿನಿಂದ ನೋಡುತ್ತ ಆತನನ್ನು ಕಚ್ಚುವದಕ್ಕಾಗಿ ಬಾಯಿ ತೆರೆಯುತ್ತಿತ್ತು!!

## ತಿರಸ್ಕಾರ

ಮುಂದೆ ಆಯೇಷೆಯು ಬೇಗನೆ ಎಚ್ಚತ್ತಳು. ಆಗ ದಾಸಿಯು ಸಲಾಮು ಮಾಡಿ ಮುಂದೆ ನಿಂತುಕೊಂಡು, ಆ ನವಾಬ ಕುವರಿಯ ಅಪ್ಪಣೆಯಿಂದ ಆಕೆಯ ಉಡಿಗೆ–ತೊಡಿಗೆಗಳನ್ನು ಸರಿಮಾಡಹತ್ತಿದಳು. ಆಗ ದಾಸಿಯು ತಂದಿದ್ದ ಗುಲಾಬದ ನೀರಿನಲ್ಲಿ ಕರವಸ್ತ್ರವನ್ನು ತೋಯಿಸಿ ಕೊಂಡು, ಮುಖವನ್ನು ಒರಿಸಿಕೊಂಡು, ಆಯೇಷೆಯು ದಾಸಿಯನ್ನು ಕುರಿತು–

ಆಯೇಷೆ—ಮೋತೀ, ನೀನು ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದೆ?

ಮೋತಿ—ಸರಕಾರ, ಎಲ್ಲಿಗೂ ಹೋಗಿಲ್ಲ ಇಲ್ಲಿಯೇ ಇದ್ದೇನೆ.

ಆಯೇಷೆ—ನನಗೆ ಕನಸು ಬಿದ್ದಿತ್ತು, ನನ್ನನ್ನು ಯಾರೋ ಮುತ್ತಿಗೆ ಹಾಕಿದಂತೆ ಆಗಿತ್ತು, ನನ್ನ ಮೈಗೆ ಏನೋ ತಣ್ಣಗೆ ಹತ್ತುತ್ತಿತ್ತು ಇಂಥ ಸ್ಥಿತಿಯಲ್ಲಿ ಮೋತೀ, ನೀನೇಕೆ ನನ್ನ ಮೈಮೇಲೆ ಕೈಯಿಟ್ಟಿದ್ದೆ?

ಮೋತಿ—ನಾನು ನಿಮ್ಮ ಮೈಮೇಲೆ ಕೈ ಇಟ್ಟಿದ್ದಿಲ್ಲ

ಆಯೇಷೆ—ಹಾಗಾದರೆ ಮತ್ತೆ ಯಾರಾದರೂ ಇಲ್ಲಿಗೆ ಬಂದಿದ್ದರೇನು?

ಮೋತಿ—ಹೌದು, ಸಣ್ಣ ನವಾಬ ಸಾಹೇಬರು ಬಂದಿದ್ದರು.

ದಾಸಿಯು ಈ ಮಾತನ್ನು ಕೇಳಿದ ಕೂಡಲೆ ಆಯೇಷೆಯು ಸಿಟ್ಟಿಗೆದ್ದ ನಾಗರ ಹಾವಿನಂತೆ ತಳಮಳಿಸಹತ್ತಿದಳು. ಆಕೆಯು ದಾಸಿಯನ್ನು ಕುರಿತು—ಏನಂದಿ? ನವಾಬ ಸಾಹೇಬರು ಬಂದಿದ್ದರ್ರೋ? ನಾನು ನಿದ್ದೆ ಹತ್ತಿ ಮಲಗಿದ್ದೆನು; ನನ್ನ ಹೊತ್ತುಕೊಂಡ ವಸ್ತ್ರವು ಅಸ್ತವ್ಯಸ್ತವಾಗಿ ಬಿದ್ದಿತ್ತು. ಇಂಥ ಸ್ಥಿತಿಯಲ್ಲಿ ಅವರು ನನ್ನ ಕೋಣೆಯಲ್ಲಿ ಯಾಕೆ ಬಂದಿದ್ದರು? ಅವರು ಇಲ್ಲಿ ಬಂದು ಏನು ಮಾಡಿದರು? ಹೇಳು, ಬೇಗನೆ ಹೇಳು, ಈಗ ಅವರು ಎಲ್ಲಿರುವರು? ಎನ್ನಲು, ಮೋತಿಯು ತನ್ನ ಒಡತಿಯ ಈ ಸ್ಥಿತಿಯನ್ನು ನೋಡಿ ಬೆದರಿದಳು. ಅಂಜುತ್ತಲೇ ಆಕೆಯು ಆಯೇಷೆಯನ್ನು ಕುರಿತು—ಸರಕಾರ, ಕ್ಷಮಿಸಬೇಕು. ಅವರು ಇಲ್ಲಿಗೆ ಬಂದು ಏನು ಮಾಡಿದ ರೆಂಬದನ್ನು ನನಗೆ ಹೇಳಲಿಕ್ಕೆ ಪರವಾನಿಗಿಯಿಲ್ಲ, ನವಾಬ ಸಾಹೇಬರು ಇಲ್ಲಿಯೇ ತೋಟ ದಲ್ಲಿರುವಂತೆ ನನಗೆ ಕಾಣುತ್ತದೆ, ಅನ್ನಲು, ಆಯೇಷೆಯು ಕೂಡಲೆ ಸಿಟ್ಟಿನಿಂದ ಎದ್ದು ನಿಂತಳು. ಸಿಟ್ಟಿನಿಂದ ಆಕೆಯ ಕೆಂದುಟಿಗಳು ನಡುಗುತ್ತಿದ್ದವು. ಆಕೆಯು ಅದೇ ನಿದ್ದೆ ಮಾಡಿ ಎದ್ದದ್ದರಿಂದ ಆಕೆಯ ಕಣ್ಣುಗಳು ಅಲ್ಪ ಸ್ವಲ್ಪ ಕೆಂಪಗೆ ಆಗಿದ್ದವು. ಅದರಲ್ಲಿ ಉಸ್ಮಾನನ ದುರ್ವರ್ತನದ ಕಲ್ಪನೆಯಿಂದ ಆಕೆಯು ಸಿಟ್ಟಿಗೆದ್ದಿರಲು, ಆಕೆಯ ಕಣ್ಣುಗಳು ಕೆಂಡದಂತಾದವು! ಆಕೆಯ ಕೋಮಲಾಂಗವು ಕಂಪಿಸುತ್ತಲಿತ್ತು. ಈ ಕ್ರುದ್ಧಾವಸ್ಥೆಯಲ್ಲಾದರೂ ಆಯೇಷೆಯ ಸೌಂದರ್ಯದಲ್ಲಿ ಕೊರತೆಯುಂಟಾಗಿದ್ದಿಲ್ಲ. ಆಯೇಷೆಯು ಮತ್ತೆ ತನ್ನ ದಾಸಿಯನ್ನು ಕುರಿತು—ಮೋತೀ, ಅದನ್ನು ಹೇಳಲಿಕ್ಕೆ ನಿನಗೆ ಪರವಾನಿಗೆಯಿಲ್ಲವೋ? ಏಕಾಂತದಲ್ಲಿ ನಿದ್ದೆಹತ್ತೀ ಮಲಗಿದ್ದ ನನ್ನನ್ನು ನೋಡಿ ನವಾಬ ಸಾಹೇಬರು ಕ್ಷುದ್ರ ಮನುಷ್ಯರಂತೆ ವಿಕಾರವಶನಾಗಿ ನನ್ನನ್ನು ಮುಟ್ಟಿದರೋ ಏನು? ನಡೆ ಹಾಗಾದರೆ, ಈಗ ಅವರು ಎಲ್ಲಿ ಇದ್ದಾರೆ ನೋಡೋಣ.

ಮೋತಿಯು ಉದ್ಯಾನದಲ್ಲಿ ಅತ್ತಿತ್ತ ನೋಡುತ್ತಿರಲು, ಉಸ್ಮಾನನು ಪುಷ್ಕರಣಿಯಲ್ಲಿ ಕೈಕಾಲುಗಳನ್ನು ತೊಳಕೊಂಡು, ಒಂದು ವೃಕ್ಷದ ಬುಡದಲ್ಲಿ ಕುಳಿತುಕೊಂಡಿದ್ದನು. ಅದನ್ನು ನೋಡಿ ದಾಸಿಯು ಆಯೇಷೆಗೆ—ಅದೋ, ನೋಡಿರಿ, ನವಾಬ ಸಾಹೇಬರು ಪುಷ್ಕರಣಿಯ ದಂಡೆಯಲ್ಲಿ ಕುಳಿತುಕೊಂಡಿರುತ್ತಾರೆ, ಎಂದು ಬೆರಳುಮಾಡಿ ತೋರಿಸಲು, ಆಯೇಷೆಯು ಆತುರದಿಂದ ಅತ್ತ ಕಡೆಗೆ ಹೊರಟಳು. ಆಕೆಯ ನೂಪುರದ ಮಂಜುಲ ಧ್ವನಿಯು ಉಸ್ಮಾನನ ಕಿವಿಗೆ ಬೀಳಲು, ಆಯೇಷೆಯು ಇನ್ನೂ ದೂರವಿದ್ದರೂ ಆಕೆಯ ಸನ್ಮಾನಕ್ಕಾಗಿ ಉಸ್ಮಾನನು ಎದ್ದು ನಿಂತುಕೊಂಡನು. ಕ್ರೋಧ ಸಂತಪ್ತಳಾದ ಆಯೇಷೆಯು ಖಾನನ ಬಳಿಗೆ ಬಂದಕೂಡಲೆ ಆತನನ್ನು ಕುರಿತು—''ನವಾಬ ಸಾಹೇಬರೆ, ನಿಮ್ಮ ಮನಸ್ಸಿನ ಬಯಕೆಯನ್ನು ಪೂರ್ಣ ಮಾಡಿಕೊಂಡಿರಾ? ನಾನು ನಿದ್ದೆ ಹತ್ತಿ ಮಲಗಿರುವಾಗ ನನ್ನ ಮೈಮೇಲಿನ ವಸ್ತ್ರಗಳು ಅಸ್ತವ್ಯಸ್ತವಾಗಿರಲು, ನೀವು ನನ್ನ ಕೋಣೆಯಲ್ಲಿ ಬಂದಿರಾ? ಇಲ್ಲಿಯವರೆಗೆ ನಾನು ನಿಮ್ಮನ್ನು ಬಹು ದೊಡ್ಡ ಮನುಷ್ಯರೆಂತಲೂ, ಸಂಭಾವಿತರೆಂತಲೂ ತಿಳಿದಿದ್ದೆನು; ಆದರೆ ಇಂದು ನಿಮ್ಮ ಸ್ವರೂಪವನ್ನು ಹೊರಗೆಡವಿ, ನಿಮ್ಮ ಕೀರ್ತಿಗೆ ಕಲಂಕವನ್ನುಂಟುಮಾಡಿಕೊಂಡಿರಿ, ಎಂದು

ನುಡಿಯುತ್ತಿರುವಾಗ, ಆಯೇಷೆಯ ಉಗ್ರ ಮುದ್ರೆಯನ್ನು ಖಾನನು ನೋಡದಾದನು. ಆತನು ಕೆಳಗೆ ಮೋರೆ ಮಾಡಿಕೊಂಡು ಶಾಂತಮುದ್ರೆ ಯಿಂದ ಆಯೇಷೆಯನ್ನು ಕುರಿತು—ನಬಾಬ ಕುವರೀ, ನಾನಾಗಿ ನಿನ್ನ ಕೋಣೆಯಲ್ಲಿ ಬರಲಿಲ್ಲ, ಅಂಥ ಅನಿರ್ವಾಹ ಪ್ರಸಂಗವೇ ಒದಗಿದ್ದರಿಂದ ನಾನು ನಿನ್ನ ಕೋಣೆಯಲ್ಲಿ ಬರಬೇಕಾಯಿತು.

ಆಯೇಷೆ—ಅದೆಂಥ ಅನಿರ್ವಾಹ ಪ್ರಸಂಗವೋ ನಾನರಿಯೆ! ನೀವಾಗಿ ಕೋಣೆಯೊಳಗೆ ಬರ್ರಿ, ಎರಡನೆಯವರ ಮಾತಿನಮೇಲಿಂದ ಬರ್ರಿ; ಆದರೆ ಒಬ್ಬಳೇ ಹೆಂಗಸು ನಿದ್ದೆಹತ್ತಿ ಮಲಗಿರುವಾಗ ಕೋಣೆಯೊಳಗೆ ಬರುವದು ಎಲ್ಲಿಯ ರೀತಿಯು? ಖಾನಸಾಹೇಬ ನೀವು ಕೋಣೆಯಲ್ಲಿ ಬಂದಿರಷ್ಟೇ ಅಲ್ಲ, ನನ್ನ ಮೈಯನ್ನು ಮುಟ್ಟಿದಿರಿ?

ಉಸ್ಮಾನ—ಆಯೇಷೆ, ನಿಜವಾದ ಸಂಗತಿಯನ್ನು ತಿಳಕೊಳ್ಳದೆ ನೀನೇಕೆ ನನಗೆ ಇಲ್ಲದ ಆರೋಪ ಹೊರಿಸುತ್ತೀ? ಉಸ್ಮಾನನು ಅಡ್ಡ ಹಾದಿಯನ್ನು ಎಂದಿಗೂ ತುಳಿಯನು; ಸುಮ್ಮನೆ ಯಾಕೆ ಸಿಟ್ಟಾಗುತ್ತೀ?

ಆಯೇಷೆ—ಸುಳ್ಳಾಡಲಿಕ್ಕೂ ನಿಮಗೆ ನಾಚಿಕೆ ಬರುವದಿಲ್ಲವೇ? ಈಗ ನೀವು ನವಾಬರಿರುತ್ತೀರಿ; ಯಾವತ್ತು ಮಹಾಲಿನ ಮೇಲೆ ನಿಮ್ಮ ಅಧಿಕಾರವಿರುತ್ತದೆ; ನೀವು ಏನು ಮಾಡಿದರೂ ಜನರು ಕೈ ಹಿಡಿಯುವ ಹಾಗಿಲ್ಲ; ಹೀಗಿರುವದೆಂದು ತಿಳಿದು ನೀವು ಅಂತರ್ಗೃಹದಲ್ಲಿದ್ದ ಹೆಣ್ಣುಮಕ್ಕಳ ಮೇಲೆ ಬಲಾತ್ಕಾರ ಮಾಡಹತ್ತಿದರೆ, ನವಾಬ ಸಾಹೇಬ, ನಿಮ್ಮ ನವಾಬಗಿರಿಯು ನಾಲ್ಕು ದಿನಗಳಲ್ಲಿ ಮಣ್ಣುಗೂಡಿ ಹೋದೀತೆಂಬದನ್ನು ಚೆನ್ನಾಗಿ ನೆನಪಿನಲ್ಲಿಡಿರಿ.

ಉಸ್ಮಾನ—ಆಯೇಷೆ, ನೀನು ಹೀಗೆ ನಿಷ್ಠುರ ಮಾತುಗಳನ್ನಾಡಿ ನಿಷ್ಕಾರಣವಾಗಿ ನನ್ನ ಮನಸ್ಸನ್ನು ನೋಯಿಸಬೇಡ. ನಾನು ಎಷ್ಟು ಮಾತ್ರವೂ ಅಡ್ಡಹಾದಿಯನ್ನು ತುಳಿದಿರುವ ದಿಲ್ಲೆಂದು ಇನ್ನೊಮ್ಮೆ ಸ್ಪಷ್ಟವಾಗಿ ಹೇಳುತ್ತೇನೆ; ಆದರೆ ನಾನು ಒಳಗೆ ಯಾಕೆ ಬಂದೆ ನೆಂಬದನ್ನೂ, ನಾನು ಒಳಗೆ ಬಂದು ಏನು ಮಾಡಿದೆನೆಂಬದನ್ನೂ ನಾನು ಹೇಳಲಾರೆನು, ನಿನ್ನ ದಾಸಿಯೂ ಹೇಳಲಾರಳು!

ಆಯೇಷೆ—ಏನಂದಿರಿ? ನೀವು ಹೇಳಲಾರಿರಿ? ದಾಸಿಯೂ ಹೇಳಲಾರಳೇ? ಅದೇಕೆ? ನೀವು ಒಳಗೆ ಯಾಕೆ ಬಂದಿರೆಂಬದನ್ನೂ, ಒಳಗೆ ಬಂದು ಏನು ಮಾಡಿದಿರೆಂಬದನ್ನೂ ನೀವೇ ಬಾಯಿಬಿಟ್ಟು ಹೇಳಲಿಕ್ಕೇ ಬೇಕು, ಇಲ್ಲದಿದ್ದರೆ ಆಯೇಷೆಯು ಜೀವಿಸಲಾರಳು.

ಉಸ್ಮಾನ—(ಬಹಳ ಹೊತ್ತು ವಿಚಾರಿಸಿ) ಆಯೇಷೆ, ಇದೇನು ನಿನ್ನ ಹಟಮಾರಿತನವು! ನಾನು ಯಾವ ಮಾತನ್ನು ಎಂದೂ ನಿನ್ನ ಮುಂದೆ ಹೇಳಬಾರದೆಂದು ಮಾಡಿದ್ದೆನೊ, ಆ ಮಾತನ್ನು ನಿನ್ನ ಸಮಾಧಾನಕ್ಕಾಗಿ ಈಗ ಹೇಳಬೇಕಾಯಿತು. ಉಪಾಯವಿಲ್ಲ! ಒಳ್ಳೇದು ನಡೆ ಆಯೇಷೆ, ನನ್ನ ಸಂಗಡ ನಡೆ.

ಖಾನನು ಮುಂದಕ್ಕೆ ಸಾಗಹತ್ತಿದನು. ಆಯೇಷೆಯು ಆತನನ್ನು ಅನುಸರಿಸಿ ನಡೆದಳು. ಕೃಷ್ಣಸರ್ಪದ ಛಿನ್ನ, ವಿಛಿನ್ನವಾದ ಶರೀರವು ಬಿದ್ದಲ್ಲಿಗೆ ಹೋದಬಳಿಕ ಉಸ್ಮಾನನು ಆಯೇಷೆ

ಯನ್ನು ಕುರಿತು—ಇತ್ತ ನೋಡು, ಆಯೇಷೆ, ಇಲ್ಲಿ ಏನು ಬಿದ್ದಿರುತ್ತದೆಂಬದನ್ನು ನೋಡು, ಎಂದು ಹೇಳಿದನು. ಛಿನ್ನ ವಿಛಿನ್ನವಾದ ಆ ಕೃಷ್ಣಸರ್ಪವನ್ನು ನೋಡಿದಕೂಡಲೆ ಆಯೇಷೆಯು ಅಂಜಿ ಹಿಂದಕ್ಕೆ ಸರಿದು—ಅವ್ವಯ್ಯ, ಇದು ಭಯಂಕರವಾದ ಕೃಷ್ಣಸರ್ಪವು! ಇದರ ಅವಸ್ಥೆಯನ್ನು ಹೀಗೆ ಯಾರು ಮಾಡಿದರು? ನವಾಬ ಸಾಹೇಬ, ನಿಮ್ಮ ಉಡಿಗೆ-ತೊಡಿಗೆಗಳು ರಕ್ತ ಮುಣುಗಿರುವದನ್ನು ನೋಡಿದರೆ, ನೀವೇ ಈ ಸರ್ಪವನ್ನು ಕೊಂದಿರೆಂಬಂತೆ ಕಾಣುತ್ತದೆ. ಅದು ನೋಡಿರಿ, ಇನ್ನೂ ಅದರ ಜೀವವು ಹೋಗಿರುವದಿಲ್ಲ. ನಿಮ್ಮನ್ನು ನೋಡಿ ಸಿಟ್ಟಿನಿಂದ ಅದು ಹ್ಯಾಗೆ ಬಾಯಿ ತೆರೆಯುತ್ತದೆ! ಅನ್ನಲು ಖಾನನು— ಆಯೇಷೆ, ಇದ್ದ ಸಂಗತಿಯನ್ನು ಹೇಳುತ್ತೇನೆ ಕೇಳು. ನಿನ್ನ ಪ್ರಕೃತಿಯು ನೆಟ್ಟಗಿಲ್ಲೆಂದು ನಿನ್ನ ತಾಯಿಯು ನನ್ನ ಮುಂದೆ ಹೇಳಲು, ನನಗೆ ಬಹಳ ಅಸಮಾಧಾನವಾಗಿ, ಕೂಡಲೆ ನಾನು ನಿನ್ನನ್ನು ಕಾಣುವದಕ್ಕಾಗಿ ನಿನ್ನ ಕೋಣೆಗೆ ಬಂದೆನು; ಆದರೆ ನೀನು ನಿದ್ದೆ ಹತ್ತಿ ಮಲಗಿದ್ದೆ. ಕೂಡಲೆ ನಾನು ಹೊರಗೆ ನಿಂತು ಆಲೋಚಿಸ ಹತ್ತಿದೆನು. ನಿನ್ನನ್ನು ಎಚ್ಚರಗೊಳಿಸಲಿಕ್ಕೆ ಸಂಕೋಚವಾಗತೊಡಗಿತು. ಕೆಲವು ಸಂಗತಿಗಳಲ್ಲಿ ನಿನ್ನ ಅಭಿಪ್ರಾಯವನ್ನು ಕೇಳಿಕೊಳ್ಳಬೇಕಾಗಿತ್ತು. ಹೀಗೆ ನಾನು ಹೊರಗೆ ನಿಂತು ಆಲೋಚಿಸುತ್ತ ನಿನ್ನ ಕಡಿಗೆ ನೋಡುತ್ತಿರಲು, ನಿನ್ನ ಎದೆಯ ಮೇಲೆ ಏನೋ ಕರ್‍ರಗೆ ಬಿದ್ದಿರುವಂತೆ ನನಗೆ ಕಂಡಿತು. ನನಗೆ ಮೊದಲು ಅದು ಹಾವಿನಂತೆ ತೋರಲೇ ಇಲ್ಲ. ನಿನ್ನ ಕೇಶಗಳದೊಂದು ಸೆಳಕು ಬಿದ್ದಿರಬಹುದೆಂದು ತರ್ಕಿಸಿದೆನು; ಆದರೆ ಅಷ್ಟರಲ್ಲಿ ಆ ಕರಿಯ ಪದಾರ್ಥವು ಸರಿದಾಡಿದಂತೆ ತೋರಲು, ಅದೇನಿರುತ್ತದೆ, ಚನ್ನಾಗಿ ಪರೀಕ್ಷಿಸಿ ಬಾ ಎಂದು ನಿನ್ನ ಈ ದಾಸಿಯನ್ನು ಒಳಗೆ ಕಳಿಸಿದೆನು. ಆಕೆಯು ಹೊರಗೆ ಬಂದು ಅದು ಕೃಷ್ಣಸರ್ಪವೆಂದು ಹೇಳಲು, ನಾನು ಉಪಾಯವಿಲ್ಲದೆ ಕೋಣೆಯೊಳಗೆ ಹೋಗಬೇಕಾಯಿತು. ನೀನು ಸ್ವಲ್ಪ ಅಲ್ಲಾಡಿದ್ದರೆ ಸರ್ಪವು ನಿಶ್ಚಯವಾಗಿ ಕಚ್ಚುವಂತೆ ತೋರಿತು. ಕೂಡಲೆ ನಾನು ಒಳಗೆ ಹೋಗಿ ನಿನ್ನ ಅಂಗಸ್ಪರ್ಶ ಮಾಡದೆ ಸರ್ಪದ ಬಾಲವನ್ನು ಹಿಡಿದು ಅದನ್ನು ಈ ಸ್ಥಿತಿಯಲ್ಲಿ ಗೊತ್ತಿಗೆ ಹಚ್ಚಿದೆನು. ಆಯೇಷೆ ಇದರಲ್ಲಿ ನನ್ನ ದುರಾಲೋಚನೆಯಾಗಲಿ, ದುರ್ವ್ಯವಹಾರವಾಗಲಿ ಏನಿರುತ್ತದೆ ಹೇಳು, ನೋಡೋಣ! ನೀನು ನನ್ನ ಮೇಲೆ ಹೊರಿಸಿದ ಅಪವಾದಗಳು ತೀರ ಸುಳ್ಳು ಇರುತ್ತವೆ. ಅಂಥ ನೀಚತನಕ್ಕೆ ನಾನು ಎಂದಿಗೂ ಹೋಗಲಾರೆನು.

ಈಗ ಆಯೇಷೆಯ ಕಣ್ಣುಗಳು ನಿಚ್ಚಳವಾಗಿ ತೆರೆದವು. ಆ ಸರಳ ಹೃದಯದ ಬಾಲೆಯು ಆಕಾಶದ ಕಡೆಗೆ ಮುಖವೆತ್ತಿ ದೇವರನ್ನು ಕುರಿತು—ಹೇ, ದಯಾಮಯ ಪ್ರಭುವೇ, ಪರಮೇಶ್ವರಾ, ನಿನ್ನ ಲೀಲೆಯು ಅಗಾಧವಾದದ್ದು. ನಿನ್ನ ಸರ್ವಶಕ್ತಿಯನ್ನು ಮನುಷ್ಯನು ಕಲ್ಪಿಸಲಾರನು; ಆದರೆ ದೀನ ಬಂಧುವೇ, ನೀನು ಉಸ್ಮಾನನ ಕೈಯಿಂದ ನನ್ನ ಪ್ರಾಣವನ್ನು ಏಕೆ ಬದುಕಿಸಿದೆ? ನನ್ನಿಂದ ಯಾವ ಮಹತ್ಕೃತ್ಯವು ಜಗತ್ತಿನಲ್ಲಿ ಆಗಬೇಕಾಗಿದೆ? ಅದಿರಲಿ, ಉಸ್ಮಾನನ ಸಂಕಟನಿವಾರಣವಾದದ್ದು ಬಹಳ ನೆಟ್ಟಗಾಯಿತು, ಎಂದು ನುಡಿಯುವಾಗ ಆಯೇಷೆಯ ಕಣ್ಣೊಳಗಿಂದ ನೀರುಗಳು ಸುರಿಯಹತ್ತಿದವು. ಆಕೆಯು ಉಸ್ಮಾನನ ಬಳಿಗೆ ಬಂದು ಆತನ ಕೈಯನ್ನು ಹಿಡಿದುಕೊಂಡು—ಅಣ್ಣಾ ಉಸ್ಮಾನ, ಈ ಕ್ಷುದ್ರ ಸ್ತ್ರೀಯ ಸಲುವಾಗಿ

ನಿನ್ನ ಪ್ರಾಣವನ್ನು ಸಂಕಟಕ್ಕೆ ಗುರಿಮಾಡಿದ್ದು ಯೋಗ್ಯವಲ್ಲ. ನನ್ನ ಮೈಮೇಲೆ ಆ ಸರ್ಪವು ಮಲಗಿಕೊಂಡದ್ದರಿಂದ ನನಗೆ ತಣ್ಣಗೆ ಹತ್ತಿತೆಂದು ಈಗ ನನಗ ಗೊತ್ತಾಯಿತು; ಆದರೆ ನಿದ್ದೆಗಣ್ಣಿನಲ್ಲಿ ಯಾರೋ ನನ್ನ ಮೈಮೇಲ ಕೈಯಿಟ್ಟರೆಂದು ನಾನು ತಿಳಕೊಂಡೆನು. ಅಣ್ಣಾ ಉಸ್ಮಾನ ನಾನು ಹಿಂದು-ಮುಂದಿನ ವಿಚಾರವಿಲ್ಲದೆ ನಿನಗೆ ಬಾಯಿಗೆ ಬಂದಹಾಗೆ ಮಾತಾಡಿದ್ದು ಅಪರಾಧವಾಯಿತು. ನನ್ನನ್ನು ಕ್ಷಮಿಸಬೇಕು. ನನ್ನ ಮೇಲೆ ನಿನ್ನ ಪ್ರೇಮವು ನಿಸ್ಸೀಮವಾಗಿರುತ್ತದೆ. ಇದನ್ನು ವರ್ಣಿಸುವ ಯೋಗ್ಯತೆಯು ನನಗಿಲ್ಲ. ಆದರೆ ಅಣ್ಣಾ ಉಸ್ಮಾನ, ನನ್ನ ಮಹಾಪರಾಧವನ್ನು ಕ್ಷಮಿಸುವೆಯಷ್ಟೆ! ಎಂದು ನುಡಿದು, ಉಸ್ಮಾನನ ಪಾದಗಳನ್ನು ಹಿಡಕೊಳ್ಳಲು, ಉಸ್ಮಾನನು ಆಯೇಷೆಯನ್ನು ಪ್ರೇಮದಿಂದ ಹಿಡಿದೆತ್ತಿ—''ಇದರಲ್ಲಿ ಅಪರಾಧವೇತರದು, ಕ್ಷಮೆಯೇತರದು? ಆಯೇಷೆ, ಹೀಗೆ ಯಾಕೆ ಮಾಡುತ್ತೀ? ಕಾಗೆ ಕೂಡಲಿಕ್ಕೂ ಟೊಂಗೆ ಮುರಿಯಲಿಕ್ಕೂ ಗಂಟು ಬಿದ್ದಂತೆ, ಅಕಸ್ಮಾತ್ತಾಗಿ ಒದಗಿದ ಪ್ರಸಂಗಕ್ಕಾಗಿ ಇಷ್ಟು ಹೇಳಿಕೊಳ್ಳುವದೇಕೆ? ನಿನಗೆ ನಾನೇನು ಪರಕೀಯನೇ? ನಿನ್ನ ಕಠೋರ ಶಬ್ದಗಳು ಕೂಡ ನನ್ನ ಕಿವಿಗಳಲ್ಲಿ ಅಮೃತವನ್ನು ಸ್ರವಿಸುತ್ತಿದ್ದವು. ನಿನ್ನ ಮಾತಿನಿಂದ ನನಗೆ ಸಿಟ್ಟು ಬಂದಿರುವದಿಲ್ಲ. ಆಯೇಷೇ, ನೀನು ನನ್ನನ್ನು ಹೀನಕೃತ್ಯ ಮಾಡುವವನೆಂದು ತಿರಸ್ಕರಿಸಿದ್ದರಿಂದ ಮಾತ್ರ ನನಗೆ ಸ್ವಲ್ಪ ಅಸಮಾಧಾನವಾಗಿದೆ.

ಆಯೇಷೆಯು ಮೋರೆಯನ್ನು ತಗ್ಗಿಸಿಕೊಂಡು ಖಾನನ ಮಾತುಗಳನ್ನು ಸುಮ್ಮನೆ ಕೇಳುತ್ತಿದ್ದಳು. ಮತ್ತೆ ಉಸ್ಮಾನನು ಆಯೇಷೆಯನ್ನು ಕುರಿತು—ಆಯೇಷೇ, ಹಿಂದಕ್ಕೆ ನೀನು ಕಾರಾಗೃಹದಲ್ಲಿ ಜಗತ್ಸಿಂಗನು, ನನ್ನ ಪತಿಯೆಂದು ಹೇಳಿದಾಗಿನಿಂದ ನಾನು ಬಹು ಕಷ್ಟದಿಂದ ಕಾಲಹರಣ ಮಾಡುತ್ತಿರುವೆನು. ಕ್ಷಮೆಯಗೋಸ್ಕರ ನೀನು ನನ್ನನ್ನು ಪ್ರಾರ್ಥಿಸಬೇಡ. ನಾನು ಹೇಳುವ ಮಾತುಗಳನ್ನು ಲಕ್ಷಪೂರ್ವಕವಾಗಿ ಕೇಳು. ಆಮೇಲೆ ನನ್ನನ್ನು ತಿರಸ್ಕಾರದ ದೃಷ್ಟಿಯಿಂದ ನೋಡು. ನಾನು ಬದುಕಲಿಕ್ಕೂ ಸಾಯಲಿಕ್ಕೂ ನಾನು ಸ್ವರ್ಗಸುಖವನ್ನು ಭೋಗಿಸಲಿಕ್ಕೂ- ದುಃಖದಿಂದ ಕೊರಲುವದಕ್ಕೂ ನೀನು ಕಾರಣಳಾಗಿರುತ್ತೀ. ಎಲ್ಲ ನಿನ್ನ ಕೈಯಲ್ಲಿರುತ್ತದೆ. ನಾನು ಕಗ್ಗನಂತೆ ವಿಕಾರವಶನಾಗಿ ನಿನ್ನ ಪ್ರಾಪ್ತಿಯ ಹಾದಿಯನ್ನು ನೋಡುವ 'ದಿಲ್ಲ. ಕೇವಲ ವಿಷಯ ಸುಖಭೋಗವೇ ನನ್ನ ಉದ್ದೇಶವಾಗಿದ್ದರೆ, ಜುಲುಮೆಯಿಂದಾದರೂ ನಿನ್ನ ಲಗ್ನ ಮಾಡಿ ಕೊಳ್ಳುತ್ತಿದ್ದೆನು. ನನ್ನ ತಂದೆಯಾದ ಕಾತಲೂಖಾನರವರ ಮನಸ್ಸಿನಲ್ಲಿ ನಮ್ಮಿಬ್ಬರ ವಿವಾಹವಾಗುವದು ಸಂಪೂರ್ಣವಾಗಿತ್ತು. ನಿನ್ನ ತಾಯಂದಿರಾದ ಕಾಶ್ಮೀರೀ ಬೇಗಮುರವರು ಈಗಲೂ ನಿನ್ನೊಡನೆ ನನ್ನ ಲಗ್ನವಾಗಬೇಕೆಂದು ಇಚ್ಛಿಸುತ್ತಾರೆ. ಇಷ್ಟು ಅನುಕೂಲವಾಗಿರಲು, ನಿನ್ನ ಪ್ರಾಪ್ತಿಗಾಗಿ ನಾನು ಇಷ್ಟು ಕಷ್ಟಪಡುವದೇಕೆ? ನನ್ನ ತಂದೆಗೆ ಹಲವು ಜನ ಸುಂದರ ಬೇಗಮುರು ಇದ್ದರಲ್ಲದೆ, ಬೇರೆ ಉಪಪತ್ನಿಯರೂ ಬಹುಜನರು ಇದ್ದರೆಂಬದನ್ನು ನೀನು ಬಲ್ಲೆ. ಸದ್ಯಕ್ಕೆ ನನ್ನ ಅಣ್ಣನಾದ ಸುಲೇಮಾನಖಾನನು ನಕ್ಷತ್ರಪತಿಯಂತೆ, ಸದಾ ಯುವತಿಯರ ಹಿಂಡಿನ ನಡುವೆ ವಿಲಾಸ ಭೋಗಿಸುತ್ತಿರುವದನ್ನು ನೀನು ಕಣ್ಣಿನಿಂದ ನೋಡುತ್ತಿರುವೆ, ಹೀಗೆ ಮಾಡಬೇಕೆಂದರೆ ನನಗೆ ಸುಂದರ ಸ್ತ್ರೀಯರ ಕೊರತೆಯಿರುವದೆಯೇ?

ಆದರೆ ಕೇವಲ ನಿನ್ನ ಸಲುವಾಗಿ ಸರ್ವಸ್ವವನ್ನು ಅರ್ಪಿಸಿ ನಿನ್ನ ಪ್ರಾಪ್ತಿಯ ಹಾದಿಯನ್ನು ನೋಡುತ್ತಿರುವ ನಾನು, ಈವರೆಗೆ ಬ್ರಹ್ಮಚರ್ಯದಿಂದಲೇ ಇರುತ್ತೇನೆ. ನಿನ್ನ ಪ್ರಾಪ್ತಿಯು ಆಗದೆಯಿದ್ದ ಪಕ್ಷದಲ್ಲಿ ಬ್ರಹ್ಮಚರ್ಯದಿಂದಲೇ ಕಾಲಹರಣ ಮಾಡುವೆನು. ಆಯೇಷೇ, ವಿಚಾರಮಾಡು. ನನ್ನ ಮಾತುಗಳು ಯಾವ ದೃಷ್ಟಿಯಿಂದಲೂ ಅಯೋಗ್ಯವಾದವುಗಳಲ್ಲ; ನಿನಗೆ ಅಹಿತಕಾರಕವಾದವುಗಳೂ ಅಲ್ಲ.

ಉಸ್ಮಾನನ ಈ ಮಾತುಗಳನ್ನು ಕೇಳಿ ಆಯೇಷೆಯು—ಉಸ್ಮಾನ, ನಿಜವಾಗಿ ನನ್ನ ಮೇಲೆ ನಿನ್ನ ಅನಂತ ಉಪಕಾರಗಳಿರುತ್ತವೆ. ಅಣ್ಣಾ, ನಿಜವಾಗಿ ನೀನು ಮಾನವಕೋಟಿಯೊಳಗಿನವನಲ್ಲ. ಮಾನವರ ಕ್ಷುದ್ರ ವಿಚಾರಗಳಿಂದ ನಿನ್ನ ಮನಸ್ಸು ಬಹುದೂರ ಹೋಗಿರುತ್ತದೆ. ಇದನ್ನು ನಾನು ಇಂದಿನವರೆಗೆ ತಿಳಿದಿದ್ದಿಲ್ಲ; ಎಂದು ನುಡಿಯುತ್ತಿರಲು, ಉಸ್ಮಾನನು ನಡುವೆ ಬಾಯಿಹಾಕಿ— ಆಯೇಷೇ, ಸ್ವಲ್ಪ ನಿಲ್ಲು; ನಡುವೆ ಏನಾದರೂ ತಟ್ಟನೆ ಉತ್ತರ ಕೊಟ್ಟುಬಿಡಬೇಡ, ನಾನಾಡುವ ಮಾತುಗಳನ್ನು ಮೊದಲು ಚೆನ್ನಾಗಿ ಕೇಳಿಕೋ. ನನ್ನ ಮಾತಿನ ಭಾವವನ್ನು ಲೆಕ್ಕಿಸದೆ ''ಅಣ್ಣಾ ಅಣ್ಣಾ'' ಎಂದು ಕರೆಯುವದನ್ನು ನೋಡಿ ನನಗೆ ಬಹಳ ಅಸಮಾಧಾನವಾಗುತ್ತದೆ. ಎಲೈ ಕಲ್ಯಾಣಿಯೇ, ನೀನು ನನ್ನ ಪ್ರಾಣದ ಪ್ರಾಣವಾಗಿರುತ್ತೀ. ನಾನು ಹೀಗೆ ನಿನ್ನ ಕಾಲಲ್ಲಿ ಕ್ಷೀಣವಾಗುತ್ತ ಒಂದು ದಿನ ಬಿದ್ದು ಹೋಗುವದು ನಿನಗೆ ಯೋಗ್ಯವಾಗಿ ತೋರುತ್ತದೆಯೋ? ನಿನ್ನ ಅಪ್ರಾಪ್ತಿಯಿಂದ ಉತ್ಪನ್ನವಾಗುವ ಭಯಂಕರವಾದ ವಿರಹಾನಲದಲ್ಲಿ ನಾನು ದಗ್ಧವಾಗುತ್ತಿರುವದು ನಿನಗೆ ಸಮ್ಮತವಾಗಿರುತ್ತದೆಯೋ? ಎಲೈ ಹೃದಯೇಶ್ವರಿಯೇ, ನನ್ನ ಪ್ರೇಮಕ್ಕೆ ಪ್ರತಿಫಲವಾಗಿ ಪ್ರೇಮವು ದೊರೆಯುವದಿಲ್ಲವೆ? ನಿನ್ನ ಸಲುವಾಗಿ ಹೃದಯವನ್ನು ನಿವಾಳಿಸಿ ಒಗೆಯುವ ನನಗೆ ನಿನ್ನ ಹೃದಯದಲ್ಲಿ ಸ್ಥಾನವು ಸಿಗುವದಿಲ್ಲವೆ? ನೀನು ಇಷ್ಟು ನಿಷ್ಠುರಳಾಗಿರುವೆಯಾ? ಎಂದು ನುಡಿಯುತ್ತಿರುವ ಉಸ್ಮಾನನ ಕೈಯನ್ನು ಆಯೇಷೆಯು ಅತ್ಯಂತ ಆದರದಿಂದ ಹಿಡಕೊಂಡು– ಅಣ್ಣಾ ಉಸ್ಮಾನಾ, ನಿನ್ನ ಹಾಗೆ ಪ್ರೇಮ ಮಾಡುವವರನ್ನು ಈ ಜಗತ್ತಿನಲ್ಲಿ ಕಾಣುವದು ದುರ್ಲಭವೇ ಸರಿ. ಯಾವ ಸ್ತ್ರೀಯನ್ನು ಇಚ್ಛಿಸಿ ನೀನು ಪ್ರೇಮ ಮಾಡುತ್ತಿರುವೆಯೋ ಆಕೆಯು ನಿಜವಾಗಿ ಧನ್ಯಳು! ಉಸ್ಮಾನ, ನೀನು ಮನುಷ್ಯನಲ್ಲ, ದೇವರು! ಆದರೆ ಉಸ್ಮಾನ, ನಾನೊಬ್ಬ ಕ್ಷುದ್ರ ಸ್ತ್ರೀಯು. ನನ್ನ ಮೇಲೆ ನೀನು ಪ್ರೇಮ ಮಾಡಿದ್ದು ಅನ್ಯಾಯವಾಯಿತು. ನಿನ್ನ ಈ ದೃಢವಾದ ಪ್ರೇಮಕ್ಕೆ ನಾನು ಅಪಾತ್ರಳಿರುತ್ತೇನೆ. ಉಸ್ಮಾನ, ನನ್ನ ಹೃದಯವನ್ನು ನಿನಗೆ ಕೊಡುವ ಶಕ್ತಿಯು ನನ್ನಲ್ಲಿ ಇರುತ್ತಿದ್ದರೆ, ನಾನು ಅವಶ್ಯವಾಗಿ ಕೊಡುತ್ತಿದ್ದೆನು; ನನ್ನ ದೇಹವನ್ನು ನಿನ್ನಾಧೀನವಾಗಿ ಮಾಡಿಬಿಡುತ್ತಿದ್ದೆನು; ಆದರೆ ಹಾಯ್ ಹಾಯ್! ಉಸ್ಮಾನ, ನಾನು ಸತ್ತಿದ್ದರೆ ಬಹಳ ನೆಟ್ಟಗಾಗುತ್ತಿತ್ತು! ಅಣ್ಣಾ, ನೀನು ಹಾವಿನ ದವಡೆಯೊಳಗಿಂದ ನನ್ನನ್ನು ಯಾಕೆ ಉಳಿಸಿದೆ? ನಾನು ಸತ್ತುಹೋಗಿದ್ದರೆ ಇದಕ್ಕೂ ಎಷ್ಟು ನೆಟ್ಟಗಾಗುತ್ತಿತ್ತಲ್ಲ! ಎಂದು ನುಡಿಯುತ್ತಿರುವಾಗ, ಆಯೇಷೆಯ ಮುಖದಿಂದ ಮಾತುಗಳು ಹೊರಡದಾದವು. ಆಕೆಯು ಕಣ್ಣು ಒರಿಸಿಕೊಳ್ಳುತ್ತ ಅಲ್ಲಿಂದ ಹೊರಟು ಹೋದಳು.

ಇದನ್ನು ನೋಡಿ ಉಸ್ಮಾನನ ಮಸ್ತಕಕ್ಕೆ ಸಿಡಿಲು ಬಡಿದಂತಾಯಿತು. ಆತನು ಮೂಢನಂತೆ ಸುಮ್ಮನೆ ನಿಂತುಬಿಟ್ಟನು. ಆತನು ತನ್ನೊಳಗೆ "ಯಾವಾಗಾದರೂ ಅದೇ ಮಾತು; ಅಂತಃಕರಣವನ್ನು ದಗ್ಧ ಮಾಡುವಂಥ ಮಾತುಗಳನ್ನೇ ಯಾವಾಗಾದರೂ ಆಯೇಷೆಯು ಆಡುವದು! ಹಾಯ್! ಹಾಯ್!! ನನ್ನ ಶರೀರವು ದಗ್ಧವಾಗಹತ್ತಿತು. ಈ ಪರಿಯಾಗಿ ಬಾಳುವದಕ್ಕಿಂತ ಸಾಯುವದು ಲೇಸು! ಏನು, ನಾನು ಸಾಯಬೇಕೆ? ನಾನು ಆತ್ಮಹತ್ಯವನ್ನು ಮಾಡಿಕೊಳ್ಳಲಾ? ಆತ್ಮಹತ್ಯೆಯೇ! ಛೀ! ಅದು ನನ್ನಂಥ ವೀರನಿಗೆ ಸಲ್ಲದು. ಅದು ಹೆಂಗಸರ ಕೆಲಸವು; ಹೇಡಿಗಳಿಗೆ ಸಲ್ಲತಕ್ಕದ್ದು. ನಾನು ರಣಾಂಗಣದಲ್ಲಿ ಶತ್ರುಗಳೊಡನೆ ಹೋರಾಡಿ ದೇಹವಿಡುವೆನು," ಎಂದು ನುಡಿದು ಹತಾಶನಾದ ಉಸ್ಮಾನನು ಖಿನ್ನ ಮುದ್ರೆಯಿಂದ ಹೊರಟುಹೋದನು.

## ರಾಜಲಕ್ಷ್ಮಿಯು

ಅನೇಕ ಆಪ್ತಸ್ವಜನರಿಂದಲೂ, ದಾಸ–ದಾಸಿಯರಿಂದಲೂ, ಆಳು–ಹೋಳುಗಳಿಂದಲೂ, ಅಸಂಖ್ಯ ಚದುರಂಗ ಸೇನೆಯಿಂದಲೂ ಕೂಡಿ ಅಂಬರಾಧೀಶ್ವರ ಮಾನಸಿಂಹ ಮಹಾರಾಜರು ಶ್ರೀ ಪುರುಷೋತ್ತಮನ ದರ್ಶನಕ್ಕಾಗಿ ಪುರೀ ಕ್ಷೇತ್ರಕ್ಕೆ ಬಂದು ಮುಟ್ಟಿದರು. ಅವರಿಗೆ ಇಳಿದುಕೊಳ್ಳುವದಕ್ಕಾಗಿ ಸಮುದ್ರ ತೀರದ ಒಂದು ವಿಸ್ತೀರ್ಣವಾದ ಬಯಲಿನಲ್ಲಿ ಅವರ ವಿಶಾಲವಾದ ಡೇರೆಗಳು ಹೊಡಿಸಲ್ಪಟ್ಟಿದ್ದವು. ಆ ಡೇರೆಗಳು ಹಲವು ವಿಧದ ಬಣ್ಣಗಳಿಂದ ನೋಡಲಿಕ್ಕೆ ಬಹು ಚಂದವಾಗಿದ್ದವು. ಅದರಲ್ಲಿ ಮಾನಸಿಂಹ ಮಹಾರಾಜರ ಹಾಗು ಅವರ ಪರಿವಾರದವರ ಸಲುವಾಗಿ ಹೊಡೆದಿದ್ದ ಡೇರೆಯಂತು ಬಹು ಮನೋಹರವಾಗಿತ್ತು, ಅದು ಬನಾತಿನ ಅರಿವೆಯದಿದ್ದು, ಅದರ ಮೇಲ್ಮಗ್ಗಲು ಸುವರ್ಣ ಕಳಸಗಳಿಂದ ಒಪ್ಪುತ್ತಿದ್ದದ್ದರಿಂದ ಬಹು ಶೋಭಾಯಮಾನವಾಗಿತ್ತು, ದಾಸ–ದಾಸಿಯರ ಸಲುವಾಗಿಯೂ, ಆಳು–ಹೋಳುಗಳ ಸಲುವಾಗಿಯೂ, ದಂಡಾಳುಗಳ ಸಲುವಾಗಿಯೂ, ಪಹಿಲವಾನರು– ಬಿಲ್ಲಾಳುಗಳು ಮೊದಲಾದವರ ಸಲುವಾಗಿಯೂ ಬೇರೆ ಬೇರೆ ರಾಹುಟಿಗಳು ಹೊಡೆಯಲ್ಪಟ್ಟಿದ್ದವು. ಆನೆ–ಕುದುರೆ–ಒಂಟೆಗಳ ಸಲುವಾಗಿಯೂ ಚಾಟು ಮಾಡಲ್ಪಟ್ಟಿತ್ತು, ಭಾಂಡಾರವನ್ನು ಒಂದು ವಿಸ್ತೃತವಾದ ತಂಬುವಿನಲ್ಲಿ ಸಂಚಯಿಸಿದ್ದು, ಬೇರೆ ಬೇರೆ ಪಾಕಶಾಲೆಗಳು ನಿರ್ಮಿಸಲ್ಪಟ್ಟಿದ್ದವು. ಈ ಮೇರೆಗೆ ಅರ್ಧ ಹರದಾರಿಯವರೆಗೆ .ಮಹಾರಾಜರ ಪರಿವಾರದ ವಸತಿಯಾಗಿತ್ತು, ನೋಡುವವರಿಗೆ ಅದೊಂದು ಸುಂದರವಾದ ಪಟ್ಟಣದಂತೆ ಕಾಣುತ್ತಿತ್ತು, ಮಹಾರಾಜರ ಸಂಗಡ ಮೂವರೇ ರಾಣಿಯರು ಬಂದಿದ್ದರು. ಅವರಲ್ಲಿ ಜೋಧಪುರದ ಮನೆತನದ ಉರ್ಮಿಲಾ ದೇವಿಯು ಇದ್ದಳು. ಉರ್ಮಿಲಾದೇವಿಯು ಪಟ್ಟದ ರಾಣಿಯಾಗದಿದ್ದರೂ, ಮಾನಸಿಂಹರವರ ಅತ್ಯಂತವಾದ ಪ್ರೀತಿಗೆ ಪಾತ್ರಳಾಗಿದ್ದಳು. ಬಾದಶಹನ ಕೆಲಸಕ್ಕಾಗಿ ಮಾನಸಿಂಹರವರು ದೂರ ದೂರ ಪ್ರವಾಸಗಳನ್ನು ಮಾಡಬೇಕಾಗುತ್ತಿತ್ತು, ಇಂಥ ಪ್ರಸಂಗದಲ್ಲಿ

ಯಾವತ್ತು ರಾಣಿಯರನ್ನು ಕರಕೊಂಡು ಹೋಗುವದು ಬಹುತರ ಅಶಕ್ಯವಾಗುತ್ತಿತ್ತು; ಆದ್ದರಿಂದ ಮಹಾರಾಜರು ಎಲ್ಲ ರಾಣಿಯರನ್ನು ಸಂಗಡ ಕರಕೊಂಡು ಹೋಗುತ್ತಿದ್ದಿಲ್ಲ; ಆದರೆ ಉರ್ಮಿಲಾರಾಣಿಯು ಮಾತ್ರ ಯಾವಾಗಲೂ ಮಹಾರಾಜರ ಸಂಗಡ ಇರುತ್ತಿದ್ದಳು. ರಣಾಂಗಣದಲ್ಲಿರುವಾಗಷ್ಟು ಕಾಲ ಮಾತ್ರ ಉರ್ಮಿಲಾ ರಾಣಿಯು ಮಹಾರಾಜರನ್ನು ಆಗಲಿ ಇರುತ್ತಿದ್ದಳು. ಉಳಿದ ವೇಳೆಯಲ್ಲಿ ಮಹಾರಾಜರನ್ನು ಉರ್ಮಿಲಾ ರಾಣಿಯು ನೆರಳಿನಂತೆ ಅನುಸರಿಸಿ ಇರತಕ್ಕವಳು.

ಯಾವತ್ತು ರಾಣಿಯರಲ್ಲಿ ಜಗತ್ಸಿಂಗನ ತಾಯಿಯ ಯೋಗ್ಯತೆಯು, ಅಧಿಕಾರವೂ ಹೆಚ್ಚಿನದಾಗಿದ್ದವು. ಆಕೆಯ ಅಧಿಕಾರ-ಯೋಗ್ಯತೆಗಳು ಅಷ್ಟು ದೊಡ್ಡವಿದ್ದರೂ, ತಾನು ಪಟ್ಟ ರಾಣಿಯಾಗಿದ್ದರೂ ತಾನು ಯಾವಾಗಲೂ ಮಹಾರಾಜರ ಸಂಗಡವಿರುವದು ಆಕೆಗೆ ಸೇರುತ್ತಿದ್ದಿಲ್ಲ. ಮಹಾರಾಜರಾದರೂ ಆ ಪಟ್ಟಮಹಿಷೆಯಿಂದ ಪ್ರಣಯಕ್ಕಿಂತ ಮಾನ-ಮರ್ಯಾದೆಗಳನ್ನು ವಿಶೇಷವಾಗಿ ಅಪೇಕ್ಷಿಸುತ್ತಿದ್ದರು; ಯಾಕಂದರೆ ಆಕೆಯ ಯೋಗ್ಯತೆಯು ಉಚ್ಚತರದ್ದಾಗಿತ್ತು. ಆಕೆಯು ಮಹಾರಾಜರ ಸಂಗಡ ಬಂಗಾಲ ಪ್ರಾಂತಕ್ಕೆ ಸುಭೇದಾರಿಯ ಮೇಲೆ ಬಾರದೆ, ಅಂಬರ ನಗರದಲ್ಲಿಯೇ ಎಂದಿನಂತೆ ಇರುತ್ತಿದ್ದಳು. ಮಹಾರಾಜರು ಪಾಟಣಾದಿಂದ ಪರಭಾರೆ ಪುರುಷೋತ್ತಮ ಕ್ಷೇತ್ರಕ್ಕೆ ಬಂದದ್ದರಿಂದ, ಈ ಯಾತ್ರೆಯ ಪ್ರಸಂಗದಲ್ಲಿಯೂ ಪಟ್ಟರಾಣಿಯು ಮಹಾರಾಜರ ಸಂಗಡ ಇದ್ದಿಲ್ಲ. ಪುರಿಯಲ್ಲಿ ಒಂದು ವಾರ ಇರಬೇಕೆಂದು ಮಹಾರಾಜರು ನಿರ್ಧರಿಸಿದ್ದರು. ಅದರಲ್ಲಿ ಎರಡು ದಿನಗಳು ಹೋದವು. ಪ್ರತಿ ದಿನ ಮಹಾರಾಜರು ರಾಣಿಯೊಡನೆ ಶ್ರೀ ಪುರುಷೋತ್ತಮನ ದರ್ಶನಕ್ಕಾಗಿ ಮಂದಿರಕ್ಕೆ ಹೋಗುವರು. ಅಲ್ಲಿ ಮೂರುನಾಲ್ಕು ತಾಸುಗಳು ಪೂಜೆ-ಪುನಸ್ಕಾರಗಳಲ್ಲಿ ಕ್ರಮಿಸಿ ಹೋಗುತ್ತಿದ್ದವು. ದಿನಾಲು ಮಹಾರಾಜರು ಕೈಮುಟ್ಟಿ ವಿದ್ಯುಕ್ತ ಜಗನ್ನಾಥರ ಪೂಜೆಯನ್ನು ಮಾಡುತ್ತಿದ್ದರು. ದ್ರವ್ಯದ ಆಶೆಯಿಂದ ದೂರ ದೂರದಿಂದ ಬಂದಿದ್ದ ಕುರುಡರು-ಕುಂಟರು ಮೊದಲಾದ ಭಿಕ್ಷುಕರಿಗೆ ಪ್ರತಿನಿತ್ಯ ಸಾವಿರಾರು ರೂಪಾಯಿಗಳ ದಾನಧರ್ಮ ಮಾಡುತ್ತ ಮಹಾರಾಜರು ಡೇರೆಗೆ ಹೋಗುತ್ತಿದ್ದರು.

ಪಠಾಣರೊಡನೆ ಆದ ಒಡಂಬಡಿಕೆಯಿಂದ ಪುರಿಯ ಅಧಿಕಾರವು ಅಕಬರ ಸಾಮ್ರಾಟನ ಕೈಸೇರಿತ್ತು. ಓಡಿಸಾದ ಉಳಿದ ಪ್ರಾಂತಗಳಲ್ಲಿ ಪಠಾಣರು ಸ್ವತಂತ್ರದಿಂದ ರಾಜ್ಯಕಾರಭಾರ ಮಾಡುತ್ತಿದ್ದರು. ಪುರಿಯು ಪಠಾಣರ ಕೈವಶವಾಗುವ ಮೊದಲು, ಅಲ್ಲಿ ದೇವವಂಶದ ಕ್ಷತ್ರಿಯ ರಾಜರು ರಾಜ್ಯವಾಳುತ್ತಿದ್ದರು. ಸದ್ಯಕ್ಕೆ ಆ ವಂಶದ ಹತ ವೈಭವ ರಾಜನಾದ ರಾಮಚಂದ್ರದೇವ ನೆಂಬವನು ಜೀವದಿಂದಿರುತ್ತಿದ್ದನು. ಪುರಿಯ ಅಧಿಕಾರವು ತನ್ನ ಕೈಸೇರಿದಕೂಡಲೇ ಮಾನಸಿಂಹನು ಆ ಅಧಿಕಾರವನ್ನು ರಾಮಚಂದ್ರದೇವನಿಗೆ ಒಪ್ಪಿಸಿದ್ದರಿಂದ, ತೀರ ಮೂಲೆ ಗುಂಪಾಗಿದ್ದ ರಾಮಚಂದ್ರದೇವನು ಮೆಲ್ಲಮೆಲ್ಲನೆ ಮುಂದಕ್ಕೆ ಬರಹತ್ತಿದನು. ಸದ್ಯಕ್ಕೆ ರಾಮಚಂದ್ರದೇವನು ಮಾನಸಿಂಹನ ಆದರಾತಿಥ್ಯದಲ್ಲಿ ಅತ್ಯಂತ ತತ್ಪರನಾಗಿದ್ದನು. ಮಾನಸಿಂಹನ ಛಾವಣಿಯೊಳಗಿನ ಯಾವನೊಬ್ಬ ಸಾಮಾನ್ಯ ಮನುಷ್ಯನ ಬೇಡಿಕೆಯು

ಕೂಡ ತತ್ಕಾಲದಲ್ಲಿ ಪೂರ್ಣವಾಗುತ್ತಿತ್ತು. ಈ ತತ್ಪರತೆಗಾಗಿ ಮಾನಸಿಂಹನು ರಾಮಚಂದ್ರ ದೇವನ ಮೇಲೆ ಅತ್ಯಂತ ಸಂತುಷ್ಟನಾಗಿದ್ದನು; ಆದರೆ ಹೊಸ ನವಾಬರಾದ ಸುಲೇಮಾನಖಾ, ಹಾಗು ಉಸ್ಮಾನಖಾ ಎಂಬ ತರುಣರ ಔದ್ಧತ್ಯಕ್ಕಾಗಿ ಮಾನಸಿಂಹನು ಬಹಳ ಸಿಟ್ಟಾಗಿದ್ದನು. ಆ ಹೊಸ ನವಾಬರ ಪ್ರಾಂತದೊಳಗಿಂದ ಪ್ರವಾಸ ಮಾಡುವಾಗಂತು ಆ ತರುಣರು ಮಾನಸಿಂಹನನ್ನು ಕಾಣಲೇ ಇಲ್ಲ; ಮಾನಸಿಂಹನು ಪುರಿಗೆ ಬಂದು ಎರಡು ದಿನಗಳಾದರೂ ಸ್ವಾಭಿಮಾನಿಗಳಾದ ಆ ಇಬ್ಬರು ಬಂಧುಗಳು ಆತನ ದರ್ಶನಕ್ಕೆ ಬರಲಿಲ್ಲ; ಮತ್ತು ಅವರ ವಜೀರನೂ ದರ್ಶನಕ್ಕೆ ಬರಲಿಲ್ಲ. ಮಾನಸಿಂಹನು ಪಾಟಣಾ ಪ್ರಾಂತದಲ್ಲಿ ಬಂದ ಕೂಡಲೇ ಒಬ್ಬ ಸೇವಕನು ಮಾತ್ರ ಬಳಿಗೆ ಬಂದು, ನವಾಬ ಬಂಧುಗಳ ಪತ್ರವನ್ನು ಆತನ ಕೈಯಲ್ಲಿ ಕೊಟ್ಟಿದ್ದನು. ಆ ಪತ್ರದಲ್ಲಿ ಅವರು ಮಾನಸಿಂಹನಿಗೆ—''ಓಡಿಸಾದ ನವಾಬರು ಮಹಾರಾಜರ ದರ್ಶನಕ್ಕೆ ಬಾರದಿದ್ದದ್ದಕ್ಕಾಗಿ ಆ ನವಾಬರಿಗೆ ಬಹಳ ಅಸಮಾಧಾನವಾಗಿದೆ; ಆದರೆ ಮಹಾರಾಜರ ಮುಕ್ಕಾಮು ಪುರಿಯಲ್ಲಿದ್ದಾಗ ಒಂದು ದಿವಸ ಉಸ್ಮಾನ ಖಾನರವರು ದರ್ಶನಕ್ಕೆ ಬರಬಹುದು. ತಮಗೆ ಬೇಕಾದ ಅನುಕೂಲತೆಯನ್ನು ಮಾಡಿಕೊಡುವದಕ್ಕಾಗಿ ಪತ್ರ ತಕ್ಕೊಂಡು ಬಂದಿದ್ದ ಸೇವಕನು ತನ್ನವರನಿರುವನು, ಸೇವೆಯನ್ನು ಸ್ವೀಕರಿಸುವಾದಾಗಬೇಕು,'' ಎಂದು ಬರೆದಿದ್ದರು.

ಈ ಪತ್ರವನ್ನು ಓದಿ ಮಾನಸಿಂಹನಿಗೆ ಸಮಾಧಾನವಾಗಲಿಲ್ಲ ಅದರಂತೆ ಆ ಪತ್ರಕ್ಕೆ ಮಾನಸಿಂಹನು ಬರೆದ ಉತ್ತರವನ್ನು ಓದಿ ಉಸ್ಮಾನಖಾನನಿಗೂ ಸಮಾಧಾನವಾಗಲಿಲ್ಲ! ವೃದ್ಧ ವಜೀರನಾದ ಖ್ವಾಜಾ ಇಸಾಖಾನನು ಬೇನೆಯಿಂದ ತೀರ ಹಣ್ಣಾದದ್ದರಿಂದ, ಆತನ ಸ್ಥಾನದಲ್ಲಿ ಅಜಮ ಇಸಾಖಾನನು ವಜೀರನಾಗಿರುವನೆಂಬದನ್ನು ಮಾನಸಿಂಹನು ಕೇಳಿದ್ದನು. ಈ ಸ್ಥಿತಿಯಲ್ಲಿ ಪಠಾಣರೊಡನೆ ಬೇಗನೆ ಯುದ್ಧ ಹೂಡಬೇಕಾಗುವದೆಂದು ಮಾನಸಿಂಹನು ತರ್ಕಿಸಿದನು; ಆದರೂ ಆತನು ಎಳ್ಳಷ್ಟಾದರೂ ಅಸಮಾಧಾನಪಡಲಿಲ್ಲ. ಆತನ ತೀರ್ಥ-ಯಾತ್ರೆಯ ಕಾರ್ಯಗಳು ಯಥಾಸ್ಥಿತವಾಗಿ ಸಮಾಧಾನದಿಂದ ನಡೆದಿದ್ದವು. ಧರ್ಮ ಕೃತ್ಯಗಳ ಪ್ರಬಲ ಪ್ರವಾಹದಲ್ಲಿ ಆತನ ಚಿತ್ತದ ಮಾಲೀನ್ಯತೆಯೆಲ್ಲಿ ತೊಳೆದುಹೋಗಿ, ಆ ಶುದ್ಧ ಚಿತ್ತ ಕ್ಷೇತ್ರದಲ್ಲಿ ಪ್ರೇಮ, ದಯಾ, ಭಕ್ತಿ, ಶಾಂತಿಗಳು ನೆಲೆಗೊಂಡಿದ್ದವು. ಎರಡುದಿನ ಶ್ರೀ ಜಗನ್ನಾಥನ ಸೇವಾ ಸೂತ್ರಗಳು ನಿರ್ಬಾಧವಾಗಿ ನಡೆದವು. ಮೂರನೆಯ ದಿವಸ ರಾತ್ರಿ ಮಾನಸಿಂಹನು ಶ್ರೀ ಜಗನ್ನಾಥನ ಆರತಿಯನ್ನು ಮಾಡಿಕೊಂಡು ಛಾವಣಿಗೆ ಬಂದ ಬಳಿಕ ಊರ್ಮಿಳಾ ರಾಣಿಯ ಮಂದಿರಕ್ಕೆ ಹೋದನು. ವಿಲಾಸೋಪಭೋಗದಲ್ಲಿ ಮಾನಸಿಂಹನು ಅತ್ಯಂತ ಶ್ರೇಷ್ಠನಾಗಿದ್ದನು. ಮೊಗಲ ಬಾದಶಹರ ಪ್ರೇಮ ಸಂಪಾದನೆಯಿಂದ ಆತನ ವಿಲಾಸ ಭೋಗಕ್ಕೆ ಮತ್ತಿಷ್ಟು ಕಳೆಯೇರಿತ್ತು. ಉರ್ಮಿಳಾ ರಾಣಿಯ ರತ್ನಖಚಿತವಾದ ಬೃಹನ್ಮಂಟಪವನ್ನು ನೋಡಲಿಕ್ಕೆ ಎರಡು ಕಣ್ಣುಗಳು ಸಾಲುತ್ತಿದ್ದಿಲ್ಲ. ಆ ಮಂಟಪವನ್ನು ಇಟ್ಟಿದ್ದ ಅಂತರ್ಗೃಹವು ಹಲವು ದೀಪಜ್ಯೋತಿಗಳಿಂದ ಪ್ರಕಾಶಿತವಾಗಿದ್ದು, ಹಲವು ಪ್ರಕಾರದ ಸುಗಂಧಗಳಿಂದ ಅದು ಪರಿಪೂರ್ಣವಾಗಿತ್ತು. ಮಾನಸಿಂಹನು ಒಳಗೆ ಬಂದಕೂಡಲೆ ಒಬ್ಬ ದಾಸಿಯು ಬೀಸಣಿಕೆ

ಯನ್ನು ತಕ್ಕೊಂಡು ಬಂದಳು, ಇನ್ನೊಬ್ಬಳು ಸುವರ್ಣಪಾತ್ರೆಯಲ್ಲಿ ಸುಗಂಧೋಧಕವನ್ನು ತಕ್ಕೊಂಡು ಬಂದಳು; ಮತ್ತೊಬ್ಬಳು ತಾಂಬೂಲ ಪಾತ್ರೆಯನ್ನು ತಕ್ಕೊಂಡು ಬಂದಳು. ಮಾನಸಿಂಹನು ದಣಿದವನಂತೆ ಶುಭ್ರಶಯ್ಯೆಯ ಮೇಲೆ ಸ್ವಚ್ಛಂದದಿಂದ ಮಲಗಿಕೊಂಡು ದಾಸಿಯನ್ನು ಕುರಿತು—''ಊರ್ಮಿಳಾರಾಣಿಯು ಎಲ್ಲಿರುವಳು?'' ಎಂದು ಕೇಳಲು, ಒಬ್ಬ ದಾಸಿಯು ವಿನಯದಿಂದ—ಅವರು ಪಾಕಶಾಲೆಯಲ್ಲಿ ಮಹಾರಾಜರ ಭೋಜನದ ವ್ಯವಸ್ಥೆಯಲ್ಲಿ ತೊಡಗಿರುವರು, ಈಗ ಬರಬಹುದು, ಎಂದು ಹೇಳಿದಳು. ಆಗ ಮಹಾರಾಜರು —ಈಗ ತಾಂಬೂಲವೂ ಬೇಕಾಗಿಲ್ಲ, ನೀರೂ ಬೇಕಾಗಿಲ್ಲ, ಬೀಸಣಿಕೆ ಬೀಸುವ ಒಬ್ಬ ದಾಸಿಯು ಮಾತ್ರ ನಿಂತುಕೊಂಡು ಉಳಿದವರು ಹೋಗಿರಿ, ಎಂದು ಹೇಳಿದರು.

ಮಾನಸಿಂಹನ ಅಪ್ಪಣೆಯಂತೆ ಉಳಿದ ದಾಸಿಯರು ಹೊರಟುಹೋದರು. ಬೀಸಣಿಕೆ ಬೀಸುವ ದಾಸಿಯು ಗಾಳಿಯ ಹಾಕಹತ್ತಿದಳು. ಸ್ವಲ್ಪ ಹೊತ್ತಿನಲ್ಲಿಯೇ ಉರ್ಮಿಳಾರಾಣಿಯು ಅಲ್ಲಿಗೆ ಬಂದಳು. ಒಮ್ಮೆಲೆ ನೋಡುವವರಿಗೆ ರಾಣಿಯ ವಯಸ್ಸು ಮೂವತ್ತು ವರ್ಷಕ್ಕಿಂತ ಹೆಚ್ಚು ಇದ್ದಂತೆ ತೋರುತ್ತಿದ್ದಿಲ್ಲ, ಆಕೆಯು ಸ್ವಲ್ಪ ಗಿಡ್ಡತರದವಳಾಗಿದ್ದಳು; ಆದ್ದರಿಂದ ಆಕೆಯು ಪ್ರೌಢವಯಸ್ಸಿನವಳಾಗಿದ್ದರೂ ಪ್ರಾಯಸ್ಥಳಂತೆ ತೋರುತ್ತಿದ್ದಳು. 25 ವರ್ಷದ ತರುಣಿಯಂತೆ ಆಕೆಯು ತೇಜಸ್ವಿಯಾಗಿದ್ದಳು. ಆಕೆಯ ಮೈ ಬಣ್ಣವು ಚೊಕ್ಕ ಚಿನ್ನದಂತೆ ಇತ್ತು, ಹಸ್ತ-ಪಾದಗಳ ತಲಗಳು ರಕ್ತವರ್ಣವಾಗಿದ್ದವು. ಆಕೆಯ ವಿಶಾಲ ನೇತ್ರಗಳು ತೇಜಃಪುಂಜವಾಗಿದ್ದವು. ಹಣೆಯಲ್ಲಿ ಎಲ್ಲಿಯೂ ನೀರಿಗೆಗಳು ಬಿದ್ದಿದ್ದಿಲ್ಲ, ಆಕೆಯ ಅಚ್ಚ ಕರ್ರಗಿನ ಉಂಗುರ ಗೂದಲುಗಳು ಹೆರಳಿನಿಂದ ಮುಖದ ಸೌಂದರ್ಯವು ದ್ವಿಗುಣಿತವಾಗಿತ್ತು, ಆ ಸ್ವಭಾವ ಸುಂದರಿಯು ಬಗೆ ಬಗೆಯ ಅಲಂಕಾರಗಳಿಂದ ಅಲಂಕೃತವಾಗಿದ್ದಳು. ಆಕೆಯು ಹಾಸ್ಯ ಮಯಿಯೂ, ಪ್ರಸನ್ನವದನೆಯೂ, ಪರಿಹಾಸ ನಿಪುಣೆಯೂ ಆಗಿದ್ದಳು. ಹೀಗೆ ಶೋಭಾ ಸೌಂದರ್ಯಗಳನ್ನು ಸುರಿಸುತ್ತ ಊರ್ಮಿಳಾ ದೇವಿಯು ಪತಿಯ ಬಳಿಗೆ ಬಂದಳು. ಆದರೆ ಆಕೆಯು ಒಬ್ಬಳೇ ಬಂದಿದ್ದಿಲ್ಲ, ಇನ್ನೊಬ್ಬ ಲೋಕೋತ್ತರ ಸುಂದರಿಯಾದ ತರುಣಿಯನ್ನು ಸಂಗಡ ಕರಕೊಂಡು ಬಂದಿದ್ದಳು. ಆ ನೂತನ ತರುಣಿಯು ರಾಣಿಯ ಹಿಂದೆ ತಲೆಬಾಗಿಸಿ ನಿಂತುಕೊಂಡಿದ್ದಳು ಆಕೆಯ ಶಾಂತವಾದ ಮುಖ-ಮುದ್ರೆಯು ಗಾಂಭೀರ್ಯವನ್ನು ಬೀರುತ್ತಿತ್ತು. ರಾಣಿಯ ಹಿಂದುಗಡೆಯಲ್ಲಿದ್ದ ಈ ನೂತನ ತರುಣಿಯನ್ನು ಮಹಾರಾಜರು ನೋಡಿದ್ದಿಲ್ಲ. ಉರ್ಮಿಳೆಯೊಡನೆ ವಿನೋದವಾಡುತ್ತ ಇಚ್ಛೆಯಿಂದ ಮಹಾರಾಜರು ರಾಣಿಯನ್ನು ಕುರಿತು—ಈ ಲೋಕೋತ್ತರ ಸುಂದರ ಮೂರ್ತಿಯನ್ನು ಒಂದು ಕ್ಷಣವಾದರೂ ಅಗಲಿ ಯಿರುವದಾಗದು. ಆ ವಿಯೋಗ ದುಃಖವನ್ನು ಸಹಿಸುವದಕ್ಕಿಂತ ಒಂದು ರಾತ್ರಿ ಉಪವಾಸವಿರುವದು ನೆಟ್ಟಗೆ ಕಾಣುತ್ತದೆ, ಅನ್ನಲು, ಮಹಾರಾಣಿಯು-ಊಟ-ಉಡಿಗೆಗಳನ್ನು ಕೂಡ ಮರೆಯುವ ಚಾಳಿಯು ನೆಟ್ಟಗಲ್ಲ. ಏಳಬೇಕು, ಭೋಜನ ಪಾತ್ರೆಯು ಸಿದ್ಧವಾಗಿರುತ್ತದೆ, ಎಂದು ನುಡಿದು ಸ್ವಲ್ಪ ಬದಿಗಾಗಲು, ಆ ನೂತನ ತರುಣಿಯು ಮಹಾರಾಜರ ಕಣ್ಣಿಗೆ ಬಿದ್ದಳು. ಆಗ ಅವರು ರಾಣಿಯಯನ್ನು ಕುರಿತು—

ಮಾನಸಿಂಹ—ಈ ಬಾಲಿಕೆಯಾರು?

ರಾಣಿ—ಈಕೆಯು ನನ್ನ ಒಬ್ಬ ಚಿಕ್ಕಂದಿನ ಗೆಳತಿಯ ಮಗಳು. ಮಹಾರಾಜರ ಪಾದವಂದನಕ್ಕಾಗಿ ಬಂದಿದ್ದಾಳೆ.

ಈ ಮೇರೆಗೆ ಉರ್ಮಿಳಾರಾಣಿಯು ನುಡಿಯುತ್ತಿರಲು, ಆ ನೂತನ ತರುಣಿಯು ಮಹಾರಾಜರ ಚರಣಕ್ಕೆರಗಿ, ಅವರ ಚರಣಧೂಲಿಯನ್ನು ತನ್ನ ಮಸ್ತಕದಲ್ಲಿ ಭಕ್ತಿಯಿಂದ ಧರಿಸಿಕೊಂಡಳು. ಆಕೆಯ ಕಣ್ಣುಗಳು ಅಶ್ರುಪೂರ್ಣವಾಗಿದ್ದವು; ಆದರೆ ಯಾರೂ ಅದನ್ನು ನೋಡಿದ್ದಿಲ್ಲ! ಆ ತರುಣಿಯು ತಲೆಬಾಗಿಸಿಕೊಂಡು ಮತ್ತೆ ರಾಣಿಯ ಮರೆಗೆ ಹೋಗಿ ನಿಂತುಕೊಂಡಳು. ಆಗ ಮಾನಸಿಂಹನು—

ಮಾನಸಿಂಹ—ಈ ಬಾಲಿಕೆಯು ಲಕ್ಷ್ಮೀದೇವಿಯಂತೆ ಸೌಂದರ್ಯ ಶಾಲಿನಿಯಾಗಿರುವಳು. ಈಕೆ ನಿನಗೆಲ್ಲಿ ಭೆಟ್ಟಿಯಾದಳು?

ರಾಣಿ—ಈಕೆಯು ತನ್ನ ತಾಯಿಯ ಸಂಗಡ ಜಗನ್ನಾಥನ ದರ್ಶಕ್ಕಾಗಿ ಬಂದಿರುವಳು. ಈಕೆಯ ತಾಯಿಯು ಊರಿಗೆ ಹೋದಳು; ಆದರೆ ಈಕೆಯನ್ನು ಅನಕಾ ನಾಲ್ಕುದಿನ ಇರೆಂದು ನಾನು ಇಟ್ಟುಕೊಂಡಿರುವೆನು. ಕೆಲವು ದಿವಸ ಈಕೆಯನ್ನು ನನ್ನ ಬಳಿಯಲ್ಲಿ ಇಟ್ಟುಕೊಳ್ಳ ಬೇಕೆಂದು ಮಾಡಿದ್ದೇನೆ.

ಮಾನಸಿಂಹ—ಒಳ್ಳೇದು, ಅವಶ್ಯವಾಗಿ ಇಟ್ಟುಕೋ, ಹುಡಿಗೆಯು ಒಳ್ಳೇ ಸುಶೀಲೆ ಯಿರುವಳು. ಈಕೆಯ ಯಾವತ್ತು ಲಕ್ಷಣಗಳು ಭಾಗ್ಯಶಾಲಿತ್ವವನ್ನು ವ್ಯಕ್ತಮಾಡುತ್ತವೆ. ಸ್ವಭಾವವೂ ಬಹು ಕೋಮಲವಾಗಿರುತ್ತದೆ. ಈಕೆಯ ಲಗ್ನವಾಗಿರುವದೇನು?

ರಾಣಿ—ಹೌದು ಈಕೆಯ ಲಗ್ನವಾಗಿರುವದು. ಈಕೆಯ ಲಗ್ನದ ಸಂಬಂಧದಿಂದ ಮಹಾರಾಜರ ಬಳಿಯಲ್ಲಿ ನ್ಯಾಯವನ್ನು ಬೇಡಿಕೊಳ್ಳಬೇಕಾಗಿದೆ; ಆದರೆ ಇಂದುಬೇಡ, ಮತ್ತೆ ಎಂದಾದರೂ ಒಂದು ದಿನ ಬೇಡಿಕೊಳ್ಳೋಣವಂತೆ.

ಮಾನಸಿಂಹ—ನಿನ್ನ ಇಚ್ಛೆಯಂತೆ ಆಗಲಿ; ಆದರೆ ಈಕೆಯ ಯೋಗಕ್ಷೇಮದ ವ್ಯವಸ್ಥೆಯು ಚೆನ್ನಾಗಿ ಆಗಿರುವದಷ್ಟೆ?

ರಾಣಿ—ಮಹಾರಾಜ, ಎಲ್ಲ ವ್ಯವಸ್ಥೆಯು ಸರಿಯಾಗಿ ಆಗಿರುವದು.

ಹೀಗೆ ರಾಣಿಯು ನುಡಿಯುತ್ತಿರಲು, ಮಾನಸಿಂಹನು ಹಾಸಿಗೆಯ ಮೇಲೆ ಹೊರಳಿ— "ಅಹಹಾ! ಈ ದಿನ ಎಷ್ಟು ಶಕೆ ಕುಚ್ಚುತ್ತದೆ, ಅನ್ನಲು ಉರ್ಮಿಳಾರಾಣಿಯು ಬೀಸಣಿಕೆಯನ್ನು ತರಲಿಕ್ಕೆ ಒಳಗೆ ಹೋದಳು; ಆದರೆ ಅಲ್ಲಿಯೇ ಬಿದ್ದಿದ್ದ ಬೀಸಣಿಕೆಯನ್ನು ಆಕೆಯು ನೋಡಿದ್ದಿಲ್ಲ. ಆ ನೂತನ ತರುಣಿಯು ತಟ್ಟನೆ ಆ ಬೀಸಣಿಕೆಯನ್ನು ತಕ್ಕೊಂಡು ಮಹಾರಾಜರಿಗೆ ಗಾಳಿಯ ಹಾಕಹತ್ತಿದಳು. ಆಗ ಮಹಾರಾಜರು—ತಂಗೀ, ಬೇಡವ್ವಾ ನೀನು ಗಾಳಿಯ ಬೀಸಬೇಡ. ಈಗ ದಾಸಿಯು ಬರುವಳು, ನಿನ್ನ ಕೈಗಳು ನೊಂದಾವು, ಅನ್ನಲು, ಆ ತರುಣಿಯು ಮಧುರ ಸ್ವರದಿಂದ–ಮಹಾರಾಜರನ್ನು ಸೇವಿಸುವದು ನನ್ನ ಕರ್ತವ್ಯವೆಂದು ನಾನು ತಿಳಿದಿರುವೆನು, ಎಂದು ನುಡಿದಳು. ಅಷ್ಟರಲ್ಲಿ ಉರ್ಮಿಳಾರಾಣಿಯು ಅಲ್ಲಿಗೆ ಬಂದಳು. ತರುಣಿಯ

ಉತ್ತರದಿಂದ ಮಹಾರಾಜರು ಸಂತುಷ್ಟರಾಗಿದ್ದರು. ಅವರು ರಾಣಿಗೆ—ಈ ಹುಡಿಗೆಯ ಹೆಸರೇನು? ಎಂದು ಕೇಳಲು, ರಾಣಿಯು—ಈಕೆಯ ಹೆಸರು ''ರಾಜಲಕ್ಷ್ಮಿಯು'' ಎಂದು ಹೇಳಿದಳು. ಅದನ್ನು ಕೇಳಿ ಮಹಾರಾಜರು—ಹೆಸರು ಬಹಳ ಚೆನ್ನಾಗಿ ಒಪ್ಪುತ್ತದೆ. ನಿಜವಾಗಿಯೇ ಆ ಹುಡಿಗೆಯು ರಾಜಲಕ್ಷ್ಮಿಯು ಇರುತ್ತಾಳೆ. ಈ ಲಕ್ಷ್ಮಿಯು ಪ್ರವೇಶ ಮಾಡಿದ ಮನೆಯವನು ನಿಜವಾಗಿ ರಾಜನೇ ಆಗಿರಬೇಕೆಂಬುದರಲ್ಲಿ ಸಂಶಯವಿಲ್ಲ.

ಈ ಮೇರೆಗೆ ಮಾನಸಿಂಹನು ನುಡಿಯುತ್ತಿರಲು, ರಾಣಿಯು—''ಮಹಾರಾಜರು ಇನ್ನು ಭೋಜನಕ್ಕೆ ಏಳಬೇಕು, ರಾತ್ರಿಯು ಬಹಳವಾಯಿತು, ಎಂದು ಆಗ್ರಹ ಮಾಡಿದಳು. ಆಗ ಮಾನಸಿಂಹನು, ರಾಣಿಯ ಕೈಯನ್ನು ಹಿಡಿದು ಭೋಜನ ಗೃಹಕ್ಕೆ ನಡೆದನು. ಅಷ್ಟರಲ್ಲಿ ರಾಜಲಕ್ಷ್ಮಿಯು ಊರ್ಮಿಳಾ ರಾಣಿಯ ಒಪ್ಪಿಗೆಯಿಂದ ಭೋಜನ ಶಾಲೆಗೆ ಹೋಗಿ, ಮಹಾರಾಜರ ಭೋಜನದ ಯಾವತ್ತು ವ್ಯವಸ್ಥೆಯನ್ನು ಅತ್ಯುತ್ತಮ ರೀತಿಯಿಂದ ಮಾಡಿದ್ದಳು. ಆಕೆಯ ಜಾಗ್ರತೆಯನ್ನೂ, ಸುವ್ಯವಸ್ಥೆಯನ್ನೂ ನೋಡಿ ಮಹಾರಾಜರು ಪರಮ ಸಂತುಷ್ಟ ರಾದರು. ಅಂದಿನಿಂದ ರಾಜಲಕ್ಷ್ಮಿಯು ಮಹಾರಾಜರ ಸೇವಾ-ಚಾಕರಿಯನ್ನು ಮಾಡಹತ್ತಿದಳು. ಮಹಾರಾಜರಿಗಾದರೂ ಆಕೆಯ ಹಂಬಲವು ಬೇಗನೆ ಹತ್ತಿತು. ಮನೆಗೆ ಬಂದಕೂಡಲೆ ಮೊದಲು ''ರಾಜಲಕ್ಷ್ಮಿಯು ಎಲ್ಲಿರುವಳು?'' ಎಂದು ಅವರು ಕೇಳಹತ್ತಿದರು. ಆಕೆಯ ಕೃತಿಗಳು ಅವರಿಗೆ ಸೇರುತ್ತಿದ್ದವು. ಆಕೆಯ ಪ್ರೇಮಲಸ್ವಭಾವಕ್ಕಾಗಿ ಅವರು ಯಾವಾಗಲೂ ಸಂತುಷ್ಟ ರಾಗಿರುತ್ತಿದ್ದರು. ಅವರು ತಮ್ಮ ಪ್ರತಿ ಒಂದು ಕೆಲಸವನ್ನು ರಾಜಲಕ್ಷ್ಮಿಗೆ ಹೇಳುತ್ತಿದ್ದರು. ರಾಜಲಕ್ಷ್ಮಿಯ ಕೈಮುಟ್ಟದ ಕೆಲಸಗಳು ಮಹಾರಾಜರಿಗೆ ಸೇರದಾದವು. ಪ್ರತಿ ಒಂದು ಕೆಲಸವನ್ನು ರಾಜಲಕ್ಷ್ಮಿಯು ಮನಮುಟ್ಟಿ ಮಾಡುತ್ತಿದ್ದದರಿಂದ, ಗುಣಲಬ್ಧರಾದ ಮಹಾರಾಜರು ಊರ್ಮಿಳಾರಾಣಿಯ ಬಳಿಯಲ್ಲಿ ಆಕೆಯನ್ನು ಯಾವಾಗಲೂ ಶ್ಲಾಘಿಸುತ್ತಿದ್ದರು; ಆದರೆ ಪ್ರಿಯವಾಚಕರೇ, ಈ ರಾಜಲಕ್ಷ್ಮಿಯು ಯಾರೆಂಬುದರ ಗುರುತು ನಿಮಗೆ ಸಿಕ್ಕಿತೇನು?

## ಶೂರರ ಸರಳಹೃದಯ

ಪಠಾಣರ ವೃದ್ಧ ಮಂತ್ರಿಯಾದ ಖ್ವಾಜಾ ಇಸಾಖಾನನು ವ್ಯಾಧಿಪೀಡಿತನಾಗಿದ್ದನೆಂದು ಹಿಂದೆ ಹೇಳಿದೆಯಷ್ಟೆ? ಆತನು ಸ್ವಲ್ಪ ದಿನಗಳಲ್ಲಿಯೆ ಮರಣ ಹೊಂದಿದನು. ಆ ವೃದ್ಧ ಮಂತ್ರಿಯು ಇಬ್ಬರು ತರುಣ ನವಾಬರ ಪ್ರೇಮಾದರಗಳಿಗೂ ಪಾತ್ರನಿದ್ದನು. ವಿಷಯಾ ಸಕ್ತನಾದ ಸುಲೇಮಾನಖಾನನೂ, ಮಹಾ ತೇಜಸ್ವಿಯಾದ ಉಸ್ಮಾನನೂ ಸರಿಯಾಗಿಯೇ ಇಸಾಖಾನನ್ನು ಮನ್ನಿಸುತ್ತಿದ್ದರು. ಆ ತರುಣ ನವಾಬರು ಇಸಾಖಾನನ ಪ್ರೇತ ಯಾತ್ರೆಯನ್ನು ಬಹು ಸಮಾರಂಭದಿಂದ ನೆರವೇರಿಸಿದರು. ಮಂತ್ರಿಪದವು ಖಿರಜಖಾನನೆಂಬ ತರುಣನಿಗೆ

ಪ್ರಾಪ್ತವಾಯಿತು. ಹೊಸ ಮಂತ್ರಿಯ ವಯಸ್ಸು ಇನ್ನೂ ನಾಲ್ವತ್ತು ವರ್ಷಗಳನ್ನು ಮಿಕ್ಕಿದ್ದಿಲ್ಲ. ಆತನು ಒಳ್ಳೇ ಸಾಹಸಿಯೂ, ಸಮರ ಪ್ರಿಯನೂ ಆಗಿದ್ದನು. ಆತನೊಡನೆ ಉಸ್ಮಾನಖಾನನ ಸಖ್ಯವು ವಿಶೇಷವಾಗಿತ್ತು. ಯಾವ ಬಾಬಿನಲ್ಲಿಯೇ ಆಗಲಿ, ಅವರಿಬ್ಬರ ಮತದಲ್ಲಿ ಐಕ್ಯವು ಕಂಡುಬರುತ್ತಿತ್ತು. ಅಂತೇ ಉಸ್ಮಾನನು ಖಿಜರಖಾನನನ್ನು ವಜೀರನನ್ನಾಗಿ ಮಾಡಿದನು. ಸುಲೇಮಾನಖಾನನು ಕೇವಲ ವಿಷಯಾಸಕ್ತನಾದದ್ದರಿಂದ, ರಾಜಕಾರಣಗಲ್ಲಿ ಮನಸ್ಸು ಹಾಕುತ್ತಿದ್ದಿಲ್ಲ; ಆದರೂ ಅವರಿಬ್ಬರು ಅಣ್ಣ-ತಮ್ಮಂದಿರು ಒಮ್ಮನಸ್ಸಿನಿಂದ ನಡೆದು ಕೊಳ್ಳುತ್ತಿದ್ದರು. ಇಸಾಖಾನನ ಮರಣದ ನಂತರ ಯಾವತ್ತು ರಾಜಕಾರಭಾರವನ್ನು ವಜೀರನಿಗೆ ಒಪ್ಪಿಸದೆ, ಉಸ್ಮಾನಖಾನನೇ ಎಲ್ಲ ಕಾರಭಾರವನ್ನು ಸಾಗಿಸಬೇಕೆಂದು ಅವರಿಬ್ಬರು ಬಂಧುಗಳು ತಮ್ಮೊಳಗೆ ಗೊತ್ತುಮಾಡಿಕೊಂಡರು. ಸುಲೇಮಾನ ಖಾನನು ವಿಲಾಸಮಗ್ನ ನಾದದ್ದರಿಂದ ರಾಜ್ಯಕಾರಭಾರದ ಯಾವ ಭಾರವನ್ನು ಹೊರಲಿಕ್ಕೂ ಅವನು ಒಪ್ಪಿಕೊಳ್ಳುವ ಹಾಗಿದ್ದಿಲ್ಲ; ಆದ್ದರಿಂದ ಆತನು ಉಸ್ಮಾನಖಾನನ ಯಾವ ಕೆಲಸದಲ್ಲಿಯೂ ಕೈ ಹಾಕುತ್ತಿದ್ದಿಲ್ಲ.

ಹೀಗೆ ಎಲ್ಲ ರಾಜ್ಯಕಾರಭಾರವನ್ನು ಉಸ್ಮಾನಖಾನನು ಸ್ವತಂತ್ರದಿಂದ ಸಾಗಿಸಹತ್ತಿದನು. ಆತನ ಹೆಸರಿನಿಂದಲೇ ಅರಸೊತ್ತಿಗೆಯು ನಡೆಯಹತ್ತಿತು. ಈ ಎಲ್ಲ ಸಂಗತಿಗಳನ್ನು ಮಾನಸಿಂಹನ ಗುಪ್ತಚಾರರು ಮಾನಸಿಂಹನಿಗೆ ಆಗಾಗ್ಗೆ ತಿಳಿಸುತ್ತ ಬಂದಿದ್ದರು. ಈ ಸ್ಥಿತ್ಯಂತರದ ಸಮಗ್ರ ವೃತ್ತಾಂತವನ್ನು ಮಾನಸಿಂಹನು ರಿಪೋರ್ಟಿನ ರೂಪದಿಂದ ಅಕಬರಬಾದಶಹನಿಗೆ ತಿಳಿಸಿದ್ದನು. ಪಟಾಣರೊಡನೆ ಬೇಗನೆ ಯುದ್ಧ ಹೂಡಬೇಕಾಗುವದೆಂಬದು ಆ ಅಂಬರಾಧೀಶ್ವರನಿಗೆ ಗೊತ್ತಾಗಿ ಹೋಗಿತ್ತು; ಆದರೂ ಪಠಾಣರು ಒಪ್ಪಂದವನ್ನು ಮುರಿಯುವವರೆಗೆ ತಾನು ಯುದ್ಧವನ್ನು ಆರಂಭಿಸಲಿಕ್ಕಿಲ್ಲೆಂದು ಆ ರಜಪೂತ ವೀರನು ನಿಶ್ಚಯಿಸಿದ್ದನು. ಈ ಪ್ರಸಂಗವನ್ನು ಕುರಿತು ಪುರಿಯ ರಾಜನಾದ ರಾಮಚಂದ್ರದೇವನೊಡನೆ ಮಾನಸಿಂಹನ ಆಲೋಚನೆಗಳು ನಡೆದಿದ್ದವು. ಒಂದುವಾರ ಪುರಿಯಲ್ಲಿ ಇರಬೇಕೆಂದು ಗೊತ್ತುಮಾಡಿಕೊಂಡಿದ್ದ ಮಾನಸಿಂಹನು, ಹತ್ತುದಿನಗಳಾದರೂ ಪುರಿಯನ್ನು ಬಿಟ್ಟು ಕಿತ್ತಿದ್ದಿಲ್ಲ. ಹೀಗೆ ಮಾನಸಿಂಹನು ಪುರಿಯಲ್ಲಿ ಹತ್ತುದಿನಗಳಿದ್ದರೂ, ಉಸ್ಮಾನಖಾನನು ಆತನ ಭೆಟ್ಟಿಗೆ ಬರಲಿಲ್ಲ. ಮಾನಸಿಂಹನು ಕಳಿಸಿದ ಪತ್ರಕ್ಕೆ ಆತನು ಸಮಾಧಾನಕರವಾಗಿ ಉತ್ತರವನ್ನೂ ಕಳಿಸಲಿಲ್ಲ. ಇದರಿಂದ ಬಾದಶಹನ ಸಂತುಷ್ಟತೆ-ಅಸಂತುಷ್ಟತೆಗಳೆರಡನ್ನೂ, ಉಸ್ಮಾನಖಾನನು ಲಕ್ಷಿಸುವಂತೆ ತೋರುತ್ತಿದ್ದಿಲ್ಲ. ಮಾನಸಿಂಹನ ಮನಸ್ಸನ್ನು ನೋಯಿಸಲಿಕ್ಕೂ ಆ ತರುಣ ನವಾಬನು ಹಿಂದುಮುಂದು ನೋಡುತ್ತಿದ್ದಿಲ್ಲ. ಇದರಿಂದ ಮಾನಸಿಂಹನು ಕ್ರೋಧಸಂತಪ್ತನಾಗಿದ್ದನು. ಪಠಾಣರನ್ನು ಮಣ್ಣುಗೂಡಿಸುವಷ್ಟು ಸೈನ್ಯಬಲವೂ ಆತನ ಬಳಿಯಲ್ಲಿತ್ತು; ಆದರೆ ಮೇಲೆ ಹೇಳಿದಂತೆ ಪಠಾಣರು ಅಡ್ಡಹಾದಿಯನ್ನು ತುಳಿಯದೆ, ಅವರ ಮೇಲೆ ಶಸ್ತ್ರಹಿಡಿಯಬಾರದೆಂದು ಮಾನಸಿಂಹನು ನಿಶ್ಚಯಮಾಡಿದ್ದನು.

ಹೀಗಿರುವಾಗ ಉಸ್ಮಾನನು ಮಾನಸಿಂಹನ ದರ್ಶನಕ್ಕೆ ಬರುವನೆಂಬ ವರ್ತಮಾನವು ಪುರಿಗೆ ಬಂದಿತು. ಕೆಲವು ಅಗತ್ಯದ ಕಾರಣಗಳ ಸಲುವಾಗಿ ಮಹಾರಾಜರ ದರ್ಶನಕ್ಕೆ

ಬರುವೆನೆಂದು ಉಸ್ಮಾನಖಾನನು ಹೇಳಿಕಳಿಸಿದ್ದನು. ನಿಯಮಿತ ದಿವಸ ಹಗಲು ಒಂಬತ್ತು ತಾಸಿನ ಸುಮಾರಿಗೆ ಮಾನಸಿಂಹನು ದರ್ಬಾರದಲ್ಲಿ ಕುಳಿತಿದ್ದನು. ಆತನ ಮಿತ್ರ ಮಂಡಲಿಯೊಡನೆ ರಾಜಾ ರಾಮಚಂದ್ರದೇವನೂ ದರ್ಬಾರದಲ್ಲಿ ಕುಳಿತಿದ್ದನು. ಉಸ್ಮಾನಖಾನನು ದರ್ಶನಕ್ಕೆ ಬರುವ ಕಾಲವು ಸಮೀಪಿಸಿದಂತಾಗಿತ್ತು, ಅಷ್ಟರಲ್ಲಿ ಉಸ್ಮಾನನು ಬಂದ ವರ್ತಮಾನವು ಹತ್ತಿದಕೂಡಲೆ, ವಾದ್ಯಗಳು ಬಾರಿಸಹತ್ತಿದವು. ಮಾನಸಿಂಹನು ಯಾವತ್ತು ಪರಿವಾರದೊಡನೆ ಉಸ್ಮಾನ್‌ಖಾನನ ಸನ್ಮಾನಾರ್ಥವಾಗಿ ಎದ್ದು ಹೊರಗೆ ಬಂದನು. ಆತನು ಉಸ್ಮಾನಖಾನನನ್ನು ಉಚಿತವಾಗಿ ಸನ್ಮಾನಿಸಿ, ಖಾನನ ಕೈ ಹಿಡಿದು, ಆತನನ್ನು ದರ್ಬಾರದೊಳಗೆ ಕರಕೊಂಡು ಹೋಗಿ, ಆತನ ಸಲುವಾಗಿಯೇ ಸಿದ್ಧಪಡಿಸಿದ ಸಿಂಹಾಸನದಲ್ಲಿ ಆತನನ್ನು ಕುಳ್ಳಿರಿಸಿದನು; ತಾನು ತನ್ನ ಆಸನದಲ್ಲಿ ಕುಳಿತುಕೊಂಡನು. ಪರಸ್ಪರರ ಕುಶಲ ಪ್ರಶ್ನೆಗಳಾದವು. ಖ್ವಾಜಾ ಇಸಾಖಾನನ ಗುಣಗಳನ್ನು ಶ್ಲಾಘಿಸಿ, ಆತನ ಮರಣಕ್ಕೋಸ್ಕರ ಮಾನಸಿಂಹನು ವ್ಯಸನಪಟ್ಟನು. ಉಸ್ಮಾನನ ಸುಂದರ ರೂಪನ್ನೂ, ಆತನ ತೇಜಸ್ವಿತೆಯನ್ನೂ ನೋಡಿ ದರ್ಬಾರದ ಜನರು ಆತನ ವಿಷಯವಾಗಿ ಆದರವುಳ್ಳವರಾಗಿದ್ದರು. ಆ ತರುಣ ನವಾಬನು ಭರಜರಿಯ ಪೋಷಾಕು ಹಾಕಿಕೊಂಡಿದ್ದನು. ಆತನ ಶಿರೋಭೂಷಣದಲ್ಲಿ ಸುಂದರವಾದ ತುರಾಯಿಯು ಒಪ್ಪುತ್ತಿತ್ತು, ಟೊಂಕದ ಎಡಗಡೆಯಲ್ಲಿ ಖಡ್ಗವು ಅಲೆದಾಡುತ್ತಿತ್ತು. ಒಟ್ಟಿಗೆ ಖಾನನ ಪೋಷಾಕು ಅತ್ಯುತ್ಕೃಷ್ಟವಾಗಿತ್ತು; ಆದರೆ ಖಾನನ ಸುಂದರವಾದ ಸೌಮ್ಯ ಮೂರ್ತಿಯು ವಿಚಾರಮಗ್ನವೂ, ಉದಾಸವೂ ಇದ್ದದ್ದರಿಂದ, ಖಾನನು ಚಿಂತಾಮಗ್ನನಾಗಿರುವಂತೆ ತೋರುತ್ತಿದ್ದನು, ಆಗ ಮಹಾರಾಜರು ಉಸ್ಮಾನನನ್ನು ಕುರಿತು—''ಓಡಿಸಾದಲ್ಲಿದ್ದೂ, ನನಗೆ ಓಡಿಸಾದ ನವಾಬರ ದರ್ಶನವಾದೀತೆಂದು ತೋರಿದ್ದಿಲ್ಲ, ತಮ್ಮ ಆಗಮನವಾದದ್ದೊಂದು ಭಾಗ್ಯವೆ''ಂದು ನಾನು ತಿಳಿಯುವೆನು.

ಮಾನಸಿಂಹನ ಈ ಮಾರ್ಮಿಕ ಭಾಷಣವು ಉಸ್ಮಾನನ ಅಂತಃಕರಣಕ್ಕೆ ನಟ್ಟಿತು. ಆತನು ಕೆಲಹೊತ್ತು ವಿಚಾರಮಾಡಿ — ತಮ್ಮ ಮಾತು ಯೋಗ್ಯವೆಂತಲೇ ಹೇಳಬೇಕಾಗುವದು; ಯಾಕಂದರೆ, ನಮ್ಮ ಮೇಲೆ ತಮ್ಮ ಪ್ರೇಮವೇ ಅಷ್ಟು ಇರುತ್ತದೆ; ಆದರೆ ಮಹಾರಾಜ, ನಾವು ತಮ್ಮ ಗುಲಾಮರು. ಗುಲಾಮರ ದರ್ಶನದಿಂದ ಯಾರಿಗಾದರೂ ಆನಂದವಾಗವ ಸಂಭವ ವಿರುವದೋ? ಗುಲಾಮರು ಬಂದದ್ದರಿಂದ ಭಾಗ್ಯೋದಯವಾಯಿತೆಂದು ಯಾರಾದರೂ ತಿಳಕೊಳ್ಳಬಹುದೊ? ಅನ್ನಲು, ಮಾನಸಿಂಹನ ವ್ಯಂಗೋಕ್ತಿಗೆ ಬಡ್ಡಿಸಹಿತವಾಗಿ ಉಸ್ಮಾನನು ಉತ್ತರ ಕೊಟ್ಟಂತೆಯಾದ್ದರಿಂದ, ಅಂಬರಾಧೀಶ್ವರನು ಸ್ವಲ್ಪ ರೇಗಿಗೆದ್ದನು. ಆತನು ಉಸ್ಮಾನನಿಗೆ—ಒಮ್ಮೊಮ್ಮೆ ಗುಲಾಮರೂ ಸ್ವಾಭಿಮಾನವನ್ನು ಕಾಯ್ದುಕೊಳ್ಳ ಬೇಕಾಗುತ್ತದೆ. ಎಷ್ಟೋ ಗುಲಾಮರು ಸ್ವಾಭಿಮಾನ ಪ್ರೇರಿತರಾಗಿ ಸ್ವಾಮಿತ್ವವನ್ನು ಪಡೆಯುತ್ತಾರೆ; ಆದರೆ ಅದೆಲ್ಲ ಅವರವರ ಗುಣವನ್ನವಲಂಬಿಸಿರುತ್ತದೆ. ತಾವು ಮೊಗಲರ ಆಧೀನತೆಯನ್ನು ಸ್ವೀಕರಿಸಿರುತ್ತೀರಿ. ಅವರೊಡನೆ ಏಕರೂಪವಾಗುವದೂ – ಬಿಡುವದೂ ನಿಮ್ಮ ಇಚ್ಛೆಯನ್ನವಲಂಬಿಸಿರುತ್ತದೆ, ಎಂದು ನುಡಿದನು. ಮಹಾರಾಜರ ಈ ಮಾತಿನಿಂದ

ಖಾನನ ಮನಸ್ಸು ಬಹಳವಾಗಿ ನೊಂದಂತೆ ತೋರಿತು. ಆತನು ದುಃಖಿತನಾದನು. ಅವನ ಮೋರೆಯು ಕೆಂಪಾಯಿತು. ಮಾನಸಿಂಹನು ಖಾನನ ಮೋರೆಯ ಮುಂದೆ ಆತನನ್ನು ಗುಲಾಮನೆಂದು ಕರೆದನು! ಖಾನನು ಅಷ್ಟು ನೊಂದುಕೊಂಡರೂ, ಅಷ್ಟು ಸಿಟ್ಟಾದರೂ ಆತನು ತನ್ನ ಸಿಟ್ಟನ್ನೆಲ್ಲ ನುಂಗಿಕೊಂಡನು. ಖಾನನ ಸಹನಶೀಲತೆಯು ಅಪೂರ್ವವಾದದ್ದಿತ್ತು. ಶೌರ್ಯ – ಸಾಹಸಗಳಲ್ಲಿಯಾದರೂ ಆತನ ಕೈಯು ಮುಂದಾಗಿತ್ತು. ಶೌರ್ಯವಿದ್ದಲ್ಲಿ ಸಹನ ಗುಣವಿರುವದು ಕೇವಲ ದುರ್ಲಭವಾಗಿದ್ದರೂ, ಅವೆರಡೂ ಗುಣಗಳೂ ಖಾನನಲ್ಲಿ ವಾಸಿಸುತ್ತಿದ್ದವು. ಆಯೇಷೆಯ ವಿಷಯದ ಪ್ರೇಮಪ್ರಸಂಗದಲ್ಲಿ ಖಾನನ ಆತ್ಮಸಂಯಮನವು ಆಗಾಗ್ಗೆ ಪ್ರಕಟವಾದದ್ದನ್ನು ವಾಚಕರು ಅರಿತಿರುವರು. ಆ ಆತ್ಮಸಂಯಮವನ್ನು ಖಾನನು ಈಗಲೂ ಪ್ರಕಟಿಸಿದನು. ಬಹಳ ಹೊತ್ತು ಸುಮ್ಮನೆ ಕುಳಿತುಕೊಂಡು ಖಾನನು ಮಾನಸಿಂಹನನ್ನು ಕುರಿತು ವಿನಯದಿಂದ—

ಉಸ್ಮಾನಖಾನ—ಮಹಾರಾಜ, ನಾನು ತಮ್ಮ ಸಂಗಡ ಜಗಳಾಡಲಿಕ್ಕೆ ಬಂದಿರುವದಿಲ್ಲ. ತಮ್ಮಂಥ ಶ್ರೇಷ್ಠ ಅಧಿಕಾರಿಗಳೊಡನೆ ನನ್ನಂಥ ಕ್ಷುದ್ರ ಸೇವಕನು ವಾದಿಸುವದು ಯುಕ್ತವೂ ಅಲ್ಲ. ನಾನು ಎಷ್ಟೋ ಸಂಗತಿಗಳನ್ನು ಕುರಿತು ಮಹಾರಾಜರ ಆಲೋಚನೆಯನ್ನು ಕೇಳಿಕೊಳ್ಳ ಬೇಕೆಂತಲೂ ಮಹಾರಾಜರನ್ನು ಬೇಡಿಕೊಳ್ಳಬೇಕೆಂತಲೂ ಬಂದಿದ್ದೆನು. ಆದರೆ ನನ್ನ ದುರ್ದೈವದಿಂದ ಮೊದಲ ತುತ್ತಿಗೇ ನೊಣ ತಿಂದಂತೆ ವಿರೋಧ ಉತ್ಪನ್ನವಾಗುವ ಸಂಭಾಷಣದ ಯೋಗವು ಆರಂಭಕ್ಕೇ ಒದಗಿತು. ತಮ್ಮ ಸಂಗಡ ನಾನು ಆಡಬಾರದಾಗಿದ್ದ ಮಾತುಗಳು ಆಡಿಹೋದವು; ಆದ್ದರಿಂದ ನಾನು ತಮ್ಮ ಸಂಗಡ ಮಾತಾಡಲಿಕ್ಕೂ ಕೇವಲ ಅಪಾತ್ರನಿರುತ್ತೇನೆ. ಇನ್ನು ನನಗೆ ಹೋಗಲಪ್ಪಣೆ ಕೊಡಬೇಕು; ಆದರೆ ಹೋಗ ಹೋಗುತ್ತ ನಾನು ಮಹಾರಾಜರನ್ನು ಬೇಡಿಕೊಳ್ಳಬೇಕೆನ್ನುತ್ತೇನೆ. ನನ್ನ ಬೇಡಿಕೆಯು ಮಹಾರಾಜರ ಮನೆತನಕ್ಕೆ ಸಂಬಂಧಿಸಿದ್ದಿರುವದರಿಂದ, ಮಹಾರಾಜರ ಮುಂದೆ ಹೇಳಲಿಕ್ಕೂ ನನಗೆ ನಾಚಿಕೆ ಬರುತ್ತದೆ; ಆದರೆ ಕರ್ತವ್ಯವೆಂದು ಮಹಾರಾಜರ ಮುಂದೆ ಈಗ ಮಾತಾಡಬೇಕಾಗಿದೆ; ಮಹಾರಾಜರು ಅದನ್ನು ಕೇಳಿಕೊಳ್ಳ ಬಹುದೇನು?

ಮಾನಸಿಂಹ—ತಾವು ನಿರ್ಬಾಧವಾಗಿ ಮಾತಾಡಬಹುದು, ಅದನ್ನು ಕೇಳಿಕೊಳ್ಳಲು ನಾನು ಸಿದ್ಧನಿರುತ್ತೇನೆ. ತಮ್ಮ ಸಂಗಡ ಯಾವ ಬಗೆಯಿಂದಲೂ ವಿರೋಧ ಬೆಳಿಸುವ ಇಚ್ಛೆಯು ನನಗಿರುವದಿಲ್ಲ; ನನ್ನ ಮಾತಿನ ತಾತ್ಪರ್ಯವಿಷ್ಟೇ, ನೀವು ನಿಮ್ಮ ಯೋಗ್ಯತೆಗೆ ಅನುರೂಪವಾಗಿ ನಡಕೊಂಡಿದ್ದರೆ, ನಿಮ್ಮ ಹಿತವೇ ಆಗುತ್ತಿತ್ತು.

ಉಸ್ಮಾನಖಾನ—ಹೋಗಲಿ, ಇನ್ನು ಆ ವಿರೋಧಕರ ಮಾತಿನ ಸುದ್ದಿಯೇ ಬೇಡ. ನಾನು ಮಹಾರಾಜರಲ್ಲಿ ಮಾಡಿಕೊಳ್ಳುವ ವಿನಂತಿಯೇನೆಂದರೆ—ತಾವು ತಮ್ಮ ಪುತ್ರರಾದ ಕುಮಾರ ಜಗತ್ಸಿಂಗರನ್ನು ಆಮರಣ ಕಾರಾಗೃಹದಲ್ಲಿರಿಸಿರುವಿರೆಂದು ಕೇಳಿದ್ದೇನೆ. ಕುಮಾರರಿಗೆ ಇಂಥ ಭಯಂಕರ ಶಿಕ್ಷೆಯನ್ನು ವಿಧಿಸಲಿಕ್ಕೆ ಮುಂದು ಮಾಡಿದ ಹಲವು ಕಾರಣಗಳಲ್ಲಿ, ನವಾಬ ನಂದಿನಿಯಾದ ಆಯೇಷೆಯ ಮೇಲೆ ಕುಮಾರರ ಪ್ರೇಮವಿರುತ್ತದೆಂಬದೊಂದು ಕಾರಣವಿರುತ್ತದೆಂತಲೂ ಕೇಳಿದ್ದೇನೆ. ಈ ಮಾತು ನಿಜವೋ?

ಮಾನಸಿಂಹ—ನವಾಬನಂದಿನಿಯಾದ ಆಯೇಷೆಯನ್ನು ಪ್ರೀತಿಸುವದೂ, ಆಕೆಯು ತನ್ನನ್ನು ಪ್ರೀತಿಸುವಂತೆ ಯತ್ನಿಸುವದೂ ನಿಜವಾಗಿ ಜಗತ್ಸಿಂಗನ ಘೋರ ಅಪರಾಧಗಳಾಗಿರುತ್ತವೆ. ಜಗತ್ಸಿಂಗನಿಗೆ ಈಗ ವಿಧಿಸಿರುವ ಶಿಕ್ಷೆಯು, ಆತನ ಈ ಘೋರ ಅಪರಾಧಗಳ ಮಾನದಿಂದ ನನಗೆ ಅಲ್ಪವಾಗಿ ತೋರುತ್ತದೆ. ಆತನು ಕೇವಲ ಉಚ್ಛೃಂಕಲ ವೃತ್ತಿಯವನೂ, ರಾಜಕಾರ್ಯಗಳ ಅವಹೇಳನ ಮಾಡುವವನೂ, ರಾಜ ಶತೃವಿನೊಡನೆ ಸ್ನೇಹ ಬಳೆಸುವವನೂ ಇರುತ್ತಾನೆ. ಈ ಗುರುತರವಾದ ಅಪರಾಧಗಳ ಬಗ್ಗೆ ಆತನಿಗೆ ಆಮರಣ ಕಾರಾಗೃಹವಾಸದ ಶಿಕ್ಷೆಯು ವಿಧಿ ಸಲ್ಪಟ್ಟಿರುತ್ತದೆ.

ಉಸ್ಮಾನಖಾನ—ಕುಮಾರರಿಗಾದ ಶಿಕ್ಷೆಯ ಯೋಗ್ಯಾ ಯೋಗ್ಯವನ್ನು ವಿಚಾರಿಸುವ ಅಧಿಕಾರವು ನನಗಿರುವದಿಲ್ಲ, ಈ ವಿಷಯದಲ್ಲಿ ನನಗೆ ಏನೂ ತಿಳಿಯುವದಿಲ್ಲ. ಜಗತ್ಸಿಂಗರವರು ನನ್ನ ಶತ್ರುಗಳಾಗಿರುತ್ತಾರೆ. ಅನೇಕ ಕಾರಣಗಳಿಂದ ಅವರ ಸರ್ವಸ್ವದ ನಾಶವಾಗಬೇಕೆಂದು ನಾನು ಇಚ್ಛಿಸುತ್ತೇನೆ; ಆದರೂ ಅಂಥ ವೀರರು ಹೀಗೆ ಸೆರೆಮನೆಯಲ್ಲಿ ವಿಪತ್ತನ್ನು ಭೋಗಿಸುತ್ತ ಕೊಳಿಯುವದು ಎಷ್ಟು ಮಾತ್ರವೂ ನನ್ನ ಮನಸ್ಸಿಗೆ ಬರುವದಿಲ್ಲ. ಮಹಾರಾಜ, ನಾನೊಂದು ಗೂಢ ಸಂಗತಿಯನ್ನು ಹೇಳಬೇಕೆಂದು ಮಾಡಿದ್ದೇನೆ, ಹೇಳಲಿಯಷ್ಟೇ?

ಮಾನಸಿಂಹ—ಅವಶ್ಯವಾಗಿ ಹೇಳಬೇಕು, ಸಂಕೋಚಪಡುವ ಕಾರಣವಿಲ್ಲ.

ಉಸ್ಮಾನ—ಜಗತ್ಸಿಂಗರವರು ಆಯೇಷೆಯನ್ನು ಪ್ರೇಮದೃಷ್ಟಿಯಿಂದ ನೋಡಿರುವದಿಲ್ಲ; ಮತ್ತು ತಮ್ಮ ವಿಷಯವಾಗಿ ಆಯೇಷೆಯಲ್ಲಿ ಪ್ರೇಮವು ಉತ್ಪನ್ನವಾಗಬೇಕೆಂದು ಅವರು ಯಾವ ಪ್ರಕಾರದ ಯತ್ನವನ್ನೂ ಮಾಡಿರುವದಿಲ್ಲ. ಆಯೇಷೆಯು ತಾನಾಗಿ ಜಗತ್ಸಿಂಗರವರಲ್ಲಿ ಅನುರಕ್ತಳಾಗಿರುತ್ತಾಳೆ. ಆಕೆಯು ತಾನಾಗಿಯೇ ತನ್ನ ಹೃದಯವನ್ನು ಕುಮಾರ ಜಗತ್ಸಿಂಗರವರಿಗೆ ಒಪ್ಪಿಸಿರುವಳು; ಆದರೆ ಜಗತ್ಸಿಂಗರವರು ಆಯೇಷೆಯ ವಿನಂತಿಯನ್ನು ಕೂಡ ಮನ್ನಿಸಿರುವದಿಲ್ಲ, ಅವರು ಆಕೆಯೊಡನೆ ಬರಿಯ ಪ್ರೇಮಯುಕ್ತ ಭಾಷಣಗಳನ್ನು ಕೂಡ ಎಂದೂ ಮಾಡಿರುವದಿಲ್ಲ. ಜಗತ್ಸಿಂಗರವರು ನನ್ನ ಶತೃಗಳಾಗಿದ್ದರೂ, ನಾನು ಸತ್ಯವನ್ನು ಸ್ಮರಿಸಿ, ಮಹಾರಾಜರವರ ಮುಂದೆ ಈ ಮಾತನ್ನು ಹೇಳುತ್ತೇನೆ.

ಮಾನಸಿಂಹ—ಹಾಗಿದ್ದರೆ ನೀವು ಜಗತ್ಸಿಂಗನೊಡನೆ ದ್ವಂದ್ವಯುದ್ಧವನ್ನು ಯಾಕೆ ಮಾಡಿದಿರಿ?

ಉಸ್ಮಾನ—ಮಹಾರಾಜ, ಬಹು ಗುಪ್ತವಾಗಿ ನಡೆದಿದ್ದ ಈ ನಮ್ಮ ದ್ವಂದ್ವಯುದ್ಧದ ಸಂಗತಿಯು ಸಹ ತಮಗೆ ಗೊತ್ತಿರುತ್ತದೆಂದ ಹಾಗಾಯಿತು! ದ್ವಂದ್ವಯುದ್ಧದ ಕಾರಣವನ್ನು ಹೇಳುತ್ತೇನೆ, ಮಹಾರಾಜರು ಕೇಳಬೇಕು. ಆಯೇಷೆಯು ನನ್ನ ಪ್ರಾಣವಾಗಿರುವಳು. ಆಕೆಯ ಆಸೆಯಿಂದಲೇ ನಾನು ಈ ವರೆಗೆ ಜೀವಿಸಿರುವೆನು; ಆದರೆ ಆಯೇಷೆಯ ಹೃದಯದಲ್ಲಿ ನನಗೆ ಕಿಂಚಿತ್ತಾದರೂ ಸ್ಥಳವು ದೊರೆಯಲೊಲ್ಲದು. ಆಕೆಯು ತನ್ನ ಹೃನ್ಮಂದಿರದ ಸಿಂಹಾಸನದಲ್ಲಿ ಜಗತ್ಸಿಂಗರವರನ್ನು ಕುಳ್ಳಿರಿಸಿಕೊಂಡಿರುವಳು. ಅಂತೇ ನಾನು ಜಗತ್ಸಿಂಗರವರನ್ನು ಶತೃವೆಂದು

ತಿಳಿದಿದ್ದೇನೆ. ಜಗತ್ಸಿಂಗರವರು ಈ ಜಗತ್ತಿನಲ್ಲಿ ಇಲ್ಲದ ಹಾಗಾದ ಹೊರತು ಆಯೇಷೆಯ ಹೃದಯದಲ್ಲಿ ನನಗೆ ಸ್ಥಳವು ಸಿಗುವಹಾಗಿಲ್ಲ. ಆಯೇಷೆಯ ಹೃದಯಲ್ಲಿ ಜಗತ್ಸಿಂಗರವರು ಇರುವದನ್ನು ನೋಡಿ ಉಂಟಾಗುವ ಸಂತಾಪಾಗ್ನಿಯಲ್ಲಿ ನಾನು ದಗ್ಧನಾಗುತ್ತಿರುವೆನು. ಹಿಂದಿನ ಆ ದ್ವಂದ್ವಯುದ್ಧದಲ್ಲಿ ಜಗತ್ಸಿಂಗರವರನ್ನು ಕೊಲ್ಲುವದು ನನ್ನಿಂದಾಗಲಿಲ್ಲ. ಪುನಃ ಅಂಥ ಸಂಧಿಯು ಒದಗುವ ಕಾಲವನ್ನು ನಾನು ನಿರೀಕ್ಷಿಸುತ್ತಿರುವೆನು; ಆದರೆ ಜಗತ್ಸಿಂಗರವರು ಆಜನ್ಮ ಕಾರಾಗೃಹದಲ್ಲಿ ಕೊಳೆಯ ಹತ್ತಿದರೆ, ನನಗೆ ಆ ಸಂಧಿಯು ಹ್ಯಾಗೆ ದೊರೆಯಬೇಕು? ಆ ಸಂಧಿಯು ದೊರೆಯದಿದ್ದರೆ ಜಗತ್ಸಿಂಗರವರ ಪರಲೋಕ ಯಾತ್ರೆಗೆ, ನಾನು ವೀರೋಚಿತ ವಾದ ಬೇರೆ ಯಾವ ಉಪಾಯವನ್ನು ಯೋಚಿಸಬೇಕು? ಜಗತ್ಸಿಂಗರವರು ಮರಣ ಹೊಂದುವವರೆಗೆ ಆಯೇಷೆಯು ಅವರನ್ನು ಮರೆಯುವಂತೆ ಇಲ್ಲವಾದ್ದರಿಂದ, ನಾನು ಅವರನ್ನು ಕೊಲ್ಲಬೇಕಾಗಿದೆ; ಆದ್ದರಿಂದ ಮಹಾರಾಜ, ನಾನು ತಮ್ಮನ್ನು ಬೇಡಿಕೊಳ್ಳುವದೇ ನೆಂದರೆ, ತಾವು ಕುಮಾರರನ್ನು ಬಂಧಮುಕ್ತ ಮಾಡಿ ರಣಭೂಮಿಗೆ ಕಳಿಸತಕ್ಕದ್ದು.

ಮಾನಸಿಂಹ—ನಿಮ್ಮ ಶತೃತ್ವದ ಪ್ರಕಾರವು ವಿಲಕ್ಷಣವಾಗಿರುತ್ತದೆ. ಜಗತ್ಸಿಂಗನು ಆಯೇಷೆಯ ಮೇಲೆ ಎಂದೂ ಪ್ರೇಮ ಮಾಡದೇಯಿರುವದರಿಂದ ಆತನು ನಿರಪರಾಧಿ ಯೆಂದು ನೀವೇ ಹೇಳುತ್ತೀರಿ; ಮತ್ತು ಆತನನ್ನು ಕಾರಾಗೃಹದಿಂದ ಮುಕ್ತಮಾಡಿ ರಣಾಂಗಣಕ್ಕೆ ಕಳಿಸಿರಿ, ಆತನನ್ನು ಕೊಲ್ಲುತ್ತೇನೆ, ಎಂದು ನೀವೇ ಹೇಳುತ್ತೀರಿ; ಇದು ....

ಉಸ್ಮಾನ—ನಾನು ಸ್ವಾರ್ಥಸಾಧನಕ್ಕಾಗಿ ಹೇಳುತ್ತೇನೆಂದು ತಿಳಿದು ನನ್ನ ಮಾತನ್ನು ಅಸತ್ಯವೆಂದು ಭಾವಿಸಬೇಡಿರಿ. ಹೇಳಿಕೊಳ್ಳಬೇಕಾದದ್ದನ್ನು ನಾನು ಹೇಳಿಕೊಂಡೆನು. ಅದನ್ನು ನಡಿಸುವದೂ–ಬಿಡುವದೂ ತಮ್ಮ ಕಡೆಗೆ. ಇನ್ನು ನನಗೆ ಅಪ್ಪಣೆ ಕೊಡಬೇಕು. ರಾಜಕೀಯವಾದ ಒಂದೆರಡು ಮಾತುಗಳನ್ನು ತಮ್ಮ ಮುಂದೆ ಹೇಳಬೇಕಾಗಿತ್ತು; ಆದರೆ ಕಾಗದ ಪತ್ರಗಳ ಸಹಾಯದಿಂದ ಅವನ್ನು ಪರಸ್ಪರರು ತಿಳಿಸಬಹುದಾದ್ದರಿಂದ, ಈಗ ಅವನ್ನು ಹೇಳಲವಶ್ಯವೂ ಇಲ್ಲ.

ಈ ಮೇರೆಗೆ ನುಡಿದ ಉಸ್ಮಾನಖಾನನು ಔಪಚಾರಿಕವಾಗಿ ಸಭಿಕರೆಲ್ಲರನ್ನು ಸನ್ಮಾನಿಸುತ್ತ ಸಭಾಮಂಟಪದಿಂದ ಹೊರಬಿದ್ದನು. ಮಹಾರಾಜರು ರಾಮಚಂದ್ರದೇವರನ್ನು ಕುರಿತು—ಮೊಗಲರ ಹಾಗು ಪಠಾಣರ ನಡುವೆ ಆಗಿರುವ ಒಡಂಬಡಿಕೆಯು ಬೇಗನೇ ಮುರಿಯುವದು, ಎಂದು ನುಡಿದು, ಉದ್ವಿಗ್ನಚಿತ್ತದಿಂದ ಸಭಾಸ್ಥಾನದಿಂದ ಹೊರಬಿದ್ದು ಶ್ರೀ ಜಗನ್ನಾಥನ ಆರತಿಯನ್ನು ನೋಡುವದಕ್ಕಾಗಿ ಹೊರಹೊರಟು ಹೋದರು. ಅಂದು ಮಹಾರಾಜರ ಚಿತ್ತಕ್ಕೆ ಸಮಾಧಾನವಿದ್ದಿಲ್ಲ. ಕುಮಾರ ಜಗತ್ಸಿಂಗನ ವಿಷಯವಾಗಿ ಅವರ ಮನಸ್ಸು ಸ್ವಲ್ಪ ತಿರುಗಿತು. ಕುಮಾರನು, ತಾನು ನುಡಿದಂತೆ ಆಯೇಷೆಯ ವಿಷಯವಾಗಿ ಶುದ್ಧಾಂತಃಕರಣನಾಗಿರುವದನ್ನು ಉಸ್ಮಾನನ ಮುಖದಿಂದ ಕೇಳಿದಾಗಿನಿಂದ, ಅವರಿಗೆ ಒಂದು ಬಗೆಯ ಸಮಾಧಾನವಾದಂತಾಗಿತ್ತು. ಆದರೆ ಅಷ್ಟರಿಂದ ತನ್ನ ಮಗನು ನಿರಪರಾಧಿಯೆಂದು ಆ ನ್ಯಾಯ ನಿಷ್ಠುರನಾದ ಅಂಬ ರಾಧೀಶ್ವರನು ತಿಳಿಯಲಿಲ್ಲ. ಆತನು ಮರುದಿವಸವೇ

ಪುರಿಯಿಂದ ಹೊರಟನು. ನವಾಬ ಉಸ್ಮಾನಖಾನನು ಮಹಾರಾಜರ ದರ್ಶನಕ್ಕೆ ಹೋದದ್ದರಿಂದ, ಮಹಾರಾಜರು ತಮ್ಮ ನವಾಬರನ್ನು ಕಾಣುವದಕ್ಕಾಗಿ ಸ್ವರ್ಣಗಡಕ್ಕೆ ಬರುವರೆಂದು ಪಠಾಣರು ತಿಳಿದಿದ್ದರು; ಆದರೆ ಮಾನಸಿಂಹನು ಸ್ವರ್ಣಗಡಕ್ಕೆ ಹೋಗದೇ ಹಾಗೆಯೇ ಹೋದದ್ದರಿಂದ, ಪಠಾಣರಿಗೆ ಬಹಳ ಅಸಮಾಧಾನವಾಯಿತು. ಇದರಿಂದ ಉಸ್ಮಾನನ ದ್ವೇಷವು ಹೆಚ್ಚಿತು. ಒಡಂಬಡಿಕೆಯನ್ನು ಬೇಗನೇ ಮುರಿಯಬೇಕೆಂದು ಆತನು ನಿಶ್ಚಯಿಸಿದನು. ಮಾನಸಿಂಹನು ತಾನಾಗಿ ಒಡಂಬಡಿಕೆಯನ್ನು ಮುರಿದರೆ ನೆಟ್ಟಗಾಯಿತು. ಇಲ್ಲದಿದ್ದರೆ ತಾನೇ ಯಾವದೊಂದು ನೆವದಿಂದ ಒಡಂಬಡಿಕೆಯನ್ನು ಮುರಿಯಬೇಕೆಂದು ಆ ತರುಣ ಪಠಾಣನು ಹವಣಿಸಹತ್ತಿದನು. ಆತನು ಯುದ್ಧ ಸೌರಣೆಯಲ್ಲಿ ತೊಡಗಿದನು. ''ಯುದ್ಧದಲ್ಲಿ ಸೋಲಲಿ, ಗೆಲ್ಲಲಿ; ಯುದ್ಧಮಾಡದೇ ಬಿಡಲಿಕ್ಕಿಲ್ಲ''ಂಬ ನಿಶ್ಚಯ ದಿಂದ ಯುದ್ಧದ ಸಾಮುಗ್ರಿಗಳನ್ನು ಆತನು ಕೂಡಿಸಹತ್ತಿದನು. ಆತನ ಒಲವಿಗನುಸರಿಸಿ, ಆತನ ವಜೀರನಾದ ಖಿಜರಖಾನನೂ ಮನಃಪೂರ್ವಕ ಸಹಾಯಮಾಡಹತ್ತಿದನು. ಇದರಿಂದ ಸರಳಹೃದಯದ ಶೂರ ಉಸ್ಮಾನನ ಯುದ್ಧೋತ್ಸುಕ್ಯವು ದಿನದಿನಕ್ಕೆ ಅಭಿವೃದ್ಧಿಯಾಗತೊಡಗಿತು!

## ವಿಯೋಗ

ಒಂದು ದಿನ ಅಂತಃಪುರದ ಉದ್ಯಾನದ ಒಂದು ಮಂದಿರದಲ್ಲಿ ಉಸ್ಮಾನನು ಒಬ್ಬನೇ ವಿಚಾರ ಮಾಡುತ್ತ ಕುಳಿತಿದ್ದನು. ಅಷ್ಟರಲ್ಲಿ ಯಾರೋ ಹೊರಗೆ ಮಂಜುಲ ಸ್ವರದಿಂದ— ''ನವಾಬ ಸಾಹೇಬರು ಇಲ್ಲಿ ಒಬ್ಬರೇ ಇರುವರೇನು?'' ಎಂದು ಕೇಳಿದರು. ಕೇಳುವವಳ ದನಿಯು ತೀರ ಗುರುತಿನದಾಗಿದ್ದರೂ ಉಸ್ಮಾನನು ಆಶ್ಚರ್ಯಮಗ್ನನಾದನು. ಇತ್ತಿತ್ತ ಎಂದೂ ಅಂತಃಪುರದಿಂದ ಹೊರಬೀಳದೆಯಿದ್ದ ಆಯೇಷೆಯು, ತಾನಾಗಿ ತನ್ನನ್ನು ಕೇಳುತ್ತ ಬಂದದ್ದನ್ನು ನೋಡಿ ಆತನಿಗೆ ಆಶ್ಚರ್ಯವಾಗದೆಯೇನು ಮಾಡೀತು? ಖಾನನು ಉತ್ಕಂಠಿತನಾಗಿ— ''ಯಾರು ಆಯೇಷೆ, ಎರಡನೆಯವರಾರೂ ಇಲ್ಲ, ನಾನೊಬ್ಬನೇ ಇದ್ದೇನೆ. ಬಾ ಏನು, ನನ್ನನ್ನು ಕಾಣಲಿಕ್ಕೆ ಬಂದೆಯೋ ಏನು? ನೀನೇಕೆ ಇಷ್ಟು ಆಯಾಸಪಟ್ಟೆ? ಯಾರ ಸಂಗಡಲಾದರೂ ಹೇಳಿ ಕಳಿಸಿದ್ದರೆ, ನಾನೇ ನಿನ್ನ ಬಳಿಗೆ ಬರುತ್ತಿದ್ದೆನಲ್ಲ'' ಎಂದು ನುಡಿದು, ಆಕೆಯ ಸ್ವಾಗತಕ್ಕಾಗಿ ಆತನು ಪೀಠದಿಂದ ಎದ್ದು ಬಾಗಿಲಿಗೆ ಬಂದನು. ಆಯೇಷೆಯು ತಲೆ ಬಾಗಿಸಿಕೊಂಡು ಕೋಣೆಯೊಳಗೆ ಬಂದಳು. ಖಾನನು ಆಸನದಲ್ಲಿ ಕುಳಿತುಕೊಂಡನು. ಆಯೇಷೆಯೂ ಸ್ವಲ್ಪ ಅಂತರದ ಮೇಲೆ ಕುಳಿತುಕೊಂಡಳು. ಆಗ ಉಸ್ಮಾನನು—ಆಯೇಷೆ, ನನ್ನ ಭಾಗ್ಯವು ಯಾಕೆ ಉದಯವಾಗಿರ ಬಹುದು? ಒಮ್ಮಿಂದೊಮ್ಮೆ ನನ್ನ ನೆನಪು ನಿನಗೆ ಯಾಕೆ ಆಗಿರಬಹುದು? ಕರೆಕಳುಹಿದರೆ ನಾನು ಬರಲಿಕ್ಕಿಲ್ಲೆಂಬ ಅಪನಂಬಿಗೆಯು ನಿನ್ನಲ್ಲಿ ಯಾಕೆ ಉತ್ಪನ್ನವಾಯಿತು? ಹಾಗೆ ಉತ್ಪನ್ನವಾಗದಿದ್ದರೆ, ನನ್ನ ತನಕ ನೀನು ನಡೆದು ಬರಲಿಕ್ಕೆ ಯಾಕೆ ಶ್ರಮಬಟ್ಟೆ? ಹೇಳು,

ಎಂದು ಕೇಳಿದನು. ಅದನ್ನು ಕೇಳಿ ತಲೆಬಾಗಿಸಿಕೊಂಡು ಕುಳಿತಿದ್ದ ಆಯೇಷೆಯು—ನವಾಬ ಸಾಹೇಬ, ನಿಮ್ಮನ್ನು ಕರೆಕಳುಹಲಿಕ್ಕೆ ಪ್ರತಿಬಂಧವೇನೂ ಇದ್ದಿಲ್ಲ. ಆದರೆ ಬಹಳ ಹೊತ್ತು ವಿಚಾರಿಸಿದ ಮೇಲೆ ನಾನೇ ನಿಮ್ಮ ಬಳಿಗೆ ಬರುವದು ಯೋಗ್ಯವಾಗಿ ತೋರಿದ್ದರಿಂದ ಬಂದುಬಿಟ್ಟೆನು. ಉಸ್ಮಾನ, ನಾನು ನಿಮ್ಮನ್ನು ಎಂದೂ ಸ್ಮರಿಸುವದಿಲ್ಲೆಂದು ನಿಮ್ಮ ತಿಳುವಳಿಕೆಯಾಗಿರುವಂತೆ ತೋರುತ್ತದೆ! ಒಳ್ಳೇದು ಅದಿರಲಿ, ನನ್ನ ಮನಸ್ಸಿನಲ್ಲಿ ನಿಮ್ಮನ್ನು ಏನೋ ಕೇಳಬೇಕೆಂದು ಬಂದದ್ದರಿಂದ ನಾನು ನಿಮ್ಮ ಬಳಿಗೆ ಬಂದಿರುವೆನು. ಕೇಳಲಾ? ಎಂದು ಪ್ರಶ್ನೆ ಮಾಡಲು, ಉಸ್ಮಾನನು—''ಕೇಳು ಆಯೇಷೇ, ನಿನ್ನ ಮಾತುಗಳನ್ನು ಕೇಳುವದಕ್ಕಾಗಿ ನನ್ನ ಮನಸ್ಸು ಯಾವಾಗಲೂ ಉತ್ಸುಕವಾಗಿರುತ್ತದೆ. ಕೇಳು ಕೇಳು, ಏನು ಕೇಳುವದನ್ನು ಬೇಗನೇ ಕೇಳು; ಆದರೆ ಆಯೇಷೇ, ನಾನು ಎಂದಾದರೂ ನಿನಗೆ ಕೇಳಲಿಕ್ಕೆ ಪ್ರತಿಬಂಧ ಮಾಡಿದ್ದೇನೆ? ಅಂದಬಳಿಕ ಇಂದೇ ಯಾಕೆ ನನ್ನ ಒಪ್ಪಿಗೆಯನ್ನು ನೀನು ಕೇಳಿಕೊಳ್ಳುತ್ತೀ?

ಖಾನನ ಈ ಮಾತುಗಳನ್ನು ಕೇಳಿ ಆಯೇಷೆಯು ತನ್ನ ಸೆರಗಿನ ಅಂಚನ್ನು ತೀಡುತ್ತ ಖಾನನ ಮೋರೆನೋಡುತ್ತ ಸುಮ್ಮನೆ ನಿಂತುಕೊಂಡಳು. ಆಗ ಉಸ್ಮಾನನು—ಆಯೇಷೇ, ಮಾತಾಡು, ಸಂಕೋಚಪಡುವದೇಕೆ? ಏನು ಮಾತಾಡಬೇಕೆಂದು ನೀನು ಬಂದಿರುತ್ತೀ? ಈ ಉಸ್ಮಾನನ ಆಶೆಯೇನಾದರೂ ಸಫಲವಾಗುವ ಹಾಗಿರುತ್ತದೇನು? ಎಂದು ಕೇಳಿದನು. ಆಗ ಆಯೇಷೆಯು ಸೆರಗಿನ ಅಂಚನ್ನು ಬಿಟ್ಟು, ಗಾಂಭೀರ್ಯದಿಂದ—''ನೀವು ಯಾವಾಗಲೂ ಯುದ್ಧದ ಸೌರಣೆಯಲ್ಲಿ, ಅಥವಾ ವಿಚಾರದಲ್ಲಿ ಮಗ್ನರಾಗಿರುವದರಿಂದ ನಾನು ನಿಮ್ಮನ್ನು ಕರೆಕಳುಹಲಿಲ್ಲ. ಮತ್ತು ಈಗ ಮಾತಾಡಲಿಕ್ಕೆ ಪರವಾನಿಗೆಯನ್ನು ಕೇಳಿದೆನು. ಈಗಾದರೂ ತಮಗೆ ಕೆಲಸದ ಅವಸರವಿದ್ದರೆ, ಮತ್ತೆ ಯಾವಾಗಾದರೂ ಕೇಳುವೆನು. ಬರುತ್ತೇನೆ ಹಾಗಾದರೆ, ಎಂದು ಹೊರಡಲು ಸಿದ್ಧವಾದಳು. ಆಗ ಉಸ್ಮಾನನು ಆಕೆಯನ್ನು ಕುರಿತು ದೀನ ಮುದ್ರೆಯಿಂದ—ಆಯೇಷೇ, ಹೀಗೆ ನೀನು ನನ್ನಲ್ಲಿ ಪರಕೀಯತ್ವವನ್ನು ಭಾವಿಸುವದರಿಂದ ನನಗೆ ಬಹಳ ದುಃಖವಾಗುವದು. ನೀನು ನನ್ನೊಡನೆ ನಿರರ್ಥಕ ಮಾತುಗಳನ್ನಾಡುತ್ತ ಕುಳಿತುಕೊಂಡರೂ, ಅವನ್ನು ನಾನು ಬಹು ಮಹತ್ವದವೆಂದು ಭಾವಿಸುವೆನು. ಆಯೇಷೇ, ಸಾವಿರಾರು ಕೆಲಸಗಳಿದ್ದರೂ ಅವನ್ನು ಬದಿಗಿಟ್ಟು, ನಿನ್ನ ಮಾತುಗಳನ್ನು ನಾನು ಕೇಳುತ್ತ ಕುಳಿತುಕೊಂಡೇನು. ನೀನು ಮಾತಾಡುತ್ತಿರುವಾಗ ನಾನು ಎರಡನೆಯ ಕೆಲಸಗಳನ್ನು ಮಾಡಲಿಕ್ಕಿಲ್ಲ. ಹು, ಹೃದಯಕ್ಕೆ ಆನಂದವನ್ನೀಯುವ ಮಾತುಗಳನ್ನು ಆಡತೊಡಗು, ಸುಮ್ಮನೆ ಕುಳಿತುಕೊಳ್ಳಬೇಡ.

ಆಯೇಷೆ—(ಸದ್ಗದಿತ ಕಂಠದಿಂದ) ನವಾಬಸಾಹೇಬರೇ ನನ್ನನ್ನು ನೀವು ಅತ್ಯಂತವಾಗಿ ಪ್ರೀತಿಸುವಿರಿ, ನನ್ನ ಮೇಲೆ ನಿಮ್ಮ ಪರಮಾನುಗ್ರಹವಿರುವದು; ಆದರೆ ಅಧಮಾಧಮಳಾದ ನನ್ನಿಂದ ಇಂದಿನವರೆಗೆ ನಿಮಗೆ ದುಃಖವೇ ಆಗಿರುತ್ತದೆ; ಈಗಂತೂ .... ....

ಈ ಮೇರೆಗೆ ನು ಡಿಯುವಾಗ ಆಯೇಷೆಯ ಕಣ್ಣುಗಳು ಅಶ್ರುಪೂರ್ಣವಾದವು. ಆಗ ಉಸ್ಮಾನನು ಆತುರತೆಯಿಂದ—

ಉಸ್ಮಾನ—ಆಯೇಷೆ, ನೀನೆಂದು ನನಗೆ ದುಃಖಪಡಿಸಿರುತ್ತೀ? ನೀನು ದುಃಖಪಡಿಸಿದೆಯೆಂದು ನಾನೆಂದು ನಿನ್ನ ಮುಂದೆ ಆಡಿದ್ದೇನೆ? ನಾನು ನಿನ್ನ ಮೇಲೆ ಅನುಗ್ರಹ

ಮಾಡಿರುವದಾದರೂ ಏನು ಹೇಳು? ಆಯೇಷೆ, ನೀನು ಅಧಮಾಧಮಳಲ್ಲ; ನನ್ನ ಹಿತಚಿಂತಕಳಾಗಿರತ್ತೀ; ನವಾಬನ ಅಂತಃಪುರದ ಪ್ರಕಾಶವಾಗಿರುತ್ತೀ. ಹಲವು ಜನ ಸುಂದರಿಯರನ್ನು ನಿನ್ನ ಮೇಲೆ ನಿವಾಳಿಸಿ ಚೆಲ್ಲಬಹುದು! ಆಯೇಷೇ, ಇಂದು ನೀನು ಹೀಗೇಕೆ ಮಾಡುತ್ತೀ?

ಆಯೇಷೆ—ನನ್ನ ಈ ಕೃತಘ್ನ ದೇಹವನ್ನು ಇಲ್ಲಿ ಇನ್ನು ಇಡಬಾರದೆಂದು ಮಾಡಿದ್ದೇನೆ.

ಉಸ್ಮಾ—(ಆರ್ತ ಸ್ವರದಿಂದ) ಇಲ್ಲಿ ಇರುವದು ನಿನ್ನ ಮನಸ್ಸಿನಲ್ಲಿ ಇಲ್ಲದಿದ್ದರೆ, ನಿನ್ನನ್ನು ಪ್ರತಿಬಂಧಿಸುವವರು ಇಲ್ಲಿ ಯಾರಿದ್ದಾರೆ ಹೇಳು? ಕದಾಚಿತ್ ನಾನು ನಿನ್ನನ್ನು ಪ್ರತಿಬಂಧಿಸುವೆನೆಂದು ನೀನು ತಿಳಿದಿರಬಹುದು; ಆದರೆ ಆಯೇಷೇ, ನಿನ್ನನ್ನು ನಾನು ಪ್ರತಿಬಂಧಿಸುವದಂತು ಒತ್ತಟ್ಟಿಗೆ ಇರಲಿ, ನಿನ್ನ ಮನಸ್ಸಿಗೆ ಬಾರದ ಕೆಲಸವನ್ನು ನಾನು ಅಪ್ಪಿ ತಪ್ಪಿಯಾದರೂ ಮಾಡಲಿಕ್ಕಿಲ್ಲೆಂಬದನ್ನು ಚೆನ್ನಾಗಿ ನೆನಪಿನಲ್ಲಿಡು. ಅದಿರಲಿ, ಆಯೇಷೇ, ಇಂದು ನೀನು ಹೀಗೆ ಯಾಕೆ ನಿಷ್ಠುರ ಮಾತನ್ನು ಆಡುತ್ತೀ? ನೀನು ಇಲ್ಲಿಂದ ಹೋಗಲಿಕ್ಕೆ ಯಾರೇನು ಅಂಥ ಅಪರಾಧ ಮಾಡಿದ್ದಾರೆ? ನೀನು ಇಲ್ಲಿ ಇರದಿದ್ದರೆ ಮತ್ತೆ ಯಾರು ಇಲ್ಲಿ ಇರಬೇಕು? ನೀನು ಇಲ್ಲಿ ಇರುವದರಿಂದಲೇ ಉಸ್ಮಾನನು ಇಲ್ಲಿಯವರೆಗೆ ಜೀವದಿಂದ ಇದ್ದಾನೆ. ನಿನ್ನ ಪ್ರಾಪ್ತಿಯ ಆಶೆಯನ್ನು ಉಸ್ಮಾನನು ಜೀವವಿರುವವರೆಗೆ ಬಿಡಲಾರನು. ನನ್ನ ಆಶಾಭಂಗ ಮಾಡುವದು ನಿನಗೆ ಯೋಗ್ಯವೆ? ನೀನು ಇಷ್ಟು ಕಠಿಣ ಹೃದಯಳು ಹ್ಯಾಗಾದೆ? ನನ್ನನ್ನು ಇಲ್ಲಿ ಬಿಟ್ಟು ನೀನು ಹೋಗುವದಾದರೂ ಎಲ್ಲಿಗೆ?

ಆಯೇಷೆ—(ಅಳುತ್ತ) ಉಸ್ಮಾನ, ನಾನೇನು ಹೇಳಲಿ? ನನ್ನನ್ನು ಪ್ರೀತಿಸುವದರಿಂದ ನಿನಗೆ ಸುಖವಾಗುವ ಹಾಗಿಲ್ಲ; ಅಂದಬಳಿಕ ನಿನ್ನ ಕಣ್ಣೆದುರಿಗೆ ಇದ್ದು ನಾನು ನಿನ್ನನ್ನು ದುಃಖಕ್ಕೆ ಈಡು ಮಾಡಲಾ? ಆದರೆ ಏನು ಮಾಡಲಿ? ನಿನಗೆ ಸುಖವನ್ನುಂಟು ಮಾಡುವದು ನನ್ನ ಕೈಯಲ್ಲಿರುವದಿಲ್ಲ, ಈ ಪಾಷಾಣ ಹೃದಯದ ಆಯೇಷೆಯನ್ನು ಪ್ರೀತಿಸಿ, ನೀನು ವ್ಯರ್ಥವಾಗಿ ಶರೀರ ಶೋಷಣ ಮಾಡಿಕೊಳ್ಳುತ್ತಿ. ಈ ಚಾಂಡಾಲಳು ನಿನ್ನ ಕಣ್ಣುಮರೆಯಾದ ಹೊರತು, ನಮ್ಮಿಬ್ಬರಿಗೂ ಸುಖವಾಗುವಹಾಗಿಲ್ಲ; ಆದ್ದರಿಂದಲೇ ನಾನು ಇಲ್ಲಿಂದ ಹೋಗುತ್ತೇನೆ.

ಮನಸ್ಸು ಕಲ್ಲುಮಾಡಿಕೊಂಡು ಆಯೇಷೆಯ ಮಾತುಗಳನ್ನು ಕೇಳುತ್ತಿದ್ದ ಖಾನನು ಕ್ಷಣಮಾತ್ರ ತಡೆದು, ಆಯೇಷೆಯನ್ನು ಕುರಿತು—

ಉಸ್ಮಾನ—ಆಯೇಷೇ, ಹೀಗೆ ದೀನನಾದ ಉಸ್ಮಾನನ ಪ್ರಾಣಹರಣ ಮಾಡುವದರಲ್ಲಿ ನಿನಗೇನು ಲಾಭವಿರುತ್ತದೆ ಹೇಳು? ನೀನು ಇರುತ್ತಿರುವ ಮಹಲಿನಲ್ಲಿಯೇ ಈ ದೈವಗೇಡಿಯಾದ ಉಸ್ಮಾನನು ಇರುತ್ತಿರುವದರಿಂದ, ಅವನು ತನ್ನನ್ನು ಭಾಗ್ಯಶಾಲಿಯೆಂದು ಭಾವಿಸುತ್ತ ಬಂದಿದ್ದನು; ಆದರೆ ಅಷ್ಟು ಭಾಗ್ಯವೂ ಅವನ ಪಾಲಿಗೆ ಇರಬಾರದೆಂದು ನಿನಗೆ ತೋರುತ್ತದೋ? ನೀನು ಇಲ್ಲಿ ಇರುವದರಿಂದ ಎಂದಾದರೂ ಆತನಿಗೆ ನಿನ್ನ ದರ್ಶನವಾಗುತ್ತಿತ್ತು; ನಿನ್ನ ಮಧುರ ಭಾಷಣದ ಶ್ರವಣದ ಲಾಭವು ಆತನಿಗೆ ದೊರೆಯುತ್ತಿತ್ತು; ಅಷ್ಟರಿಂದಲೇ ಆತನು ಸಮಾಧಾನ ಮಾಡಿಕೊಳ್ಳುತ್ತಿದ್ದನು. ಆದರೆ ಅದೂ ನಿನ್ನ ಮನಸ್ಸಿಗೆ ಬಾರದ ಹಾಗಾಯಿತಲ್ಲ!

ಆಯೇಷೇ—ಉಸ್ಮಾನ, ನಿನ್ನ ಆತ್ಮಸಂಯಮನವು ಅಪೂರ್ವವಾದದ್ದಿರುತ್ತದೆ; ನೀನು ಜಾಣನಿರುತ್ತೀ, ನಿನಗೆ ಎಲ್ಲ ಮಾತಿನ ತಿಳುವಳಿಕೆಯಿರುತ್ತದೆ; ಅಂದಬಳಿಕ ಹೀಗೆ ಯಾಕೆ ಮಾತಾಡುತ್ತೀ? ವಿಚಾರಮಾಡು, ನಾನು ಇಲ್ಲಿಂದ ಹೋಗುವದರಿಂದ ನಿನಗೆ ಸುಖ ವಾಗುವದೆಂದು ನಾನು ಭಾವಿಸಿರುವದಿಲ್ಲ; ನಾನು ನಿನ್ನ ಕಣ್ಣುಮರೆಯಾಗುವದರಿಂದ, ಕ್ರಮವಾಗಿ ನನ್ನ ವಿಸ್ಮೃತಿಯಾಗುತ್ತ ಹೋಗಿ ಕಡೆಗೆ ನೀನು ನನ್ನ ಹಂಬಲವನ್ನು ಬಿಟ್ಟು ಬಿಡುವ ಸಂಭವವಿರುತ್ತದೆ.

ಉಸ್ಮಾನ—ಆಯೇಷೇ, ಇದು ನಿನ್ನ ಭ್ರಮವು; ಅಥವಾ ತಪ್ಪು ತಿಳುವಳಿಕೆಯು. ದೂರ ಹೋಗುವದರಿಂದ ಪ್ರಣಯಿ ಜನರಿಗೆ ಎಲ್ಲಿಯಾದರೂ ಸುಖವಾಗುವದೇ? ಅವರು ವಿರಹಾಗ್ನಿಯಿಂದ ದಗ್ಧರು ಮಾತ್ರ ಆಗಬಹುದು. ನಾನು ನಿನ್ನ ದರ್ಶನಕ್ಕಾಗಿ ಈ ವರೆಗೆ ನಾನಾಗಿ ಎಷ್ಟು ಸಾರೆ ಬಂದಿರುತ್ತೇನೆ ಹೇಳು? ಒಮ್ಮೆ ಮಾತ್ರ ಬಂದಿರುವೆನು; ಅಂದ ಬಳಿಕ ನನ್ನಿಂದ ಒಂದು ವಿಧವಾಗಿ ನೀನು ದೂರವಿದ್ದಂತೆಯೇ ಆಗಿರುವದರಿಂದ, ನನ್ನ ಅಂತರ್ದಾಹವು ಕಡಿಮೆಯಾ ಗತಕ್ಕದ್ದು; ಆದರೆ ಕಡಿಮೆಯೆಲ್ಲಿ ಆಗಿದೆ? ಆಯೇಷೇ, ಸುಮ್ಮನೆ ಯಾಕೆ ನನಗೆ ಸಮಾಧಾನ ಹೇಳುತ್ತೀ. ದೂರ ಹೋಗುವದರಿಂದಲೇ ದುಃಖ ಶಮನ ವಾಗುತ್ತಿದ್ದರೆ, ನಿನ್ನ ಪ್ರೇಮಕ್ಕೆ ಪಾತ್ರನಾಗಿರುವ ಜಗತ್ಸಿಂಗನು ನಿನ್ನಿಂದ ದೂರ ಹೋಗಿರುವಾಗ ನಿನಗೆಲ್ಲಿ ದುಃಖ ಶಮನವಾಗಿದೆ? ನೀನು ದಿನಕ್ಕೊಂದು ಚಂದ ಸೊರಗುವದಕ್ಕೆ ಕಾರಣವೇನು ಹೇಳು?

ಆಯೇಷೆ—ಗಂಡಸರಿಗೆ ಎಷ್ಟೋ ದೊಡ್ಡ ದೊಡ್ಡ ಕೆಲಸಗಳಿರುತ್ತವೆ; ಬಲಿಷ್ಠವಾದ ಹಲವು ಆಸೆಗಳು ಅವರನ್ನು ಸುತ್ತು ಹಾಕಿರುತ್ತವೆ; ಮನಸ್ಸಿಗೆ ಬಂದರೆ ಅವರು ಹಲವು ಜನ ಸ್ತ್ರೀಯರನ್ನು ಲಗ್ನವಾಗಬಹುದು; ಬೇರೆ ಉಪ ಸ್ತ್ರೀಯರನ್ನಾದರೂ ರಕ್ಷಿಸಬಹುದು. ಹೀಗೆ ಗಂಡಸರ ಸಮಾಧಾನಕ್ಕೆ ಹಲವು ಮಾರ್ಗಗಳಿರುವವು; ಆದ್ದರಿಂದ ಉಸ್ಮಾನ, ನೀನು ನನ್ನನ್ನು ಮರೆತುಬಿಡು. ಪ್ರಯತ್ನ ಮಾಡಿದರೆ, ಬಹು ಬೇಗನೆ ನೀನು ನನ್ನನ್ನು ಮರೆತುಬಿಟ್ಟೀ.

ಉಸ್ಮಾನ—ಅಶಕ್ಯವು, ಆಯೇಷೇ, ತೀರ ಅಶಕ್ಯವು! ನನ್ನ ದೇಹಕ್ಕೆ ಕಬರಸ್ಥಾನದೊಳಗಿನ ತಂಪಾದ ಮಣ್ಣು ಹತ್ತಿದ ಬಳಿಕ ಮಾತ್ರ ಅದರ ದಾಹವು ಶಾಂತವಾದರೆ ಆಗಬಹುದು. ನಿನ್ನನ್ನು ನಾನು ಮರೆತೇನೆಂಬ ಮಾತನ್ನು ನೀನು ಮರೆತುಬಿಡು. ನಿನಗೆ ನಾನು ಒಮ್ಮೆ ಹೇಳಿರುವೆನಷ್ಟೇ, ನಿನ್ನ ಪ್ರಾಪ್ತಿಯ ಆಸೆಯಿಂದಲೇ ನಾನು ಪ್ರಾಣಧಾರಣ ಮಾಡಿರುತ್ತೇನೆ, ಆಯೇಷೇ, ಪ್ರಖರವಾದ ಉಷ್ಣತೆಯಿಂದ ಕಲ್ಲೂ ಕರಗುತ್ತದೆ; ಈಶ್ವರೀ ತಂತ್ರದಿಂದ ಉಸುಬಿನ ಬೈಲು ಇದ್ದಲ್ಲಿ ಸಮುದ್ರವಾಗುತ್ತದೆ; ಅದರಂತೆ ಉಸ್ಮಾನನು ಜೀವದಿಂದ ಇದ್ದರೆ ಆಯೇಷೆಯು ಎಂದಾದರೂ ಆತನ ಪ್ರೇಮದ ಸ್ವರೂಪವನ್ನು ತಿಳಿದುಕೊಂಡಾಳು, ಆತನ ಪ್ರೇಮ ಯಾಚನೆಯು ಎಂದಾದರೂ ಸಫಲವಾದೀತು ಎಂದು ಆತನು ತಿಳಿದುಕೊಂಡಿದ್ದನು; ಆದರೆ ದುರ್ಭಾಗ್ಯನಾದ ಉಸ್ಮಾನನು ಅಷ್ಟು ಪುಣ್ಯವನ್ನು ಮಾಡಿರುವದಿಲ್ಲ; ಅವನ ಕೋರಿಕೆಯು ಸಫಲವಾಗುವ ಆಸೆಯು ತೋರುವದಿಲ್ಲ!

ಆಯೇಷೆ—ಉಸ್ಮಾನ, ಸತ್ಯವಾಗಿ ಹೇಳುತ್ತೇನೆ, ನಿನ್ನ ಪ್ರೇಮವು ಅತ್ಯಂತ ಶ್ರೇಷ್ಠವಾದದ್ದಿರುತ್ತದೆ. ಅದನ್ನು ಹೋಲುವ ಪ್ರೇಮವು ಈ ಜಗತ್ತಿನಲ್ಲಿ ದೊರೆಯುವದು ಶಕ್ಯವಿಲ್ಲ. ನಿನ್ನ ಪ್ರೇಮದ ಸ್ವರೂಪವನ್ನು ನಾನು ತಿಳಿದುಕೊಂಡಿಲ್ಲೆಂದು ನೀನು ಅನ್ನುತ್ತೀ; ಆದರೆ ಹಾಗೆ ತಿಳಿಯಬೇಡ. ನಿನ್ನ ಪ್ರೇಮದ ಸ್ವರೂಪವನ್ನು ನಾನು ಪೂರ್ಣವಾಗಿ ಅರಿತು ಕೊಂಡಿರುತ್ತೇನೆ; ಆದರೆ ನಿನ್ನ ಮನೋದಯದಂತೆ ಅದಕ್ಕೆ ಪ್ರತಿಫಲವನ್ನು ಕೊಡಲು ನಾನು ಅಸಮರ್ಥಳಿದ್ದದ್ದರಿಂದ, ನಾನು ನಿನಗೆ ಅಷ್ಟು ಪಾಷಾಣ ಹೃದಯಿಯಾಗಿಯೂ, ಅಧವಾಧ ಮಳಾಗಿಯೂ ತೋರುತ್ತೇನೆ! ಅಣ್ಣಾ ಉಸ್ಮಾನ, ನಿನ್ನ ಸಲುವಾಗಿ ನಾನು ಬೇಕಾದದ್ದನ್ನು ಮಾಡಲು ಸಿದ್ಧಳಿರುತ್ತೇನೆ. ನಿನ್ನ ಹಿತಕ್ಕಾಗಿ ಆಯೇಷೆಯು ತನ್ನ ಪ್ರಾಣವನ್ನಾದರೂ ಈಡಾಡುವಳು! ಆದರೆ ಆಯೇಷೆಯ ಅಧಿಕಾರವನ್ನು ಮೀರಿದ ಮಾತಿನ ಸಲುವಾಗಿ ನೀನು ಕೊರಗಹತ್ತಿದರೆ, ಆಕೆಯೇನು ಮಾಡಬೇಕು? ನೀನೇ ಹೇಳು, ನನ್ನ ಹೃದಯವನ್ನು ನಾನು ಒಬ್ಬನಿಗೆ ಕೊಟ್ಟು ಬಿಟ್ಟಿದ್ದೇನೆ. ಅದರ ಮೇಲೆ ನನ್ನ ಅಧಿಕಾರವು ಉಳಿದಿರುವದಿಲ್ಲ. ನನಗೆ ಬೇಕಾದಷ್ಟು ದುಃಖವಾಗಲಿ, ಸುಖವಾಗಲಿ, ನನಗೆ ಪರಪುರುಷರ ವಿಚಾರ ಮಾಡಲಿಕ್ಕೆ ಬರವಹಾಗಿಲ್ಲ. ಉಸ್ಮಾನ, ಈವರೆಗೆ ನನ್ನನ್ನು ಕ್ಷಮಿಸುತ್ತ ಬಂದಂತೆ ಈಗಾದರೂ ಕ್ಷಮಿಸು. ನಿನ್ನನ್ನು ನಾನು ಕೈಜೋಡಿಸಿ ಬೇಡಿಕೊಳ್ಳುತ್ತೇನೆ, ಸೆರಗೊಡ್ಡಿ ಪ್ರಾರ್ಥಿಸುತ್ತೇನೆ, ನನ್ನದಿಷ್ಟು ಬೇಡಿಕೆಯನ್ನು ಪೂರ್ಣಮಾಡು. ಈ ದೈವಹೀನ ಸ್ತ್ರೀಯ ಮಬ್ಬಿಗೆಬಿದ್ದು ನಿನ್ನ ಆಯುಷ್ಯವನ್ನು ದುಃಖಮಯವಾಗಿ ಮಾಡಿಕೊಳ್ಳಬೇಡ. ನೀನು ದುಃಖದಿಂದ ಕಾಲಹರಣ ಮಾಡುವದನ್ನು ನೋಡಿ ನನ್ನ ಜೀವವು ತಳಮಳಿಸುತ್ತದೆ! ನನಗೆ ಸುಖವಾಗಬೇಕೆಂದು ನೀನು ಬಯಸುತ್ತಿರುವಿ ಯಷ್ಟೇ? ಹಾಗಿದ್ದರೆ ನೀನು ಅನ್ಯ ಸ್ತ್ರೀಯನ್ನು ಲಗ್ನಮಾಡಿಕೊಂಡು ಸುಖಿಯಾಗು. ಈ ಸರ್ಪಿಣಿಯ ಮೋಹಪಾಶದಲ್ಲಿ ಸಿಕ್ಕು ವ್ಯರ್ಥ ಗಾಸಿಯಾಗಬೇಡ. ಅಣ್ಣಾ ಉಸ್ಮಾನ ನನ್ನದಿಷ್ಟು ಮಾತನ್ನು ನಡೆಸುವೆಯಾ? ಇಷ್ಟು ಭಿಕ್ಷೆಯನ್ನು ಹಾಕುವೆಯಾ?

ಉಸ್ಮಾನಾ—ಆಯೇಷೆ, ನೀನು ಬೇಕಾದದ್ದು ಅನ್ನು, ಬೇಕಾದಷ್ಟು ಹೇಳು. ನನ್ನನ್ನು ಬದುಕಿಸುವದೂ, ಕೊಲ್ಲುವದೂ ನಿನ್ನ ಕೈಯಲ್ಲಿರುತ್ತದೆ. ನಿನ್ನ ಪ್ರಾಪ್ತಿಯಾಗಲಿಲ್ಲೆಂದು ಈ ವರೆಗೆ ಕಾಲಹರಣ ಮಾಡುತ್ತ ಬಂದಂತೆ, ಮತ್ತು ದುಃಖವನ್ನು ಭೋಗಿಸುತ್ತ ಬಂದಂತೆ ಇನ್ನುಳಿದ ದಿನಗಳಲ್ಲಿಯಾದರೂ ನಾನು ಮಾಡುವೆನು. ಇನ್ನು ನಾನು ಮಾಡತಕ್ಕ ಕಡೆಯ ಉಪಾಯವು ಒಂದೇ ಉಳಿದಿರುತ್ತದೆ. ನಿನ್ನ ಹೃದಯವನ್ನು ವ್ಯಾಪಿಸಿ ಕುಳಿತು, ನನ್ನನ್ನು ಹೊರದೂಡಿದ ಆ ಜಗತ್ಸಿಂಗನನ್ನು ಈ ಲೋಕದಿಂದ ಹೊರಹೊರಡಿಸಿ ಪರಲೋಕಕ್ಕೆ ಕಳಿಸುವೆನು. ವಿಶ್ವಪ್ರಯತ್ನಮಾಡಿ ಆತನನ್ನು ಕೊಲ್ಲುವೆನು. ಆಮೇಲಾದರೂ ನಿನ್ನ ಹೃದಯವು ಬರಿದಾಗಿ, ಅದನ್ನು ನನಗೆ ಒಪ್ಪಿಸುವ ಅಧಿಕಾರವು ನಿನಗೆ ಬರುತ್ತದೆಯೋ ಇಲ್ಲವೋ? ಆಗಾದರೂ ನನಗೆ ನಿನ್ನ ಹೃದಯದಲ್ಲಿ ಸ್ಥಳವು ದೊರೆಯುವದೋ ಇಲ್ಲವೋ? ಇಷ್ಟು ಮಾಡಿದರೂ ದುರ್ದೈವದಿಂದ ನಿನ್ನ ಹೃದಯದಲ್ಲಿ ನನಗೆ ಸ್ಥಳವು ಸಿಗದಿದ್ದರೆ, ನನ್ನ ವೈರಿಯನ್ನು ಕೊಂದ ಆನಂದದಿಂದ ನನ್ನ ತಾಪವನ್ನು ಕಡಿಮೆ ಮಾಡಿಕೊಳ್ಳುವೆನು.

ಈ ಮಾತುಗಳನ್ನು ಕೇಳಿ ಆಯೇಷೆಯ ಕಣ್ಣೊಳಗಿಂದ ಘಳಘಳನೆ ನೀರುಗಳು ಬರತೊಡಗಿದವು. ಆಕೆಯು ಬಿಕ್ಕಿ ಬಿಕ್ಕಿ ಅಳುತ್ತ—ಹಾಯ್ ಹಾಯ್, ಈ ಜಗತ್ತಿನಲ್ಲಿ ದುಃಖದ ಸರವುಗಳನ್ನು ಹರಿಸುವದಕ್ಕಾಗಿಯೇ ಆಯೇಷೆಯ ಉತ್ಪತ್ತಿಯಾಗಿರುವಂತೆ ತೋರುತ್ತದೆ! ನನ್ನ ಪ್ರಿಯ ಬಂಧುವೇ, ಉಸ್ಮಾನ, ನಾನು ನಿನ್ನನ್ನು ಮನಮುಟ್ಟಿ ಪ್ರೀತಿಸುತ್ತೇನೆ; ನೀನು ಸುಖದಿಂದಿರುವದನ್ನು ನೋಡಬೇಕೆಂದು ಇಚ್ಛಿಸುತ್ತೇನೆ; ಆದರೆ ದುರ್ದೈವಿಯಾದ ನನ್ನ ಹಣೇಬರದಲ್ಲಿ ಹಾಗಾಗುವ ಯೋಗವಿದ್ದಂತೆ ತೋರುವದಿಲ್ಲ, ಇರಲಿ, ನಿನ್ನ ಮುಂದೆ ಹೇಳಬೇಕಾದದ್ದನ್ನು ನಾನು ಹೇಳಿಬಿಟ್ಟೆನು. ಇನ್ನು ಮೇಲೆ ನಾನು ಹೋಗಿಬರುತ್ತೇನೆ; ಅಂಥದೊಂದು ದುಃಖದ ಪ್ರಸಂಗವೇನಾದರೂ ಬಂದರೆ, ಆಗ ನನ್ನನ್ನು ನೆನಿಸು; ಕೂಡಲೆ ನಾನು ಬರುವೆನು; ಆದರೆ ಅಣ್ಣಾ ಉಸ್ಮಾನಾ, ಈ ಜನ್ಮದಲ್ಲಿ ನಮ್ಮಿಬ್ಬರ ಪುನರ್ದರ್ಶನದ ಯೋಗವಿದ್ದಂತೆ ತೋರುವದಿಲ್ಲ ಈ ದುರ್ದೈವಿಯಾದ ತಂಗಿಯನ್ನು ಮರೆಯಬೇಡ ಕಂಡೆಯಾ! ಯಾವಾಗಲೂ ನನ್ನ ನೆನಪು ಇರಲಿ; ಆದರೆ ಅಣ್ಣಾ ಅಲ್ಲ ಅಲ್ಲ ಹಾಗಲ್ಲ, ನಾನು ಹೇಳುವಾಗ ತಪ್ಪಿದೆನು. ನೀನು ನನ್ನನ್ನು ಸರ್ವಥಾ ಸ್ಮರಿಸಬೇಡ, ನನ್ನನ್ನು ಪೂರಾ ಮರೆತುಬಿಡು.

ಆಯೇಷೆಯ ಈ ಹೃದಯ ವಿದಾರಕವಾದ ಭಾಷಣಗಳನ್ನು ಉಸ್ಮಾನನು ಮನಸ್ಸು ಕಲ್ಲುಮಾಡಿ ಕೇಳುತ್ತ ಕುಳಿತುಕೊಂಡಿದ್ದನು. ಆಕೆಯ ಮಾತು ಮುಗಿದರೂ ಆತನು ತಗ್ಗಿಸಿದ ಮೋರೆಯನ್ನು ಮೇಲಕ್ಕೆ ಎತ್ತಿದ್ದಿಲ್ಲ, ಸುಮ್ಮನೆ ನೆಲವನ್ನು ನೋಡುತ್ತ ಕುಳಿತುಬಿಟ್ಟಿದ್ದನು. ಮನಸ್ಸಿನೊಳಗಿನ ವಿಚಾರ ತರಂಗಗಳ ಗಲಿಬಿಲಿಯು ತಗ್ಗಿದಮೇಲೆ ಆತನು ಮೇಲಕ್ಕೆ ಮುಖವೆತ್ತಿ ನೋಡಲು, ಆಯೇಷೆಯು ಕಣ್ಣಿಗೆಕಾಣಲಿಲ್ಲ, ಆಗ ಆತನು ನಿಟ್ಟುಸಿರು ಬಿಟ್ಟನು; ಹತಬದ್ಧನಾದನು; ಎರಡೂ ಕೈಗಳಿಂದ ತಲೆಯನ್ನು ಹಿಡಿದುಕೊಂಡು ''ಹಾಯ ಹಾಯ'' ಎಂಬ ದುಃಖೋದ್ಗಾರವನ್ನು ಹೊರಗೆಡವಿದನು!

ದುಃಖದ ಹೆಚ್ಚಳದಿಂದ ಉಸ್ಮಾನನಿಗೆ ಏನೂ ತೋಚದಾಯಿತು. ಎಂದೂ ಕಣ್ಣೀರು ಹಾಕಿ ಗೊತ್ತಿಲ್ಲದ ಆ ವೀರನ ಕಣ್ಣೊಳಗಿಂದ ನೀರುಗಳು ಒಂದೇ ಸವನೆ ಸುರಿಯಹತ್ತಿದವು. ಹೀಗೆ ಬಹಳ ಹೊತ್ತು ಅತ್ತು, ಶೋಕವು ಕಣ್ಣೀರಿನ ರೂಪದಿಂದ ಸೋರಿಹೋಗಿ ಅದರ ಕಸುವು ಕಡಿಮೆಯಾದ ಮೇಲೆ, ಉಸ್ಮಾನನು ಆಯೇಷೆಯ ವಿಷಯದ ನಿರಾಶೆಯು ನೆಲೆಯೂರಿತು. ಇನ್ನು ಏನು ಮಾಡಿದರೂ ಆಯೇಷೆಯ ಪ್ರಾಪ್ತಿಯು ತನಗೆ ಆಗುವದಿಲ್ಲೆಂದು ಆತನು ತಿಳಿದುಕೊಂಡನು. ಆಯೇಷೆಯ ಹೊರತು ಅನ್ಯ ಸ್ತ್ರೀಯರನ್ನು ಲಗ್ನವಾಗಲಿಕ್ಕಿಲ್ಲೆಂದಂತೂ ಆತನು ಮೊದಲೇ ನಿಶ್ಚಯಿಸಿದ್ದನು; ಆದ್ದರಿಂದ ಉಸ್ಮಾನನಿಂದ ಆವರಿಸಿದ್ದ ನೀಚವಾದ ಸ್ತ್ರೀ ವ್ಯಾಮೋಹದ ಆವರಣವು ಈಗ ಹರಿದುಹೋಗಿ, ಉಸ್ಮಾನನು ಗ್ರಹಣಮುಕ್ತನಾದ ಸೂರ್ಯನಂತೆ ಪ್ರಕಾಶಿಸಹತ್ತಿದನು. ಆಗ ವೀರೋಚಿತವಾದ ಸಾಹಸದ ಉರ್ಮಿಗಳು ಒಂದೊಂದಾಗಿ ಆತನಲ್ಲಿ ಮೊಳೆದೋರಹತ್ತಿದವು. ಆತನು ತನ್ನ ಮನಸ್ಸಿನೊಳಗೆ—''ಆಯೇಷೇ, ಪ್ರಿಯ ಭಗಿನಿಯಾದ ಆಯೇಷೇ, ನಿನ್ನ ಪವಿತ್ರ ಪ್ರೇಮದ ಗುರುತು ಮೋಹಾಂಧನಾದ ನನಗೆ ಮೊದಲು ಹತ್ತಲಿಲ್ಲ; ಆದರೆ ನಿನ್ನ ನಿರ್ಧಾರದ ಆಚರಣೆಯೆಂಬ ದಿವ್ಯಾಂಜನವು ನನ್ನ

ಅಂಧತ್ವವನ್ನು ದೂರಮಾಡಿತು. ನೀನು ಸಾಧ್ವಿಯರ ಶಿರೋಭೂಷಣವಾಗಿರುತ್ತೀ; ನಮ್ಮಂಥ ಅಧಮ ಪುರುಷರ ನಷ್ಟವಾದ ಪೌರುಷವನ್ನು ಪುನಃ ಹುಟ್ಟಿಸುವ ದಿವ್ಯೌಷಧಿಯಾಗಿರುತ್ತೀ! ಎಲೈ ಸತ್ವ ಶೀಲೆಯಾದ ಸ್ತ್ರೀ ರತ್ನವೇ, ಏನು ನಿನ್ನ ಪ್ರಭಾವವು, ಏನು ನಿನ್ನ ಮನೋನಿಗ್ರಹವು! ಇಂಥ ಅಕೃತ್ರಿಮ ಪ್ರೇಮದ ದಿವ್ಯ ಮೂರ್ತಿಯಾದ ನೀನು, ಕೈಜೋಡಿಸಿ ಪ್ರಾರ್ಥಿಸುತ್ತಿರುವಾಗ, ನಿನ್ನನ್ನು ಹೆಂಡತಿಯಾಗಿ ಗ್ರಹಿಸಲಿಕ್ಕೆ ಒಪ್ಪದ ಆ ಮಹಾನುಭಾವನಾದ ಜಗತ್ಸಿಂಗನೂ ಧನ್ಯನೆಂತಲೇ ಹೇಳಬೇಕಾಗುವದು. ಪರವರದಿಗಾರ ಅಲ್ಲಾ, ನಿನ್ನ ಲೀಲೆಯು ಅಗಾಧವಾದದ್ದು. ''ಆಯೇಷೇ–ಆಯೇಷೇ''ಯೆಂದು ಯಾವಾಗಲೂ ಕನವರಿಸುತ್ತ ಕೃಶನಾದ ನನಗೆ ಆಯೇಷೆಯ ಪ್ರಾಪ್ತಿಯಾಗಲೊಲ್ಲದು. ಜಗತ್ಸಿಂಗನಿಗೆ ಸರ್ವಸ್ವವನ್ನೂ ಒಪ್ಪಿಸಿ ಈತನೇ ಪತಿಯೆಂದು ನೆರೆನಂಬಿ ಸಾಧ್ವೀ ಶಿರೋಮಣಿಯಾಗಿ ಆಚರಿಸುವ ಆಯೇಷೆಯನ್ನು ಹೆಂಡತಿಯೆಂದು ಸ್ವೀಕರಿಸಲಿಕ್ಕೆ ಜಗತ್ಸಿಂಗನು ಒಲ್ಲನು. ಇದರಲ್ಲಿ ನನ್ನನ್ನು ಹಳಿಯಬೇಕೋ–, ಆಯೇಷೆಯನ್ನು ಹಳಿಯಬೇಕೋ,– ಜಗತ್ಸಿಂಗನನ್ನು ಹಳಿಯಬೇಕೋ? ವಿಚಾರಮಾಡಿ ನೋಡಲು ನಾವು ಮೂವರೂ ಸತ್ವಶಾಲಿಗಳಾದದ್ದರಿಂದ ಸಮಾನ ಧರ್ಮವುಳ್ಳವರಾಗುವೆವು. ಅಂದಬಳಿಕ ನಮ್ಮ ಮೂವರಲ್ಲಿ ಮಿತ್ರತ್ವವು ಇರಲಿಕ್ಕೆ ಬೇಕು; ಹೀಗಿರದೆ, ನನ್ನ ಪಾಣಿಗ್ರಹಣ ಮಾಡಲು ಒಪ್ಪದೆ, ನನ್ನ ವಿಷಯವಾಗಿ ಬಂಧು ಪ್ರೇಮವನ್ನು ತಾಳಿರುವ ಆಯೇಷೆಗೆ— ''ನೀನು ನನ್ನ ಪಾಣಿಗ್ರಹಣ ಮಾಡೆ''ಂದು ನಾನು ಒತ್ತಾಯಗೊಳಿಸುವದು ಭಗಿನಿ ದ್ರೋಹವೂ, ಮಿತ್ರ ದ್ರೋಹವೂ ಆಗಿರುವದಲ್ಲವೆ? ಆಯೇಷೆಯು ನನ್ನ ತಂಗಿಯು, ನನ್ನ ಪ್ರಿಯ ಮಿತ್ರಳು, ಅಂದ ಬಳಿಕ ಆಕೆಯ ಪತಿಯಾದ ಜಗತ್ಸಿಂಗನನ್ನು ನಾಶಗೊಳಿಸುವದಕ್ಕಾಗಿ ನಾನು ಯತ್ನಿಸುವದು. ಅತ್ಯಂತ ಕೃತಘ್ನತೆಯಷ್ಟೇ ಅಲ್ಲ, ಮಿತ್ರ ದ್ರೋಹವೂ ಆಗಿರುವದು; ಮೇಲೆ ಹೇಳಿದಂತೆ ಸತ್ವಶಾಲಿತ್ವದ ಸಮಾನ ಧರ್ಮ ಯೋಗದಿಂದ ಜಗತ್ಸಿಂಗನು ನನ್ನ ಮಿತ್ರನಾಗಿರುತ್ತಾನೆ; ಆದ್ದರಿಂದ ನಾನು ಇನ್ನು ಮೇಲೆ ಜಗತ್ಸಿಂಗನಿಗೂ ಕೇಡುಬಗೆಯತಕ್ಕದ್ದಲ್ಲ!

ಈ ಮೇರೆಗೆ ನುಡಿದು ಉಸ್ಮಾನನು ಪರಮೋದರನಾಗಿ, ತನ್ನ ಆ ಔದಾರ್ಯದ ವೈಭವದಲ್ಲಿ ಕೆಲಕಾಲ ಆನಂದಪಟ್ಟನು. ಆಗ ಆತನಿಗೆ ಜಗತ್ತೇ ಆನಂದಮಯವಾಗಿ ತೋರಹತ್ತಿತು. ಈ ವರೆಗೆ ಆತನಿಗೆ ಎಂದೂ ಆಗದೇ ಇದ್ದ ಸಮಾಧಾನವು ಈಗ ಆಯಿತು.

## ಅಲೌಕಿಕ ಸ್ತ್ರೀ ರತ್ನವು

ಮಾನಸಿಂಹನು ಜಗನ್ನಾಥ ಪುರಿಯ ಯಾತ್ರೆಯನ್ನು ಮಾಡಿಕೊಂಡು, ಪಾಟಣಕ್ಕೆ ಬಂದದ್ದನ್ನು ವಾಚಕರು ಬಲ್ಲರಷ್ಟೇ. ಪಠಾಣರೊಡನೆ ಒಡಂಬಡಿಕೆಯಾಗಿ ಸದ್ಯಕ್ಕೆ ಯುದ್ಧವು ನಿಂತಂತೆಯಾದ್ದರಿಂದ, ಮಾನಸಿಂಹನಿಗೆ ಸ್ವಲ್ಪ ವಿಶ್ರಾಂತಿಯು ದೊರೆತ ಹಾಗೆ ಆಗಿದ್ದರೂ, ಆತನ ಮನಸ್ಸಿಗೆ ಸ್ವಸ್ಥವಿದ್ದಿಲ್ಲ. ಚಂಚಲ ಸ್ವಭಾವದ ಉದ್ಧಟರಾದ ಪಠಾಣರು, ಐಹುದಿನ

ಒಡಂಬಡಿಕೆಯ ಆತಂಕಕ್ಕೆ ಒಳಗಾಗಿ ಇರದೇ, ಬೇಗನೆ ಒಡಂಬಡಿಕೆಯನ್ನು ಮುರಿದು, ಅವರು ಮತ್ತೆ ತಮ್ಮೊಡನೆ ಯುದ್ಧಕ್ಕೆ ಅಣಿಯಾಗುವರೆಂದು ಆ ರಜಪೂತ ವೀರಾಗ್ರಣಿಯು ತಿಳಿದು ಕೊಂಡಿದ್ದನು; ಆದ್ದರಿಂದ ಆತನ ಯುದ್ಧ ವಿಷಯಕವಾದ ತಾಪವು ನಿಜವಾಗಿ ದೂರವಾದಂತೆ ಯಾಗಿದ್ದಿಲ್ಲ. ಇದಲ್ಲದೆ, ತನ್ನ ಮಗನಾದ ಜಗತ್ಸಿಂಗನನ್ನು ಆಜನ್ಮ ಕಾರಾಗೃಹದಲ್ಲಿರಿಸಿದ್ದು ಬರಬರುತ್ತ ಆ ರಜಪೂತ ವೀರನ ಪಶ್ಚಾತ್ತಾಪಕ್ಕೆ ಕಾರಣವಾಗತೊಡಗಿತ್ತು. ಉಸ್ಮಾನನು ಪುರಿಯಲ್ಲಿ ಮಾನಸಿಂಹನನ್ನು ಪ್ರತ್ಯಕ್ಷ ಕಂಡು, ಆಯೇಷೆಯ ವಿಷಯವಾಗಿ ಜಗತ್ಸಿಂಗನ ಮನಸ್ಸು ಪವಿತ್ರವಾಗಿರುತ್ತದೆಂದು ಹೇಳಿದಾಗಿನಿಂದಂತೂ, ತನ್ನ ಮಗನು ಅಂಥ ಘೋರ ಅಪರಾಧಿ ಯಲ್ಲೆಂದು ಮಾನಸಿಂಹನ ಮನಸ್ಸಿಗೆ ಹೊಳೆಯಹತ್ತಿತು; ಆದರೂ ಜಗತ್ಸಿಂಗನು ತನ್ನ ಮುಂದೆ ಮಾಡಿದ ಪ್ರತಿಜ್ಞೆಯನ್ನು ಲೆಕ್ಕಿಸದೇ, ತಿಲೋತ್ತಮೆಯ ಪ್ರಾಪ್ತಿಗಾಗಿ ಹೆಣಗಿದ್ದೂ, ತನ್ನ ಒಪ್ಪಿಗೆ ಯನ್ನು ಪಡೆಯದೆ ತಿಲೋತ್ತಮೆಯನ್ನು ಲಗ್ನವಾದದ್ದೂ ಮಾನಸಿಂಹನಿಗೆ ಮಹಾಪರಾಧಗಳಾಗಿ ತೋರಿ, ಆ ಅಪರಾಧಗಳಿಗಾಗಿ ಮಗನನ್ನು ತಾನು ಆಜನ್ಮ ಕಾರಾಗೃಹದಲ್ಲಿ ಇಟ್ಟಿದ್ದು ನ್ಯಾಯವೆಂದು ಆತನು ತನ್ನ ಸಮಾಧಾನ ಮಾಡಿಕೊಳ್ಳುತ್ತ ಬಂದಿದ್ದನು; ಆದರೂ ಪುತ್ರ ಮೋಹವು ಮಾನಸಿಂಹನನ್ನು ನೋಯಿಸದೇ ಬಿಡುತ್ತಿದ್ದಿಲ್ಲ. ಆತನು ಏಕಾಂತದಲ್ಲಿ ಕುಳಿತಾಗ ಮಗನನ್ನು ನೆನಸಿ ವ್ಯಸನ ಪಡುತ್ತಿದ್ದನು. ಹೀಗೆ ಒಂದುದಿನ ಮಾನಸಿಂಹನು ಏಕಾಂತದಲ್ಲಿ ವ್ಯಸನ ಪಡುತ್ತಿರುವಾಗ ಒಬ್ಬ ಸೇವಕನು ಬಂದು—ಸರಕಾರ, ಕೆಲವು ಜನ ಪಠಾಣರು ಒಂದು ಮೇಣೆಯನ್ನು ಬಹು ಜಾಗ್ರತೆಯಿಂದ ರಕ್ಷಿಸುತ್ತ ಪಾಟಣಾಕ್ಕೆ ಬರುವದಕ್ಕಾಗಿ ಹೊರಟಿದ್ದರು. ಮಾರ್ಗದಲ್ಲಿ ಅಕಸ್ಮಾತ್ತಾಗಿ ನಮ್ಮ ಕೆಲವರು ಸೈನಿಕರು ಅವರಿಗೆ ಎದುರಾದರು. ಪಠಾಣರೊಡನೆ ಒಡಂಬಡಿಕೆಯಾಗಿರುವದರಿಂದ, ಹೀಗೆ ಬರುವ ಪಠಾಣರನ್ನು ನೋಡಿ ನಮಗೆ ಶಂಕಿಸಲಿಕ್ಕೆ ಕಾರಣವೇನೂ ಇದ್ದಿಲ್ಲ; ಆದರೆ ನಮ್ಮನ್ನು ನೋಡಿದಕೂಡಲೇ ಆ ಪಠಾಣರು ಮೇಣೆಯನ್ನು ಇಳಿಸಿ ಸುಮ್ಮನೆ ನಿಂತುಕೊಂಡರು. ಆಗ ನಾವು ಅವರನ್ನು ಕುರಿತು—ನೀವು ಎಲ್ಲಿಯವರು? ಹೀಗೆ ಮೇಣೆಯನ್ನು ಮಾರ್ಗದಲ್ಲಿ ಯಾಕೆ ನಿಲ್ಲಿಸಿದಿರಿ? ಎಂದು ಪ್ರಶ್ನೆ ಮಾಡಿದೆವು; ಆದರೆ ನಮ್ಮ ಪ್ರಶ್ನೆಗಳಿಗೆ ಪಠಾಣರು ಸರಿಯಾದ ಉತ್ತರ ಕೊಡದೆ, ಎಟ್ಟಿತನದಿಂದ ನಡಕೊಂಡದ್ದರಿಂದ ನಮ್ಮಿಬ್ಬರಲ್ಲಿ ಬಹಳ ಮಾತುಗಳು ಬಳಸಿಹೋಗಿ, ಕೈಗೆ ಕೈ ಹತ್ತುವ ಪ್ರಸಂಗವು ಬಂದಿತು. ಆಗ ಮೇಣೆಯೊಳಗಿದ್ದ ಸ್ತ್ರೀಯು ತಮ್ಮವರನ್ನು ಸುಮ್ಮನಿರಿಸಿ, ನಮ್ಮನ್ನು ಕುರಿತು – ಅಪ್ಪಗಳಿರಾ, ಸುಮ್ಮನೆ ಜಗಳವೇಕೆ? ನಾನು ಮಾನಸಿಂಹರನ್ನು ಕಾಣುವದಕ್ಕಾಗಿಯೇ ಬಂದಿದ್ದೇನೆ; ನನ್ನನ್ನು ಈಗ ಅವರ ಬಳಿಗೇ ಕರಕೊಂಡು ಹೋಗಿರಿ, ಎಂದು ಹೇಳಿದ್ದರಿಂದ, ನಾವು ಆ ಮೇಣೆಯನ್ನು ಪಠಾಣರ ಪರಿವಾರಬೊಡನೆ ಹೊರಡಿಸಿಕೊಂಡು ಬಂದಿದ್ದೇವೆ. ಈಗ ಆ ಸ್ತ್ರೀಯು ದರ್ಶನಾಪೇಕ್ಷಿಯಾಗಿ ಪ್ರಭುಗಳ ಒಪ್ಪಿಗೆಯ ಹಾದಿಯನ್ನು ನೋಡುತ್ತಲಿದ್ದಾಳೆ. ಅಪ್ಪಣೆ ಯಾದರೆ ಕರಕೊಂಡು ಬರುವೆನು, ಎಂದು ಹೇಳಿದನು.

ಸೇವಕನು ಈ ಮಾತುಗಳನ್ನು ಕೇಳಿ ಮಾನಸಿಂಹನು, ನನ್ನ ದರ್ಶನಕ್ಕೆ ಬರುವ ಪಠಾಣ ಸ್ತ್ರೀಯು ಯಾರಿರಬಹುದೆಂದು ಶಂಕಿಸುತ್ತ, ಆಕೆಯನ್ನು ಕರತರುವದಕ್ಕಾಗಿ ಸೇವಕರಿಗೆ

ಆಜ್ಞಾಪಿಸಿದನು. ಸ್ವಲ್ಪ ಹೊತ್ತಿನ ಮೇಲೆ ಬುರುಕಿಯನ್ನು ಹಾಕಿಕೊಂಡಿದ್ದ ಒಬ್ಬಳೇ ಒಬ್ಬ ಸ್ತ್ರೀಯು ಮಾನಸಿಂಹನ ಎದುರಿಗೆ ಬಂದು ನಿಂತುಕೊಂಡಳು. ಆ ಸ್ತ್ರೀಯ ಈ ದಿಟ್ಟತನವನ್ನು ನೋಡಿ ಮಾನಸಿಂಹನು ಸೋಜಿಗಬಟ್ಟು ಅತ್ಯಂತ ಸೌಜನ್ಯದಿಂದ ಆಕೆಯನ್ನು ಕುರಿತು— ತಾಯೀ, ನೀನು ಯಾರು? ಪರಸ್ತ್ರೀಯರ ಮಾನಭಂಗ ಮಾಡುವದು ಹಿಂದುಗಳ ಶೀಲವಲ್ಲ. ನಮ್ಮ ಸೈನಿಕರು ವಿವೇಕವಿಲ್ಲದೆ ನಿನ್ನನ್ನು ಇಲ್ಲಿಗೆ ಕರತಂದಿರಬಹುದು. ನಿನ್ನ ಇಚ್ಛೆಯ ವಿರುದ್ಧವಾಗಿ ನಿನ್ನೊಡನೆ ಮಾತಾಡಲಿಕ್ಕಾಗಲಿ, ನಿನ್ನ ಮುಖಾವಲೋಕನ ಮಾಡವದಕ್ಕಾಗಲಿ ನಾನು ಇಚ್ಛಿಸುವದಿಲ್ಲ. ನನ್ನ ಬಳಿಯಲ್ಲಿ ನಿನ್ನ ಕೆಲಸವೇನೂ ಇಲ್ಲದಿದ್ದರೆ, ನಾನು ನಿನ್ನನ್ನು ಪ್ರತಿಬಂಧಿಸುವದಿಲ್ಲ. ನಿನ್ನ ಇಚ್ಛೆ ಬಂದಲ್ಲಿ ಸಂತೋಷದಿಂದ ಹೊರಟು ಹೋಗಬಹುದು. ಪಠಾಣರೊಡನೆ ಈಗ ಒಡಂಬಡಿಕೆಯಾಗಿರುವದರಿಂದ, ಒಬ್ಬರು ಒಬ್ಬರಲ್ಲಿಗೆ ಹೋಗಲಿಕ್ಕೆ ಬರಲಿಕ್ಕೆ ಪ್ರತಿಬಂಧವೇನೂ ಇರುವದಿಲ್ಲ, ಎಂದು ನುಡಿಯುತ್ತಿರಲು, ಆ ಸ್ತ್ರೀಯು ತನ್ನ ಬುರುಕೆಯನ್ನು ತೆಗೆದು ಮಾನಸಿಂಹನಿಗೆ ವಿನಯದಿಂದ ಮುಜುರೆ ಮಾಡಿ ನಿಂತುಕೊಂಡಳು. ಆಗ ಸಜೀವವಾದ ದೇವತಾ ಮೂರ್ತಿಯು ತನ್ನ ಗೌರವದಿಂದ ನೋಡುವವರಲ್ಲಿ ಲೀನತೆ ಯನ್ನುಂಟು ಮಾಡುತ್ತ ತನ್ನ ಮಹಿಮೆಯನ್ನು ಶೋಭೆಯನ್ನೂ ಪಸರಿಸುತ್ತಿರುವಂತೆ ಮಾನಸಿಂಹನಿಗೆ ತೋರಿತು. ಆಗ ಆತನು ಆ ಸ್ತ್ರೀಯನ್ನು ಕುರಿತು—''ಸುಮಂಗಲೆಯೇ, ನೀನು ನನ್ನ ಹೊಟ್ಟೆಯ ಮಗಳಂತೆಯಿರುತ್ತೀ. ನೀನು ಯಾರು? ನನ್ನ ಬಳಿಗೆ ಯಾಕೆ ಬಂದೆ? ಸಂತೋಷದಿಂದ ಹೋಗಲಿಕ್ಕೆ ನಾನು ಸಮ್ಮತಿ ಪಡುತ್ತಿದ್ದರೂ, ನೀನು ನನ್ನ ದರ್ಶನಾಪೇಕ್ಷೆಯನ್ನು ಯಾಕೆ ಮಾಡಿದೆ ? ನನ್ನ ಪ್ರಶ್ನೆಗಳಿಗೆ ನೀನು ಉತ್ತರಕೊಡಲೇಬೇಕೆಂದು ನನ್ನ ಆಗ್ರಹವಿಲ್ಲ. ಮನಸ್ಸಿಲ್ಲದಿದ್ದರೆ ಈಗಾದರೂ ನೀನು ನಿನ್ನ ಇಚ್ಛೆಬಂದಲ್ಲಿಗೆ ಹೋಗಬಹುದು, ಅನ್ನಲು, ಆ ಸ್ತ್ರೀಯು—ತಾವು ಹೊಟ್ಟೆಯ ಮಗಳೆಂದು ತಿಳಿಯವದರಿಂದ, ನಾನಾದರೂ ತಮ್ಮನ್ನು ಹಡೆದ ತಂದೆಗೆ ಸಮಾನವೆಂದು ತಿಳಿಯುತ್ತೇನೆ. ತನ್ನ ತಂದೆಯ ಸಂಗಡ ಮಾತಾಡಲಿಕ್ಕೆ ಮಗಳಿಗೆ ಸಂಕೋಚವೇನು? ನಾನು ನವಾಬ ಕಾತಲೂಖಾನನ ಸಾಕುಮಗಳು; ನನ್ನ ಹೆಸರು ಆಯೇಷೆ. ಪ್ರಭುಗಳ ಬಳಿಯಲ್ಲಿ ಇದಕ್ಕಿಂತ ಹೆಚ್ಚಿಗೆ ವಿಜ್ಞಾಪಿಸುವದು ಏನೂ ಇರುವದಿಲ್ಲ.

''ಆಯೇಷೆ'' ಎಂಬ ಶಬ್ದವು ಕಿವಿಗೆ ಬಿದ್ದಕೂಡಲೆ ಮಾನಸಿಂಹನಿಗೆ ಬಹಳ ಆಶ್ಚರ್ಯ ವಾಯಿತು. ಆಯೇಷೆಯು ಹೀಗೆ ಸಾಮಾನ್ಯಳಂತೆ ಅಕಸ್ಮಾತ್ ಬಂದದ್ದರ ಕಾರಣವನ್ನು ಆತನು ತಿಳಿಯದಾದನು. ಇದರಿಂದ ಆತನ ಕೌತುಕವು ಮತ್ತಿಷ್ಟು ಹೆಚ್ಚಿ, ಆತನು ಆಯೇಷೆಯನ್ನು ಕುರಿತು—

ಮಾನಸಿಂಹ—ಆಯೇಷೇ, ನೀನು ಹೆಚ್ಚಿಗೆ ಏನು ಹೇಳದಿದ್ದರೂ, ನಿನ್ನಿಂದ ಹಲವು ಸಂಗತಿಗಳನ್ನು ನಾನು ಕೇಳಿಕೊಳ್ಳಬೇಕಾಗಿದೆ; ಆದರೆ ನೀನು ನನ್ನ ಪ್ರಶ್ನೆಗಳಿಗೆ ಸಮಾಧಾನ ಕಾರಕಗಳಾದ ಉತ್ತರವನ್ನು ಕೊಟ್ಟರೆ, ನನಗೆ ಬಹಳ ಸಂತೋಷವಾಗುವದು.

ಆಯೇಷೆ—ಮಹಾರಾಜ, ಆಯೇಷೆಯ ಕಳೆದು ಹೋಗಿದ್ದ ಆಯುಷ್ಯದೊಳಗಿನ ಯಾವ ಸಂಗತಿಗಳು ಗುಪ್ತವಾಗಿಡುವಂತೆ ಉಳಿದಿರುವದಿಲ್ಲ; ಅಂದಬಳಿಕ ನಾನು ಸುಳ್ಳುಹೇಳಿ

ಮಹಾರಾಜರನ್ನು ಯಾಕೆ ಅಸಮಾಧಾನಪಡಿಸಲಿ? ಕೇಳಬೇಕಾದದ್ದನ್ನು ಮಹಾರಾಜರು ನಿಶ್ಯಂಕೆಯಿಂದ ಕೇಳಬೇಕು.

ಮಾನಸಿಂಹ—ನೀನು ಸ್ವಜನರನ್ನು ಓಡಿಸಾ ಪ್ರಾಂತದಲ್ಲಿ ಬಿಟ್ಟು ಒಬ್ಬಳೇ ಪಾಟಣಾಕ್ಕೆ ಯಾಕೆ ಬಂದೆ?

ಆಯೇಷ—(ವಿಚಾರಿಸುತ್ತ ಕೆಲಹೊತ್ತು ಸುಮ್ಮನೆ ನಿಂತು) ಕುಮಾರ ಜಗತ್ಸಿಂಗರವರನ್ನು ಬಂಧಮುಕ್ತ ಮಾಡಿಸುವದಕ್ಕಾಗಿ ನಾನು ಇಲ್ಲಿಗೆ ಬಂದಿದ್ದೇನೆ.

ಈ ಮಾತನ್ನು ಕೇಳಿ ಮಾನಸಿಂಹನಿಗೆ ಪರಮಾಶ್ಚರ್ಯವಾಯಿತು. ಆತನು ಮಗನ ಕಾರಾಗೃಹವಾಸಕ್ಕಾಗಿ ಮನಸ್ಸಿನಲ್ಲಿ ಯಾವಾಗಲೂ ಚಿಂತಿಸುತ್ತಿರುವದನ್ನು ವಾಚಕರು ಮರೆತಿರಲಿಕ್ಕಿಲ್ಲ; ಆದರೆ ಈವೊತ್ತಿನವರೆಗೆ ಕುಮಾರನ ಮುಕ್ತತೆಯ ವಿಷಯವಾಗಿ ಒಂದಾದರೂ ಆಲೋಚನೆಯು ಆತನಿಗೆ ಹೊಳೆದಿದ್ದಿಲ್ಲ, ಈಗ ಆಯೇಷೆಯು ಅನಾಯಾಸವಾಗಿ ಮಗನ ಬಂಧ ವಿಮೋಚನಕ್ಕಾಗಿ ಯತ್ನಿಸತೊಡಗಿರುವದನ್ನು ನೋಡಿ, ಆತನಿಗೆ ಒಂದು ವಿಧದಿಂದ ಸಮಾಧಾನವಾಯಿತು. ಅವನು ಬಹು ಸಮಾಧಾನದಿಂದ ಆಯೇಷೆಯನ್ನು ಕುರಿತು—

ಮಾನಸಿಂಹ—ಅಪರಾಧಿಯಾದ ಕುಮಾರನ ಬಂಧವಿಮೋಚನಕ್ಕಾಗಿ ನೀನೇನು ಉಪಾಯವನ್ನು ಯೋಚಿಸಿರುವೆ?

ಆಯೇಷೆ—ಬಾದಶಹರ ಸನ್ನಿಧಿಗೆ ಕುಮಾರ ಜಗತ್ಸಿಂಗರವರ ಒಂದು ಅರ್ಜಿಯನ್ನು ಕಳಿಸಬೇಕೆಂದು ಮಾಡಿದ್ದೇನೆ.

ಮಾನಸಿಂಹ—ಸುಬೇದಾರನಾದ ನನ್ನನ್ನು ಕೇಳದೆ, ಪ್ರಜೆಗಳಾದ ನೀವು ಬಾದಶಹರ ಕಡೆಗೆ ಅರ್ಜಿಯನ್ನು ಕಳಿಸುವದು ಹ್ಯಾಗೆ?

ಆಯೇಷ— ತಮ್ಮ ಮುಖಾಂತರವಾಗಿಯೇ ಬಾದಶಹರ ಕಡೆಗೆ ಅರ್ಜಿಯನ್ನು ಕಳಿಸಬಹುದಾಗಿತ್ತು; ಆದರೆ ಕುಮಾರರಿಗೆ ಶಿಕ್ಷೆಯನ್ನು ವಿಧಿಸಿದವರು ತಾವೇ ಆಗಿರುವದರಿಂದ, ತಮ್ಮ ಮುಖಾಂತರ ಅರ್ಜಿಯನ್ನು ಕಳಿಸುವದರಲ್ಲಿ ಪ್ರಯೋಜನ ಕಾಣದಿರಲು, ನಾವು ಪರಭಾರೆ ಅರ್ಜಿಯನ್ನು ಕಳಿಸುವದು ಯೋಗ್ಯವೆಂದು ತಿಳಿದೆವು. ಕುಮಾರರ ಬಂಧ ವಿಮೋಚನಕ್ಕಾಗಿ ತಾವೇ ಪ್ರಯತ್ನಮಾಡಿದಲ್ಲಿ ತಮ್ಮ ಕೀರ್ತಿಗೆ ಕಲಂಕ ಉಂಟಾದೀತೆಂದು ತಿಳಿದು ಈ ಮಾರ್ಗದಿಂದ ಕೆಲಸವನ್ನು ಮಾಡಬೇಕಾಯಿತು.

ಮಾನಸಿಂಹ—(ಮನಸ್ಸಿನಲ್ಲಿ ಸಂತೋಷಪಡುತ್ತ) ಅರ್ಜಿಯು ಬಾದಶಹರ ಬಳಿಗೆ ಕಲಿಸಲ್ಪಟ್ಟಿತೋ ಇಲ್ಲವೋ?

ಆಯೇಷೆ—ಅರ್ಜಿಯನ್ನು ಬರೆದು, ಅದರ ಮೇಲೆ ಕುಮಾರರ ಸಹಿಯನ್ನು ಮಾಡಿಸಿ, ಅದು ಒಬ್ಬ ಸೇವಕನ ಸಂಗಡ ಬಾದಶಹರಿಗೆ ಮುಟ್ಟುವಂತೆ ಯೋಗ್ಯ ಬಂದೋಬಸ್ತಿನಿಂದ ಕಳಿಸಿ ಕೊಟ್ಟಿರುತ್ತದೆ. ಸೇವಕನು ಇಷ್ಟುಹೊತ್ತಿಗೆ ಪ್ರಯಾಗವನ್ನು ದಾಟಿ ಹೋಗಿರಬಹುದು.

ಮಾನಸಿಂಹ—ಜಗತ್ಸಿಂಗನು ಕಾರಾಗೃಹದಲ್ಲಿರುವಾಗ ಆತನ ಸಹಿಯನ್ನು ಹ್ಯಾಗೆ ಮಾಡಿಸಿದಿರಿ? ಏನು ಸುಳ್ಳು ಸಹಿಯನ್ನು ಮಾಡಿಗೀಡಿದಿರೋ ಏನು?

ಆಯೇಷೆ—ಮಹಾರಾಜರೇ, ಹಾಗೇನು ಸುಳ್ಳು ಸಹಿ ಮಾಡಿರುವದಿಲ್ಲ, ಕುಮಾರರು ಎಲ್ಲ ವೃತ್ತಾಂತವನ್ನು ಕೇಳಿಕೊಂಡು, ಅರ್ಜಿಯಮೇಲೆ ತಮ್ಮ ಸಹಿಯನ್ನು ಮಾಡಿರುತ್ತಾರೆ.

ಮಾನಸಿಂಹ—ನೀವು ಕಾರಾಗೃಹದಲ್ಲಿ ಅವನ ಬಳಿಗೆ ಅರ್ಜಿಯನ್ನು ತಕ್ಕೊಂಡು ಹೋಗಿದ್ದಿರೋ?

ಆಯೇಷೆ—ಅದಕ್ಕಾಗಿ ನಾವು ಬಹಳ ಶ್ರಮಪಡಬೇಕಾಯಿತು. ದ್ರವ್ಯದ ಆಶೆಹಚ್ಚಿ ಕಾರಾಗೃಹದ ಕಾವಲುಗಾರರನ್ನು ವಶಮಾಡಿಕೊಂಡೆವು.

ಮಾನಸಿಂಹ—ಆಯೇಷೇ, ನೀನು ಬಹು ಬುದ್ಧಿಶಾಲಿಯಾದ ಸ್ತ್ರೀಯಿರುತ್ತೀ; ಈವರೆಗೆ ಮಾಡಿದ್ದೆಲ್ಲ ನೆಟ್ಟಗಾಯಿತು; ಆದರೆ ಬಾದಶಹರ ಬಳಿಗೆ ಅರ್ಜಿಯು ಮುಟ್ಟುವ ಸಂಭವ ಹ್ಯಾಗೆ?

ಆಯೇಷೆ—ಅದರ ವ್ಯವಸ್ಥೆಯನ್ನಾದರೂ ಚನ್ನಾಗಿ ಮಾಡಿದ್ದೇನೆ. ಅರ್ಜಿಯು ದಿಲ್ಲಿಗೆ ಹೋದ ಕೂಡಲೇ ಅದು ಬಾದಶಹರ ಕೈಗೆ ಸೇರುವಂತೆ ಮಾಡಿದ್ದೇನೆ; ಕೂಡಲೆ ನಮ್ಮ ಇಚ್ಛೆಯಂತೆ ಬಾದಶಹರು ಕುಮಾರರ ಬಂಧವಿಮೋಚನೆಯನ್ನು ಮಾಡುವದರಲ್ಲಿ ಸಂದೇಹವಿಲ್ಲ.

ಮಾನಸಿಂಹ—ಆದರೆ ಆಯೇಷೆ, ನೀನು ಅಪರಾಧಿಯಾದ ಕುಮಾರನ ಬಂಧ ವಿಮೋಚನಕ್ಕಾಗಿ ಇಷ್ಟು ಕಷ್ಟಪಟ್ಟು ಯಾಕೆ ಪ್ರಯತ್ನ ಮಾಡುತ್ತೀ?

ಈ ಪ್ರಶ್ನೆಯನ್ನು ಕೇಳಿ ಆಯೇಷೆಯು ಲಜ್ಜೆಯಿಂದ ತಲೆಯನ್ನು ಬಾಗಿಸಿದಳು. ಆಕೆಯ ಮುಖದಿಂದ ಮಾತುಗಳು ಹೊರಡದಾದವು.

ಮಾನಸಿಂಹ—ನನ್ನ ಪ್ರಶ್ನೆಗೆ ಉತ್ತರಕೊಡಲಿಕ್ಕೆ ನೀನು ಸಂಕೋಚಪಡುವಂತೆ ತೋರುತ್ತದೆ; ಆದರೆ ನಾನು ಅದಕ್ಕಾಗಿ ಆಗ್ರಹ ಮಾಡುವದಿಲ್ಲ. ಅದಿರಲಿ, ನೀನು ಸ್ವತಃ ಎಂದಾದರೂ ಜಗತ್ಸಿಂಗನನ್ನು ಕಾಣುವದಕ್ಕಾಗಿ ಕಾರಾಗೃಹಕ್ಕೆ ಹೋಗಿದ್ದಿಯೋ?

ಆಯೇಷೆ—ಇಲ್ಲ.

ಮಾನಸಿಂಹ—ಆತನನ್ನು ಕಾಣುವ ಇಚ್ಛೆಯು ನಿನಗೆ ಇರುವದೋ?

ಆಯೇಷೆ—ಇಲ್ಲ.

ಮಾನಸಿಂಹ—ನಿನ್ನ ವೃತ್ತಾಂತವನ್ನು ಆತನಿಗೆ ತಿಳಿಸಿರುವೆಯೋ?

ಆಯೇಷೆ—ಇಲ್ಲ.

ಮಾನಸಿಂಹ—ಜಗತ್ಸಿಂಗನ ಬಂಧವಿಮೋಚನೆಯಾದರೆ ಪರಸ್ಪರ ನಿಮ್ಮಿಬ್ಬರ ದರ್ಶನ ವಾಗಬಹುದೋ?

ಆಯೇಷೆ—ಇಲ್ಲ

ಆಯೇಷೆಯ ಪ್ರಣಯದ ವೃತ್ತಾಂತವನ್ನು ಮಾನಸಿಂಹನು ಕೇಳಿದ್ದನು. ಈ ರಮಣಿಯ ಅತ್ಯಂತ ಪ್ರೇಮವು ಜಗತ್ಸಿಂಗನ ಮೇಲಿರುತ್ತದೆಂಬದಾದರೂ ಆತನಿಗೆ ಗೊತ್ತಿತ್ತು. ಜಗತ್ಸಿಂಗನ ಬಂಧವಿಮೋಚನಕ್ಕಾಗಿ ಆಯೇಷೆಯು ಈಪರಿ ಸಾಹಸ ಮಾಡುವದನ್ನು ನೋಡಿ, ಜಗತ್ಸಿಂಗನ

ಹಿತಕ್ಕಾಗಿ ಈಕೆಯು ತನ್ನ ಪ್ರಾಣವನ್ನಾದರೂ ಅರ್ಪಿಸದೆ ಇರಳೆಂದು ಮಾನಸಿಂಹನ ಮನಸ್ಸಿಗೆ ಹೊಳೆದು, ಇಂಥ ಅಕೃತ್ರಿಮ ಪ್ರೇಮದ ಆಯೇಷೆಯನ್ನು ತನ್ನ ಮಗನಾದ ಜಗತ್ಸಿಂಗನು ಪ್ರೀತಿಸದಿರುವದನ್ನು ನೆನಸಿ, ಆತನು ಅಸಮಾಧಾನಪಟ್ಟನು. ಆಯೇಷೆಯು ಜಗತ್ಸಿಂಗನ ಹಿತಕ್ಕಾಗಿ ಇಷ್ಟು ಕಷ್ಟ ಪಡುತ್ತಿದ್ದರೂ, ಆತನ ದರ್ಶನಾಪೇಕ್ಷೆಯನ್ನು ಕೂಡ ಮಾಡದಷ್ಟು ಆಕೆಯು ನಿಸ್ಪೃಹಳಾಗಿರುವದು ನೋಡಿ, ಮಾನಸಿಂಹನ ವಜ್ರದಂತಹ ಹೃದಯವು ಕೂಡ ಕರಗಿತು. ಆತನಲ್ಲಿ ಆಯೇಷೆಯ ವಿಷಯವಾಗಿ ದಯೆಯು ಉತ್ಪನ್ನವಾಯಿತು. ಜಗತ್ಸಿಂಗನ ಬಂಧವಿಮೋಚನ ವಾದನಂತರ ಈ ದೇವಕನ್ಯೆಯ ಮಾನಸಿಕ ಸಂತಾಪವನ್ನು ದೂರಮಾಡಲು ಮನಸ್ಸಿನಲ್ಲಿ ಆತನು ಸಂಕಲ್ಪಿಸಿದನು. ಆತನು ಆಯೇಷೆಯ ಮನಸ್ಸನ್ನು ಪೂರ್ಣತಿಳಿದು ಕೊಳ್ಳುವದಕ್ಕಾಗಿ ಆಕೆಯನ್ನು ಕುರಿತು—ತಂಗೀ, ಜಗತ್ಸಿಂಗನು ಕೃತಘ್ನನು, ಅತ್ಯಂತ ನೀಚನು; ಅಂಥವನ ಬಂಧವಿಮೋಚನಕ್ಕಾಗಿ ನೀನೇಕೆ ಇಷ್ಟು ಕಷ್ಟಪಡುವೆ? ಎಂದು ಪ್ರಶ್ನೆಮಾಡಲು, ಆಯೇಷೆಯು ಏನೂ ಉತ್ತರ ಕೊಡಲಾರದೆ ಸುಮ್ಮನೆ ನಿಂತುಕೊಂಡಳು. ಆಕೆಯು ಮೋರೆ ತಗ್ಗಿಸಿ ನೆಲವನ್ನು ನೋಡಹತ್ತಿದಳು. ಆಕೆಯ ಮುಖವು ಚಿಂತೆಯಿಂದ ಆವರಿಸಿತು. ಆಗ ಮಾನಸಿಂಹನು–

ಮಾನಸಿಂಹ—ಸುಶೀಲೆಯೇ, ಯಾಕೆ? ಈ ಪ್ರಶ್ನೆಗೆ ಉತ್ತರಕೊಡಲಿಕ್ಕೆ ನೀನೇಕೆ ಹಿಂದುಮುಂದು ನೋಡುವೆ?

ಆಯೇಷೆ—ಮಹಾರಾಜ, ನಾನೇನು ಉತ್ತರಕೊಡಲಿ? ದೀಪಕ್ಕೆ "ನೀನು ಮಂದಿಯ ಸಲುವಾಗಿ ಯಾಕೆ ಸುಡುತ್ತೀ" ಎಂದು ಯಾರಾದರೂ ಕೇಳಿದರೆ, ಅದು ಏನು ಉತ್ತರ ಕೊಡಬೇಕು? ಜ್ವಲನ ವ್ಯಾಪಾರವು ದೀಪದ ಸ್ವಭಾವಗುಣವಾಗಿರುವಂತೆ, ಜಗತ್ಸಿಂಗರ ಸಲುವಾಗಿ ತಾಪಪಡುವದು ನನ್ನ ಸ್ವಭಾವಗುಣವಾಗಿರುತ್ತದೆ. ಮೇಲಾಗಿ ಜಗತ್ಸಿಂಗರು ಕೃತಘ್ನರಲ್ಲ; ಮಹಾರಾಜರಿಗೆ ತೋರುವಂತೆ ಅವರು ನೀಚರೂ ಆಗಿರುವದಿಲ್ಲ. ಅವರು ಪಾಪಭೀರುಗಳೂ, ಅತ್ಯಂತ ಉಜ್ವಲ ವಿಚಾರದ ಧೀರ ಪುರುಷರೂ ಆಗಿರುವರು.

ಮಾನಸಿಂಹ—ಅವ್ವಾ ಆಯೇಷಾ, ನೀನು ಸ್ತ್ರೀಯರೊಳಗಿನ ಅಲೌಕಿಕ ಸ್ತ್ರೀರತ್ನವಾಗಿರುತ್ತೀ; ಚಿಂತೆಮಾಡಬೇಡ. ನಾನು ನಿಶ್ಚಯವಾಗಿ ನಿನ್ನ ಈ ದುಃಖನಿವಾರಣಕ್ಕಾಗಿ ಯತ್ನಿಸುವೆನು.

ಆಯೇಷೆ—ನನ್ನಂಥ ಚಿಕ್ಕವಯಸ್ಸಿನವಳ ಮುಖದಿಂದ ಇಂಥ ಮಾತುಗಳು ಹೊರಡಬಾರದಾಗಿತ್ತು; ನಾನಾಗಿ ನನ್ನ ಸ್ಥಿತಿಯನ್ನು ತಮ್ಮಂಥ ವಯೋವೃದ್ಧರ ಮುಂದೆ ಎಂದೂ ಒಡನುಡಿಯತಕ್ಕದ್ದಿದ್ದಿಲ್ಲ; ಆದರೆ ಮಹಾರಾಜ, ಉಪಾಯವಿಲ್ಲದೆ ನುಡಿಯ ಬಾರದ್ದನ್ನು ನಾನು ತಮ್ಮ ಮುಂದೆ ನುಡಿದು ಬಿಟ್ಟೆನು. ಯಾಕಂದರೆ, ನಾನು ಮೊದಲೇ ಸತ್ಯವನ್ನು ನುಡಿಯುವಬಗ್ಗೆ ತಮಗೆ ವಚನ ಕೊಟ್ಟಿದ್ದೇನೆ. ನಾನು ಅಸತ್ಯವನ್ನು ನುಡಿದಿದ್ದರೆ, ತಮಗೆ ಅಸಮಾದಾನವಾಗುತ್ತಿತ್ತೆಂದು ತಿಳಿದು, ನಾನು ಸತ್ಯವನ್ನೇ ಹೇಳಿದೆನು. ನನ್ನ ಈ ನಿರ್ಲಜ್ಜತನಕ್ಕಾಗಿ ನನ್ನನ್ನು ಮಹಾರಾಜರು ಕ್ಷಮಿಸಬೇಕು.

ಮಾನಸಿಂಹ—ಆಯೇಷೇ, ನಿನ್ನಂಥ ಸದ್ಗುಣಮಂಡಿತ ಸ್ತ್ರೀರತ್ನದ ತಪ್ಪನ್ನು ಕ್ಷಮಿಸದಿರಲಿಕ್ಕೆ ನಾನೆಷ್ಟರವನು? ನೀನು ಅಪರಾಧ ಮಾಡಿದ್ದರಷ್ಟೇ ನಾನು ಕ್ಷಮಿಸುವದು! ಆದರೆ ಚೆನ್ನಾಗಿ ನೆನಪಿನಲ್ಲಿಡು; ಉದಾರಾಂತಃಕರಣದ ಸ್ತ್ರೀಯರನ್ನು ಮಾನಸಿಂಹನು ಬಹಳವಾಗಿ ಮನ್ನಿಸುವನು. ಅಂಥವರ ದುಃಖವನ್ನು ಕಣ್ಣಿನಿಂದ ನೋಡುವದೂ ಆತನಿಂದ ಎಂದಿಗೂ ಆಗದು; ಆದರೆ ತಂಗೀ, ಪಠಾಣರು ಪುನಃ ಓಡಿಸಾ ಪ್ರಾಂತದಲ್ಲಿ ಗೊಂದಲ ಹಾಕಹತ್ತಿರುವದರಿಂದ, ನಾನು ಯುದ್ಧಕ್ಕಾಗಿ ನಾಳೆ ಅಲ್ಲಿಗೆ ಹೋಗಬೇಕಾಗಿದೆ. ಯುದ್ಧವು ಮುಗಿಯುವವರೆಗೆ ನೀನು ನನ್ನ ಬಳಿಯಲ್ಲಿರಬೇಕೆಂದು ನಾನು ಇಚ್ಛಿಸುತ್ತೇನೆ. ಆಯೇಷೇ, ಯುದ್ಧ ವಿಷಯವಾಗಿ ನೀನೇನಾದರೂ ಹೇಳುವೆಯೇನು?

ಆಯೇಷೆ—ಮಹಾರಾಜ, ಯುದ್ಧವಿಷಯವಾಗಿ ನಾನೇನು ಹೇಳಲಿ? ಯುದ್ಧ, ರಾಜ್ಯಪದ್ಧತಿ, ಪ್ರಜಾಹಿತ ಮೊದಲಾದವುಗಳ ಕಡೆಗೆ ಲಕ್ಷವನ್ನು ಪೂರೈಸುವದು ಬಾದಶಹರ ಕೆಲಸವು. ಅವು ನನ್ನಂಥ ಹೆಂಗಸಿಗೆ ಹೇಗೆ ತಿಳಿಯಬೇಕು?

ಮಾನಸಿಂಹ—ನವಾಬ ಉಸ್ಮಾನಖಾನನಿಗೆ ನೀನೇನಾದರೂ ಈ ಯುದ್ಧದ ಸಂಬಂಧದಿಂದ ಹೇಳಬಹುದೇನು?

ಆಯೇಷೆ—ನಾನೇನು ಹೇಳಲಾರೆನು. ನವಾಬರು ಸ್ವತಃ ಶೂರರೂ, ತರುಣರೂ, ಬಹದ್ದರರೂ ಆಗಿರುತ್ತಾರೆ. ಅವರು ಜಾಗ್ರತೆಯಿಂದಲೂ, ಬುದ್ಧಿ ಚಾತುರ್ಯದಿಂದಲೂ ತಮ್ಮ ಕೆಲಸಗಳನ್ನು ಮಾಡುವರು. ಅಂದ ಬಳಿಕ ನನ್ನಂಥ ನಿರ್ಬುದ್ಧ ಸ್ತ್ರೀಯು ಅವರಿಗೆ ಆಲೋಚನೆ ಯೇನು ಹೇಳಬೇಕು? ಅವರಿಗೆ ಆಲೋಚನೆ ಹೇಳುವ ಮನಸ್ಸು ಮಾಡುವದು ಮೂರ್ಖತನವೇ ಸರಿ. ಅವರು ತಮ್ಮ ಕೃತ್ಯದ ಕಡೆಯ ಪರಿಣಾಮವೇನಾದೀತೆಂಬದನ್ನು ಮುಂಗಂಡು, ತಮಗೆ ಜಯಪ್ರಾಪ್ತಿಯಾಗುವಂತೆ ಅನುಕೂಲ ಮಾಡಿಕೊಂಡು, ಅವರು ಇಷ್ಟು ಹೊತ್ತಿಗೆ ಯುದ್ಧಕ್ಕಾಗಿ ಟೊಂಕಕಟ್ಟಿ ಸಹ ನಿಂತಿರಬಹುದು.

ಮಾನಸಿಂಹ—ಹೀಗೋ ಒಳ್ಳೇದು. ಸದ್ಯಕ್ಕೆ ನೀನು ನಮ್ಮ ಬಳಿಯಲ್ಲಿರಬೇಕಾಗುವದು. ಉರ್ಮಿಳಾ ರಾಣಿಯವರು ನಿನ್ನ ಯೋಗಕ್ಷೇಮವನ್ನು ವಿಚಾರಿಸುವಂತೆ ನಾನು ವ್ಯವಸ್ಥೆ ಮಾಡುವೆನು. ಯುದ್ಧವು ಮುಗಿದ ಬಳಿಕ ನಾನು ನಿನ್ನನ್ನು ಕಾಣುವೆನು. ಆಗ ಏನು ಮಾಡುವೆನೆಂಬದನ್ನು ಈಗ ಹೇಳುವದಿಲ್ಲ, ನಾನು ನಿನ್ನನ್ನು ಉರ್ಮಿಳಾ ರಾಣಿಯ ಬಳಿಗೆ ಕಳಿಸುವೆನು. ಈಗ ಹೆಚ್ಚಿಗೆ ಮಾತಾಡಲಿಕ್ಕೆ ನನ್ನ ಮನಸ್ಸು ಸ್ವಸ್ಥವಾಗಿಲ್ಲ.

ಆಯೇಷೆ—ಮಹಾರಾಜರೇ, ತಮ್ಮ ಆಜ್ಞೆಗೆ ನಾನು ಹೊರತಿಲ್ಲ. ಆದರೆ ನನ್ನ ಆಪ್ತನಾದ ತೇಜಖಾನನೆಂಬವನು ಇಲ್ಲಿ ಪಾಟಣಾದಲ್ಲಿರುವನು; ಆತನನ್ನು ಕಂಡು ಸನ್ನಿಧಿಗೆ ಬರುವೆನು. ನನ್ನ ಈ ಮಾತನ್ನಷ್ಟು ನಡಿಸುವ ಕೃಪೆ ಮಾಡಬೇಕು.

# ಒಂದು ವೃಕ್ಷಕ್ಕೆ ಎರಡು ಬಳ್ಳಿಗಳು

ಹೀಗೆ ಆಯೇಷೆಯು ಬೇಡಿಕೊಳ್ಳಲು, ಅದಕ್ಕೆ ಒಪ್ಪಿಕೊಂಡು ಅಂತಃಪುರಕ್ಕೆ ಸಾಗಿದ್ದ ಮಾನಸಿಂಹನ ಮನಸ್ಸಿನಲ್ಲಿ ಬಗೆಬಗೆಯ ವಿಚಾರಗಳು ಉತ್ಪನ್ನವಾದವು. ಪಠಾಣರು ಪುನಃ ಯುದ್ಧಕ್ಕೆ ಸನ್ನದ್ಧರಾದದ್ದರಿಂದುಂಟಾದ ಸಂತಾಪ, ಒಂದು ಬಗೆಯಿಂದ ನಿರಪರಾಧಿಯಾಗಿದ್ದ ತನ್ನ ಮಗನ ಆಜನ್ಮ ಕಾರಾಗೃಹವಾಸದಿಂದುಂಟಾದ ವಿಷಾದ, ಆಯೇಷೆಯ ಸದ್ಗುಣ-ಸೌಭಾಗ್ಯದ ಯೋಗದಿಂದುಂಟಾದ ಕೌತುಕ ಇವು ಆತನ ಮನಸ್ಸನ್ನು ಚಂಚಲವಾಗಿ ಮಾಡಿದವು. ಅದರಲ್ಲಿ ರಾಜಲಕ್ಷ್ಮಿಯ ಒಂದೊಂದೇ ಸದ್ಗುಣಗಳು ನೆನಪಾಗಲು, ಆ ಕನ್ಯಾರತ್ನವು ಯಾರಾಗಿರಬಹುದೆಂಬದನ್ನು ತಿಳಕೊಳ್ಳುವ ಇಚ್ಛೆಯು ಆತನಲ್ಲಿ ಉತ್ಪನ್ನವಾಯಿತು. ಉರ್ಮಿಳಾರಾಣಿಯ ಪ್ರೀತಿಗೆ ಪಾತ್ರಳಾದ ರಾಜಲಕ್ಷ್ಮಿಯ ಪರಿಚಯವನ್ನು ವಾಚಕರು ಇಷ್ಟರಲ್ಲಿ ಮರೆತಿರಲಿಕ್ಕಿಲ್ಲ. ಹೀಗೆ ಮಾನಸಿಂಹನ ಚಿಂತಾಯುಕ್ತವಾದ ಔತ್ಸುಕ್ಯದಿಂದ ಉರ್ಮಿಳಾರಾಣಿಯ ಮಂದಿರವನ್ನು ಪ್ರವೇಶಿಸಲು, ರಾಣಿಯು ನಗುತ್ತ ಹಸನ್ಮುಖಳಾಗಿ ಪ್ರೀತಿಯಿಂದ ಆತನನ್ನು ಬರಮಾಡಿಕೊಂಡಳು. ಆಗ ಮಾನಸಿಂಹನು ಉರ್ಮಿಳಾರಾಣಿಯನ್ನು ಕುರಿತು-

ಮಾನಸಿಂಹ—ಮಹಾರಾಜ್ಞೀ, ಒಬ್ಬಳೇ ಕುಳಿತಿರುವೆಯಲ್ಲ, ನಿನ್ನ ರಾಜಲಕ್ಷ್ಮಿಯು ಎಲ್ಲಿದ್ದಾಳೆ?

ಉರ್ಮಿಳಾರಾಣಿ—ನನ್ನ ರಾಜಲಕ್ಷ್ಮಿಯು! ಅಂದಬಳಿಕ ರಾಜಲಕ್ಷ್ಮಿಯು ತಮ್ಮವಳಲ್ಲವೆಂದಹಾಗಾಯಿತಲ್ಲ?

ಮಾನಸಿಂಹ—ಹಾಗೇನೂ ಅಲ್ಲ, ಸಹಜವಾಗಿ ಕೇಳಿದೆನು. ರಾಜಲಕ್ಷ್ಮಿಯು ಬಹು ಸುಶೀಲೆಯು, ಸರಲ ಹೃದಯದವಳು. ನಾನು ಅತಃಕರುಣ ಪೂರ್ವಕವಾಗಿ ಆಕೆಯನ್ನು ಪ್ರೀತಿಸುತ್ತೇನೆ. ಆಕೆಯು ಎಲ್ಲಿದ್ದಾಳೆ?

ಈ ಮೇರೆಗೆ ನುಡಿಯುತ್ತ ಮಾನಸಿಂಹನು ಪಲ್ಲಂಗದ ಮೇಲೆ ಕುಳಿತುಕೊಂಡನು. ಆಗ ಉರ್ಮಿಳಾರಾಣಿಯು-

ಉರ್ಮಿಳಾ—ಮಹಾರಾಜರ ಮುಖ ಪ್ರಾಕ್ಷಾಲನಕ್ಕೆ ನೀರು ತರಲಿಕ್ಕೆ ಹೋಗಿದ್ದಾಳೆ, ಈಗ ಬರುವಳು. ಮಹಾರಾಜರು ಆಕೆಯನ್ನು ಕೃಪಾದೃಷ್ಟಿಯಿಂದ ನೋಡುವದರಿಂದ ನನಗೆ ಬಹಳ ಸಂತೋಷವಾಗುತ್ತದೆ. ನನ್ನ ಹೊಟ್ಟೆಯಲ್ಲಿ ಮಕ್ಕಳಿಲ್ಲ, ರಾಜಲಕ್ಷ್ಮಿಯು ನನ್ನನ್ನು ಅಂತಃಕರುಣಪೂರ್ವಕವಾಗಿ ಪ್ರೀತಿಸುವದನ್ನೂ, ನನ್ನ ಮೇಲಿರುವ ಆಕೆಯ ಪ್ರೀತಿಯನ್ನೂ ನೋಡಿದರೆ, ನನಗಂತೂ ಇರಲಿ, ನೋಡುವವರಿಗೆ ಸಹ ಆಕೆಯು ನನ್ನ ಹೊಟ್ಟೆಯ ಮಗಳೆಂದು ತೋರುವಹಾಗಿದೆ. ಈ ಮೊದಲು ಮಾತೃಸುಖವು ನನಗೆ ಎಂದೂ ಪ್ರಾಪ್ತವಾಗಿದ್ದಿಲ್ಲ; ಅದನ್ನು ರಾಜಲಕ್ಷ್ಮಿಯು ನನಗೆ ಒದಗಿಸಿ ಕೊಟ್ಟಳು!

ಮಾನಸಿಂಹ—(ಕನಿಕರದಿಂದ) ಮಹಾರಾಣೀ, ಇದೇನು? ಕಣ್ಣೀರು ಹಾಕುವೆಯಲ್ಲ! ನಿನ್ನ ಹೃದಯವು ಎಷ್ಟು ಕೋಮಲವಾದದ್ದು! ರಾಜಲಕ್ಷ್ಮಿಯು ನಿಶ್ಚಯವಾಗಿ ನಿನ್ನ ಅನುಗ್ರಹಕ್ಕೆ ಪಾತ್ರಳಿರುತ್ತಾಳೆ. ನೀನು ಆಕೆಯನ್ನು ಮಗಳೆಂದು ಭಾವಿಸುತ್ತಿದ್ದರೆ, ಎಲ್ಲ ಬಗೆಯಿಂದ ಆಕೆಯನ್ನು ಆದರ ಪೂರ್ವಕವಾಗಿ ನಮ್ಮ ಪರಿವಾರದಲ್ಲಿ ಸೇರಿಸಿಕೋ. ಅದಕ್ಕೆ ನನ್ನ ಸಂಪೂರ್ಣ ಒಪ್ಪಿಗೆ ಇರುವದು.

ಊರ್ಮಿಳಾ—ಆದರೆ ಮಹಾರಾಜರೇ, ಈ ಮಾತು ಹ್ಯಾಗೆ ಸಾಧಿಸಬೇಕು?

ಮಾನಸಿಂಹ—ಯಾಕೆ ಸಾಧಿಸುವದಿಲ್ಲ? ರಾಜಲಕ್ಷ್ಮಿಯು ಯಾವಾಗಲೂ ನಮ್ಮ ಬಳಿಯಲ್ಲಿರುವದಕ್ಕೆ ಆಕೆಯ ತಾಯಿ-ತಂದೆಗಳು ಒಪ್ಪಿಕೊಳ್ಳಲಿಕ್ಕಿಲ್ಲವೇನು?

ಉರ್ಮಿಳಾ—ನಿಶ್ಚಯವಾಗಿ ಒಪ್ಪಿಕೊಳ್ಳುವರು. ಈ ಮಾತಿನ ಸಂಶಯವು ನನಗಿಲ್ಲ.

ಮಾನಸಿಂಹ—ಹಾಗಾದರೆ ಮತ್ತೆ ಯಾತರ ಸಂಶಯವು ನಿನಗಿರುವದು?

ಉರ್ಮಿಳಾ—ರಾಜಲಕ್ಷ್ಮಿಯು ನಮ್ಮ ಬಳಿಯಲ್ಲಿ ಯಾವಾಗಲೂ ಇರುವ ವಿಷಯವಾಗಿ ನನಗೆ ಸಂಶಯವಿಲ್ಲ; ಆದರೆ ಮಹಾರಾಜ, ರಾಜಲಕ್ಷ್ಮಿಯನ್ನು ನಮ್ಮ ಪರಿವಾರದಲ್ಲಿ ಸೇರಿಸಿಕೊಂಡ ಮಾತ್ರದಿಂದ ನನಗೆ ಸಮಾಧಾನವಾಗದು. ಆಕೆಗೆ ಎಲ್ಲ ಮಾತಿನಿಂದ ಸುಖವಾಗುವಂತೆ ನಾವು ಮಾಡಬೇಕಾಗುವದು. ರಾಜಲಕ್ಷ್ಮಿಯು ಗುಣಗಳಿಂದಲೂ, ರೂಪದಿಂದಲೂ ಅಪ್ರತಿಮಳಾಗಿರುವಳು; ಆದರೆ ಆಕೆಯ ಗಂಡನಿಗೆ ಆಕೆಯ ಅಂಗೀಕಾರ ಮಾಡಲಿಕ್ಕೆ ಬರುವಹಾಗಿಲ್ಲ; ಅಂದಬಳಿಕ ಆಕೆಯನ್ನು ತಮ್ಮ ಪರಿವಾರದಲ್ಲಿ ಸೇರಿಸಿಕೊಂಡ ಮಾತ್ರದಿಂದ ಆಕೆಗೆ ಹೇಗೆ ಸುಖವಾಗುವದು?

ಮಾನಸಿಂಹ—ಏನಂದಿ? ರಾಜಲಕ್ಷ್ಮಿಯಂಥ ಗುಣಾಢ್ಯ ಸುಂದರಿಯ ಅಂಗೀಕಾರಕ್ಕೆ ಪ್ರತಿಬಂಧವೇ?

ಉರ್ಮಿಳ— ಹೌದು ಮಹಾರಾಜ, ಪ್ರತಿಬಂಧವಿರುವದು? ಆಕೆಯ ಗಂಡನು ಮೊದಲು ಆಕೆಯ ಪಾಣಿಗ್ರಹಣವನ್ನು ಬಹು ಆದರದಿಂದ ಮಾಡಿದನು; ಬಹು ಪ್ರೇಮದಿಂದ ಆಕೆಯನ್ನು ತನ್ನ ಬಳಿಯಲ್ಲಿಟ್ಟುಕೊಂಡನು; ಆದರೆ ರಾಜಲಕ್ಷ್ಮಿಯು ನೀಚ ಕುಲೋತ್ಪನ್ನಳೆಂಬ ಅಪವಾದವು ಉಂಟಾಗಲು, ಆಕೆಯ ಸ್ವೀಕಾರಕ್ಕೆ ಆತಂಕ ಉಂಟಾಯಿತು!

ಮಾನಸಿಂಹ—ರಾಜಲಕ್ಷ್ಮಿಯು ನಿಜವಾಗಿ ನೀಚ ಕುಲೋತ್ಪನ್ನಳಿರುವಳೇನು?

ಉರ್ಮಿಳಾ—ನನಗೆ ಗೊತ್ತಿದ್ದ ಮಟ್ಟಿಗೆ ವಿಚಾರ ಮಾಡಲು, ರಾಜಲಕ್ಷ್ಮಿಯು ನೀಚಕುಲೋತ್ಪನ್ನಳೆಂದು ನನಗೆ ತೋರುವದಿಲ್ಲ. ಒಂದು ಪಕ್ಷದಲ್ಲಿ ಕುಲಕ್ಕೆ ಕಲಂಕವಿದ್ದರೂ, ಪಾಪ, ಅದರಲ್ಲಿ ಆಕೆಯ ತಪ್ಪು ಏನು? ರಾಜಲಕ್ಷ್ಮಿಯು ಸಾಕ್ಷಾತ್ ಲಕ್ಷ್ಮಿಯೆಂಬದರಲ್ಲಿ ಸಂಶಯವಿಲ್ಲ. ಹೀಗಿದ್ದು ಲಗ್ನವಾದ ಬಳಿಕ ಅನವಶ್ಯಕವಾಗಿರುವ ಕುಲದ ಕಲಂಕವನ್ನು ಮುಂದೆ ಮಾಡಿ, ಆಕೆಯ ಪತಿಯು ಆಕೆಯ ಅಂಗೀಕಾರ ಮಾಡದಿರುವದು ಅಧರ್ಮವಲ್ಲವೆ?

ಮಾನಸಿಂಹ—ಮಹಾರಾಜ್ಞೀ, ನಿಶ್ಚಯವಾಗಿ ಅಧರ್ಮವು! ಆ ಗುಣವತಿಯಾದ ಸುಂದರಿಯು ಸರ್ವಥಾ ತ್ಯಾಜ್ಯಳಲ್ಲ. ರಾಜಲಕ್ಷ್ಮಿಯ ಪತಿಯು ಯಾರು? ಆತನು ಎಲ್ಲಿ ಇರುವನು?

ಉರ್ಮಿಳಾ—ಆತನು ತಮ್ಮ ದಂಡಿನೊಳಗಿನ ಒಬ್ಬ ದಂಡಾಳುವಾಗಿರುವನು. ತಾವು ಮನಸ್ಸು ಮಾಡಿದರೆ, ರಾಜಲಕ್ಷ್ಮಿಯ ಕಷ್ಟ ನಿವಾರಣಕ್ಕೆ ಕ್ಷಣವಾದರೂ ವಿಳಂಬವಾಗಲಿಕ್ಕಿಲ್ಲ.

ಮಾನಸಿಂಹ—ಆತನು ನಮ್ಮ ದಂಡಾಳುವಾಗಿರುವನೇ? ಹಾಗಿದ್ದರೆ ನಿಶ್ಚಯವಾಗಿ ರಾಜಲಕ್ಷ್ಮಿಯ ಕಷ್ಟ ನಿವಾರಣೆಯಾಯಿತೆಂದು ತಿಳಿ; ರಾಜಲಕ್ಷ್ಮಿಯ ಪತಿಯೂ, ಆತನ ಆಪ್ತೇಷ್ಟರೂ ರಾಜಲಕ್ಷ್ಮಿಯನ್ನು ಆದರದಿಂದ ಸ್ವೀಕರಿಸುವಂತೆ ನಾನು ಮಾಡುವೆನು; ಆದರೆ ಮಹಾರಾಜ್ಞೀ, ರಾಜಲಕ್ಷ್ಮಿಯು ಗಂಡನ ಮನೆಗೆ ಹೋದ ಬಳಿಕೆ ನಿನಗೆ ಆಕೆಯ ವಿಯೋಗ ದುಃಖ ವಾಗುವದಲ್ಲ, ಅದಕ್ಕೆ ಹ್ಯಾಗೆ ಮಾಡುವೆ?

ಉರ್ಮಿಳಾ—ಅದೇಕೆ? ಮಹಾರಾಜರ ಕೃಪೆಯಾದರೆ, ಈ ವಿಯೋಗ ದುಃಖವು ನನಗೆ ಯಾಕೆ ಒದಗುವದು? ರಾಜಲಕ್ಷ್ಮಿಯ ಗಂಡನು ತಮ್ಮ ಸೈನ್ಯದಲ್ಲಿ ಉಚ್ಚ ಪದವಿಯನ್ನು ಹೊಂದಿ, ತಮ್ಮ ಬಳಿಯಲ್ಲಿ ಇರಹತ್ತಿದನೆಂದರೆ, ನಾನು ರಾಜಲಕ್ಷ್ಮಿಯನ್ನು ನನ್ನ ಬಳಿಯಲ್ಲಿ ಇಟ್ಟು ಕೊಳ್ಳುವೆನು. ತನ್ನ ಬಯಕೆಯು ಪೂರ್ಣವಾದ ಬಳಿಕ, ರಾಜಲಕ್ಷ್ಮಿಯು ಔದಾಸೀನ್ಯವನ್ನು ಬಿಟ್ಟು ಮುಗುಳು ನಗೆಯಿಂದ ತಮ್ಮ ಸೇವೆಯನ್ನು ಮಾಡಹತ್ತಿದಳೆಂದರೆ ಅದನ್ನು ನೋಡಿ ನನಗೆ ಪರಮಾನಂದವಾಗುವದು. ಮಹಾರಾಜರೆ, ತಾವು ನ್ಯಾಯಪಕ್ಷಪಾತಿಗಳಾಗಿರುತ್ತೀರಿ, ಧರ್ಮಿಷ್ಠರಿರುತ್ತೀರಿ, ದಯಾಳುಗಳಾಗಿರುತ್ತೀರಿ; ಆದ್ದರಿಂದ ಚರಣಸೇವಕಳಾದ ಈ ದಾಸಿಯ ಪ್ರಾರ್ಥನೆ ಕಿವಿಗೊಟ್ಟು, ರಾಜಲಕ್ಷ್ಮಿಯ ಕಷ್ಟವನ್ನು ದೂರ ಮಾಡಬೇಕು.

ಈ ಮೇರೆಗೆ ನುಡಿಯುವಾಗ ಮಹಾರಾಣಿಯು ಕಣ್ಣೊಳಗಿಂದ ನೀರುಗಳು ಸುರಿಯಹತ್ತಿದವು. ಆಗ ಮಾನಸಿಂಹನು ಆಕೆಯ ಕೈಯನ್ನು ಹಿಡಿದು ಸ್ನೇಹಭಾವದಿಂದ– ಮಾಹಾರಾಜ್ಞೀ, ಅವಶ್ಯವಾಗಿ ನಾನು ನಿನ್ನ ಮನೋದಯವನ್ನು ಪೂರ್ಣ ಮಾಡುವೆನು; ಎಂಥ ವಿಪತ್ತು ಒದಗಿದರೂ ನಾನು ನನ್ನ ವಚನವನ್ನು ಪಾಲಿಸುವೆನು; ರಾಜಲಕ್ಷ್ಮಿಯ ಕಷ್ಟ ನಿವಾರಣ ಮಾಡುವ ವಿಷಯದಲ್ಲಿ ಯಾವ ಕೆಲಸ ಮಾಡಬೇಕಾದರೂ ಅದನ್ನು ಮಾಡುವೆನು; ಈ ಪ್ರಸಂಗದಲ್ಲಿ ಜಗತ್ತಿನ ದೃಷ್ಟಿಯಿಂದ ನಾನು ನೀಚನೂ, ದಯಾಶೂನ್ಯನೂ ಆಗುವ ಪ್ರಸಂಗ ಒದಗಿದರೂ ಹಿಂದಕ್ಕೆ ಸರಿಯುವದಿಲ್ಲ, ಎಂದು ನುಡಿಯಲು, ಉರ್ಮಿಳಾರಾಣಿಯು ಆನಂದಪರವಶಳಾಗಿ ಪತಿಯ ಚರಣಗಳ ಮೇಲೆ ಮಸ್ತಕವನ್ನಿಟ್ಟಳು. ಆಕೆಯು ಸದ್ಗದಿತ ಕಂಠದಿಂದ ಪತಿಯನ್ನು ಕುರಿತು– ಮಹಾರಾಜ, ರಾಜ ಲಕ್ಷ್ಮಿಯು ಅನ್ಯ ಸ್ತ್ರೀಯಲ್ಲ, ತಮ್ಮ ಸೊಸೆಯಾಗಿರುವಳು. ಆಕೆಯಿಂದಲೇ ಅಂಬರಾಧೀಶ್ವರರ ವಂಶವು ಅಲಂಕೃತವಾಗ ಬೇಕಾಗಿರುವದು. ಆಕೆಯನ್ನು ಅಂಗೀಕರಿಸಿ ತಮ್ಮ ಪ್ರತಿಜ್ಞೆಯನ್ನು ಪೂರ್ಣಮಾಡಬೇಕು, ಎಂದು ಬೇಡಿಕೊಂಡಳು. ಆಗ ಮರೆಗೆ ನಿಂತುಕೊಂಡಿದ್ದ ರಾಜಲಕ್ಷ್ಮಿಯು ಮಹಾರಾಜರ ಚರಣಗಳ ಮೇಲೆ ಮಸ್ತಕವನ್ನಿಟ್ಟು, ಕಣ್ಣೀರುಗಳಿಂದ ತನ್ನ ಆ ಮಾವನ ಚರಣಗಳನ್ನು ತೋಯಿಸಿದಳು. ಆಗ ಮಾನಸಿಂಹನು ವಿಸ್ಮಯಪಟ್ಟು ರಾಣಿಯನ್ನು ಕುರಿತು– ಮಹಾರಾಜ್ಞೀ, ಇದೇನು? ಈಕೆಯು ನನ್ನ ಸೊಸೆಯೇ? ನನ್ನ ಸೊಸೆಯೇ? ನಮ್ಮ ಜಗತ್ಸಿಂಗನ ಧರ್ಮಪತ್ನಿಯೇ? ಅನ್ನಲು, ರಾಣಿಯು– ಹೌದು ಮಹಾರಾಜ, ಈಕೆಯು ತಮ್ಮ ಸೊಸೆಯು, ಈಕೆಯು ಜಗತ್ಸಿಂಗನ

ವಿವಾಹಿತ ಧರ್ಮಪತ್ನಿಯು. ಈಕೆಯ ಹೆಸರು ತಿಲೋತ್ತಮೆಯು, ಎಂದು ಹೇಳಿದಳು. ಅದನ್ನು ಕೇಳಿ ಮಾನಸಿಂಹನು ವಿಚಾರಮಗ್ನನಾದನು. ಸ್ವಲ್ಪ ಹೊತ್ತಿನ ಮೇಲೆ ಆತನು ರಾಣಿಯನ್ನು ಕುರಿತು– ಮಹಾರಾಜ್ಞೀ, ಕೇಳು, ನನ್ನ ಮಾತನ್ನು ಚೆನ್ನಾಗಿ ಕೇಳು. ನನ್ನಪ್ರತಿಜ್ಞೆ ಸರ್ವಥಾ ಭಂಗವಾಗಲಾರದು. ತಿಲೋತ್ತಮೆಯು ನನ್ನ ಸೊಸೆಯಾಗಲಿಕ್ಕೆ ಯೋಗ್ಯಳಿರುತ್ತಾಳೆಂಬದರಲ್ಲಿ ಎಳ್ಳಷ್ಟು ಸಂಶಯವಿಲ್ಲ. ನಾನು ಒಳ್ಳೇ ಆದರದಿಂದ ಈಕೆಯನ್ನು ಸ್ವೀಕರಿಸಿ, ಇಂದಿನಿಂದ ನಮ್ಮ ಪರಿವಾರದಲ್ಲಿ ಸೇರಿಸಿಕೊಂಡಿರುವೆನು. ರಾಜಮಹಿಷಿಗೆ ಉಚಿತವಾದ ಎಲ್ಲ ವ್ಯವಸ್ಥೆಯನ್ನು ಈಕೆಯ ಸಲುವಾಗಿ ಮಾಡಿಸು. ಇಂದಿನಿಂದ ಈ ನವವಧುವು ನಿನ್ನ ಸಂಗಡ ಇರುತ್ತಹೋಗುವಳು.

ಅಂಬರಾಧೀಶ್ವರನು ಹೀಗೆ ನುಡಿಯುತ್ತಿರುವಾಗ ತಿಲೋತ್ತಮೆಯು ಮಾವನ ಚರಣ ಧೂಲಿಯನ್ನು ಮಸ್ತಕದಲ್ಲಿ ಧರಿಸಿ, ಸ್ವಲ್ಪ ದೂರಸರಿದು ನಿಂತುಕೊಂಡು ಬಿಕ್ಕಿ ಬಿಕ್ಕಿ ಅಳಹತ್ತಿದಳು. ಉರ್ಮಿಳಾರಾಣಿಯು ಪತಿಯ ಚರಣದ ಬಳಿಯಿಂದ ಸರಿದು ನಿಂತು, ವಿನಯದಿಂದ ನಮಸ್ಕರಿಸಿ, ಪತಿಯನ್ನು ಕುರಿತು– ಈ ದಾಸಿಯು ಮಹಾರಾಜರ ಕೃಪೆಯ ಲಾಭದಿಂದ ಧನ್ಯಳಾಗಿರುವಳು. ಮಹಾರಾಜರ ಉಪಕೃತಿಯನ್ನು ಜನ್ಮವಿರುವತನಕ ಮರೆಯ ಲಾರಳು, ಎಂದು ನುಡಿದಳು. ಆಗ ಮಾನಸಿಂಹನು ರಾಜಲಕ್ಷ್ಮಿಯನ್ನು ಕುರಿತು– ತಂಗೀ, ರಾಜಲಕ್ಷ್ಮಿ, ನೀನು ಇಂದಿನಿಂದ ನನ್ನ ಮಗಳಾದೆ; ಹೋಗು, ನನ್ನ ಊಟದ ವ್ಯವಸ್ಥೆಯನ್ನು ಮಾಡು ಹೋಗು ಎಂದು ನುಡಿಯಲು, ತಿಲೋತ್ತಮೆಯು ಹೊರಟು ಹೋದಳು. ಇತ್ತ ಮಾನಸಿಂಹನು ವಿಚಾರಮಗ್ನನಾಗಿ ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡನು. ಆಯೇಷಾ– ತಿಲೋತ್ತಮೆಯರಂಥ ಅಲೌಕಿಕ ಸ್ತ್ರೀರತ್ನಗಳೆರಡು ತನ್ನ ಮಗನನ್ನು ಆಶ್ರಯಿಸಿರುವದನ್ನು ನೋಡಿ, ಆತನಿಗೆ ಪರಮಾನಂದವಾಯಿತು. ಅದರಲ್ಲಿ ಆಯೇಷೆಯಂತೂ ಮಾನಸಿಂಹನ ಚಿತ್ತವನ್ನು ಸಂಪೂರ್ಣವಾಗಿ ಆಕರ್ಷಿಸಿದ್ದಳು. ವಿಚಾರ ಮಾಡುತ್ತ ಆ ಅಂಬರಾಧೀಶ್ವರನು ರಾಣಿಯನ್ನು ಕುರಿತು– ಮಹಾರಾಜ್ಞೀ, ಒಂದೊಂದು ಸ್ತ್ರೀ ರತ್ನದ ಗುಣಗಳನ್ನು ಸ್ಮರಿಸಿದರೆ ಮನಸ್ಸು ದಂಗುಬಡಿದು ಹೋಗುತ್ತದೆ! ನಮ್ಮ ರಾಜಲಕ್ಷ್ಮಿಯ ಗುಣಗಳಿಗೆ ನಾನು ಅತ್ಯಂತ ಸಂತುಷ್ಟನಾಗಿರುವಾಗ, ಈದಿನ ಆಯೇಷೆಯೆಂಬ ಸುಂದರಿಯೊಬ್ಬಳು ತನ್ನ ಉಜ್ವಲ ಗುಣಗಳಿಂದ ನನ್ನನ್ನು ಅಚ್ಚರಿಗೊಳಿಸಿದಳು. ಪ್ರಿಯೇ, ನೀನು ಆ ಕಾತಲೂಖಾನನ ಸಾಕುಮಗಳಾದ ಆಯೇಷೆಯನ್ನು ಬಲ್ಲೆಯಷ್ಟೆ? ಆ ಗುಣಸುಂದರಿಯ ದರ್ಶನವು ಇಂದೇ ನನಗಾಯಿತು. ಆಕೆಯು ಮನುಷ್ಯಳಲ್ಲ, ಸುರಸುಂದರಿಯೇ ಸರಿ. ನಿನ್ನ ಬಳಿಗೆ ಆಕೆಯನ್ನು ಕರತರುತ್ತಿದ್ದೆನು; ಆದರೆ ಆಕೆಯು ಇದೇ ಪಾಟಣಾ ಪಟ್ಟಣದಲ್ಲಿರುವ ತನ್ನ ಆಪ್ತನಾದ ತೇಜಖಾನನನ್ನು ಕಂಡು ಬರಲಿಕ್ಕೆ ಅಪ್ಪಣೆ ಕೊಡಬೇಕೆಂದು ಬೇಡಿಕೊಂಡದ್ದರಿಂದ, ಆಕೆಯ ಮಾತನ್ನು ಮೀರಲಾರದೇ ಕಳಿಸಿಕೊಟ್ಟಿರುವೆನು. ಆಯೇಷೆಯು ನಮ್ಮ ಜಗತ್ಸಿಂಗನನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಿರುವಳು; ಆದರೆ ಜಗತ್ಸಿಂಗನ ಪ್ರೇಮವು ಆಯೇಷೆಯ ಮೇಲಿದ್ದಂತೆ ತೋರುವದಿಲ್ಲ. ಪ್ರಿಯೆ, ಆಯೇಷೆಯು ಪಠಾಣ ರಾಜಕುಮಾರಿಯಾಗಿದ್ದರೂ, ಬಹು ಗುಣಾಢ್ಯಳು. ಜಗತ್ಸಿಂಗನ ಬಂಧವಿಮೋಚನವಾದ ಬಳಿಕ, ಆತನೊಡನೆ ಆಯೇಷೆಯ

ಲಗ್ನವನ್ನು ಮಾಡಲೇಬೇಕು. ಇದರಲ್ಲಿ ತಪ್ಪೇನು? ಒಂದು ವೃಕ್ಷಕ್ಕೆ ಭಿನ್ನ ಜಾತಿಯ ಎರಡು ಬಳ್ಳಿಗಳು ಹಬ್ಬಿರಬಾರದೇನು? ಅವಶ್ಯವಾಗಿ ಅವರಿಬ್ಬರ ಲಗ್ನಮಾಡುವೆನು. ಆಯೇಷೆಯು ಅಂಬರ ರಾಜವಂಶಕ್ಕೆ ಅಲಂಕಾರ ಭೂತಳೇ ಸರಿ.

ಪತಿಯ ಈ ಮಾತುಗಳನ್ನು ಕೇಳಿ ಉರ್ಮಿಳಾರಾಣಿಯು ಆಶ್ಚರ್ಯಪಟ್ಟಳು. ಜಗತ್ಸಿಂಗನು ಆಯೇಷೆಯ ಮೋಹದ ಬಲೆಗೆ ಸಿಕ್ಕು, ಅಂಬರಕುಲದ ಅಪಮಾನ ಮಾಡಿದನೆಂಬ ಸಿಟ್ಟಿನಿಂದ ತನ್ನ ಪತಿಯು ಜಗತ್ಸಿಂಗನನ್ನು ಹಲವು ಸಾರಿ ಹೇಳಿದದ್ದನ್ನು ಈ ಮೊದಲೇ ಆಕೆಯು ಕೇಳಿದ್ದಳು. ಜಗತ್ಸಿಂಗನ ಆಜನ್ಮ ಕಾರಾಗೃಹವಾಸಕ್ಕೆ ಆಯೇಷೆಯೂ ಒಂದು ಕಾರಣವಾಗಿರಲು, ಈಗ ಮಹಾರಾಜದರು ಆಕೆಯನ್ನು ಪ್ರಸನ್ನ ಚಿತ್ತದಿಂದ ವರ್ಣಿಸುವದರ ಕಾರಣವು ರಾಣಿಗೆ ತಿಳಿಯದಾಯಿತು. ಆಕೆಯು ಮುಗ್ಧಭಾವದಿಂದ ಪತಿಯ ಮುಖವನ್ನು ಎವೆಯಿಕ್ಕದೆ ನೋಡುತ್ತಿರುವಾಗ, ಮಾನಸಿಂಹನು ಗಾಂಭೀರ್ಯದಿಂದ– ಮಹಾರಾಜ್ಞೀ, ನಾನು ಜಗತ್ಸಿಂಗನನ್ನು ಆಜನ್ಮ ಕಾರಾಗೃಹದಲ್ಲಿರಿಸಿದ್ದು ಅವಿಚಾರದ ಕೆಲಸವಾಯಿತು. ಕುಮಾರನು ಯಾವ ಮಾತಿನಿಂದಲೂ ಅಪರಾಧಿಯಿದ್ದಂತೆ ತೋರುವದಿಲ್ಲ. ಹೀಗಿದ್ದು ಸಿಟ್ಟಿನ ಭರದಲ್ಲಿ ಆತನನ್ನು ಆಜನ್ಮ ಕಾರಾಗೃಹದಲ್ಲಿರಿಸಿ, ನನ್ನ ಕಾಲಮೇಲೆ ನಾನು ಕಲ್ಲು ಹಾಕಿಕೊಂಡಂತೆ ಮಾಡಿದೆನು. ಆಗಲಿ, ಉಪಾಯವಿಲ್ಲ, ನಾನಾಗಿ ಕುಮಾರನ ಬಂಧವಿಮೋಚನೆ ಮಾಡುವಹಾಗಿಲ್ಲ, ಇನ್ನು, ಆಯೇಷೆಯ ಪ್ರಯತ್ನದಿಂದ ಬಾದಶಹನು ಕುಮಾರನನ್ನು ಬಂಧಮುಕ್ತ ಮಾಡಿದರೆ ಮಾಡಬೇಕು, ಎಂದು ನುಡಿಯಲು, ಉರ್ಮಿಳಾರಾಣಿಯು ಬಹು ಸಮಾಧಾನಪಟ್ಟು ಪತಿಯನ್ನು ಕುರಿತು– ಮಹಾರಾಜ, ಕುಮಾರನ ವಿಷಯವಾಗಿ ತಮ್ಮ ಮನಸ್ಸು ಕನಿಕರ ಪಡುವದನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ. ಹೀಗೆ ತಮ್ಮ ಮನಸ್ಸಿನ ಒಲವನ್ನು ಸಂಪೂರ್ಣವಾಗಿ ತಿರುಗಿಸಿದ ಭಾಗ್ಯಶಾಲಿನಿಯಾದ ಆ ಆಯೇಷೆಯು ಎಂಥವಳಿರಬಹುದು! ಆಕೆಯನ್ನು ಕಾಣುವ ಇಚ್ಛೆಯು ನನ್ನನ್ನು ಬಹಳವಾಗಿ ಬಾಧಿಸುತ್ತಿರುವದು. ಈಗಲೇ ಆಕೆಯನ್ನು ಕರೆಕಳುಹಬೇಕು. ಆಕೆಯು ನನ್ನನ್ನು ಕಂಡ ಬಳಿಕ, ಬೇಕಾದರೆ ಈ ದಿನವೇ ತನ್ನ ಆಪ್ತನ ಮನೆಗೆ ತಿರುಗಿ ಹೋಗಲೊಲ್ಲಳೇಕೆ, ಎಂದು ಹೇಳಿದಳು. ಅದಕ್ಕೆ ಮಾನಸಿಂಹನು ಒಪ್ಪಿಕೊಂಡು, ಭೋಜನಾನಂತರ ಆಯೇಷೆಯನ್ನು ಕರಕೊಂಡು ಬರುವದಕ್ಕಾಗಿ ಬಹುಮಾನ ಪೂರ್ವಕವಾಗಿ ಮೇಣೆಯನ್ನು ತಾಜಖಾನನ ಮನೆಗೆ ಕಳಿಸಿದನು.

ಮಾನಸಿಂಹನ ಅಪ್ಪಣೆಯಂತೆ ಆಯೇಷೆಯು ಅಂತಃಪುರಕ್ಕೆ ಬಂದಳು. ಆಕೆ ಬಂದದ್ದನ್ನು ಕೇಳಿ ಉರ್ಮಿಳಾರಾಣಿಯು ಆಕೆಗೆ ಎದುರಾಗಿ ಹೋಗಿ ಆದರದಿಂದ ಆಕೆಯನ್ನು ಬರಮಾಡಿಕೊಂಡು, ಒಂದು ವಿಶಾಲವಾದ ಸುಂದರ ಮಂದಿರದೊಳಗೆ ಆಕೆಯನ್ನು ಬಹುಮಾನದಿಂದ ಕರಕೊಂಡು ಹೋದಳು. ಅಲ್ಲಿ ಮಾನಸಿಂಹನು ಒಂದು ರತ್ನಖಚಿತವಾದ ಸಿಂಹಾಸನದಲ್ಲಿ ಗಂಭೀರ ಭಾವದಿಂದ ಕುಳಿತುಕೊಂಡಿದ್ದನು. ಆತನು ಆಯೇಷೆ ಬಂದದ್ದನ್ನು ನೋಡಿ ಆಸನದಿಂದ ಎದ್ದು ಸ್ವಲ್ಪ ಮುಂದಕ್ಕೆ ಹೋಗಿ, ಆಕೆಯ ಸಲುವಾಗಿಯೇ ಸಿದ್ಧ ಮಾಡಿಸಿಟ್ಟಿದ್ದ

ಆಸನದಲ್ಲಿ ಕುಳಿತು ಕೊಳ್ಳುವದಕ್ಕಾಗಿ ವಿನಯದಿಂದ ಆಕೆಗೆ ಸೂಚಿಸಿದಳು; ಆದರೆ ಆಯೇಷೆಯು ಆ ಆಸನದಲ್ಲಿ ಕುಳಿತುಕೊಳ್ಳದೆ, ಉರ್ಮಿಳಾರಾಣಿಯ ಬಳಿಯಲ್ಲಿ ನಿಂತು ಕೊಂಡಳು. ಆಗ ಮಹಾರಾಣಿಯು ಆಕೆಯ ಕೈಯನ್ನು ಹಿಡಿದು, ಒಂದು ಆಸನದ ಬಳಿಗೆ ಆಕೆಯನ್ನು ಕರಕೊಂಡು ಹೋಗಿ, ಅರ್ಧ ಆಸನದ ಮೇಲೆ ತಾನು ಕುಳಿತು, ಅರ್ಧ ಆಸನದ ಮೇಲೆ ಆಯೇಷೆಯನ್ನು ಕುಳ್ಳಿರಿಸಿಕೊಂಡಳು. ಪ್ರಥಮ ದರ್ಶನದಲ್ಲಿಯೇ ಉರ್ಮಿಳಾರಾಣಿಯ ಮನಸ್ಸಿನಲ್ಲಿ ಆಯೇಷೆಯ ವಿಷಯವಾಗಿ ವಿಲಕ್ಷಣವಾದ ಆದರವು ಉತ್ಪನ್ನವಾಗಿತ್ತು. ಆಯೇಷೆಯು ಆಸನದ ಮೇಲೆ ಕುಳಿತುಕೊಂಡ ಬಳಿಕ ಮಾನಸಿಂಹನು ತನ್ನ ಆಸನದಲ್ಲಿ ಕುಳಿತುಕೊಂಡು, ಆಕೆಯನ್ನು ಕುರಿತು– ತಂಗೀ, ನಿನ್ನನ್ನು ನಮ್ಮ ಜನರು ವಿವೇಕವಿಲ್ಲದೆ ನಮ್ಮ ಬಳಿಗೆ ಕರಕೊಂಡು ಬಂದರು; ಆದ್ದರಿಂದ ನಿನಗೆ ಬಹಳ ತ್ರಾಸವಾಯಿತು; ಆದರೆ ನಿನ್ನಂಥ ಗುಣಾಢ್ಯಳ ದರ್ಶನವಾದದ್ದರಿಂದ, ನಮಗೆ ಬಹಳ ಸಂತೋಷವಾಗಿದೆ. ಈ ದೃಷ್ಟಿಯಿಂದ ನೋಡಿದರೆ, ನಮ್ಮ ಜನರು ಒಂದು ಬಗೆಯಿಂದ ನಮ್ಮ ಮೇಲೆ ಉಪಕಾರ ಮಾಡಿದರೆಂತಲೇ ಭಾವಿಸಬೇಕಾಗಿದೆ; ಆದರೂ ನಿನಗೆ ನಮ್ಮಿಂದಾದ ತೊಂದರೆಗಾಗಿ ನಮಗೆ ಬಹಳ ಅಸಮಾಧಾನವಾಗಿರುವದು. ಈಗ ನಿನಗೆ ಯಾವ ಬಗೆಯ ಉಪದ್ರವವನ್ನೂ ಕೊಡದೆ, ಸ್ವೇಚ್ಛೆಯಿಂದ ಆಚರಿಸುವಂತೆ ನಿನಗೆ ಸೂಚಿಸಬೇಕೆಂದು ಮಾಡಿದ್ದೆನು; ಆದರೆ ಮಹಾರಾಜ್ಞಿಯು ನಿನ್ನ ದರ್ಶನಕ್ಕಾಗಿ ಆತುರಪಟ್ಟದ್ದರಿಂದ ಇಷ್ಟು ಅವಸರದಿಂದ ಕರೆಸಿ, ನಿನಗೆ ಉಪದ್ರವ ಕೊಡಬೇಕಾಯಿತು. ಅನ್ನಲು, ಆಯೇಷೆಯು– ಮಹಾರಾಜ, ಇದರಲ್ಲಿ ನನಗಾದ ಉಪದ್ರವೇನು? ಮಹಾರಾಣಿ ಸಾಹೇಬರು ನನ್ನನ್ನು ಈಪರಿ ಆದರಿಸಿದ್ದಕ್ಕಾಗಿ ನನಗೆ ಬಹಳ ಸಂತೋಷವಾಗಿರುತ್ತದೆ. ನನ್ನ ಸ್ವಾತಂತ್ರ್ಯಕ್ಕೆ ಭಂಗಬಾರದಂತೆ ತಾವು ನಡಿಸಿಕೊಟ್ಟದ್ದಕ್ಕಾಗಿ ತಮಗಾದರೂ ನಾನು ಉಪಕೃತಳಾಗಿರುವೆನು ಎಂದು ನುಡಿದಳು. ಅದನ್ನು ಕೇಳಿ ಮಹಾರಾಣಿಯೂ, ಮಾನಸಿಂಹನೂ ಸಂತೋಷಬಟ್ಟರು.

ಸ್ವಲ್ಪ ಕಾಲ ಅವರು ಮೂವರೂ ವಿಚಾರ ಮಗ್ನರಾದಂತೆ ಸುಮ್ಮನೆ ಕುಳಿತು ಕೊಂಡಿದ್ದರು. ಬಳಿಕ ಮಹಾರಾಣಿಯು ಆಯೇಷೆಯನ್ನು ಕುರಿತು– ಇನ್ನು ನೀನು ಎಲ್ಲಿಗೆ ಹೋಗತಕ್ಕವಳು, ಎಂದು ಕೇಳಲು, ನಾನು ದಿಲ್ಲಿಗೆ ಹೋಗುತ್ತೇನೆಂದು ಆಯೇಷೆಯು ಉತ್ತರ ಕೊಟ್ಟಳು. ಆಗ ಮಾನಸಿಂಹನು– ಹೌದು, ನೀನು ದಿಲ್ಲಿಗೆ ಹೋಗುವದೇ ಯೋಗ್ಯವು. ದಿಲ್ಲಿಯಲ್ಲಿ ನಿನಗೆ ಬಹು ಜನರ ಪರಿಚಯವಿರುವದನ್ನು ನಾನು ಬಲ್ಲೆನು. ದೊಡ್ಡ ದೊಡ್ಡ ಅಮೀರ–ಉಮರಾವುಗಳು ನಿನ್ನ ಆಪ್ತರಿರುತ್ತಾರೆ. ಅಕಬರ ಬಾದಶಹರಿಗೆ ಸಹ ನಿನ್ನ ಗುರುತು ಇರುವದು; ಮತ್ತು ನಿನ್ನ ತಂದೆಯ ಋಣಾನುಬಂಧವು ಮೊಗಲ ಬಾದಶಹರೊಡನೆ ಮೊದಲಿನಿಂದ ನಡೆದುಬಂದಿರುವದು. ಇದಲ್ಲದೆ, ಸದ್ಯಕ್ಕೆ ಪಠಾಣರ ಅಧಿಕಾರವು ಎಲ್ಲ ಕಡೆಗೆ ಲೋಪವಾದಂತೆಯಾಗಿರುತ್ತದೆ. ನಿನ್ನ ಋಣಾನುಬಂಧಿಗಳಾದ ಓಡಿಸಾದ ನವಾಬರು ಸದ್ಯಕ್ಕೆ ಅಂಥ ಐಶ್ವರ್ಯಶಾಲಿಗಳೂ, ಸನ್ಮಾನಾರ್ಹರೂ ಇರುವದಿಲ್ಲ; ಆದ್ದರಿಂದ ನೀನು ಇಂಥ ಜನರ ಬಳಿಯಲ್ಲಿರುವದು ನನಗೆ ನೆಟ್ಟಗೆ ಕಾಣುವದಿಲ್ಲ, ಎಂದು ನುಡಿಯಲು, ಆಯೇಷೆಯು–

ಓಡಿಸಾದ ಪಠಾಣರ ಸಂಬಂಧದಿಂದ ಮಹಾರಾಜರು ಪಡುವ ಅಭಿಪ್ರಾಯವನ್ನು ನೋಡಿದರೆ, ಈ ಪ್ರಸಂಗದಲ್ಲಿ ನಾನು ಅವರೊಡನೆ ಸ್ನೇಹ ಸಂಬಂಧವನ್ನು ಬಿಡದಿರುವದೇ ನನ್ನ ಕರ್ತವ್ಯವೆಂದು ತಿಳಿಯಬೇಕಾಗುತ್ತದೆ; ಯಾಕಂದರೆ, ನವಾಬ ಕಾತಲೂಖಾನವರು ಅನಾಥಳಾದ ನನ್ನನ್ನು ಬಾಲ್ಯದಿಂದ ಪ್ರೇಮಪೂರ್ವಕವಾಗಿ ಸಂರಕ್ಷಿಸಿರುವರು; ತಮ್ಮ ಕೃಪಾಛತ್ರದ ಬುಡದಲ್ಲಿ ನನ್ನನ್ನು ದೊಡ್ಡವಳನ್ನಾಗಿ ಮಾಡಿರುವರು; ನನ್ನ ಸುಖವನ್ನು ತಮ್ಮ ಸುಖವೆಂತಲೂ, ನನ್ನ ದುಃಖವನ್ನು ತಮ್ಮ ದುಃಖವೆಂತಲೂ ಅವರು ತಿಳಿಯುತ್ತ ಬಂದಿರುವರು. ಅಂಥವರ ಮನೆತನದವರು, ಈಗ ದುರ್ದೈವದ ಸೆಳವಿಗೆ ಬಿದ್ದು ಸಂಕಟಕ್ಕೆ ಗುರಿಯಾಗಿರಲು, ಅವರನ್ನು ನಾನು ತೊಲಗಿ ಹೋಗುವದು ಸೌಜನ್ಯದ ಲಕ್ಷಣವೇ? ಹಾಗೆ ತೊಲಗಿ ಹೋದರೆ ನಾನು ಕೃತಘ್ನತೆಯ ದೋಷಕ್ಕೆ ಗುರಿಯಾಗಲಿಕ್ಕಿಲ್ಲವೇ? ಈಗಿನ ಅವನತಿಯ ಪ್ರಸಂಗದಲ್ಲಿ ನಾನು ಓಡಿಸಾದ ನವಾಬರ ಬಳಿಯಲ್ಲಿದ್ದು ಯಥಾಶಕ್ತಿ ಅವರಿಗೆ ಸಹಾಯಮಾಡುವದು ನನ್ನ ಶ್ರೇಷ್ಠ ಕರ್ತವ್ಯವಾಗಿರುವದು.

ಆಯೇಷೆಯ ಈ ಉತ್ತರವನ್ನು ಕೇಳಿ ಮಾನಸಿಂಹನು ನಿರುತ್ತರನಾದನು. ಮುಂದೆಯೇನು ಮಾತನಾಡಬೇಕೆಂಬದು ಆತನಿಗೆ ತಿಳಿಯದಾಯಿತು. ಹೀಗೆ ಪತಿಯ ಪರಾಜಯವಾದದ್ದನ್ನು ನೋಡುವದು ಊರ್ಮಿಳಾ ರಾಣಿಯಿಂದಾಗಲಿಲ್ಲ, ಆಕೆಯು ಆಯೇಷೆಯನ್ನು ಕುರಿತು–

ಊರ್ಮಿಳಾರಾಣಿ– ತಂಗೀ, ಇನ್ನು ಮೇಲೆ ನಿನಗೆ ಮೊಗಲರ, ಅಥವಾ ಪಠಾಣರ ಸಂಬಂಧ ವೇನು? ನೀನು ಯಾರಕಡೆಗೂ ಹೋಗಬೇಡ, ನಮ್ಮ ಬಳಿಯಲ್ಲಿರು; ನೀನು ನಮ್ಮವಳಾಗಿರುತ್ತೀ.

ಆಯೇಷೆ– ಮಹಾರಾಣಿಯವರೇ, ನನ್ನ ಮೇಲೆ ತಮ್ಮ ವಿಶೇಷ ಲೋಭವಿರುವದರಿಂದ, ನಾನು ತಮ್ಮ ಬಳಿಯಲ್ಲಿರಬೇಕೆಂದು ತಮಗೆ ತೋರುವದು ಸ್ವಾಭಾವಿಕವು; ಆದರೆ ನನ್ನ ಮನಸ್ಸು ದಿಲ್ಲಿಯ ಕಡೆಗೆ ಜಗ್ಗುವದರಿಂದ, ನಾನು ಅಲ್ಲಿಗೆ ಹೋಗಲೇಬೇಕಾಗಿರುವದು.

ಮಾನಸಿಂಹ–ಪಠಾಣರಿಗೆ ಸದ್ಯಕ್ಕೆ ಕಠಿಣಕಾಲವಿರುವದರಿಂದ ಅವರ ಬಳಿಯಲ್ಲಿರುವದು ಯೋಗ್ಯವೆಂದು ಈಗ ನೀನು ಹೇಳಲಿಲ್ಲವೇ? ಅಂದ ಬಳಿಕ ಈಗ ನೀನು ದಿಲ್ಲಿಗೆ ಯಾಕೆ ಹೋಗುತ್ತೀ?

ಆಯೆಷೆ– ಕುಮಾರ ಜಗತ್ಸಿಂಗರವರ ಬಂಧವಿಮೋಚನೆ ಮಾಡಿಸುವದಕ್ಕಾಗಿ ಈಗ ನಾನು ದಿಲ್ಲಿಗೆ ಹೋಗಬೇಕಾಗಿದೆ. ನಾನು ದಿಲ್ಲಿಗೆ ಕಳಿಸಿದ . ಪತ್ರವು ದುರ್ದೈವದಿಂದ ಬಾದಶಹರಿಗೆ ಮುಟ್ಟಲಿಲ್ಲವೆಂದು ಕೇಳಿದ್ದೇನೆ. ನಾನೇ ಅಲ್ಲಿಗೆ ಹೋಗಿಬಿಡುವದು ನೆಟ್ಟಗೆ ಕಾಣುತ್ತದೆ. ಆಗ್ರಾಕ್ಕೆ ಹೋಗಿ ದರ್ಬಾರದಲ್ಲಿ ನಾನು ನಿಜವಾದ ಸಂಗತಿಯನ್ನು ಬಾದಶಹರ ಮುಂದೆ ಹೇಳಿದರೆ, ನಿಶ್ಚಯವಾಗಿ ಕುಮಾರರ ಬಂಧವಿಮೋಚನೆಯಾಗುವದು.

ಮಾನಸಿಂಹ–(ಆಯೇಷೆಯ ಮನಸ್ಸನ್ನು ಪರೀಕ್ಷಿಸುವದಕ್ಕಾಗಿ) ನವಾಬನಂದಿನೀ, ಅಪರಾಧಕ್ಕಾಗಿ ಅರಸನಿಂದ ಶಿಕ್ಷೆಹೊಂದಿದವನಿಗೆ ಸಹಾಯ ಮಾಡಿ, ನೀನು ರಾಜದ್ರೋಹಿ

ಯಾಗುತ್ತೀಯಾ? ನೀನು ಸ್ತ್ರೀಯೆಂದು ತಿಳಿದು ಈ ಮೊದಲು ಆದ ಅಪರಾಧಗಳನ್ನು ನಾನು ಕ್ಷಮಿಸಿದೆನು. ಮೇಲೆ ಮೇಲೆ ನೀನು ಹೀಗೆ ಅಪರಾಧ ಮಾಡಹತ್ತಿದರೆ, ಶಿಕ್ಷಿಸದೆಯಿರುವದು ಹ್ಯಾಗೆ? ನೀನು ಇಲ್ಲದ ಉಸಾಬರಿಗೆ ಹೋಗುವದನ್ನು ಬಿಟ್ಟುಬಿಡು. ಇಲ್ಲದಿದ್ದರೆ ರಾಜದ್ರೋಹಿಯೆಂದು ಅನಿರ್ವಾಹಪಕ್ಷ ನಿನ್ನನ್ನು ಶಿಕ್ಷಿಸುವ ಪ್ರಸಂಗವು ನನಗೆ ಬಂದೀತು.

ಆಯೇಷೆ–ನನ್ನನ್ನು ಶಿಕ್ಷಿಸುವ ಅಧಿಕಾರವು ಮಹಾರಾಜರಿಗೆ ಸಂಪೂರ್ಣವಾಗಿ ಇರುತ್ತದೆ; ಆದರೆ ಮಹಾರಾಜರು ಎಂದಿಗೂ ನನ್ನನ್ನು ಶಿಕ್ಷಿಸಲಾರರೆಂದು ನಾನು ನಂಬಿದ್ದೇನೆ.

ಮಾನಸಿಂಹ–ಅದೇಕೆ?

ಆಯೇಷೆ– ತಮಗೆ ಒಳಿತುಮಾಡುವವರನ್ನು ಜಗತ್ತಿನಲ್ಲಿ ಯಾರೂ ಶಿಕ್ಷಿಸುವದಿಲ್ಲ.

ಮಾನಸಿಂಹ– ನೀನು ನನ್ನ ತೀರ್ಪಿನ ವಿರುದ್ಧವಾಗಿ ಬಾದಶಹರ ಕಡೆಗೆ ಅಪೀಲು ಮಾಡುತ್ತೀ; ಮತ್ತು ನಿಜವಾದ ರಾಜದ್ರೋಹಿಗೆ ಸಹಾಯ ಮಾಡುತ್ತೀ. ಇಂಥ ನೀನು, ರಾಜನಿಷ್ಠನಾದ ನನಗೆ ಒಳಿತು ಮಾಡುವವಳಾಗಬಹುದೋ?

ಆಯೇಷೆ– (ಗಾಬರಿಯಾಗದೆ) ಮಹಾರಾಜ, ತಮ್ಮ ಮಾತುಗಳು ಕಠಿಣವಾಗಿರುವಂತೆ, ತಮ್ಮ ಅಂತಃಕರಣವು ಕಠಿಣವಾಗಿರುವದಿಲ್ಲ. ಕುಮಾರರ ಆಜನ್ಮ ಕಾರಾಗೃಹವಾಸವು ತಮಗೆ ಸದ್ಯಕ್ಕೆ ತಾಪದಾಯಕವಾಗಿರುತ್ತದೆಂದು ನಾನು ನಂಬಿರುವೆನು. ಜಗತ್ತಿಗೆ, ವಿಶೇಷವಾಗಿ ಬಾದಶಹರಿಗೆ, ನ್ಯಾಯ ಪಕ್ಷಪಾತಿತ್ವವನ್ನು ತೋರಿಸುವದಕ್ಕೋಸ್ಕರ, ಸಾಧಾರಣ ತಪ್ಪಿಗಾಗಿ ಕುಮಾರರಿಗೆ ಕಠಿಣಶಾಸನವನ್ನು ತಾವು ವಿಧಿಸಿರುವಿರಿ. ಕುಮಾರರ ಬಂಧವಿಮೋಚನೆಯ ಚಿಂತೆಯು ತಮ್ಮನ್ನು ಬಾಧಿಸುತ್ತದೆ. ಇಂಥ ಪ್ರಸಂಗದಲ್ಲಿ ಕುಮಾರರ ಬಂಧವಿಮೋಚನೆ ಯಾದರೆ, ತಮಗೆ ಆನಂದವಾಗಲೇಬೇಕು; ಅಂದಬಳಿಕ ಕುಮಾರರ ಬಂಧವಿಮೋಚನೆ ಮಾಡುವವರು ತಮಗೆ ಒಳಿತು ಮಾಡುವವರಾಗಲಿಕ್ಕಿಲ್ಲವೇ ಅಂಥವರನ್ನು ತಾವು ಶಿಕ್ಷಿಸಬಹುದೇ?

ಆಯೇಷೆಯ ಈ ಮಾತುಗಳನ್ನು ಕೇಳಿ ಮಾನಸಿಂಹನು ವಿಸ್ಮಿತನಾದನು. ತನ್ನ ಮನಸ್ಸಿನ ಭಾವವನ್ನರಿತದ್ದನ್ನು ನೋಡಿ, ಆತನಿಗೆ ಆಯೇಷೆಯ ವಿಷಯವಾಗಿ ಆದರ ಬುದ್ಧಿಯು ಉತ್ಪನ್ನವಾಯಿತು; ಆದರೂ ಆತನು ತನ್ನ ಗಾಂಭೀರ್ಯವನ್ನು ಪರಿತ್ಯಜಿಸದೆ, ಮತ್ತೆ ಆಯೇಷೆಯನ್ನು ಕುರಿತು– ಆಯೇಷೆ, ನಿನ್ನ ಮನಸ್ಸಿನ ಸತ್ಯಾಸತ್ಯತೆಯನ್ನು ಕುರಿತು ಚರ್ಚಿಸುವದು ನನಗೆ ಅವಶ್ಯವಿಲ್ಲ. ನೀನು ಕೇವಲ ನನ್ನ ಮೇಲೆ ಉಪಕಾರ ಮಾಡುವದ ಕ್ಕಾಗಿಯೇ ಇಷ್ಟು ಹೆಣಗುತ್ತಿರುವೆಯೆಂದು ನಾನು ಹೇಳಲಾರೆನು. ಇದರಲ್ಲಿ ನಿನ್ನದೂ ಹಿತವಿರುವದು.

ಆಯೇಷೆ– ಇದ್ದರೂ ಇರಬಹುದು. ನಾನು ಸ್ವಾರ್ಥಕ್ಕಾಗಿ ರಾಜಕುಮಾರರನ್ನು ಬಂಧಮುಕ್ತಮಾಡಲು ಯತ್ನಿಸುತ್ತಿದ್ದರೂ ಯತ್ನಿಸುತ್ತಿರಬಹುದು. ಆದರೆ ಮಹಾರಾಜ, ಕುಮಾರರ ಬಂಧವಿಮೋಚನೆಯಾಗುವದರಿಂದ ನನಗೊಬ್ಬಳಿಗೇ ಸಮಾಧಾನವಾಗುವದಿಲ್ಲ, ತಮಗೂ ಅದರಿಂದ ಸಮಾಧಾನವಾಗುವದು. ಆದ್ದರಿಂದ ನನ್ನನ್ನು ಶಿಕ್ಷಿಸುವ ಬುದ್ಧಿಯು ತಮಗಾಗಲಾರದು.

ಈ ಪ್ರಸಂಗದಲ್ಲಿ ತನ್ನ ಪತಿಯು ಎರಡನೇಯ ಸಾರೆ ಪರಾಜಿತನಾದದ್ದನ್ನು ನೋಡಿ ಉರ್ಮಿಳಾರಾಣಿಯು ನಡುವೆ ಬಾಯಿಹಾಕಿ ಆಯೇಷೆಗೆ, ನಿನ್ನಂಥ ಗುಣಸುಂದರಿಯನ್ನು ನಾನು ಎಲ್ಲಿಗೂ ಹೋಗಗೊಡುವದಿಲ್ಲ, ನಾನು ನಿನ್ನನ್ನು ನನ್ನ ಸೊಸೆಯಾಗಿ ಮಾಡಿಕೊಳ್ಳುವೆನು, ಅನ್ನಲು, ಆಯೇಷೆಯು ಸುಮ್ಮನಾದಳು. ಆಕೆಯ ಮೋರೆಯು ಕೆಂಪಾಯಿತು. ಆಕೆಯು ಮುಖವನ್ನು ಬಾಗಿಸಿದಳು. ಆಗ ಉರ್ಮಿಳಾರಾಣಿಯು ಮತ್ತೆ ಆಕೆಯನ್ನು ಕುರಿತು– ನೀನು ಮುಸಲ್ಮಾನ ಜಾತಿಯವಳೆಂಬ ವಿಷಯದಲ್ಲಿ ನಮಗೇನು ವಿಧಿ ನಿಷೇಧಗಳಿಲ್ಲ, ಮಹಾರಾಜರು ಮೊದಲಿನಿಂದಲೇ ಮುಸಲ್ಮಾನರೊಡನೆ ಶರೀರಸಂಬಂಧ ಮಾಡಿದ್ದಾರೆ. ನಿನ್ನ ಲಗ್ನದಿಂದ ಅನಾಯಾಸವಾಗಿಯೇ ಅವರ ಕಾರ್ಯಕ್ಕೆ ಪುಷ್ಟಿಯು ದೊರೆತಂತಾಗುವದು. ಯಾಕೆ ಆಯೇಷೆ ಮಾತಾಡಲೊಲ್ಲೆಯೇಕೆ? ನಿನ್ನ ರೂಪ, ಗುಣ, ಬುದ್ಧಿಗಳಿಗೆ ಜೋಡಿಲ್ಲ, ನಿನ್ನನ್ನು ವರಿಸಿದವನು ಧನ್ಯನೇ ಸರಿ. ನಮ್ಮ ಕುಮಾರ ಜಗತ್ಸಿಂಗನ ಧನ್ಯತೆಯನ್ನು ಕಣ್ಣುಮುಟ್ಟ ನೋಡುವ ಸುಯೋಗವನ್ನು ನನಗೆ ನೀನು ಒದಗಿಸಿಕೊಡು. ನನ್ನ ಆಶಾಭಂಗವನ್ನು ಮಾಡಬೇಡ, ಎಂದು ಹೇಳಿದಳು. ಅದಕ್ಕೆ ಆಯೇಷೆಯು–ಮಹಾರಾಣೀ ಸಾಹೇಬರೇ, ತಾವು ನನ್ನನ್ನು ಬಹಳವಾಗಿ ಪ್ರೀತಿಸುತ್ತೀರಿ. ನಾನು ತಮ್ಮ ದಾಸಿಯೇ ಇರವೆನು; ಆದರೆ ನೀವು ನನಗೆ ಕೊಡುವ ಅಧಿಕಾರಕ್ಕೆ ನಾನು ಎಷ್ಟು ಮಾತ್ರವೂ ಪಾತ್ರಳಿರುವದಿಲ್ಲ, ನಾನು ನನ್ನ ಜೀವನದ ಮಾರ್ಗವನ್ನು ಮೊದಲೇ ಗೊತ್ತುಮಾಡಿಕೊಂಡು ಬಿಟ್ಟಿರುತ್ತೇನೆ. ಅದರಲ್ಲಿ ಅಂತರವಾಗುವ ಹಾಗಿಲ್ಲ, ತಾವು ದಯಮಾಡಿ ನನಗೆ ಬೇಗನೆ ಅಪ್ಪಣೆ ಕೊಡಿರಿ. ನಾಳೆ ಬೆಳಗಾಗುತ್ತಲೇ ನಾನು ಪಾಟಣಾ ಪಟ್ಟಣವನ್ನು ಬಿಟ್ಟು ಹೊರಡಬೇಕೆಂದು ಮಾಡಿದ್ದೇನೆ ಎಂದು ಹೇಳಿದಳು. ಅದಕ್ಕೆ ಉರ್ಮಿಳಾರಾಣಿಯು– ಇಲ್ಲ, ನೀನು ನನ್ನ ಬಳಿಯಲ್ಲಿಯೇ ಇರಲಿಕ್ಕೇ ಬೇಕು. ತಿಲೋತ್ತಮೆಯು ನಿನ್ನನ್ನು ಕಾಣಬೇಕೆನ್ನುತ್ತಿದ್ದಳು; ಆದ್ದರಿಂದ ಆಕೆಯ ಬಳಿಗೆ ನಾವು ಹೋಗೋಣ, ಎಂದು ಹೇಳಿ, ಮಹಾರಾಜರ ಒಪ್ಪಿಗೆಯಿಂದ ಆಕೆಯು ಆಯೇಷೆಯನ್ನು ಕರಕೊಂಡು ತಿಲೋತ್ತಮೆಯ ಬಳಿಗೆ ಹೊರಟಳು.

## ಅಂತಃಕರಣದ ಔದಾರ್ಯವು

ಒಂದಕ್ಕೆ ಕಾತಲೂಖಾನನ ಸೆರೆಯಲ್ಲಿ ತಿಲೋತ್ತಮೆಯು ಇದ್ದಾಗ ಆಕೆಗೆ ಆಯೇಷೆಯ ಪರಿಚಯವಾದದ್ದನ್ನೂ, ಆಯೇಷೆಯ ಪ್ರೇಮವು ತನ್ನ ಪತಿಯಾದ ಜದಗತ್ಸಿಂಗನ ಮೇಲೆ ಇರುತ್ತದೆಂಬದು ತಿಲೋತ್ತಮೆಗೆ ಗೊತ್ತಿದ್ದನ್ನು ವಾಚಕರು ನೆನಪಿನಲ್ಲಿಟ್ಟಿರಬಹುದು. ಜಗತ್ಸಿಂಗನು ತಿಲೋತ್ತಮೆಯ ವಿವಾಹ ಮಾಡಿಕೊಳ್ಳುವಾಗ, ಆಯೇಷೆಯನ್ನು ಬುದ್ಧಿಪೂರ್ವಕ ಕರಿಸಿ ಕೊಂಡದ್ದರಿಂದ, ಆಯೇಷಾ– ತಿಲೋತ್ತಮೆಯರಲ್ಲಿ ಅಕೃತ್ರಿಮ ಪ್ರೇಮವು ಉತ್ಪನ್ನವಾಗಿತ್ತು ರಾಜಾ ಮಾನಸಿಂಹನು ಜಗತ್ಸಿಂಗನನ್ನು ತನ್ನ ಮಗನೆಂದು ನೋಡದೆ ಆಜನ್ಮ ಕಾರಾಗೃಹವಾಸದ ಶಿಕ್ಷೆಗೆ ಗುರಿಮಾಡಿದಾಗ, ತಿಲೋತ್ತಮೆಯು ತನ್ನ ದುಃಖಸ್ಥಿತಿಯನ್ನು ಪತ್ರ ಮುಖದಿಂದ

ಆಯೇಷೆಗೆ ತಿಳಿಸಿದ್ದರಿಂದಲೇ, ಆಯೇಷೆಯು ಜಗತ್ಸಿಂಗನ ಬಂಧವಿಮೋಚನಕ್ಕಾಗಿ ಯತ್ನಿಸ ಹತ್ತಿದಳು. ತಿಲೋತ್ತಮೆಯು ತನ್ನ ಸದ್ಗುಣಗಳಿಂದ ತನ್ನ ಮಾವನಾದ ಮಾನಸಿಂಹನ ಪ್ರೇಮವನ್ನು ಸಂಪಾದಿಸಿ, ಆತನ ಆದರಕ್ಕೆ ಪಾತ್ರಳಾಗಿದ್ದರೂ, ತನ್ನ ಪತಿಯು ಕಾರಾಗೃಹದ ಕಷ್ಟಕ್ಕೆ ಗುರಿಯಾಗಿ ತೊಳಲುತ್ತಿದ್ದರಿಂದ, ಆ ಪತಿಭಕ್ತಿಪರಾಯಣಳು ಗೂಢವಾದ ಸಂತಾಪದಿಂದ ಕೊರಗುತ್ತಲಿದ್ದಳು. ಈ ಸ್ಥಿತಿಯಲ್ಲಿ ತಿಲೋತ್ತಮೆಗೆ ಆಯೇಷೆಯ ದರ್ಶನವಾದದ್ದರಿಂದ ಬಹಳ ಸಮಾಧಾನವಾಯಿತು. ಉರ್ಮಿಳಾರಾಣಿಯ ಸಮ್ಮುಖದಲ್ಲಿ ಅವರಿಬ್ಬರು ಪ್ರಮದೆಯರು ಮನಬಿಚ್ಚಿ ಮಾತಾಡಲು ಸಂಕೋಚಪಡುತ್ತಲಿದ್ದರು. ಆಯೇಷೆಯು ಉರ್ಮಿಳಾರಾಣಿಯು ಆಗ್ರಹದಿಂದ ಕೆಲವು ದಿನ ಪಾಟಣಾದಲ್ಲಿ ನಿಲ್ಲಬೇಕಾಯಿತು. ಆಕೆಯು ತನ್ನ ಆಪ್ತನಾದ ತಾಜಖಾನನ ಮನೆಯಲ್ಲಿರುತ್ತಿದ್ದರೂ, ಆಗಾಗ್ಗೆ ಉರ್ಮಿಳಾರಾಣಿಯನ್ನೂ, ತಿಲೋತ್ತಮೆಯನ್ನೂ ಕಾಣುವದಕ್ಕಾಗಿ ಆಕೆ ಬರುತ್ತಲಿದ್ದಳು. ಆಯೇಷಾ– ತಿಲೋತ್ತಮೆಯರು ಒಂದು ವಿಧದಿಂದ ಸಮಾನ ದುಃಖಿತರಾಗಿದ್ದರು; ಅದರಂತೆ ಅವರಿಬ್ಬರೂ ಒಬ್ಬ ಜಗತ್ಸಿಂಗನನ್ನು ಆಶ್ರಯಿಸಿದ್ದರು; ಮೇಲಾಗಿ ಇಬ್ಬರೂ ಸದ್ಗುಣೆಗಳಿದ್ದರು; ಆದ್ದರಿಂದ ಅವರಲ್ಲಿಯ ಪರಿಶುದ್ಧ ಪ್ರೇಮವು ವೃದ್ಧಿಂಗತವಾಗತೊಡಗಿತು. ಅವರಿಬ್ಬರ ಪವಿತ್ರ ಸಹವಾಸದಲ್ಲಿ ಎರಡು ತಿಂಗಳುಗಳು ಕಳೆದುಹೋದವು. ಹೀಗಿರುವಾಗ ಆಯೇಷೆಯು ಒಂದು ದಿನ ಮಾನಸಿಂಹರವರ ಒಪ್ಪಿಗೆಯಿಂದ ದಿಲ್ಲಿಗೆ ಹೋಗುವದನ್ನು ನಿಶ್ಚಯಿಸಿ, ತಿಲೋತ್ತಮೆಗೆ ಹೇಳುವದಕ್ಕಾಗಿ ಆಕೆಯ ಬಳಿಗೆ ಹೊರಟಳು.

ಈ ಕಾಲದಲ್ಲಿ ಆಯೇಷೆಯ ಮನಸ್ಸು ಎರಡು ಕಡೆಗೆ ಹರಿಯುತ್ತಿತ್ತೆಂದು ಹೇಳ ಬೇಕಾಗುವದು. ತನ್ನ ಪ್ರೇಮಕ್ಕೆ ಪಾತ್ರನಾದ ಜಗತ್ಸಿಂಗನನ್ನು ಬಂಧುಮುಕ್ತ ಮಾಡುವದಕ್ಕಾಗಿ ಅದು ಒಮ್ಮೆ ದಿಲ್ಲಿಯ ಕಡೆಗೆ ಹರಿಯುತ್ತಿತ್ತು. ಆದರಂತೆ ತನಗೆ ಒಡಹುಟ್ಟಿದ ಅಣ್ಣನಿಗಿಂತಲೂ ಹೆಚ್ಚಾಗಿದ್ದ ಉಸ್ಮಾನಖಾನನನ್ನು ಸಮಾಧಾನಗೊಳಿಸುವದಕ್ಕಾಗಿ ಅದು ಒಮ್ಮೆ ಉಸ್ಮಾನನ ಕಡೆಗೆ ಹರಿಯುತ್ತಿತ್ತು. ಆಯೇಷೆಯು ಇತ್ತ ಪಾಟಣಾದಲ್ಲಿರುವಾಗ ಅತ್ತ ಉಸ್ಮಾನನು ಮಾನಸಿಂಹನೊಡನೆ ಮಾಡಿಕೊಂಡಿದ್ದ ಒಡಂಬಡಿಕೆಯನ್ನು ಮುರಿದು, ಮೊಗಲರೊಡನೆ ಕದನ ಹೂಡಿ ಸಂಪೂರ್ಣವಾಗಿ ಸೋತು, ಮೊಗಲರ ಮಾಂಡಲಿಕತ್ವವನ್ನು ಒಪ್ಪಿಕೊಳ್ಳಬೇಕಾಯಿತು. ನಿಜವಾಗಿ ಉಸ್ಮಾನನ ಪರಾಕ್ರಮವನ್ನು ನೋಡಿದರೆ, ಆತನಿಗೆ ಸೋಲು ಬರುವ ಸಂಭವವಿದ್ದಿಲ್ಲ; ಆದರೆ ಉಸ್ಮಾನನ ಹೊರಗಿನ ಜೀವವಾಗಿದ್ದ ಆಯೇಷೆಯು, ಉಸ್ಮಾನನ್ನು ಅಗಲಿ ಹೋದದ್ದರಿಂದ ಆತನು ಹತಾಶನಾಗಿರಲು, ಮಾನಸಿಂಹನಂಥ ಪ್ರಸಿದ್ಧ ವೀರನು ಆತನನ್ನು ಸೋಲಿಸಿದನು. ಇದನ್ನು ಕೇಳಿದ್ದ ಆಯೇಷೆಯು ಆಗಲೇ ಉಸ್ಮಾನನ ಬಳಿಗೆ ಹೋಗತಕ್ಕವಳು; ಆದರೆ ಜಗತ್ಸಿಂಗನ ಬಂಧವಿಮೋಚನೆ ಮಾಡಿಸುವದಕ್ಕಾಗಿ ಬಂದ ತಾನು, ಆ ಕೆಲಸ ಮಾಡದೆ ಹೋಗಬಾರದೆಂದು ತಿಳಿದು ಮೊದಲು ಆಕೆಯು ದಿಲ್ಲಿಗೆ ಹೋಗುವ ಮನಸ್ಸು ಮಾಡಿದಳು. ಸದ್ಯಕ್ಕೆ ಉಸ್ಮಾನನು ಒಡಂಬಡಿಕೆ ಮಾಡಿಕೊಂಡಿರುವದರಿಂದ, ಆಕೆಗೆ ಒಂದು ಬಗೆಯ ಸಮಾಧಾನವಾದಂತಾಗಿತ್ತು. ಯಾಕಂದರೆ, ಉಸ್ಮಾನನ ಪರಾಕ್ರಮವನ್ನು

ಆಕೆಯು ಅರಿತಿದ್ದಳು. ಇಂದಿಲ್ಲ ನಾಳೆ ಉಸ್ಮಾನನ ಬಳಿಗೆ ಹೋಗಿ ಆತನನ್ನು ಉತ್ಸಾಹ ಗೊಳಿಸಬಹುದೆಂದು ಆಕೆಯು ಸಮಾಧಾನ ಮಾಡಿಕೊಂಡಳು. ಆಕೆಗೆ ತಾನು ಮಾಡತಕ್ಕ ಎರಡು ಕೆಲಸಗಳು ಸಮಾನ ಯೋಗ್ಯತೆಯವಾದ್ದರಿಂದ, ಮೊದಲು ಮಾಡಬೇಕಾಗಿರುವ ಕುಮಾರ ಜಗತ್ಸಿಂಗನ ಬಂಧವಿಮೋಚನೆಗಾಗಿ ದಿಲ್ಲಿಗೆ ಹೋಗಲುದ್ಯುಕ್ತಳಾಗಿದ್ದಳು. ಆಕೆಯು ತಿಲೋತ್ತಮೆಯ ಬಳಿಗೆ ಬಂದಾಗ ಆ ಸುರ ಸುಂದರಿಯು ತನ್ನ ಸ್ಥಿತಿಯನ್ನು ಕುರಿತು ಆಲೋಚಿಸುತ್ತ ಒಬ್ಬಳೇ ಕುಳಿತುಕೊಂಡಿದ್ದಳು. ಅಷ್ಟರಲ್ಲಿ ಆಯೇಷೆಯು ಬಂದದ್ದನ್ನು ನೋಡಿ ಆಕೆಗೆ ಬಹಳ ಸಂತೋಷವಾಯಿತು. ತಿಲೋತ್ತಮೆಯು ಉತ್ಸಾಹದಿಂದ ಎದ್ದು ಆಯೇಷೆ ಯನ್ನು ಉಪಚರಿಸುವದಕ್ಕಾಗಿ ಆಕೆಗೆ ಎದುರಾಗಿ ಹೋಗಲು, ಆ ನವಾಬನಂದಿನಿಯು ತಿಲೊತ್ತಮೆಯನ್ನು ಬಿಗಿಯಾಗಿ ಅಪ್ಪಿಕೊಂಡಳು. ಆಗ ವಾತ್ಸಲ್ಯದ ಮೂಲಕ ಆಯೇಷೆಯ ಕಣ್ಣೊಳಗಿಂದ ನೀರುಗಳು ಸುರಿಯಹತ್ತಿದವು. ತನಗೆ ಅತ್ಯಂತ ಪ್ರೀಯಳಾಗಿರುವ ತಿಲೋತ್ತಮೆಯನ್ನು ಅಗಲಿ ಹೋಗುವಾಗ ಆಯೇಷೆಗೆ ಬಹಳ ವ್ಯಸನವಾಯಿತು. ತಿಲೋತ್ತಮೆಯಾದರೂ ಆಯೇಷೆಯ ಪ್ರಯಾಣದ ಸುದ್ದಿಯನ್ನು ಕೇಳಿದ್ದಳು. ಅವರಿಬ್ಬರೂ ಆಸನದಲ್ಲಿ ಕುಳಿತುಕೊಂಡ ಬಳಿಕ, ಒಬ್ಬರನ್ನೊಬ್ಬರು ನೋಡುತ್ತ ಇಬ್ಬರೂ ಕಣ್ಣೀರು ಸುರಿಸಹತ್ತಿದರು. ಒಬ್ಬರ ಮುಖದಿಂದಲೂ ಮಾತು ಹೊರಡದಾದವು. ಹೀಗೆ ಮೂಕ ವೃತ್ತಿಯಲ್ಲಿ ಅವರು ಕಣ್ಣೀರು ಸುರಿಸುತ್ತ ಕುಳಿತಿರುವಾಗ, ಆಯೇಷೆಯು ತಿಲೋತ್ತಮೆಯನ್ನು ಕುರಿತು–ತಂಗೀ, ನಾನು ದಿಲ್ಲಿಗೆ ಹೋಗುತ್ತೇನೆ. ಪುನಃ ನಿನ್ನ ದರ್ಶನವಾಗುವ ಆಶೆಯ ನನಗಿಲ್ಲ ದೇವರ ದಯೆಯಿಂದ ನನ್ನ ಪ್ರಯತ್ನವು ಫಲಿಸಿ ಕುಮಾರ ಜಗತ್ಸಿಂಗರವರ ಬಂಧ ವಿಮೋಚನೆಯಾದರೆ, ನೀವಿಬ್ಬರು ಸುಖದಿಂದಿದ್ದದ್ದನ್ನು ಕೇಳಿ ನಾನು ಇದ್ದಲ್ಲಿಯೇ ಆನಂದ ಪಡುವೆನು. ಕುಮಾರರ ಬಂಧವಿಮೋಚನೆಯಾದರೆ ನಾನು ಕೃತಕೃತ್ಯಳಾಗುವೆನು. ಅದಕ್ಕಿಂತ ಹೆಚ್ಚಿನ ಆಶೆಯು ನನಗಿಲ್ಲ, ನಿನ್ನ ನಿರ್ಮಲ ಹೃದಯವನ್ನು ನಾನು ಬಲ್ಲೆನು. ಕುಮಾರ ಜಗತ್ಸಿಂಗರವರಿಗೆ ನೀನು ಯೋಗ್ಯ ಹೆಂಡತಿಯಾಗಿರುತ್ತೀ. ನೀವಿಬ್ಬರು ಸುಖದಿಂದಿರುವದೇ ನನ್ನ ಸುಖವು. ಅಂಥ ಸುಯೋಗವನ್ನು ದೇವರು ಬೇಗನೇ ಒದಗಿಸಿಕೊಡಲಿ!

ಆಯೇಷೆಯ ಈ ಮಾತುಗಳನ್ನು ಕೇಳಿ ನಿರ್ಮಲಾಂತಃಕರಣದ ತಿಲೋತ್ತಮೆಯು ಕನಿಕರಪಟ್ಟಳು. ಆಕೆಯು ಶೋಕಾತಿಶಯದಿಂದ ಆಯೇಷೆಯನ್ನು ಕುರಿತು–ಅಕ್ಕಾ, ನೀನು ಹೀಗೇಕೆ ಪರಕೀಯಳಂತೆ ಮಾತನಾಡುತ್ತೀಯೇ? ನೀನು ಯವರಾಜರನ್ನು ಸಂಪೂರ್ಣವಾಗಿ ಪ್ರೀತಿಸುತ್ತೀಯೆಂಬದನ್ನು ನಾನು ಬಲ್ಲೆನು. ನಿನ್ನ ಪ್ರಯತ್ನದಿಂದ ಯುವರಾಜರ ಬಂಧ ವಿಮೋಚನೆಯಾದರೆ, ಅವರು ನಿನ್ನನ್ನು ನಿರಾಕರಿಸಬಹುದೆ? ಅವರು ನಿರಾಕರಿಸಿದರೆ ನಾನು ಸುಮ್ಮನಿರುವೆನೇ? ಒಂದು ವೃಕ್ಷಕ್ಕೆ ಎರಡು ಬಳ್ಳಿಗಳು ಆಶ್ರಯಿಸುವಂತೆ, ನಾವಿಬ್ಬರೂ ಯುವ ರಾಜರನ್ನು ಆಶ್ರಯಿಸಿ ಸುಖದಿಂದ ಇರೋಣ! ಅನ್ನಲು, ಆಯೇಷೆಯು–ತಂಗೀ, ತಿಲೋತ್ತಮೆ, ನಿನ್ನಂಥ ನಿರ್ಮಾತ್ಸರ್ಯದ ಸ್ತ್ರೀ ರತ್ನಗಳು ಜಗತ್ತಿನಲ್ಲಿ ಅತ್ಯಂತ ದುರ್ಲಭವು. ಯಾವ ಸ್ತ್ರೀಯು ನಿನ್ನಂಥ ಉದಾರಾಂತಃಕರಣದ ಸುರಸುಂದರಿಯು ಯುವರಾಜರ

ಹೃದಯದಲ್ಲಿ ವಾಸಮಾಡಿ ಕೊಂಡಿರಲು, ಅದರಂತೆ, ನಿನಗಾಗಿಯೇ ಅವರು ತಮ್ಮ ಪ್ರಶಸ್ತ ಹೃದಯವನ್ನೆಲ್ಲ ಕೊಟ್ಟಿರಲು, ನಾನು ಆ ಪುಣ್ಯಾತ್ಮರ ಹೃದಯವನ್ನೆಲ್ಲ ವ್ಯಾಪಿಸಿ ನಿನಗೆ ಸಂಕೋಚವನ್ನುಂಟು ಮಾಡಲಾರೆನು. ನಿನ್ನ ವಾಸಕ್ಕೆ ಸಂಪೂರ್ಣ ಹೃದಯವನ್ನು ಕೊಟ್ಟುಬಿಟ್ಟಿದ್ದ ಆ ಉದಾರಾಂತಃ ಕರಣದ ಕುಮಾರ ಜಗತ್ಸಿಂಗರವರು ಅನ್ಯ ಸ್ತ್ರೀಯರಿಗೆ ತಮ್ಮ ಹೃದಯದಲ್ಲಿ ಸ್ಥಳ ಕೊಡಲಾರೆಂಬದನ್ನು ನಾನು ಪೂರಾ ಬಲ್ಲೆನು. ಯುವರಾಜರ ಮೇಲಿದ್ದ ನನ್ನ ಪ್ರೇಮವನ್ನು ನಾನು ಹೊರಗೆಡವದೇ, ಗುಪ್ತವಾಗಿಡತಕ್ಕದ್ದಿತ್ತು; ಆದರೆ ಅಂಥ ಪ್ರಸಂಗಗಳೇ ಒದಗಿದ್ದರಿಂದ ನಾನು ಅದನ್ನು ಹೊರಗೆಡವಿದೆನು. ಅದಕ್ಕಾಗಿ ಈಗ ನನಗೆ ಪಶ್ಚಾತ್ತಾಪವಾಗುತ್ತದೆ! ಆದರೆ ಈಗ ಪಶ್ಚಾತ್ತಾಪಪಟ್ಟು ಮಾಡುವದೇನು? ಆದದ್ದು ಆಗಿ ಹೋಯಿತು. ಆದರೆ ತಂಗೀ, ನೀನು ಇನ್ನು ಮೇಲೆ ನನ್ನ ಮುಂದೆ ಈ ಮಾತು ತೆಗೆಯಬೇಡ. ಅದರಿಂದ ನನಗೆ ಸುಖವಾಗದು. ಎರಡನೆಯವರ ಬಳಿಯಲ್ಲಿಯೂ ಈ ಮಾತು ಆಡಬೇಡ. ಕುಮಾರ ಜಗತ್ಸಿಂಗರವರಿಗೆ ಸಂಪೂರ್ಣವಾಗಿ ಹೃದಯವನ್ನು ಒಪ್ಪಿಸಿರುವ ನನಗೆ, ಆ ಯುವರಾಜರ ಹೃದಯದಲ್ಲಿ ಸ್ಥಳವು ದೊರೆಯುವ ಹಾಗಿಲ್ಲದ್ದರಿಂದ, ನಾನು ಅವಿವಾಹಿತಳಾಗಿಯೇ ಜನ್ಮವನ್ನು ಕಳೆಯುವೆನು. ಇದರಲ್ಲಿ ಯುವರಾಜರದಾದರೂ ಏನು ತಪ್ಪು ಹೇಳು? ಅವರು ನಿನಗೆ ತಮ್ಮ ಸಂಪೂರ್ಣ ಹೃದಯವನ್ನು ಕೊಟ್ಟಿರುವಾಗ, ಅವರು ತಮ್ಮ ಹೃದಯದಲ್ಲಿ ನನಗಾಗಿ ಎಲ್ಲಿ ಸ್ಥಳ ತರಬೇಕು? ಆದ್ದರಿಂದ ತಿಲೋತ್ತಮಾ, ನಿನ್ನನ್ನು ನಾನು ಕೈಜೋಡಿಸಿ ಬೇಡಿಕೊಳ್ಳುವೆನೇನೆಂದರೆ ನೀನು ಈ ಮಾತನ್ನು ಸಂಪೂರ್ಣವಾಗಿ ಮರೆತುಬಿಡು, ಎಂದು ಅಂಗಲಾಚಿ ಬೇಡಿಕೊಂಡಳು. ಅದಕ್ಕೆ ತಿಲೋತ್ತಮೆಯು– ಅಕ್ಕಾ, ಈ ಮಾತನ್ನು ನಾನು ಹ್ಯಾಗೆ ಮರೆಯಲಿ? ಅದರಂತೆ, ಅದನ್ನು ಎರಡನೆಯವರಿಗೆ ಹೇಳದೆಯಾದರೂ ಹ್ಯಾಗೆ ಇರಲಿ? ಯುವರಾಜರ ಮೇಲಿದ್ದ ನಿನ್ನ ಪ್ರೇಮವನ್ನು ಅವರ ಮುಂದೆ ವ್ಯಕ್ತಪಡಿಸಿದ್ದಕ್ಕಾಗಿ ನೀನು ಪಶ್ಚಾತ್ತಾಪ ಪಡುವೆಯಲ್ಲ? ಆದರೆ ಅಕ್ಕಾ, ತನ್ನ ಪ್ರಿಯಕರನಿಗೆ ಪ್ರೇಮದ ಸಂಗತಿಯನ್ನು ತಿಳಿಸದಿದ್ದರೆ, ಸುಖವಾದರೂ ಹ್ಯಾಗಾಗುವದು ನೀನೇ ಹೇಳು. ನನ್ನಂತೆ ನೀನಾದರೂ ಯುವರಾಜರನ್ನು ಪ್ರೀತಿಸುತ್ತಿರುವೆ ಯಷ್ಟೇ? ಅಂದಬಳಿಕ ನನ್ನಂತೆ ನೀನು ವಿರಹ ವ್ಯಥೆಗೆ ಯಾಕೆ ಒಳಗಾಗುವದಿಲ್ಲ!

ಆಯೇಷೆಯು ತಿಲೋತ್ತಮೆಯ ಸರಳ ಹೃದಯಕ್ಕಾಗಿ ಆನಂದಪಟ್ಟಳು. ಆಕೆಯು ಲಜ್ಜೆಯಿಂದ ತಲೆಬಾಗಿ ತಿಲೋತ್ತಮೆಯ ಜಲ ಹಸ್ತವನ್ನು ತನ್ನ ಎರಡೂ ಕೈಗಳಿಂದ ಹಿಡಿದು ಅದರೊಡನೆ ಆಡುತ್ತ ಸ್ವಲ್ಪಹೊತ್ತು ಸುಮ್ಮನೆ ಕುಳಿತು, ಆಮೇಲೆ ವಿಷಾದಪೂರ್ವಕವಾಗಿ ನಕ್ಕು–ತಂಗೀ, ತಿಲೋತ್ತಮಾ, ನನ್ನ ಹೃದಯವು ನಿನ್ನಷ್ಟು ಕೋಮಲವಾದದ್ದಲ್ಲ. ಅದು ಪಾಷಾಣಕ್ಕಿಂತ ಕಠಿಣವಾಗಿರುತ್ತದೆ. ನೀರಸವಾದ ನನ್ನ ಹಾಳು ಹೃದಯದಲ್ಲಿ ನಿನ್ನ ಹೃದಯದಷ್ಟು ಮಾರ್ದವವು ಇರುವದಿಲ್ಲೆಂಬದು ನಿಜವು; ಆದರೆ ಪ್ರಿಯಸಖೀ, ಯುವರಾಜರ ಹೃದಯದಲ್ಲಿ ನಿನ್ನ ಹೊರತು ಅನ್ಯಸ್ತ್ರೀಗೆ ಸ್ಥಳವು ದೊರೆಯದ ಹಾಗಿರುವದರಿಂದ, ನಾನು ನನ್ನ ಹೃದಯವನ್ನು ವಜ್ರಕ್ಕಿಂತ ಕಠಿಣವಾಗಿ ಮಾಡಬೇಕಾಗಿದೆ. ಪತಿ–ಪತ್ನಿಯರಲ್ಲಿ ಪರಸ್ಪರರ ವಿಷಯವಾಗಿರುವ ಅಕೃತ್ರಿಮ ಪ್ರೇಮವೇ ಸರಸ ಪ್ರೇಮವು. ಹೀಗೆ ಪರಸ್ಪರವಲ್ಲದ

ಏಕಾಕಿಯಾದ ಪ್ರೇಮವು ಎಷ್ಟು ಬಲವತ್ತರವಾಗಿದ್ದರೂ, ಅದು ನೀರಸವಾದದ್ದೇ ಸರಿ. ಇದರ ಮೇಲಿಂದ ಯುವರಾಜರ ವಿಷಯವಾಗಿ ನಿನ್ನಲ್ಲಿರುವ ಅಕೃತ್ರಿಮ ಪ್ರೇಮವು ಸರಸ ಪ್ರೇಮವೆನಿಸುವದು, ಅದೇ ಯುವರಾಜರ ವಿಷಯವಾಗಿ ನನ್ನಲ್ಲಿರುವ ಪ್ರೇಮವು ನೀರಸ ಪ್ರೇಮವೆನಿಸುವದು; ಯಾಕಂದರೆ ಯುವರಾಜರಿಗೆ ನಿನ್ನನ್ನು ಪ್ರೀತಿಸಿದಂತೆ, ನನ್ನನ್ನು ಪ್ರೀತಿಸಲಿಕ್ಕೆ ಬರುವಹಾಗಿಲ್ಲ. ಆದರೆ ತಂಗೀ, ಇದು ಮಾತ್ಸರ್ಯದ ಮಾತಲ್ಲ; ಇದ್ದದ್ದನ್ನು ಇದ್ದಹಾಗೆ ಹೇಳುವದು. ಇದಕ್ಕಾಗಿ ನೀನು ವಿಷಾದಪಡತಕ್ಕದ್ದಲ್ಲ. ಯುವರಾಜರನ್ನು ಪ್ರೀತಿಸುವದರ ಹೊರತು, ಬೇರೆ ಯಾವದೊಂದನ್ನೂ ನಾನು ಚಿಂತಿಸುವದಿಲ್ಲ. ನಾನು ಸುಖಿಯಾಗಿದ್ದೇನೆ. ನನಗೆ ಸುಖವಾಗಬೇಕೆಂದು ನೀನು ಸರ್ವಥಾ ಕಷ್ಟಪಡಬೇಡ. ನನ್ನ ಜೀವಕ್ಕೆ ಯಾತನೆಯಾಗುತ್ತಿರಬಹುದೆಂದು ಭಾವಿಸಿ, ನೀನು ನಿನ್ನ ಸರಳ ಹೃದಯಕ್ಕೆ ವ್ಯಥೆಯನ್ನುಂಟು ಮಾಡಿಕೊಳ್ಳಬೇಡ, ಎಂದು ಹೇಳಿದಳು. ಈ ಮಾತುಗಳನ್ನು ಕೇಳಿ ತಿಲೋತ್ತಮೆಯ ಹೃದಯವು ಕರಗಿ, ಆಕೆಯು ಕಣ್ಣೀರು ಸುರಿಸುತ್ತ– ಅಕ್ಕಾ, ನೀನು ಹೀಗೇಕೆ ಉದಾಸೀನಳಾಗುತ್ತೀ? ಪುರುಷರ ಹೃದಯವು ಸಮುದ್ರದಂತೆ ಇರುತ್ತದೆ. ಆ ಸಮುದ್ರದೊಳಗಿಂದ ತಮಗೆ ಬೇಕಾದಷ್ಟು ಪ್ರೇಮವನ್ನು ಸ್ತ್ರೀಯರು ಯಾಕೆ ಸಂಪಾದಿಸಿಕೊಳ್ಳಬಾರದು? ಪ್ರೀಯ ಭಗಿನೀ ಆಯೇಷಾ, ನೀನು ಪ್ರಾಣಕ್ಕಿಂತಲೂ ಹೆಚ್ಚಾಗಿ ಯುವರಾಜನನ್ನು ಪ್ರೀತಿಸುತ್ತೀ. ಅಂದಬಳಿಕ ಪ್ರಸಿದ್ಧ ರೀತಿಯಿಂದ ಅವರ ಪ್ರೇಮ ಲಾಭವನ್ನು ಸಂಪಾದಿಸಿ ನೀನು ಯಾಕೆ ಸುಖಿಯಾಗಬಾರದು? ರಾಜಪುತ್ರರ ಮೇಲೆ ಅನ್ಯಸ್ತ್ರೀಯು ಪ್ರೇಮ ಮಾಡಿದರೆ ತಿಲೋತ್ತಮೆಯು ಮಾತ್ಸರ್ಯ ಪಟ್ಟಾಳೆಂದು ನೀನು ಭಾವಿಸುತ್ತಿರಬಹುದು; ಹಾಗಿದ್ದರೆ ನಿನ್ನ ಭಾವನೆಯು ಅಯೋಗ್ಯವಾದದ್ದೆಂದು ತಿಳಿದುಕೋ. ತಿಲೋತ್ತಮೆಯು ಅಷ್ಟು ಕ್ಷುದ್ರ ಹೃದಯದವಳಲ್ಲೆಂಬದನ್ನು ಲಕ್ಷದಲ್ಲಿಡು. ನವಾಬನಂದಿನಿ, ನಿನ್ನಂಥ ಗುಣಾಢ್ಯಳಾದ ಮಹಿಳಾಮಣಿಯು ರಾಜಪುತ್ರರ ಪ್ರೇಮಕ್ಕೆ ಪಾತ್ರಳಾಗಿರುವದರ ಸ್ಮರಣವಾದಕೂಡಲೆ, ನನ್ನ ಸರ್ವಾಂಗವು ಪುಲಕಿತವಾಗುತ್ತದೆ! ನಾವಿಬ್ಬರೂ ಯುವರಾಜರನ್ನು ಆಶ್ರಯಿಸಿ ಸುಖಿಗಳಾಗಬೇಕೆಂದು ನಾನು ಮನಃಪೂರ್ವಕವಾಗಿ ಇಚ್ಛಿಸುವೆನು. ನಾವಿಬ್ಬರೂ ಒಬ್ಬ ರಾಜಕುಮಾರನನ್ನು ಪ್ರೀತಿಸುತ್ತಿರುವದರಿಂದ ನಮ್ಮಿಬ್ಬರ ಪ್ರೇಮದಲ್ಲಿ ಐಕ್ಯವಿರುವದು ಅವಶ್ಯವಾಗಿರುತ್ತದೆ; ಆದ್ದರಿಂದ ಪ್ರೀಯಭಗಿನೀ ಆಯೇಷೆ, ಯುವರಾಜರ ಪ್ರೇಮಸಂಪಾದನೆಗಾಗಿ ನೀನು ಯತ್ನಿಸಲೇಬೇಕು.

ತಿಲೋತ್ತಮೆಯ ಈ ಮಾತುಗಳನ್ನು ಕೇಳಿ ಆಯೇಷೆಯು ಆಕೆಯನ್ನು ಬಿಗಿಯಾಗಿ ಅಪ್ಪಿಕೊಂಡಳು. ಆಕೆಯು ತನ್ನ ಕೋಮಲ ಹಸ್ತದಿಂದ ತಿಲೋತ್ತಮೆಯ ಗದ್ದವನ್ನು ಹಿಡಿದು ಆಕೆಯ ನಿಷ್ಕಲಂಕ ಮುಖವನ್ನು ಏಕಾಗ್ರತೆಯಿಂದ ನೋಡುತ್ತ– ನಿನ್ನಂಥ ಸರಳ ಹೃದಯದ, ಹಾಗು ಪ್ರೇಮಲ ಸ್ವಭಾವದ ಸ್ತ್ರೀಯರ ಮುಖದಿಂದ ಇಂಥ ಮಾತುಗಳು ಹೊರಡತಕ್ಕವವೇ ಸರಿ. ಇಂಥ ಉದಾರಹೃದಯದ ಸ್ತ್ರೀಯು ದೊರೆತದ್ದಕ್ಕಾಗಿ ಯುವರಾಜರ ಸುದೈವವನ್ನು ಎಷ್ಟು ಕೊಂಡಾಡಿದರೂ ಸ್ವಲ್ಪವೇ ಇರುವದು. ನಿನ್ನ ಸಹವಾಸದಲ್ಲಿ ಯುವರಾಜರಿಗೆ ಲೇಶವಾದರೂ ದುಃಖವು ಸೋಂಕಲಾರದೆಂದು ನಾನು ಖಂಡಿತವಾಗಿ ಹೇಳುತ್ತೇನೆ; ಆದರೆ ತಿಲೋತ್ತಮೇ, ನನ್ನ

ಜೀವನ ಕ್ರಮವನ್ನು ನಾನು ನಿರ್ಧರಿಸಿಬಿಟ್ಟಿರುವೆನು. ಇನ್ನು ಮೇಲೆ ಅದರಲ್ಲಿ ಅಂತರವಾಗುವ ಹಾಗಿಲ್ಲ. ನನ್ನ ನಿಶ್ಚಯವನ್ನು ಪಾಲಿಸುವದರಲ್ಲಿಯೇ ನನಗೆ ಆನಂದವಿರುವದು; ಆದರೆ ಪ್ರಿಯ ಭಗಿನೀ, ಇನ್ನು ಈ ಮಾತು ಇಲ್ಲಿಗೆ ಸಾಕು. ಮಾತಿನ ಭರದಲ್ಲಿ ಎಷ್ಟು ವೇಳೆಯು ಹೋಗಿಬಿಟ್ಟಿತು! ಇನ್ನು ಮೇಲೆ ನಮ್ಮಿಬ್ಬರ ದರ್ಶನವು ಪುನಃ ಆಗಲಾರದು. ನನ್ನ ಬಂಧುವಾದ ಉಸ್ಮಾನಖಾನನು ಯುದ್ಧದಲ್ಲಿ ಸೋತು ಪುನಃ ಮೊಗಲರ ಮಾಂಡಲೀಕತ್ವವನ್ನು ಒಪ್ಪಿಕೊಂಡಿರುವನು. ಯುವರಾಜರ ಬಂಧವಿಮೋಚನೆಯಾದ ನಂತರ ನಾನು ನನ್ನ ಬಂಧುವಿನ ಬಳಿಗೆ ಹೋಗುತ್ತೇನೆ. ಸದ್ಯಕ್ಕೆ ಮೊಗಲರು ಪಠಾಣರೊಡನೆ ಒಡಂಬಡಿಕೆ ಮಾಡಿಕೊಂಡಿದ್ದರೂ, ಮೊಗಲರು ಬಲಿಷ್ಠರೂ, ವೈಭವಶಾಲಿಗಳೂ ಆದ್ದರಿಂದ ಪಠಾಣರನ್ನು ರಸತಾಲಕ್ಕೆ ಇಳಿಸದೆ ಬಿಡರು. ಪಠಾಣರೊಡನೆಯೇ ಆಯೇಷೆಯ ಅವತಾರದ ಸಮಾಪ್ತಿಯೂ ಆಗುವದು. ನನ್ನ ಮರಣದ ವಾರ್ತೆಯು ಸಹ ನಿನಗೆ ಹತ್ತಲಿಕ್ಕಿಲ್ಲ; ಆದ್ದರಿಂದ ಪ್ರಿಯಭಗಿನೀ, ಇದೇ ನಮ್ಮಿಬ್ಬರ ಕಡೆಯ ಭೆಟ್ಟಿಯೆಂದು ತಿಳಿದುಕೋ ಎಂದು ಹೇಳಿದಳು. ಅದನ್ನು ಕೇಳಿ ತಿಲೋತ್ತಮೆಗೆ ಬಹಳ ವ್ಯಸನವಾಯಿತು. ಆಯೇಷೆಯ ಮನಸ್ಸನ್ನು ತಿರುಗಿಸುವದಕ್ಕಾಗಿ ಆಕೆಯು ಮಾಡಿದ ಪ್ರಯತ್ನವೆಲ್ಲ ವ್ಯರ್ಥವಾಯಿತು. ನವಾಬಜಾದಿಯು ತನ್ನ ನಿಶ್ಚಯವನ್ನು ಬಿಡಲಿಲ್ಲ. ಅವರಿಬ್ಬರು ಹೀಗೆ ಮಾತನಾಡುತ್ತ ಕುಳಿತಿರುವಾಗ ಒಬ್ಬ ದಾಸಿಯು ಬಂದು– ಮಹಾರಾಣೀ ಸಾಹೇಬರು ನಿಮ್ಮಿಬ್ಬರನ್ನು ಕರೆಯುವರು. ಎಂದು ಹೇಳಲು, ತಿಲೋತ್ತಮೆಯು ಆಯೇಷೆ ಯೊಡನೆ ಅತ್ತಕಡೆಗೆ ಹೊರಟು ಹೋದಳು.

ಕೆಲಹೊತ್ತಿನ ಮೇಲೆ ಆಯೇಷೆಯು ಊರ್ಮಿಳಾರಾಣಿಯ ಅನುಮತಿಯಿಂದ ತನ್ನ ಮನೆಗೆ ಹೊರಟು ಹೋದಳು. ಆಕೆಯು ದಿಲ್ಲಿಗೆ ಹೊರಡುವ ಮೊದಲು ತನ್ನ ಬಂಧುವಾದ ಉಸ್ಮಾನನಿಗೆ ಒಂದು ಪತ್ರವನ್ನು ಬರೆಯಬೇಕೆಂದು ಯೋಚಿಸಿ, ಏನು ಬರೆಯಬೇಕೆಂಬದನ್ನು ಕುರಿತು ಆಲೋಚಿಸತೊಡಗಿದಳು. ಉಸ್ಮಾನನ ಮೇಲಿದ್ದ ಆಕೆಯ ಅಕೃತ್ರಿಮ ಬಂಧು ಪ್ರೇಮದ ಯೋಗದಿಂದ ಆಕೆಗೆ ಪತ್ರ ಬರೆಯುವ ಸ್ಫೂರ್ತಿಯು ಸಹಜವಾಗಿ ಆಯಿತು. ನಿರಾಲೋಚಿತವಾಗಿ ಬರೆದ ಸ್ಫೂರ್ತಿ ಪ್ರೇರಿತವಾದ ಆ ಪತ್ರವು, ಸ್ವಲ್ಪ ಹೊತ್ತಿನಲ್ಲಿ ಬರೆದು ಸಿದ್ಧವಾಯಿತು. ಅದನ್ನು ಆಯೇಷೆಯು ತನ್ನೊಳಗೆ ಓದಿ ನೋಡಿ ಸಮಾಧಾನಪಟ್ಟಳು. ಆ ಪತ್ರದ ಅಭಿಪ್ರಾಯ ವೇನಂದರೆ–

ಪ್ರಿಯಬಂಧು ಉಸ್ಮಾನ,

ಅನೇಕ ಯುದ್ಧಗಳಲ್ಲಿ ನೀವು ಸೋತದ್ದನ್ನು ಕೇಳಿದ್ದೇನೆ; ಆದರೆ ಅದರಿಂದ ಎಷ್ಟುಮಾತ್ರವೂ ನಾನು ಎದೆಗುಂದಿರುವದಿಲ್ಲ. ಯಾಕೆಂದರೆ ನಿಮ್ಮ ಹೃದಯದಲ್ಲಿ ಅಲೌಕಿಕ ಧೈರ್ಯ, ವಿಪುಲ ಸಾಹಸ, ಮಹತ್ತರವಾದ ಉತ್ಸಾಹ ಜಗತ್ತನ್ನು ದಂಗುಬಡಿಸುವ ಅಪೂರ್ವ ಶೌರ್ಯ ಇವು ವಾಸಿಸುವವೆಂಬದನ್ನು ನಾನು ಬಲ್ಲೆನು. ನಿಮ್ಮ ಅಸಾಮಾನ್ಯವಾದ ಸಾಹಸಕ್ಕೆ ತ್ರೈಲೋಕ್ಯದಲ್ಲಿ ಜೋಡಿಲ್ಲ; ಅಂದಬಳಿಕ ಇಂಥ ನೂರಾರು ಯುದ್ಧಗಳಲ್ಲಿ ದುರ್ದೈವದಿಂದ ನಿಮಗೆ ಸೋಲು ಬಂದರೂ ನೀವು ಉದಾಸೀನರಾಗಲಾರಿರೆಂಬ ನಂಬಿಗೆಯು ನನಗಿರುತ್ತದೆ.

ಕಾಲಗತಿಯು ಎಂಥವರಿಗೂ ಒಂದೇ ಸಮನಾಗಿರುವದಿಲ್ಲ. ಏರಿಳಿತಗಳು ಎಲ್ಲರ ಪಾಲಿಗೆ ಬರತಕ್ಕವೆಂತಲೇ ಹೇಳಬೇಕಾಗುವದು. ಯಾವದೊಂದು ಸ್ಥಿತಿಯು ಕಡೆತನಕ ಒಂದೇಸಮನೆ ಇರುತ್ತದೆಂದು ತಿಳಿಯುವದು ಹುಚ್ಚುತನವೇ ಸರಿ. ಇಂದು ಅರಸನಿದ್ದವನು ನಾಳೆ ಬಡವನಾಗ ಬಹುದು. ಕಾಲದ ಈ ಕುಟಿಲಗತಿಯು ಸ್ವಭಾವಸಿದ್ಧವಾಗಿದ್ದರೂ, ಅದನ್ನು ಸಹಿಸುವ ಧೈರ್ಯವು ಎಲ್ಲರಿಗೂ ಇರುವದಿಲ್ಲ. ಅದನ್ನು ಸಂಪಾದಿಸುವವನೇ ಪುರುಷಶ್ರೇಷ್ಠನೆ ನಿಸಿಕೊಳ್ಳುವನು. ಅವನಲ್ಲಿಯೇ ನಿಜವಾದ ಪೌರುಷವಿರುವದು.

ಇಂಥ ಕಠಿಣಕಾಲದಲ್ಲಿ ನಿಮ್ಮನ್ನು ಬಿಟ್ಟು ಬಂದದ್ದು ಅಪರಾಧವಾಯಿತೆಂದು ಒಪ್ಪಿಕೊಳ್ಳದೆ ಇರಲಾರೆನು. ಪ್ರೀಯಬಂಧು ನನ್ನ ಮೇಲೆ ನಿಮ್ಮ ಪ್ರೇಮವು ವಿಶೇಷ ವಾಗಿದ್ದರಿಂದ, ನನ್ನ ವಿಯೋಗದಿಂದ ನಿರುತ್ಸಾಹಿಗಳಾಗಿರುತ್ತೀರೆಂಬದರ ಕಲ್ಪನೆಯು, ಈಗ ನನಗೆ ಬರುತ್ತದೆ. ಆ ಹೇಡಿ ನಿರುತ್ಸಾಹವೃತ್ತಿಯೇ ನಿಮ್ಮ ಅಪಜಯಕ್ಕೆ ಕಾರಣವಾಗಿರಬಹುದು. ನನ್ನ ಈ ಅಧಮಕೃತಿಗಾಗಿ ನಾನು ಯಾವಾಗಲೂ ಪಶ್ಚಾತ್ತಾಪ ಪಡುತ್ತಿರುವೆನು; ಆದರೆ ನನ್ನನ್ನು ನೀವು ವಿಶೇಷವಾಗಿ ಪ್ರೀತಿಸುತ್ತಿರುವದರಿಂದ, ನನ್ನ ಈ ಅಪರಾಧವನ್ನು ನೀವು ಕ್ಷಮಿಸಬಾರದೇನು?

ನಾನು ನಿಮ್ಮನ್ನು ಬಿಟ್ಟು ಇಲ್ಲಿಗೆ ಯಾಕೆ ಬಂದೆನೆಂಬದರ ಕಾರಣವು ನಿಮ್ಮಗೆ ತಿಳಿಯದಿದ್ದರೂ ಚಿಂತೆಯಿಲ್ಲ. ಅದನ್ನು ಈಗ ನಾನು ಬಾಯಿಬಿಚ್ಚಿ ಹೇಳುವದೂ ಇಲ್ಲ. ಆದರೆ ನಾನು ಯಾವ ವಿಷಯಸುಖಕ್ಕೂ ಆಶೆಮಾಡಿ ಇಲ್ಲಿಗೆ ಬಂದಿರುವದಿಲ್ಲವೆಂಬುದು ನಿಜವು. ಯಃಕಶ್ಚಿತವಾದ ವಿಷಯಸುಖದ ಆಶೆಯಿಂದ ಅತ್ಯಂತ ಪ್ರಿತ್ಯಾಸ್ಪದರಾದ ಜನರನ್ನು ಅಗಲಿ ಬರುವಂಥ ಕ್ಷುದ್ರಳು, ಆಯೇಷೆಯಲ್ಲೆಂಬದನ್ನು ತಾವು ಮರೆಯಬಾರದು. ನೀವು ನನ್ನ ಮೇಲೆ ಮಾಡುವ ಪ್ರೇಮಕ್ಕಾಗಿ ಸರ್ವಸ್ವವನ್ನು ಕಾಲಿನಿಂದ ಒದೆಯುವದಕ್ಕೆ ಆಯೇಷೆಯು ಹಿಂದು ಮುಂದು ನೋಡುವವಳಲ್ಲ; ಆದರೆ ಅಂಥದೊಂದು ಉದಾತ್ತವಾದ ಉದ್ದೇಶದ ಕಾರ್ಯಕ್ಕಾಗಿಯೇ ಬಂದಿದ್ದ ಆಯೇಷೆಯ ಕಾರ್ಯವು ಇನ್ನೂ ಕೊನೆಗೊಂಡಿರುವದಿಲ್ಲ; ಆದ್ದರಿಂದಲೇ ನಿಮ್ಮ ದರ್ಶನಕ್ಕೆ ಬರುವದು ಆಕೆಯಿಂದಾಗಲೊಲ್ಲದು. ಆ ಕಾರ್ಯವಾದ ಕೂಡಲೆ ನಿಂತಕಾಲಲ್ಲಿ ಆಯೇಷೆಯು ತಮ್ಮ ಬಳಿಗೆ ಬರುವಳು. ಆಕೆಯು ಎಂದು ಬರುವಳೆಂಬದು ಇನ್ನೊಂದು ಪತ್ರದಿಂದ ತಮಗೆ ಗೊತ್ತಾಗಬಹುದು.

ಪ್ರಿಯ ಬಂಧೂ, ಹೆಚ್ಚಿಗೆ ನಾನೇನು ಬರೆಯಲಿ? ವಿಪದ್ಗ್ರಸ್ತರಾದ ನಿಮಗೆ ಧೈರ್ಯ ಹೇಳುವದಕ್ಕಾಗಿಯೂ, ದುಃಖದ ಸಮುದ್ರದಲ್ಲಿ ನೀವು ಹೇಗೆ ಈಸುತ್ತೀರೆಂಬದನ್ನು ನೋಡುವದ ಕ್ಕಾಗಿಯೂ, ಸಂಕಟಗಳ ಪರ್ವತಗಳನ್ನು ತಲೆಯ ಮೇಲೆ ಹ್ಯಾಗೆ ಹೊತ್ತುಕೊಂಡಿರು ವಿರೆಂಬದನ್ನು ಅವಲೋಕಿಸುವದಕ್ಕಾಗಿಯೂ, ಪ್ರಸಂಗವಶಾತ್ .ನಿಮಗೆ ಸಹಾಯ ಮಾಡುವದಕ್ಕಾಗಿಯೂ, ನಿಮ್ಮ ದುಃಖದ ಪಾಲುಗಾರಳಾಗುವದಕ್ಕಾಗಿಯೂ, ನಿರುತ್ಸಾಹಿ ಗಳಾಗಿರುವ ನಿಮ್ಮನ್ನು ಕಾರ್ಯತತ್ಪರರನ್ನಾಗಿ ಮಾಡುವದಕ್ಕಾಗಿಯೂ ನಾನು ಆದಷ್ಟು ಬೇಗನೆ ಬರುವೆನೆಂಬದನ್ನು ಇನ್ನೊಮ್ಮೆ ಹೇಳುವೆನು. ನೀವು ನನ್ನ ಅನಂತ ಅಪರಾಧಗಳನ್ನು ಈವರೆಗೆ

ಕ್ಷಮಿಸುತ್ತ ಬಂದಂತೆ ಈಗಾದರೂ ನನ್ನ ಅಪರಾಧಗಳನ್ನು ಕ್ಷಮಿಸಿ, ನನ್ನ ಮೇಲೆ ಎಂದಿನಂತೆ ಪ್ರೇಮ ಮಾಡಿರಿ. ಇದೇ ನನ್ನ ಪ್ರಾರ್ಥನೆಯು.

ದುರ್ದೈವಿಯಾದ,
ಆಯೇಷೆಯು

ಆಯೇಷೆಯು ಬರೆದ ಈ ಪತ್ರವು ಉಸ್ಮಾನನಿಗೆ ಮುಟ್ಟಿ, ಆತನಿಗೆ ಹೊಸ ಜೀವಕಳೆ ಬಂದಂತಾಯಿತು. ಆಯೇಷೆಯು ತನ್ನ ಪತ್ರದಲ್ಲಿ ಬರೆದಂತೆ, ತಾನು ಬರವ ದಿವಸವನ್ನು ಮತ್ತೊಂದು ಪತ್ರದಿಂದ ಉಸ್ಮಾನನಿಗೆ ತಿಳಿಸಿದ್ದರಿಂದ, ಆತನು ಅತ್ಯಾತುರತೆಯಿಂದ ಆಕೆಯನ್ನು ಬರಮಾಡಿಕೊಳ್ಳುವದಕ್ಕಾಗಿ ಇಂದು ಮಹಾನದಿಯ ದಂಡೆಗೆ ಬಂದಿದ್ದನು. ಮಹಾನದಿಯ ನಿರ್ಮಲ ಪ್ರವಾಹವು ಮಂಜುಲ ಧ್ವನಿಮಾಡುತ್ತ ಮೆಲ್ಲ ಮೆಲ್ಲನೆ ಸಾಗಿತ್ತು. ಅದರ ವಿಶಾಲವಾದ ಪ್ರವಾಹದಲ್ಲಿ ದೂರ ದೂರ ದೇಶದ ಹಡಗುಗಳು ಬರುತ್ತಲಿದ್ದವು. ಅದರ ದಂಡೆಯ ಮೇಲಿರುವ ಕಟಕ ಪಟ್ಟಣದಲ್ಲಿ ವ್ಯಾಪಾರದ ಗದ್ದಲವು ಬಹಳ; ಪ್ರವಾಸಿಕರ ದಟ್ಟಣೆಯು ಹೆಚ್ಚು. ಇಳಿಹೊತ್ತಾದ ಕೂಡಲೆ ಪಟ್ಟಣದೊಳಗಿನ ಜನರು ವಿಶ್ರಾಂತಿಗಾಗಿ ನದಿಯತೀರಕ್ಕೆ ಬರುತ್ತಲಿದ್ದರು. ಉಸ್ಮಾನನು ಈ ದಿನ ಮೂರು ಗಂಟೆಯ ಸುಮಾರಕ್ಕೆ ನದಿಯ ತೀರಕ್ಕೆ ಬಂದಿದ್ದನು. ಆಗ ಪ್ರಭಾತದ ಮಾಸವಿದ್ದದ್ದರಿಂದ ಮೋಡದ ಬಿಸಿಲಿನ ಕಸುವು ಇನ್ನೂ ಅಷ್ಟೊಂದು ಕುಗ್ಗಿದ್ದಿಲ್ಲ. ಅಲ್ಲಿ ದೊಡ್ಡ ದೊಡ್ಡ ವೃಕ್ಷಗಳಿದ್ದವು. ಉಸ್ಮಾನನು ನದಿಯ ದಂಡೆಯಲ್ಲಿ ಒಮ್ಮೊಮ್ಮೆ ಇತ್ತಿಂದಿತ್ತ ಅತ್ತಿಂದಿತ್ತ ಸಂಚರಿಸುತ್ತಲಿದ್ದನು. ಒಮ್ಮೊಮ್ಮೆ ನಡುವೇ ನಿಂತು ನದಿಯ ಕಡೆಗೆ ಬಹುದೂರ ದೃಷ್ಟಿಯನ್ನಿಟ್ಟು ನೋಡುತ್ತಲಿದ್ದನು. ಆ ಕಾಲದಲ್ಲಿ ಆತನ ಉಡಿಗೆ-ತೊಡಿಗೆಗಳು ಸರ್ವ ಸಾಧಾರಣವಾಗಿದ್ದವು. ಆತನು ಸೈಲಾದ ಚಣ್ಣವನ್ನು ಹಾಕಿಕೊಂಡು, ಪಂಜಾಬದ ಪದ್ಧತಿಯದೊಂದು ಅಂಗಿಯನ್ನು ತೊಟ್ಟುಕೊಂಡಿದ್ದನು. ಆತನ ತಲೆಯ ಮೇಲಿನ ಬಹು ಬೆಲೆಯುಳ್ಳ ಜರದ ಟೊಪ್ಪಿಗೆಯಿಂದ ಆತನ ಮುಖದ ಸೌಂದರ್ಯವು ಉಕ್ಕುತ್ತಲಿತ್ತು. ಆತನ ಕಾಲುಗಳಲ್ಲಿ ಜರತಾರಿಯ ಕಲಾಕುಸುರಿನ ಚಡಾವುಗಳನ್ನು ಮೆಟ್ಟಿದ್ದನು. ಇಂಥ ಸಾಧಾರಣ ಉಡುಪು-ತೊಡಪುಗಳನ್ನು ಧರಿಸಿದಾಗಲೂ, ಸ್ವಭಾವ ಸುಂದರನಾದ ಆ ತರುಣ ವೀರನ ಸೌಂದರ್ಯದಲ್ಲಿ ಕೊರತೆಯುಂಟಾಗಿದ್ದಿಲ್ಲ. ಈ ಕಾಲದಲ್ಲಿ ಉಸ್ಮಾನನು ನಿಶ್ಯಸ್ತ್ರನಾಗಿದ್ದನು. ಶಸ್ತ್ರಧಾರಿಗಳಾದ ಇಬ್ಬರು ಸೈನಿಕರು ಆತನ ಬೆಂಗಾವಲಿಗಿದ್ದರು. ಮೊಗಲರೊಡನೆ ಹೂಡಿದ ಯುದ್ಧದಲ್ಲಿ ಸೋತದ್ದರಿಂದ, ಆತನ ಮೋರೆಯು ಸ್ವಲ್ಪ ಇಳಿದಂತೆ ಕಾಣುತ್ತಿತ್ತು. ಬರಬರುತ್ತ ಬಿಸಿಲಿನ ತಾಪವು ಕಡಿಮೆಯಾಗಹತ್ತಿ ತಂಗಾಳಿಯು ಬೀಸತೊಡಗಿತು. ಆಗ ಉಸ್ಮಾನನು ಒಂದು ವಿಶಾಲವಾದ ವೃಕ್ಷದ ದಟ್ಟ ನೆರಳಿನಲ್ಲಿ ವಿಶ್ರಮಿಸುತ್ತ ಕುಳಿತುಕೊಂಡನು. ಸ್ವಲ್ಪ ಹೊತ್ತಿನಲ್ಲಿ ಆತನು ಮತ್ತೆ ಎದ್ದು ಹೊಳೆಯಲ್ಲಿ ಬಹು ದೂರದವರೆಗೆ ಆತುರತೆಯಿಂದ ನೋಡಹತ್ತಿದನು; ಆದರೆ ಹಡಗು ಬರುವದು ಆತನಿಗೆ ಕಾಣಿಸಲೊಲ್ಲದು. ಇಂದು ಆಯೇಷೆಯು ನಿಶ್ಚಯವಾಗಿ ಬರುವಳೆಂಬ ಉಬ್ಬಿನಿಂದ ಆತನು ನದೀತೀರಕ್ಕೆ ಬಂದಿದ್ದನು. ಇಷ್ಟು ಹೊತ್ತಾದರೂ ಹಡಗವು ಕಾಣದಾಗಲು, ಆತನು ಅಸಮಾಧಾನಪಟ್ಟನು.

ಹೀಗೆ ಆಯೇಷೆಯ ಹಾದಿಯನ್ನು ಆತುರತೆಯಿಂದ ನೋಡುತ್ತಿದ್ದ ಉಸ್ಮಾನನಿಗೆ ಸ್ವಲ್ಪ ಹೊತ್ತಿನ ಮೇಲೆ ಬಹು ದೂರದಿಂದ ಎಷ್ಟೋ ಹಡಗಗಳು ಬರುತ್ತಿರುವಂತೆ ತೋರಿತು. ಆ ದೂರದ ಹಡಗಗಳು ನೋಡುವವರ ಕಣ್ಣಿಗೆ ನದಿಯಮೇಲೆ ಹಾರಾಡುತ್ತಿರುವ ಪಕ್ಕಿಗಳ ಹಾಗೆ ಕಾಣುತ್ತಿದ್ದವು. ಹಡಗಗಳು ಸನಿಯಕ್ಕೆ ಬರಹತ್ತಿದಂತೆ ಉಸ್ಮಾನನ ಉತ್ಕಂಠೆಯು ಹೆಚ್ಚಾಯಿತು. ಸ್ವಲ್ಪ ಅಂತರದ ಮೇಲೆ ಹಡಗಗಳು ಬಂದವು. ಅವುಗಳಲ್ಲಿ ಐದು ದೊಡ್ಡ ಹಡಗಗಳೂ, ಮೂರು ಡೋಣಿಗಳೂ ಇದ್ದು ಒಂದು ಹಡಗವು ಬಹು ಬೆಲೆಯುಳ್ಳದ್ದಿತ್ತು ಇದೇ ಹಡಗದಲ್ಲಿಯೇ ಆಯೇಷೆಯು ಇರಬಹುದೆಂದು ಉಸ್ಮಾನನು ತರ್ಕಿಸಿದನು. ಅವನ ತರ್ಕವು ಸುಳ್ಳಾಗಲಿಲ್ಲ. ಆತನು ಆ ಸುಂದರವಾದ ಹಡಗದಲ್ಲಿ ಆಯೇಷೆಯು ಇದ್ದದ್ದನ್ನು ನೋಡಿದನು. ಕಿಡಿಕಿಯೊಳಗಿಂದ ಆಯೇಷೆಯ ಸುಂದರವಾದ ನಗೆಮೊಗವು ಉಸ್ಮಾನನ ಕಣ್ಣಿಗೆ ಬೀಳಲು, ಅವರಿಬ್ಬರಿಗೂ ಪರಮಾನಂದವಾಯಿತು. ಉಭಯತರು ಪರಸ್ಪರರಿಗೆ ಸಲಾಮು ಮಾಡಿದರು. ಆಯೇಷೆಯ ಅಪ್ಪಣೆಯಿಂದ ನಾವಿಕರು ಬಹು ಒತ್ತರದಿಂದ ಹಡಗಗಳನ್ನು ನಡಿಸುತ್ತಿದ್ದರು. ಅಷ್ಟರಲ್ಲಿ ಅಕಸ್ಮಾತ್ ಆಯೇಷೆಯ ಹಡಗದ ಗತಿಯು ಮಂದವಾಯಿತು. ಉಳಿದ ಹಡಗಗಳು ಮುಂದಕ್ಕೆ ಹೋದವು. ತಮ್ಮ ಹಡಗವು ಹಿಂದೆ ಉಳಿದದ್ದನ್ನು ಆಯೇಷೆಯ ನಾವಿಕನು ನೋಡಿ ನಾಚಿ, ತಮ್ಮ ಹಡಗವು ಮುಂದಕ್ಕೆ ಸಾಗುವದಕ್ಕಾಗಿ ಶಕ್ತಿಮೀರಿ ಪ್ರಯತ್ನ ಮಾಡ ಹತ್ತಿದರು. ಆದರೆ ಅದರಿಂದ ಪ್ರಯೋಜನವಾಗಲಿಲ್ಲ. ಆಗ ನಾವಿಕರು ಸೂಕ್ಷ್ಮರೀತಿಯಿಂದ ಅವಲೋಕಿಸಲು, ಹಡಗಕ್ಕೆ ಎಲ್ಲಿಯೋ ತೂತು ಬಿದ್ದದ್ದರಿಂದ ನೀರು ಒಳಗೆ ಸೇರಹತ್ತಿ ಹಡಗವು ಮುಳುಗುತ್ತಿರುವಂತೆ ತೋರಿತು. ಅದನ್ನು ನೋಡಿ ನಾವಿಕರು ಗಾಬರಿಯಾದರು. ಅವರು ಹಡಗವನ್ನು ದಂಡೆಗೆ ಒಯ್ಯುವದಕ್ಕಾಗಿ ವಿಶ್ವಪ್ರಯತ್ನ ಮಾಡಹತ್ತಿದರು; ಆದರೆ ಅವರ ಪ್ರಯತ್ನವೆಲ್ಲ ವ್ಯರ್ಥವಾಗಿ ಹಡಗವು ಮುಣುಗಹತ್ತಿತು. ದಂಡೆಯ ಮೇಲಿನವರಿಗೂ ಹಡಗವು ಮುಣುಗುವದೆಂಬದು ಸ್ಪಷ್ಟವಾಗಿ ಕಾಣಿಸಹತ್ತಿತು. ಆಗ ಉಸ್ಮಾನನು ಗಾಬರಿಯಾದನು. ಆತನು ದಂಡೆಯ ಮೇಲೆ ನಿಲ್ಲಲಾರದೆ ನದಿಯಲ್ಲಿ ಇಳಿದನು. ಅದನ್ನು ನೋಡಿ ಆಯೇಷೆಯು ಚಕಿತಳಾದಳು. ತನ್ನ ಹಡಗವು ಮುಣುಗುತ್ತಿರುವದೆಂಬ ಸಂಗತಿಯು ಆಕೆಗೆ ಗೊತ್ತಾಗಿದ್ದಿಲ್ಲ. ಆಗ ಉಸ್ಮಾನನು ಗಟ್ಟಿಯಾಗಿ ಆಯೇಷೆಯನ್ನು ಕುರಿತು– ಆಯೇಷೇ, ಕೋಣೆಯೊಳಗಿಂದ ಹೊರಟು ಹೊರಗೆ ಬೈಲಿಗೆ ಬಾ, ತಡಮಾಡಬೇಡ. ಕೋಣೆಯೊಳಗೆ ಯಾರಿದ್ದೀರಿ? ನವಾಬ ಕುವರಿಯನ್ನು ಬೇಗನೇ ಹೊರಗೆ ಕರಕೊಂಡು ಬರ್ರಿ. ಎಂದು ಹೇಳಿದನು. ಇಷ್ಟರಲ್ಲಿ ಉಸ್ಮಾನನು ಕುತ್ತಿಗೆಮುಟ ನೀರೊಳಗೆ ಬಂದಿದ್ದನು. ಆಯೇಷೆಯು ಉಸ್ಮಾನನ ಸೂಚನೆಯಂತೆ ತನ್ನ ದಾಸಿಯೊಡನೆ ಕೋಣೆಯ ಹೊರಗೆ ಬರಲು, ಆಕೆಯ ಕಣ್ಣಿಗೂ ಆ ಅನರ್ಥ ಪ್ರಸಂಗವು ಬಿದ್ದು, ಉಸ್ಮಾನನು ನೀರಲ್ಲಿ ಈಸಿ ಬರುವದರ ಕಾರಣವು ಆಕೆಗೆ ಗೊತ್ತಾಯಿತು. ಆಗ ಆಕೆಯು ಕನಿಕರದಿಂದ ಉಸ್ಮಾನನ್ನು ಕುರಿತು–ಉಸ್ಮಾನ, ಇದೇನು ಮಾಡುತ್ತಿರುವಿರಿ? ನೀರಲ್ಲಿ ಇಷ್ಟು ದೂರ ಬರುವ ಕಾರಣವೇನು? ನನ್ನ ಮೇಲೆ ಅನುಗ್ರಹಮಾಡಿ ನೀವು ದಂಡೆಗೆ ಹೋಗಬೇಕು, ಎಂದು ನುಡಿಯಲು, ಈಸುತ್ತ ಹಡಗದ ಕಡೆಗೆ ಭರದಿಂದ ಸಾಗಿದ್ದ ಉಸ್ಮಾನನು

ಆಯೇಷೆಗೆ–ನಿನ್ನನ್ನು ಬದುಕಿಸಿಕೊಂಡು ದಂಡೆಗೆ ಹೋಗಲು ಸಮರ್ಥನಾದರೆ ಮಾತ್ರ ನಾನು ತಿರುಗಿ ದಂಡೆಯನ್ನು ಕಾಣುವೆನು. ಇಲ್ಲದಿದ್ದರೆ ನಿನ್ನೊಡನೆಯೇ ಈ ಪವಿತ್ರ ಜಲದಲ್ಲಿ ನನ್ನ ಗೋರಿಯು! ಎಂದು ಉತ್ತರ ಕೊಟ್ಟನು. ಉಸ್ಮಾನನ ಈ ಉತ್ತರವು ಮುಗಿಯುವ ದೊಳಗಾಗಿಯೇ ನಾವಿಕರು ''ಘಾತವಾಯಿತೆ''ಂದು ಗಟ್ಟಿಯಾಗಿ ಕೂಗಿದರು. ಆಯೇಷೆಯು ''ತಿರುಗಿ ಹೋಗಿರಿ, ತಿರುಗಿ ಹೋಗಿರಿ'' ಎಂದು ಕೈಸನ್ನೆಯಿಂದ ಉಸ್ಮಾನನಿಗೆ ತಿಳಿಸಹತ್ತಿದಳು, ಆಕೆಯ ಸಖಿಯು ಆಕ್ರೋಶ ಮಾಡತೊಡಗಿದಳು; ಅಷ್ಟರಲ್ಲಿ ಹಡಗವು ನದಿಯ ತಳವನ್ನು ಕಂಡು ನೋಡಿದತ್ತೆಲ್ಲ ಹಾಹಾಕಾರವು ಉತ್ಪನ್ನವಾಯಿತು.

ನಾವಿಕರಲ್ಲಿ ಕೆಲವರು ಈಸಿ ದಂಡೆಗೆ ಬರುವ ಪ್ರಯತ್ನ ಮಾಡತೊಡಗಿದರು. ಹಡಗವು ಮುಳುಗಿದ ಸ್ಥಳಕ್ಕೆ ಸಹಾಯಾರ್ಥವಾಗಿ ಮತ್ತೊಂದು ಹಡಗವು ಬಂದಿತು. ಅವರಲ್ಲಿ ಎಷ್ಟೋಜನ ಸಾಹಸಿಗರು ನೀರಲ್ಲಿ ಮುಳುಗಿದವರನ್ನು ಬದುಕಿಸುವದಕ್ಕಾಗಿ ನೀರಲ್ಲಿ ಹಾರಿಕೊಂಡರು. ಕೆಲವು ಹೊತ್ತಿನ ಮೇಲೆ ಉಸ್ಮಾನಖಾನನು ನೀರಮೇಲೆ ಕಂಡನು; ಆದರೆ ಈಸುವ ತ್ರಾಣವು ಆತನಲ್ಲಿ ಎಷ್ಟುಮಾತ್ರವೂ ಇದ್ದಿಲ್ಲ, ಕೈಗಳು ಸೋತು ಆತನು ನೀರು ಗುಟುಕರಿಸಹತ್ತಿದನು. ಆತನು ತನ್ನ ಬೆನ್ನಿಗೆ ಕಟ್ಟಿಕೊಂಡಿದ್ದ ಬಹುಭಾರದ ಪದಾರ್ಥವು ನೀರೊಳಗೆ ಜಗ್ಗುತ್ತಿದ್ದದ್ದ ರಿಂದ, ಆತನ ಈಸುವ ಅವಸಾನವು ತೀರ ಅಳಿದುಹೋಗಿತ್ತು, ಜೀವ ಹೋಗುವ ಕಾಲಕ್ಕೆ ಮನುಷ್ಯನಿಗೆ ಶ್ವಾಸವು ಹತ್ತುವಂತೆ ಉಸ್ಮಾನನಿಗೆ ಶ್ವಾಸವು ಹತ್ತಿತು. ಆತನಿಗೆ ಮಾತಾಡುವ ತ್ರಾಣ ಸಹ ಇದ್ದಿಲ್ಲ, ಉಸ್ಮಾನಖಾನನ ಈ ಕಷ್ಟಮಯ ಸ್ಥಿತಿಯನ್ನು ನೋಡಿ ಒಬ್ಬ ನಾವಿಕನು ತನ್ನ ನಾವೆಯನ್ನು ಆತನ ಬಳಿಗೆ ಸಾಗಿಸಿಕೊಂಡು ಹೋದನು. ನಾವಿನೊಳಗಿನವ ನೊಬ್ಬನು ತನ್ನ ಮೈಮೇಲಿನ ದೋತರದ ಒಂದು ತುದಿಯನ್ನು ಉಸ್ಮಾನಖಾನನ ಸಮೀಪಕ್ಕೆ ಒಗೆದನು. ಖಾನನು ಆ ವಸ್ತ್ರವನ್ನು ಹಿಡಿದ ಕೂಡಲೇ ಆ ಮನುಷ್ಯನು ಖಾನನನ್ನು ಜಗ್ಗಿಕೊಂಡನು. ಖಾನನು ನಾವಿನ ಸಮೀಪಕ್ಕೆ ಬಂದಕೂಡಲೇ ಮತ್ತೊಬ್ಬನು ಬಗ್ಗಿ ಖಾನನಿಗೆ ಕೈಕೊಟ್ಟು, ಮತ್ತೆ ಕೆಲವರ ಸಹಾಯದಿಂದ ಆತನನ್ನು ಮೇಲಕ್ಕೆ ಎಳಕೊಂಡನು. ಈ ಕಾಲದಲ್ಲಿ ಖಾನನ ಮೈಮೇಲೆ ಎಚ್ಚರವಿದ್ದಿಲ್ಲ, ಖಾನನು ತನ್ನ ವಸ್ತ್ರದ ಪದರಿನಿಂದ ಆಯೇಷೆಯನ್ನು ತನ್ನ ಟೊಂಕಕ್ಕೆ ಕಟ್ಟಿಕೊಂಡಿದ್ದನು. ಕೆಲವು ಹೊತ್ತಿನಮೇಲೆ ಉಸ್ಮಾನಖಾನನಿಗೆ ಎಚ್ಚರವಾಯಿತು. ಕೂಡಲೇ ಆತನು ಆಯೇಷೆಯ ವೃತ್ತಾಂತವನ್ನು ವಿಚಾರಿಸಿದನು. ಆಯೇಷೆಯು ಇನ್ನೂ ಎಚ್ಚತ್ತಿರದಿದ್ದರೂ, ಆಕೆಯು ಜೀವದಿಂದಿರುವಳೆಂಬ ವರ್ತಮಾನವನ್ನು ಕೇಳಿ ಉಸ್ಮಾನನಿಗೆ ಬಹಳ ಸಂತೋಷವಾಯಿತು. ಆಗ ಆತನು– ''ನಾವಿಬ್ಬರಂತು ಬದುಕಿದೆವು; ಆದರೆ ಆಯೇಷೆಯ ದಾಸಿಯನ್ನು ಯಾರಾದರೂ ಬದುಕಿಸಿದರೆ, ಅವರಿಗೆ ಬಹು ದೊಡ್ಡ ಇನಾಮು ಕೊಡುವೆನು.'' ಎಂದು ಹೇಳಿದನು. ಅದನ್ನು ಕೇಳಿ ನಾವಿನೊಳಗಿದ್ದವರಲ್ಲಿ ಕೆಲವರು– ''ಆಕೆಯನ್ನು ನಾವು ಬದುಕಿಸಿದ್ದೇವೆ'' ಎಂದು ಹೇಳಿದರು. ಆಯೇಷೆಯ ಮೈಮೇಲಿನ ವಸ್ತ್ರಗಳು ಯಥಾಸ್ಥಿತವಾಗಿ ಇದ್ದವು. ಸಂಗಮರವರಿಯ ಸುಂದರವಾದ ಪುತ್ತಳಿಯಂತೆ ಆಯೇಷೆಯನ್ನು ನಾವಿನಲ್ಲಿ ಮಲಗಿಸಿದ್ದರು. ಉಸ್ಮಾನನು ಆಕೆಯ ಬಳಿಯಲ್ಲಿ

ಕುಳಿತು ಯೋಗ್ಯ ಉಪಚಾರಗಳನ್ನು ಮಾಡತೊಡಗಲು, ಮೆಲ್ಲ ಮೆಲ್ಲನೆ ಆಯೇಷೆಯು ಎಚ್ಚರಿಯುತ್ತ ಕಡೆಗೆ ಪೂರ್ಣವಾಗಿ ಎಚ್ಚತ್ತಳು. ಉಸ್ಮಾನನು ಆಕೆಯನ್ನು ತನ್ನ ಅಂತರ್ಗೃಹಕ್ಕೆ ಕರಕೊಂಡು ಹೋದನು.

ಈ ಮೇರೆಗೆ ಆಯೇಷೆಯು ನೀರಿನ ಬಹು ದೊಡ್ಡ ಗಂಡಾಂತರದಿಂದ ಪಾರಾದರೂ, ಭಯಂಕರವಾದ ಜ್ವರದ ಬಾಧೆಯಿಂದ ಆಕೆಯು ಬಹಳವಾಗಿ ದಣಿದುಕೊಳ್ಳಬೇಕಾಯಿತು. ದೊಡ್ಡ ದೊಡ್ಡ ಹಕೀಮರು ಯಾವಾಗಲೂ ಆಕೆಯ ಬಳಿಯಲ್ಲಿ ಕುಳಿತು ಉಪಚಾರ ಮಾಡಿದರು. ಉಸ್ಮಾನನಂತು ಅನ್ನ ನೀರಿನ ಪರಿವೆಯಿಲ್ಲದೆ ಆಯೇಷೆಯ ಶುಶ್ರೂಷೆಯನ್ನು ಮಾಡಿದನು. ಆಯೇಷೆಯು, ನವಾಬನ ರಾಜಧಾನಿಯ ಅಲಂಕಾರವೂ, ಎಲ್ಲರ ನೇತ್ರಕ್ಕೆ ಆನಂದವನ್ನುಂಟು ಮಾಡುವವಳೂ, ಸರ್ವರ ಚಿತ್ತವನ್ನು ಸುಪ್ರಸನ್ನಗೊಳಿಸುವವಳೂ ಇದ್ದದ್ದರಿಂದ, ಆಕೆಯ ಬೇನೆಯ ಕಾಲದಲ್ಲಿ ಅಂತರ್ಗೃಹದೊಳಗಿನ ಜನರೆಲ್ಲ ಉದಾಸೀನರಾಗಿದ್ದರು. ಕಾತಲೂಖಾನನ ಯಾವತ್ತೂ ಬೇಗಮೆಯರು ದುಃಖಿತರಾಗಿದ್ದರು. ಕಾಶ್ಮಿರೀ ಬೇಗಮೆಗಂತು ಹಗಲು ರಾತ್ರಿ ನಿದ್ದಿಯಿದ್ದಿಲ್ಲ. ಇವರಂತು ಇರಲಿ, ಯಾವಾಗಲೂ ವಿಷಯ ಸುಖದಲ್ಲಿ ಮಗ್ನನಾಗಿರುತ್ತಿದ್ದ ಸುಲೇಮಾನ ಖಾನನೂ ಸಹ ಆಯೇಷೆಯ ಅಸ್ವಸ್ಥತೆಯನ್ನು ಕೇಳಿ ದುಃಖಿತನಾಗಿದ್ದನು. ಆತನು ಮದ್ಯ ಪಾತ್ರೆಯನ್ನು ಪರಿತ್ಯಜಿಸಿ, ಸುಂದರ ಸ್ತ್ರೀಯರ ಕ್ರೀಡಾ ಕೌತುಕಗಳನ್ನು ಬದಿಗೊತ್ತಿ ದಿನಕ್ಕೆ ಎಷ್ಟೋಸಾರೆ ಆಯೇಷೆಯ ಯೋಗಕ್ಷೇಮವನ್ನು ವಿಚಾರಿಸುವದಕ್ಕಾಗಿ ಬರತೊಡಗಿದನು. ಮೇಲೆ ಹೇಳಿದಂತೆ ಉಸ್ಮಾನನಂತು ಎಲ್ಲವನ್ನು ಬಿಟ್ಟು ಕೊಟ್ಟು, ಹಗಲು-ರಾತ್ರಿ ಆಯೇಷೆಯ ಸೇವೆಯಲ್ಲಿ ತತ್ಪರನಾಗಿದ್ದನು. ಆತನಿಗೆ ಎಲ್ಲಿಯ ರಾಜ್ಯ, ಎಲ್ಲಿಯ ಒಡಂಬಡಿಕೆ, ಎಲ್ಲಿಯ ಉತ್ಸಾಹ, ಎಲ್ಲಿಯ ಆನಂದ ಅನ್ನುವಹಾಗೆ ಆಗಿತ್ತು. ಎಲ್ಲವನ್ನು ಆತನು ಮರೆತು ಬಿಟ್ಟಿದ್ದನು. ಒಂದು ದಿವಸವಾಯಿತು, ಎರಡು ದಿವಸವಾಯಿತು; ತಿಂಗಳುಗಟ್ಟಲೆ ಆಯೇಷೆಯು ಬೇನೆಯಿಂದ ಬಳಲಿದಳು. ಈ ಅವಧಿಯಲ್ಲಿ ಎಷ್ಟೋ ಸಾರೆ ಆಕೆಯ ಜೀವಹೋಗಿ ಜೀವವು ಬಂದಿತು. ಕಡೆಗೆ ದೇವರ ಕೃಪೆಯಿಂದ ಆಯೇಷೆಗೆ ಗುಣವಾಗ ಹತ್ತಿತು. ಬರಬರುತ್ತ ಆಕೆಯ ಪ್ರಕೃತಿಯು ಸುಧಾರಿಸುತ್ತ ಹೋಗಿ, ಆಕೆಯ ನಷ್ಟವಾಗಿದ್ದ ಶರೀರದ ಸೌಂದರ್ಯವು ಪುನಃ ಪ್ರಾಪ್ತವಾಯಿತು. ಆಯೇಷೆಗೆ ಗುಣವಾಗುತ್ತ ಹೋದಂತೆ ಉಸ್ಮಾನನು ಆಯೇಷೆಯ ಬಳಿಗೆ ಹೋಗುವದನ್ನು ಕಡಿಮೆ ಮಾಡಿದನು. ಆಯೇಷೆಗೆ ಪೂರ್ಣ ಗುಣವಾದ ಬಳಿಕಂತು ಆತನು ಆಯೇಷೆಯ ಬಳಿಗೆ ಹೋಗುವದನ್ನು ಬಿಟ್ಟುಬಿಟ್ಟನು.

ಒಂದು ದಿನ ಮಧ್ಯಾಹ್ನದ ಹನ್ನೆರಡು ಗಂಟೆಯ ಹೊತ್ತಾಗಿರಬಹುದು. ಆಗ ಆಯೇಷೆಯು ಒಬ್ಬಳೇ ತನ್ನ ಕೋಣೆಯಲ್ಲಿ ಕುಳಿತುಕೊಂಡಿದ್ದಳು. ಆಕೆಯ ಬಳಿಯಲ್ಲಿ ದಾಸಿಯರು ಸಹ ಯಾರೂ ಇದ್ದಿಲ್ಲ. ಆಕೆಯು ತನ್ನೊಳಗೇ ಏನೋ ವಿಚಾರಿಸುತ್ತಿದ್ದಳು. ಅಷ್ಟರಲ್ಲಿ ಉಸ್ಮಾನನು ಬಾಗಿಲಲ್ಲಿ ನಿಂತದ್ದು ಆಕೆಯ ಕಣ್ಣಿಗೆ ಬಿದ್ದಿತು. ಆಗ ಉಸ್ಮಾನನು ಆಯೇಷೆಯನ್ನು ಕುರಿತು-

ಉಸ್ಮಾನ-ಆಯೇಷೇ, ನಿನ್ನ ಪ್ರಕೃತಿಯು ನೆಟ್ಟಗಿರುವದಷ್ಟೇ?

ಆಯೇಷೆ–ನೆಟ್ಟಗದೆ, ಉಸ್ಮಾನ ಒಳಗೆ ಬರ್‍ರಿ.

ಉಸ್ಮಾನ–ನೀನು ಒಬ್ಬಳೇ ಕುಳಿತುಕೊಂಡಿರುವೆಯೇನು? ಒಳ್ಳೇದು ಕುಳಿತುಕೋ. ನಾನು ಈಗ ಒಳಗೆ ಬರುವದಿಲ್ಲ, ಮತ್ತೆ ಯಾವಾಗಾದರೂ ಬಂದೇನಂತೆ.

ತಾನು ಒಬ್ಬಳೇ ಕುಳಿತಿರುವದರಿಂದ ಉಸ್ಮಾನನು ಒಳಗೆ ಬರುವದಕ್ಕೆ ಸಂಕೋಚ ಪಡುವದನ್ನು ನೋಡಿ, ಆಯೇಷೆಯು ಕೋಣೆಯ ಬಾಗಿಲಿಗೆ ಬಂದು ಆತುರದಿಂದ ಉಸ್ಮಾನನಿಗೆ–ಉಸ್ಮಾನ ಒಳಗೆ ಬರ್‍ರಿ. ನಿಮ್ಮ ಸಂಗಡ ನಾನು ಬಹಳ ಮಾತಾಡಬೇಕಾಗಿದೆ, ಅನ್ನಲು, ಉಸ್ಮಾನನು ಅಸಮ್ಮತಿಯನ್ನು ಪ್ರಕಟಿಸದೆ, ಒಳಗೆ ಬಂದು ದೂರ ನಿಂತುಕೊಂಡನು. ಒಂದು ಮಂಚದ ಹೊರತು ಎರಡನೆಯ ಆಸನವು ಕುಳಿತುಕೊಳ್ಳಲಿಕ್ಕೆ ಅಲ್ಲಿ ಇದ್ದಿಲ್ಲ. ಅದೇ ಮಂಚದ ಮೇಲೆ ಕುಳಿತುಕೊಳ್ಳುವದಕ್ಕಾಗಿ ಆಯೇಷೆಯು ಆಗ್ರಹ ಮಾಡಹತ್ತಿದಳು. ಅದಕ್ಕೆ ಉಸ್ಮಾನನು ಆಯೇಷೇ, ನೀನೇ ಕುಳಿತುಕೋ. ನನಗೆ ನಿಂತುಕೊಳ್ಳುವ ಅಭ್ಯಾಸವಿರುವದರಿಂದ, ನಾನು ಇಲ್ಲಿ ನಿಂತುಕೊಂಡೇ ನೀನಾಡುವ ಮಾತುಗಳನ್ನು ಅವಶ್ಯವಾಗಿ ಕೇಳುತ್ತೇನೆ. ಎನ್ನಲು, ಆಯೇಷೆಯು–ಉಸ್ಮಾನ ನನ್ನಲ್ಲಿ ಇಷ್ಟು ಪರಕೀಯತ್ವವನ್ನು ಭಾವಿಸುವ ಕಾರಣವಿಲ್ಲ. ನನ್ನ ಸಂಗಡ ಇಷ್ಟು ಸಂಕೋಚದ ನಡತೆಯೇಕೆ? ನೀವು ನನಗೆ ಇಷ್ಟು ಬಹುಮಾನ ಕೊಡುವ ಕಾರಣವಿಲ್ಲ. ನೀವು ಈ ಮಂಚದ ಮೇಲೆ ಕುಳಿತುಕೊಳ್ಳಲೇ ಬೇಕು; ಎಂದು ಆಗ್ರಹ ಮಾಡಿದಳು. ಆಗ ಉಸ್ಮಾನನು ನಿರ್ವಾಹವಿಲ್ಲದೇ ಮಂಚದ ಮೇಲೆ ಕುಳಿತುಕೊಂಡನು. ಆಯೇಷೆಯಾದರೂ ಅದೇ ಮಂಚದ ಮೇಲೆ ಕುಳಿತು ಕೊಂಡದ್ದನ್ನು ನೋಡಿ, ಆತನಿಗೆ ಬಹಳ ಆಶ್ಚರ್ಯವಾಯಿತು. ಆಗ ಆಯೇಷೆಯು ಉಸ್ಮಾನನನ್ನು ಕುರಿತು–

ಆಯೇಷೆ– ನಾನು ಇಷ್ಟುದಿವಸ ನಿರ್ವಾಹವಿಲ್ಲದೆ ನಿಮ್ಮನ್ನು ಬಿಟ್ಟು ಹೋಗಿದ್ದೆನು. ಬೇನೆಬಿದ್ದದ್ದರಿಂದ ನಿಮ್ಮ ಸಂಗಡ ಮಾತಾಡುವದೂ ಆಗಿದ್ದಿಲ್ಲ; ಆದರೆ ಉಸ್ಮಾನ, ನಾನು ನಿಮ್ಮ ಅಧಿಕಾರಕ್ಕೆ ಒಳಪಟ್ಟಿದ್ದ ಒಬ್ಬ ಸ್ತ್ರೀಯಿದ್ದು, ನಿಮ್ಮ ಇಚ್ಛೆಗೆ ವಿರುದ್ಧವಾಗಿ ನಿಮ್ಮನ್ನು ಆಗಲಿ ಹೋದದ್ದು ಮಹಾಪರಾಧವು. ಆ ಅಪರಾಧವನ್ನು ನೀವು ದಯಮಾಡಿ ಕ್ಷಮಿಸಬೇಕು.

ಉಸ್ಮಾನ–ಆಯೇಷೆಯ ಅಪರಾಧವೇ ನನ್ನ ಮನಸ್ಸಿಗೆ ಗೋಚರವಾಗದಿರಲು, ನಾನು ಕ್ಷಮಿಸುವದಾದರೂ ಏನು? ಆಯೇಷೇ, ನೀನು ತಿರುಗಿ ನಮ್ಮ ಬಳಿಗೆ ಬಂದದ್ದರಿಂದ ನಮ್ಮ ಹೋದ ಪ್ರಾಣವು ತಿರುಗಿ ಬಂದಹಾಗಾಯಿತು. ನಿನ್ನ ಸಂಗಡ ನಮ್ಮ ಯಾವತ್ತೂ ಶೌರ್ಯ, ಧೈರ್ಯ, ಉತ್ಸಾಹ, ಸಾಮರ್ಥ್ಯ ಇವೆಲ್ಲ ಹೊರಟು ಹೋಗಿದ್ದವು. ಇಂಥ ಪ್ರಸಂಗದಲ್ಲಿ ಪಠಾಣರು ಸೋತದ್ದು ಸ್ವಾಭಾವಿಕವೇ ಸರಿ. ಕುಮಾರ ಜಗತ್ಸಿಂಗನು ಮಹಾ ಭಾಗ್ಯಶಾಲಿಯು. ಆತನು ನಿನ್ನ ಅಂತಃಕರಣವನ್ನು ಪೂರ್ಣವಾಗಿ ಆಕರ್ಷಿಸಿಕೊಂಡಿರುತ್ತಾನೆಂಬದ್ದು ನಾನು ಬಲ್ಲೆನು. ನೀನು ಆತನ ಹಿತವನ್ನು ಸಾಧಿಸುವದಕ್ಕಾಗಿ ಹೋದದ್ದು ನನಗೆ ಅಸಮ್ಮತವೂ ಆಗಿರುವದಿಲ್ಲ. ನಿನ್ನ ಪ್ರಯತ್ನದಿಂದ ಕುಮಾರನ ಬಂಧವಿಮೋಚನೆಯಾದರೆ, ನೀನು ನನ್ನ ಮೇಲೆ ಒಂದು ಬಗೆಯಿಂದ ಮಹದುಪಕಾರ ಮಾಡಿದಂತೆ ಆಗುವದು.

ಉಸ್ಮಾನನ ಈ ಮಾತುಗಳನ್ನು ಕೇಳಿ ಆಯೇಷೆಗೆ ಬಹಳ ಸಂತೋಷವಾಯಿತು. ತನ್ನ ಪ್ರಾಣೇಶ್ವರನನ್ನು ಕೊಲ್ಲಬೇಕೆಂದು ಪ್ರತಿಜ್ಞೆ ಮಾಡಿದ ಉಸ್ಮಾನನು, ಈಗ ಕುಮಾರನ ಬಂಧವಿಮೋಚನೆಯ ವಿಷಯವಾಗಿ ಸಮಾಧಾನಪಡುವದನ್ನು ನೋಡಿ ಆಕೆಯು ಉಲ್ಲಾಸ ಪಟ್ಟಳು. ಆಕೆಯು ಕೌತುಕದಿಂದ ಉಸ್ಮಾನನನ್ನು ಕುರಿತು–

ಆಯೇಷೆ- ಉಸ್ಮಾನ, ಇದರಲ್ಲಿ ಉಪಕಾರವೇತರದು?

ಉಸ್ಮಾನ–ನಾನು ಜಗತ್ಸಿಂಗನನ್ನು ಕೈಮುಟ್ಟಿ ಕೊಲ್ಲುವ ಪ್ರತಿಜ್ಞೆ ಮಾಡಿರುವದನ್ನು ನೀನು ಬಲ್ಲೆಯಷ್ಟೇ? ಆತನನ್ನು ಕೊಲ್ಲುವ ಇಚ್ಛೆಯಿಂದಲೇ ನಾನು ಪ್ರಾಣಧಾರಣ ಮಾಡಿರುವೆನೆಂದು ಹೇಳಿದರೂ ಒಂದು ಪಕ್ಷದಲ್ಲಿ ಹೇಳಬಹುದಾಗಿದೆ. ಜಗತ್ಸಿಂಗನು ಮರಣಪರ್ಯಂತರ ಕಾರಾಗೃಹದಲ್ಲಿದ್ದರೆ, ಆತನನ್ನು ಕೊಲ್ಲುವ ಸಂಧಿಯು ನನಗೆ ಎಲ್ಲಿ ದೊರೆಯುತ್ತಿತ್ತು ಹೇಳು? ಅಂದಬಳಿಕ ನೀನು ನನ್ನಮೇಲೆ ಉಪಕಾರ ಮಾಡಿದ ಹಾಗಾಗಲಿಲ್ಲವೋ?

ಉಸ್ಮಾನನ ಈ ಮಾತುಗಳನ್ನು ಕೇಳಿ ಆಯೇಷೆಗೆ ಬಹು ವ್ಯಸನವಾಯಿತು. ಆಕೆಯ ಕೋಮಲ ಹೃದಯವು ಕರಗಿ ಕಣ್ಣೀರುಗಳು ಹೊರಬೀಳತೊಡಗಲು, ಆಕೆಯು ಒತ್ತಟ್ಟಿಗೆ ಮೋರೆ ತಿರುಗಿಸಿದಳು. ಕೂಡಲೇ ಬಳಬಳ ಕಣ್ಣೀರುಗಳು ಸುರಿದವು. ಆಕೆಯು ಅವನ್ನು ಉಸ್ಮಾನನಿಗೆ ತೋರಗೊಡದೆ ಮೆಲ್ಲನೆ ಒರಿಸಿಕೊಂಡು ತಲೆಬಾಗಿಸಿ ಸುಮ್ಮನೆ ಕುಳಿತುಕೊಂಡಳು. ಆಕೆಯ ಈ ದುಃಖದ ಸ್ಥಿತಿಯನ್ನು ನೋಡಿ ಉಸ್ಮಾನನ ಹೃದಯವೂ ಕರಗಿತು, ಆತನು ಕನಿಕರದಿಂದ ಆಯೇಷೆಯನ್ನು ಕುರಿತು–

ಉಸ್ಮಾನ–ಆಯೇಷೇ, ನಿನ್ನ ಮನಸ್ಸನ್ನು ನೋಯಿಸುವ ಇಚ್ಛೆಯು ನನಗಿಲ್ಲ. ನಿನ್ನೊಡನೆ ನನ್ನ ವಿವಾಹವಾಗುವ ಯೋಗವು ಇಲ್ಲವೇ ಇಲ್ಲವೆಂಬದನ್ನು ನಾನು ಬಲ್ಲೆನು; ಆದರೂ ನಿನ್ನ ಮೇಲಿನ ನನ್ನ ಪ್ರೇಮವು ಸ್ವಲ್ಪವೂ ಕುಂದಿರುವದಿಲ್ಲ, ಅಂದಬಳಿಕ ನನಗೆ ಪರಮ ಪ್ರಿಯಳಾಗಿರುವ ನಿನ್ನನ್ನು ದುಃಖಸಾಗರದಲ್ಲಿ ಕೆಡವುವದಕ್ಕಾಗಿ ನಾನು ಕುಮಾರ ಜಗತ್ಸಿಂಗನನ್ನು ಕೊಲ್ಲುವದು ಯೋಗ್ಯವಲ್ಲೆಂದು ಈ ಮೊದಲೇ ನಿರ್ಧರಿಸಿದ್ದೇನೆ. ಆತನೂ ಒಂದು ಬಗೆಯಿಂದ ನನಗೆ ಬಂಧುವೇ ಸರಿ; ಆದರೆ ಆಯೇಷೇ, ಕುಮಾರನು ತಾನಾಗಿ ನನ್ನೊಡನೆ ಯುದ್ಧಮಾಡಲು ಇಚ್ಛಿಸಿದ ಪಕ್ಷದಲ್ಲಿ, ನಾನು ಒಲ್ಲೆನೆನ್ನುವದಾದರೂ ಹ್ಯಾಗೆ ಹೇಳು? ಯುದ್ಧ ಪ್ರಸಂಗವೇ ಒದಗಿದ ಪಕ್ಷದಲ್ಲಿ ವೀರರಿಗೆ ಉಚಿತವಾದ ರಣಕರ್ಮವನ್ನು ನಾನು ಮಾಡಲೇಬೇಕಾಗುವದು. ಆಗ ನನ್ನ ಪ್ರತಿಜ್ಞೆಯು ಪೂರ್ಣವಾಗಲಿಕ್ಕೆ ನಾನು ವಿಶ್ವಪ್ರಯತ್ನ ಮಾಡದೇಯಿರೆನು.

ಆಯೇಷೆ–ಉಸ್ಮಾನ, ನಿಮ್ಮಂಥ ಉದಾರಾಂತಃಕರುಣದ ಪುರುಷರು ಈ ಭೂತಲದಲ್ಲಿ ಹುಟ್ಟುವದು ಅಪರೂಪವೇ ಸರಿ. ನಿಮ್ಮಂಥ ಸತ್ಪುರುಷರಿಗೆ ದುಃಖಕೊಡುವದಕ್ಕಾಗಿ ನಾನೇಕೆ ಜನ್ಮವೆತ್ತಿರಬಹುದು? ನನ್ನಿಂದ ಯಾರಿಗೂ ಹಿತವಾಗಿರುವದಿಲ್ಲ, ಹತಭಾಗ್ಯಳಾದ ನನ್ನ ಕಾಲಲ್ಲಿ ಮೊದಲಿನಿಂದ, ಜಗಳಗಳು, ಯುದ್ಧಗಳು, ಹಲವು ಪ್ರಕಾರದ ಸಂಕಟಗಳು ಉತ್ಪನ್ನವಾಗುತ್ತ ಬಂದಿರುವವು. ಪ್ರಿಯಬಂಧು, ಉಸ್ಮಾನ, ನೀವು ಹಗಲು ರಾತ್ರಿ ವಿರಹ ವ್ಯಥೆಯಿಂದ ಕುದಿಯುತ್ತಿರುವದು ನನ್ನ ಕಾಲಲ್ಲಿಯೇ ಅಲ್ಲವೆ? ಇಂಥ ಕೃತಘ್ನಳನ್ನು ನೀವು ಹಲವುಸಾರೆ

ಗಂಡಾಂತರದಿಂದ ಪಾರುಮಾಡಿದಿರಲ್ಲ! ನನ್ನ ಸಲುವಾಗಿ ಇಷ್ಟು ಔದಾರ್ಯವನ್ನು ಯಾಕೆ ತೋರಿಸಿದಿರಿ?

ಉಸ್ಮಾನ– ಆಯೇಷೆ, ನೀನು ಪ್ರೇಮದ ಮಹಿಮೆಯನ್ನು ಅರಿಯದವಳಲ್ಲ, ನೀನೇ ಹೇಳು. ರಾಜಕುಮಾರ ಜಗತ್ಸಿಂಗನು ನಿನ್ನನ್ನು ಪ್ರೀತಿಸದಿದ್ದರೂ, ಆತನ ಕಾರಾಗೃಹ ವಾಸದ ಸುದ್ದಿಯನ್ನು ಕೇಳಿದ ಕೂಡಲೆ ನೀನು ತಟ್ಟನೇ ಹೊರಟುಹೋಗಿ ಆತನ ಬಂಧವಿಮೋಚನಕ್ಕಾಗಿ ಯಾಕೆ ಯತ್ನಿಸಿದೆ? ನಿನ್ನ ಪ್ರಿಯಕರನ ಕಾರಾಗೃಹವಾಸವನ್ನು ನೋಡುವದು ನಿನ್ನಿಂದ ಆಗದಿರಲು, ನನಗೆ ಪ್ರಾಣಕ್ಕಿಂತಲೂ ಅಧಿಕ ಪ್ರಿಯಳಾಗಿರುವ ನೀನು ಸಾವಿಗೀಡಾಗಿರುವಾಗ, ನಾನು ಹ್ಯಾಗೆ ಸುಮ್ಮನಿರಬೇಕು ನೀನೇ ಹೇಳು.

ಆಯೇಷೆ– ಉಸ್ಮಾನ, ನಿಮ್ಮ ಈ ಔದಾರ್ಯದ ಉಪಕೃತಿಗಾಗಿ ನಾನು ಅತ್ಯಂತ ಕೃತಜ್ಞಳಾಗಿರುವೆನು. ನಿಮ್ಮ ಸುಖ–ದುಃಖಗಳೇ ನನ್ನ ಸುಖ–ದುಃಖಗಳು; ನಿಮ್ಮ ಲಾಭ–ಹಾನಿಗಳೇ ನನ್ನ ಲಾಭ–ಹಾನಿಗಳು; ಆದರೆ ಅಣ್ಣಾ ಉಸ್ಮಾನ, ನಮ್ಮಿಬ್ಬರ ಲಗ್ನವಾಗುವದು ಈ ಜನ್ಮದಲ್ಲಿ ಅಸಂಭವವಿದ್ದರೂ, ಬಂಧು–ಭಗಿನಿಯರಲ್ಲಿಯ ಪ್ರೇಮವು ನಮ್ಮಿಬ್ಬರಲ್ಲಿ ಅಭಿವೃದ್ಧವಾಗಲಿಕ್ಕೆ ಆತಂಕವೇನಿದೆ? ವಿಪತ್ಕಾಲದಲ್ಲಿ ನಾವಿಬ್ಬರೂ ಪರಸ್ಪರರಿಗೆ ಸಹಾಯವೇಕೆ ಮಾಡಬಾರದು? ನನ್ನನ್ನು ನಿಮ್ಮ ಅನುಚರಳೆಂದು ಭಾವಿಸಿರಿ. ನಿಮ್ಮ ಪ್ರತಿಯೊಂದು ಕಾರ್ಯದಲ್ಲಿ ಸಹಾಯ ಮಾಡಲಿಕ್ಕೆ ನಾನು ಹಿಂದೆ ಮುಂದೆ ನೋಡಲಾರೆನು. ಪ್ರಿಯ ಬಂಧೂ, ಇನ್ನು ಮೇಲೆ ನಾವಿಬ್ಬರೂ ಒಮ್ಮನಸ್ಸಿನಿಂದ ನಡೆಯೋಣ. ಇನ್ನು ಉಳಿದಿರುವ ನಮ್ಮ ಆಯುಷ್ಯವನ್ನು, ಕಳೆದುಕೊಂಡಿದ್ದ ನಮ್ಮ ರಾಜ್ಯವನ್ನು ತಿರುಗಿ ಸಂಪಾದಿಸುವ ಕೆಲಸದಲ್ಲಿ ಕಳೆಯೋಣ.

ಉಸ್ಮಾನ–ಆಯೇಷೆ, ಇಂದು ನೀನು ಈ ಹತಭಾಗ್ಯನನ್ನು ಆನಂದಗಿರಿಯ ಶಿಖರದ ಮೇಲೆ ಹತ್ತಿಸಿದೆ! ನಿನ್ನ ಮಾತುಗಳನ್ನು ಕೇಳಿ ನನಗೆ ಪರಮಾವಧಿ ಸಮಾಧಾನವಾಗಿದೆ, ನನಗೆ ಇನ್ನು ಯಾತರ ಇಚ್ಛೆಯೂ ಇರುವದಿಲ್ಲ, ನನ್ನ ಸುಖ–ದುಃಖಗಳಿಗೆಲ್ಲ ಆಯೇಷೆಯು ಪಾಲಗಾರಳಾಗಿ ರುತ್ತಾಳೆಂಬುದೊಂದೇ ಸಂಗತಿಯು ನನ್ನ ಸುಖ ಸರ್ವಸ್ವವಾಗಿರುತ್ತದೆ! ಇದಕ್ಕಿಂತ ಹೆಚ್ಚಿನದೇನೂ ನನಗೆ ಬೇಕಾಗಿರುವದಿಲ್ಲ.

ಆಯೇಷೆ– ಅಣ್ಣಾ ನಿನ್ನ ಶೀಲಕ್ಕೂ, ಪರಾಕ್ರಮಕ್ಕೂ ನಿನ್ನ ಈ ಮಾತುಗಳು ಬಹಳವಾಗಿ ಒಪ್ಪುವವು. ನಿನ್ನ ಅಲೌಕಿಕತೆಯನ್ನು ಎಷ್ಟು ಸ್ಮರಿಸಿದರೂ ನನಗೆ ಸಾಕಾಗದು; ಆದರೆ ಯುದ್ಧದಲ್ಲಿ ನಿನ್ನ ಕೈ ಬಿಟ್ಟಿರುವ ರಾಜ್ಯವು ಪುನಃ ನಿನ್ನ ಕೈಸೇರುವವರೆಗೆ ನನಗೆ ಸಮಾಧಾನವಾಗಲಾರದು. ನೀನು ಮೊದಲಿನಂತೆ ವೈಭವಶಾಲಿಯು ಹ್ಯಾಗೆ ಆದೀಯೆಂಬ ಚಿಂತೆಯು ಯಾವಾಗಲೂ ನನ್ನ ಮನಸ್ಸಿನಲ್ಲಿ ಕಟಿಯುತ್ತದೆ.

ಉಸ್ಮಾನ–ಇನ್ನುಮೇಲೆ ಈ ಮಾತಿನ ಚಿಂತೆ ನಿನಗೆ ಬೇಡ. ಇನ್ನು ನಾನು ತೋರಿಸುವ ಸಮರ ಚಾಪಲ್ಯವನ್ನು ನೋಡಿ ಶತ್ರುಗಳು ಬಟ್ಟು ಕಚ್ಚಬಹುದು; ನನ್ನ ಪ್ರತಾಪವನ್ನು ಸಹಿಸಲಾರದೆ ಅವರು ನನ್ನ ಮುಂದೆ ತಲೆಬಾಗಿಸಬೇಕಾದೀತು. ಆಯೇಷೆ, ಬಹಳ

ಮಾತುಗಳಿಂದ ಪ್ರಯೋಜ ನವೇನು? ಸಾಕ್ಷಾತ್ ಜಯಲಕ್ಷ್ಮಿಯೆನಿಸುವ ನೀನು ನನ್ನ ಪಕ್ಷದವಳಾಗಿರಲು, ನಾನು ಯಾರಿಗೆ ಸೊಪ್ಪು ಹಾಕೇನು ಹೇಳು? ಪ್ರತ್ಯಕ್ಷ ಅಕಬರ ಬಾದಶಹನು ಬಂದರೂ ಉಸ್ಮಾನನು ತನ್ನ ಖಂಬೀರತನವನ್ನು ಆತನಿಗೆ ತೋರಿಸದೆ ಬಿಡನೆಂಬದನ್ನೂ ಚೆನ್ನಾಗಿ ನೆನಪಿನಲ್ಲಿಡು.

ಈ ಮೇರೆಗೆ ಮಾತಾಡುತ್ತಿರುವಾಗ ಕಾಶ್ಮೀರೀ ಬೇಗಮೆಯು ಆಯೇಷೆಯನ್ನು ಕರೆದು– ''ಆಯೇಷೇ, ಔಷಧವನ್ನು ತಕ್ಕೊಳ್ಳುವ ಹೊತ್ತಾಯಿತು'' ಎಂದು ಸೂಚಿಸಿದಳು. ಅದನ್ನು ಕೇಳಿ ಆಯೇಷೆಯು ತನ್ನ ತಾಯಿಯನ್ನು ಒಳಗೆ ಬಾರೆಂದು ಕರೆಯಲು, ಆ ಕಾಶ್ಮೀರೀ ಬೇಗಮೆಯು ಒಳಗೆ ಬಂದಳು. ಆಕೆಯನ್ನು ನೋಡಿದ ಕೂಡಲೇ ಇಬ್ಬರೂ ಪಲ್ಲಂಗದಿಂದ ಇಳಿದು ನಿಂತುಕೊಂಡರು. ಅವರಿಬ್ಬರ ಮುಖದಲ್ಲಿ ಪ್ರಸನ್ನತೆಯ ಚಿಹ್ನವು ವ್ಯಕ್ತವಾಗುವದನ್ನು ನೋಡಿ ಬೇಗಮಳು ಬಹಳ ಸಂತೋಷಪಟ್ಟಳು. ಅವರಿಬ್ಬರ ಪ್ರಸನ್ನತೆಯನ್ನು ಆ ರಾಣಿಯು ಶುಭಸೂಚನೆಯೆಂದು ತಿಳಿದಳು.

ಬೇಗಮಳೊಡನೆ ಆಯೇಷೆಯು ಹೊರಟು ಹೋದಬಳಿಕ ಉಸ್ಮಾನನು ತನ್ನ ಅಣ್ಣನಾದ ಸುಲೇಮಾನನ ಬಳಿಗೆ ಹೋದನು. ತನ್ನ ಬಂಧುವು ಅನಾಯಾಸವಾಗಿ ಬಂದದ್ದಕ್ಕಾಗಿ ಸುಲೇಮಾನ ನನಿಗೆ ಬಹಳ ಸಂತೋಷವಾಯಿತು. ಅಣ್ಣನು ಯಾವಾಗಲೂ ವಿಷಯಾಸಕ್ತನಾಗಿರುವದರಿಂದ, ಉಸ್ಮಾನನು ಸಹಸಾ ಆತನ ಬಳಿಗೆ ಕರೆಯಿಸದೆ ಹೋಗುತ್ತಿದ್ದಿಲ್ಲ. ಅಂಥವನು ಈದಿನ ತಾನಾಗಿ ಹೋಗಲಿಕ್ಕೆ, ಆತನಲ್ಲಿ ಉಂಟಾದ ಯುದ್ಧೋತ್ಸಾಹವೇ ಕಾರಣವಾಯಿತು. ಆಯೇಷೆಯು ತನ್ನ ಅನುಚರಳಾಗಿ ತನ್ನ ಸುಖ–ದುಃಖಗಳ ಪಾಲುಗಾರಳಾದದ್ದೊಂದು ದೊಡ್ಡ ಬಲವೆಂದು ಆತನು ತಿಳಿದನು. ಈ ಆನಂದದ ವರ್ತಮಾನವನ್ನು ಹೇಳುವದಕ್ಕಾಗಿಯೇ ಆತನು ತನ್ನ ಅಣ್ಣನ ಬಳಿಗೆ ಬಂದಿದ್ದನು. ಶಿಷ್ಟಾಚಾರದಂತೆ ಆ ಬಂಧುಗಳ ಆದರೋಪಚಾರವಾದ ಬಳಿಕ ಉಸ್ಮಾನನು ತನ್ನ ಅಣ್ಣನಿಗೆ–ನವಾಬಸಾಹೇಬ, ಮೊಗಲರು ಕಸಿದುಕೊಂಡಿದ್ದ ನಮ್ಮ ರಾಜ್ಯಗಳನ್ನು ತಿರುಗಿ ಸಂಪಾದಿಸುವದಕ್ಕಾಗಿ ನಾನು ಇಂದಿನಿಂದಲೇ ಪ್ರಯತ್ನ ಮಾಡಬೇಕೆಂದು ನಿಶ್ಚಯಿಸಿದ್ದೇನೆ. ಆಯೇಷೆಯು ನಮ್ಮ ಬಳಿಗೆ ಬಂದದ್ದು ಜಯಲಕ್ಷ್ಮಿಯೇ ನಮ್ಮ ಬಳಿಗೆ ಬಂದಹಾಗಾಯಿತೆಂದು ನಾವು ತಿಳಿಯಬೇಕು. ಮೊಗಲರೊಡನೆ ಅಪಮಾನ ಕಾರಕವಾದ ಒಡಂಬಡಿಕೆಯನ್ನು ಮಾಡಿಕೊಂಡು ಅವರ ಮಾಂಡಲಿಕರಾಗಿ ನಾವು ಜೀವಿಸುವದಕ್ಕಿಂತ, ಸಮರಭೂಮಿಯಲ್ಲಿ ದೇಹವಿಡುವದು ಶ್ರೇಯಸ್ಕರವು. ಇದರಿಂದ ನಮ್ಮ ವಂಶದ ಕೀರ್ತಿಯನ್ನಾದರೂ ಕಾದುಕೊಂಡಂತಾಗುವದು, ಅನ್ನಲು, ಸುಲೇಮಾನನು ತನ್ನ ತಮ್ಮನ ಮಾತಿಗೆ ಒಪ್ಪಿಕೊಂಡನು. ಕೂಡಲೆ ಉಸ್ಮಾನನು ಯುದ್ಧದ ಸಿದ್ಧತೆಯನ್ನು ಮಾಡತೊಡಗಿದನು.

# ನೂತನ ಸುಬೇದಾರನು

ಆಯೇಷೆಯು ದಿಲ್ಲಿಗೆ ಹೋಗಿ ಕುಮಾರ ಜಗತ್ಸಿಂಗನ ಬಂಧವಿಮೋಚನೆಯ ಸಲುವಾಗಿ ಮಾಡಿದ ಪ್ರಯತ್ನವು ವ್ಯರ್ಥವಾಗಲಿಲ್ಲ. ಮಾನಸಿಂಹನು ತನ್ನ ಮಗನ ಅಪರಾಧಕ್ಕಾಗಿ ವಿಧಿಸಿದ ಕಠಿಣ ಶಿಕ್ಷೆಯು ಉದಾರಾಂತಃಕರಣದ ಅಕಬರ ಬಾದಶಹನಿಗೆ ಮೊದಲೇ ಸಮ್ಮತವಿದ್ದಿಲ್ಲ. ಅದರಲ್ಲಿ ಆಯೇಷೆಯಂಥ ಗುಣಾಢ್ಯಳು ಮಧ್ಯಸ್ಥಳಾದದ್ದರಿಂದತೂ ಬಾದಶಹನು ಜಗತ್ಸಿಂಗನ ಬಂಧವಿಮೋಚನೆಯ ಅಪ್ಪಣೆಯನ್ನು ಮಾನಸಿಂಹನ ಕಡೆಗೆ ಬಹು ಬೇಗನೆ ಕಳಿಸಿದನು. ಬಾದಶಹನು ತನ್ನ ಅಪ್ಪಣೆಯಲ್ಲಿ ಮಾನಸಿಂಹನಿಗೆ–''ನೀವು ಕುಮಾರನ ವಿಷಯವಾಗಿ ಇಷ್ಟು ಕಠಿಣ ಹೃದಯರಾದದ್ದು ನಮಗೆ ಸಮ್ಮತವಿಲ್ಲ. ಆತನ ಅಪರಾಧದ ಮಾನದಿಂದ ಆತನು ಇಷ್ಟು ದಿನ ಕಾರಾಗೃಹವಾಸದ ಶಿಕ್ಷೆಯನ್ನು ಭೋಗಿಸಿದ್ದೇ ಹೆಚ್ಚಾಯಿತು. ನಮ್ಮ ಈ ಹುಕುಮು ಮುಟ್ಟಿದ ಕೂಡಲೆ ಕುಮಾರನ ಬಂಧವಿಮೋಚನೆ ಮಾಡುವದಲ್ಲದೆ ಆತನನ್ನು ಬಂಗಾಲ, ಬಿಹಾರ, ಓಡಿಸಾ ಪ್ರಾಂತಗಳ ಸುಬೇದಾರನನ್ನಾಗಿ ನಿಯಮಿಸಿ, ನೀವು ಮತ್ತೊಂದು ಮಹತ್ವದ ಕೆಲಸವನ್ನು ವಹಿಸುವದಕ್ಕಾಗಿ ದರ್ಬಾರಕ್ಕೆ ಬರಬೇಕು. ಪಠಾಣರ ಶಾಸನದ ಭಾರವನ್ನು ಕುಮಾರನೇ ವಹಿಸಲಿ'' ಎಂದು ಬರೆದಿದ್ದನು. ಬಾದಶಹನ ಈ ಅಪ್ಪಣೆಯಿಂದ ಮಾನಸಿಂಹನಿಗೆ ಬಹಳ ಸಂತೋಷವಾಯಿತೆಂದು ಬರೆಯುವ ಕಾರಣವಿಲ್ಲ. ಆತನು ಆಯೇಷೆಯನ್ನು ಮನಸ್ಸಿನಲ್ಲಿ ಬಹಳವಾಗಿ ಹೊಗಳಿದನು. ಆ ಕನ್ಯಾರತ್ನದೊಡನೆ ತನ್ನ ಮಗನ ವಿವಾಹವನ್ನು ಮಾಡಲೇಬೇಕೆಂದು ಆತನು ಯೋಚಿಸಿದನು. ಆತನ ಅಪ್ಪಣೆಯಂತೆ ಸೇವಕರು ಬಂಧವಿಮೋಚನೆ ಮಾಡುವದಕ್ಕಾಗಿ ಕಾರಾಗೃಹಕ್ಕೆ ಬಂದರು. ಆಗ ಕುಮಾರನು ತನ್ನ ದುಸ್ಥಿತಿಯನ್ನು ಸ್ಮರಿಸುತ್ತ ಚಿಂತಾಮಗ್ನನಾಗಿ ಕುಳಿತುಕೊಂಡಿದ್ದನು.

ತನ್ನ ಸಲುವಾಗಿ ಆಯೇಷೆಯು ಪಟ್ಟ ಶ್ರಮವೂ ಮಾಡಿದ ಸಾಹಸವೂ ವ್ಯರ್ಥವಾದ ವೆಂದು ಆತನು ಬಹಳ ಅಸಮಾಧಾನಪಡುತ್ತಲಿದ್ದನು. ಆಯೇಷೆಯ ವಿಷಯವಾಗಿ ಆತನಲ್ಲಿ ಆದರವು ಬಹಳ. ಆತನು ಕಾರಾಗೃಹದಲ್ಲಿ ಕುಳಿತು ಆಕೆಯ ಗುಣಗಳ ಚಿಂತನ ಮಾಡುತ್ತಲಿದ್ದನು. ಆಗ ಆತನು ತನ್ನ ಮನಸ್ಸಿನಲ್ಲಿ– ''ಆಯೇಷೆಯಂಥ ಸದ್ಗುಣಸಂಪನ್ನ ಸ್ತ್ರೀಯ ಸಹಾಯವುಳ್ಳ ನಾನೇ ಧನ್ಯನು. ಮನುಷ್ಯರ ಹೃದಯವಂತು ಇರಲಿ ದೇವತೆಗಳ ಹೃದಯದಷ್ಟು ಪವಿತ್ರ ವಾಗಿರಲಿಕ್ಕಿಲ್ಲ. ಆಯೇಷೆಯು ದೇವಿಯು, ದಿವ್ಯ ಗುಣಗಳ ಖನಿಯು! ಆದರೆ ಹಾಯ್! ಇಂಥ ಮಹಿಳೆಯು ತನ್ನ ಹೃದಯವನ್ನು ಅಪಾತ್ರನಾದ ನನಗೆ ಕೊಟ್ಟು ನಿರಂತರ ದುಃಖವನ್ನು ಭೋಗಸುತ್ತಿರುವಳು. ಅಧಮನಾದ ನಾನು ರಮಣಿಯ ದುಃಖಕ್ಕೆ ಕಾರಣೀಭೂತನಾಗಿರುವೆನು. ಪಾಪಿಷ್ಠನಾದ ನಾನು ಆ ದೇವಿಯ ದೃಷ್ಟಿಗೆ ಬೀಳದಿದ್ದರೆ, ನಿಶ್ಚಯವಾಗಿ ಆಕೆಯು ಸುಖಿ ಯಾಗುತ್ತಿದ್ದಳು. ಯಾವನಾದರೂ ಪ್ರೇಮಮುಗ್ಧನಾದ ಪುರುಷಶ್ರೇಷ್ಠನು ಅಮೂಲ್ಯವಾದ ಆ ಸ್ತ್ರೀರತ್ನವನ್ನು ತನ್ನ ಹೃದಯದಲ್ಲಿಟ್ಟು ಕೊಂಡು ಬಹು ಜಾಗರೂಕತೆಯಿಂದ ರಕ್ಷಿಸುತ್ತಿದ್ದನು. ಹೀಗಾಗಿದ್ದರೆ ಆಯೇಷಾ ರೂಪ ಕುಸುಮವು ಈಗಿನಂತೆ ಮಲಿನವಾಗಿ ಬಾಡಿ ಹೋಗುತ್ತಿದ್ದಿಲ್ಲ.

ಆದರೆ ಉಪಾಯವೇನಿದೆ! ಕೃತಘ್ನನೂ, ನರಾಧಮನೂ ಆದ ನಾನು ಆಯೇಷೆಯ ಮೇಲೆ ಪ್ರೇಮ ಮಾಡಲಿಕ್ಕೆ ಸಮರ್ಥನೇ ಇರುವದಿಲ್ಲ. ತಿಲೋತ್ತಮೆಗೆ ನನ್ನ ಹೃದಯವನ್ನು ಕೊಟ್ಟು ಬಿಟ್ಟಿರುವದರಿಂದ, ಆಯೇಷೆಗೆ ನನ್ನ ಹೃದಯದಲ್ಲಿ ಸ್ಥಳವೇ ಇಲ್ಲ. ಎಂದು ಆಯೇಷೆ ಯನ್ನು ಚಿಂತಿಸುವ ಭರದಲ್ಲಿ ಆತನಿಗೆ ತಿಲೋತ್ತಮೆಯ ನೆನಪಾಯಿತು. ಆಗ ಆತನು ಶೋಕಾತಿಶಯದಿಂದ–ಹಾಯ್ ದುರ್ದೈವವೇ! ಈ ಜನ್ಮದಲ್ಲಿ ನನ್ನ ಪ್ರಿಯಳಾದ ತಿಲೋತ್ತಮೆಯ ದರ್ಶನವು ನನಗೆ ಪುನಃ ಆಗಲಿಕ್ಕಿಲ್ಲವೆ? ಆಕೆಯೊಡನೆ ಪ್ರೇಮದಿಂದ ಮಾತಾಡುವ ಯೋಗವು ನನಗೆ ಒದಗಲಿಕ್ಕಿಲ್ಲವೆ? ಕರ್ತವ್ಯನಿಷ್ಠರಾದ ನನ್ನ ಹಿರಿಯರು ನನ್ನ ಅಪರಾಧಕ್ಕಾಗಿ ಇಂಥ ಕಠಿಣ ಶಿಕ್ಷೆಯನ್ನು ವಿಧಿಸಿರುವರು; ಆದರೆ ಮಗನ ಮೇಲಿನ ಅಂತಃ ಕರಣದಿಂದ ಅವರ ಹೃದಯವು ಕರಗಲಿಕ್ಕಿಲ್ಲವೆ? ನನಗೆ ಹಲವು ಜನ ಮಲತಾಯಂದಿರು ಇರುವರಲ್ಲ; ಅವರಲ್ಲಿ ಒಬ್ಬರಾದರೂ ನನ್ನ ಬಂಧವಿಮೋಚನದ ಉಪಾಯವನ್ನು ಯೋಚಿಸಬಾರದೇನು? ಇಷ್ಟು ಜನ ಆಪ್ತೇಷ್ಟರಿದ್ದರೂ ಜಗತ್ಸಿಂಗನು ತನ್ನ ಶೇಷಾಯುಷ್ಯವನ್ನು ಹೀಗೆ ಮನಸ್ತಾಪದಲ್ಲಿ ಕಳೆಯಬೇಕಾಯಿತೇ? ನನಗೆ ಸಂಕೋಲೆಗಳ ದುಃಖವಿಲ್ಲ, ಬಂಧನದ ಭಯವಿಲ್ಲ, ಕಾರಾಗೃಹವಾಸದ ಹಂಗು ಇಲ್ಲ; ಆದರೆ ಒಮ್ಮೆಯೇ ದೂರದಿಂದ ಯಾಕಾಗ ಲೊಲ್ಲದು, ನನ್ನ ಪ್ರೀಯರಾದ ಜನರನ್ನು ನೋಡುವ ಸುಯೋಗವು ಒದಗಿದರೆ, ಇಂಥ ಕಷ್ಟಗಳನ್ನಾದರೂ ನಾನು ಸಹಿಸುವೆನು, ತಿಲೋತ್ತಮೆಯನ್ನು ದೂರದಿಂದ ನೋಡುವದಕ್ಕೂ ಉಪಾಯವಿಲ್ಲವೇನು? ಆಯೇಷೆಯ ಪುಣ್ಯಮೂರ್ತಿಯ ದರ್ಶನವು ಪುನಃ ನನಗೆ ಆಗುವದಿಲ್ಲವೇ?

ಹೀಗೆ ಜಗತ್ಸಿಂಗನು ವ್ಯಸನಪಡುತ್ತಿರುವಾಗ ಸೆರೆಮನೆಯ ಬಾಗಿಲು ದಡಕ್ಕನೆ ತೆರೆಯಿತು. ಕಾರಾಗೃಹ ರಕ್ಷಕನನ್ನು ಮುಂದೆಮಾಡಿಕೊಂಡು ಮಧುರಾಸಿಂಹನು ಒಳಗೆ ಬಂದು ಜಗತ್ಸಿಂಗನಿಗೆ ಬಹುವಿನಯದಿಂದ ಮುಜುರೆ ಮಾಡಿದನು. ಇನ್ನೊಬ್ಬ ಸೇವಕನು ಅಮೂಲ್ಯವಾದ ವಸ್ತ್ರಾಲಂಕಾರಗಳನ್ನು ತಕ್ಕೊಂಡು, ಮಧುರಾಸಿಂಹನನ್ನು ಹಿಂಬಾಲಿಸಿ ಬಂದಿದ್ದನು. ಇದನ್ನೆಲ್ಲ ನೋಡಿ ಜಗತ್ಸಿಂಗನು ಆಶ್ಚರ್ಯಪಟ್ಟನು. ಆಗ ಮಧುರಾಸಿಂಹನು ವಿನಯದಿಂದ ಕೈಜೋಡಿಸಿ–ಯುವರಾಜರೇ, ಹಿಂದಕ್ಕೆ ಮಹಾರಾಜರ ಆಜ್ಞಾಪತ್ರವನ್ನು ತೋರಿಸಿ, ಮಂದಾರಗಡದ ಹತ್ತರ ತಮ್ಮನ್ನು ಸೆರೆಹಿಡಕೊಂಡು ಬಂದ ಈ ದಾಸನ ಕೈಯಲ್ಲಿ ತಮ್ಮ ಬಂಧವಿಮೋಚನ ಮಾಡುವ ಬಗ್ಗೆ ಆಜ್ಞಾಪಿಸಿರುವ ಬಾದಶಹರ ಆಜ್ಞಾಪತ್ರವಿರುತ್ತದೆ. ಅವಲೋಕಿಸುವದಾಗಬೇಕು. ಸ್ವಾಮಿನಿಷ್ಠ ಸೇವಕರಿಗೆ ಸ್ವಾಮಿಯು ಯಾವ ಯಾವ ಆಜ್ಞೆಗಳನ್ನು ಪಾಲಿಸುವ ಪ್ರಸಂಗ ಬರುವದೆಂಬದನ್ನು ಹೇಳಲಾಗುವದಿಲ್ಲ. ಸೇವಕರ ಅಪರಾಧಗಳನ್ನು ಕ್ಷಮಿಸಲು ಒಡೆಯರೇ ಸಮರ್ಥರು! ಎಂದು ನುಡಿದು, ಬಂಧವಿಮೋಚನದ ಸಂಬಂಧದಿಂದ ಕಳಿಸಲ್ಪಟ್ಟಿದ್ದ ಬಾದಶಹನ ಆಜ್ಞಾಪತ್ರವನ್ನು ಯುವರಾಜನಿಗೆ ತೋರಿಸಿದನು. ಕೂಡಲೆ ರಕ್ಷಕನು ಬೇಡಿಗಳನ್ನು ಕಡಿದು ರಾಜಕುಮಾರನನ್ನು ಬಂಧಮುಕ್ತ ಮಾಡಿದನು. ಜಗತ್ಸಿಂಗನು ಮಂಗಲಸ್ನಾನಮಾಡಿ ವಸ್ತ್ರಾಲಂಕಾರಗಳಿಂದ ಅಲಂಕೃತನಾಗಿ ತನ್ನ ಅತ್ಯಂತ ಪ್ರೀತಿಯ

ಬಿಳಿಯ ಕುದುರೆಯನ್ನು ಹತ್ತಿಕೊಂಡು ತಂದೆಯ ದರ್ಬಾರಕ್ಕೆ ಸಾಗಿದನು. ಆಗ ಮಹಾ ಪ್ರತಾಪಿಯಾದ ಸುಂದರ ರಾಜಪುತ್ರನನ್ನು ನೋಡಿ ಪಾಟಣಾಪಟ್ಟಣದ ಜನರು ಸಂತೋಷಬಟ್ಟರು. ದಂಡಾಳುಗಳ ಆನಂದವು ಅವರ ಹೊಟ್ಟೆಯಲ್ಲಿ ಹಿಡಿಸದಾಯಿತು. ಬಾದಶಹನ ಹೆಸರಿನಿಂದಲೂ, ಮಾನಸಿಂಹನ ಹೆಸರಿನಿಂದಲೂ, ಯುವರಾಜನ ಹೆಸರಿನಿಂದಲೂ ಜಯಘೋಷಗಳಾಗತೊಡಗಿದವು. ನೋಡಿದತ್ತೆಲ್ಲ ಆನಂದವು ತುಳುಕುತ್ತಿತ್ತು. ಕೆಲವು ಹೊತ್ತಿನ ಮೇಲೆ ಯಾವತ್ತು ಜನರು ದರ್ಬಾರದ ಬಾಗಿಲಿಗೆ ಮುಟ್ಟಿದರು. ಇದೇ ದರ್ಬಾರದಲ್ಲಿ ಕುಮಾರನಿಗೆ ಅವನ ತಂದೆಯಾದ ಮಾನಸಿಂಹನು ಆಜನ್ಮ ಬಂದಿವಾಸದ ಶಿಕ್ಷೆಯನ್ನು ವಿಧಿಸಿದ್ದನು. ಕುಮಾರನು ಬಾಗಿಲಲ್ಲಿಯೇ ಕುದುರೆಯನ್ನು ಇಳಿದನು. ಆಗ ಹಲವು ಜನ ರಜಪೂತ ಸರದಾರರೂ, ಮೊಗಲ ಸರದಾರರೂ ಕುಮಾರನನ್ನು ಎದುರುಗೊಳ್ಳುವದಕ್ಕಾಗಿ ಬಂದು, ಆದರದಿಂದ ಆತನನ್ನು ದರ್ಬಾರದೊಳಗೆ ಕರಕೊಂಡು ಹೋದರು.

ಹಿಂದಕ್ಕೆ ಜಗತ್ಸಿಂಗನ ಕೈಗೆ ಬೇಡಿಗಳನ್ನು ಹಾಕಿದ ದರ್ಬಾರದಲ್ಲಿಯೇ ಇಷ್ಟು ದಿವಸಗಳ ಮೇಲೆ ಜಗತ್ಸಿಂಗನು ಸನ್ಮಾನದಿಂದಲೂ, ಗೌರವದಿಂದಲೂ ರಾಜಕೀಯ ಪೋಷಾಕನ್ನು ಹಾಕಿಕೊಂಡು ಪ್ರವೇಶ ಮಾಡಿದನು. ಅಂದಿನಂತೆ ಇಂದೆಯಾದರೂ ಮಾನಸಿಂಹನು ಉಚ್ಚಾಸನದ ಮೇಲೆ ಗಂಭೀರ ಮುದ್ರೆಯಿಂದ ಕುಳಿತುಕೊಂಡಿದ್ದನು. ಆತನ ಸಿಂಹಾಸನದ ಕೆಳಮಗ್ಗಲಿಗೆ ಸರದಾರರೂ, ದರಕದಾರರೂ ಕುಳಿತುಕೊಂಡಿದ್ದರು. ಸೈನಿಕರಿಂದಲೂ ರಾಜ ಸೇವಕರಿಂದಲೂ, ಪ್ರಜೆಗಳಿಂದಲೂ ದರ್ಬಾರವು ಸಂಪೂರ್ಣವಾಗಿ ತುಂಬಿಹೋಗಿತ್ತು. ಕುಮಾರನು ದರ್ಬಾರದಲ್ಲಿ ಬರುತ್ತ ಬರುತ್ತ ಮಾನಸಿಂಹನ ಸಿಂಹಾಸನದ ಸಮೀಪಕ್ಕೆ ಬಂದನು. ಸಿಂಹಾಸನವು ಉಚ್ಚಾಸನದಲ್ಲಿ ಇತ್ತು. ಕುಮಾರನು ತನ್ನ ತಲೆಯ ಮೇಲಿನ ಮಂದಿಲವನ್ನು ತೆಗೆದು ಮಾನಸಿಂಹನ ಚರಣ ದೆಡೆಯಲ್ಲಿಟ್ಟು ಕೈಜೋಡಿಸಿ–ಮಹಾರಾಜ, ಅಪರಾಧಿಯಾದ ತಮ್ಮ ಪುತ್ರನು ನಮ್ರಭಾವದಿಂದ ತನ್ನ ಅಪರಾಧದ ಕ್ಷಮೆಯ ಭಿಕ್ಷೆಯನ್ನು ಬೇಡಿಕೊಳ್ಳುವನು. ಅನ್ನಲು, ಮಾನಸಿಂಹನು ಗಂಭೀರಭಾವದಿಂದ–ವತ್ಸಾ, ನಿನ್ನ ಯಾವತ್ತು ಅಪರಾಧಗಳನ್ನು ಸ್ವತಃ ಅಕಬರಬಾದಶಹರೇ ಕ್ಷಮಿಸಿರುವದರಿಂದ, ನೀನು ನನ್ನನ್ನು ಕ್ಷಮೆಯ ಸಲುವಾಗಿ ಯಾಚಿಸುವ ಕಾರಣವಿಲ್ಲ, ಎಂದು ಹೇಳಿದನು. ಅದಕ್ಕೆ ಜಗತ್ಸಿಂಗನು–ಶಹಾನ ಶಹನ ಅನುಗ್ರಹವು ನನ್ನ ಮೇಲೆ ಇರುವದು ನಿಜವು; ಆದರೆ ನನ್ನ ಪೂಜ್ಯ ಗುರುವೂ, ಇಹ–ಪರ ಪವಿತ್ರ ಸಾಧನವೂ ಆದ ಪಿತೃ ದೈವತವು ನನಗೆ ಪ್ರಸನ್ನವಾಗದಿದ್ದರೆ ನನ್ನ ಜೀವನವು ವ್ಯರ್ಥವೇ ಸರಿ; ಈ ಅಧಮ ಪುತ್ರನು ತಮ್ಮ ಅಂತಃಕರಣದ ಗೂಢಭಾವವನ್ನು ಅರಿತು ಕೊಳ್ಳುವದಕ್ಕಾಗಿ ಅತ್ಯಂತ ಉತ್ಸುಕನಾಗಿರುವನು, ಅನ್ನಲು, ಅದಕ್ಕೆ ಮಾನಸಿಂಹನು–ಕುಮಾರಾ, ನಾನು ನಿನ್ನ ಯಾವತ್ತು ಅಪರಾಧಗಳನ್ನು ಅಂತಃಕರಣಪೂರ್ವಕವಾಗಿ ಕ್ಷಮಿಸಿದ್ದೇನೆ. ನೀನು ಕರ್ತವ್ಯ ಪರಾಯಣನಾಗಿ ಯಾವಾಗಲೂ ಯಶಸ್ವಿಯಾಗೆಂದು ಆಶೀರ್ವದಿಸುವೆನು. ಎಂದು ಹೇಳಿ, ಕುಮಾರನ ಮಂದಿಲವನ್ನು ಕೈಮುಟ್ಟಿ ಆತನ ತಲೆಗೆ ಹಾಕಿದನು. ಆಗ ಜಯಧ್ವನಿಯಿಂದ ಸಭಾಗೃಹವು ಪ್ರತಿಧ್ವನಿತವಾಯಿತು. ತಂದೆಯ ಚರಣಗಳ ಮೇಲೆ

ಮಸ್ತಕವನ್ನಿಟ್ಟಿದ್ದ ಜಗತ್ಸಿಂಗನ ಮುಖದಿಂದ ಅಕ್ಷರಗಳೇ ಹೊರಡದಾದವು. ಕೆಲ ಹೊತ್ತಿನ ಮೇಲೆ ಆತನು ಕೈಜೋಡಿಸಿ ತಂದೆಯನ್ನು ಕುರಿತು ವಿನಯದಿಂದ– ಇಂದು ನನ್ನ ಜನ್ಮವು ಸಫಲವಾಯಿತು. ಪಿತೃದೇವತೆಯ ಅಸಂತೋಷದ ಭಾರವನ್ನು ತಲೆಯ ಮೇಲೆ ಹೊತ್ತುಕೊಂಡು ಬಾಳುವದಕ್ಕಿಂತ ಸಾಯುವದೇ ಶ್ರೇಯಸ್ಕರವಾಗಿತ್ತು. ನಾನು ಈವರೆಗೆ ಬದುಕಿದ್ದರೂ ಸತ್ತಂತೆಯೇ ಇದ್ದೆನು. ಕರುಣಾನಿಧಿಯಾದ ತಂದೆಯೇ ನಾನು ಒಂದಲ್ಲ–ಎರಡಲ್ಲ ಹಲವು ಅಪರಾಧಗಳನ್ನು ಮಾಡಿರುವೆನು; ಅವುಗಳಲ್ಲಿ ಯಾವ ಯಾವ ಅಪರಾಧಗಳು ಕ್ಷಮಿಸಲ್ಪಟ್ಟವು, ಯಾವ ಯಾವ ಅಪರಾಧಗಳು ಕ್ಷಮಿಸಲ್ಪಟ್ಟಿರುವದಿಲ್ಲ, ಎಂಬದನ್ನು ತಿಳಿದುಕೊಳ್ಳುವದಕ್ಕಾಗಿ ಚರಣದೆಡೆಯಲ್ಲಿ ವಿಜ್ಞಾಪನೆಯನ್ನು ಮಾಡಿಕೊಳ್ಳಬದುದೋ? ಎಂದು ಕೇಳಿದನು. ಅದಕ್ಕೆ ಮಾನಸಿಂಹನು–ಪ್ರಿಯ ಪುತ್ರಾ, ನಿನ್ನ ಎಲ್ಲ ಅಪರಾಧಗಳನ್ನು ನಾನು ಕ್ಷಮಿಸಿದ್ದೇನೆ. ನೀನು ಆಯೇಷೆಯ ಪ್ರೇಮವನ್ನು ಸಂಪಾದಿಸುವದಕ್ಕಾಗಿ ಎಂದೂ ಪ್ರಯತ್ನ ಮಾಡಿಲ್ಲೆಂಬದು ನಾನು ಮನಗಂಡಿರುವೆನು. ನವಾಬ ಉಸ್ಮಾನಖಾನನೇ ಈ ಮಾತನ್ನು ನನ್ನ ಬಳಿಗೆ ಬುದ್ಧಿ ಪೂರ್ವಕವಾಗಿ ಬಂದು ತಿಳಿಸಿರುವನು; ಆದ್ದರಿಂದ ಆ ಸಂಬಂಧದಿಂದ ನಿನ್ನನ್ನು ನಾನು ಅಪರಾಧಿಯೆಂದು ಭಾವಿಸಿದ್ದು ಅನ್ಯಾಯವು, ಅನ್ನಲು, ಜಗತ್ಸಿಂಗನು ಮೋರೆಯನ್ನು ತಗ್ಗಿಸಿ ಲಜ್ಜೆಯಿಂದ– ಇನ್ನೂ ಕೆಲವು ಅಪರಾಧಗಳು ನನ್ನಿಂದ ಘಟಿಸಿರುವವಲ್ಲವೇ? ಎಂದು ಕೇಳಿದನು.

ಕುಮಾರನ ಈ ಮಾತುಗಳನ್ನು ಕೇಳಿ ಮಾನಸಿಂಹನ ಗಂಭೀರ ಮುಖಮುದ್ರೆಯಲ್ಲಿ ನಸುನಗೆಯು ತೋರಿತು. ಆತನು ಮಗನನ್ನು ಕುರಿತು–ಹ! ವೀರೇಂದ್ರಸಿಂಹನ ಮಗಳನ್ನು ನೀನು ಲಗ್ನಮಾಡಿಕೊಂಡಿರುತ್ತೀ. ನಿನ್ನ ಈ ಕೃತಿಯನ್ನು ನಾನು ಮಹಾಪರಾಧವೆಂದು ಭಾವಿಸಿದ್ದೆನು; ಆದರೆ ಅದು ನನ್ನ ಭ್ರಾಂತಿಯೇ ಸರಿ. ವೀರೇಂದ್ರಸಿಂಹನ ಮಗಳಾದ ತಿಲೋತ್ತಮೆಯು ರೂಪ–ಗುಣಗಳಿಂದ ಅತ್ಯಂತ ಶ್ರೇಷ್ಠಳಿರುತ್ತಾಳೆಂಬದು ನನಗೆ ಗೊತ್ತಾಗಿದೆ. ತಿಲೋತ್ತಮೆಯು ಪ್ರತ್ಯಕ್ಷ ರಾಜಲಕ್ಷ್ಮಿಯ ಅವತಾರವಿದ್ದದ್ದರಿಂದ ಆಕೆಯೊಡನೆ ನೀನು ಲಗ್ನವಾದದ್ದರ ಅಪರಾಧವನ್ನು ನಾನು ಕ್ಷಮಿಸಿದ್ದೇನೆ, ಎಂದು ಹೇಳಿದನು. ಅದನ್ನು ಕೇಳಿ ಜಗತ್ಸಿಂಗನ ಹೃದಯವು ಆನಂದ ಪೂರ್ಣವಾಯಿತು. ಆತನ ಕಂಠವು ಬಿಗಿದು ಮಾತುಗಳು ಹೊರಡದಾದವು. ಮಾನಸಿಂಹನು ಮತ್ತೆ ಕುಮಾರನನ್ನು ಕುರಿತು– ನಿನ್ನ ರಾಜಕೀಯವಾದ ಅಪರಾಧವನ್ನಂತು ಬಾದಶಹರು ಕ್ಷಮಿಸಿರುವದರಿಂದ ಅದರ ವಿಷಯವಾಗಿ ನಾನು ಏನೂ ಹೇಳುವದು ಉಳಿದಿರುವದಿಲ್ಲ; ಉಳಿದ ಅಪರಾಧಗಳನ್ನು ನಾನು ಕ್ಷಮಿಸಿಯೇ ಇರುತ್ತೇನೆ; ಅಂದ ಬಳಿಕ ಬಾದಶಹರ, ಹಾಗು ನನ್ನ ಇಬ್ಬರ ಮತದಿಂದಲೂ ನೀನು ನಿರ್ದೋಷಿಯೆಂದು ಸಿದ್ಧವಾದಂತಾಯಿತು, ಎಂದು ನುಡಿದನು. ಆಗ ಮತ್ತೆ ಸಭಾಗೃಹವು ಜಯಘೋಷದಿಂದ ಪೂರ್ಣವಾಯಿತು. ಆಗ ಮಾನಸಿಂಹನು ಜಗತ್ಸಿಂಗನ ಕೈಯ್ಯಲ್ಲಿ ಅಕಬರ ಬಾದಶಹನ ಸನದನ್ನು ಕೊಟ್ಟು ಆನಂದ ಭರದಿಂದ–ಯುವರಾಜನೇ, ಶಹಾನಶಹಾ ಅಕಬರವರ ಆಜ್ಞೆಯಿಂದ ನೀನು ಇಂದಿನಿಂದ ಬಂಗಾಲ, ಬಿಹಾರ–ಓಡಿಸಾ ಪ್ರಾಂತಗಳ ಸುಬೇದಾರನಾಗಿರುವೆ. ನಿನ್ನಂತೆ ಎಲ್ಲರ

ದೈವವು ತೆರೆಯುವದು ದುರ್ಲಭವು. ಇಂಥ ಭಾಗ್ಯವು ಎಲ್ಲರ ಹಣೆಬರಹದಲ್ಲಿ ಬರೆದಿರುವ ದಿಲ್ಲ. ನೀನು ಕರ್ತವ್ಯಪರಾಯಣನಾಗಿ, ನ್ಯಾಯದಿಂದ ನಡೆದು ಸತ್ಯ–ಸಾಹಸ–ಸುವಿಚಾರಗಳ ಯೋಗದಿಂದ ಕೀರ್ತಿಶಾಲಿಯಾಗೆಂದು ನಾನು ನಿನ್ನನ್ನು ಆಶೀರ್ವದಿಸುವೆನು, ಎಂದು ನುಡಿಯುತ್ತಿರಲು, ದರ್ಬಾರದೊಳಗಿನವರೆಲ್ಲರೂ ಬಹುಮಾನಪೂರ್ವಕವಾಗಿ ಎದ್ದುನಿಂತು ಕುಮಾರ ಜಗತ್ಸಿಂಗನನ್ನು ಅಭಿನಂದಿಸಿದರು. ಅವರಲ್ಲಿಯೊಬ್ಬನು ಎಲ್ಲಕ್ಕೂ ಮುಂದೆ ಬಂದು– ಪ್ರಜೆಗಳಾದ ನಾವು ನೂತನ ಸುಬೇದಾರರನ್ನು ಅಭಿನಂದಿಸಿ, ಅವರ ಅಧಿಕಾರವನ್ನು ಆನಂದ ದಿಂದ ಒಪ್ಪಿಕೊಳ್ಳುತ್ತೇವೆ. ನಾವು ಅವರ ಆಜ್ಞೆಯನ್ನು ಶಿರಸಾವಹಿಸಿ ಅದನ್ನು ಪಾಲಿಸುವದಕ್ಕಾಗಿ ಸದಾ ತತ್ಪರರಾಗಿರುವೆವು. ಇವರ ಅಧಿಕಾರ ವೃದ್ಧಿಯಿಂದ ಜನರು ಅತ್ಯಂತ ಸಂತುಷ್ಟ ರಾಗಿರುವರು. ಇದರಂತೆಯೇ ಇವರ ಉತ್ಕರ್ಷವು ಆಗಲೆಂದು ಪರಮೇಶ್ವರನನ್ನು ಪ್ರಾರ್ಥಿಸುವೆವು, ಎಂದು ನುಡಿದನು. ಆಗ ಸಭಾಗೃಹವೆಲ್ಲ ಕುಮಾರನ ಜಯಜಯಕಾರದ ಧ್ವನಿಯಿಂದ ತುಂಬಿಹೋಯಿತು. ಇದನ್ನು ನೋಡಿ ಜಗತ್ಸಿಂಗನು ಪರಮಾಶ್ಚರ್ಯಪಟ್ಟನು. ಎಲ್ಲಿಯ ಭಯಂಕರವಾದ ಕತ್ತಲೆಯ ಕೋಣೆಯು, ಎಲ್ಲಿಯ ಕೈಕಾಲುಗಳೊಳಗಿನ ಸಂಕೋಲೆಗಳ ಭಾರದಿಂದ ತಳಮಳಿಸುವ ದುಃಸ್ಥಿತಿಯು; ಆದರೆ ಈಗ ಅಕಸ್ಮಾತ್ತಾಗಿ ದೊರೆತಿರುವ ಎಲ್ಲಿಯ ಬಂಗಾಲ–ಬಿಹಾರ–ಓಡಿಸಾ ಪ್ರಾಂತಗಳ ಈ ಸುಬೇದಾರಿಕೆಯು! ತನ್ನ ಸ್ಥಿತಿಯಲ್ಲಿ ಹೀಗೆ ಭೂಮ್ಯಾಕಾಶದಷ್ಟು ಅಂತರವಾದದ್ದನ್ನು ನೋಡಿ ಕುಮಾರನು ಮೂಢನಾದನು. ಹೀಗೆ ತಾನು ದೊಡ್ಡಪದವಿಗೆ ಹೋದೇನೆಂಬ ಕಲ್ಪನೆಯು ಸಹ ಕುಮಾರನ ಕನಸು–ಮನಸುಗಳಲ್ಲಿ ಇದ್ದಿಲ್ಲ. ಆತನು ದಂಗು ಬಡಿದು ಸುಮ್ಮನೆ ನಿಂತಿರಲು, ಮಾನಸಿಂಹನು–ಕುಮಾರ ಜಗತ್ಸಿಂಹ ನೀನು ಇಂದಿನಿಂದ ಈ ಸುಬೇದಾರಿಕೆಯ ಕೆಲಸವನ್ನು ನಿಸ್ತರಿಸಬೇಕಾಗುವದು; ನಾನು ಸ್ವಲ್ಪ ವಿಶ್ರಮಿಸುವೆನು, ಎಂದು ಹೇಳಿದನು; ಆದರೂ ಕುಮಾರನ ಮುಖದಿಂದ ಮಾತುಗಳು ಹೊರಡಲಿಲ್ಲ. ಆತನು ಆಶ್ಚರ್ಯದಿಂದ ತಂದೆಯ ಮುಖವನ್ನು ನೋಡುತ್ತ ಸುಮ್ಮನೆ ನಿಂತು ಕೊಂಡನು. ಮಾನಸಿಂಹನು ಮಗನ ಮನೋಭಾವವನ್ನು ತಿಳಿದು ಆತನನ್ನು ಕುರಿತು– ''ಈ ಹುಕುಮು ಮುಟ್ಟಿದ ಕೂಡಲೆ ಅಮಲಿನಲ್ಲಿ ತರಬೇಕು'' ಎಂದು ಬಾದಶಹರು ಆಜ್ಞಾಪಿಸಿದ್ದಾರೆ; ಮತ್ತು ಬೇಗನೆ ಆಗ್ರಾಕ್ಕೆ ಬರಬೇಕೆಂದು ನನಗೆ ಬರೆದಿರುವರು; ಆದ್ದರಿಂದ ನಾನು ಬೇಗನೆ ಆಗ್ರಾಕ್ಕೆ ಹೋಗಿ ಅಲ್ಲಿಂದ ದಿಲ್ಲಿಗೆ, ಪ್ರಸಂಗಬಿದ್ದರೆ ಅಜಮೀರಕ್ಕೆ ಸಹ ಹೋಗಬೇಕಾಗ ಬಹುದು. ಹೀಗೆಯೇ ಆದೀತೆಂದು ಈಗ ಹೇಳಲಿಕ್ಕೆ ಬರುವಹಾಗಿಲ್ಲ. ನನ್ನ ಗೈರ ಹಾಜರಿಯಲ್ಲಿ ನೀನು ನನ್ನ ಸುಬೇದಾರಿಯ ಕೆಲಸವನ್ನು ಸಾಗಿಸಬೇಕೆಂದು ಬಾದಶಹರು ಸೂಚಿಸಿರುವರು. ನಾನು ನನ್ನ ಅಧಿಕಾರದಿಂದ ಈ ಕೆಲಸವನ್ನು ಮಾಡುವದಿಲ್ಲ; ಬಾದಶಹರ ಆಜ್ಞೆಯಿಂದ ಇದೆಲ್ಲ ಒದಗಿ ಬಂದಿರುವದು. ಎಂದು ಸ್ಪಷ್ಟವಾಗಿ ಹೇಳಿದನು. ಅದರಿಂದ ಕುಮಾರನಿಗೆ ಸಮಾಧಾನವಾಗಿ ಆತನು ತಂದೆಯನ್ನು ಕುರಿತು–ಪೂಜ್ಯರೇ, ಮಾನ್ಯರಾದ ಬಾದಶಹರ ಆಜ್ಞೆಯನ್ನು ಪಾಲಿಸಲಿಕ್ಕೆ ನಾನು ಸದಾ ತತ್ಪರನಾಗಿರುವೆನು; ಮತ್ತು ಮಹಾರಾಜರ ಆಜ್ಞೆಯನ್ನು ಪಾಲಿಸುವದಂತೂ ಈ ದಾಸನ ಪರಮಾರ್ಥವಾಗಿರುತ್ತದೆ. ಈ ಅನುಗ್ರಹಕ್ಕಾಗಿ ಬಾದಶಹರ,

ಹಾಗೂ ಮಹಾರಾಜರ ಚರಣಗಳಲ್ಲಿ ನಾನು ಅಂತಃಕರಣಪೂರ್ವಕವಾಗಿ ಕೃತಜ್ಞತೆಯನ್ನು ಪ್ರಕಟಿಸುವೆನು.

ಇಷ್ಟಾದ ಬಳಿಕ ಮಾನಸಿಂಹನು ಸಿಂಹಾಸನದಿಂದ ಇಳಿದು ಕುಮಾರನನ್ನು ಕೈಹಿಡಿದು ಆ ಸಿಂಹಾಸನದ ಮೇಲೆ ಕುಳ್ಳಿರಿಸುವಾಗ– ಪ್ರಿಯಪುತ್ರಾ, ಬಾ ನನ್ನ ಈ ಸಿಂಹಾಸನವನ್ನು ಆರೋಹಿಸು. ನಾನು ನಿನ್ನ ತಂದೆಯಾಗಿದ್ದರೂ ನಿನ್ನ ಅಧಿಕಾರದ ದೃಷ್ಟಿಯಿಂದ ಈಗ ನಿನ್ನ ಒಬ್ಬ ಪ್ರಜಾಜನನಾಗಿದ್ದೇನೆ. ನಿನ್ನ ಕೈಯಲ್ಲಿ ಬಾದಶಹರ ಸನದನ್ನು ಕೊಡಲ್ಪಟ್ಟಿರುವದರಿಂದ, ನೀನು ಬಂಗಾಲ–ಬಿಹಾರ–ಓಡಿಸಾ ಪ್ರಾಂತಗಳ ಸುಬೇದಾರನಾಗಿರುತ್ತೀ; ಆದ್ದರಿಂದ ಸುಬೇದಾರನ ಆಸನದ ಮೇಲೆ ಕುಳ್ಳಿರಿಸುವದು ನನ್ನ ಕರ್ತವ್ಯವಾಗಿರುತ್ತದೆ. ಎಂದು ನುಡಿಯಲು, ಜಗತ್ಸಿಂಗನು ತಂದೆಯ ಚರಣಗಳ ಮೇಲೆ ಮಸ್ತಕವನ್ನಿಟ್ಟನು. ಆಗ ಮಾನಸಿಂಹನು ಮಗನನ್ನ ಸಿಂಹಾಸನದ ಮೇಲೆ ಕುಳ್ಳಿರಿಸಿ, ತನ್ನ ಸ್ವಾಭಾವಿಕವಾದ ದೊಡ್ಡ ಗೊಗ್ಗರ ದನಿಯಿಂದ ಸಭಿಕರನ್ನು ಕುರಿತು–ನಾನು ಮಾನಸಿಂಹನು, ಸಾಮ್ರಾಟ ಅಕಬರನ ಏಕನಿಷ್ಠ ನೌಕರನಾಗಿರುತ್ತೇನೆ. ಬಾದಶಹರ ಅಪ್ಪಣೆಯಂತೆ ನಾನು ನಿಮ್ಮೆಲ್ಲರ ಸಮಕ್ಷ ಕುಮಾರನನ್ನು ಸಿಂಹಾಸನದ ಮೇಲೆ ಕುಳ್ಳಿರಿಸುತ್ತೇನೆ. ಈತನ ಆಡಳಿತದಲ್ಲಿ ಪ್ರಜೆಗಳ ಸುಖ–ಶಾಂತಿಗಳು ಹೆಚ್ಚುವವೆಂದು ನಾನು ಆಶಿಸುವೆನು, ಎಂದು ಹೇಳಿದನು. ಆಗ ನೂತನ ಸುಬೇದಾರನು– ನಾನು ಬಾದಶಹರ ಮಂಗಲವನ್ನು ಚಿಂತಿಸುವಲ್ಲಿ ಜೀವದ ಪರಿವೆಯಿಡೆನು. ರಾಜ್ಯಕಾರಭಾರವನ್ನು ನಡೆಸುವಲ್ಲಿ ನನ್ನ ಪೂಜ್ಯ ತಂದೆಯಾದ ಮಾನಸಿಂಹರವರ ಅನುಕರಣೆ ಮಾಡಲು ಹೆಣಗುವೆನು; ಅದರಂತೆ ಯಾವತ್ತು ಪ್ರಜೆಗಳ ಹಾಗೂ ನೌಕರರ ಸುಖವು ಅಭಿವೃದ್ಧಿಸುವಂತೆ ಯಾವಾಗಲೂ ಯತ್ನಿಸುವೆನು, ಎಂದು ಉತ್ತರ ರೂಪದಿಂದ ಭಾಷಣ ಮಾಡಲು, ದರ್ಬಾರದ ಶಿಷ್ಟಾಚಾರಗಳೆಲ್ಲ ತೀರಿ ದರ್ಬಾರದ ಕಾರ್ಯವು ಮುಗಿಸಲ್ಪಟ್ಟಿತು.

ತನ್ನ ಪ್ರಿಯಳಾದ ತಿಲೋತ್ತಮೆಯ ಲಗ್ನದ ವಿಷಯವಾಗಿ ತಂದೆಯ ಒಪ್ಪಿಗೆಯು ದೊರೆತದ್ದರಿಂದ ಜಗತ್ಸಿಂಗನಿಗೆ ಬಹಳ ಸಂತೋಷವಾಯಿತು. ತಿಲೋತ್ತಮೆಯು ಪಾಟಣಾಕ್ಕೆ ಬಂದದ್ದು ಆತನಿಗೆ ಗೊತ್ತಿದ್ದಿಲ್ಲ; ಆದ್ದರಿಂದ ಮಂದಾರಣಗಡಕ್ಕೆ ಹೋಗಿ ತನ್ನ ಪ್ರಿಯಳನ್ನು ಕಂಡು ಆಕೆಯನ್ನು ಯಾವಾಗ ಸಮಾಧಾನ ಪಡಿಸೇನೆಂದು ಆತನು ಆತುರಪಡಹತ್ತಿದನು. ದರ್ಬಾರವು ಬಿಟ್ಟಬಳಿಕ ತಂದೆ–ಮಕ್ಕಳಿಬ್ಬರೂ ಅರಮನೆಗೆ ಹೋದರು. ಆಗ ಮಹಾರಾಜರು ಕುಮಾರನಿಗೆ– ನೀನು ನಿನ್ನ ತಾಯಂದಿರ ಭೆಟ್ಟಿಯಾಗು. ನಾನು ಆಗ್ರಾಕ್ಕೆ ಹೊರಡುವ ಸಿದ್ಧತೆಯನ್ನು ಮಾಡುತ್ತೇನೆ, ಎಂದು ಹೇಳಿ ಕುಮಾರನನ್ನು ಅಂತಃಪುರಕ್ಕೆ ಕಳಿಸಿಕೊಟ್ಟನು. ಜಗತ್ಸಿಂಗನು ಎಲ್ಲಕ್ಕೂ ಮೊದಲು ಉರ್ಮಿಲಾರಾಣಿಯು ಇರುವ ಮಹಲಿಗೆ ಹೋದನು. ಅಲ್ಲಿಯೇ ಆತನ ಮೂವರು ಸಾಪತ್ನ ಮಾತೆಯರು ಅಕಸ್ಮಾತ್ ಮಾತಾಡುತ್ತ ಕುಳಿತಿದ್ದರು. ಜಗತ್ಸಿಂಗನು ಭಕ್ತಿಪುರಸ್ಸರವಾಗಿ ಎಲ್ಲರಿಗೂ ನಮಸ್ಕಾರ ಮಾಡಿದನು. ಆಗ ಅವನ ಮಾತೃವರ್ಗವು ಅವನನ್ನು ಆಶೀರ್ವದಿಸಿ, ಆತನು ಕಾರಾಗೃಹದಲ್ಲಿ ಕಷ್ಟಪಟ್ಟದ್ದಕ್ಕಾಗಿ ದುಃಖಪಟ್ಟಿತು. ಬಳಿಕ ಉರ್ಮಿಲಾರಾಣಿಯು ವಾತ್ಸಲ್ಯದಿಂದ ಕುಮಾರನನ್ನು ಕುರಿತು–ಜಗತ್,

ನೀನು ಇನ್ನೂ ಊಟ ಮಾಡಿರುವದಿಲ್ಲ, ಆದ್ದರಿಂದ ಮೊದಲು ಸ್ವಲ್ಪ ಉಪಹಾರ ಮಾಡು. ನಿನ್ನ ಸಂಗಡ ಆಡುವ ಸುಖ-ದುಃಖದ ಮಾತುಗಳು ಬಹಳ ಇರುತ್ತವೆ; ಆದರೆ ಹಿಂದುಗಡೆ ಮಾತಾಡೋಣವಂತೆ; ನೀನು ಮೊದಲು ನನ್ನ ಸಂಗಡ ಬಾ, ಎಂದು ಹೇಳಿ ಕುಮಾರನನ್ನು ಒಂದು ಕೋಣೆಯೊಳಗೆ ಕರಕೊಂಡು ಹೋಗಿ ಉಪಾಹಾರ ಮಾಡಿಸಿ, ಇನ್ನೂ ಸ್ವಲ್ಪ ವಿಶ್ರಮಿಸು, ಎಂದು ಹೇಳಿ ತಾನು ಎರಡನೇಯ ಕಡೆಗೆ ಹೋದಳು. ಇತ್ತ ಜಗತ್ಸಿಂಗನು ಹಾಸಿ ಸಿದ್ಧವಾಗಿದ್ದ ಮಂಚದ ಮೇಲೆ ಸ್ವಲ್ಪ ಅಡ್ಡಾಗಿ ವಿಶ್ರಮಿಸಹತ್ತಿದನು. ಆತನ ಮನಸ್ಸನ್ನು ತಿಲೋತ್ತಮೆಯು ಆಕರ್ಷಿಸಿಬಿಟ್ಟದ್ದರಿಂದ ಆಕೆಯ ದರ್ಶನವಾದ ಹೊರತು ಆತನಿಗೆ ಸಮಾಧಾನವಾಗುವಂತೆ ಇದ್ದಿಲ್ಲ. ಜಗತ್ಸಿಂಗನು ತಿಲೋತ್ತಮೆಯ ಸದ್ಗುಣಗಳ ಚಿಂತನ ಮಾಡುತ್ತಿರುವಾಗ ಒಬ್ಬ ಸುಂದರಿಯು ಉರ್ಮಿಲಾರಾಣಿಯ ಅಪ್ಪಣೆಯಿಂದ ತಾಂಬೂಲ ಪಾತ್ರೆಯನ್ನು ತಕ್ಕೊಂಡು ಜಗತ್ಸಿಂಗನ ಬಳಿಗೆ ಬಂದಳು. ಆಕೆಯನ್ನು ನೋಡಿ ಕುಮಾರನು ಭ್ರಮಿಷ್ಟನಂತೆ ಎದ್ದು ಮಂಚದ ಕೆಳಗೆ ನಿಂತುಕೊಂಡನು. ತಾನು ಸ್ವಪ್ನದಲ್ಲಿರುವೆನೋ? ಎಂಬ ಭ್ರಾಂತಿಯು ಆತನಿಗೆ ಆಯಿತು. ಈದಿನ ಒಂದರ ಹಿಂದೊಂದರಂತೆ ನಡೆದ ಅಸಂಭವವಾದ ಸಂಗತಿಗಳಿಂದ ಆತನು ನಿಶ್ಚಯವಾಗಿ ಭ್ರಮಿಷ್ಟನಂತೆ ಆಗಿದ್ದನು. ಆತನು ಮನಸ್ಸಿನಲ್ಲಿ- ಎಲ, ಈಕೆಯು ನನ್ನ ಪ್ರಾಣ ಪ್ರೀಯಳಾದ ತಿಲೋತ್ತಮೆ ಇರುವಳಲ್ಲ! ಈಕೆಯು ಇಲ್ಲಿಗೆ ಹ್ಯಾಗೆ ಬಂದಳು? ನನ್ನ ತಂದೆಯಾದರೂ ಈಕೆಯನ್ನು ಹ್ಯಾಗೆ ಬರಗೊಟ್ಟಿರಬಹುದು? ನಮ್ಮಿಬ್ಬರ ಈ ಸುಖಕರವಾದ ಸಮ್ಮೇಲನದ ಯೋಗವು ಯಾರ ಪುಣ್ಯದಿಂದ ಈಗ ಒದಗಿರಬಹುದು; ಈ ಮಾತು ಸಂಭವನೀಯವಾಗಿರುವದೋ? ಸಂಭವನೀಯವಾಗದಿದ್ದರೆ ಈಗ ತಿಲೋತ್ತಮೆಯು ಪ್ರತ್ಯಕ್ಷ ನನ್ನ ಕಣ್ಣಿಗೆ ಕಾಣುತ್ತಿರುವದಕ್ಕೆ ಏನೆನ್ನಬೇಕು? ಛೇ, ಈಕೆಯು ನಿಶ್ಚಯವಾಗಿ ನನ್ನ ಪ್ರೀಯಳು; ಸುಗುಣಮಣಿಯಾದ ತಿಲೋತ್ತಮೆಯು.

## ಶೌರ್ಯಸಂಜೀವನ

ಈ ಕಾಲದಲ್ಲಿ ತಿಲೋತ್ತಮೆಯ ಸ್ವರೂಪವು ವರ್ಣನೀಯವಾಗಿತ್ತು. ಈಗ ಆಕೆಯು ಆನಂದದಲ್ಲಿರುವಳೋ ದುಃಖದಲ್ಲಿರುವಳೋ ಎಂಬದನ್ನು ಹೇಳುವದು ಕಠಿಣವಾಗಿತ್ತು. ಯಾಕಂದರೆ, ಆಕೆಯು ಆನಂದದಲ್ಲಿರುವಳೆಂದು ಹೇಳಬೇಕೆಂದರೆ, ಆಕೆಯು ಕಣ್ಣೀರು ಸುರಿಸುತ್ತಿದ್ದಳು; ದುಃಖದಲ್ಲಿರುವಳೆಂದು ಹೇಳಬೇಕಾಗಿದ್ದರೆ ಆಕೆಯ ಮುಖದಲ್ಲಿ ಮುಗುಳು ನಗೆಯು ಒಪ್ಪುತ್ತಿತ್ತು. ಹೀಗೆ ಅದ್ಭುತವಾದ ದೃಶ್ಯದಿಂದ ಒಪ್ಪುವ ತಿಲೋತ್ತಮೆಯು ಕೈಯೊಳಗಿನ ತಾಂಬೂಲ ಪಾತ್ರೆಯನ್ನು ಕೆಳಗಿಟ್ಟು, ಪತಿಯ ಚರಣಗಳ ಮೇಲೆ ಮಸ್ತಕವನ್ನಿಟ್ಟಳು. ಆಗ ಜಗತ್ಸಿಂಗನು ಆಕೆಯನ್ನು ಹಿಡಿದೆತ್ತಿ ಸಂತಯಿಸುತ್ತ ಆಕೆಯನ್ನು ಕುರಿತು-ತಿಲೋತ್ತಮೆ, ನೀನು ಇಲ್ಲಿಗೆ ಹ್ಯಾಗೆ ಬಂದೆ? ಎಂದು ಪ್ರಶ್ನೆ ಮಾಡಿದನು; ಆದರೆ ಆನಂದಾತಿಶಯದಿಂದ ಕಂಠಬಿಗಿದು

ಒಂದೇಸವನೆ ಆನಂದ ಬಾಷ್ಪಗಳು ಉದುರಲು, ತಿಲೋತ್ತಮೆಯ ಬಾಯಿಂದ ಅಕ್ಷರಗಳು ಹೊರಡದಾದವು. ಆಕೆಯು ಪ್ರೇಮಭರದಿಂದ ಪತಿಯನ್ನು ಆಲಿಂಗಿಸಲು, ಅಕೃತ್ರಿಮ ಪ್ರೇಮದ ಆ ದಂಪತಿಗಳು ಮೂಕ ಭಾವದಿಂದ ಆಲಿಂಗನದ ಸ್ವರ್ಗಸುಖವನ್ನು ಬಹಳಹೊತ್ತು ಅನುಭವಿಸಿದರು; ಈ ಅಲಭ್ಯ ಸುಖವು ಆ ನೂತನ ಸುಬೇದಾರನ ಇಂದಿನ ಸುಖರಾಶಿಗೆ ಶಿಖರಪ್ರಾಯವಾಯಿತು.

ಹೀಗೆ ಅಕೃತ್ರಿಮ ಪ್ರೇಮದ ಆ ದಂಪತಿಗಳು ಆನಂದಾಶ್ರುಗಳುದುರುತ್ತಿರಲು, ಕೆಲಕಾಲ ಆಲಿಂಗನದ ಸೌಖ್ಯವನ್ನು ಹೊಂದಿದರು. ಅಷ್ಟರಲ್ಲಿಯೇ ತಿಲೋತ್ತಮೆಯು ಗೌರವಕ್ಕಾಗಿ ಪತಿಯಿಂದ ದೂರವಾಗಲು, ಜಗತ್ಸಿಂಗನು ಆಕೆಯನ್ನು ಕೈಹಿಡಿದು ಮಂಚದ ಮೇಲೆ ಕುಳ್ಳಿರಿಸುತ್ತ ಅತ್ಯಾದರದಿಂದ– ''ತಿಲೋತ್ತಮೆ, ನೀನು ಇಲ್ಲಿಗೆ ಹೇಗೆ ಬಂದೆ?'' ಎಂದು ಮತ್ತೆ ಪ್ರಶ್ನೆ ಮಾಡಿದನು. ಆಗ ತಿಲೋತ್ತಮೆಯು ವಿನಯದಿಂದ– ''ಈ ಪ್ರಶ್ನೆಯು ವಿಲಕ್ಷಣವಾಗಿದ್ದರೂ, ನನ್ನ ಲಗ್ನ ಮಾಡಿಕೊಂಡದ್ದರಿಂದ ತಮಗೊದಗಿದ ಅನರ್ಥವನ್ನು ಮನಸ್ಸಿನಲ್ಲಿ ತಂದರೆ, ತಾವು ಪ್ರಶ್ನೆ ಮಾಡಿದ್ದು ಯೋಗ್ಯವೆಂತಲೇ ಹೇಳಬೇಕಾಗುವದು; ಬೇರೆ ಯಾರಾದರೂ ಹೀಗೆ ಪ್ರಶ್ನೆಮಾಡಿದ್ದರೆ, ಅದನ್ನು ವಿಲಕ್ಷಣವೆಂದು ಭಾವಿಸಬೇಕಾಗುತ್ತಿತ್ತು; ಯಾಕಂದರೆ, ತನ್ನ ಗಂಡನ ಮನೆಯಲ್ಲಿರುವ ಸ್ತ್ರೀಗೆ ''ನೀನು ಇಲ್ಲಿಗೆ ಹೇಗೆ ಬಂದೆ?'' ಎಂದು ಕೇಳುವದು ವಿಲಕ್ಷಣವಲ್ಲವೇ? ಆ ಸ್ತ್ರೀಯಾದರೂ ಅದಕ್ಕೆ ಏನೆಂದುತ್ತರ ಕೊಡಬೇಕು? ಎಂದು ಕೇಳಲು, ತಿಲೋತ್ತಮೆಯು– ಶ್ರೀ ಕ್ಷೇತ್ರ ಪುರಿಯ ಯಾತ್ರೆಗೆ ಮಾನಸಿಂಹರು ಬಂದಾಗ ತಾನು ತನ್ನ ತಾಯಿಯ ಸಹಾಯದಿಂದ ಉರ್ಮಿಳಾ ರಾಣಿಯವರ ಆಶ್ರಯ ಪಡೆದದ್ದನ್ನೂ, ಆ ಕರುಣಾಮಯಳಾದ ರಾಣಿಯ ಕೃಪೆಯಿಂದ ತನಗೆ ಮಹಾರಾಜರ ಪರಿಚಯವಾದದ್ದನ್ನೂ, ತನ್ನ ಸೇವೆಯಿಂದ ಮಹಾರಾಜರು ಪ್ರಸನ್ನರಾದದ್ದನ್ನೂ, ಮಹಾರಾಣಿಯ ಚಾತುರ್ಯದಿಂದ ಮಹಾರಾಜರು ತನ್ನನ್ನು ಕ್ಷಮಿಸಿ ಸೊಸೆಯೆಂದು ತಿಳಿದು ತನ್ನನ್ನು ಸ್ವೀಕರಿಸಿದ್ದನ್ನೂ ಸ್ವಲ್ಪದರಲ್ಲಿ ಹೇಳಿದಳು. ಅದನ್ನೆಲ್ಲ ಕೇಳಿ ಜಗತ್ಸಿಂಗನು–'ತಿಲೋತ್ತಮೇ, ಎಲ್ಲ ಸಂಗತಿಗಳನ್ನೂ ಮನಸ್ಸಿನಲ್ಲಿ ತಂದು ಆಲೋಚಿಸಿದರೆ, ನಿನ್ನ ಬುದ್ಧಿ ಕೌಶಲ್ಯದಿಂದಲೇ ನಾನು ಈ ಶುಭದಿನವನ್ನು ಕಂಡೆನೆಂದು ಹೇಳಬೇಕಾಗುತ್ತದೆ. ನಾನು ಯಾವ ಶಬ್ದದಿಂದ ನಿನ್ನ ಉಪಕಾರವನ್ನು ನೆನಸಲಿ? ನನ್ನ ಬಿಡುಗಡೆಯು ನಿನ್ನಿಂದಲೇ ಆಯಿತೆಂಬದರಲ್ಲಿ ಎಳ್ಳಷ್ಟು ಸಂದೇಹವಿಲ್ಲ,

ಪತಿಯ ಈ ಮಾತುಗಳನ್ನು ಕೇಳಿ ತಿಲೋತ್ತಮೆಯು ಸರಳಮನಸ್ಸಿನಿಂದ– ಪ್ರಾಣನಾಥ, ತಾವು ನನ್ನನ್ನು ಅತಿಶಯವಾಗಿ ಪ್ರೀತಿಸುವದರಿಂದ, ನನ್ನ ಪರಿಶ್ರಮದಿಂದಲೇ ಬಿಡುಗಡೆಯಾಯಿತೆಂದು ತಾವು ತಿಳಿದುಕೊಳ್ಳುತ್ತೀರಿ; ಇದರಿಂದ ತಮಗೆ ನಿಜವಾದ ಸಂಗತಿಯು ತಿಳಿದಿರುವದಿಲ್ಲೆಂದು ಹೇಳಬೇಕಾಗುತ್ತದೆ. ನಾನು ನನ್ನ ಪ್ರಯತ್ನದಿಂದ ನನ್ನ ಸ್ಥಾನವನ್ನು ಸಂಪಾದಿಸಿಕೊಂಡು, ಮಹಾರಾಜರ ಕೃಪೆಯಿಂದ ಸೊಸೆಯೆಂದು ಸ್ವೀಕರಿಸಲ್ಪಟ್ಟೆನು. ಇದಕ್ಕಿಂತಲೂ ಹೆಚ್ಚಿನ ಕೆಲಸವೇನೂ ನನ್ನಿಂದ ಆಗಿರುವದಿಲ್ಲ. ಅಂದಬಳಿಕ ನಾನೇನು ಹೆಚ್ಚಿಗೆ ಮಾಡಿದ ಹಾಗಾಯಿತು? ತಮ್ಮ ಬಂಧವಿಮೋಚನೆಗಾಗಿ ನಾನೇನು ಪ್ರಯತ್ನಪಟ್ಟ

ಹಾಗಾಯಿತು? ಇದರಲ್ಲಿ ನನ್ನ ಚಾತುರ್ಯವಾದರೂ ಏನು ಇರುವದು? ಅದಕ್ಕಾಗಿ ತಾವು ನನ್ನನ್ನು ಹೊಗಳುವ ದಾದರೂ ಏಕೆ? ನಿಜವಾಗಿ ತಮ್ಮ ಸ್ತುತಿಗೆ ಪಾತ್ರರಾದವರು ಯಾರಾದರೂ ಇದ್ದರೆ, ಆಕೆಯು ಆಯೇಷೆಯೆಂಬದನ್ನು ಮರೆಯಬಾರದು. ಆ ಮಹಾತ್ಮಳ ಉಪಕಾರವನ್ನು ನಾನಷ್ಟೇ ಅಲ್ಲ ನೀವೂ ಸಹ ಎಷ್ಟು ಸ್ಮರಿಸಿದರೂ ತೀರದು. ತಮ್ಮನ್ನು ಈ ವೈಭವದ ಶಿಖರದ ಮೇಲೆ ಕುಳ್ಳಿರಿಸಿದವಳು ಆ ನವಾಬಜಾದಿನಿಯು! ಆಕೆಯ ದೀರ್ಘ ಪ್ರಯತ್ನದಿಂದ, ಹಾಗೂ ವಿಲಕ್ಷಣ ಚಾತುರ್ಯದ ಫಲವೇ ಇಂದಿನ ನಮ್ಮ ಸುದಿವಸವಾಗಿರುವದು. ಆಯೇಷೆಯ ಔದಾರ್ಯವು ಅದ್ವಿತೀಯ ವಾದದ್ದು. ಪರೋಪಕಾರ ನಿರತಳಾದ ಆ ತರುಣಿಯು ನಿಮ್ಮ ಸಲುವಾಗಿ ಬಹಳ ಕಷ್ಟಪಟ್ಟಿರುವಳು. ಆಕೆಯು ಯಾವ ತೊಂದರೆಯನ್ನು ಲಕ್ಷಿಸದೆ ಆಗ್ರಾ ಪಟ್ಟಣಕ್ಕೆ ಹೋಗಿ ಅಕಬರ ಬಾದಶಹರನ್ನು ಕಂಡು ನಿಮ್ಮ ಬಂಧವಿಮೋಚನೆ ಮಾಡಿಸಿದ್ದಲ್ಲದೆ, ನಿಮಗೆ ಈ ದೊಡ್ಡ ಅಧಿಕಾರವನ್ನು ಕೊಡಿಸಿದಳು. ಇದಲ್ಲದೆ ನಿಮಗಾಗಿ ಒಂದು ಲಕ್ಷ ರೂಪಾಯಿಗಳ ಜಹಗೀರನ್ನು ಆಕೆಯು ಬಾದಶಹರಿಂದ ಸಂಪಾದಿಸಿರುವಳೆಂದು ನಾನು ಕೇಳಿದ್ದೇನೆ; ಅಂದಬಳಿಕ ನಿಮ್ಮ ಬಂಧವಿಮೋಚನೆ ಯಾದುದಕ್ಕಾಗಿ, ಅದರಂತೆ ನಿಮಗೆ ದೊಡ್ಡ ಅಧಿಕಾರ ದೊರೆತದ್ದಕ್ಕಾಗಿ ನೀವು ಯಾರಿಗಾದರೂ ಕೃತಜ್ಞರಾಗಬೇಕೆನ್ನುತ್ತಿದ್ದರೆ, ಆಯೇಷೆಯೇ ಆ ಮಾನಕ್ಕೆ ಪಾತ್ರಳಿರುತ್ತಾಳೆ. ನಮಗೆ ಪ್ರಾಪ್ತವಾಗಿರುವ ಕಲ್ಪನಾತೀತ ಸುಖಕ್ಕೆ ಆಯೇಷೆಯ ಅವಿಶ್ರಾಂತ ಶ್ರಮವೇ ಕಾರಣವಾಗಿರುವದರಿಂದ, ನಾವು ಆಕೆಯ ಋಣದೊಳಗಿಂದ ಮುಕ್ತರಾಗಲಿಕ್ಕೆ ಯತ್ನಿಸಬೇಕು.

ತನ್ನ ಮೇಲಿರುವ ಆಯೇಷೆಯ ಧೃಢತರವಾದ ಪ್ರೇಮವನ್ನು ಜಗತ್ಸಿಂಗನು ಈ ಮೊದಲೇ ಅರಿತಿದ್ದನು; ಆದರೂ ತನ್ನ ಸಲುವಾಗಿ ಆಕೆಯು ಪಟ್ಟಶ್ರಮವನ್ನು ಮಾಡಿದ ಸಾಹಸವನ್ನು ಕೇಳಿ ಆತನ ಕಂಠವು ಸದ್ಗದಿತವಾಯಿತು. ಆತನು ತಿಲೋತ್ತಮೆಯನ್ನು ಕುರಿತು–

ಜಗತ್ಸಿಂಗ– ಪ್ರಿಯೇ, ನೀನು ಹೇಳುವದು ಯಥಾರ್ಥವು! ಆದರೆ ಆ ದೇವಿಯ ಋಣದಿಂದ ಹ್ಯಾಗೆ ಮುಕ್ತನಾಗಬೇಕೆಂಬುದೇ ತಿಳಿಯದಾಗಿದೆ.

ತಿಲೋತ್ತಮೆ–ನಾಥ, ಅದನ್ನು ನಾನು ತಮಗೆ ಹೇಳುವೆನು. ದಯಮಾಡಿ ನನ್ನ ಮಾತನ್ನು ನಡಿಸಿದರೆ, ನಾವಿಬ್ಬರೂ ಆಯೇಷೆಯ ಋಣದಿಂದ ಮುಕ್ತರಾಗುವೆವು. ನನ್ನ ಅಭಿಪ್ರಾಯವಿಷ್ಟೇ, ನೀವು ಆಯೇಷೆಯನ್ನು ಹೆಂಡತಿಯೆಂದು ಸ್ವೀಕರಿಸಬೇಕು.

ಜಗತ್ಸಿಂಗ–ಪ್ರಾಣೇಶ್ವರೀ, ನಿನ್ನ ಈ ಪ್ರಾರ್ಥನೆಯನ್ನು ಕೇಳಿ ನನಗೆ ಬಹಳ ಸಂತೋಷವಾಗುತ್ತದೆ. ನಿನ್ನಂಥ ಉದಾರ ಮನಸ್ಸಿನ ಹೆಂಡತಿಯು ಸಿಕ್ಕಿದ್ದರಿಂದ ನಾನು ಧನ್ಯನೇ ಸರಿ. ಆಯೇಷೆಯ ಸದ್ಗುಣಗಳಿಗೆ ಲುಬ್ಧಳಾಗಿ ನೀನು ಆಕೆಯನ್ನು ಸವತಿಯಾಗಿ ಮಾಡಿಕೊಳ್ಳಲಿಕ್ಕೆ ಹಿಂದೆ–ಮುಂದೆ ನೋಡದೆಯಿರುವದು ಸಾಧಾರಣ ಸಂಗತಿಯಲ್ಲ. ನಿನ್ನ ಹೃದಯವು ಬಹು ಉಚ್ಚತರದ್ದಾಗಿರುವದು; ಆದರೆ ಈ ಕಾರ್ಯವು ಶಕ್ಯವಿರುವದೇ ಎಂಬದನ್ನು ಕುರಿತು ನೀನು ಚೆನ್ನಾಗಿ ವಿಚಾರ ಮಾಡಿದಂತೆ ತೋರುವದಿಲ್ಲ. ನನಗಂತು ಈ ಕಾರ್ಯವು ಅಸಂಭವವಾಗಿ ತೋರುತ್ತದೆ.

ತಿಲೋತ್ತಮೆ–ಮಹಾರಾಜ, ಅಸಂಭವವೆಂದು ಯಾಕೆ ಹೇಳುವಿರಿ? ಆಯೇಷೆಯು ನಿಮ್ಮನ್ನು ಪ್ರೀತಿಸುವದರಿಂದ, ಈ ಕಾರ್ಯಕ್ಕೆ ಆಕೆಯಿಂದ ವಿಘ್ನವಾಗುವ ಸಂಭವವಿರುವದಿಲ್ಲ, ಇನ್ನು ಹಿರಿಯರ ಅಂಜಿಕೆಯದೊಂದು ದೊಡ್ಡ ವಿಘ್ನವು. ಆದರೆ ಆ ವಿಘ್ನವನ್ನು ಮನಸ್ಸಿನಲ್ಲಿ ತರುವ ಕಾರಣವಿಲ್ಲ, ಯಾಕಂದರೆ, ಮಹಾರಾಜ್ಞಿಯೂ ಮಹಾರಾಜರೂ ನಿಮ್ಮೊಡನೆ ಆಯೇಷೆಯ ಲಗ್ನ ಮಾಡಬೇಕೆಂದು ಹಲವು ಸಾರೆ ಆಲೋಚಿಸಿರುತ್ತಾರೆ. ಅವರು ಆಯೇಷೆಯ ಮುಂದೂ ಈ ಮಾತನ್ನು ತೆಗೆದಂತೆ ಮಾಡಿರುವರು. ತಮ್ಮ ಒಪ್ಪಿಗೆಯು ದೊರೆಯುವದೋ ಇಲ್ಲವೋ, ಎಂಬ ಅಪನಂಬಿಕೆಯಿಂದ ಆಯೇಷೆಯು ಅವರ ಮಾತಿಗೆ ಒಪ್ಪಿಕೊಂಡಿರಲಿಕ್ಕಿಲ್ಲ, ತಾವು ನನ್ನ ಮಾತು ನಡಿಸುತ್ತೇನೆಂದು ವಚನ ಕೊಟ್ಟರೆ, ನಾನು ಪ್ರಯತ್ನಮಾಡಿ ಆಯೇಷೆಯನ್ನು ಒಡಂಬಡಿಸುವೆನು.

ಜಗತ್ಸಿಂಗ–ಆಯೇಷೆಯು ನನ್ನೊಡನೆ ವಿವಾಹ ಮಾಡಿಕೊಳ್ಳಲಿಕ್ಕೆ ಒಡಂಬಡುವಳೆಂಬದು ಭ್ರಾಂತಿಯೇ ಸರಿ. ಯಾಕಂದರೆ, ಆಯೇಷೆಯು ತಾನು ನನ್ನನ್ನು ಪತಿಯ ಭಾವನೆಯಿಂದ ಪ್ರೀತಿಸುತ್ತಿದ್ದರೂ, ನಾನು ಆಕೆಯನ್ನು ಪತ್ನಿಯ ಭಾವನೆಯಿಂದ ಪ್ರೀತಿಸುವದಿಲ್ಲೆಂಬದು ಆಕೆಗೆ ಗೊತ್ತಿರುತ್ತದೆ. ನಾನಾದರೂ ಆಯೇಷೆಯನ್ನು ಪ್ರೀತಿಸುವದಿಲ್ಲವೆಂತಲ್ಲ, ಆದರೆ ನಿನ್ನಲ್ಲಿ ಸಂಪೂರ್ಣ ಪ್ರೇಮವನ್ನಿಟ್ಟ ನಾನು ಆಯೇಷೆಯನ್ನು ಪತ್ನಿ ಭಾವದಿಂದ ಪ್ರೀತಿಸಲಾರೆನು. ಈ ಮಾತು ಆಯೇಷೆಗೆ ಗೊತ್ತಿರುವದರಿಂದ, ಆಕೆಯು ನನ್ನೊಡನೆ ವಿವಾಹ ಮಾಡಿಕೊಳ್ಳಲು ಒಪ್ಪಿಕೊಳ್ಳಲಾರಳು.

ತಿಲೋತ್ತಮೆ– ಹಾಗಾದರೆ ಆ ಶೋಭಾಯಮಾನವಾದ ಕುಸುಮವು ಹೀಗೆಯೇ ಬಾಡಿ ಹೋಗಬೇಕೆಂದು ನೀವು ಇಚ್ಛಿಸುವಿರೋ! ಆ ಸುರ ರಮಣಿಯು ದಾರುಣವಾದ ದುಃಖದಿಂದ ತನ್ನ ಆಯುಷ್ಯವನ್ನು ಕಳೆಯುವದು ನಿಮಗೆ ಸಮ್ಮತವಾಗಿರುವದೋ? ಪಾಪ! ಆ ಹತಭಾಗ್ಯಳ ಪ್ರೇಮಕ್ಕೆ ಪ್ರತಿಫಲವು ನಿಮ್ಮಿಂದ ಯಾಕೆ ದೊರೆಯಬಾರದು?

ಜಗತ್ಸಿಂಗ–ತಿಲೋತ್ತಮೇ, ಪರಮೇಶ್ವರನ ಇಚ್ಛೆಯೇನಿರುತ್ತದೆಂಬದನ್ನು ನಾನೇನು ಹೇಳಲಿ? ಆದರೆ ಆಯೇಷೆಯು ತನ್ನ ಶೇಷಾಯುಷ್ಯವನ್ನು, ದಾರುಣವಾದ ಯಾತನೆಯಿಂದ ಕಳೆಯಬೇಕಾದೀತೆನ್ನುವ ಹಾಗೆ ನನಗೆ ತೋರುತ್ತದೆ. ಆಕೆಯ ದುಃಖನಿವಾರಣವು ಈ ಜನ್ಮದಲ್ಲಿ ಆಗಲಾರದು. ನಾನು ಆಕೆಯನ್ನು ಬಹಳವಾಗಿ ಪ್ರೀತಿಸುವೆನು. ಆಕೆಯ ಸದ್ಗುಣಗಳಿಗೆ ನಾನು ಅತ್ಯಂತ ಲುಬ್ಧನಾಗಿರುವೆನು. ಆಕೆಯ ಸೌಂದರ್ಯವು ನನಗೆ ಅದ್ವಿತೀಯವಾಗಿ ತೋರುವದು. ನನ್ನ ಮೇಲೆ ಆಕೆಯು ಮಾಡಿರುವ ಉಪಕಾರವನ್ನು ತೀರಿಸುವದು ಕಲ್ಪಾಂತರದಲ್ಲಿಯೂ ನನ್ನಿಂದಾಗದು? ಆದರೆ ಇಷ್ಟೆಲ್ಲ ನಿಜವಿದ್ದರೂ, ಆಯೇಷೆಯನ್ನು ಹೆಂಡತಿಯೆಂದು, ತಿಳಿಯಲಿಕ್ಕೆ ಮಾತ್ರ ನಾನು ಸಮರ್ಥನಾಗಿರುವದಿಲ್ಲ, ಪ್ರೀಯೇ, ನಿನ್ನನ್ನು ಹೆಂಡತಿಯನ್ನಾಗಿ ಮಾಡಿಕೊಂಡು, ನಿನಗೆ ಸಂಪೂರ್ಣ ಹೃದಯವನ್ನು ನಾನು ಕೊಟ್ಟುಬಿಟ್ಟಿರುವದರಿಂದ, ಆಯೇಷೆಯ ವಾಸಕ್ಕೆ ನನ್ನ ಹೃದಯದಲ್ಲಿ ಸ್ಥಳವೇ ಇಲ್ಲ, ಆಯೇಷೆಯು ಸಾಮಾನ್ಯಳಲ್ಲ, ಆಕೆಯು ಸಂಪೂರ್ಣ ಹೃದಯವನ್ನು ವ್ಯಾಪಿಸಿಕೊಂಡಿರತಕ್ಕವಳು ಸಂದಿಗೊಂದಿಗಳಲ್ಲಿ ಇರತಕ್ಕವಳಲ್ಲ, ಅಂದಬಳಿಕ

ನಾನು ಆಯೇಷೆ ಯನ್ನು ಹೇಗೆ ಲಗ್ನವಾಗಲಿ? ಆಯೇಷೆಯಾದರೂ ನನ್ನನ್ನು ಹ್ಯಾಗೆ ಲಗ್ನವಾಗುವಳು? ಆಕೆಯು ನನ್ನನ್ನು ಲಗ್ನವಾಗುವಹಾಗಿಲ್ಲ, ಮಂದಿಯನ್ನೂ ಲಗ್ನಮಾಡಿ ಕೊಳ್ಳುವಹಾಗಿಲ್ಲ. ಆದ್ದರಿಂದ ಆಯೇಷೆಯು ಈ ಜನ್ಮದಲ್ಲಿ ಕಷ್ಟದಿಂದ ಕಾಲಹರಣ ಮಾಡತಕ್ಕವಳೇ ಸರಿ. ತಿಲೋತ್ತಮೆ, ನಮ್ಮಿಬ್ಬರ ಮೇಲೆ ಆಯೇಷೆಯ ಪ್ರೇಮವು ವಿಶೇಷವಾಗಿರುವದು. ಆ ಪ್ರೇಮದ ಯೋಗ ದಿಂದಲೇ ಆಕೆಯು ನಮ್ಮ ಮೇಲೆ ಉಪಕಾರ ಮಾಡಿರುವಳಲ್ಲದೆ, ನಮ್ಮಿಂದ ಪ್ರತ್ಯುಪಕಾರವನ್ನು ಬಯಸಿ ಮಾಡಿರುವದಿಲ್ಲ. ಆಕೆಯು ನನ್ನ ಪ್ರೇಮಸಂಪಾದನದ ದೃಷ್ಟಿಯಿಂದ ಉಪಕಾರ ಮಾಡಿದ್ದರೆ, ಮೇಲಿಂದ ಮೇಲೆ ನನ್ನ ಭೆಟ್ಟಿಯನ್ನು ತಕ್ಕೊಳ್ಳುತ್ತಿದ್ದಳು. ಆದ್ದರಿಂದ ಸ್ವಲ್ಪವಾದರೂ ಸ್ವಾರ್ಥದ ಇಚ್ಛೆಯಿಲ್ಲದೆ ಆಕೆಯು ನಮ್ಮ ಮೇಲೆ ಉಪಕಾರ ಮಾಡಿದಂತಾಗಿರುವದು.

ತಿಲೋತ್ತಮೆ–ಸರಿ ಸರಿ; ತಮ್ಮ ಬೋಧದಿಂದ ಆಯೇಷೆಯ ಯೋಗ್ಯತೆಯ ಜ್ಞಾನವು ನನಗೆ ಕೆಲಮಟ್ಟಿಗೆ ಆದಂತಾಯಿತು. ಆಯೇಷೆಯು ತಮ್ಮ ಹೃದಯದೊಳಗಿನ ಸಂಪೂರ್ಣ ಪ್ರೇಮವನ್ನು ಸಂಪಾದಿಸಿದ ಹೊರತು ಸಂತುಷ್ಟಳಾಗಲಾರಳು. ಒಬ್ಬಾನೊಬ್ಬ ರಾಜನಿಗಿರುವ ಅನೇಕ ಹೆಂಡಿರಿಗೆ ''ನಾವು ರಾಣಿಯರು'' ಎಂದು ಹೇಳಿಕೊಳ್ಳಲಿಕ್ಕೆ ಆಸ್ಪದ ಸಿಕ್ಕಮಾತ್ರದಿಂದ ಅವರು ಸಂತುಷ್ಟ ರಾಗಿರುವಂತೆ, ಆಯೇಷೆಯು ಸಂತುಷ್ಟಳಾಗಿರಲಾರಳು; ಆಯೇಷೆಯ ಪ್ರೇಮ–ಸೂರ್ಯನ ಪ್ರಕಾಶವು ಹರಡಲಿಕ್ಕೆ ಸ್ವತಂತ್ರ ಹೃದಯಾಕಾಶವೇ ಬೇಕಾಗಿರುವದು; ತಮ್ಮ ಹೃದಯದಲ್ಲಿಯಂತು ಸ್ಥಳವಿಲ್ಲ; ಅಂದಬಳಿಕ ಆ ಮಹಾತ್ಮಳ ದುಃಖನಿವಾರಣವು ಹೇಗಾಗಬೇಕು? ಆದರೆ ಮಹಾರಾಜ, ಇದಕ್ಕೆ ಉತ್ತರವೇ ಇಲ್ಲವೆ? ಪ್ರಬಲ ವಾಸನೆಯಿಂದಲೂ ಭಗೀರಥ ಪ್ರಯತ್ನದಿಂದಲೂ ಅಸಾಧ್ಯ ಸಂಗತಿಗಳೂ ಸಾಧ್ಯವಾಗುತ್ತವೆಂದು ಹೇಳುತ್ತಾರೆ. ಆಯೇಷೆಯ ಪಾಣಿಗ್ರಹಣವನ್ನು ನೀವು ಮಾಡಿಕೊಳ್ಳಬೇಕೆಂಬ ವಾಸನೆಯು ನನಗೆ ಪ್ರಬಲವಾಗಿರುತ್ತದೆ; ಅದರ ಆ ವಾಸನೆಯು ಪೂರ್ತಿಯಾಗಬೇಕಾದರೆ, ನಾನು ಭಗೀರಥ ಪ್ರಯತ್ನವೇನು ಮಾಡಲಿ? ಅನ್ಯಾಯವಾಗಿ ಆಯೇಷೆಗಾಗುವ ತಾಪವನ್ನು ಸ್ಮರಿಸುವದು ಕೂಡ ನನ್ನಿಂದಾಗದು.

ಜಗತ್ಸಿಂಗ–ಪ್ರೀಯೇ, ಆಯೇಷೆಯ ದುಃಸ್ಥಿತಿಯ ಸ್ಮರಣೆಯಿಂದ ನಿನ್ನ ಕೋಮಲ ಹೃದಯಕ್ಕೆ ತಾಪವಾಗುವದು ಆಶ್ಚರ್ಯವಲ್ಲ. ವಾಸನಾಬಲದಿಂದ ಜನ್ಮಾಂತರದಲ್ಲಾದರೂ ಕಾಮನೆಯು ಪೂರ್ತಿಯಾಗುತ್ತಿರುತ್ತದಂತೆ, ನಿನ್ನ ಮನಸ್ಸಿನ ನೋವನ್ನು ಈಗಲೇ ಕಳೆಯುವದು ನನ್ನ ಕೈಯೊಳಗಿಲ್ಲ; ಆದರೂ ಸಮಾಧಾನ ಮಾಡಿಕೋ. ಇದರ ಮೇಲೆಯೂ ಈಶ್ವರೇಚ್ಛೆ ಇದ್ದಂತಾಗುವದು. ಈಶ್ವರೀ ತಂತ್ರದಲ್ಲಿ ಅಘಟಿತಘಟನಾ ಸಾಮರ್ಥ್ಯವು ಇರುತ್ತದೆ.

ಈ ಮೇರೆಗೆ ಮಾತಾಡುತ್ತ ಕುಳಿತಿರಲು, ಉರ್ಮಿಲಾರಾಣಿಯವರು ಜಗತ್ಸಿಂಗನನ್ನು ಊಟಕ್ಕಾಗಿ ಕರೆಕಳುಹಿದರು. ಜಗತ್ಸಿಂಗನು ಅಕೃತ್ರಿಮ ಪ್ರೇಮದ ತನ್ನ ತಾಯಿಯು ಪ್ರೇಮ ಪೂರ್ವಕವಾಗಿ ಬಡಿಸಿದ ಉತ್ತಮೋತ್ತಮ ಪದಾರ್ಥಗಳನ್ನು ಉಂಡು ಸಂತುಷ್ಟನಾದನು. ಇಷ್ಟು ದಿನ ಕಾರಾಗೃಹವಾಸದ ಕಷ್ಟದಿಂದ ಕಂಗಾಲಾಗಿದ್ದ ಜಗತ್ಸಿಂಗನ ಕಾಲಹರಣವು ತಿಲೋತ್ತಮೆಯ

ಸಹವಾಸದಿಂದ ಆನಂದಮಯವಾಯಿತು. ಆತನು ಬಂಗಾಲ, ಬಿಹಾರ, ಓಡಿಸಾ ಪ್ರಾಂತಗಳ ಸುಬೇದಾರನಾಗಿ ಆಡಳಿತವನ್ನು ಸಾಗಿಸಹತ್ತಿದ್ದನು. ಅದನ್ನು ನೋಡಿ ಮಾನಸಿಂಹನು ಸಂತೋಷಪಟ್ಟನು. ಬಾದಶಹರ ಅಪ್ಪಣೆಯಂತೆ ಮಾನಸಿಂಹನು ದಿಲ್ಲಿಗೆ ಹೊರಡುವ ಸಿದ್ಧತೆಯಾಯಿತು. ಮೂವರು ರಾಣಿಯರನ್ನು, ದಾಸದಾಸಿಯರನ್ನೂ ಕೂಡಿಕೊಂಡು ಅಂಬರಾಧೀಶ್ವರನು ದಿಲ್ಲಿಗೆ ಹೊರಟು ನಿಂತನು. ಆತನು ತನ್ನ ಮಗನಿಗೆ ರಾಜ್ಯದಾಡಳಿತದ ಸಂಬಂಧದಿಂದ ಹೇಳತಕ್ಕದ್ದನ್ನು ಹೇಳಿ, ಆತನ ಅಧಿಕಾರವು ಅಬಾಧಿತವಾಗಿ ನಡೆಯುವಂತೆಯೂ, ಆತನ ಕೀರ್ತಿಯು ದಿನದಿನಕ್ಕೆ ಹೆಚ್ಚುವಂತೆಯೂ ಆಶೀರ್ವದಿಸಿದನು. ಇತ್ತ ಊರ್ಮಿಲಾರಾಣಿಯು ತಿಲೋತ್ತಮೆಗೆ– ''ನೀನು ನಮ್ಮ ಸಂಗಡ ಬರುವೆಯಾ?'' ಎಂದು ಕೇಳಿದಳು. ಮಾನಸಿಂಹನಿಗಾದರೂ ತಿಲೋತ್ತಮೆಯನ್ನು ಬಿಟ್ಟು ಹೋಗಬೇಕಾದರೆ ಚಡಪಡಿಕೆಯಾದಂತಾಯಿತು. ಆದರೆ ಸೊಸೆಯನ್ನು ಸಂಗಡ ಕರಕೊಂಡು ಹೋದರೆ ಕುಮಾರನಿಗೆ ಅಸಮಾಧಾನವಾದೀತೆಂದು ತಿಳಿದು ತಿಲೋತ್ತಮೆಯನ್ನು ಸಂಗಡ ಕರಕೊಂಡು ಹೋಗಲಿಲ್ಲ. ವಿನಯಶಾಲಿಯಾದ ತಿಲೋತ್ತಮೆಯು, ತನ್ನ ಮನಸ್ಸಿನೊಳಗಿಲ್ಲದಿದ್ದರೂ ಅತ್ತೆ–ಮಾವಂದಿರ ಇಚ್ಛೆಯನ್ನು ಪೂರ್ಣಮಾಡಬೇಕೆಂಬ ಸೌಜನ್ಯದಿಂದ ಹೊರಡಲು ಸಿದ್ಧಳಾಗಿದ್ದಳು. ಆದರೆ ಉರ್ಮಿಲಾರಾಣಿಯು ಪ್ರೇಮಪೂರ್ವಕವಾಗಿ ಆಕೆಯ ಪ್ರಯಾಣವನ್ನು ತಡೆದದ್ದರಿಂದ, ಆ ನಮ್ರಭಾವದ ಸೊಸೆಯು ನಿಂತುಕೊಳ್ಳಬೇಕಾಯಿತು. ಮಾನಸಿಂಹನಿಗೂ, ಉರ್ಮಿಲಾರಾಣಿಗೂ ತಿಲೋತ್ತಮೆಯನ್ನು ಅಗಲಿ ಹೋಗುವಾಗ ಬಹಳ ವ್ಯಸನವಾಯಿತು. ಹೊರಟುನಿಂತ ಮಾವನಿಗೆ ತಿಲೋತ್ತಮೆಯು ಕಣ್ಣೀರು ಹಾಕುತ್ತ ನಮಸ್ಕರಿಸಲು, ಕಠೋರ ಹೃದಯದ ವೀರ ಶ್ರೇಷ್ಠನಾದ ಮಾನಸಿಂಹನ ಕಣ್ಣುಗಳೊಳಗಿಂದ ಬಳಬಳ ನೀರುಗಳು ಉದುರಿದವು. ಉರ್ಮಿಲಾರಾಣಿಯ ಶೋಕವಂತು ತಡೆಯಲಸಾಧ್ಯವಾಯಿತು. ಆಕೆಯು ತಿಲೋತ್ತಮೆಯನ್ನು ಅಪ್ಪಿಕೊಂಡು ಹೊಟ್ಟೆಯ ಮಗಳಂತೆ ಆಕೆಯ ಸಮಾಧಾನಮಾಡಿದಳು. ಜಗತ್ಸಿಂಗನ ಸಹಾಯಕ್ಕೆಂದು ಮಾನಸಿಂಹನು ತನ್ನ ಚಿಕ್ಕ ಮಗನಾದ ಕುಮಾರ ಮಹಾಸಿಂಹನನ್ನು ಪಾಟಣಾ ಪಟ್ಟಣದಲ್ಲಿ ಇಟ್ಟನು. ಮಹಾಸಿಂಹನು ಚತುರಸೇನಾಪತಿಯೂ, ಸಾಹಸಿಯಾದ ವೀರನೂ, ಮೊಗಲ ಬಾದಶಹರ ಏಕನಿಷ್ಠ ಸೇವಕನೂ ಆಗಿದ್ದನು. ಜಗತ್ಸಿಂಗನಿಗಿಂತ ಮಹಾಸಿಂಹನು ಎರಡು ವರ್ಷ ಚಿಕ್ಕವನಾಗಿದ್ದನು.

ಜಗತ್ಸಿಂಗನ ಆಡಳಿತದಲ್ಲಿ ಮೊದ ಮೊದಲಿಗೆ ಬಂಗಾಲ, ಬಿಹಾರ, ಓಡಿಸಾ ಪ್ರಾಂತಗಳಲ್ಲಿ ವಿಶೇಷ ಗೊಂದಲವೇಳಲಿಲ್ಲ. ರಾಜಕಾರ್ಯವು ಸುಸೂತ್ರವಾಗಿ ಸಾಗಿತು. ಪ್ರಜೆಗಳು ಯಾವ ತೊಂದರೆಯೂ ಇಲ್ಲದೆ, ನಿಶ್ಚಿಂತೆಯಿಂದ ಕಾಲಹರಣ ಮಾಡಹತ್ತಿದರು; ಅಸಂತೋಷದ ಚಿನ್ಹವು ಎಲ್ಲಿಯೂ ಉಳಿದಂತೆ ತೋರಲಿಲ್ಲ. ರಾಜಕುಮಾರನಾದ ಜಗತ್ಸಿಂಗನು ತನ್ನ ಪ್ರೀಯ ಪತ್ನಿಯಾದ ತಿಲೋತ್ತಮೆಯ ಸಹವಾಸದಿಂದ ಉಚ್ಚ ಪದವಿಯನ್ನು ಉಪಭೋಗಿಸುತ್ತ ಆನಂದದಿಂದ ಕಾಲಹರಣ ಮಾಡಹತ್ತಿದನು. ಆದರೆ ಈ ಜಗತ್ತಿನಲ್ಲಿ ಸರ್ವಕಾಲದಲ್ಲಿಯೂ ಆನಂದ ಸ್ಥಿತಿಯು ಯಾರಿಗೂ ಸ್ಥಿರವಾಗಿ ಉಳಿದೇ ಉಳಿದೀತೆಂದು ಹೇಳಲಿಕ್ಕೆ ಆಗುವದಿಲ್ಲ. ಯಾವ ಸಂಸಾರಿಕರಿಗೂ ಸ್ಥಿರವಾದ ಆನಂದವು ಆಗದಿರುವಾಗ ಅದು

ಜಗತ್ಸಿಂಗನಿಗಾದರೂ ಯಾಕೆ ಆಗಬೇಕು? ಓಡಿಸಾ ಪ್ರಾಂತದಿಂದ ರಾಮಚಂದ್ರದೇವನು ಜಗತ್ಸಿಂಗನಿಗೆ–''ನವಾಬ ಉಸ್ಮಾನಖಾನನು ಪ್ರಚಂಡವಾದ ಸೇನೆಯನ್ನು ಕೂಡಿಸುತ್ತಿರುವನು, ಆತನು ಬಾದಶಹರ ಅಧಿಕಾರವನ್ನು ಬದಿಗೊತ್ತಬೇಕೆಂದು ಮಾಡಿದಂತೆ ತೋರುತ್ತದೆ. ಸ್ವಲ್ಪ ದಿವಸಗಳಲ್ಲಿ ಘೋರವಾದ ಯುದ್ಧ ಪ್ರಸಂಗವು ಒದಗಬಹುದಾದ್ದರಿಂದ ಜಾಗರೂಕ ರಾಗಿರಬೇಕು'' ಎಂದು ಹೇಳಿಕಳಿಸಿದನು. ಅದನ್ನು ಕೇಳಿ ನೂತನ ಸುಬೇದಾರನು ಚಿಂತಾಮಗ್ನ ನಾದನು. ಆತನು ತನ್ನ ತಮ್ಮನಾದ ಮಹಾಸಿಂಹನನ್ನು ಕರೆಸಿ ಆಲೋಚನೆಯನ್ನು ಕೇಳಲು, ಪಠಾಣರೊಡನೆ ಯುದ್ಧ ಮಾಡುವದಕ್ಕಾಗಿ ನಮ್ಮ ಸೈನ್ಯವನ್ನು ಸಿದ್ಧಗೊಳಿಸಬೇಕೆಂದು ಅವನು ಹೇಳಿದನು. ಮೊಗಲ ಸೈನ್ಯವೂ ಯುದ್ಧಕ್ಕೆ ಸನ್ನದ್ಧವಾಗತೊಡಗಿತು. ಅಷ್ಟರಲ್ಲಿ ಉಸ್ಮಾನಖಾನನು ಪುರಿಯ ಮೇಲೆ ದಾಳಿ ಮಾಡಿ ರಾಮಚಂದ್ರದೇವನನ್ನು ಓಡಿಸಿದನೆಂಬ ವರ್ತಮಾನವು ಬಂದಿತು. ಪಠಾಣರು ವಿಲಕ್ಷಣವಾದ ಆವೇಶದಿಂದ ಕಾದಿ ಭರದಿಂದ ತಮ್ಮ ಅಧಿಕಾರವನ್ನು ಸ್ಥಾಪಿಸುವರೆಂತಲೂ ಚಾರರು ಸುದ್ದಿಯನ್ನು ತಂದರು.

ಇದನ್ನು ಕೇಳಿದ ಕೂಡಲೆ ಕುಮಾರ ಮಹಾಸಿಂಹನು ಪಠಾಣರನ್ನು ದಂಡಿಸುವದಕ್ಕಾಗಿ ಪ್ರಚಂಡ ಸೈನ್ಯದೊಡನೆ ಓಡಿಸಾ ಪ್ರಾಂತದ ಮೇಲೆ ಸಾಗಿಹೋದನು. ಭದ್ರಕೇದಾರದ ಬಳಿಯಲ್ಲಿ ಅವೆರಡು ಸೈನ್ಯಗಳ ನಡುವೆ ಯುದ್ಧವು ಆರಂಭವಾಯಿತು. ಆ ಘನಘೋರ ಯುದ್ಧದಲ್ಲಿ ಪಠಾಣರ ಮುಖ್ಯ ಸೇನಾಪತಿಯಾದ ಉಸ್ಮಾನ ಖಾನನು ಸ್ವತಃ ಸೈನ್ಯವನ್ನು ನಡಿಸಿಕೊಳ್ಳುತ್ತಿದ್ದನು. ಆತನು ಯುದ್ಧದಲ್ಲಿ ಅಪೂರ್ವವಾದ ಉತ್ಸಾಹವನ್ನು ವ್ಯಕ್ತಮಾಡಿದನು. ''ಹೊಡಿಯಬೇಕು, ಇಲ್ಲವೆ ಮಡಿಯಬೇಕು'' ಎಂಬ ನಿಶ್ಚಯದಿಂದ ಪಠಾಣರು ಅಂದು ಕಾದುತ್ತಿದ್ದದ್ದರಿಂದ, ಅವರಲ್ಲಿ ಅಪೂರ್ವವಾದ ಆವೇಶವು ತೋರುತ್ತಿತ್ತು, ಅವರ ಆವೇಶಕ್ಕೆ ಮೊಗಲರ ಸೈನ್ಯವು ತಡೆಯಲಿಲ್ಲ, ಜಯಲಕ್ಷ್ಮಿಯು ಪಠಾಣರಿಗೆ ಮಾಲೆಹಾಕಿದಳು. ಸೋಲಿನ ಕುಂದು ಮೊಗಲರಿಗೆ ತಗಲಿತು. ಮಹಾಸಿಂಹನ ಹಲವು ಸೈನಿಕರು ಆ ಯುದ್ಧದಲ್ಲಿ ದೇಹವಿಟ್ಟರು. ಉಳಿದವರು ಪ್ರಾಣರಕ್ಷಣಕ್ಕಾಗಿ ದಾರಿಸಿಕ್ಕತ್ತ ಓಡಹತ್ತಿದರು. ಮಹಾಸಿಂಹನು ತತ್ತರಿಸಿದನು. ಆತನೂ ರಣಕ್ಷೇತ್ರದಲ್ಲಿ ಬೆನ್ನು ತೋರಿಸಬೇಕಾಯಿತು. ಅತ್ತ ವಿಜಯ ಮದದಿಂದ, ಉನ್ಮತ್ತರಾದ ಪಠಾಣರು ಕ್ರಮಕ್ರಮವಾಗಿ ಓಡಿಸಾ ಪ್ರಾಂತವನ್ನು ಕೈವಶ ಮಾಡಿಕೊಂಡರು. ಆದರೆ ಇಷ್ಟರಿಂದ ವಿಜಯಮದದಿಂದ ಉನ್ಮತ್ತನಾದ ಉಸ್ಮಾನಖಾನನು ತೃಪ್ತನಾಗಲಿಲ್ಲ, ಆತನು ತನ್ನ ಸೈನ್ಯದ ಮೋರೆಯನ್ನು ಬಂಗಾಲಪ್ರಾಂತದ ಕಡೆಗೆ ತಿರುಗಿಸಿದನು. ಅದನ್ನು ತರಬುವದಕ್ಕಾಗಿ ಮಹಾಸಿಂಹನು ವಿಶ್ವಪ್ರಯತ್ನ ಮಾಡಿದನು. ಆದರೆ ಆದರಿಂದ ಪ್ರಯೋಜನವೇನು ಆಗಲಿಲ್ಲ, ಕಡೆಗೆ ಸ್ವತಃ ಜಗತ್ಸಿಂಗನು ರಣಕ್ಷೇತ್ರಕ್ಕೆ ಬರುವ ಪ್ರಸಂಗವು ಬಂದಿತು. ಅಷ್ಟರಲ್ಲಿ ಪಠಾಣರು ಅರ್ಧಕ್ಕಿಂತ ಹೆಚ್ಚು ಬಂಗಾಲ ಪ್ರಾಂತವನ್ನು ಕೈವಶಮಾಡಿಕೊಂಡಿದ್ದರು. ಸ್ವಲ್ಪಹೊತ್ತಿನಲ್ಲಿಯೇ ಮೇದಿನೀಪುರ, ಮಲ್ಲಭೂಮಿ, ಕಾರ್ಲಹಾರ, ವೀರಭೂಮಿ, ಬಾಕುಂತ, ಬರದಾವನದ ಬಹುದೊಡ್ಡ ಭಾಗ ಇವಿಷ್ಟನ್ನು ಪಠಾಣರು ತಮ್ಮ ಅಧಿಕಾರಕ್ಕೆ ಒಳಪಡಿಸಿಕೊಂಡರು. ಒಟ್ಟಿಗೆ ಯುದ್ಧದಲ್ಲಿ ಉಸ್ಮಾನಖಾನನು ಒಂದೇಸವನೆ

ಗೆಲ್ಲುತ್ತ ನಡೆದನು. ಆತನ ಶೌರ್ಯವನ್ನೂ, ಯುದ್ಧ ಚಾತುರ್ಯವನ್ನೂ ನೋಡಿ ಮೊಗಲರು ಆಶ್ಚರ್ಯಪಟ್ಟರು. ಆತನ ಬಾಹುಗಳಲ್ಲಿಯ ಅಮಾನುಷ ಶಕ್ತಿ, ಹೃದಯ ದೊಳಗಿನ ನೆಲೆಯಿಲ್ಲದ ಉತ್ಸಾಹ ಇವನ್ನು ನೋಡಿ ಈತನು ಹೀಗೆಯೇ ಜಯಶೀಲನಾಗುತ್ತಾ ಮೊಗಲರನ್ನು ಮತ್ತೆ ಮೀರಿ ನಿಲ್ಲುವನೆಂದು ಜನರು ಅನ್ನಹತ್ತಿದರು. ಒಡಿಸಾ ಪ್ರಾಂತವಂತೂ ಮೊದಲೇ ಆತನ ಕೈಸೇರಿತು; ಸ್ವಲ್ಪ ದಿವಸಗಳಲ್ಲಿ ಆತನು ಬಂಗಾಲ, ಬಿಹಾರ ಪ್ರಾಂತಗಳನ್ನು ಸ್ವಾಧೀನಪಡಿಸಿಕೊಳ್ಳುವಂತೆ ತೋರಿತು. ನೋಡುವವರು ಪುನಃ ಉಸ್ಮಾನನ ಶೌರ್ಯ ಸಂಜೀವನವಾಯಿತೆಂದು ಭಾವಿಸಿದರು.

## ಪ್ರೇಮಾಂಧತೆ

ಉಸ್ಮಾನನ ಈ ಜಯದ ವಾರ್ತೆಯನ್ನು ಕೇಳಿ ಆಯೇಷೆಗೆ ಪರಮಾನಂದವಾಯಿತು. ಆಕೆಯು ಕೈಯಲ್ಲಿ ಶಸ್ತ್ರವನ್ನು ಧರಿಸಿ ಮಹಿಷಾಸುರ ಮರ್ದಿನಿಯಂತೆ ಸ್ವತಃ ಯುದ್ಧ ಮಾಡದಿದ್ದರೂ ಯುದ್ಧದ ಚಾಲಕಳು ಆಕೆಯೇ ಆಗಿದ್ದಳು. ಹಲವು ಯುದ್ಧಗಳಲ್ಲಿ ಆಕೆಯು ತನ್ನ ಪರಿವಾರದೊಡನೆ ಉಸ್ಮಾನನನ್ನು ಹಿಂಬಾಲಿಸಿ ಎಷ್ಟೋ ಸಾರೆ ಹೋಗಿದ್ದಳು. ಉಸ್ಮಾನನು ದಾರುಣವಾದ ಯುದ್ಧದಲ್ಲಿ ಜರ್ಝರನಾಗಿ ಬಂದಾಗ, ಆಯೇಷೆಯೇ ಆತನನ್ನು ಉತ್ಸಾಹಗೊಳಿಸಿ ಯುದ್ಧಕ್ಕೆ ಕಳಿಸುತ್ತಿದ್ದಳು. ಆಕೆಯು ತನ್ನ ಬುದ್ಧಿ ಚಾತುರ್ಯದಿಂದ ಪ್ರಸಂಗಕ್ಕನುಸರಿಸಿ ಉಸ್ಮಾನನಿಗೆ ತೋರಿಸಿದ ಮಾರ್ಗವೇ ಆತನ ವಿಜಯ ಸಂಪಾದನೆಗೆ ಕಾರಣವಾಯಿತು. ಆಯೇಷೆಯು ಬೇನೆಯಿಂದ ಎದ್ದಬಳಿಕ ಒಂದುದಿನ ಉಸ್ಮಾನನೊಡನೆ ಆಕೆಯು ಮಾತಾಡುವಾಗ ಯುದ್ಧದಲ್ಲಿಯ ಜಯದ ಸಂಬಂಧದಿಂದ ಉಸ್ಮಾನನು ಆಕೆಯ ಮುಂದೆ ಆಡಿದ್ದೆಲ್ಲ ಈಗ ನಿಜವಾದಂತೆ ಆಗಿತ್ತು. ಉಸ್ಮಾನನ ಅಬ್ಬರಕ್ಕೆ ಮೊಗಲರು ತತ್ತರಿಸಿದರು. ಜಗತ್ಸಿಂಗನು ಸ್ವತಃ ರಣಾಂಗಣಕ್ಕೆ ಬಂದಿದ್ದರೂ, ಉಸ್ಮಾನನನ್ನು ಸೋಲಿಸಲಿಕ್ಕೆ ಸಮರ್ಥನಾಗಲಿಲ್ಲ, ಆತನು ಖಾನನಿಗೆ ಎದುರಿಗೆ ನಿಂತು ಯುದ್ಧಮಾಡದೆ, ಮರೆ–ಮೋಸದ ರೀತಿಯಿಂದ ಯುದ್ಧಮಾಡುತ್ತಲಿದ್ದನು. ಉಸ್ಮಾನನು ವರ್ಧಮಾನವನ್ನು ಗೆಲ್ಲುವದಕ್ಕಾಗಿ ಬಹಳ ಆತುರಪಡುತ್ತಿದ್ದನು. ಯಾಕಂದರೆ, ವರ್ಧಮಾನವನ್ನೊಂದು ಗೆದ್ದು ಬಿಟ್ಟರೆ ಬಂಗಾಲದಲ್ಲಿ ಆತನ ಅಧಿಕಾರವು ಸ್ಥಿರವಾದಂತಾಗುತ್ತಿತ್ತು. ಈ ಉದ್ದೇಶದಿಂದ ಆತನು ಮಂದಾರಣಗಡಕ್ಕೆ ದಂಡನ್ನು ಕಳಿಸಿದನು; ಯಾಕಂದರೆ, ಮಂದಾರಣ ಗಡವನ್ನು ಸ್ವಾಧೀನ ಪಡಿಸಿಕೊಂಡು, ಅಲ್ಲಿ ಮದ್ದು ಗುಂಡಿನ ಸಂಚಯ ಮಾಡಿಟ್ಟುಕೊಂಡುಬಿಟ್ಟರೆ, ವರ್ಧಮಾನವನ್ನು ಸ್ವಾಧೀನ-ಪಡಿಸಿಕೊಳ್ಳಲಿಕ್ಕೆ ಸುಲಭವಾಗುತ್ತಿತ್ತು; ಇದಲ್ಲದೆ ಮಂದಾರಣಗಡವು ಜಗತ್ಸಿಂಗನ ಮಾವನ ಮನೆಯಾದದ್ದರಿಂದ , ಅಲ್ಲಿಗೆ ಜಗತ್ಸಿಂಗನು ಹೋಗ ಬರುವ ಸಂಭವವು ವಿಶೇಷವಾಗಿತ್ತು. ಈ ಪ್ರಸಂಗದಲ್ಲಿ ಅಕಸ್ಮಾತ್ ಜಗತ್ಸಿಂಗನನ್ನು ಸೆರೆಹಿಡಿದರೆ ದೊಡ್ಡ ಕೆಲಸವಾಗುವದೆಂತಲೂ ಉಸ್ಮಾನನು

ಆಲೋಚಿಸಿದ್ದನು. ಇದೇ ಉದ್ದೇಶದಿಂದ ಖಾನನು ತನ್ನ ಶೂರರಾದ ಪಠಾಣ ದಂಡಾಳುಗಳಿಗೆ, ಅಲ್ಲಲ್ಲಿ ಗುಪ್ತವಾಗಿ ಕಾದು ಇದ್ದು, ಪ್ರಸಂಗ ಒದಗಿದ ಕೂಡಲೇ ಜಗತ್ಸಿಂಗನನ್ನು ಸೆರೆ ಹಿಡಿಯ ಬೇಕೆಂದು ಆಜ್ಞಾಪಿಸಿದ್ದನು. ಸೆರೆಹಿಡಿಯುವದು ಸಾಧಿಸದ ಪಕ್ಷದಲ್ಲಿ ಅವನನ್ನು ಕೊಲ್ಲಬೇಕೆಂದು ತನ್ನ ದಂಡಾಳುಗಳಿಗೆ ಆತನ ಅಪ್ಪಣೆಯಾಗಿತ್ತು. ತನ್ನ ದಂಡಾಳುಗಳು ಮೋಸದಿಂದ ಜಗತ್ಸಿಂಗನನ್ನು ಯಾವ ರೀತಿಯಿಂದಾದರೂ ಗೊತ್ತಿಗೆ ಹಚ್ಚಿದರೆಂದರೆ, ತಾನು ಮಂದಾರಣ ಗಡವನ್ನು ಮುತ್ತಿ ಅದನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಉಸ್ಮಾನನು ಆಲೋಚಿಸಿದ್ದನು.

ಉಸ್ಮಾನನ ಅಪ್ಪಣೆಯಂತೆ ದಂಡಾಳುಗಳು ಮಂದಾರಣಗಡದ ಸುತ್ತಮುತ್ತಲಿನ ಅಡವಿಯಲ್ಲಿ ಅಡಗಿಕೊಂಡು ಕುಳಿತು, ಜಗತ್ಸಿಂಗನ ಹಾದಿಯನ್ನು ನೋಡಿದರು; ಆದರೆ ಎಷ್ಟು ದಿನಗಳಾದರೂ ಅವರಿಗೆ ಜಗತ್ಸಿಂಗನ ಸುಳುವು ಹತ್ತಲಿಲ್ಲ. ಜಗತ್ಸಿಂಗನಾದರೂ ಉಸ್ಮಾನನ ದಂಡಿಗೆ ಎದುರಾಗಿ ನಿಂತು ಯುದ್ಧ ಮಾಡುವದನ್ನು ಬಿಟ್ಟುಬಿಟ್ಟನು. ಮರೆ-ಮೋಸದ ಯುದ್ಧದಿಂದಲೇ ಉಸ್ಮಾನನನ್ನು ಹಣ್ಣಿಗೆ ತರಬೇಕೆಂದು ಯೋಚಿಸಿ, ತನ್ನ ಶೂರ ಸೈನಿಕರೊಡನೆ ಗುಪ್ತರೀತಿಯಿಂದ ಸಂಚರಿಸುತ್ತಿದ್ದನು. ಈ ರೀತಿಯಾಗಿ ಅವನು ಸ್ವಲ್ಪ ದಂಡನ್ನು ತಕ್ಕೊಂಡು ಹೊರಟು ಓಡಿಸಾದ ಕಡೆಗೆ ಸಾಗಿದನು. ಹೀಗೆ ಇಬ್ಬರು ತರುಣ ವೀರರು ಒಬ್ಬರನ್ನೊಬ್ಬರು ಬಲೆಯಲ್ಲಿ ಹಿಡಿಯಬೇಕೆಂದು ಹೊಂಚು ಹಾಕಿ, ಸಂಗಡ ತಮ್ಮ ದಂಡಾಳುಗಳನ್ನು ಕಟ್ಟಿಕೊಂಡು ಸಂಚರಿಸುತ್ತಿದ್ದರು. ಜಗತ್ಸಿಂಗನು ಹೀಗೆ ಸಂಚರಿಸುತ್ತ ಸುವರ್ಣ ರೇಖಾನದಿಯ ತೀರವನ್ನು ಮುಟ್ಟಿದಾಗ ಸಮೀಪದಲ್ಲಿಯೇ ಉಸ್ಮಾನನ ದಂಡಿನ ಬೀಡು ಬಿಟ್ಟಿರುವದೆಂಬ ಸುದ್ದಿಯು ಆತನಿಗೆ ಹತ್ತಿತು. ಪಠಾಣ ಒಡೆಯನ ಮೇಲೆ ಬೀಳಲಿಕ್ಕೆ ಇದು ತಕ್ಕ ಸಮಯವಾಗಿತ್ತು, ಯಾಕಂದರೆ, ಉಸ್ಮಾನನ ಬಳಿಯಲ್ಲಿ ದಂಡಾಳುಗಳು ಬಹು ಸ್ವಲ್ಪ ಜನರಿದ್ದರು. ಈ ಸಂಧಿಯನ್ನು ಸಾಧಿಸಿ ಜಗತ್ಸಿಂಗನು ಪಠಾಣರ ಮೇಲೆ ಬಿದ್ದನು.

ಹೀಗೆ ಅಕಸ್ಮಾತ್ತಾಗಿ ಜಗತ್ಸಿಂಗನು ತನ್ನ ಮೇಲೆ ಬಿದ್ದದ್ದನ್ನು ನೋಡಿ ಉಸ್ಮಾನನು ಚಿಂತೆಗೊಳಗಾದನು. ತನ್ನ ಸ್ವಲ್ಪ ದಂಡು ಜಗತ್ಸಿಂಗನ ದೊಡ್ಡ ದಂಡಿಗೆ ಈಡಾಗಲಿಕ್ಕಿಲ್ಲೆಂದು ಆತನು ತಿಳಿದನು. ಸುಮ್ಮನೆ ಸೈನ್ಯದ ಸಂಹಾರ ಮಾಡಿಸುವದಕ್ಕಿಂತ, ತಾನೊಬ್ಬನೇ ಜಗತ್ಸಿಂಗ ನೊಡನೆ ದ್ವಂದ್ವ ಯುದ್ಧ ಮಾಡುವದು ನೆಟ್ಟಗೆಂದು ಆತನು ನಿಶ್ಚಯಿಸಿ, ಒಬ್ಬ ದೂತನನ್ನು ಜಗತ್ಸಿಂಗನ ಬಳಿಗೆ ಕಳಿಸಿದನು. ದೂತನು ಒಡೆಯನ ಅಪ್ಪಣೆಯಂತೆ ಜಗತ್ಸಿಂಗನ ಬಳಿಗೆ ಬಂದು-ಮಹಾರಾಜ, ನನ್ನನ್ನು ನವಾಬ ಸಾಹೇಬರು ತಮ್ಮ ಬಳಿಗೆ ಕಳಿಸಿದ್ದಾರೆ. ಸುಮ್ಮನೆ ಸೈನ್ಯದ ಸಂಹಾರ ಮಾಡುವದಕ್ಕಿಂತ, ಉಭಯತರು ದ್ವಂದ್ವ ಯುದ್ಧಮಾಡುವದು ನೆಟ್ಟಗೆಂದು ವಿಜ್ಞಾಪಿಸಲು ನನಗೆ ಹೇಳಿರುವರು. ಇಬ್ಬರ ಯುದ್ಧದ ಕಡೆಯ ಪರಿಣಾಮವೇ ಮೊಗಲ-ಪಠಾಣರ ಯುದ್ಧದ ಕಡೆಯ ಪರಿಣಾಮವೆಂದು ತಿಳಿಯತಕ್ಕದ್ದು. ಇದಕ್ಕೆ ತಾವು ಒಪ್ಪಿಕೊಳ್ಳುತ್ತಿದ್ದರೆ, ನವಾಬಸಾಹೇಬರೂ ಒಪ್ಪಿಕೊಳ್ಳುವರು. ಎಂದು ಹೇಳಲು, ಜಗತ್ಸಿಂಗನು ತನ್ನ ಸೈನ್ಯಕ್ಕೆ ಯುದ್ಧವನ್ನು ನಿಲ್ಲಿಸಬೇಕೆಂದು ಆಜ್ಞಾಪಿಸಿ ದೂತನಿಗೆ- ''ಯಾಕಾಗಲೊಲ್ಲದು, ದ್ವಂದ್ವ ಯುದ್ಧಕ್ಕೆ ನನ್ನ ಒಪ್ಪಿಗೆಯಿರುತ್ತದೆ. ನವಾಬಸಾಹೇಬರ ಇಚ್ಛೆಯನ್ನು ಪೂರ್ಣಮಾಡಲು ನಾನು ಸಿದ್ಧನಿರುತ್ತೇನೆ. ಈ ಸಂಗತಿಯನ್ನು ಅವರಿಗೆ ತಿಳಿಸು'' ಎಂದು ಹೇಳಿದನು. ದೂತನು

ನಮಸ್ಕರಿಸಿ ನವಾಬಸಾಹೇಬರ ಬಳಿಗೆ ಬಂದು, ಜಗತ್ಸಿಂಗರು ದ್ವಂದ್ವ ಯುದ್ಧಕ್ಕೆ ಸಿದ್ಧರಿರುವರೆಂದು ತಿಳಿಸಿದನು. ಕೂಡಲೆ ಖಾನನು ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ಡೇರೆಯಿಂದ ಹೊರಬಿದ್ದನು. ಆತನು ಯುದ್ಧಭೂಮಿಗೆ ಬರಲು, ಅಲ್ಲಿ ಜಗತ್ಸಿಂಗನು ಕುದುರೆಯನ್ನು ಹತ್ತಿಕೊಂಡು ಸಿದ್ಧನಾಗಿ ನಿಂತಿದ್ದನು. ಆತನಿಗೆ ಉಸ್ಮಾನ ಖಾನನು ಕಾಲ ನಡಿಗೆಯಿಂದಲೇ ಎದುರಾದನು. ಆದರೆ ಅಶ್ವಾರೂಢನು ಪಾದಚಾರಿಯೊಡನೆ ಯುದ್ಧಮಾಡುವದು ನ್ಯಾಯ ವಲ್ಲವೆಂದು ತಿಳಿದು, ಜಗತ್ಸಿಂಗನು ಕುದುರೆಯಿಂದಿಳಿದು ತಾನೂ ಪಾದಚಾರಿಯಾಗಿಯೇ ಯುದ್ಧಕ್ಕೆ ನಿಂತನು. ಹೀಗೆ ಇಬ್ಬರೂ ತೀರ ಸನಿಹಕ್ಕೆ ಬಂದು ಎದುರಾಗಿ ಯುದ್ಧಕ್ಕೆ ನಿಂತರು. ಆಗ ಜಗತ್ಸಿಂಗನು ಉಸ್ಮಾನಖಾನನನ್ನು ಕುರಿತು–

ಜಗತ್ಸಿಂಗ—ಹಿಂದಕ್ಕೊಮ್ಮೆ ನಿಮ್ಮೊಡನೆ ದ್ವಂದ್ವ ಯುದ್ಧ ಮಾಡುವ ಪ್ರಸಂಗವು ಬಂದಿತ್ತು; ಈಗ ಮತ್ತೊಮ್ಮೆ ಆ ಪ್ರಸಂಗವು ಒದಗಿ ಬಂದಿರುವದು; ಆದರೆ ಈ ಸಾರೆಯ ಯುದ್ಧ ಪ್ರಸಂಗವು ಕಡೆಯದೆಂದು ನಾನು ತಿಳಿಯುತ್ತೇನೆ. ಈವೊತ್ತಿನ ಯುದ್ಧದಲ್ಲಿ ಇಬ್ಬರೊಳಗೊಬ್ಬರು ಗೊತ್ತಿಗೆ ಹತ್ತಲಿಕ್ಕೇಬೇಕು.

ಉಸ್ಮಾನ—ನಿಮ್ಮ ಮಾತು ಯೋಗ್ಯವೇ ಸರಿ. ಹಿಂದಕ್ಕೆ ಯುದ್ಧ ಪ್ರಸಂಗ ಒದಗಿದಾಗ ನಿಮ್ಮನ್ನು ನಾನು ಶತ್ರುವೆಂದು ತಿಳಿಯುತ್ತಿದ್ದೆನು; ಆದರೆ ಆಯೇಷೆಯು ಕೇವಲ ನನ್ನ ಪ್ರೇಮಕ್ಕೆ ಪಾತ್ರಳಾಗಿರುವಾಗ ನೀವು ಆಕೆಯ ಸಂಬಂಧಿಕರಾಗಿರಲು ನಿಮಗೆ ಕೇಡು ಬಗೆಯುವ ಇಚ್ಛೆಯು ಈಗ ನನಗಿರುವದಿಲ್ಲ. ಆಯೇಷೆಯ ಮನಸ್ಸನ್ನು ನೋಯಿಸುವದೆಂದರೆ, ನನಗೆ ಜೀವದ ಸುತ್ತು ಬರುತ್ತದೆ. ಆದರೂ ಯುದ್ಧ ಪ್ರಸಂಗವೇ ಒದಗಿರುವದರಿಂದ, ಒಣಮೋಹವನ್ನು ಕಟ್ಟಿಕೊಂಡಾದರೂ ಮಾಡುವದೇನು?

ಜಗತ್ಸಿಂಗ—ನವಾಬಸಾಹೇಬ, ಆಯೇಷೆಯಂಥ ಸುಗುಣ ಸುಂದರಿಯನ್ನು ಮನ್ನಿಸದವರು ಈ ಜಗತ್ತಿನಲ್ಲಿ ಇಲ್ಲವೆಂದು ಹೇಳಬಹುದು. ಅದರಲ್ಲಿ ಆಕೆಯು ನನಗಂತೂ ಕೇವಲ ಸನ್ಮಾನನೀಯಳು. ನನ್ನ ಉತ್ಕರ್ಷಕ್ಕೆ ಆಕೆಯೇ ಕಾರಣಳಾಗಿರುವಳು. ನಿಮ್ಮನ್ನು ಆಯೇಷೆಯು ಪ್ರಿಯ ಬಂಧುವೆಂದು ಪ್ರೀತಿಸುತ್ತಿರುವದರಿಂದ, ನಿಮಗಾದರೂ ನಾನು ಹ್ಯಾಗೆ ಕೇಡು ಬಗೆಯಬೇಕು? ನಿಮ್ಮ ಕೇಡಿನಿಂದ ಆಯೇಷೆಯ ಮನಸ್ಸು ನೋಯಲಿಕ್ಕಿಲ್ಲವೆ? ಆ ದೇವಿಯ ಮನಸ್ಸನ್ನು ನೋಯಿಸುವದೆಂದರೆ, ನನಗೂ ಜೀವದಸುತ್ತು ಬಂದ ಹಾಗಾಗಿರುತ್ತದೆ.

ಉಸ್ಮಾನ– ಮಹಾರಾಜರು ಹೇಳುವದು ಸುಳ್ಳಲ್ಲ. ನಮ್ಮಿಬ್ಬರ ನಾಶವಾದರೂ ಆಯೇಷೆಗೆ ದುಃಖವಾಗುತ್ತದೆ. ಆದರೆ ಕ್ಷಾತ್ರವೃತ್ತಿಗೆ ಈ ಮೋಹವು ಕೆಲಸದ್ದಲ್ಲ. ಯುದ್ಧಕ್ಕೇ ಸನ್ನದ್ಧರಾದ ಬಳಿಕ ಶೂರರಿಗೆ ಯಾತರ ಹಂಗು? ನಿಮ್ಮೊಡನೆ ಯುದ್ಧ ಪ್ರಸಂಗವೇ ಒದಗಿ ಬಂದಿರುವದರಿಂದ, ನನ್ನ ಪ್ರತಿಜ್ಞೆಯಂತೆ ಇಂದು ನಾನು ನಿಮ್ಮನ್ನು ಕೊಲ್ಲತಕ್ಕವನೇ ಸರಿ.

ಜಗತ್ಸಿಂಗ– ನಿಮ್ಮ ಮಾತು ಬಹಳ ಯೋಗ್ಯವಾದದ್ದು. ಶೂರರಿಗೆ ಒಪ್ಪುವಂತೆ ನೀವು ಮಾತಾಡಿದಿರಿ. ಯುದ್ಧದಲ್ಲಿ ಸೋಲು–ಗೆಲವುಗಳು ಯಾರ ಕೈಯೊಳಗಿನವೂ ಅಲ್ಲ. ಆದರೂ ಆಯೇಷೆಯ ಮೇಲಿನ ಪೂಜ್ಯ ಬುದ್ಧಿಯಿಂದ ನಾನು ಸ್ಪಷ್ಟವಾಗಿ ಹೇಳುತ್ತೇನೆ, ಯುದ್ಧಮಾಡುವ

ಶಕ್ತಿಯಿಲ್ಲದೆ ನೀವು ನೆಲಕ್ಕೆ ಬಿದ್ದ ಪಕ್ಷದಲ್ಲಿ, ನಾನು ನಿಮ್ಮನ್ನು ತಡವುದಿಲ್ಲ. ಎಂಥ ಯುದ್ಧದ ಆವೇಶದಲ್ಲಿಯಾದರೂ ಈ ಮಾತನ್ನು ನೆನಪಿನಲ್ಲಿಡುವೆನು. ನಿಮ್ಮನ್ನು ನಾನು ನೆಲಕ್ಕೆ ಕೆಡವಿ ಹಣ್ಣುಮಾಡಬಹುದಲ್ಲದೆ ಕೊಲ್ಲಲಿಕ್ಕಿಲ್ಲ. ಕ್ಷತ್ರಿಯನಾದ ನಾನು ಈ ಮಾತನ್ನು ಎಂದೂ ಮರೆಯಲಾರೆನು. ಆಗಲಿ, ಇನ್ನು ತಡವೇಕೆ? ನಮ್ಮಿಬ್ಬರ ಸಮರ ಪಾಂಡಿತ್ಯವನ್ನು ಈ ಉಭಯ ಪಕ್ಷದ ಸೈನಿಕರು ನೋಡಲಿ.

ಈ ಮೇರೆಗೆ ಜಗತ್ಸಿಂಗನು ನುಡಿದನಂತರ ಅವರಿಬ್ಬರು ವೀರರು ಪರಸ್ಪರ ಯುದ್ಧ ಮಾಡತೊಡಗಿದರು. ಆ ಇಬ್ಬರು ವೀರರ ಯುದ್ಧ ನೈಪುಣ್ಯವನ್ನೂ, ಶಸ್ತ್ರ ಪ್ರಯೋಗವನ್ನೂ ಕೌಶಲ್ಯವನ್ನೂ, ಸಮರ ಚಾಪಲ್ಯವನ್ನೂ ನೋಡಿ ಎಲ್ಲರೂ ಸ್ತಂಭಿತರಾದರು. ಒಮ್ಮಿಂದೊಮ್ಮೆ ಜಗತ್ಸಿಂಗನ ಖಡ್ಗದ ಹೊಡತದಿಂದ ಉಸ್ಮಾನನ ಖಡ್ಗವು ಎರಡು ತುಂಡಾಯಿತು. ಕೂಡಲೆ ಖಾನನು ಖಡ್ಗವನ್ನು ಚಲ್ಲಿಕೊಟ್ಟು ಬರ್ಚಿಯನ್ನು ತಕ್ಕೊಂಡು ಕುಮಾರನ ಮೇಲೆ ಏರಿಹೋದನು. ಆಗ ಕುಮಾರನೂ ಖಡ್ಗವನ್ನು ಚಲ್ಲಿಕೊಟ್ಟು ಬರ್ಚಿಯನ್ನು ತಕ್ಕೊಂಡು ಖಾನನನ್ನು ತಡೆದನು. ಉಸ್ಮಾನನು ಎಸೆದ ಬರ್ಚಿಯು ಕುಮಾರನ ಹೆಗಲಿಗೆ ತೆರೆದು ದೂರ ಹೋಗಿ ಬಿದ್ದಿತು. ಖಾನನು ವಿದ್ಯುದ್ವೇಗದಿಂದ ಓಡಿಹೋಗಿ ತನ್ನ ಬರ್ಚಿಯನ್ನು ತಕ್ಕೊಂಡು ಬಂದನು. ಅಷ್ಟರಲ್ಲಿ ಕುಮಾರನು ತನ್ನ ಬರ್ಚಿಯನ್ನು ಖಾನನಿಗೆ ಗುರಿ ನೋಡಿ ಎಸೆದನು. ಅದು ಖಾನನ ತಲೆಗೆ ಬಡಿದು, ತುರಾಯಿಯಿಂದ ಸಹಿತವಾದ ಖಾನನ ಮಂದಿಲವು ಹಾರಿಹೋಯಿತು; ಆದರೆ ತಲೆಗೆ ವಿಶೇಷ ಗಾಯವಾಗಲಿಲ್ಲ. ಅಷ್ಟರಲ್ಲಿ ಜಗತ್ಸಿಂಗನಾದರೂ ಅಪೂರ್ವವಾದ ದಕ್ಷತೆಯಿಂದ ತನ್ನ ಬರ್ಚಿಯನ್ನು ತಕ್ಕೊಂಡು ಬಂದನು. ಅಷ್ಟರಲ್ಲಿ ಖಾನನು ಬರ್ಚಿಯನ್ನು ಕುಮಾರನ ಮೇಲೆ ಎಸೆಯಲು, ಅದು ಕುಮಾರನ ಡಾಲಿಗೆ ಅಪ್ಪಳಿಸಿತು. ಆಗ ಕುಮಾರನು ಆ ಬರ್ಚಿಯನ್ನು ತಕ್ಕೊಳ್ಳಲಿಕ್ಕೆ ಖಾನನಿಗೆ ಆಸ್ಪದ ಕೊಡಲಿಲ್ಲ. ತಾನೇ ಹೋಗಿ ಖಾನನ ಬರ್ಚಿಯನ್ನು ತಕ್ಕೊಂಡು ಗುರಿನೋಡಿ ಅದನ್ನು ಖಾನನ ತಲೆಗೆ ಕಸುವಿನಿಂದ ಎಸೆದನು. ಖಾನನು ಮೃತನಾದನೆಂದು ಎಲ್ಲರೂ ನಿಶ್ಚಯಿಸಿದರು. ಆತನ ದಂಡಿನಲ್ಲಿ ಹಾಹಾಕಾರವು ಉತ್ಪನ್ನವಾಯಿತು. ಜಗತ್ಸಿಂಗನು ತಾನು ತಪ್ಪಿದೆನೆಂದು ಪಶ್ಚಾತ್ತಾಪಪಟ್ಟನು. ಅಷ್ಟರಲ್ಲಿ ಒಬ್ಬ ಸುಂದರಿಯು, ಖಾನನ ಎದೆಗೆ ಬಡಿಯುತ್ತಿದ್ದ ಬರ್ಚಿಗೆ ಅಕಸ್ಮಾತ್ ಅಡ್ಡಾಗಿ ತನ್ನ ಎದೆಯನ್ನು ಕೊಟ್ಟಳು. ಕೂಡಲೆ ಉಭಯ ದಂಡಿನಲ್ಲಿ ಹಾಹಾಕಾರವು ಉತ್ಪನ್ನವಾಯಿತು. ಜಗತ್ಸಿಂಗನು ''ಎಲ ಎಲಾ!'' ಎಂದು ತನ್ನ ಎರಡೂ ಕೈಗಳನ್ನು ಮೇಲಕ್ಕೆ ನೆಗವಿ ಮೈ ಮರೆತು ನಿಂತು ಕೊಂಡನು. ಆದರೆ ಕೈಮೀರಿ ಹೋದ ಬರ್ಚಿಯು ನಡುವೆ ನಿಲ್ಲದೆ ನಿಮಿಷಮಾತ್ರದಲ್ಲಿ ಆ ಸುಂದರಿಯ ಎದೆಯಲ್ಲಿ ಸಂಪೂರ್ಣವಾಗಿ ಸೇರಿತು; ಆಗ ಆ ಸುಂದರಿಯ ಕೋಮಲಾಂಗವು ಆಶ್ರಯತಪ್ಪಿದ ಲತೆಯಂತೆ ಉಸ್ಮಾನನ ಮೈಮೇಲೆ ಬಿದ್ದಿತು.

ಕಮಲದಂತೆ ಸುಕೋಮಲವಾದ ಆ ಸುಂದರಿಯ ಹೃದಯದಲ್ಲಿ ಬರ್ಚಿಯು ಪೂರ್ಣವಾಗಿ ಸೇರಿ ರಕ್ತ ಪ್ರವಾಹವು ಹರಿಯಹತ್ತಿತು. ಅದರಿಂದ ಆ ಸುಂದರಿಯ ಸೀರೆಯ ಸೆರಗು ತೊಯ್ದು, ಉಸ್ಮಾನನ ಮೈಮೇಲಿನ ವಸ್ತ್ರಗಳು ತೊಯ್ದವು. ಆಗ ಆ ಸುಂದರಿಯು

ಉಸ್ಮಾನನ ಮೈಮೇಲೆ ಬಿದ್ದುಕೊಂಡೇ ಆತನನ್ನು ಕುರಿತು–ಉಸ್ಮಾನ, ಪ್ರೀಯ ಬಂಧುವೇ, ನಾನು ಬದುಕಿರುವವರೆಗೆ ನಿಮ್ಮ ಜೀವಕ್ಕೆ ಯಮಯಾತನೆಯನ್ನುಂಟು ಮಾಡಿದೆನು. ಯಾವ ಮಾತಿನಿಂದಲೂ ನಾನು ನಿಮಗೆ ಸುಖವನ್ನುಂಟು ಮಾಡಲಿಲ್ಲ! ಆದ್ದರಿಂದ ಈ ಅಲ್ಪವಾದ ಸಹಾಯವನ್ನು ನಿಮಗೆ ನಾನು ಮಾಡಿದ್ದೇನೆ. ನನ್ನ ದೇಹವು ನಿಮ್ಮ ಪ್ರಾಣ ರಕ್ಷಣದ ಕಾರ್ಯದಲ್ಲಿ ಉಪಯೋಗವಾದದ್ದನ್ನು ನೋಡಿ ನನಗೆ ಬಹಳ ಸಂತೋಷವಾಗಿರುತ್ತದೆ; ಆದರೆ ನನ್ನಿಂದ ನಿಮಗೆ ಉಂಟಾದ ತಾಪವನ್ನು ನೆನಸಿದರೆ ಈಗಲೂ ನನ್ನ ಹೊಟ್ಟೆಯಲ್ಲಿ ಕಸಿವಿಸಿಯಾಗುತ್ತದೆ. ಆ ತಾಪಜ್ವಾಲೆಯು ನನ್ನ ಸಂಗಡ ಸ್ವರ್ಗಕ್ಕಾದರೂ ಬರಬಹುದು; ನಾನು ಮರಣ ಹೊಂದಿದ ಬಳಿಕ ನನ್ನ ಆತ್ಮವು ಆ ತಾಪ ಜ್ವಾಲೆಯಿಂದ ತಳಮಳಿಸುತ್ತ ಭ್ರಮಣ ವನ್ನಾದರೂ ಮಾಡೀತು; ಅದರ ನೆನಪು ಮರಣಾ ನಂತರದಲ್ಲಿಯೂ ನನ್ನ ಹೃದಯವನ್ನು ಭೇದಿಸದೆ ಇರಲಿಕ್ಕಿಲ್ಲ'' ಎಂದು ನುಡಿದಳು. ಆಗ ಉಸ್ಮಾನನು ದೊಡ್ಡ ದನಿಯಿಂದ ಅಳುತ್ತ– ''ಹಾಯ್ ಹಾಯ್ ಆಯೇಷೆ, ಇದೇನು ಅನರ್ಥ ಮಾಡಿದೆ?'' ಎಂದು ಆಕೆಯನ್ನು ಎದೆಗವಚಿಕೊಂಡು ಆಕೆಯ ಹೃದಯದಲ್ಲಿ ನಟ್ಟಿದ್ದ ಬರ್ಚಿಯನ್ನು ಕಿತ್ತಿ ತೆಗೆದನು. ಕೂಡಲೇ ರಕ್ತವು ಬಳಬಳ ಸುರಿಯಿತು. ಇತ್ತ ಜಗತ್ಸಿಂಗನು ಶೋಕಾತಿಶಯದಿಂದ ಹಣೆ ಹಣೆ ಬಡಕೊಳ್ಳುತ್ತ– ಹಾಯ್ ಹಾಯ್! ಜಗತ್ತಿನ ಸಾರರತ್ನವೂ ನನ್ನ ಪರಮ ಹಿತೈಷಿಣೆಯೂ ಆದ ಆಯೇಷಾ ದೇವಿಯು ನನ್ನ ಬರ್ಚಿಯಿಂದ ಗಾಯಹೊಂದಿ ನೆಲಕ್ಕ ಉರುಳಿದಳಲ್ಲ! ರಜಪೂತ ಕುಲಾಧಮನಾದ ನಾನು ನನ್ನ ವಚನವನ್ನು ಮರೆತು ಉಸ್ಮಾನನ ಪ್ರಾಣಹರಣ ಮಾಡುವಂತೆ ಬರ್ಚಿಯನ್ನು ಏಕೆ ಎಸೆದಿದ್ದೇನು? ಹಾಗೆ ಎಸೆಯದಿದ್ದರೆ, ಸ್ತ್ರೀ ಹತ್ಯದ ದೋಷವಷ್ಟೇ ಅಲ್ಲ ಮಹಾಕೃತಘ್ನತೆಯ ದೋಷವು ಈಗಿನಂತೆ ನನ್ನ ಪಾಲಿಗೆ ಬರುತ್ತಿದ್ದಿಲ್ಲ. ಇನ್ನೇನು ಮಾಡಲಿ? ಖಾನನ ಕೈಯಿಂದ ನನ್ನ ಸಂಹಾರವಾಗಿದ್ದರೆ ಬಹಳ ನೆಟ್ಟಗಾಗುತ್ತಿತ್ತು. ಎಲೈ ನಿಷ್ಕಾಮ ಪ್ರೇಮದ ಅಲಭ್ಯವಾದ ಸ್ತ್ರೀರತ್ನವೇ, ಆಯೇಷೆ, ಏನು ನಿನ್ನ ಗತಿಯು! ನೀನು ಮಾಡಿದ ಮಹೋಪಕಾರಕ್ಕೆ ನಾನು ಮಾಡಿದ ಪ್ರತ್ಯುಪಕಾರವು ಇದೆಯೇ? ಎಲೈ ನೀಚನಾದ ಜಗತ್ಸಿಂಗಾ, ನಿನ್ನ ಕಠೋರ ಹೃದಯವು ಸದಾ ನಿಂದಿತವಾಗಲಿ'' ಎಂದು ಪಶ್ಚಾತ್ತಾಪದಿಂದ ಕುಮಾರನು ತನ್ನನ್ನು ಬಹಳವಾಗಿ ಹಳಿದುಕೊಳ್ಳಹತ್ತಿದನು. ಆಗ ಆಯೇಷೆಯು ಜಗತ್ಸಿಂಗನನ್ನು ಕುರಿತು– ''ಪ್ರಾಣೇಶ್ವರರಾದ ಕುಮಾರ ಜಗತ್ಸಿಂಗ, ನೀವು ನನ್ನ ಹತ್ತಿರ ಬರಬೇಕು. ಪ್ರಿಯ ಬಂಧೂ ಉಸ್ಮಾನ, ದುಃಖವನ್ನು ಸಾಕುಮಾಡಿ ನನ್ನ ಕಡೆಗೆ ನೋಡಿರಿ. ನನ್ನ ಆಯುಷ್ಯವು ತೀರ ಅಲ್ಪಕಾಲ ಉಳಿದಿರುವದು. ರಾಜಕುಮಾರರು ಬೇಕೆಂದು ನನ್ನ ಮೇಲೆ ಬರ್ಚಿಯನ್ನು ಎಸೆದಿರುವದಿಲ್ಲಾದ್ದರಿಂದ ಅವರು ಅಪರಾಧಿಗಳಲ್ಲ, ಅದಕ್ಕಾಗಿ ಅವರು ದುಃಖಪಡುವ ಕಾರಣವಿಲ್ಲ, ಉಸ್ಮಾನ, ನೀವೂ ದುಃಖಿಸಬೇಡಿರಿ; ನಿಮ್ಮಂಥ ನಿಷ್ಕಾಮ ಪ್ರೇಮದ ಪುರುಷರು ಜಗತ್ತಿನಲ್ಲಿ ದುರ್ಲಭವೇ ಸರಿ.

ಈ ಮೇರೆಗೆ ನುಡಿದು ಆಯೇಷೆಯು ಆಯಾಸದಿಂದ ಕಣ್ಣುಮುಚ್ಚಿಕೊಂಡು ಸುಮ್ಮನಾದಳು. ಕೆಲಹೊತ್ತಿನ ಮೇಲೆ ಆಕೆಯು ಕಣ್ಣುತೆರೆದು ಜಗತ್ಸಿಂಗನನ್ನು

ಕುರಿತು–ರಾಜಕುಮಾರರೇ, ನಿಮ್ಮ ಮೇಲೆ ನಾನು ಪ್ರಾಣಕ್ಕಿಂತ ಹೆಚ್ಚು ಪ್ರೇಮ ಮಾಡುವೆನು; ನಿಮ್ಮ ಬರ್ಚಿಯಿಂದ ಉಸ್ಮಾನರವರ ಪ್ರಾಣಹರಣವಾಗಿದ್ದರೆ, ರಜಪೂತರಾದ ನಿಮ್ಮ ವಚನಕ್ಕೆ ಭಂಗಬರುತ್ತಿತ್ತು. ನಿಮ್ಮನ್ನು ವಚನಭಂಗ ದೋಷಕ್ಕೆ ಗುರಿಮಾಡದಿರುವದು, ನಿಮ್ಮ ಅರ್ಧಾಂಗಿಯೆನಿಸುವ ನನ್ನ ಕರ್ತವ್ಯವಾದ್ದರಿಂದ ನಾನು ನಿಮ್ಮ ಬರ್ಚಿಗೆ ಅಡ್ಡಾಗಿ ಪ್ರಾಣ ಕೊಡುವೆನು. ನಿಮ್ಮ ಕೃಪೆಯಿಂದ ಬಂಧು ಪ್ರೇಮವೂ, ಪತಿ ನಿಷ್ಠೆಯೂ ನನ್ನಲ್ಲಿ ವ್ಯಕ್ತವಾದದ್ದಕ್ಕಾಗಿ ನನ್ನನ್ನು ಧನ್ಯಳೆಂದು ಭಾವಿಸುವೆನು. ನಾನು ನಿಮ್ಮ ಮೇಲೆ ಮಾಡುತ್ತಿದ್ದ ಪ್ರೇಮಕ್ಕೆ ನಿಮ್ಮಿಂದ ಪ್ರತಿಫಲವು ದೊರೆಯಬೇಕೆಂದು ನಾನು ಎಂದೂ ಇಚ್ಛಿಸಿದ್ದಿಲ್ಲ. ನವಾಬಉಸ್ಮಾನರವರ ಹೃದಯದಲ್ಲಿ ನನ್ನ ವಿಷಯದಪ್ರೇಮ ಪ್ರವಾಹವು ದಂಡೆಸೂಸಿ ಹರಿಯುತ್ತಲಿದ್ದರೂ, ನಾನು ಅತ್ತಕಡೆಗೆ ಕಣ್ಣೆತ್ತಿಯೂ ನೋಡಲಿಲ್ಲ; ಯಾಕಂದರೆ, ಆಯೇಷೆಯು ಮೋಸಗಾರಳಲ್ಲ! ನನ್ನ ಮೇಲಿನ ಪ್ರೇಮಾತಿಶಯದಿಂದ ಉಸ್ಮಾನರವರು ಅಂಧರಾದ್ದರಿಂದ ಅವರ ಆಯುಷ್ಯದ ಸುಖ ಸರ್ವಸ್ವವೂ ಹಾಳಾಗಿ ಹೋಯಿತು. ಆದರೆ ಅದಕ್ಕೆ ನನ್ನ ಯತ್ನವಿಲ್ಲ. ನನ್ನ ಹೃದಯದಲ್ಲಿ ಸ್ಥಿರವಾಗಿ ಉಳಿದಿದ್ದ ನಿಮ್ಮ ಮೂರ್ತಿಯನ್ನು ಹೊರಗೆ ಹಾಕುವದಕ್ಕೆ ಯಾರೂ ಸಮರ್ಥ ರಾಗಿರುವದಿಲ್ಲ. ರಾಜಪುತ್ರಾ, ನನ್ನಿಂದ ಏನಾದರೂ ಅಪರಾಧವಾಗಿದ್ದರೆ, ಕ್ಷಮಿಸಬೇಕು. ಈ ಜನ್ಮದಲ್ಲಿ ತಿರುಗಿ ನಿಮ್ಮ ಕಣ್ಣಿಗೆ ಬಿದ್ದು ನಿಮಗೆ ತಾಪವನ್ನುಂಟು ಮಾಡಬಾರದೆಂದು ನಾನು ಮಾಡಿದ್ದೆನು; ಆದರೆ ನನ್ನ ಬಂಧುವಿನ ಪ್ರಾಣರಕ್ಷಣದ ಪ್ರಸಂಗವನ್ನೂ, ನಿಮ್ಮ ವಚನಪಾಲನದ ಪ್ರಸಂಗವನ್ನೂ, ವ್ಯರ್ಥವಾಗಿ ಕಳಕೊಳ್ಳುವದು ನನ್ನಿಂದಾಗಲಿಲ್ಲ. ಆಯೇಷೆಯು ಒಬ್ಬ ಹತಭಾಗ್ಯಳಾದ ಸ್ತ್ರೀ ಇರುವದರಿಂದ, ಆಕೆಯ ಅಂತವು ಆದಷ್ಟು ಬೇಗನೆ ಆಗುವದು ನೆಟ್ಟಗೆ. ರಾಜಪುತ್ರಾ, ಈ ಮೊದಲು ಒದಗಿದ ಕಷ್ಟಮಯ ಪ್ರಸಂಗವನ್ನೂ , ಆಯೆಷೇಯ ಕಷ್ಟಮಯ ಜೀವನ ಸ್ಥಿತಿಯನ್ನೂ ನೀವು ಮರೆತು ಬಿಡಬೇಕು. ನೀವು ಆನಂದದಿಂದ ಕಾಲಹರಣ ಮಾಡಬೇಕೆಂದು ನಾನು ಇಚ್ಛಿಸುವೆನು. ನನ್ನ ಒಡಹುಟ್ಟಿದ ತಂಗಿಯಂತಿದ್ದ ತಿಲೋತ್ತಮೆಗೆ ನನ್ನ ನೆನಪು ಮಾಡಿಕೊಟ್ಟು ವ್ಯಸನಪಡಿಸಬೇಡಿರಿ. ಆಕೆಯ ಕೋಮಲ ಹೃದಯವು ದುಃಖವನ್ನು ಸಹಿಸಲಾರದು. ಮಹಾರಾಜ, ನನಗೆ ಅಪ್ಪಣೆ ಕೊಡಿರಿ, ಪ್ರಾಣೇಶ್ವರರಾದ ನಿಮ್ಮ ಕೈಯಿಂದ ಮರಣವು ಒದಗಿದ್ದರಿಂದ ನನ್ನನ್ನು ಧನ್ಯಳೆಂದು ತಿಳಿಯುವೆನು.

ಜಗತ್ಸಿಂಗನು ಮೋರೆ ತಗ್ಗಿಸಿ ಸಣ್ಣ ಹುಡುಗನಂತೆ ದೊಡ್ಡ ದನಿತೆಗೆದು ಅಳಹತ್ತಿದನು. ಆಯೇಷೆಯ ಬಾಯಿಂದ ರಕ್ತವು ಬೀಳಹತ್ತಿತು. ಆಕೆಯ ಗಂಟಲು ಗೊರಗುಟ್ಟಹತ್ತಿತು. ಆಕೆಯು ಬಹು ಕಷ್ಟದಿಂದ ಉಸ್ಮಾನನನ್ನು ಕುರಿತು– ಅಣ್ಣಾ, ಈಗ ನಿಮ್ಮ ಮೋರೆಯು ನನಗೆ ಸ್ಪಷ್ಟವಾಗಿ ಕಾಣುತ್ತಿರುವದು, ಇನ್ನು ನಾನು ಬಹಳಹೊತ್ತು ಬದುಕಲಾರೆನು. ಇರುವತನಕ ನಿಮಗೆ ನಾನು ಬಹಳ ಕಷ್ಟ ಕೊಟ್ಟೆನಲ್ಲದೆ, ಸಾಯುವಾಗೂ ನಿಮಗೆ ದುಃಖವನ್ನುಂಟು ಮಾಡಿದೆನು. ಪ್ರಿಯ ಬಂಧು ಉಸ್ಮಾನ ನನ್ನ ಈ ಮರಣಕಾಲದಲ್ಲಿ ನನ್ನ ಯಾವತ್ತು ಅಪರಾಧಗಳನ್ನು ನೀವು ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುವೆನು. ಇದೇ ನನ್ನ ಕಟ್ಟಕಡೆಯ ಪ್ರಾರ್ಥನೆಯು. ಮತ್ತೇನು–ಮತ್ತೇನು ನಿಮಗೆ ಹೇಳಿಕೊಳ್ಳಲಿ? ಇನ್ನು ನನಗೆ ಅಪ್ಪಣೆ ಕೊಡಿರೆಂದರಾಯಿತು. ನೋಡಿರಿ, ನಾನು ಹೊರಟೆನು.

ಈ ಮೇರೆಗೆ ನುಡಿಯುತ್ತಿರಲು, ಆಯೇಷೆಯ ಕಣ್ಣುಗಳು ತಿರುಗಿದವು. ಉಸ್ಮಾನನ ಸ್ಥಿತಿಯು ವಿಲಕ್ಷಣವಾಯಿತು. ಆತನ ಕಣ್ಣೀರು ಇಂಗಿದವು, ಆತನ ಮುಖದಿಂದ ಶಬ್ದಗಳು ಹೊರಡದಾದವು. ಆತನ ಎದೆಯು ಮಂದವಾಗಿ ಹಾರಹತ್ತಿತು. ಯುದ್ಧವೇಷದಿಂದ ಒಪ್ಪುವ ಆ ವೀರ ಪುರುಷನು ಅತ್ತಿತ್ತ ಉಲುಕದೆ ಸ್ಥಿರವಾಗಿ ಕುಳಿತುಕೊಂಡಿದ್ದನು. ಆತನ ತೊಡೆಯಮೇಲೆ ರಕ್ತದಿಂದ ಸ್ನಾನಮಾಡಿದ, ಹಾಗು ಮೃತ್ಯುವಿನ ದ್ವಾರದಲ್ಲಿ ಕಾಲಿಟ್ಟಿದ್ದ ಭುವನ ಸುಂದರಿಯಾದ ಆಯೇಷೆಯು ಮಲಗಿಕೊಂಡಿದ್ದಳು. ಆಗ ಜಗತ್ಸಿಂಗನು ಶೋಕಕಂಪಿತ ಸ್ವರದಿಂದ ಉಸ್ಮಾನನನ್ನು ಕುರಿತು– ''ಖಾನಸಾಹೇಬ, ನವಾಬಜಾದಿ ಆಯೇಷೆಯು ನಿಮ್ಮ ಅಪ್ಪಣೆಯನ್ನು ಕೇಳಿಕೊಳ್ಳುತ್ತಾಳೆ,'' ಎಂದು ಹೇಳಿದನು. ಅದನ್ನು ಕೇಳಿ ಎಚ್ಚತ್ತ ಉಸ್ಮಾನನು– ''ಏನು? ಆಯೇಷೆಯು ನನ್ನ ಅಪ್ಪಣೆಯನ್ನು ಕೇಳಿಕೊಳ್ಳುವಳೆ? ಆಯೇಷೆ, ನೀನು ನನ್ನನ್ನು ಅಗಲಿ ಹೋಗುವೆಯಾ? ನಿನಗೆ ನಾನು ಹ್ಯಾಗೆ ಅಪ್ಪಣೆ ಕೊಡಲಿ? ಆಯೇಷಾ, ನೀನು ನನ್ನ ಮುಂದೆ ಹೋಗುವೆಯೇನು? ಒಳ್ಳೇದು ಹೋಗು; ಆದರೆ ನಿನ್ನ ಪ್ರೀಯ ಉಸ್ಮಾನನೂ ಬೇಗನೆ ನಿನ್ನನ್ನು ಹಿಂಬಾಲಿಸಿ ಬರುವನೆಂಬದನ್ನು ನೆನಪಿನಲ್ಲಿಡು.'' ಎಂದು ನುಡಿದನು. ಆಗ ಆಯೇಷೆಯ ಮುಖದಿಂದ ಶಬ್ದಗಳು ಹೊರಡದಾದವು. ಆಕೆಯ ಶ್ವಾಸೋಚ್ಛ್ವಾಸವು ತೀರ ಮಂದವಾಯಿತು; ನಾಡಿಗಳು ಸರಿದವು. ಆಕೆಯು ಖೇದಪರ ಸ್ವರದಿಂದ–ಉಸ್ಮಾನ, ನೀವು ನನ್ನ ತಾಯಿಗೆ ಸಮಾಧಾನ ಹೇಳಿರಿ. ಹಾಹಾ! ಉಸ್ಮಾನ, ನೀವು ನನ್ನ ಮೇಲೆ ಎಷ್ಟು ಪ್ರೇಮಮಾಡಿದಿರಲ್ಲ; ಆದರಿಂದಲೇ ನಿಮ್ಮ ತೊಡೆಯ ಮೇಲೆ ಪ್ರಾಣಬಿಡುವಾಗ ನನಗೆ ಬಹಳ ಆನಂದವಾಗುತ್ತದೆ, ಉಸ್ಮಾನ, ನಾವಿಬ್ಬರು ಅಣ್ಣ–ತಂಗಿಯರು ಬಂಗಾರದ ರಥದಲ್ಲಿ ಕುಳಿತು ಹ್ಯಾಗೆ ಹೋಗುವೆವು ನೋಡಿರಿ, ಉಸ್ಮಾನ, ನಾನು ಬರುವೆನು. ''ಯಾ–ಪರವರದಿಗಾರ ಅಲ್ಲಾ''

ಈ ಮೇರೆಗೆ ನುಡಿಯುವಾಗ ಆಯೇಷೆಯ ಪ್ರಾಣವು ಹಾರಿಹೋಯಿತು. ಆಗ ಎಲ್ಲರೂ ದುಃಖದಿಂದ ''ಯಾ ಅಲ್ಲಾ, ಈ ಕೋಮಲ ಕುಸುಮವು ಅಕಾಲದಲ್ಲಿ ದೇಟಿನಿಂದ ಉದುರಿ ಬಿದ್ದಿತು.'' ಎಂದು ನುಡಿದರು. ಒಂದು ರಮಣೀಯವಾದ ಏಕಾಂತ ಸ್ಥಾನದಲ್ಲಿ ಆಯೇಷೆಯ ಸುಂದರ ದೇಹದ ಗೋರಿಯು ಕಟ್ಟಲ್ಪಟ್ಟಿತು. ಉಸ್ಮಾನನು ಪ್ರತಿದಿವಸ ಮುಂಜಾವು ಸಂಜೆಗಳಲ್ಲಿ ಆ ಗೋರಿಗೆ ಬಂದು ಹೂವನ್ನು ಏರಿಸಿ, ಗೋರಿಯ ಮೇಲೆ ಮಸ್ತಕವನ್ನಿಟ್ಟು ಕಣ್ಣೀರು ಸುರಿಸುತ್ತಿದ್ದನು. ಬರಬರುತ್ತ ಅವನು ಶಕ್ತಿಹೀನನಾದನು. ಮುಂದೆ ಮೊಗಲರೊಡನೆ ಆದ ಯಾವತ್ತೂ ಯುದ್ಧಗಳಲ್ಲಿ ಪಠಾಣರು ಸೋತು ಓಡಿಸಾ ಪ್ರಾಂತದಲ್ಲಿ ಮೊಗಲ ಸಾಮ್ರಾಜ್ಯವು ಪ್ರಸ್ಥಾಪಿತವಾಯಿತು. ಮುಂದೆ ಸ್ವಲ್ಪ ದಿನಗಳಲ್ಲಿಯೇ ಉಸ್ಮಾನನು ಮರಣ ಹೊಂದಲು, ಆತನ ಇಚ್ಛೆಯಂತೆ ಆಯೇಷೆಯ ಗೋರಿಯ ಬಳಿಯಲ್ಲಿ ಆತನ ಗೋರಿಯನ್ನು ಮಾಡಿದರು.

**ಸಂಪೂರ್ಣ**

# ಅಪ್ಪನಿಗೆ ಅವರೇ ದೇವರು!

ಶ್ರೀ ವಿಂಧ್ಯವಾಸಿನಿಯ ಗುಡಿಯು, ಬುಂದೇಲಖಂಡದ ಕ್ಷತ್ರಿಯ ರಾಜರು ದೇವಿಯ ಪ್ರತಿ ವರುಷದ ಉತ್ಸವಕ್ಕಾಗಿ ಗುಡಿಯ ಸುತ್ತುಮುತ್ತು ರಾಹುಟಿ ಹೊಡೆದು ಇರತೊಡಗಿರುತ್ತಾರೆ. ಅಕಬರ ಬಾದಶಹನವರೆಗಿದ್ದ ಅವರ ಸ್ವಾತಂತ್ರ್ಯವು, ಅವರ ಒಳಜಗಳಗಳಿಂದ ಈಗಿನ ಔರಂಗಜೇಬನ ಕಾಲದಲ್ಲಿ ಅಳಿದುಹೋಗಿ, ಅವರ ತೀರ ಒಗರು ಇಲ್ಲದವರಾಗಿರುತ್ತಾರೆ. ದಿಲ್ಲಿಯ ಬಾದಶಹನ ಪ್ರೀತಿಯ ಗಳಿಕೆಯಲ್ಲಿಯೇ ಅವರ ಮನಸ್ಸು; ಆ ಪ್ರೀತಿಯ ಗಳಿಕೆಯ ಹಂಚಿಕೆ ಹುಡುಕುವದರಲ್ಲಿಯೇ ಅವರ ಧ್ಯಾನವು; ಪ್ರೀತನಾದ ಬಾದಶಹನು ಕರುಣಿಸಿ ದಯಪಾಲಿಸಿದ ಯಾವದೊಂದು ಸೇವೆಯ ಕೈಕೊಳ್ಳುವದರಲ್ಲಿಯೇ ಅವರ ಆನಂದವು! ಆ ಅಂದಗೇಡಿಗಳು ಈ ಕೆಲಸಗಳಲ್ಲಿ ತಮ್ಮ ಮಾನ-ಮಾರ್ಯಾದೆಗಳನ್ನು ಬದಿಗಿಡುವದಕ್ಕಾಗಲಿ, ತಮ್ಮ ದೊಡ್ಡಸ್ತಿಕೆಯನ್ನು ಮಣ್ಣುಗೂಡಿಸುವದಕ್ಕಾಗಲಿ, ತಮ್ಮ ತಲಾಂತರದ ಶೀಲವಂತಿಕೆಯನ್ನು ಕಳೆದುಕೊಳ್ಳುವದಕ್ಕಾಗಲಿ ಹಿಂದೆ ಮುಂದೆ ನೋಡುತ್ತಿದ್ದಿಲ್ಲ. ಆ ನಾಚಿಕೆಗೇಡಿಗಳು ಬಾದಶಹನ ಪ್ರೇಮ ಸಂಪಾದನದಲ್ಲಿಯೇ ಮೇಲಾಡುವರು; ತಮ್ಮ ದೇಶದ ಒಗರನ್ನು ಕಳೆಯುವದರಲ್ಲಿಯೇ ತಮ್ಮ ಕಲಿತನವನ್ನು ತೋರಿಸುವರು; ಬಾದಶಹನ ಅಧಿಕಾರವನ್ನು ಹೆಚ್ಚಿಸುವದರಲ್ಲಿಯೇ ತಮ್ಮ ಆಡಳಿತದ ಹಿಡತಗಳನ್ನು ಬಳಿಸುವರು! ಇಂತಹ ಕೆಟ್ಟ ಮನಸ್ಸಿನ ಅರಸರ ಆಳಿಕೆಯಿಂದ ಬುಂದೇಲದ ಪ್ರಜೆಗಳಲ್ಲಿ ಪುಕ್ಕತನ, ಸಗಣಿಗಳ್ಳತನ, ಆಸೆಬರುರುಕತನ, ಅರುವುಗೇಡಿತನ ಮೊದಲಾದ ಹೀನ ಗುಣಗಳು ತಡೆಯಿಲ್ಲದೆ ಹೆಚ್ಚುತ್ತಲಿದ್ದವು. ಮಹಾ ಕಲಿಗಳೂ, ಮಂದಿಗೆ ಎಂದೂ ಸೊಪ್ಪು ಹಾಕದವರೂ ಎಂದು ಹೆಸರಾಗಿದ್ದ ಬುಂದೇಲಿಯ ಕ್ಷತ್ರಿಯರ ಇರವೂ ಇಷ್ಟು ಕನಿಕರಪಡುವಂತಹದಾದದ್ದನ್ನು ನೋಡಿದರೆ, ಯಾವ ಹೊತ್ತಿಗೆ ಏನಾದೀತೆಂಬದನ್ನು ಹೇಳುವದು ಬಹು ಕಷ್ಟವೆಂಬ ಮಾತು ಸಿದ್ಧವಾಗುತ್ತದೆ.

ಇಂಥ ಹೀನಸ್ಥಿತಿಯಲ್ಲಿಯೂ ಚಂಪತರಾಯನಂಥ ಒಬ್ಬಿಬ್ಬ ಕೆಚ್ಚೆದೆಯ ಕ್ಷತ್ರಿಯ ಕಲಿಗಳು ತಮ್ಮ ಒಗರಿನ ಬೆಳಕಿನಿಂದ ಬುಂದೇಲಖಂಡವನ್ನು ಬೆಳಗುತ್ತಿರುವದು ಸುದೈವವೇ ಸರಿ. ಚಂಪತರಾಯನ ಹಿರಿಯರು ಮಹಾಪ್ರತಾಪಿಗಳು, ದೇಶಕಾರ್ಯದಲ್ಲಿ ದೇಹವನ್ನು ಸವಿಸಿ ಸವಿಸಿ ಸಣ್ಣಮಾಡುತ್ತ ಬಂದವರು. ಚಂಪತರಾಯನ ಬುಂದೇಲಿ ಮನೆತನದ ಮೂಲಪುರುಷನು ಭಕ್ತಿಯ ಕಟ್ಟಕಡೆಯ ಮೇರೆಯನ್ನು ತೋರಿಸುವದಕ್ಕಾಗಿ ವಿಂಧ್ಯವಾಸಿನಿಯ ಅಡಿಗಳಿಗೆ ತನ್ನ ತಲೆಕೊಡಲು ಸಜ್ಜಾದವನು! ಅದರಂತೆ ಚಂಪತರಾಯನ ಮುತ್ತಜ್ಜನಾದ ರುದ್ರಪ್ರತಾಪನು, ತನ್ನ

ಹರತಾದ ಕತ್ತಿಯ ಕಸುವಿನಿಂದ ಬುಂದೇಲಖಂಡದ ಸ್ವಾತಂತ್ರ್ಯದ ಹಾದಿಯನ್ನು ತಡೆಗಳಿಲ್ಲದಂತೆ ಮಾಡಿದವನು! ಇಂತಹ ತನ್ನ ಗೌರವದ ಹಿರಿಯರ ನೆನಹಿನಿಂದ ಚಂಪತರಾಯನ ಕಲಿತನವು ಮಾಸದೆ ಇರಲು, ಆತನು ಔರಂಗಜೇಬ ಬಾದಶಹನನ್ನು ಲೆಕ್ಕಿಸದೆ ತನ್ನ ದೇಶವನ್ನು ಸ್ವತಂತ್ರವಾಗಮಾಡುವದಕ್ಕಾಗಿ ಪರಿಪರಿಯ ಕಷ್ಟ-ನಷ್ಟಗಳನ್ನು ಅನುಭವಿಸುತ್ತಲಿದ್ದನು. ತನ್ನ ಈ ಕೆಲಸವು ವಿಂಧ್ಯವಾಸಿನಿಯ ಕೃಪೆಯಿಲ್ಲದೆ ಕೈಗೂಡದೆಂದು ತಿಳಿದು, ಆ ಕೃಪೆಯನ್ನು ಪಡೆಯುವದಕ್ಕಾಗಿಯೇ ಇಂದಿನ ವಾರ್ಷಿಕೋತ್ಸವದ ನೆವದಿಂದ ಆ ವೀರಕೇಸರಿಯು ದೇವಿಯ ದರ್ಶನಕ್ಕಾಗಿ ಬಂದಿದ್ದನು. ಆದರೆ ದೇಶದ್ರೋಹಿಗಳಾದ ಅರಸರ ಮಾತು ಹಾಗಿದ್ದಿಲ್ಲ; ಬಾದಶಹರ ಅಖಂಡವಾದ ಪ್ರೀತಿಯು ನಮ್ಮ ಮೇಲೆ ಆಗುವಂತೆ ಅನುಗ್ರಹಿಸೆಂದು ದೇವಿಯನ್ನು ಪ್ರಾರ್ಥಿಸುವದಕ್ಕಾಗಿ ಕೆಲವರು ಉತ್ಸವಕ್ಕೆ ಬಂದವರಾಗಿದ್ದರು; ಕೆಲವರು ಬಾದಶಹನ ಕೃಪೆಯಿಂದ ಹೆಚ್ಚಿಸಿಕೊಂಡಿರುವ ತಮ್ಮ ಅಧಿಕಾರ -ವೈಭವಗಳನ್ನು ಎಲ್ಲರಲ್ಲಿ ಮೆರೆಸುವ ಹೆಮ್ಮೆಯಿಂದ ಉತ್ಸವಕ್ಕೆ ಬಂದಿದ್ದರು! ಒಟ್ಟಿಗೆ ಪಿಂಡಗಳಷ್ಟು ಪ್ರಕೃತಿಗಳೆಂಬ ಮಾತು ಸುಳ್ಳಲ್ಲ

ಚಂಪತರಾಯನು ''ಜಯ ವಿಂಧ್ಯವಾಸಿನಿ'' ಎಂದು ದೇವಿಯ ಜಯಜಯಕಾರ ಮಾಡುತ್ತ ಗುಡಿಯನ್ನು ಹೋಗುವಾಗ ಆತನ ಮನಸ್ಸಿನೊಳಗಿನ ಹಲವು ಉಚ್ಚ ಭಾವನೆಗಳ ನಿರ್ಮಲ ತೆರೆಗಳ ಅಂದವಾದ ಚಿತ್ರವು ಆತನ ಮೋರೆಯಲ್ಲಿ ಮಿನುಗುತ್ತಲಿತ್ತು, ತನ್ನ ಮನೆತನದ ಉತ್ಪತ್ತಿಯ ಹಾಗು ವೈಭವದ ಇತಿಹಾಸವು ಆತನ ಕಣ್ಣುಗಳಿಗೆ ಕಟ್ಟಲು, ಆ ಕಣ್ಣುಗಳು ಪ್ರೇಮಾಶ್ರು ಪೂರ್ಣವಾದವು; ಅಭಿಮಾನದಿಂದ ಆ ವೀರಮಣಿಯ ಮೈಗೂದಲುಗಳು ನೆಟ್ಟಗಾದವು; ಗರ್ಭಗುಡಿಯನ್ನು ಹೊಕ್ಕ ಕೂಡಲೇ ಆತನು ಪುನಃ ದೇವಿಯ ಜಯಘೋಷ ಮಾಡಿದನು. ಆತನು ಬಾಷ್ಪಪೂರ್ಣ ನೇತ್ರಗಳಿಂದ ದೇವಿಯ ಕಡೆಗೆ ನೋಡಿ—''ಇಂಥ ತಾಯಿಯು ನೀನು ನನ್ನ ಕುಲದೇವತೆಯಾಗಿರಲು, ನನ್ನ ಬುಂದೇಲಖಂಡವು ಯವನ ಬಾದಶಹನ ಅಡಿಯಾಳಾಗಬೇಕೇ? ಇಂಥ ಮಹಾಶಕ್ತಿಯನ್ನು ಪೂಜಿಸುವವರು ನಾವಾಗಿರಲು, ಯವನರ ಮುಂದೆ ನಾಯಿಯಂತೆ ನಾವು ಬಾಲ ಗುಂಡಾಡಿಸಬೇಕೆ?'' ಎಂದು ಭಾವಿಸುವಾಗ ಆತನ ಕಣ್ಣೀರುಗಳು ಒತ್ತರಿಸಲು, ಅಷ್ಟು ಹತ್ತರ ಹೋಗಿದ್ದರೂ ಆತನಿಗೆ ದೇವಿಯ ದರ್ಶನವು ಸ್ಪಷ್ಟವಾಗಿ ಆಗಲೊಲ್ಲದು. ತನ್ನ ದೇಶದ ದೈನ್ಯವನ್ನು ದೇವಿಯ ಮುಂದೆ ತೋಡಿಕೊಳ್ಳಲು ಆತುರಪಡುತ್ತಿದ್ದ ಆ ಕ್ಷತ್ರಿಯ ವೀರನು ತನ್ನ ಸೆಲ್ಲೆಯಿಂದ ಕಣ್ಣೀರುಗಳನ್ನು ಒರೆಸಿಕೊಂಡು ದಿಟ್ಟಿಸಿ ದೇವಿಯನ್ನು ನೋಡಿದನು. ಆಗ ಆ ಜಗಜ್ಜನನಿಯು ಮುಗುಳುನಗೆ ನಗುತ್ತ ಸುವರ್ಣಪೀಠದ ಮೇಲೆ ಸ್ಥಿರವಾಗಿ ಕುಳಿತುಕೊಂಡಿದ್ದಳು. ಪುನಃ ಪಚಂತರಾಯನ ಹೃದಯವು ಭಕ್ತಿಯ ನುಗ್ಗುವಿಕೆ ಯಿಂದ ನಡುಗಿತು! ಆತನು ನಡಗುವ ದನಿಯಿಂದ—''ಜಯ ಭವಾನಿ! ಆದಿಮಾಯೇ!!'' ಎಂದು ನುಡಿದು ಮುಂದೆ ಮಾತಾಡ ಲಾರದೆ, ಸಾಷ್ಟಾಂಗವಾಗಿ ದೇವಿಯನ್ನು ವಂದಿಸಿದನು. ಬಳಿಕ ಆತನು ಎದ್ದುನಿಂತು ಎವೆಯಿಕ್ಕದೇ ದೇವಿಯನ್ನು ನೋಡುತ್ತ ಭಕ್ತಿಯ ಹಗ್ಗದಿಂದ ಆಕೆಯ ಉಜ್ವಲ ಮೂರ್ತಿಯನ್ನು ಸೆಳೆದು ಕಣ್ಣುಗಳ ಹಾದಿಯಿಂದ ಅದನ್ನು ತನ್ನ ಹೃದಯದಲ್ಲಿ

ಸೇರಿಸಿಕೊಳ್ಳುತ್ತಿರುವಾಗ, ಮತ್ತೊಬ್ಬ ಕ್ಷತ್ರಿಯ ವೀರನ ಜಯಜಯಕಾರ ಧ್ವನಿಯು ಆತನ ಕಿವಿಗೆ ಬಿದ್ದಿತು.

ಇಂದು ವರ್ಷದ ಉತ್ಸವವಿರುವದರಿಂದ ಹೀಗೆ ಜಯಘೋಷವಾದದ್ದು ಚಂಪತರಾಯನಿಗೆ ಆಶ್ಚರ್ಯಕರವಾಗಿ ತೋರಲಿಲ್ಲ; ಯಾಕಂದರೆ ದೇವಿಯ ದರ್ಶನಕ್ಕಾಗಿ ಇಂದು ಬುಂದೇಲಿಯ ಎಲ್ಲ ಕ್ಷತ್ರಿಯ ರಾಜರೂ, ಪ್ರಜೆಗಳೂ ಬರತಕ್ಕವರಾಗಿದ್ದು, ಅವರೆಲ್ಲರ ಜಯಘೋಷದಿಂದ ವಿಂಧ್ಯಾದ್ರಿಯ ದಿಕ್ತಟಗಳು ತುಂಬಿಹೋಗುತ್ತಿರುವದನ್ನು ಚಂಪತರಾಯನು ಅರಿತಿದ್ದನು; ಆದರೆ ತನ್ನ ಕಿವಿಗೆ ಬಿದ್ದ ಆ ನಿಸ್ಸತ್ವ ಜಯಘೋಷದ ರೀತಿಯನ್ನು ನೋಡಿ ಚಂಪತರಾಯನು ಸೋಜಿಗಗೊಂಡಿದ್ದನು. ಇಷ್ಟು ನಡುಗುವ ಕಸುವುಗೆಟ್ಟ ದನಿಯಿಂದ ಅಂಜುತ್ತಂಜುತ್ತ ಜಯಘೋಷಮಾಡುವ ಕ್ಷತ್ರಿಯನು ಯಾರೆಂದು ಆತನು ಹಿಂದಿರುಗಿ ನೋಡಲು, ರಣವೀರ ಸಭಾಕರಣ ಬುಂದೇಲನು ಆತನ ಕಣ್ಣಿಗೆ ಬಿದ್ದನು! ತನ್ನ ಸಿಂಹನಾದದಿಂದ ರಣಭೂಮಿಯನ್ನು ನಡಗಿಸುತ್ತ, ತನ್ನ ಪ್ರತಾಪದಿಂದ ಶತ್ರುಗಳ ಉತ್ಸಾಹವನ್ನು ಕುಗ್ಗುಬಡಿಯುವ ಆ ರಣಕೇಸರಿಯು, ದೇವಿಯ ಎದುರಿಗೆ ನರಿಯಂತೆ ಇಷ್ಟು ಅಂಜುಬುರುಕನು ಯಾಕೆ ಆದನೆಂಬದರ ಗೂಢವು ಚಂಪತರಾಯನಿಗೆ ತಿಳಿಯದಾಯಿತು; ಮತ್ತು ಒಬ್ಬಾನೊಬ್ಬ ಪಾಪಿಷ್ಠ ಮನುಷ್ಯನ ಮೋರೆಯಂತೆ ಸಭಾಕರಣನ ಮೋರೆಯು ಕಪ್ಪು ಇಟ್ಟಿರುವದರ ಕಾರಣವನ್ನೂ ಚಂಪತರಾಯನು ತಿಳಿಯದಾದನು. ಸಭಾಕರಣನು ಚಂಪತರಾಯನ ಪ್ರಬಲ ಶತ್ರುವು; ಆದರೂ ಆ ಪ್ರತಾಪಿಯಾದ ತನ್ನ ಶತ್ರುವಿನ ಈ ಕನಿಕರದ ಸ್ಥಿತಿಯನ್ನು ನೋಡಿ ಚಂಪತರಾಯನು ಮರುಗಿದನು. ಆತನು ಕೃಪಾದೃಷ್ಟಿಯಿಂದ ಸಭಾಕರಣನನ್ನು ನೋಡುತ್ತಿರಲು, ಆ ಕ್ಷತ್ರಿಯ ವೀರನ ಕಣ್ಣುಗಳೊಳಗಿಂದ ಎರಡು ಅಶ್ರುಬಿಂದುಗಳು ಆತನ ಗಲ್ಲಗಳ ಮೇಲೆ ಬಿದ್ದವು. ಇವು ಭಕ್ತಿಪರವಶತೆಯಿಂದ ಸುರಿಯುವ ಅಶ್ರುಗಳಾಗಿರದೆ, ಸಭಾಕರಣನು ದುಃಖದಿಂದ ಕಣ್ಣೀರು ಸುರಿಸುತ್ತಿರುವನೆಂದು ಚಂಪತರಾಯನು ಕೂಡಲೇ ಕಂಡುಹಿಡಿದನು.

ಚಂಪತರಾಯನೂ, ಸಬಾಕರಣನೂ ಚಿಕ್ಕಂದಿನಲ್ಲಿ ಕೂಡಿ ಆಡಿದವರಾಗಿದ್ದರು. ಪರಸ್ಪರರ ಹೃದಯವನ್ನೂ, ಯೋಗ್ಯತೆಯನ್ನೂ ಪರಸ್ಪರರು ಅರಿತಿದ್ದರು. ತಮ್ಮ ಜನ್ಮಭೂಮಿಯಾದ ಬುಂದೇಲಖಂಡದ ದಾಶ್ಯವನ್ನು ಹೇಗೆ ದೂರಮಾಡಬೇಕೆಂಬದನ್ನು ಕುರಿತು ಇಬ್ಬರೂ ಯಾವಾಗಲೂ ಎಣಿಕೆ ಹಾಕುತ್ತಿದ್ದರು; ಆದರೆ ಒಂದಾನೊಂದು ಕಾಲ್ಪನಿಕ ಗೂಢ ಕಾರಣದಿಂದ ಸಭಾಕರಣನ ಹೃದಯದಲ್ಲಿ ಚಂಪತರಾಯನ ವಿಷಯದ ದ್ವೇಷಭಾವವು ಅಕಸ್ಮಾತ್ ಹುಟ್ಟಲು, ಆ ರಣಧೀರನ ಕೈ ಖಡ್ಗವು ಚಂಪತರಾಯನ ದೇಶೋದ್ಧಾರದ ಕಾರ್ಯಕ್ಕೆ ಸಹಾಯ ಮಾಡುವದರ ಬದಲು, ಅದು, ಸಮರದಲ್ಲಿ ಚಂಪತರಾಯನನ್ನು ಸಂಹರಿಸಲಿಕ್ಕೂ, ಚಂಪತರಾಯನ ದೇಶೋದ್ಧಾರದ ಪವಿತ್ರಕಾರ್ಯಕ್ಕೆ ಪ್ರತಿಬಂಧ ಮಾಡಲಿಕ್ಕೂ ಸಜ್ಜಾಯಿತು! ಆದರೂ ಆ ಸಭಾಕರಣನು ತನ್ನ ನೀಚತನಕ್ಕಾಗಿ ಪಶ್ಚಾತ್ತಾಪಪಟ್ಟು, ಈಗ ಕಣ್ಣೀರು ಸುರಿಸುವದನ್ನು ನೋಡಿ ಚಂಪತರಾಯನ ಸರಳ ಹೃದಯವು ಕರಗಿತು. ತನ್ನ ಮಿತ್ರನ ಪ್ರೇಮಾಂಕುರವನ್ನು ಪ್ರೇಮದಿಂದ ಬೆಳಿಸದೆ, ಆತನನ್ನು ನಿರಾಕರಿಸಿ, ಆತನ ಬಿರುಸುಮಾತುಗಳಿಗೆ ಪ್ರತಿಯಾಗಿ

ಬಿರುಸುಮಾತುಗಳನ್ನಾಡಿ, ಮರ್ಮಭೇದಕ ಮಾತುಗಳಿಂದ ಆತನ ಮನಸ್ಸನ್ನು ನೋಯಿಸುತ್ತ ಆತನ ಅವಿವೇಕತನಕ್ಕೆ ವಿಚಾರಶೂನ್ಯತೆಯ ಸ್ವರೂಪವನ್ನು ಉಂಟುಮಾಡಿದ್ದಕ್ಕಾಗಿ ಚಂಪತ ರಾಯನು ಪಶ್ಚಾತ್ತಾಪಪಟ್ಟನು. ಈ ವರೆಗೆ ತಾನು ಮಾಡುತ್ತ ಬಂದಿರುವ ತಪ್ಪನ್ನು ಈಗಾದರೂ ತಿದ್ದಿಕೊಂಡು ತನ್ನ ಮೇಲೆ ಸಿಟ್ಟಾದ ಕಾರಣವನ್ನು ಕೇಳಿ ಕ್ಷಮೆ ಬೇಡಿ ತನ್ನ ಮಿತ್ರನ ಸಿಟ್ಟು ಇಳಿಸಬೇಕೆಂತಲೂ ಆತನು ಮಾಡಿದನು; ಅಷ್ಟರಲ್ಲಿ ಸಭಾಕರಣನು ಚಂಪತರಾಯನ ದ್ವೇಷಿಯಾದ ಕಂಚುಕಿರಾಯನೊಡನೆ ಮಾತಾಡುತ್ತ ತನ್ನ ಕಡೆಗೆ ತಿರಸ್ಕಾರದ ಔದ್ಧತ್ಯದಿಂದ ನೋಡಹತ್ತಿದ್ದನ್ನು ನೋಡಿ ಚಂಪತರಾಯನು ಸಂತಾಪಗೊಂಡು—ಈ ದೇಶದ್ರೋಹಿಗಳ ನಿರ್ಮೂಲ ಮಾಡಿ ಅವರ ಹೆಣಗಳ ರಾಸಿಯ ಮೇಲೆಯೇ ಸ್ವದೇಶ ಸ್ವಾತಂತ್ರ್ಯದ ಧ್ವಜವನ್ನು ನಿಲ್ಲಿಸಬೇಕೆಂದು ತನ್ನೊಳಗೆ ಅಂದುಕೊಂಡು, ಸಿಟ್ಟಿನಿಂದ ಮೋರೆಯು ಕೆಂಪಾಗುತ್ತಿರಲು, ಹತ್ತಿರದಲ್ಲಿದ್ದ ಒಂದು ಆಸನದಮೇಲೆ ಕುಳಿತು ಕೊಂಡನು; ಅಷ್ಟರಲ್ಲಿ ಓರಛಾ ಸಂಸ್ಥಾನದ ರಾಜನಾದ ಪಹಾರಸಿಂಗನೂ, ಆತನ ಹೆಂಡತಿಯಾದ ಹೀರಾದೇವಿಯೂ ಸಪರಿವಾರ ದೇವಿಯ ಮಂದಿರವನ್ನು ಅಹಂಭಾವದಿಂದ ಪ್ರವೇಶಿಸಿದರು.

ಪಹಾರಸಿಂಗನು ಚಂಪತರಾಯನಿಗೆ ಹೊರಗಿನವನಲ್ಲ, ಕಕ್ಕನಮಗನು. ಯವನರು ಅಪಹರಿಸಿದ್ದ ಆತನ ಓರಛಾಸಂಸ್ಥಾನವನ್ನು ಚಂಪತರಾಯನು ತನ್ನ ಪರಾಕ್ರಮದಿಂದ ಗೆದ್ದು ಅದನ್ನು ತನ್ನ ಬಂಧು ಪಹಾರಸಿಂಗನಿಗೆ ಕೊಟ್ಟು, ತಾನು ಮಹೋಬದ ಸಣ್ಣ ಸಂಸ್ಥಾನದಿಂದಲೇ ಸಂತುಷ್ಟನಾದದ್ದರಿಂದ ಆತನು ಪಹಾರಸಿಂಗನ ಉಪಕಾರ ಕರ್ತೃವೂ ಆಗಿದ್ದನು. ಹೀಗೆ ಬಂಧುತ್ವ–ಉಪಕಾರ ಕರ್ತೃತ್ವಗಳ ಮೂಲಕ ಪಹಾರಸಿಂಗನು ಚಂಪತರಾಯನಿಗೆ ಅತ್ಯಂತ ಕೃತಜ್ಞನಾಗಿರಬೇಕಾಗಿತ್ತಷ್ಟೇ? ಆದರೆ ಕೃತಘ್ನ ಪಹಾರಸಿಂಗನೂ, ಆತನ ರಾಣಿಯಾದ ಹೀರಾದೇವಿಯೂ ಚಂಪತರಾಯನ ವಿಷಯವಾಗಿ ದೀರ್ಘ ದ್ವೇಷವನ್ನು ತಾಳಿದ್ದರು! ಕಾರ್ಯವಾಗುವವರೆಗೆ ಆ ಗಂಡ–ಹೆಂಡಿರು ಆದರದಿಂದ ಮಾಡಿದ ಚಂಪತರಾಯನ ಸೇವೆ ಸತ್ಕಾರಗಳನ್ನು ನೋಡಿದವರು, ತನ್ನ ಉಪಕಾರ ಕರ್ತೃವಿನ ವಿಷಯವಾಗಿ ಈ ದುಷ್ಟ ದಂಪತಿಗಳು ಈಗ ಇಷ್ಟು ಕೃತಘ್ನರು ಹೇಗಾದರೆಂದು ಆಶ್ಚರ್ಯಪಡದೆ ಇರುತ್ತಿದ್ದಿಲ್ಲ. ಸ್ವತಃ ಚಂಪತರಾಯನಿಗೂ ಮೇಲೆ ಮೇಲೆ ಈ ಮಾತಿನ ಆಶ್ಚರ್ಯವಾಗುತ್ತಿತ್ತು. ಪಹಾರಸಿಂಗನು ತನ್ನ ಹೆಂಡತಿಯ ಆಲೋಚನೆಯಂತೆ ಔರಂಗಜೇಬ ಬಾದಶಹನ ಪಕ್ಷವಹಿಸಿ ಚಂಪತರಾಯನ ಸ್ವದೇಶೋದ್ಧಾರದ ಕಾರ್ಯಕ್ಕೆ ಪರಿಪರಿಯಿಂದ ವಿಘ್ನ ಮಾಡತೊಡಗಿದ್ದನು. ದೇಶದ ಅವನತ ಸ್ಥಿತಿಯಲ್ಲಿ ಇಂತಹ ಕೃತಘ್ನತೆಯು ವಿಪುಲವಾಗಿ ಕಣ್ಣಿಗೆ ಬೀಳುವದು ಆಶ್ಚರ್ಯದ ಸಂಗತಿಯಲ್ಲ. ಇಂಥ ಕೃತಘ್ನ ಪಹಾರಸಿಂಗನೂ, ಆತನ ಹೆಂಡತಿಯೂ ಚಂಪತರಾಯನನ್ನು ತಿರಸ್ಕಾರದ ಕ್ರೂರ ದೃಷ್ಟಿಯಿಂದ ನೋಡುತ್ತ ಉಚ್ಚಾಸನದ ಮೇಲೆ, ಆದರೆ ಚಂಪತರಾಯನಿಂದ ಸ್ವಲ್ಪ ದೂರದಲ್ಲಿ ಕುಳಿತುಕೊಂಡರು. ಈ ದುಷ್ಟ ದಂಪತಿಗಳ ಹೃದಯದಲ್ಲಿ ದೇವಿಯ ವಿಷಯದ ಭಕ್ತಿಯ ಗಂಧವೂ ಇಲ್ಲದಿರಲು, ಅವರು ಕೇವಲ ತಮ್ಮ ವೈಭವದ ಹೆಮ್ಮೆಯನ್ನು ತೋರಿಸುವದಕ್ಕಾಗಿ ಸ್ತುತಿಪಾಠಕರ ಸ್ತುತಿ ಘೋಷದೊಡನೆ ದೇವಿಯ ಮಂದಿರವನ್ನು ಪ್ರವೇಶಿಸಿದ್ದರು. ಆ ನಾಸ್ತಿಕರು

ದೇವಿಯನ್ನು ತಲೆಬಾಗಿ ನಮಿಸಲಿಲ್ಲ, ಬಾಯಿಬಿಟ್ಟು ಆ ಭಗವತಿಯ ಜಯಘೋಷ ಮಾಡಲಿಲ್ಲ. ಮೋಟಮರದಂತೆ ನಿಂತು ಕೈ ಮುಗಿದು ಸುಮ್ಮನಿಂದ ಕುಳಿತುಕೊಂಡಿದ್ದರು!

ಹೀಗೆ ಒಬ್ಬೊಬ್ಬರೇ ಬುಂದೇಲಿಯ ಕ್ಷತ್ರಿಯ ರಾಜರು ಜಯಘೋಷ ಮಾಡುತ್ತ ದೇವಿಯ ಮಂದಿರವನ್ನು ಪ್ರವೇಶಿಸಿದರು. ಅವರಲ್ಲಿ ಯಾರು ಚಂಪತರಾಯನ ಪಕ್ಷದವರಿದ್ದರು, ಯಾರು ಪಹಾರಸಿಂಗನ ಪಕ್ಷದವರು, ಅರ್ಥಾತ್ ಮೊಗಲರ ಪಕ್ಷದವರು ಇದ್ದರು. ಚಂಪತರಾಯನ ಪಕ್ಷಕ್ಕಿಂತ ಮೊಗಲರ ಪಕ್ಷವು ದೊಡ್ಡದಾಗಿತ್ತು; ಆದರೂ ಬುಂದೇಲಿಯ ಪ್ರಜೆಗಳು ಮನಸ್ಸಿನಿಂದ ಚಂಪತರಾಯನನ್ನೇ ವಿಶೇಷವಾಗಿ ಪ್ರೀತಿಸುತ್ತಿದ್ದರು. ಹೀಗೆ ಬುಂದೇಲಿಯ ಎಲ್ಲ ಅರಸರು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡಿರುವದನ್ನು ನೋಡಿ ದೇವಿಯ ಮುಖ್ಯ ಪೂಜಾರಿಯು ಕೈಜೋಡಿಸಿ ಚಂಪತರಾಯನನ್ನು ಕುರಿತು—ರಾಜನ್, ದೇವಿಯ ಪೂಜೆಯ ಸರ್ವಸಿದ್ಧತೆಯಾಗಿರುವದು, ಪೂಜೆಯನ್ನು ಆರಂಭಿಸಬೇಕೋ ಇನ್ನೂ ಯಾರಾದರೂ ಬರುವವರು ಇರುವರೋ, ಎಂದು ಪ್ರಾಣನಾಥ ಪ್ರಭುಗಳು ಕೇಳುತ್ತಿರುವರು, ಎಂದು ಕೇಳಿಕೊಂಡನು. ಅದಕ್ಕೆ ಚಂಪತರಾಯನು —''ಇಂದಿನ ಪುಣ್ಯಕರ ಮಹೋತ್ಸವವನ್ನು ನೋಡುವದಕ್ಕೆ ಪ್ರತಿವರ್ಷದಂತೆ ಎಲ್ಲ ಅರಸರೂ ಬಂದಿರುವರು. ಇನ್ನು ಪೂಜೆಯನ್ನು ಆರಂಭಿಸಲು ಬಾಧಕವಿಲ್ಲ, ನನ್ನ ಈ ವಿಜ್ಞಾಪನೆಯನ್ನು ಪ್ರಾಣನಾಥ ಪ್ರಭುಗಳಿಗೆ ತಿಳಿಸು'' ಎಂದು ಹೇಳಿ ಸುತ್ತುಮುತ್ತು ನೋಡಲು, ತನ್ನ ಮಗನಾದ ಕುಮಾರ ಛತ್ರಸಾಲನು ಅಲ್ಲಿ ಎಲ್ಲಿಯೂ ಕಾಣಲಿಲ್ಲ, ಆಗ ಚಂಪತರಾಯನು ಮತ್ತೆ ಪೂಜಾರಿಗೆ —''ಆಚಾರ್ಯ, ಇಲ್ಲಿ ಕುಮಾರನು ಎಲ್ಲಿಯೂ ಕಾಣುವದಿಲ್ಲ, ಇಷ್ಟರಲ್ಲಿ ಆತನು ಬರುತ್ತಿರಬಹುದು. ಈ ಪುಣ್ಯ ಕಾರ್ಯವನ್ನು ನೋಡುವ ಇಚ್ಛೆಯು ಆತನಿಗೆ ಬಹಳ. ಆತನು ಬಂದ ಕೂಡಲೇ ಪೂಜೆಯನ್ನು ಆರಂಭಿಸಿದರೆ, ಇಲ್ಲಿ ಕೂಡಿರುವ ಎಲ್ಲ ಸಜ್ಜನರ ಉಪಕಾರವನ್ನು ಆತನು ನೆನಿಸಬಹುದು.

ಈ ಮೇರೆಗೆ ನುಡಿದು ಚಂಪತರಾಯನು ತನ್ನ ಒಬ್ಬ ಸೇವಕನನ್ನು ಕುಮಾರ ಛತ್ರಸಾಲನನ್ನು ಬೇಗನೆ ಕರತರುವದಕ್ಕಾಗಿ ಕಳಿಸಿಕೊಟ್ಟನು. ಇದನ್ನು ನೋಡಿ ಹೀರಾದೇವಿಯು ಸಂತಪ್ತಳಾದಳು. ಮುಖ್ಯ ಪೂಜಾರಿಯು ಪೂಜೆಯನ್ನು ಆರಂಭಿಸುವದಕ್ಕಾಗಿ ಕ್ಷುದ್ರನಾದ ಮಹೋಬದ ಅರಸನನ್ನು ಕೇಳಿದ್ದು ಆಕೆಗೆ ಸಹನವಾಗಲಿಲ್ಲ; ಮತ್ತು ಮಹೋಬದ ಕ್ಷುದ್ರ ರಾಜಪುತ್ರನ ಸಲುವಾಗಿ ತಾವೆಲ್ಲರೂ ಹಾದಿಯ ನೋಡುತ್ತ ಕುಳಿತುಕೊಳ್ಳುವದು ಆಕೆಗೆ ಅಪಮಾನಕರವಾಗಿ ತೋರಿತು. ಹೀಗೆ ತಮ್ಮ ಮಾನಖಂಡನ ಮಾಡಿದ್ದಕ್ಕಾಗಿ ಪೂಜಾರಿಯ ಶಾಸನ ಮಾಡತಕ್ಕದ್ದೆಂದು ಆ ಕೃತಘ್ನ ಸ್ತ್ರೀಯು ತನ್ನ ಪತಿಗೆ ಆಜ್ಞೆಯ ಸ್ವರೂಪದಿಂದ ವಿಜ್ಞಾಪಿಸಿದಳು. ಸಭಾಕರಣ ಬುಂದೇಲನೂ ಆಕೆಯ ಮಾತನ್ನು ಪುಷ್ಟೀಕರಿಸಿದನು. ಆಗ ಪಹಾರಸಿಂಗನು ಗಟ್ಟಿಯಾಗಿ ನಕ್ಕು ಅವರನ್ನು ಕುರಿತು—''ಯುವರಾಜ ವಿಮಲದೇವನೂ, ಯುವರಾಜ ದಲಪತರಾಯನೂ ಇಲ್ಲಿ ಇರುವರೋ ಹೇಗೆಂಬದನ್ನು ಮೊದಲು ನೋಡಿರಿ; ಅವರಿಲ್ಲದಿದ್ದರೂ ಪೂಜೆಯನ್ನು ಆರಂಭಿಸಬೇಕೆಂದು ನೀವು ಹೇಳುತ್ತಿದ್ದರೆ, ಹಾಗೆ ಮಾಡುವದಕ್ಕಾಗಿ ಈಗಲೇ ನಾನು ಪೂಜಾರಿಯನ್ನು ಆಜ್ಞಾಪಿಸುವೆನು! ಎಂದು ಹೇಳಿದನು. ಆಗ

ಹೀರಾದೇವಿಗೆ ತನ್ನ ಮಗ ವಿಮಲದೇವನೂ, ಸಭಾಕರಣನಿಗೆ ತನ್ನ ಮಗ ದಲಪತರಾಯನೂ ಅಲ್ಲಿ ಎಲ್ಲಿಯೂ ಕಾಣಲಿಲ್ಲ. ಆದರಿಂದ ಅವರಿಬ್ಬರೂ ತಮ್ಮ ಸಿಟ್ಟನ್ನು ನುಂಗಿಕೊಳ್ಳ ಬೇಕಾಯಿತು. ಅವರು ಕೂಡಲೆ ಕುಮಾರರನ್ನು ಕರತರುವದಕ್ಕಾಗಿ ಸೇವಕರನ್ನು ಓಡಿಸಿದರು; ಆದರೆ ಸೇವಕರು ಗುಡಿಯನ್ನು ಬಿಟ್ಟು ಹೊರಬೀಳು ವದರೊಳಗೇ ಒಬ್ಬ ಹನ್ನೆರಡು ವರ್ಷದ ಬಾಲಿಕೆಯು ಓಡುತ್ತ ಬಂದು—''ಕುಮಾರರು ಈಗ ಹಿಂದೆ ಬರುವರು'' ಎಂದು ಹೇಳುತ್ತ ದೇವಿಯ ಮಂದಿರವನ್ನು ಹೊಕ್ಕಳು.

ಆ ಬಾಲಿಕೆಯು ಧಾರೀರ ಸಂಸ್ಥಾನದ ಅರಸನಾದ ಕಂಚುಕಿರಾಯನ ಮಗಳು. ಆಕೆಯ ಹೆಸರು ''ವಿಜಯಾ ಎಂಬದು '' ವಿಜಯೆಯು ಸೌಂದರ್ಯದಲ್ಲಿ ಅಪ್ರತಿಮಳಾಗಿದ್ದಳು. ಆಗಿನ ಬುಂದೇಲಖಂಡದಲ್ಲಿ ವಿಜಯೆಯನ್ನು ಸರಿಗಟ್ಟುವ ಸೌಂದರ್ಯಶಾಲಿನಿಯರು ಅಪರೂಪ. ಅಂಥ ಸೌಂದರ್ಯದ ಪುತ್ತಳಿಯು ಓಡಿಬಂದದ್ದರಿಂದ ಆಕೆಯ ಗಲ್ಲಗಳು ಕೆಂಪಾಗಿದ್ದವು. ಹಣೆಯಲ್ಲಿ ಬೆವರು ಹನಿಗಳು ಮುತ್ತುಗಳಂತೆ ಒಪ್ಪುತ್ತಿದ್ದವು. ಆಕೆಯ ವೇಗದ ಶ್ವಾಸೋಚ್ಛ್ವಾಸ ದಿಂದ ದೇವಿಯಮಂದಿರವು ಸುಗಂಧಮಯವಾಗುತ್ತಲಿತ್ತು. ವಿಜಯೆಯ ಮುಡಿ ಕಟ್ಟದೆಯಿದ್ದ ಬಿಚ್ಚಹೆರಳು ಆಕೆಯ ಹೆಗಲಮೇಲೆ ಬಿದ್ದಿರುವಾಗ, ಅದನ್ನು ಆಕೆಯು ಕೈಯಿಂದ ಬೆನ್ನಿಗೆ ನೂಕಲು, ಅದರಲ್ಲಿ ಮುಡಿದಿದ್ದ ಗುಲಾಬಿಯ ಹೂಗಳ ಪಕಳಿಗಳು ಬಳಬಳನೆ ಉದುರಿದವು. ಆ ಬಾಲಿಕೆಯ ಹರಿಣ ನೇತ್ರಗಳು ಅತ್ಯಂತ ಚಂಚಲವಾಗಿದ್ದವು. ಮುಂಗುರುಳುಗಳು ಮಂದಮಾರುತನಿಂದ ಅಲೆದಾಡುತ್ತಲಿದ್ದವು. ಆಕೆಯು ಎಡಬಲಗಳನ್ನು ನೋಡದೆ ನೆಟ್ಟಗೆ ದೇವಿಯ ಗರ್ಭಗುಡಿಯ ಬಾಗಿಲಿಗೆ ಹೋಗಿ, ತನ್ನ ಸ್ವರ್ಗೀಯ ಮಂಜುಲ ಧ್ವನಿಯಿಂದ ಪ್ರಾಣನಾಥ ಪ್ರಭುಗಳನ್ನು ಕುರಿತು —''ಪ್ರಭೋ, ಯುವರಾಜ ಛತ್ರಸಾಲನೂ, ಆತನ ಗೆಳೆಯರಾದ ಯುವರಾಜ ದಲಪತರಾಯ, ಯುವರಾಜ ವಿಮಲದೇವರೂ ಯುದ್ಧದಲ್ಲಿ ಜಯ ಪಡೆದು ದೇವಿಯ ದರ್ಶನಕ್ಕಾಗಿ ಇತ್ತಕಡೆಗೇ ಬರತ್ತಿರುವರು. ತಾವು ಬರುವವರೆಗೆ ಮಂಗಳ ಕಾರ್ಯವನ್ನು ಆರಂಭಿಸಬಾರದೆಂದು ತಮ್ಮನ್ನು ಬೇಡಿಕೊಳ್ಳಬೇಕೆಂದು ಅವರು ಹೇಳಿದ್ದರಿಂದ, ನಾನು ತಮ್ಮ ಮುಂದೆ ಹೇಳುವದಕ್ಕಾಗಿ ಮುಂದೆ ಓಡಿಬಂದೆನು'' ಎಂದು ಹೇಳಿದಳು. ಅದನ್ನು ಕೇಳಿದ ಕೂಡಲೇ ಪ್ರಾಣನಾಥ ಪ್ರಭುಗಳು ಗರ್ಭಗುಡಿಯಿಂದ ಹೊರಗೆ ಬರುತ್ತ ವಿಜಯೆ ಯನ್ನು ಕುರಿತು —''ವತ್ಸೇ, ಎಲ್ಲಿಯ ಯುದ್ಧವು? ಕುಮಾರರು ಜಯವನ್ನೇನು ಸಂಪಾದಿಸಿ ದರು?'' ಎಂದು ಕೇಳುತ್ತ ಗರ್ಭಗುಡಿಯಿಂದ ಹೊರಗೆ ಬಂದರು.

ಅವರು ಹೊರಗೆ ಬಂದಾಗ ಒಂದು ತೇಜೋವಲಯವು ಅವರ ಮುಖ ಮಂಡಲವನ್ನು ವ್ಯಾಪಿಸಿ ವಿಹರಿಸುತ್ತಿರುವಂತೆ ತೋರಿತು! ಅವರ ತೇಜಸ್ವಿ ಮುಖಮಂಡಲದಿಂದ ಅವರ ಕಠಿಣತರ ಬ್ರಹ್ಮಚರ್ಯವೂ, ಪವಿತ್ರತರ ನಿಷ್ಕಾಮ ಬುದ್ಧಿಯೂ, ಉತ್ಕಟತರ ತಪೋಬಲವೂ ಹೊರಬಿದ್ದು ಹರಿದು ಬರುತ್ತಿದ್ದವು! ಆ ಮಹಾತ್ಮರ ಮಹಾಮಹಿಮೆಯಿಂದ ಎಲ್ಲರೂ ಸ್ವಾಭಾವಿಕವಾಗಿ ತಟ್ಟನೆ ಎದ್ದು ನಿಲ್ಲುತ್ತಿರಲು, ದುರಭಿಮಾನಿಗಳಾದ ಪಹಾರಸಿಂಗನೂ ಹೀರಾದೇವಿಯೂ, ನಿಳಲಾರದೆಯೂ ಕುಳಿತುಕೊಳ್ಳಲಾರದೆಯೂ ಪೇಚಾಡುತ್ತಲಿದ್ದರು. ಆಗ ಪ್ರಭುಗಳು ವಿಜಯೆಯ ಬೆನ್ನಮೇಲೆ ಕೈಯಾಡಿಸುತ್ತ ಆಕೆಯ ಗದ್ದ–ತುಟಿಗಳನ್ನು ಹಿಡಿದು

ರಮಿಸುತ್ತ ಆಕೆಯನ್ನು ಹತ್ತರ ಕರೆದುಕೊಳ್ಳುತ್ತಿರಲು, ಅಷ್ಟರಲ್ಲಿ ಮುಖ್ಯ ಪೂಜಾರಿಯು ಪ್ರಭುಗಳಿಗಾಗಿ ಆಸನವನ್ನು ಸಿದ್ಧಪಡಿಸಿದ್ದನು. ಪ್ರಭುಗಳು ತಮ್ಮ ಶಿಷ್ಯವೃಂದವನ್ನು ಕುರಿತು ಸಜ್ಜನರೇ, ಕುಳಿತುಕೊಳ್ಳಿರಿ. ನಾನು ಬಂದ ಹೋದಾಗೆಲ್ಲ ಎದ್ದು ನಿಲ್ಲಹತ್ತಿದ್ದರೆ ಅದೊಂದು ಕೆಲಸವೇ ಆದೀತಲ್ಲ? ಈ ಸುಂದರ ಬಾಲಿಕಿಯು ತಂದಿರುವ ಯುದ್ಧದ ಸುದ್ದಿಯನ್ನು ಶಾಂತ ಚಿತ್ತದಿಂದ ಕೇಳೋಣ ಕುಳಿತುಕೊಳ್ಳಿರಿ, ಎಂದು ವಿಜಯೆಯೊಡನೆ ಆಸನದಮೇಲೆ ಕುಳಿತು ಕೊಳ್ಳಲು, ಎಲ್ಲರೂ ತಮ್ಮ ಆಸನಗಳ ಮೇಲೆ ಕುಳಿತುಕೊಂಡರು. ಆಗ ವಿಜಯೆಯು ಅತ್ಯಂತ ಉತ್ಸಾಹದಿಂದ ಪ್ರಭುಗಳನ್ನು ಕುರಿತು –

ಪ್ರಭೋ, ಇಂದಿನ ದೇವಿಯ ಪೂಜೆಗಾಗಿ ಮಾಲೆ ಮಾಡಬೇಕೆಂದು ಹೂವು ತರುವದಕ್ಕಾಗಿ ನಾನೂ ಯುವರಾಜ ವಿಮಲದೇವನೂ ಈ ಬಳಿಯ ವಿಂಧ್ಯಾರಣ್ಯಕ್ಕೆ ಹೋದೆವು. ಆಗ ಸೂರ್ಯನ ಹೊಂಬಣ್ಣದ ಕಿರಣಗಳು ಹೂಗಳ ಮೇಲೆ ಬಿದ್ದು ನಮ್ಮ ಮನಸ್ಸನ್ನು ಬಹಳವಾಗಿ ಎಳೆದುಕೊಂಡವು. ನಾವು ಹೂಗಳನ್ನು ಎತ್ತುವ ಭರದಲ್ಲಿ ಅರಣ್ಯ ದೊಳಗೆ ದೂರ ಹೋದೆವು. ಹೂಗಳಿಂದ ನಮ್ಮ ಬುಟ್ಟಿಯು ತುಂಬಿಹೋಯಿತು. ಅಹಹ! ಎಂತಹ ಚಂದವಾದ ಹೂಗಳವು! ನಾನೂ ವಿಮಲದೇವನೂ ಆ ಹೂಗಳ ಮಾಲೆ ಮಾಡುತ್ತ ಒಂದು ಹಾಸಗಲ್ಲ ಮೇಲೆ ಕುಳಿತುಕೊಂಡೆವು. ನಾನು ಬಾಳಯನಾರಿನ ಮೇಲಿನ ತುದಿಯಿಂದ ಮಾಲೆಕಟ್ಟಹತ್ತಿದೆನು, ಯುವರಾಜ ವಿಮಲದೇವನು ಕೆಳಗಿನ ತುದಿಯಿಂದ ಮಾಲೆ ಕಟ್ಟ ಹತ್ತಿದನು. ಬೇಗನೆ ನಮ್ಮ ಸುಂದರ ಮಾಲೆಯು ಸಿದ್ಧವಾಯಿತು. ವಿಮಲದೇವನು ನನ್ನಷ್ಟೇ ಚಟವಟಿಕೆಯಿಂದ ಮಾಲೆ ಕಟ್ಟುವದನ್ನು ನೋಡಿ ನಾನು ಆತನಿಗೆ —''ಹೆಂಗಸರ ಮಾಲೆ ಕಟ್ಟುವ ಜಾಣತನವೂ ನಿನ್ನಲ್ಲಿ ಚನ್ನಾಗಿರುತ್ತದೆ ಬಿಡು'' ಎಂದು ನಗೆಯಾಡುತ್ತಿದ್ದೆವು; ಅಷ್ಟರಲ್ಲಿ ಹತ್ತಿಪ್ಪತ್ತು ಜನ ಮುಸಲ್ಮಾನರು ನಮ್ಮನ್ನು ಮುತ್ತಿದರು. ಅವರ ಉಡಿಗೆ—ತೊಡಿಗೆಗಳು ಬಿಲೆಯುಳ್ಳವಿದ್ದವು. ಅಫುವಿನ ಅಮಲು ಏರಿದವರಂತೆ ಅವರ ಕಣ್ಣುಗಳು ಅರ್ಧ ಮುಚ್ಚಿದ್ದವು. ಅವರಿಗೆ ಯಾರ ಅಂಜಿಕೆಯೂ ಇದ್ದಂತೆ ತೋರಲಿಲ್ಲ, ಅವರು ಒಬ್ಬರನ್ನೊಬ್ಬರು ನೋಡಿ ಕೈಹೊಡೆದು ನಗುತ್ತಿದ್ದರು. ಅವರ ಮಾತು ಬಲು ಎಟ್ಟಿ, ನನಗೆ ಚನ್ನಾಗಿ ತಿಳಿಯುತ್ತಿದ್ದಿಲ್ಲ, ಅಂಥ ಮುಸಲ್ಮಾನರು ಅಪ್ಪನ ದರ್ಬಾರದಲ್ಲಿ ಮೇಲೆ ಮೇಲೆ ಬರುತ್ತಿರುವರು. ಅವರನ್ನು ಅಪ್ಪನು ದೇವರಂತೆ ಪೂಜಿಸುವನು. ಅಪ್ಪನಿಗೆ ಅವರೇ ದೇವರು!

## ದೇವಿಯ ಪ್ರಸಾದ !

ಮಗಳ ಈ ಮಾತುಗಳನ್ನು ಕೇಳಿ ಕಂಚುಕಿರಾಯನು ಸಂತಾಪಗೊಂಡನು. ತನ್ನ ಬಾದಶಹನ ಜನರನ್ನು ಹೀಗೆ ಆಡಿಕೊಂಡದ್ದು ಆತನಿಗೆ ಸಹನವಾಗಲಿಲ್ಲ, ಮಗಳ ಈ ಉದ್ಧಟತನವು ಒಬ್ಬರ ಕಿವಿಯಿಂದೊಬ್ಬರ ಕಿವಿಗೆ ಹೋಗುತ್ತ ಬಾದಶಹರ ಕಿವಿಗೆ

ಮುಟ್ಟಿಗಿಟ್ಟಿದರೆ ತನ್ನ ಪರಿಣಾಮವೇನೆಂದು ಆ ಧಾರೀರ ಸಂಸ್ಥಾನದ ವೃದ್ಧ ರಾಜನು ಬೆದರಿದನು. ಆತನು ಮಗಳನ್ನುದ್ದೇಶಿಸಿ —"ವಿಜಯೆ ಹೆಚ್ಚು ಹರಟಬೇಡ. ಸಾರ್ವಭೌಮರ ಜಾತಿಯ ಆ ಘನವಂತರು ಮುಂದೇನು ಮಾಡಿದರೆಂಬದನ್ನಷ್ಟು ಹೇಳು" ಎಂದನು. ಈ ಮೇರೆಗೆ ಮಗಳನ್ನು ಬೆದರಿಸಿ ಮೊಗಲರ ಘನತೆಯನ್ನು ಒಡನುಡಿಯುವ ಕಂಚುಕಿರಾಯನ ಪುಕ್ಕತನವನ್ನು ತಡೆಯಲಾರದೆ ಚಂಪತರಾಯನು ಆತನನ್ನು ಕುರಿತು –

ಚಂಪತರಾಯ–ಕಂಚುಕಿರಾಯರೇ, ನಿಮ್ಮ ಬಾದಶಹರ, ಅಥವಾ ಅವರ ಜಾತಿಯವರ ಘನವಂತಿಕೆಯನ್ನು ಪಾಪ! ಈ ಕೂಸೇನು ಬಲ್ಲದು? ಸ್ವಜನರಲ್ಲಿ ಸೊಕ್ಕಿನಿಂದ ಸೆಟೆಯುವವರು ಬಾದಶಹರ ಸಿಂಹಾಸನದ ಮುಂದೆಯಂತು ಇರಲಿ, ಬಾದಶಹರ ಹೆಸರು ಕಿವಿಗೆಬಿದ್ದ ಕೂಡಲೆ ಎಷ್ಟು ನಮ್ರರಾಗಬೇಕೆಂಬದರ ಪರಿಜ್ಞಾನವು ನಿಮ್ಮಂಥ ಪ್ರಬುದ್ಧರಿಗಲ್ಲದೆ ಇಂಥ ಸಣ್ಣ ಹುಡುಗರಿಗೆ ಹೇಗಿದ್ದೀತು? ಅದಕ್ಕೂ ಅಭ್ಯಾಸಬೇಕು, ಶಿಕ್ಷಣಬೇಕು, ಸುಮ್ಮನೆ ಎಲ್ಲರಿಗೂ ಬರುವದೆಯೇ? ಸಿಟ್ಟಾಗಬೇಡಿರಿ, ಮಗಳು ಹೇಳುವದನ್ನು ಸಮಾಧಾನದಿಂದ ಕೇಳಿರಿ.

ಕಂಚುಕಿರಾಯ—(ಸಿಟ್ಟಿನಿಂದ ಚಂಪತರಾಯನನ್ನು ನೋಡುತ್ತಾ )– ವಿಜಯೇ, ಮುಂದೇನಾಯಿತು ಹೇಳು.

ವಿಜಯೆ —ಅವರೇನೇನೋ ತಮ್ಮ ಮಾತಿನಲ್ಲಿ ಮಾತಾಡಿದರು, ಅದೆಲ್ಲ ನನಗೆ ತಿಳಿಯಲಿಲ್ಲ. ಆದರೆ ಕೈಮಾಡಿ ಕಣ್ಣು ಚಿವುಟಿ ನನಗೆ —" ಈ ಹುಡುಗೆಯು ಶಹಾಜಾದಾನ ಜನಾನಖಾನೆಗೆ ಹೋಗುವಷ್ಟು ಸುಂದರಿಯಾಗಿರುವಳೆಂ"ತಲೂ, ವಿಮಲದೇವನಿಗೆ—"ಈ ಹುಡುಗನು ಬಾದಶಹರ ದರ್ಬಾರದ ಹುಜುರೆಯಾಗಲು ನೆಟ್ಟಗಿರುವನೆಂ"ತಲೂ ನುಡಿದರು. ಈ ಅಪಮಾನದ ಮಾತುಗಳನ್ನು ಕೇಳಿ ನನಗೆ ಬಹಳ ಸಿಟ್ಟು ಬಂದಿತು.

ಈ ಮೇರೆಗೆ ನುಡಿಯುವಾಗ ನಿಜವಾಗಿಯೇ ವಿಜಯೆಯ ಕಣ್ಣುಗಳು ಕೆಂಪಾದವು. ಸಿಟ್ಟಿನ ಭರದಲ್ಲಿ ಆಕೆಯ ಬಾಯಿಂದ ಮಾತುಗಳೇ ಹೊರಡಲೊಲ್ಲವು. ಆಗ ಚಂಪತರಾಯನು ಕಂಚುಕಿರಾಯನಿಗೆ –

ಚಂಪತರಾಯ —ಕಂಚುಕಿರಾವ, ನಿಮ್ಮ ಬಾದಶಹರ ಜಾತಿಯ ಘನವಂತರು ನಿಮ್ಮ ಮಗಳ ವಿಷಯದಲ್ಲಿ ಆಡಿದ ಅಪಮಾನದ ಮಾತುಗಳನ್ನು ಕೇಳಿದಿರೇನು? ನಿಮ್ಮ ಮಗಳವೇ ಏಕೆ, ತಮ್ಮ ಅಧಿಕಾರದೊಳಗಿದ್ದ ಪ್ರತಿ ಒಬ್ಬ ಹಿಂದೂ ಸ್ತ್ರೀ ಪುರುಷರ ಅಪಮಾನವನ್ನು ಅವರು ಹೀಗೆಯೇ ಮಾಡುವರು. ಬುಂದೇಲಖಂಡದೊಳಗಿನ ಲಾವಣ್ಯವತಿಯರಾದ ಕನ್ನೆಯರು ಅವರ ಅಮಾನುಷ–ವಿಷಯೇಚ್ಛೆಯನ್ನು ತೃಪ್ತಿಗೊಳಿಸುವದಕ್ಕಾಗಿಯೂ, ಸುಕುಮಾರರಾದ ರಾಜಕುಮಾರರು ಬಾದಶಹರ ಕಾಲೊಳಗಿನ ಜೋಡುಹಿಡಿಯುವವ ಕ್ಕಾಗಿಯೂ ಇರುವರೆಂದು ಅವರು ತಿಳಿದಿರುವರು. ತಂಗೀ ನೀನು ಧಾರೀರದ ರಾಜಕನ್ನೆ ಯಿರುವೆನೆಂದೂ, ವಿಮಲದೇವನು ಓರಛಾದ ಯುವರಾಜನಿರುವನೆಂದೂ ನೀವು ಅವರಿಗೆ ಹೇಳಿದಿರೇನು?

ವಿಜಯೆ—ಹೇಳಿದೆವು, ಹಾಗೆ ಹೇಳಿದರೆ ನಮ್ಮ ಬಿಡುಗಡೆಯಾದೀತೆಂದು ನಾವು ತಿಳಿದಿದ್ದೆವು; ಆದರೆ ನಮ್ಮ ಬಿಡುಗಡೆಯಾಗುವದೊತ್ತಟ್ಟಿಗುಳಿದು, ನಮ್ಮನ್ನು ದಿಲ್ಲಿಗೆ ಕರೆದೊಯ್ದು ಶಹಾಜಾದಾನಿಗೆ ನಮ್ಮನ್ನು ಕಾಣಿಕೆ ಕೊಡಬೇಕೆಂದು ಅವರು ನಿಶ್ಚಯಿಸಿದರು.

ಚಂಪತರಾಯ —ಕಂಚುಕಿರಾಯ, ಮಗಳ ಮಾತುಗಳನ್ನು ಕೇಳುತ್ತಿರುವಿರಷ್ಟೇ?

ಕಂಚುಕಿರಾಯ – ಚಂಪತರಾಯ, ಅದರಲ್ಲಿ ಕೇಳದಂತಹದೇನಿರುವದು? ಇಂದ್ರನ ಅಮರಾವತಿಗೆ ಸಮಾನವಾದ ದಿಲ್ಲಿಯ ವೈಭವ–ವಿಲಾಸಗಳ ಅನುಭವವಿಲ್ಲದ ನೀವು ಹೀಗೆ ಮಾತಾಡುವದು ಆಶ್ಚರ್ಯವಲ್ಲ. ದಿಲ್ಲಿಯ ವಿಲಾಸೀ ಜನಾನಖಾನೆಯಲ್ಲಿ ತಮ್ಮ ಹೆಣ್ಣು ಮಕ್ಕಳನ್ನೂ, ಅಕ್ಕ ತಂಗಿಯರನ್ನೂ ಸೇರಿಸುವದು ಸಣ್ಣ–ಪುಟ್ಟ ಕೆಲಸವೆಂದು ನೀವು ತಿಳಿದಿರುವಿರೋ ಏನು? ಅದಕ್ಕೆ ಮಹತ್ಪುಣ್ಯವು ಬೇಕಾಗುತ್ತದೆ. ನಮ್ಮ ವಿಜಯೆಯು ಇಲ್ಲಿಗೆ ತಿರುಗಿ ಬರುವದಕ್ಕಿಂತ ದಿಲ್ಲಿಯ ಜನಾನಖಾನೆಯಲ್ಲಿ ಹೋಗಿ ಬಿದ್ದಿದ್ದರೆ ನನಗೆ ಬಹಳ ಆನಂದವಾಗುತ್ತಿತ್ತು!

ವಿಜಯೆ (ಬಿಕ್ಕಿಬಿಕ್ಕಿ ಅಳುತ್ತ) ಅಪ್ಪಾ, ಹೀಗೆ ಅಮಂಗಲ ಮಾತುಗಳನ್ನು ಏಕೆ ಆಡುತ್ತೀರಿ? ನಾನು ನಿಮಗೆ ಇಷ್ಟು ಭಾರವಾಗಿರುವೆನೇ? ಆ ಅಸುರರ ಜನಾನಖಾನೆಗೆ ಹೋಗುವದಕ್ಕಿಂತ ಸಾಯುವದು ನೆಟ್ಟಗಲ್ಲವೇ?

ಚಂಪತರಾಯ—ತಂಗೀ, ಇರಲಿ ಬಿಡು, ಅಳಬೇಡ; ನಿನ್ನನ್ನೇನು ಜನಾನಖಾನೆಗೆ ಕಳಿಸುವದಿಲ್ಲ; ಮುಂದೇನಾಯಿತು ಹೇಳು.

ವಿಜಯೆ —ಅಷ್ಟರಲ್ಲಿ ಅವರ ಮುಖ್ಯನು ಬಂದನು. ಆತನ ಹೆಸರು ನಮಗೆ ಗೊತ್ತಾಗಲಿಲ್ಲ, ನಮ್ಮನ್ನು ಮುತ್ತಿದವರು ತಮ್ಮ ವಿಚಾರವನ್ನು ತಮ್ಮ ಮುಖ್ಯನಿಗೆ ತಿಳಿಸಿದರು. ಅದಕ್ಕೆ ಆತನು—''ನಾವಾಗಿ ಇವರನ್ನು ದಿಲ್ಲಿಗೆ ಕರೆದೊಯ್ಯುವ ಕಾರಣವಿಲ್ಲ, ಈಗ ಹಿಂದೂ ರಾಜರು ತಮ್ಮ ಹೆಣ್ಣು ಮಕ್ಕಳನ್ನು ಜನಾನಖಾನೆಗೆ ಕಳಿಸಿ ಬಾದಶಾಹೀ ಪ್ರಸಾದವನ್ನು ಪಡೆಯಲಿಕ್ಕೂ, ತಮ್ಮ ಗಂಡು ಮಕ್ಕಳನ್ನು ದರ್ಬಾರದ ಕಂಚುಕಿಯ ಕೆಲಸಕ್ಕೆ ಕಳಿಸಿ ರಾಜ್ಯಭಾರ ವಹಿಸುವ ಅನುಭವ ಪಡೆಯಲಿಕ್ಕೂ ಮೇಲಾಡುತ್ತಿರುವರು; ಆದ್ದರಿಂದ ಇವರನ್ನು ಬಿಟ್ಟು ಬಿಡಿರಿ. ಸ್ವಲ್ಪದಿನಗಳಲ್ಲಿ ತಾವಾಗಿಯೇ ಇವರು ದಿಲ್ಲಿಯ ಹಾದಿಯನ್ನು ಹಿಡಿಯುವರು!'' ಎಂದು ಹೇಳಿದನು.

ಹೀರಾದೇವಿ — ಆ ಅಧಿಕಾರಿಯು ನುಡಿದ ಭವಿಷ್ಯವು ಸತ್ಯವಾದದ್ದು; ನಮ್ಮ ಯುವರಾಜ ವಿಮಲದೇವನು ಅಂತಹ ಯೋಗ್ಯತೆಯವನೇ ಇರುವನು. ದಿಲ್ಲಿಯ ದರ್ಬಾರ ದಲ್ಲಿಯ ಅತ್ಯಂತ ಶ್ರೇಷ್ಠ ಹುಜುರೆಯ ಯೋಗ್ಯತೆಯು ಆತನಲ್ಲಿರುವದು. ಸದ್ಯದ ಔರಂಗಜೇಬ ಬಾದಶಹನಿಗೂ ನಮಗೂ ಅಷ್ಟು ನೆಟ್ಟಗಿಲ್ಲ; ನೆಟ್ಟಗಿದ್ದರೆ ಯಾವಾಗೋ ನಮ್ಮ ವಿಮಲ ದೇವನು ಬಾದಶಹರ ಹುಜರೆ (ಕಂಚುಕಿ)ಯಾಗುತ್ತಲಿದ್ದನು. ಓರಛಾ ಸಂಸ್ಥಾನದ ಭಾವೀ ನೃಪತಿಯು ದಿಲ್ಲಿಯ ದರ್ಬಾರದ ಸೇವೆಯನ್ನು ಮಾಡಲೇ ಬೇಕು.

ಚಂಪತರಾಯ — (ಸಂತಾಪದಿಂದ) ಹೀರಾದೇವೀ, ನೋಡಿ ಮಾತಾಡು. ನೀನು ನಮ್ಮ ರುದ್ರಪ್ರತಾಪನ ಮನೆತನಕ್ಕೆ ಸೇರಿದವಳೆಂಬದನ್ನು ನೆನಪಿನಲ್ಲಿಡು. ನಿನ್ನ ಈ ಅಮಂಗಲ ಮಾತುಗಳನ್ನು ಕೇಳಿ ಶ್ರೀ ಭವಾನಿಯ ಈ ಶಿಲಾ ಪ್ರತಿಮೆಯೂ ಕಣ್ಣೀರು ಸುರಿಸಬಹುದು!

ಹೀರಾದೇವಿ—(ಚಂಪತರಾಯನ ಮಾತನ್ನು ದುರ್ಲಕ್ಷಿಸಿ) ವಿಜಯೇ, ಆ ಮುಖ್ಯ ಮನುಷ್ಯನು ನಿಮ್ಮನ್ನು ಬಿಟ್ಟಕೂಡಲೆ ನೀವು ಹೊರಟು ಬಂದುಬಿಟ್ಟರೇನು? ಆದರೆ ನಮ್ಮ ವಿಮಲದೇವನು ಎಲ್ಲಿರುವನು?

ವಿಜಯೆ — ಇಲ್ಲ ಕೂಡಲೇ ನಾವು ಹೊರಟು ಬರಲಿಲ್ಲ; ನಮ್ಮನ್ನು ಅವರು ಕೂಡಲೆ ಬಿಡಲೂ ಇಲ್ಲ. ಅವರು ತಮ್ಮ ತಮ್ಮೊಳಗೆ ಮಾತಾಡಹತ್ತಿದರು. ಅವರ ಆ ಮಾತುಗಳಿಂದ ಆ ದುಷ್ಟರು ವಿಂಧ್ಯವಾಸಿನಿಯ ಮೂರ್ತಿಯನ್ನು ಒಡೆದು ಕಿತ್ತಿ ಚಲ್ಲಿಬಿಡಬೇಕೆಂದು ಬಂದಿರುವಂತೆ ನನಗೆ ತೋರಿತು. ಆಗ ಭಯದಿಂದ ನನ್ನ ಹೃದಯವು ನಡುಗಹತ್ತಿತು. ಅಷ್ಟರಲ್ಲಿ ಆ ಮುಖ್ಯನು ನಮಗೆ—''ನೀವು ವಿಂಧ್ಯವಾಸಿನಿಯ ಗುಡಿಯನ್ನು ನಮಗೆ ತೋರಿಸುವಿರಾ?'' ಎಂದು ಕೇಳಿದನು. ಅದಕ್ಕೆ ನಾವು ಒಪ್ಪಿಕೊಂಡು, ಅವರನ್ನು ಗುಡಿಯಿರುವ ದಿಕ್ಕಿನ ವಿರುದ್ಧ ದಿಕ್ಕಿನಿಂದ ಕರೆದುಕೊಂಡು ನಡೆದೆವು. ದೇವಿಯ ಮಂದಿರವು ಅವರಿಗೆ ಸಿಗಬಾರದೆಂಬದು ನನ್ನ ಉದ್ದೇಶವಾಗಿತ್ತು, ನಾವು ಹೀಗೆ ಆ ದುಷ್ಟರನ್ನು ಕರೆದೊಯ್ಯುತ್ತಿರಲು, ಎದುರಿನಿಂದ ಯುವರಾಜ ಛತ್ರಸಾಲನೂ, ಯುವರಾಜ ದಲಪತರಾಯನೂ ಅಶ್ವಾರೂಢರಾಗಿ ಬಂದರು. ಅವರನ್ನು ನೋಡಿ ನಮಗೆ ಧೈರ್ಯ ಬಂದಿತು.

ಸಭಾಕರಣ — ನಿಮ್ಮ ಸಂಗಡ ಬರುವ ಯವನರು ಎಷ್ಟು ಜನರಿದ್ದರು?

ವಿಜಯೆ — ಮುಖ್ಯನನ್ನು ಹಿಡಿದು ಇಪ್ಪತ್ತು ಜನರಿದ್ದರು. ಅವರಲ್ಲಿ ಕೆಲವರ ಕೈಯೊಳಗೆ ಶಸ್ತ್ರಗಳ ಬದಲು ಗುದ್ದಲಿ – ಸಲಿಕೆ – ಹಾರಿಗಳು ಇದ್ದವು. ನಮ್ಮನ್ನು ನೋಡಿ ಛತ್ರಾಸಾಲನು ಯವನರ ಮುಖ್ಯನಿಗೆ —''ಇವರನ್ನೆತ್ತ ಕರಕೊಂಡು ಹೊರಟಿರಿ'' ಎಂದು ಕೇಳಿದನು. ಅದಕ್ಕೆ ಉಪಹಾಸದಿಂದ ನಗುವದಕ್ಕಿಂತ ಹೆಚ್ಚಿನ ಉತ್ತರವನ್ನೇನು ಆ ಯವನರ ಮುಖ್ಯನು ಕೊಡಲಿಲ್ಲ, ಆಗ ವಿಮಲದೇವನು ಸ್ವಲ್ಪದರಲ್ಲಿ ಎಲ್ಲ ಸಂಗತಿಯನ್ನು ಛತ್ರಸಾಲನಿಗೆ ಹೇಳಿದನು. ಕೂಡಲೆ ಛತ್ರಸಾಲನೂ, ದಲಪತರಾಯನೂ ಒರೆಗಳಿಂದ ತಮ್ಮ ಖಡ್ಗಗಳನ್ನು ಹಿರಿದರು. ಆಗ ಛತ್ರಸಾಲನು ಯವನರನ್ನು ಕುರಿತು —''ದೇವಿಯ ಮಂದಿರದ ಹಾದಿಯು ಭಕ್ತರಿಗೆ ಅತ್ಯಂತ ಸುಲಭವೂ, ಸುಖಕರವೂ ಆಗಿದ್ದರೂ, ನಿಮ್ಮಂಥ ದೇವಿಯ ಶತ್ರುಗಳಿಗೆ ಅದು ಅಷ್ಟೇ ದುರ್ಗಮವೂ, ದುಃಖದಾಯಕವೂ ಆಗಿರುವದು! ಯವನ ವೀರರೇ, ಇವರನ್ನು ಬಿಟ್ಟು ನೆಟ್ಟಗೆ ದಿಲ್ಲಿಯ ಹಾದಿಯನ್ನು ಹಿಡಿಯಿರಿ ನೋಡೋಣ'' ಎಂದು ನುಡಿದು ಯುದ್ಧಕ್ಕೆ ಸಿದ್ಧರಾಗಿ ನಿಂತರು.

ಪಹಾರಸಿಂಗ — ಏನು? ಇಬ್ಬರು ಪೋರರು ಇಪ್ಪತ್ತು ಜನ ವೀರರೊಡನೆ ಯುದ್ಧಕ್ಕೆ ನಿಂತರೆಯೇ? ಹುಡುಗತನವೆನ್ನುವದು ಇದಕ್ಕೇ. ಸಭಾಕರಣ, ನಿಮ್ಮ ದಲಪತನು ಛತ್ರಸಾಲನ ಸಂಗತಿಯಿಂದ ತೀರ ಕೆಡುತ್ತ ನಡೆದಿರುವನು. ಹುಡುಗರಿಗೆ ಅವರ ತಲೆತಿರುಕತನಕ್ಕಾಗಿ ತಕ್ಕ ಶಾಸನವಾಗಲೇಬೇಕು.

ಕಂಚುಕಿರಾಯ — ಅದರಲ್ಲಿ ಸಂಶಯವೇನು? ಅವಶ್ಯವಾಗಿ ಆಗತಕ್ಕದ್ದು. ಆ ಉದಾರ ಹೃದಯದ ಯವನ ವೀರರು ಹುಡುಗರೆಂದು ಕೈ ಕಾದುಬಿಟ್ಟಿದ್ದರೆ, ಆ ಹುಡುಗರು ಬಂದಬಳಿಕ ಅವರಿಗೆ ಚನ್ನಾಗಿ ಶಾಸನ ಮಾಡತಕ್ಕದ್ದು. ರಾಜ ಕರ್ತೃಗಳ ಜಾತಿಯವರ ಅಪಮಾನ ಮಾಡುವ ದೆಂದರೇನು? ಅವರ ಒಂದು ಮಂದಿರವನ್ನು ನಾಶಮಾಡಿದರೆ, ನಾವು ಮತ್ತೊಂದು ಮಂದಿರ ವನ್ನು ಕಟ್ಟಿಕೊಳ್ಳಬಹುದು. ನಮ್ಮಲ್ಲಿ ಕಲ್ಲು ಮಣ್ಣಿಗೇನು ಕೊರತೆಯೇ? ನಮ್ಮ ಸಾರ್ವಭೌಮರ ಧಾರ್ಮಿಕ ಭಾವನೆಗಳಿಗೆ ಬಾಧೆಯುಂಟುಮಾಡುವದು ಜಾಣತನವಲ್ಲ. ವಿಜಯೇ, ಆ ತುಂಟ ಹುಡುಗರು ಅಲ್ಲಿ ಏನು ಅನಾಚಾರ ಮಾಡಿದರು?

ವಿಜಯೆ — ಅಪ್ಪಾ, ಆ ಯುವರಾಜರೇನು ಅನಾಚಾರ ಮಾಡಲಿಲ್ಲ; ಇಪ್ಪತ್ತು ಜನ ಯವನರು ಮಾತ್ರ ಇಬ್ಬರೇ ಹುಡುಗರ ಮೇಲೆ ಶಸ್ತ್ರಹಿರಿದು ಒಮ್ಮೆಲೆ ದುಮುಕಿದರು! ಅಷ್ಟರಲ್ಲಿ ಛತ್ರಸಾಲನು ಶಿಳ್ಳುಹಾಕಲು, ಆತನೊಡನೆ ಬೇಟೆಗೆ ಬಂದಿದ್ದ ಎಂಟು ಹತ್ತೂಜನ ಭಿಲ್ಲರು ಕೂಡಲೆ ಶಸ್ತ್ರಪಾಣಿಗಳಾಗಿ ಛತ್ರಸಾಲನ ಬಳಿಗೆ ಬಂದರು. ಆಗಿನ ಭಯಂಕರ ಯುದ್ಧವನ್ನು ನೋಡಿ ನನ್ನ ಕಣ್ಣುಗಳು ಮುಚ್ಚಿದವು. ಕೆಲ ಹೊತ್ತಿನ ಮೇಲೆ ಧೈರ್ಯದಿಂದ ನಾನು ಕಣ್ತೆರೆದು ನೋಡಲು, ವಿಮಲದೇವನು ನಗುತ್ತ ನನ್ನ ಬಳಿಯಲ್ಲಿ ನಿಂತುಕೊಂಡಿದ್ದನು. ನಾಲ್ಕೂ ಕಡೆಯಲ್ಲಿ ರಕ್ತವು ಸಿಡಿದಿದ್ದು, ನಾಲ್ಕು ಜನ ಮುಸಲ್ಮಾನರು ಗಾಯಪಟ್ಟು ಒದರುತ್ತ ಬಿದ್ದಿದ್ದರು. ಒಬ್ಬಿಬ್ಬರು ಸತ್ತು ಹೋಗಿದ್ದರು. ಯವನರ ಮುಖ್ಯಸ್ಥನ ಸೊಕ್ಕು ಇಳಿದು ಅವನ ತಲೆ ತಗ್ಗಿಸಿ ನಿಂತುಕೊಂಡಿದ್ದನು, ಆಗ ಛತ್ರಸಾಲನು ನನ್ನನ್ನು ಕರೆದು—'' ವಿಜಯೇ, ಹೋಗು, ಬೇಗನೇ ಹೋಗು. ನಾನು ಈಗಲೇ ಈ ಮುಖ್ಯನ ಹೆಡಮುರಿಗೆ ಕಟ್ಟಿಕೊಂಡು ಬರುವೆವು. ಅಲ್ಲಿಯ ವರೆಗೆ ದೇವಿಯ ಪೂಜೆಯನ್ನು ಆರಂಭಿಸಬಾರದೆಂದು ಪ್ರಾಣನಾಥ ಪ್ರಭುಗಳನ್ನು ಪ್ರಾರ್ಥಿಸು'' ಎಂದು ಹೇಳಿ ಯುವರಾಜ ದಳಪತ ರಾಯನೊಡನೆ ಆ ಯವನ ಮುಖ್ಯನ ಹೆಡಮುರಿಗೆ ಕಟ್ಟತೊಡಗಿದನು. ನಾನು ಇತ್ತ ಓಡುತ್ತ ಬಂದೆನು.

ವಿಜಯೆಯು ತನ್ನ ಮಾತು ಮುಗಿಸುವದರೊಳಗೆ ದೇವಸ್ಥಾನದ ಸಿಂಹದ್ವಾರದ ಮುಂದೆ ದೇವಿಯ ಜಯಜಯಕಾರದ ಧ್ವನಿಯು ಉಂಟಾಯಿತು. ಪ್ರಾಣನಾಥ ಪ್ರಭುಗಳು ಇಲ್ಲಿಯ ವರೆಗೆ ಶಾಂತರೀತಿಯಿಂದ ವಿಜಯೆಯ ಮಾತುಗಳನ್ನು ಕೇಳುತ್ತ ಕುಳಿತುಕೊಂಡಿದ್ದರು; ಆದರೆ ತಮ್ಮ ಪ್ರಿಯ–ಶಿಷ್ಯ–ಛತ್ರಸಾಲನು ಬಂದದ್ದನ್ನು ತಿಳಿದು ಅವರು ಚಟ್ಟನೆ ಎದ್ದು ಮಹಾ ದ್ವಾರದ ಕಡೆಗೆ ಸಾಗಿದರು. ಆಗ ಛತ್ರಸಾಲನು ದಲಪತ–ವಿಮಲದೇವರ ಕೈ ಹಿಡಿದುಕೊಂಡು ಬರುತ್ತಿದ್ದನು. ಆ ಬಾಲವೀರನ ಮೋಹಕ ಮೂರ್ತಿಯನ್ನು ನೋಡಿ ಆ ತಪೋಧನನ ಕಂಠವು ಸದ್ಗದಿತವಾಗಿ ನೇತ್ರಗಳು ಪ್ರೇಮಾಶ್ರುಪೂರ್ಣವಾದವು. ಛತ್ರಸಾಲನಲ್ಲಿ ಸೂರ್ಯನ ಪ್ರತಾಪವೂ, ಚಂದ್ರನ ಶಾಂತಗುಣವೂ ಕೂಡಿಯೇ ಒಪ್ಪುತ್ತಿದ್ದುದರಿಂದ ಆತನನ್ನು ನೋಡುವವರ ನೇತ್ರಗಳು ಸಫಲವಾಗುತ್ತಿದ್ದವು. ಒಂದು ಮಗ್ಗಲಲ್ಲಿ ಪ್ರತಾಪಶಾಲಿಯಾದ ದಲಪತರಾಯನು ತನ್ನ ತೀವ್ರ ತೇಜದಿಂದ ಸೂರ್ಯನನ್ನು ಹೋಲುತ್ತಿದ್ದನು. ಮತ್ತೊಂದು ಮಗ್ಗಲಲ್ಲಿ ವಿಮಲದೇವನು ತನ್ನ ಶಾಂತಗುಣದಿಂದ ಚಂದ್ರನನ್ನು ಹೋಲುತ್ತಿದ್ದನು. ಹೀಗೆ

ಗಂಟಲಲ್ಲಿ ಅದು ಇಳಿಯದೆ, ತಂತ್ರಗಾರನಾದ ಅಕಬರನ ಕಾಲದಲ್ಲಿ ಕೂಡ ಅದು ಸ್ವತಂತ್ರ ವಾಗಿಯೇ ಇದ್ದಿತು! ಆದರೆ ಈಗೇನಿದೆ? ದುಷ್ಟ ಔರಂಗಜೇಬ ಬಾದಶಹನು ನಿಮ್ಮ ದೇಶವ ಸ್ವಾತಂತ್ರ್ಯಸಾರವನ್ನು ಹಿಂಡಿ ಹಿಪ್ಪೆಮಾಡಿಬಿಟ್ಟಿದ್ದಾನೆ. ಈಗ ನಿಮ್ಮಲ್ಲಿ ಶೂರರಿಲ್ಲವೆಂತಲ್ಲ ಪ್ರತಾಪಿಗಳಿಲ್ಲವೆಂತಲ್ಲ ರಾಜಕಾರಣ ಪಟುಗಳಿಲ್ಲವೆಂತಲೂ ಅಲ್ಲ; ಆದರೆ ನಿಮ್ಮಲ್ಲಿ ಒಕ್ಕಟ್ಟು ಒಂದು ಇಲ್ಲದ್ದರಿಂದ ನಿಮ್ಮಲ್ಲಿಯ ಆ ಎಲ್ಲ ಸದ್ಗುಣಗಳು ಮಣ್ಣುಗೂಡಿ ಹೋಗಿರುವವು. ಚಂಪತರಾಯನಂಥ ಒಬ್ಬಿಬ್ಬ ಅರಸರನ್ನು ಬಿಟ್ಟರೆ, ಉಳಿದವರೆಲ್ಲ ಯವನ ಸತ್ತೆಯನ್ನು ಹೆಚ್ಚಿಸಲಿಕ್ಕೂ, ನಿಮ್ಮ ಮಾತೃಭೂಮಿಯನ್ನು ಪಾರತಂತ್ರ್ಯದ ಕೆಸರಿನಲ್ಲಿ ಮುಣುಗಿಸಲಿಕ್ಕೂ ಯತ್ನಿಸುತ್ತಿರುವಿರಿ. ಸಭಾಕರಣ, ಪಹಾರಸಿಂಗ! ನನ್ನ ಮಾತುಗಳನ್ನು ನೀವು ಕೇಳುತ್ತಿರುವಿರಷ್ಟೇ? ಇನ್ನು ನೀವು ಯವನ ಪಾದ ಸೇವೆಯನ್ನು ಬಿಟ್ಟು ದೇಶಸೇವೆ ಮಾಡಲು ಟೊಂಕಕಟ್ಟಿರಿ. ಬುಂದೇಲ ಖಂಡದ ವೀರರದೊಂದು ಮಾಲೆ ಮಾಡಿ ಈ ಸ್ವಾತಂತ್ರ್ಯ ಪ್ರಿಯ ವಿಂಧ್ಯವಾಸಿನಿಗೆ ಅರ್ಪಿಸಿರಿ; ವಿಜಯೇ, ಬಾ, ಸದ್ಯಕ್ಕೆ ನಿನ್ನ ಮಾಲೆಯನ್ನು ದೇವಿಯ ಕೊರಳಲ್ಲಿ ಹಾಕಿ, ಮುಂದಿನವರ್ಷ ದೇಶಭಕ್ತ ರಾಜರದೊಂದು ಮಾಲೆಯುಂಟಾಗುವಂತೆ ಅನುಗ್ರಹಿಸೆಂದು ದೇವಿಯನ್ನು ಪ್ರಾರ್ಥಿಸು.

ಪ್ರಾಣನಾಥ ಪ್ರಭುವಿನ ಆಜ್ಞೆಯಂತೆ ವಿಜಯೆಯು ದೇವಿಯ ಕೊರಳಲ್ಲಿ ಮಾಲೆ ಹಾಕುವದಕ್ಕಾಗಿ ಮುಂದಾದಳು; ಆದರೆ ವಿಮಲದೇವನೂ ತಾನೂ ಕೂಡಿ ಮಾಡಿದ ಮಾಲೆಯನ್ನು ತಾನೊಬ್ಬಳೇ ದೇವಿಯ ಕೊರಳಲ್ಲಿ ಹಾಕಲಿಕ್ಕೆ ಆಕೆಯ ಸಂಕೋಚವಾಯಿತು. ಆಕೆಯು ವಿಮಲದೇವನ ಕಡೆಗೆ ನೋಡಿದಳು. ಕೂಡಲೇ ವಿಮಲದೇವನೂ ಉತ್ಸಾಹದಿಂದ ಮಾಲೆಯನ್ನು ದೇವಿಯ ಕೊರಳಲ್ಲಿ ಹಾಕುವದಕ್ಕಾಗಿ ವಿಜಯೆಗೆ ಸಹಾಯಮಾಡತೊಡಗಿದನು. ಇಬ್ಬರೂ ದೇವಿಯ ಕೊರಳಲ್ಲಿ ಮಾಲೆಹಾಕಿ, ಮಾಲೆಯು ದೇವಿಯ ಕೊರಳಿಗೆ ಸರಿಯಾಗಿ ಕುಳಿತಿತೆಂದು ಮನಗಂಡರು. ಗರ್ಭಾಗಾರದಲ್ಲಿರುವವರಿಗೆಲ್ಲರಿಗೂ ಹಾಗೆಯೇ ತೋರಿತು. ಆದರೆ ವಿಜಯಾ– ವಿಮಲದೇವರು ಕೈಬಿಟ್ಟ ಕೂಡಲೇ ದೇವಿಯ ಕೊರಳೊಳಗಿನ ಆ ಮಾಲೆಯು ಜಾರುತ್ತ ಜಾರುತ್ತ ಅದೇ ಕಾಲಕ್ಕೆ ದೇವಿಯ ಚರಣಕ್ಕೆ ತಲೆಬಾಗಿ ನಮಸ್ಕರಿಸಿ ಏಳುತ್ತಿರುವ ಛತ್ರಸಾಲನ ಕೊರಳಿಗೆ ಅಕಸ್ಮಾತ್ತಾಗಿ ಬಿದ್ದಿತು! ಇದನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ಛತ್ರಸಾಲನು ಗಾಬರಿಯಾಗಿ ತನ್ನ ಕೊರಳೊಳಗಿನ ಮಾಲೆಯನ್ನು ತೆಗೆಯುತ್ತಿರಲು, ಪ್ರಾಣನಾಥ ಪ್ರಭುಗಳು —''ಹಾ! ಬಾಲವೀರಾ, ಮಾಲೆಯನ್ನು ತೆಗೆಯ ಬೇಡ; ಇಂದಿನ ನಿನ್ನ ಪ್ರತಾಪದ ಸೇವೆಗೆ ಮೆಚ್ಚಿ ದೇವಿಯು ನಿನಗೆ ಅದನ್ನು ಪ್ರಸಾದವಾಗಿ ಕೊಟ್ಟಿದ್ದಾಳೆ.'' ಎಂದು ಹೇಳಲು, ಛತ್ರಸಾಲನು ಭಕ್ತಿಯಿಂದ ಮಾಲೆಯನ್ನು ನಮಸ್ಕರಿಸಿದನು. ವಿಜಯೆಯು ತಾನು ಮಾಡಿದ ಮಾಲೆಯು ಛತ್ರಸಾಲನ ಕೊರಳಿಗೆ ಬಿದ್ದದ್ದಕ್ಕಾಗಿ ನಾಚಿ ತಲೆತಗ್ಗಿಸಿ, ವಿಮಲದೇವನನ್ನು ನೋಡಲು ಆತನ ಗಲ್ಲಗಳೂ ಲಜ್ಜೆಯಿಂದ ಕೆಂಪಾಗಿದ್ದವು.

# ತಂದೆ ಮಕ್ಕಳ ವಿಯೋಗ!

ದೇವಿಯ ವಾರ್ಷಿಕೋತ್ಸವದ ದಿವಸ ಮಧ್ಯರಾತ್ರಿಯು. ಹಿಟ್ಟು ಚೆಲ್ಲಿದ ಹಾಗೆ ಬೆಳದಿಂಗಳು ಬಿದ್ದಿದೆ. ನಾಲ್ಕೂ ಕಡೆಗೆ ಸ್ತಬ್ಧತೆಯ ಸಾಮ್ರಾಜ್ಯವು ಪಸರಿಸಿ ಹೋಗಿದೆ. ಹಗಲಿನ ವ್ಯವಸಾಯದಿಂದ ದಣಿದು ಹೋಗಿದ್ದ ಪ್ರಾಣಿಮಾತ್ರಗಳು ನಿದ್ರಾಸುಖದಲ್ಲಿ ವಿಶ್ರಾಂತಿಯನ್ನು ಹೊಂದುತ್ತಲಿವೆ. ತಮಗಾದರೂ ನಿದ್ರೆ ಬೇಡವೇ, ಎಂಬಂತೆ ವೃಕ್ಷಗಳು ಕೂಡ ಅಲ್ಲಾಡದೆ ಸ್ತಬ್ಧವಾಗಿ ನಿಂತಿವೆ. ಇಂಥ ಯಾವ ಜೊಂಜಾಟವೂ ಇಲ್ಲದ ಸಮಯದಲ್ಲಿ ಸಭಾಕರಣನು ತನ್ನ ರಾಹುಟಿಯಿಂದ ಹೊರಬಿದ್ದು ಬಂದು ಆ ಸ್ವಚ್ಛ ಬೆಳದಿಂಗಳಲ್ಲಿ ಮುಣುಗಿಹೋಗಿದ್ದ ವಿಂಧ್ಯಾಚಲನನ್ನೂ, ಆತನನ್ನು ಮುಚ್ಚಿ ಮುಸುಕುಹಾಕಿರುವ ಅರಣ್ಯ ಪ್ರದೇಶಗಳನ್ನೂ, ಮೇಲೆ ಅಮರ್ಯಾದವಾಗಿ ವ್ಯಾಪಿಸಿ, ನಕ್ಷತ್ರಗಳ ಮಂದಪ್ರಭೆಯಿಂದ ಶೋಭಿಸುವ ಆಕಾಶಮಂಡಲ ವನ್ನೂ ನೋಡುತ್ತ ನಿಂತುಕೊಂಡನು. ಅಷ್ಟು ರಾತ್ರಿಯಾದರೂ ಆತನ ಕಣ್ಣಿಗೆ ಕಣ್ಣು ಹತ್ತಿದ್ದಿಲ್ಲ. ಪ್ರಾಣನಾಥ ಪ್ರಭುಗಳು ತನ್ನನ್ನು ಕುರಿತು, ತಿರಸ್ಕರಿಸಿ ಆಡಿದ ಮಾತುಗಳು ಆತನ ಮನಸ್ಸಿಗೆ ಹತ್ತಿ ತನ್ನ ನೀಚತನದ ನಡತೆಗಾಗಿ ಆತನಿಗೆ ಬಹಳ ಪಶ್ಚಾತ್ತಾಪವಾಗಿತ್ತು. ತಾನು, ಚಂಪತರಾಯನ ಸ್ವದೇಶೋದ್ಧಾರದ ಕಾರ್ಯಕ್ಕೆ ವಿಘ್ನಮಾಡುವೆನೆಂತಲೂ, ಆತನನ್ನು ಯುದ್ಧದಲ್ಲಿ ಕೊಲ್ಲುವೆನೆಂತಲೂ ಹಿರಾದೇವಿಯ ಮುಂದೆ ಪ್ರತಿಜ್ಞೆಮಾಡಿದ ನೀಚತನವು ಆತನ ಮನಸ್ಸನ್ನು ಒಂದೇಸವನೆ ಕೊರೆಯುತ್ತಿತ್ತು. ಆತನು ಮನಸ್ಸಿನಲ್ಲಿ—"ನಾನೂ ಚಂಪತರಾಯನೂ ಚಿಕ್ಕಂದಿನಲ್ಲಿ ಎಂತಹ ಗೆಳೆಯರಾಗಿದ್ದೆವು! ಆಗ ನಾನಾದರೂ ಚಂಪತರಾಯನಂತೆಯೇ ಸ್ವದೇಶೋದ್ಧಾರದ ವಿಚಾರದಿಂದ ಎಂತಹ ಪವಿತ್ರನೂ, ಗೌರವಶಾಲಿಯೂ ಆಗಿದ್ದೆನು! ಆದರೆ ಈಗಿನ ನನ್ನ ಸ್ವದೇಶದ್ರೋಹದ ಹೇಸಿ ಕೆಲಸವನ್ನು ಮನಸ್ಸಿನಲ್ಲಿ ತಂದರೆ, ನಾನು ಭೂಮಿಯಲ್ಲಿ ಬಾಳುವದು ವ್ಯರ್ಥವೆನ್ನುವಹಾಗೆ ಆಗುತ್ತದೆ. ಇಂದಿನ ನಮ್ಮ ದಳಿಪತನ ಶ್ರೇಯಸ್ಕರ ಪ್ರತಾಪವನ್ನು ನೋಡಿ ನಾನು ನಾಚಬಾರದೇನು? ಆ ಸತ್ಪುತ್ರನು ಪ್ರತಾಪವಂತನಾದ ಸದ್ಗುಣಿ ಛತ್ರಸಾಲನ ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ಸಾಗಿ, ಆತನ ಕ್ಷಾತ್ರವೃತ್ತಿಯಲ್ಲಿ ತನ್ನ ಕ್ಷಾತ್ರವೃತ್ತಿ ಯನ್ನು ಬೆರಿಸಿ ಅಸಾಧಾರಣ ಸಮರ ಸಾಹಸವನ್ನು ಜಗತ್ತಿಗೆ ತೋರಿಸಿದ್ದನ್ನು ನೋಡಿ, ಒಂದಾನೊಂದು ಕಾಲದಲ್ಲಿ ಚಂಪತರಾಯನ ಮಿತ್ರನೆನಿಸಿಕೊಳ್ಳುತ್ತಿದ್ದ ನಾನು ಈಗ ಬುದ್ಧಿ ಕಲಿಯಬಾರದೇನು? ಹಾಯ್, ಹಾಯ್! ಹೀರಾದೇವೀ, ಈ ಸಭಾಕರಣನನ್ನು ಪ್ರತಿಜ್ಞೆಯ ಪಾಶದಿಂದ ಬಿಗಿದು, ಯಾವ ಸತ್ಕಾರ್ಯ ಮಾಡಲಿಕ್ಕೂ ಬಾರದಂತೆ ಅವನನ್ನು ಪರಾಧೀನ ನನ್ನಾಗಿ ಮಾಡಿಬಿಟ್ಟೆಯಾ?

ಹೀಗೆ ನುಡಿದು ಸಭಾಕರಣನು ನಿಟ್ಟುಸಿರು ಬಿಟ್ಟು ಪಶ್ಚಾತ್ತಾಪದಿಂದ. ಆಕಾಶದ ಕಡೆಗೆ ನೋಡತೊಡಗಿರುವಾಗ ಲಲಿತೆಯ ಮನೋಹರ ಮೂರ್ತಿಯು ಆತನ ಕಣ್ಣಿಗೆ ಕಟ್ಟಿತು. ಲಲಿತೆಯು ಸಭಾಕರಣನ ತಂಗಿಯು. ಆಕೆಯು ಚಲುವಿಕೆಯಲ್ಲಿ ಸರಿಯಿಲ್ಲದವಳಾಗಿರುವಂತೆ, ಸದ್ಗುಣಗಳಲ್ಲಿಯೂ ಸರಿಯಿಲ್ಲದವಳಾಗಿದ್ದಳು. ಅಣ್ಣನ ಮೇಲೆ ಆಕೆಯ ಪ್ರೇಮ ಬಹಳ;

ಸ್ವದೇಶೋದ್ಧಾರದಲ್ಲಿ ಆಕೆಯ ಆಸಕ್ತಿ ಹೆಚ್ಚು; ಆಕೆಯು ಹದಿನಾರು ವರ್ಷದ ವಯಸ್ಸಿನವಳಾಗಿದ್ದರೂ ಗಂಡಸರು ಆಕೆಯ ಕಣ್ಣಿಗೆ ಬಿದ್ದರೆ, ಅವರು ಎಂತಹ ಚಲುವರಿರಲಿ, ಎಂತಹ ತರುಣರಿರಲಿ, ಎಂತಹ ಪ್ರತಾಪಿಗಳಿರಲಿ, ಎಂತಹ ವೈಭವಶಾಲಿಗಳಿರಲಿ ಅವರನ್ನು ಆಕೆಯು ಬಂಧು ಭಾವದಿಂದ ನೋಡುವಳಲ್ಲದೆ, ಆಕೆಯ ಮನಸ್ಸಿನಲ್ಲಿ ಯಾವ ವಿಕಾರದ ಲೇಶವೂ ಹುಟ್ಟುತ್ತಿದ್ದಿಲ್ಲ. ಇದನ್ನೆಲ್ಲ ಮನಸ್ಸಿನಲ್ಲಿ ತಂದು ಸಭಾಕರಣನು ತನ್ನ ತಂಗಿಯ ಶೀಲವನ್ನು ಕುರಿತು ಈಗ ವಿಚಾರಿಸತೊಡಗಿದ್ದನು. ಆತನ ಘೋರ ಪ್ರತಿಜ್ಞೆಗೆ ಈ ತಂಗಿ ಲಲಿತೆಯೇ ಕಾರಣಳಾಗಿದ್ದಳು. ಆತನು ಮನಸ್ಸಿನಲ್ಲಿ—'' ಇಂತಹ ಸದ್ಗುಣಮಂಡಿತ ಲಲಿತೆಯು ಅಕಸ್ಮಾತ್ ಎಲ್ಲಿಯೋ ಹೋಗಿಬಿಡಲು, ಅದರ ಕಾರಣವನ್ನು ಹೀರಾದೇವಿಯು ಸತ್ಯವೆಂದು ನನ್ನ ಮುಂದೆ ಹೇಳಿದಳಲ್ಲ, ಅದು ಸತ್ಯವಾಗಿರಬಹುದೇ? ನನ್ನ ಆ ತಂಗಿಯು ಹೋಗಿ ಈಗ ಹದಿನಾರು ವರ್ಷಗಳಾಗಿದ್ದರೂ ಆಕೆಯು ಈವರೆಗೆ ನನ್ನ ಕಣ್ಣಿಗೆ ಬೀಳದಿರುವದರಿಂದಲೂ, ಆಕೆಯು ಇಂತಹಕಡೆಯಲ್ಲಿರುವಳೆಂಬದರ ಗಂಧವೂ ನನಗೆ ಹತ್ತದಿರುವದರಿಂದಲೂ ಹೀರಾದೇವಿಯು ಹೇಳಿದಂತೆ ಆಕೆಯು ನದಿಯಲ್ಲಿ ಹಾರಿ ಯಾಕೆ ಜೀವಕೊಟ್ಟಿರಬಾರದು? ಆಕೆಯು ಹಾಗೆ ಆತ್ಮಹತ್ಯ ಮಾಡಿಕೊಳ್ಳಲಿಕ್ಕೆ ಚಂಪತರಾಯನು ಆಕೆಯ ಕೌಮಾರ್ಯವನ್ನು ಕೆಡಿಸಿದ್ದೇ ಕಾರಣವೆಂದು ಹೀರಾದೇವಿಯು ಹೇಳಿದ್ದು ಸತ್ಯವು ಯಾಕಾಗಿರಬಾರದು? ನನ್ನ ತಂಗಿಯ ಸೌಂದರ್ಯ–ಸದ್ಗುಣಗಳು ಚಂಪತರಾಯನಂತಹ ಸದ್ಗುಣಿಯನ್ನೂ ಮೋಹಗೊಳಿಸುವಂತಹ ವಿದ್ದವೆಂಬದರಲ್ಲಿ ಸಂಶಯವಿಲ್ಲ; ಆದರೆ ಚಂಪತರಾಯನು ಇಷ್ಟು ನೀಚನೇ? ತನ್ನ ಮಿತ್ರ ಸಭಾಕರಣನ ತಂಗಿಯ ಮೇಲೆ ಬಲಾತ್ಕಾರ ಮಾಡುವಂತಹ ಪಾಪಿಹೃದಯದವನೇ? ನಾನು ಚಿಕ್ಕಂದಿನಿಂದ ಆತನ ಸದ್ಗುಣಗಳನ್ನು ನೋಡಿಲ್ಲವೇ? ಅಸಂಭವವು, ಈ ಮಾತು ತೀರ ಅಸಂಭವವು! ನಾನು ಹೀರಾದೇವಿಯ ಮಾತನ್ನು ನಂಬಿ, ವಿಕಾರವಶನಾಗಿ ವ್ಯರ್ಥ ಘೋರ ಪ್ರತಿಜ್ಞೆಮಾಡಿ ಕೆಟ್ಟೆನು; ಆದರೆ ಆ ಮಾತು ಸುಳ್ಳೆಂದು ನಂಬಿಗೆಯಾಗುವವರೆಗೆ ನನಗೆ ಪ್ರತಿಜ್ಞಾಭಂಗ ಮಾಡಲಿಕ್ಕೆ ಮಾರ್ಗವೆಲ್ಲಿದೆ? ಹೀರಾದೇವಿಯ ಮಾತಾದರೂ ಸುಳ್ಳೆಂದು ನಾನು ಯಾವ ಆಧಾರದಿಂದ ತಿಳಿದುಕೊಳ್ಳಬೇಕು?''

ಈ ಮೇರೆಗೆ ಆಲೋಚಿಸುವಾಗ ಸಭಾಕರಣನ ಅಂತಃಕರಣವು ಅತ್ಯಂತ ವ್ಯಥಿತವಾಯಿತು. ಆತನು ಮತ್ತೆ ಮನಸ್ಸಿನಲ್ಲಿ—''ನಾನು ಏನು ಅವಿಚಾರ ಮಾಡಿದೆನಲ್ಲ! ಇಂತಹ ಸಮರ ಧೀರನು ನಾನು ನನ್ನ ಈ ಅವಿಚಾರಮೂಲಕ ಇಂದು ಬೆಳಗಿನಲ್ಲಿಯ ದೇವಿಯ ಪೂಜೆಗಾಗಿ ದೇವಿಯ ಗುಡಿಗೆ ಹೋದಾಗ ಚಂಪತರಾಯನ ಮುಂದೆ ಹೇಡಿಯಂತೆ ತೇಜೋಹೀನನಾಗಿ ಕಣ್ಣೀರ ಎರಡು ಹನಿಗಳನ್ನು ಕೆಡಿವಿದೆನಲ್ಲ! ಮಹಾತ್ಮರಾದ ಪ್ರಾಣನಾಥ ಪ್ರಭುಗಳು ತ್ರಿಕಾಲಜ್ಞಾನಿಗಳಾಗಿರಲು, ನನ್ನನ್ನು ಹಾಗೆ ತಿರಸ್ಕರಿಸಿ ಮಾತಾಡಿದ್ದರಮೇಲಿಂದ ನನ್ನ ಪ್ರತಿಜ್ಞೆಯ ಕಾರಣವು ಸುಳ್ಳು ಎಂದು ನಾನು ಯಾಕೆ ಭಾವಿಸಬಾರದು? ನನ್ನ ಪ್ರತಿಜ್ಞೆಯ ಕಾರಣವು ನಿಜವಾಗಿದ್ದರೆ, ಆ ನಿಸ್ಪ್ರಹಿ ಬ್ರಾಹ್ಮಣ ಶ್ರೇಷ್ಠರು ಚಂಪತರಾಯನ ಅಭಿನಂದನವನ್ನು ಮಾಡುತ್ತಿದ್ದಿಲ್ಲ. ಸುಳ್ಳು, ಪರಿಶುದ್ಧ ಹೃದಯದ ಚಂಪತರಾಯನ ಮೇಲೆ ಹೀರಾದೇವಿಯು ಹೊರಿಸಿದ ಕೆಟ್ಟ

ಅಪವಾದವು ನಿಶ್ಚಯವಾಗಿ ಸುಳ್ಳು; ಆದರೆ ಈಗ ನಾನೇನು ಮಾಡಬೇಕು? ನನ್ನ ತಿಳುವಳಿಕೆಯು ತಪ್ಪಿನದೆಂಬದರ ಸಿದ್ಧತೆಗಾಗಿ ನನಗೆ ಸಾಕ್ಷಿಗಳು ಹೇಗೆ ದೊರೆಯಬೇಕು? ಹೀರಾದೇವಿಯು ಅತ್ಯಂತ ನೀಚವೃತ್ತಿಯವಳೆಂದು ಹೆಜ್ಜೆಹೆಜ್ಜೆಗೆ ಈಗ ನನ್ನ ಅನುಭವಕ್ಕೆ ಬರುತ್ತಿದ್ದರೂ, ಆಕೆಯು ಚಂಪತರಾಯನ ಮೇಲೆ ಹೊರಿಸಿದ ಅಪವಾದವು ಸುಳ್ಳೆಂದು ನಾನು ಹೇಗೆ ತಿಳಿಯಬೇಕು? ಅದಕ್ಕೆ ಪ್ರತ್ಯಕ್ಷ ಸಾಕ್ಷಿಬೇಕಲ್ಲವೇ? ನನ್ನ ತಂಗಿ ಲಲಿತೆಯೇ ಬಂದು ಹೀರಾದೇವಿಯ ಸಮಕ್ಷ ಚಂಪತರಾಯನ ಮೇಲಿನ ಆರೋಪವು ಸುಳ್ಳು ಎಂದು ಹೇಳುವವರೆಗೆ ನಾನು ಪ್ರತಿಜ್ಞೆಯನ್ನು ಭಂಗಗೊಳಿಸಲಾರೆನು; ಆದರೆ ನನ್ನ ಲಲಿತೆಯು ಈಗ ಎಲ್ಲಿರುವಳು? ಈಗಲೇ ಹೋಗಿ ಆ ನದಿಯ ಮಡುವನ್ನು ದುಮುಕಿ ಆಕೆಯನ್ನು ಹುಡುಕಿಕೊಂಡು ಬರಲಾ! ಹಾಯ್ ಸಭಾಕರಣ, ನೀನು ಎಂತಹ ಇರುಕಿನಲ್ಲಿ ಸಿಕ್ಕೆಯಲ್ಲ! ನೀನು ಪ್ರತಿಜ್ಞೆಯ ಪಾಶಕ್ಕೆ ಒಳಗಾಗಿ ಹೀಗೆಯೇ ದೇಶಬಾಂಧವರ ರಕ್ತದಿಂದ ನಿನ್ನ ಖಡ್ಗವನ್ನು ಕಲಂಕಿಸಿಕೊಳ್ಳಲಿಕ್ಕೂ, ಚಂಪತರಾಯನಂಥ ಸ್ವಾತಂತ್ರ್ಯಪ್ರಿಯ ರಾಜನ ಶಿರಸ್ಸನ್ನು ಸಮರಭೂಮಿಯಲ್ಲಿ ಇಳಿಸಲಿಕ್ಕೂ ಸಿದ್ಧನಾಗಿರತಕ್ಕವನೇನು? ಹಾಗಿರದೆ ಮಾಡಬೇಕೇನು? ಅದು ಸಭಾಕರಣನ ಪ್ರತಿಜ್ಞೆಯು! ಅದು ಎಂದೂ ಅಸತ್ಯವಾಗದು! ಪ್ರತಿಜ್ಞೆಯ ಅಗ್ನಿಯಲ್ಲಿ ಎಲ್ಲವನ್ನೂ ಆಹುತಿಯಾಗಿ ಕೊಡಲು ಅಚ್ಚ ರಜಪೂತ ರಕ್ತದ ಸಭಾಕರಣನು ಈಗ ಸಿದ್ಧನಾಗಿರುವನು!''

ಹೀಗೆ ನುಡಿಯುತ್ತ ಸಭಾಕರಣನು ತ್ವೇಷದಿಂದ ಸುತ್ತುಮುತ್ತು ನೋಡುತ್ತಿರಲು, ದೂರ ಯಾವಳೋ ಒಬ್ಬ ಸ್ತ್ರೀಯು ಬರುತ್ತಿರುವದು ಆತನ ಕಣ್ಣಿಗೆ ಬಿದ್ದಿತು. ಆತನು ಆಶ್ಚರ್ಯದಿಂದ—''ಇಷ್ಟು ರಾತ್ರಿಯಲ್ಲಿ ಸ್ತ್ರೀಯು ನನ್ನ ರಾಹುಟಿಯ ಕಡೆಗೆ ಬರುವದೆಂದರೇನು? ಸಭಾಕರಣನ ಸದ್ಗುಣಗಳ ವರ್ಚಸ್ಸು ಅಷ್ಟು ಹೀನತನದ್ದೇ? ಅಥವಾ ನನ್ನ ತಂಗಿ ಲಲಿತೆಯೇ ನನ್ನ ಸಂಶಯ ನಿವಾರಣ ಮಾಡಿ ನನ್ನನ್ನು ಪ್ರತಿಜ್ಞಾಪಾಶದಿಂದ ಮುಕ್ತ ಮಾಡಲಿಕ್ಕೆ ಬರುತ್ತಿರಬಹುದೋ? ಆದರೆ ಹೀರಾದೇವಿಯು ಈಗ ಎಲ್ಲಿರುವಳು? ತನ್ನ ರಾಹುಟಿಯಲ್ಲಿ ಸ್ವಸ್ಥ ನಿದ್ರೆಮಾಡುತ್ತಿರುವ ಹೀರಾದೇವಿಯನ್ನು ಈಗ ಎಬ್ಬಿಸಿಕೊಂಡು ಬರುವವರಾರು?' ಎಂದು ಏನೇನೋ ಕಲ್ಪಿಸುತ್ತಿರಲು, ''ಸಭಾಕರಣ, ಇಷ್ಟು ರಾತ್ರಿಯಲ್ಲಿ ಯಾವ ವಿಚಾರ ನಡೆದದೆ?'' ಎಂಬ ಶಬ್ದಗಳು ಸ್ಪಷ್ಟವಾಗಿ ಆತನ ಕಿವಿಗೆ ಬೀಳುತ್ತಿರಲು, ಪ್ರತ್ಯಕ್ಷ ಹೀರಾದೇವಿಯೇ ಆತನ ಮುಂದೆ ಬಂದು ನಿಂತುಕೊಂಡಳು! ಆಕೆಯನ್ನು ನೋಡಿ ಸಭಾಕರಣನ ಮನಸ್ಸು ಹೇಸಿತು. ಈ ಹೆಣ್ಣು ಮಗಳು ಇಷ್ಟು ರಾತ್ರಿಯಲ್ಲಿ ಒಬ್ಬಳೇ ಬರುವಂತಹ ಕೆಲಸವೇನೆಂದು ಆತನು ಮನಸ್ಸಿನಲ್ಲಿ ಆಕೆಯನ್ನು ತಿರಸ್ಕರಿಸಿದನು. ಅಷ್ಟರಲ್ಲಿ ಹೀರಾದೇವಿಯು ಸಭಾಕರಣನ ತೀರ ಹತ್ತರಕ್ಕೆ ಬಂದು ಮೊದಲಿನಂತೆಯೇ—''ಸಭಾಕರಣ, ಇಷ್ಟು ರಾತ್ರಿಯಲ್ಲಿ ಯಾವ ವಿಚಾರವು ನಡೆದದೆ?'' ಎಂದು ಮತ್ತೆ ಪ್ರಶ್ನಮಾಡಿದಳು. ಅದಕ್ಕೆ ಸಭಾಕರಣನು—

ಸಭಾಕರಣ—ಹೀರಾದೇವಿ, ಹಗಲೆಲ್ಲ ಪ್ರತಿಜ್ಞಾವಶವಾಗಿ ಮಾಡಬಾರದ ನೀಚ ಕೆಲಸಗಳನ್ನು ಮಾಡುತ್ತಿದ್ದ ಸಭಾಕರಣನು, ಈ ಮಧ್ಯರಾತ್ರಿಯಲ್ಲಿ ಪಶ್ಚಾತ್ತಾಪದಿಂದ ತನ್ನ ಹೃದಯವನ್ನು ಶುದ್ಧಮಾಡಿಕೊಳ್ಳುತ್ತಿರುವಾಗಲೂ ನಿನ್ನ ವಿಘ್ನವೇ? ಇಷ್ಟು ರಾತ್ರಿಯಲ್ಲಿ ನೀನು ಇಲ್ಲಿಗೆ ಬಂದ ಕಾರಣವೇನು?

ಹೀರಾದೇವಿ—ವೀರ ಕ್ಷತ್ರಿಯನಾದ ಸತ್ಯವಾದಿ ಸಭಾಕರಣನ ಪ್ರತಿಜ್ಞೆಯು ಎಷ್ಟರ ಮಟ್ಟಿಗೆ ದೃಢವಾಗಿರುತ್ತದೆಂಬದನ್ನು ನೋಡಲಿಕ್ಕೆ!

ಸಭಾಕರಣ — ಏನು? ಸಭಾಕರಣನ ಪ್ರತಿಜ್ಞೆಯಲ್ಲಿಯೂ ನಿನ್ನ ಅವಿಶ್ವಾಸವೇ? ಹೀರಾದೇವಿಯು ನೀನು ಭ್ರಮಿಷ್ಠಳಾಗಿರುವಂತೆ ತೋರುತ್ತದೆ. ನೀನಲ್ಲದೆ ಮತ್ತೆ ಯಾರಾದರೂ ಈ ಅಮಂಗಳ ಮಾತು ಆಡಿದ್ದರೆ, ಸಭಾಕರಣನ ಖಡ್ಗವು ಅವರ ನಾಲಿಗೆಯನ್ನು ತುಂಡರಿಸದೇ ಇರುತ್ತಿದ್ದಿಲ್ಲ.

ಸಭಾಕರಣನ ಈ ಮಾತುಗಳನ್ನು ಕೇಳಿ ಹೀರಾದೇವಿಯು ಸ್ವಲ್ಪ ಬೆದರಿದಳು. ಸಭಾಕರಣನು ಅಂತಹ ಸತ್ಯಪ್ರತಿಜ್ಞನೂ, ಸಂತಾಪಿಯೂ ಎಂಬದನ್ನು ಆಕೆಯು ಅರಿತಿದ್ದಳು; ಆದ್ದರಿಂದ ಸಭಾಕರಣನನ್ನು ಶಾಂತಗೊಳಿಸುವದಕ್ಕಾಗಿ ಆ ಸಾಹಸಿಯಾದ ಸ್ತ್ರೀಯು ಸೌಮ್ಯಸ್ವರದಿಂದ –

ಹೀರಾದೇವಿ—ಸಭಾಕರಣ, ಶಾಂತನಾಗು, ನೀನು ಅಂತಹ ಸತ್ಯಪ್ರತಿಜ್ಞನೆಂಬದನ್ನು ನಾನು ಬಲ್ಲೆನು; ಆದರೆ ಇಂದಿನ ಬೆಳಗಿನ ದೇವಿಯ ಪೂಜೆಯ ಕಾಲಕ್ಕೆ ನಿನ್ನ ಮಗನಾದ ಯುವರಾಜ ದಳಪತರಾಯನು ಯವನರ ಶಾಸನ ಮಾಡಿ ಬಂದಾಗ ನೀನು ಒಂದು ಮಾತಿನಿಂದಲೂ ಆತನನ್ನು ತಿರಸ್ಕರಿಸದಿರುವದನ್ನು ನೋಡಿ ನನಗೆ ಆಶ್ಚರ್ಯವಾಯಿತು! ಇದಲ್ಲದೆ, ಪ್ರಾಣನಾಥ ಪ್ರಭುಗಳು ನಿನ್ನನ್ನು ಎಚ್ಚರಗೊಳಿಸಿದಾಗ ನೀನು ಲಜ್ಜೆಯಿಂದ ತಲೆಬಾಗಿಸಲು ನಿನ್ನ ಮುಖದಲ್ಲುಂಟಾದ ಪಶ್ಚಾತ್ತಾಪದ ಚಿನ್ಹವು ನನ್ನ ಮನಸ್ಸನ್ನು ಚಂಚಲವಾಗಮಾಡಿದೆ; ಆದ್ದರಿಂದ ಸತ್ಯ ಪ್ರತಿಜ್ಞನಾದ ನೀನು ಎಲ್ಲಿ ಪ್ರತಿಜ್ಞಾಭಂಗ ದೋಷಕ್ಕೆ ಗುರಿಯಾಗುವಿಯೋ ಎಂದು ಶಂಕಿಸಿ, ನೀನು ಹಾಗೆ ಮಾಡಿದ್ದರ ಕಾರಣವನ್ನು ವಿಚಾರಿಸುವದಕ್ಕಾಗಿ ಇಷ್ಟು ಅಪರಾತ್ರಿಯಲ್ಲಿ ನಿನ್ನ ಬಳಿಗೆ ನಾನು ಬಂದಿರುವೆನು! ಏನು ಮಾಡಲಿ? ಸಭಾಕರಣ, ಅಸಮಾಧಾನದಿಂದ ನನ್ನ ಕಣ್ಣಿಗೆ ಕಣ್ಣು ಹತ್ತಲೊಲ್ಲವು!

ಹೀರಾದೇವಿಯ ಈ ಮಾತುಗಳನ್ನು ಕೇಳಿ ಸಭಾಕರಣನು ವಿಚಾರಕ್ಕೊಳಗಾದನು. ಹೀರಾದೇವಿಯು ಹೇಳಿದಂತೆ ತನ್ನ ಪ್ರತಿಜ್ಞೆಯ ಬಗ್ಗೆ ಆಗ ಆತನಿಗೆ ಪಶ್ಚಾತ್ತಾಪವಾದದ್ದು ನಿಜವಾಗಿತ್ತು, ಯುವರಾಜ ದಳಪತನ ಪ್ರತಾಪವನ್ನು ನೋಡಿ ಸಂತೋಷವಾದದ್ದರಿಂದ ಆತನು ತನ್ನ ಆ ಸದ್ಗುಣಿಯಾದ ಮಗನನ್ನು ಈವರೆಗೂ ತಿರಸ್ಕರಿಸಿದ್ದಿಲ್ಲ; ಮುಂದೆಯೂ ತಿರಸ್ಕರಿಸುವ ಸಂಭವವಿದ್ದಿಲ್ಲ, ಆದ್ದರಿಂದ ಆ ಸರಳ ಹೃದಯದ ಪ್ರತಿಜ್ಞಾಪಾಶಬದ್ಧ ಸಭಾಕರಣನು, ತಟ್ಟನೇ ಹೀರಾದೇವಿಯ ಮಾತುಗಳಿಗೆ ಉತ್ತರಕೊಡಲಾರದೆ ಆಲೋಚಿಸತೊಡಗಿದ್ದನು. ಕಡೆಗೆ ಆತನು ಸರಳತನದಿಂದ ಹೀರಾದೇವಿಯನ್ನು ಕುರಿತು—

ಸಭಾಕರಣ—ಹೀರಾದೇವೀ, ನಿನ್ನ ಮಾತು ಸತ್ಯವಾದದ್ದು! ನಾನು ಪ್ರತಿಜ್ಞಾಬದ್ಧನಾಗಿದ್ದರೂ, ಆ ದಿವ್ಯ ಮೂರ್ತಿಯಾದ ಪ್ರಾಣನಾಥ ಪ್ರಭುವಿನ ದಿವ್ಯ ತೇಜಸ್ಸಿನ ಮುಂದೆ ನನ್ನ ಘಾತಕ ಪ್ರತಿಜ್ಞೆಗಾಗಿ ನಾನು ನಾಚಿದ್ದು ನಿಜವು; ಅದರಂತೆ, ನನ್ನ ವೀರ ದಳಪತಿಯ ಶೌರ್ಯಕ್ಕಾಗಿ ನನಗೆ ಸಂತೋಷವಾದದ್ದರಿಂದ ನಾನು ಆಗ ಆತನನ್ನು ತಿರಸ್ಕರಿಸಲಿಲ್ಲ,

ಈಗಾದರೂ ನಾನು ಆತನನ್ನು ತಿರಸ್ಕರಿಸುವ ಸಂಭವವಿಲ್ಲ! ಆದರೆ ಹೀರಾದೇವೀ, ನನ್ನಂತೆ ನನ್ನ ಮಗ ದಳಪತನು ಪ್ರತಿಜ್ಞಾಬದ್ಧನಾಗಿರುವದಿಲ್ಲವೆಂಬ ಮಾತನ್ನು ನೀನು ವಿಚಾರಿಸಬೇಕಲ್ಲವೇ?

ಹೀರಾದೇವಿ–ಅವಶ್ಯವಾಗಿ ವಿಚಾರಿಸಬೇಕು, ಹಾಗೆ ನಾನು ವಿಚಾರಿಸಿಯೂ ವಿಚಾರಿಸುವೆನು; ಆದರೆ ಸಭಾಕರಣ, ಹೀಗೆ ನೀನು ಪ್ರತಿಜ್ಞೆಗೆ ಬಾಧಕವಾದ ಸಂಗತಿಗಳಿಂದ ಮೇಲೆ ಮೇಲೆ ಶಿಥಿಲಹೃದಯನಾಗುತ್ತ ಹೋದರೆ, ನಿನ್ನ ಪ್ರತಿಜ್ಞೆಯು ಹೇಗೆ ದೃಢವಾಗಿ ಉಳಿಯಬೇಕು? ಪ್ರತಿಜ್ಞೆಯಂತೆ ನಿನ್ನಿಂದ ಕಾರ್ಯಗಳಾದರೂ ಹೇಗೆ ಆಗಬೇಕು? ನಿಮ್ಮಂಥ ನರವೀರರು ಒಂದಿಲ್ಲೊಂದು ಕಾರಣದಿಂದ ನಮ್ಮ ಕಾರ್ಯಕ್ಕೆ ಅನುಕೂಲವಾಗಿರುವದರಿಂದಲೇ ನಾವು ಸ್ವೀಕೃತ ಕಾರ್ಯದಲ್ಲಿ ಅದು ಎಂತಹದಿದ್ದರೂ ಕೈಹಾಕಿದ ತಪ್ಪಿಗಾಗಿಯಾದರೂ ಅದನ್ನು ಸಾಧಿಸಬೇಕಾಗಿರುವದು; ಹಾಗೆ ಮಾಡುವದು ಕ್ಷತ್ರಿಯರ ಧರ್ಮವೆಂಬದನ್ನು ಘನವಂತನಾದ ಪಾಂಡವ ದ್ವೇಷಿ ದುರ್ಯೋಧನನ ಆಚರಣೆಯಿಂದ ನೀನು ತಿಳಿದುಕೊಳ್ಳಬಹುದಾಗಿದೆ.

ಸಭಾಕರಣ—ನಿಜವು, ಹೀರಾದೇವೀ, ನೀನು ಆಡುವ ಮಾತು ನಿಜವು! ನಡೆ ಹಾಗಾದರೆ, ಈ ಮಾತಿನ ನಿರ್ಣಯವನ್ನು ಈಗ ಮಾಡಿಬಿಡೋಣ; ಆದರೆ ಸಭಾಕರಣನು ತನ್ನ ಪ್ರತಿಜ್ಞೆಗಾಗಿ ಪ್ರಾಣಕೊಡುವವನಾಗಿರುವದರಿಂದ, ಅವನು ಮಕ್ಕಳು ಮರಿಗಳು ಯಾವ ಮೋಹಕ್ಕೂ ಒಳಗಾಗುವವನಲ್ಲವೆಂಬದನ್ನು ನೀನು ನೆನಪಿನಲ್ಲಿಡಬೇಕು. ನೀನಂದಂತೆಯೇ ಸಭಾಕರಣನು ಈಗ ಯೋಗ್ಯಾಯೋಗ್ಯಗಳ ವಿಚಾರದ ಗೊಡವಿಗೆಹೋಗನು. ಆತನು ಮಾಡಿರುವ ಪ್ರತಿಜ್ಞೆಯ ಕಾರಣವು ನಿಜವಿರಲಿ–ಸುಳ್ಳಿರಲಿ, ಅದರಿಂದ ಸತ್ಪರಿಣಾಮವಾಗಿ—ದುಷ್ಪರಿಣಾಮವಾಗಲಿ, ಅದರಿಂದ ದೇಶದ ಉದ್ಧಾರವಾಗಲಿ–ಅಧಃಪತನವಾಗಲಿ ಸಭಾಕರಣನು ಪ್ರತಿಜ್ಞೆಗೆ ಭಂಗ ತಂದುಕೊಳ್ಳಲಾರನು! ನಡೆ ಹಾಗಾದರೆ, ಯುವರಾಜ ದಳಪತನಲ್ಲಿಗೆ ಹೋಗಿ ಝುಳಝುಳ ಮಾಡಿಬಿಡೋಣ!

ಈಗ ಸಭಾಕರಣನು ನಿಶ್ಚಿಂತನಾಗಿದ್ದನು; ಯಾಕಂದರೆ ಇನ್ನು ಹೀಗೆಯೇ ಮಾಡಬೇಕೆಂಬದರ ನಿಶ್ಚಯವು ಆತನ ಮನಸ್ಸಿನಲ್ಲಿ ಆಗಿಹೋಗಿತ್ತು. ಆತನು ಉಲ್ಲಾಸದಿಂದ ಮಗನ ರಾಹುಟಿಯ ಕಡೆಗೆ ಸಾಗಿದ್ದನು; ಹೀರಾದೇವಿಯೂ ಆತನನ್ನು ಹಿಂಬಾಲಿಸಿ ನಡೆದಿದ್ದಳು. ಆಕೆಯನ್ನು ಲಕ್ಷಿಸದೆ ಸಭಾಕರಣನು ನೆಟ್ಟಗೆ ಮಲಗಿರುವಲ್ಲಿಗೆ ಹೋಗಿ, ಅವನ ಮಂಚದ ಬಳಿಯಲ್ಲಿ ನಿಂತುಕೊಂಡನು. ಆಗ ದಳಪತನಿಗೆ ನಿದ್ರೆ ಹತ್ತಿತ್ತು, ಇನ್ನು ಸಭಾಕರಣನು ಮಗನನ್ನು ಹಿಡಿದೆಳೆದು ಒಳಿತಾಗಿ ದಂಡಿಸುವನೆಂದು ಹೀರಾದೇವಿಯು ಕಲ್ಪಿಸಿದ್ದಳು; ಆದರೆ ಸಭಾಕರಣನು ಮಗನನ್ನು ದಂಡಿಸುವದು ಒತ್ತಟ್ಟಿಗುಳಿದು, ಆತನು ಅತ್ಯಂತ ವಾತ್ಸಲ್ಯದಿಂದ ಮಗನ ಮೋರೆಯನ್ನು ನೋಡುತ್ತ ನಿಂತುಕೊಂಡನು; ಮಗನಿಗೆ ಎಚ್ಚರಾದೀತೆಂಬ ಕಾರಣದಿಂದ ಆತನು ಮಿಸುಕಾಡದೆ ಮಗನ ಸುಂದರ ಮುಖವನ್ನು ನೋಡುತ್ತಲಿದ್ದನು. ಆಗ ಬೆಳಗಾಗಲಿಕ್ಕೆ ಎರಡು ತಾಸು ರಾತ್ರಿಯು ಉಳಿದಿರಬಹುದು. ಅಷ್ಟರಲ್ಲಿ ದಳಪತಿಗೆ ಕನಸುಬಿದ್ದು ಕನಸಿನಲ್ಲಿ ತನ್ನ ತಂದೆಯು ತನ್ನ ಅಂದಿನ ಜಯಕ್ಕಾಗಿ ಸಂತೋಷಪಟ್ಟು, ತನ್ನನ್ನು ಕಾಣಲಿಕ್ಕೆ ಬಂದಿರುವಂತೆಯಾಯಿತು. ಆತನು ತನ್ನ ತಂದೆಯನ್ನು ನಮಸ್ಕರಿಸಬೇಕೆಂದು ಪಕ್ಕನೇ ಕಣ್ಣು ತೆರೆದು ಮೇಲಕ್ಕೆ ಏಳಲು, ಪ್ರತ್ಯಕ್ಷ ಎದುರಿಗೆ ನಿಂತಿದ್ದ ಸಭಾಕರಣನು—"ದಳಪತ, ವತ್ಸಾ,

ಮಲಗು ಮಲಗು; ನಾನು ಬಂದದ್ದರಿಂದ ನಿನ್ನ ನಿದ್ರೆ ಗೇಡಾಯಿತೇನು?'' ಎಂದು ನುಡಿಯುತ್ತಲಿದ್ದನು. ಆಗ ದಳಪತರಾಯನು ಆತುರದಿಂದ ಎದ್ದು ತಂದೆಯ ಚರಣಗಳ ಮೇಲೆ ಮಸ್ತಕವಿಟ್ಟನು. ಆಗ ಸಭಾಕರಣನು ಮಗನನ್ನು ಅಪ್ಪಿ ನೆತ್ತಿಯನ್ನು ಮೂಸಿನೋಡಿ—''ಬಾಳಾ, ದಳಪತಾ, ಇದೇ ನಿನ್ನ ಕಟ್ಟಕಡೆಯ ಆಲಿಂಗನವಾದದ್ದರಿಂದ ಇನ್ನಿಷ್ಟು ಹೊತ್ತು ನನ್ನ ಬಾಹುಪಾಶದಿಂದ ದೂರವಾಗಬೇಡ, ಎನಲು, ದಳಪತನು–ಅಪ್ಪಾ, ನಾನು ಎಂತಹ ಭಾಗ್ಯಶಾಲಿಯು! ನಸಿಕಿನಲ್ಲಿಯೇ ನನಗೆ ತಮ್ಮ ದರ್ಶನವಾಯಿತು! ವಿಂಧ್ಯವಾಸಿನಿಯ ಸಹಸ್ರಸಾರೆಯ ದರ್ಶನದ ಆನಂದಕ್ಕಿಂತಲೂ ಇಂದಿನ ನಿಮ್ಮ ದರ್ಶನದ ಆನಂದವು ನನಗೆ ಹೆಚ್ಚಿನದಾಗಿರುವದು. ಪಿತಾಜೀ, ನನ್ನ ಪೂರ್ವದ ಪುಣ್ಯವು ಇಂದು ಫಲಿಸಿತೆಂದು ನಾನು ತಿಳಿದುಕೊಳ್ಳುವೆನು!

ಸಭಾಕರಣ — ದಳಪತ, ಈಗ ನಾನು ಇಷ್ಟು ಮಾನಕ್ಕೆ ಪಾತ್ರನಿರುವದಿಲ್ಲ. ಮೊದಲಿನ ಸಭಾಕರಣನು ನಾನು ಈಗಿರುವದಿಲ್ಲ; ಚಂಪತರಾಯನ ಸ್ನೇಹಿತನಾಗಿರುವ ದೈವೀಭಾವದ ಸಭಾ ಕರಣನು ಬೇರೆ. ಈಗಿನ ಪ್ರತಿಜ್ಞಾಪಾಶಬದ್ಧ ಸಭಾಕರಣನು ಬೇರೆ. ಮೊದಲಿನ ಸಭಾಕರಣನು ದೇಶಕ್ಕೆ ಹಿತಮಾಡುವವನಾಗಿದ್ದನು; ಈಗಿನ ಸಭಾಕರಣನು ದೇಶದ ದ್ರೋಹ ಕಟ್ಟಿಕೊಳ್ಳುವ ವನಾಗಿದ್ದಾನೆ!

ದಳಪತ — ಪಿತಾಜೀ, ಹೀಗೇಕೆ ಅನ್ನುವಿರಿ?

ಸಭಾಕರಣ — ವತ್ಸ, ಸತ್ಯವಾದದ್ದನ್ನೇ ಅನ್ನುವೆನು. ನನ್ನ ಘೋರ ಪ್ರತಿಜ್ಞೆಯೇ ಅಂತಹದಿರುವದು, ''ನಾನು ಸ್ವತಃ ಪರತಂತ್ರನಾದೆನು, ನನ್ನ ದೇಶವನ್ನು ಪಾರತಂತ್ರ್ಯಕ್ಕೆ ಗುರಿಮಾಡೇನು? ಆದರೆ ಚಂಪತರಾಯನು ಕೈಕೊಂಡಿರುವ ದೇಶೋದ್ಧಾರದ ಕಾರ್ಯವನ್ನು ನಾಶಮಾಡದೇ ಬಿಡಲಿಕ್ಕಿಲ್ಲ'' ಎಂದು ನಾನು ಪ್ರತಿಜ್ಞೆ ಮಾಡಿದ್ದೇನೆ.

ದಳಪತ — ಅಪ್ಪಾ, ಇದೆಂತಹ ಪ್ರತಿಜ್ಞೆಯು! ಪ್ರತಿಜ್ಞೆಯ ಯೋಗದಿಂದ ಅನಾಚಾರವಾಗುತ್ತದೆಂಬದು ನಿಮಗೆ ತೋರಿದರೆ, ನೀವು ಅಂತಹ ಅಯೋಗ್ಯ ಪ್ರತಿಜ್ಞೆಯನ್ನು ತ್ಯಜಿಸಿ ಬಿಡಬೇಕು?

ಸಬಾಕರಣ — (ತ್ವೇಷದಿಂದ) ಏನಂದೀ? ಪ್ರತಿಜ್ಞೆಯ ತ್ಯಾಗವೇ? ದಳಪತ, ನಿನ್ನಂಥ ವೀರನಿಂದ ಈ ಹೇಡಿತನದ ಮಾತು ಹೊರಡತಕ್ಕದ್ದಿದ್ದಿಲ್ಲ; ನೀನು ಈ ಸಭಾಕರಣನ ಮಗನಿರುವೆ. ತಾನಾಡಿದ ಮಾತಿನ ಬೆಲೆಯೇನಿರುವದೆಂಬದರ ತಿಳುವಳಿಕೆಯು ನಿನಗೆ ಇರಬೇಕಾಗಿತ್ತು, ಸಭಾಕರಣನು ಪ್ರತಿಜ್ಞೆಯ ಭಂಗಮಾಡಿದನೆಂದು ತಿಳಿದರೆ, ಸ್ವರ್ಗಸ್ಥ ಪಿತೃಗಳಿಗೆ ಎಷ್ಟು ದುಃಖವಾದೀತು!

ದಳಪತ— ಯಾವತ್ತು ಬುಂದೇಲಖಂಡದ ಪಾರತಂತ್ರ್ಯಕ್ಕೆ ನೀವು ಕಾರಣರಾದೀರೆಂದು ತಿಳಿದರೆ ಆ ಪಿತೃಗಳು ಸಂತೋಷಪಡಬಹುದೋ? ಇಂತಹ ಘೋರ ಪ್ರತಿಜ್ಞೆಯನ್ನು ಮಾಡಲಿಕ್ಕೆ ಕಾರಣವಾದರೂ ಏನು?

ಸಭಾಕರಣ —ವತ್ಸಾ, ಆ ಕಾರಣವನ್ನು ಕೇಳಿದರೆ ನಿನಗೆ ಸುಖವಾಗದು. ಅದನ್ನು ತಿಳಿದುಕೊಳ್ಳುವ ಗೊಡವಿಗೆ ನೀನು ಸರ್ವಥಾ ಹೋಗಬೇಡ. ಅದನ್ನು ಕೇಳಿದರೆ ನಿನ್ನ ಜೀವಿತದ

ನಾಶವಾದೀತು! ನೀನು ಎಷ್ಟು ಯತ್ನಮಾಡಿದರೂ ನಾನು ಪ್ರತಿಜ್ಞಾಭಂಗವನ್ನು ಮಾಡಕೊಳ್ಳಲಾರೆನು. ನಾನು ನನ್ನ ಕೆಲಸವನ್ನು ಒಮ್ಮೆ ಗೊತ್ತುಮಾಡಿಬಿಟ್ಟಿರುತ್ತೇನೆ. ಅದರಲ್ಲಿ ಹೆಚ್ಚು ಕಡಿಮೆ ಮಾಡುವದು ದೇವರ ಕೈಯಲ್ಲಿಯೂ ಇರುವದಿಲ್ಲ. ನಿನ್ನೆ ನೀನು ಹಲವು ಯವನರನ್ನು ಸಂಹರಿಸಿ ರಣದುಲ್ಲಾಖಾನನನ್ನು ಸೆರೆಹಿಡಿದುಕೊಂಡು ಬಂದಾಗಲೇ ನಾನು ನಿನ್ನನ್ನು ತಿರಸ್ಕರಿಸಬೇಕಾಗಿತ್ತು. ಹಾಗೆ ಯಾಕೆ ಮಾಡಲಿಲ್ಲವೆಂದು ಹೀರಾದೇವಿಯು ನನ್ನನ್ನು ಕೇಳುತ್ತ ಮಧ್ಯರಾತ್ರಿಯಿಂದ ನನ್ನ ಬೆನ್ನ ಬಿಡದಾಗಿದ್ದಾಳೆ! ಬಾಳಾ, ನಿನ್ನ ಪರಾಕ್ರಮವನ್ನು ನೋಡಿ ನನಗೆ ಅತ್ಯಾನಂದವಾಗಿದ್ದರೂ, ಚಂಪತರಾಯನು ಛತ್ರಸಾಲನನ್ನು ಅಪ್ಪಿಕೊಂಡು ಅಭಿನಂದಿಸಿದಂತೆ ನಾನು ನಿನ್ನನ್ನು ಅಪ್ಪಿಕೊಂಡು ಅಭಿನಂದಿಸಲಿಕ್ಕೆ ಸಮರ್ಥನಾಗಲಿಲ್ಲ; ಯಾಕಂದರೆ ಪ್ರತಿಜ್ಞಾಬದ್ಧನಾಗಿರುವ ನನ್ನ ಸ್ವಾತಂತ್ರ್ಯವೆಲ್ಲ ನಷ್ಟವಾಗಿ ಹೋಗಿರುವದು! ಆದ್ದರಿಂದ ನನಗೂ ನಿನಗೂ ಇನ್ನು ಕೂಡಿ ನಡೆಯಲಾರದು! ಇಂದಿನಿಂದ ನೀನು ಈ ಸಾಗರ ಸಂಸ್ಥಾನದ ಸಂಬಂಧವನ್ನು ಕಡಿದುಕೊಳ್ಳಬೇಕು! ಯಾಕಂದರೆ, ನೀನು ದೇಶೋದ್ಧಾರಕನು, ನಾನು ದೇಶದ್ರೋಹಿಯು! ನೀನು ಸದ್ಗುಣಮಂಡಿತನು, ನಾನು ದುರ್ಗುಣದ ಖನಿಯು! ಆದ್ದರಿಂದ ನನ್ನ ಸಹವಾಸವು ನಿನಗೆ ಯೋಗ್ಯವಲ್ಲ. ನನ್ನ ಸಹವಾಸದಿಂದ ನಿನ್ನ ಪೌರುಷವು ಮಣ್ಣು ಗೂಡುವದು ಸರಿಯಲ್ಲ. ಇಂದಿನಿಂದ ನೀನು ನನ್ನ ವೈರಿಯು!

ದಳಪತ —(ದುಃಖದಿಂದ) ಪಿತಾಜೀ, ಹೀಗೆ ಮಾತಾಡಬೇಡಿರಿ. ನಿಮ್ಮನ್ನು ಅಗಲಿ ಇರುವದು ನನ್ನಿಂದಾಗದು; ನೀವು ಹೀಗೆ ನನ್ನ ಕೈಬಿಟ್ಟರೆ ನನಗೆ ಆಧಾರವೇನು?

ಸಭಾಕರಣ—ದಳಪತ, ಇನ್ನು ನಾನು ಬಹಳ ಮಾತಾಡುವದಿಲ್ಲ. ನನ್ನನ್ನು ಮೋಹದಲ್ಲಿ ತೊಡಗಿಸಬೇಡ. ನಿನಗೆ ಆಧಾರವು ಚಂಪತರಾಯನು. ಬುಂದೇಲಖಂಡದ ಸ್ವಾತಂತ್ರ್ಯವು ಛತ್ರಸಾಲನ, ಹಾಗೂ ನಿನ್ನ ಪ್ರಯತ್ನವನ್ನು ಅವಲಂಬಿಸಿರುತ್ತದೆ. ಚಂಪತರಾಯನು ನನ್ನ ವೈರಿಯಾಗಿದ್ದರೂ ಆತನ ದೊಡ್ಡ ಗುಣಗಳನ್ನು ನಾನು ಅರಿತಿರುವೆನು. ನೀನು ಆತನ ಆಶ್ರಯಕ್ಕೆ ಹೋಗಿ, ನನ್ನಂತೆ ಆತನನ್ನು ತಿಳಿದು ಆತನ ಆಜ್ಞೆಯನ್ನು ಪಾಲಿಸುತ್ತ ಹೋಗು. ಇಂದಿಗೆ ಸಾಗರದ ಯುವರಾಜನು ಇಲ್ಲದಂತಾದನೆಂದು ನಾನು ತಿಳಿಯುವೆನು; ಸಭಾಕರಣನು ನಿಪುತ್ರಕನೆಂದು ಭಾವಿಸುವೆನು! ಏಳು, ಒಂದು ಕ್ಷಣವಾದರೂ ಇಲ್ಲಿ ನಿಲ್ಲಬೇಡ. ನಿನ್ನ ನಿಲ್ಲೋಣವು ನನ್ನ ಪ್ರತಿಜ್ಞೆಗೆ ಬಾಧಕವಾಗಿದೆ! ನೀನು ಸಭಾಕರಣನ ಹೊಟ್ಟೆಯಲ್ಲಿ. ಹುಟ್ಟಿದ್ದೇ ನಿಜವಿದ್ದರೆ, ತಿರುಗಿ ಮಾತಾಡದೆ ಹೀಗೆಯೇ ಹೊರಟು ನಡೆ! ಇನ್ನು ನಿಂತರೆ ಚಂಪತರಾಯನ ಗುಪ್ತಚಾರನೆಂದು ತಿಳಿದು ನಿನ್ನ ವ್ಯವಸ್ಥೆ ಮಾಡುವೆನು!

ತಂದೆಯ ಈ ನಿರ್ಧಾರದ ಮಾತು ಕೇಳಿ ದಳಪತರಾಯನು ಕೂಡಲೇ ತಂದೆಯ ಚರಣಕ್ಕೆರಗಿ ಯುವರಾಜ ಪದವಿಯನ್ನೂ, ಸಾಗರದ ರಾಜ್ಯದ ಆಶೆಯನ್ನೂ ಬಿಟ್ಟು ದೇಶ ಕಾರ್ಯಕ್ಕಾಗಿ ಹೊರಟು ನಡೆದನು.

# ಸೈತಾನ

ಹಿಂದಿನ ಒಂದನೆಯ ಪ್ರಕರಣದಲ್ಲಿ ಹೇಳಿದಂತೆ ಛತ್ರಸಾಲನೂ, ದಳಪತರಾಯನೂ ತಮ್ಮ ಶೌರ್ಯ ಪ್ರತಾಪಗಳಿಂದ ದಿಲ್ಲಿಯ ರಣದುಲ್ಲಾಖಾನ ಸರದಾರನನ್ನು ಸೆರೆಹಿಡಿದ ಕೂಡಲೇ, ಗುಡಿಯ ಸುತ್ತುಮುತ್ತಲಿನ ಅರಸರ ರಾಹುಟಿಗಳಲ್ಲಿ ಒಂದಿಲ್ಲೊಂದು ಬಗೆಯ ವಿಲಕ್ಷಣ ಪ್ರಸಂಗಗಳು ಒದಗಿದವೆಂದು ಹೇಳಬಹುದು. ಉತ್ಸವದ ಮರುದಿನ ಬೆಳಗಾದ ಕೂಡಲೇ ದಳಪತರಾಯನು ತನ್ನ ತಂದೆ ಸಭಾಕರಣನ ಕಠಿಣತರ ಆಜ್ಞೆಯಂತೆ ಯುವರಾಜ ಪದವಿಯನ್ನೂ, ಸಾಗರರಾಜ್ಯದ ಆಶೆಯನ್ನು ಬಿಟ್ಟುಕೊಟ್ಟು ಸ್ವದೇಶೋದ್ಧಾರದ ಕಾರ್ಯ ಕ್ಕೋಸ್ಕರ ಹೊರಟು ಹೋದದ್ದನ್ನು ವಾಚಕರು ಇದೇ ಈಗ 3ನೆಯ ಪ್ರಕರಣದಲ್ಲಿ ಓದಿರುವರು. ಅದರಂತೆ ಉತ್ಸವ ಪ್ರಸಂಗವು ಒದಗಿದ ರಾತ್ರಿಯೇ ಒದಗಿದ ಇನ್ನೊಂದು ಮನೋರಂಜಕ ಪ್ರಸಂಗವನ್ನು ಈ ಪ್ರಕರಣದಲ್ಲಿ ಹೇಳಬೇಕಾಗುವದು. ಕಂಚುಕಿರಾಯನ ಪರಿಚಯವು ವಾಚಕರಿಗೆ ಇರುವದಷ್ಟೇ? ವಿಜಯೆಯ ತಂದೆಯೂ, ಧಾರೀರ ಸಂಸ್ಥಾನದ ಅರಸನೂ ಆದ ಆ ವೃದ್ಧ ಭೂಪತಿಯು ದೇವಿಯ ಗುಡಿಯಿಂದ ಹೊರಗೆ ಬರುತ್ತಿರಲು, ಮರಕ್ಕೆ ಮುಸಿಗೆ ಬಿಗಿದಿದ್ದ ರಣದುಲ್ಲಾಖಾನನು ಆತನ ಕಣ್ಣಿಗೆ ಬಿದ್ದನು. ಕಂಚುಕಿರಾಯನಿಗೆ ಖಾನನ ಸಂಪೂರ್ಣ ಪರಿಚಯ! ಮೇಲೆ ಖಾನನು ಔರಂಗಜೇಬನ ಅತ್ಯಂತ ಪ್ರೀತಿಯ ಸರದಾರನು! ಅಂಥ ಘನವಂತ ಸರದಾರನ ಮುಸಿಗೆ ಬಿಗಿದದ್ದು ಅನರ್ಥಕ್ಕೆ ಕಾರಣವಾಗದೆ ಹೋಗದೆಂದು ಕಂಚುಕಿರಾಯನು ತಿಳಿದನು. ಕಂಚುಕಿರಾಯನು ಬಹುಪುಕ್ಕ ಸ್ವಭಾವದವನು. ಬಾದಶಹನ ಕ್ರೋಭವು ತನ್ನಮೇಲೆ ಎಲ್ಲಿ ಆಗುವದೋ ಎಂದು ಆತನು ಮನಸ್ಸಿನಲ್ಲಿ ಬೆದರಿದನು. ಹಾಗೆ ಆತನು ಬೆದರುವದು ಸ್ವಾಭಾವಿಕವೂ ಆಗಿತ್ತು. ಔರಂಗಜೇಬನ ಅಬ್ಬರಕ್ಕೆ ಇಡಿಯ ಹಿಂದುಸ್ಥಾನವೇ ತತ್ತರಿಸುತ್ತಿರುವಾಗ ಪಾಪ! ಕಂಚುಕಿರಾಯನು ಅಂಜಿದ್ದರಲ್ಲಿ ಆಶ್ಚರ್ಯವೇನು? ಬಾದಶಹನ ಈ ದ್ರೋಹದ ಕೆಲಸದಲ್ಲಿ ತನ್ನ ಅಂಗವು ಸರ್ವಥಾ ಇರುವದಿಲ್ಲವೆಂಬದನ್ನು ಖಾನನಿಗೆ ಹೇಗೆ ತಿಳಿಸಬೇಕೆಂದು ವಿಚಾರಿಸುತ್ತಲೇ ಆ ವೃದ್ಧರಾಜನು ತನ್ನ ರಾಹುಟಿಯನ್ನು ಹೊಕ್ಕನು.

ಬುಂದೇಲಖಂಡದ ಜನರು ಅತ್ಯಂತ ಸ್ವಾತಂತ್ರ್ಯಪ್ರಿಯರೆಂಬ ಮಾತನ್ನು ಹಿಂದೆ ಹೇಳಿಯಿದೆ; ಅದರಂತೆ ಅವರು ಮಹಾ ಶೂರರೆಂಬ ಮಾತೂ ಗೊತ್ತಾಗಿರುವದು; ಆದರೆ ಸೇಲೀಮನ ಕಾಲದಿಂದ ದಿಲ್ಲಿಯ ಬಾದಶಹರ ಸಾರ್ವಭೌಮಾಧಿಕಾರಕ್ಕೆ ಒಳಗಾಗುತ್ತಬಂದಂತೆ ಅವರ ಸ್ವಾತಂತ್ರ್ಯಪ್ರೀತಿಯೂ, ಶೌರ್ಯವೂ ಸ್ವಾಭಾವಿಕವಾಗಿಯೇ ಕಡಿಮೆಯಾಗುತ್ತ ಬಂದಿದ್ದವು; ಆದರೂ ಚಂಪತರಾಯನಂತಹ ಸ್ವಾತಂತ್ರ್ಯಪ್ರಿಯ ಕ್ಷತ್ರಿಯ ರಾಜರು ಇನ್ನೂ ಬುಂದೇಲ ಖಂಡದಲ್ಲಿ ಹುಟ್ಟುತ್ತಲೇ ಇದ್ದರು. ಯಾವದೇಶಕ್ಕಾದರೂ ಉನ್ನತಿ – ಅವನತಿಗಳು ಬಿಟ್ಟಿಲ್ಲವಲ್ಲ. ಇದನ್ನರಿತೇ ವಿವೇಕಿಗಳು ನಡೆದುಕೊಳ್ಳಬೇಕಾಗುವದು. ಚಂಪತರಾಯನು ಇಂತಹ ವಿವೇಕಿಯೇ ಆಗಿದ್ದನು. ಆತನು ಔರಂಗಜೇಬನ ಪಕ್ಷವನ್ನು ವಹಿಸಿ, ಆತನ ಅಣ್ಣನಾದ

ದಾರಾನನ್ನು ಘನ ಘೋರವಾದ ಸಾಮುಗಡದ ಯುದ್ಧದಲ್ಲಿ ಸೋಲಿಸಿ ಔರಂಗಜೇಬನಿಗೆ ದಿಲ್ಲಿಯ ಸಿಂಹಾಸನವನ್ನು ಒದಗಿಸಿಕೊಟ್ಟಿದ್ದನು. ಆದ್ದರಿಂದ ಔರಂಗಜೇಬನು ಚಂಪತ ರಾಯನನ್ನು ಮಿತ್ರನೆಂದು ಭಾವಿಸಿ, ಆತನ ಶೌರ್ಯಾದಿ ಸದ್ಗುಣಗಳಿಗಾಗಿ ಅಂತರಂಗ ದಲ್ಲಾದರೂ ಅಂಜುತ್ತಿದ್ದನು; ಆದರೆ ಔರಂಗಜೇಬನು ಮುಂದೆ ಸಿಂಹಾಸನದಲ್ಲಿ ಸ್ಥಿರನಾಗಿ ಮಹಾ ಬಲಿಷ್ಠನಾಗಲು, ಚಂಪತರಾಯನನ್ನು ದುರ್ಲಕ್ಷಿಸಹತ್ತಿದನು; ಆದರೂ ಚಂಪತ ರಾಯನು ತನ್ನ ಅಂತಸ್ತೇಜಸ್ಸನ್ನು ಕುಗ್ಗಗೊಟ್ಟಿದ್ದಿಲ್ಲ. ತನ್ನ ಪ್ರಜೆಗಳ ಕಲ್ಯಾಣದಲ್ಲಿ ಅತ್ಯಂತ ತತ್ಪರನಾಗಿದ್ದನು. ಮುಸಲ್ಮಾನರ ವರ್ಚಸ್ಸು ಆತನ ರಾಜ್ಯದಲ್ಲಿ ಇದ್ದಿಲ್ಲ. ದೊಡ್ಡ ದೊಡ್ಡ ಅಧಿಕಾರಗಳೆಲ್ಲ ಬುಂದೇಲಿಗಳಿಗೇ. ಪ್ರಜೆಗಳಿಗೂ ಕಂದಾಯ-ಕರಗಳ ಬಾಧೆ ಕಡಿಮೆ. ಮುಸಲ್ಮಾನ ಪ್ರಜೆಗಳಿಗೂ ಆತನು ಪ್ರಿಯನಾಗಿದ್ದನು. ಒಟ್ಟಿಗೆ ಚಂಪತರಾಯನ ಪ್ರಜೆಗಳು ಅತ್ಯಂತ ಸ್ವಾಮಿನಿಷ್ಠರಾಗಿದ್ದರು! ಪ್ರಜೆಗಳ ರಂಜನದ ಕಡೆಗೆ ಚಂಪತರಾಯನ ಲಕ್ಷ್ಯ ಬಹಳ; ಆತನು ಅತ್ಯಂತ ಧರ್ಮಿಷ್ಠನು. ಗೋ-ಬ್ರಾಹ್ಮಣರ ಪ್ರತಿಪಾಲನದಲ್ಲಿಯೂ, ದೇವಸ್ಥಾನ ಗಳ ವ್ಯವಸ್ಥೆಯಲ್ಲಿಯೂ ಆತನ ಆಸಕ್ತಿ ಹೆಚ್ಚು. ಔರಂಗಜೇಬನ ಧರ್ಮದ ದುರಭಿಮಾನಕ್ಕಾಗಿಯೂ, ಹಿಂದೂ ಪ್ರಜೆಗಳಿಗೆ ಆತನು ಕೊಡುತ್ತಿರುವ ತಾಪಕ್ಕಾಗಿಯೂ, ಆತನು ಹಿಂದೂ ಜನರ ಮೇಲೆ ಕೂಡಿಸಿದ್ದ ಜಿಜಿಯಾ ಎಂಬ ತಲೆಪಟ್ಟಿಗಾಗಿಯೂ ಚಂಪತರಾಯನು ಸಂತಾಪಗೊಳ್ಳುವನು; ಆದರೆ ಬಲಿಷ್ಠ ಬಾದಶಹನ ಮುಂದೆ ಆಟ ನಡೆಯದ್ದರಿಂದ ಆತನು ಸುಮ್ಮನಿರಬೇಕಾಗಿತ್ತು; ಆದರೆ ಔರಂಗಜೇಬನ ದುಷ್ಟತನದ, ಹಾಗು ಕೃತಘ್ನತೆಯ ಮಿತಿಯು ಮೀರಿ, ಆತನು ಬುಂದೇಲಿಗಳ ಅತ್ಯಂತ ಪವಿತ್ರಸ್ಥಾನವಾದ ವಿಂಧ್ಯವಾಸಿನಿಯ ದೇವಸ್ಥಾನದ ನಾಶಮಾಡಲು ರಣದುಲ್ಲಾಖಾನನನ್ನು ಕಳಿಸಿದ್ದಕ್ಕಾಗಿ ಆ ಧಾರ್ಮಿಕ ತೇಜದ ಚಂಪತರಾಯನು ಸಂತಾಪ ಗೊಂಡನು. ಹಿಂದುಗಳ ದೇವಾಲಯಗಳ ನಾಶದ ಗೊಡವಿಗೆ ಹೋಗುವದಿಲ್ಲವೆಂದು ಬಾದಶಹನು ಒಪ್ಪಿಕೊಳ್ಳುವವರೆಗೆ ಖಾನನನ್ನು ಬಂಧಮುಕ್ತ ಮಾಡಲಿಕ್ಕಿಲ್ಲವೆಂದು ನಿಶ್ಚಯಿಸಿ ಆತನನ್ನು ಬಲವಾದ ಕಾವಲಿನಲ್ಲಿ ಇಡಿಸಿದನು.

ಆದರೆ ಇಂತಹ ತೇಜಸ್ವಿತೆಯು ಕಂಚುಕಿರಾಯನಂತಹ ಅಂಜುಬುರುಕ ಅರಸರಿಗೆ ಸೇರಲಿಲ್ಲ. ಚಂಪತರಾಯನ ಈ ಅರಿಷ್ಟವು ತಮಗೆಲ್ಲಿ ಬಡಿದುಕೊಳ್ಳುವದೋ ಎಂದು ಅವರು ಅಂಜಿದರು. ಚಂಪತರಾಯನಲ್ಲಿ ಹಲವು ಸದ್ಗುಣಗಳಿದ್ದಂತೆ ಒಂದೆರಡು ದುರ್ಗುಣಗಳೂ ಇದ್ದವು. ಆತನು ಶೀಘ್ರ ಕೋಪಿಯು. ಮಿತಿಮೀರಿದ ಸ್ವಾಭಿಮಾನಿಯು. ಬುಂದೇಲ ಖಂಡದ ಸಂಸ್ಥಾನಿಕರು ಬಾದಶಹನಿಗೆ ಹೀಗೆ ಅನುಕೂಲರಾಗಿ ನಡಿಯುವದನ್ನು ನೋಡಿ ಸಹಿಸದೆ ಆತನು ಅವರನ್ನು ದ್ವೇಷಿಸುತ್ತಿದ್ದನು; ಆದ್ದರಿಂದ ಬುಂದೇಲಖಂಡದ ಬಹುತರ ರಾವತ್ತೂ ರಾಜರು ಚಂಪತ ರಾಯನನ್ನು ದ್ವೇಷಿಸುತ್ತ ಆತನ ಕೇಡು ಬಗೆಯಲಿಕ್ಕೆ ಹೊಂಚು ಹಾಕಿದ್ದರು. ಚಂಪತರಾಯನ ಮಗ ಛತ್ರಸಾಲನು ರಣದುಲ್ಲಾಖಾನನನ್ನು ಸೆರೆಹಿಡಿದುತಂದದ್ದೂ, ಚಂಪತ ರಾಯನು ಹುಡುಗರ ಕೆಲಸವೆಂದು ಖಾನನನ್ನು ಬಂಧಮುಕ್ತಮಾಡಿ ಬಿಡದೆ ಆತನನ್ನು ಸೆರೆ ಯಲ್ಲಿಟ್ಟುಬಿಟ್ಟದ್ದೂ ಆ ಉಳಿದ ಅರಸರಿಗೆ ಒಂದು ನೆವ ಸಿಕ್ಕಂತಾಯಿತು. ಈ ನೆವದಿಂದ

ಅವರು ಚಂಪತರಾಯನ ನಾಶದ ಸಲುವಾಗಿ ತಮ್ಮೊಳಗೆ ಆಲೋಚಿಸತೊಡಗಿದರು. ಈ ಆಲೋಚನೆಯಲ್ಲಿ ಚಂಪತರಾಯನ ತಮ್ಮನ ಹೆಂಡತಿಯಾದ ಹೀರಾದೇವಿಯು ಮುಖ್ಯಳಾಗಿದ್ದು, ಕಂಚುಕಿರಾಯನೇ ಮೊದಲಾದ ಅರಸರು ಆಕೆಯ ಸಹಾಯಕರಾಗಿದ್ದರು. ಹೀರಾದೇವಿಯು ಅದೇದಿನ ರಾತ್ರಿ ಕಂಚುಕಿರಾಯನನ್ನು ಕರೆಸಿಕೊಂಡು ಆಲೋಚಿಸತೊಡಗಿದಳು. ಮಧ್ಯರಾತ್ರಿಯವರೆಗೆ ಅವರ ಆಲೋಚನೆಯು ನಡೆಯಿತು. ಕಡೆಗೆ ಕಂಚುಕಿರಾಯನು ಸ್ತ್ರೀ ವೇಷದಿಂದ ಚಂಪತರಾಯನ ಪಾಳೆಯವನ್ನು ಪ್ರವೇಶಿಸಿ, ರಣದುಲ್ಲಾಖಾನನನ್ನು ಕಂಡು ಆತನನ್ನು ಸಮಾಧಾನಪಡಿಸಿ, ಎಲ್ಲಕ್ಕೂ ಚಂಪತರಾಯನ ಸೊಕ್ಕೇ ಕಾರಣವಲ್ಲದೆ, ಅದರಲ್ಲಿ ನಮ್ಮ ಸಂಬಂಧವಿಲ್ಲೆಂದು ಖಾನನ ನಂಬಿಗೆ ಮಾಡಿಕೊಡಬೇಕೆಂದು ಗೊತ್ತಾಯಿತು. ಆಮೇಲೆ ಹೀರಾದೇವಿಯು ತನ್ನ ರಾಹುಟಿಗೆ ಹೋಗದೇ, ಆ ಆಲೋಚನೆಯಲ್ಲಿ ಗೊತ್ತಾದಂತೆ ಸಭಾಕರಣ ಬುಂದೇಲನ ರಾಹುಟಿಯ ಕಡೆಗೆ ನಡೆದಳು. ಅದರ ಫಲವೇ ದಳಪತರಾಯನ ರಾಜ್ಯ ತ್ಯಾಗವೆಂಬದನ್ನು ವಾಚಕರು ಬಲ್ಲರು.

ಇತ್ತ ಕಂಚುಕಿರಾಯನು ಆಲೋಚನೆಯಲ್ಲಿ ಗೊತ್ತಾದಂತೆ ಸ್ತ್ರೀ ವೇಷವನ್ನು ಧರಿಸಿದನು. ಚಂಪತರಾಯನು ರಣದುಲ್ಲಾಖಾನನನ್ನು ಸೆರೆಯಲ್ಲಿಟ್ಟಿದ್ದನಷ್ಟೇ? ಆ ರಾಹುಟಿಯನ್ನು ಪ್ರವೇಶಿಸಲಿಕ್ಕೆ ಸ್ತ್ರೀ ವೇಷದ ಹೊರತು ಬೇರೆ ಗತಿಯಿದ್ದಿಲ್ಲ! ಕಂಚುಕಿರಾಯನು ಅತ್ಯಂತ ವೃದ್ಧನು; ಮೇಲೆ ಹಲ್ಲುಗಳೆಲ್ಲ ಬಿದ್ದು ಗಲ್ಲಗಳು ಪಚ್ಚು ಬಿದ್ದದ್ದರಿಂದ ಆತನ ಕಲ್ಲಿಯ ಮೀಸೆಗಳಿಂದ ಆತನ ಮುಖವು ತೀರ ಅಸಡ್ಡಾಳಾಗಿ ಕಾಣುತ್ತಿತ್ತು. ಆತನ ಮೈಕಟ್ಟು ಬಡಕ, ನಿಲುವಿಕೆ ಎತ್ತರ, ಅಂದಬಳಿಕ ಕೇಳುವದೇನು? ಆತನ ಸ್ತ್ರೀ ವೇಷವು ನೋಡುವವರಿಗೆ ಪಿಶಾಚಸ್ವರೂಪವಾಗಿ ತೋರಿ ಭಯವನ್ನುಂಟುಮಾಡುತ್ತಿತ್ತು. ಕಂಚುಕಿರಾಯನು ಸ್ತ್ರೀಯರ ಆಭರಣಗಳನ್ನೆಲ್ಲ ಹೇರಿ ಕೊಂಡಿದ್ದನು. ತನ್ನ ಬೆಲೆಯುಳ್ಳ ಸೀರೆ ಕುಪ್ಪಸಗಳಿಂದ ತನ್ನ ಸೌಂದರ್ಯಕ್ಕೆ ಕಳೆಯೇರುವದೆಂದು ತಿಳಿದಿದ್ದನು. ಆತನು ನಡೆಯಹತ್ತಲು, ಕಾಲೊಳಗಿನ ನೂಪುರಗಳ ಮಂಜುಲ ಧ್ವನಿಯು ಕಿವಿಗಳಿಗೆ ಇಂಪಾಗಿ ಕೇಳುವದು. ಆತನ ಬಡಕ ಮುಂಗೈಯೊಳಗಿನ ಬಳೆಗಳು ಬಡಿದಾಡಿ ಈ ವ್ಯಕ್ತಿಯು ಹೆಂಗಸೆಂದು ಸಾರುತ್ತಿದ್ದವು. ಕಂಚುಕಿರಾಯನು ಕನ್ನಡಿಯಲ್ಲಿ ತನ್ನ ರೂಪವನ್ನು ನೋಡಿ—''ಎಲ್ಲ ನೆಟ್ಟಗಾಗಿದೆ; ಆದರೆ ಈ ಕಲ್ಲಿಯ ಮೀಸೆಗಳಷ್ಟು ಅಸಡ್ಡಾಳಾಗಿ ಕಾಣುವವು. ನಮ್ಮಂಥವರಿಗೆ ಈ ಮೀಸೆಗಳು ಕೆಲಸದವಲ್ಲ. ಬಹುದಿವಸ ಬಾದಶಹನ ಜನಾನಖಾನೆಯಲ್ಲಿ ವ್ಯವಹರಿಸಿರುವ ನನಗೆ ಈ ಮಾತು ತಿಳಿಯಬೇಕಾಗಿತ್ತು. ಆಗಲಿ ಇಂಥ ಮಹತ್ವದ ಪ್ರಸಂಗದಲ್ಲಿ ಅಡ್ಡಬರುವ ಈ ಕೆಟ್ಟ ಮೀಸೆಗಳನ್ನು ನಾಳೆ ಬೆಳಗಾದ ಕೂಡಲೇ ಬೋಳಿಸಿಬಿಡುವೆನು. ಈಗ ಮೈತುಂಬ ಬುರುಕೆ ಹಾಕಿಕೊಂಡು ಗೋಷೆಯ ಬೀಬಿಯಾಗಿಬಿಟ್ಟರೆ ಎಲ್ಲ ಹುಳಕೂ ಮುಚ್ಚಿ ಹೋಗುವದು!

ಈ ಮೇರೆಗೆ ಆಲೋಚಿಸಿ ಕಂಚುಕಿರಾಯನು ಕಣ್ಣುಗಳ ಮಟ್ಟಿಗೆ ತೂತುಬಿಟ್ಟು ಮೈತುಂಬ ಬುರುಕೆ ಹಾಕಿಕೊಂಡು ರಣದುಲ್ಲಾಖಾನನನ್ನು ಸೆರೆಯಲ್ಲಿಟ್ಟಿರುವ ರಾಹುಟಿಯ ಕಡೆಗೆ ಸಾಗಿದನು. ಆ ಹೆಣ್ಣುಗರಳಿನ ಅರಸನು ವೇಷಕ್ಕೆ ಒಪ್ಪುವಂತೆ ಹೆಂಗಸರ ಹಾಗೆ ನೂಪುರದ

ಧ್ವನಿ ಮಾಡುತ್ತ ಒನಪಿನಿಂದ ನಡೆಯತೊಡಗಲು, ಅದನ್ನು ನೋಡಿ ಆತನ ಸೇವಕನಿಗೆ ಹುಚ್ಚು ನಗೆ ಬಂದಿತು! ಅವರಿಬ್ಬರು ಚಂಪತರಾಯನ ಪಾಳಯದ ಸನಿಯಕ್ಕೆ ಬರಲು, ಕಂಚುಕಿ ರಾಯನು ತನ್ನ ಸೇವಕನಿಗೆ—''ಇನ್ನು ನೀನು ಹೋಗು, ನಾನು ಯುಕ್ತಿಯಿಂದ ಒಳಗೆ ಹೋಗುವೆನು'' ಎಂದು ಹೇಳಿದನು. ಸೇವಕನು ಹೋಗಿ ಒತ್ತಟ್ಟಿಗೆ ಮರಿಗೆನಿಂತು ಮೋಜು ನೋಡಹತ್ತಿದನು. ಚಿಕ್ಕಂದಿನಿಂದ ದಿಲ್ಲಿಯ ಬಾದಶಹರ ಜನಾನಖಾನೆಯಲ್ಲಿ ವ್ಯವಹರಿಸಿದ್ದರಿಂದ ಕಂಚುಕಿರಾಯನಿಗೆ ಸ್ತ್ರೀಯರ ಹಾವ ಭಾವಗಳು, ಅವರ ಶೃಂಗಾರದ ರೀತಿಗಳು ಚನ್ನಾಗಿ ಗೊತ್ತಾಗಿದ್ದವು. ಸೇಲಿಮನ ಕಾಲದಲ್ಲಿ ಆತನು ಜನಾನಖಾನೆಯ ಕಂಚುಕಿ ಕೆಲಸವನ್ನು ಕೈಕೊಂಡು, ಶಹಾಜಾನನ ಕಾಲದವರೆಗೆ ಅಖಂಡ ಮೂವತ್ತು ವರ್ಷ ಬಾದಶಾಹಿ ರಂಗ ಮಹಾಲಿನಲ್ಲಿ ಏಕನಿಷ್ಠೆಯಿಂದ ಆತನು ಸೇವೆ ಮಾಡಿದ್ದನು. ಕಡೆಕಡೆಗೆ ಆತನು ಶಹಾಜಹಾನ ಬಾದಶಹನ ದರ್ಬಾರದ ಕಂಚುಕಿಯಾಗಲು, ಬಾದಶಹನು ಆತನನ್ನು ವಿನೋದದಿಂದ ''ಕಂಚುಕಿರಾಯ'' ಎಂದು ಕರೆಯತೊಡಗಿದ್ದನು. ಮುಂದೆ ಕುಂಚುಕರಾಯನು ಧಾರೀರದ ಅರಸನಾಗಲು, ತನ್ನ ಮೊದಲಿನ ಹೆಸರಿನಿಂದ ಕರೆಸಿಕೊಳ್ಳದೇ ಕಂಚುಕಿರಾಯನೆಂಬ ಹೆಸರಿ ನಿಂದಲೇ ಕರೆಸಿಕೊಳ್ಳಹತ್ತಿದನು!

ಸ್ತ್ರೀ ವೇಷಧಾರಿಯಾದ ಕಂಚುಕಿರಾಯನು ಚಂಪತರಾಯನ ಛಾವಣಿಯ ಬಾಗಿಲಿಗೆ ಹೋಗಲು, ಒಬ್ಬ ಕಾವಲುಗಾರನು—''ಯಾರವರು? ಇಷ್ಟು ರಾತ್ರಿಯಲ್ಲಿ ಇಲ್ಲಿ ಏಕೆ?'' ಎಂದು ಗದರಿಸಿದನು. ಆಗ ಕಂಚುಕಿರಾಯನ ಎದೆಯು ನಡುಗಿತು. ಆದರೂ ಧೈರ್ಯತಾಳಿ ಆತನು ಸ್ತ್ರೀಯರಂತೆ ದನಿತೆಗೆದು—''ಯಾಕೆ ನಾನು'' ಎಂದು ಹೇಳಿದನು. ಅದಕ್ಕೆ ಆ ಕಾವಲು ಗಾರರು— ''ಇಷ್ಟು ರಾತ್ರಿಯಲ್ಲಿ ಹೆಂಗಸರ ಕೆಲಸವೇನು. ಇದು ಮಹೋಬದ ಚಂಪತರಾಯರ ಛಾವಣಿಯೆಂಬದು ಗೊತ್ತಿಲ್ಲವೋ? ಆಗಲಿ, ನಮ್ಮ ಪ್ರಭುಗಳು ಪರಮ ಕೃಪಾಳುಗಳು. ನಿಮ್ಮಂತಹ ಹೆಂಗಸರಿಗೆ ಇಲ್ಲಿ ಯಾವತರದ ಭಯವೂ ಉಂಟಾಗದು; ಆದರೆ ನಿಮಗೆ ಏನಾಗಬೇಕು ಹೇಳಿರಿ. ನಿಮ್ಮ ಗೋಷೆಯನ್ನು ನೋಡಿದರೆ ನೀವು ದೊಡ್ಡ ಮನೆತನ ದವರಂತೆ ಕಾಣುತ್ತೀರಿ.''

ಕಂಚುಕಿರಾಯ—(ಆನಂದದಿಂದ ಉಬ್ಬಿ) ನಾನು ರಣದುಲ್ಲಾಖಾನರನ್ನು ಕಾಣ ಬೇಕಾಗಿದೆ. ನಾನು ಅವರ ಹತ್ತಗಡೆಯವಳು; ಚಂಪತರಾಯರ ಛಾವಣಿಯಲ್ಲಿ ಹೆಣ್ಣುಮಕ್ಕಳಿಗೆ ಯಾವ ತೊಂದರೆಯೂ ಒದಗದೆಂಬ ಧೈರ್ಯದಿಂದ ಖಾನಸಾಹೇಬರನ್ನು ಕಾಣಲಿಕ್ಕೆ ಬಂದಿದ್ದೇನೆ.

ಕಂಚುಕಿರಾಯನ ಈ ಮಾತುಗಳನ್ನು ಕೇಳಿ ಕಾವಲುಗಾರರು ತಮ್ಮ ತಮ್ಮೊಳಗೆ ಆಲೋಚಿಸಿದರು. ಬೀಬಿ ಸಾಹೇಬರು ತೀರ ಮುದುಕರಿರುವದರಿಂದ ಯಾವ ಬಗೆಯ ಬಾಧೆಯೂ ಅವರಿಂದ ತಟ್ಟದೆಂದು ತಿಳಿದು ಅವರನ್ನು ಒಳಗೆ ಬಿಡಬೇಕೆಂದು ನಿಶ್ಚಯಿಸಿ, ಕಂಚುಕಿರಾಯನನ್ನು ಒಳಗೆ ಹೋಗಗೊಟ್ಟರು. ಆಗ ಕಂಚುಕಿರಾಯನ ಆನಂದವು ಹೊಟ್ಟೆಯಲ್ಲಿ ಹಿಡಿಸಲೊಲ್ಲದು. ಇನ್ನು ತಾನು ರಣದುಲ್ಲಾಖಾನರನ್ನು ಕಂಡು ಅವರ ಕೈಕಾಲು

ಬಿದ್ದು—"ತಮ್ಮನ್ನು ಸೆರೆಯಲ್ಲಿಡುವದರಲ್ಲಿ ನನ್ನದಾಗಲೀ, ಹೀರಾದೇವಿಯದಾಗಲೀ ಅಂಗವಿಲ್ಲೆಂತಲೂ, ಈ ಎಲ್ಲ ಅನರ್ಥಕ್ಕೆ ಚಂಪತರಾಯನೂ, ಆತನ ಮಗ ಛತ್ರಸಾಲನೂ ಕಾರಣರೆಂ"ತಲೂ ಹೇಳಿ ಕ್ಷಮೆ ಬೇಡಿಕೊಂಡು ಗಂಡಾಂತರದಿಂದ ಪಾರಾಗಬೇಕೆಂದು ನಿಶ್ಚಯಿಸಿ, ಆತನು ರಣದುಲ್ಲಾಖಾನನ ರಾಹುಟಿಯನ್ನು ಹೊಕ್ಕನು. ಆಗ ಖಾನನು ಹಾಸಿಗೆಯಮೇಲೆ ಮಲಗಿದ್ದನು. ಅದೇ ಆತನಿಗೆ ನಿದ್ರೆಯು ಹತ್ತಿತ್ತು. ಸ್ತ್ರೀ ವೇಷಧಾರಿ ಕಂಚುಕಿರಾಯನು ಆತನ ಬಳಿಯಲ್ಲಿ ಹೋಗಿ ನಿಂತು ಕೊಂಡನು; ಆದರೆ ಖಾನಸಾಹೇಬರನ್ನು ಎಬ್ಬಿಸುವ ಧೈರ್ಯವು ಆತನಿಗೆ ಹೇಗಾಗಬೇಕು? ಆತನು ತನ್ನ ನೂಪುರಗಳ ಧ್ವನಿಮಾಡಿದನು; ಕಂಕಣಗಳ ಸಪ್ಪಳ ಕೇಳಿಸಿದನು; ಆದರೆ ಅದರಿಂದ ಖಾನನಿಗೆ ಎಚ್ಚರವಾಗಲಿಲ್ಲ. ಇನ್ನೇನು ಮಾಡಬೇಕೆಂದು ಯೋಚಿಸಿ ಕಂಚುಕಿರಾಯನು ರಣದುಲ್ಲಾಖಾನನ ಕಾಲದೆಸೆಯಲ್ಲಿ ಕುಳಿತು ಕಾಲು ಒತ್ತಹತ್ತಿದನು. ತನ್ನ ಕಾಲಮೇಲಿಂದ ಯಾವುದೋ ಹುರಬರಕ ಮೈಯ ಪ್ರಾಣಿಯು ಹರಿದು ಹೋಗುತ್ತದೆಂದು ತಿಳಿದು ರಣದುಲ್ಲಾಖಾನನು ನಿದ್ರೆಗಣ್ಣಿನಲ್ಲಿ ಝಾಡಿಸಿ ಒದ್ದನು. ಆ ಕುಸುವಿನ ಒದಿಕೆಯು ವೃದ್ಧ ಕಂಚುಕಿರಾಯನ ಎದೆಗೆ ಬೀಳಲು, ಆತನು ಕೆಟ್ಟದನಿಯಿಂದ ಕೂಗಿ ನೆಲಕ್ಕೆ ಅಂಗಾತ ಕಡಕೊಂಡು ಬಿದ್ದನು! ಮೊದಲ ಅರ್ಧಮರ್ಧ ಎಚ್ಚತ್ತಿದ್ದ ರಣದುಲ್ಲಾಖಾನನು ಕಂಚುಕಿರಾಯನ ಕೆಟ್ಟಕೂಗಿನಿಂದ ಪೂರಾ ಎಚ್ಚತ್ತು ಹಾಸಿಗೆಯಮೇಲೆ ಎದ್ದು ಕುಳಿತು ಕೊಂಡನು.

ರಾಹುಟಿಯಲ್ಲಿ ದೀಪದ ಪ್ರಕಾಶ ತೀರ ಮಂದವಾಗಿ ಇದ್ದಿತು. ಕಂಚುಕಿರಾಯನ ಹೃದಯದ್ರಾವಕವಾದ ಆ ಕೆಟ್ಟ ಕೂಗನ್ನು ಕೇಳಿ ರಣದುಲ್ಲಾಖಾನನಿಗೆ ಆಶ್ಚರ್ಯವಾಯಿತು. ಬರಬರುತ್ತ ಆತನ ಆಶ್ಚರ್ಯವು ಭೀತಿಯ ಸ್ವರೂಪವನ್ನು ಹೊಂದಹತ್ತಿತ್ತು. ಮಧ್ಯರಾತ್ರಿಯ ಪ್ರಸಂಗವು, ಅರಣ್ಯದವಾಸ, ಭೂತ–ಪಿಶಾಚಿಗಳ ಸಂಚಾರದ ಕಾಲ, ಮೇಲೆ ನಾಲ್ಕೂ ಕಡೆಯಲ್ಲಿ ಸ್ತಬ್ಧತೆ! ಇವೆಲ್ಲ ಸಂಗತಿಗಳು ಒಮ್ಮೆಲೇ ರಣದುಲ್ಲಾಖಾನನ ಮನಸ್ಸಿನಲ್ಲಿ ಬಂದು ಬಿಟ್ಟವು. ಆತನು ಹಲವು ಯುದ್ಧ ಪ್ರಸಂಗಗಳಲ್ಲಿ ತನ್ನ ಖಡ್ಗದ ಪ್ರತಾಪವನ್ನು ತೋರಿಸಿದ್ದನು; ಆದರೆ ಈಗ ತನ್ನ ಆ ಖಡ್ಗದ ಉಪಯೋಗವು ಆದೀತೆಂದು ಆತನಿಗೆ ತೋರಲೊಲ್ಲದು. ಆತನು ತರುಣನಿದ್ದನು, ಧೈರ್ಯಶಾಲಿಯಿದ್ದನು, ಬಲಿಷ್ಠನಿದ್ದನು; ಆದರೆ ಅವೆಲ್ಲ ಕಣ್ಣಿಗೆ ಕಾಣುವ ಮೂರ್ತವಸ್ತುಗಳ ಮೇಲೆ, ಅಥವಾ ಪ್ರಾಣಿಗಳ ಮೇಲೆ ನಡೆಯಬಹುದಲ್ಲದೆ, ಸೈತಾನನ ಅದೃಶ್ಯಾಕೃತಿಗಳ ಮೇಲೆ ಅವು ಹೇಗೆ ನಡೆಯುವವೆಂದು ಆತನು ಅಂಜಿ ನಾಲ್ಕೂ ಕಡೆಗೆ ನೋಡಹತ್ತಿದನು. ರಾಹುಟಿಯ ಹೊರಗೆ ಕಾವಲುಗಾರರು ಕಾಯುತ್ತಿರುವರೆಂಬದು ಆತನಿಗೆ ಗೊತ್ತಿತ್ತು. ಆ ಕೆಟ್ಟ ಕೂಗು ಅವರಿಗೆ ಕೇಳಿಸಿತೇ ನೆಂದು ಕೇಳುವದಕ್ಕಾಗಿ ಹೊರಗೆ ಹೋಗಬೇಕೆಂದು ಹೊರಟನು; ಆದರೆ ಕಾಲಿಗೆ ಏನೋ ಹತ್ತಿದ ಹಾಗಾಗಲು, ಆತನು ಕೆಳಗೆ ನೋಡಿ ಭಯದಿಂದ—"ಸೈತಾನ! ಸೈತಾನ!" ಎಂದು ಅಂಜಿ ಕೆಟ್ಟದನಿಯಿಂದ ಕೂಗುತ್ತ ನಾಲ್ಕು ಹೆಜ್ಜೆ ಹಿಂದಕ್ಕೆ ಸರಿದು ನಿಂತನು.

ಇತ್ತ ಕಂಚುಕಿರಾಯನು ಅಷ್ಟರಲ್ಲಿ ಎಚ್ಚತ್ತು ''ತಾನು ಹೀಗೆ ಅಸ್ತವ್ಯಸ್ತವಾಗಿ ಏನು ಬಿದ್ದೆನಲ್ಲ'' ಎಂದು ಪಶ್ಚಾತ್ತಾಪಪಡುತ್ತ ಮೇಲಕ್ಕೆ ನೋಡಲು, ತನ್ನ ಆರಾಧ್ಯ ದೈವತವು ಅಂಜಿ ಮೋರೆಯ ಮೇಲೆ ಚಿವುಟಿದರೆ ರಕ್ತವಿಲ್ಲದ್ದಾಗಿ ನಿಂತುಕೊಂಡಿತ್ತು. ಆಗ ಕಂಚುಕಿರಾಯನು ಗಡಬಡಿಸಿ ಎದ್ದುನಿಂತು ಕೈಜೋಡಿಸಿ—ಸರಕಾರ, ಏನಾದರೂ ತಮ್ಮ ಸೇವೆಯು ನನಗೆ ಲಭಿಸಬೇಕೆಂದು ಇಲ್ಲಿಗೆ ಬಂದಿರುವೆನು.

ರಣದುಲ್ಲಾಖಾನನು ಆ ವಿಲಕ್ಷಣ ರೂಪವನ್ನು ನೋಡಿ ಮತ್ತಿಷ್ಟು ಅಂಜಿದನು. ಆ ಅಸಡ್ಡಾಳಾದ ಸ್ತ್ರೀವೇಷ, ಆ ಕೆಟ್ಟ ಕಲ್ಲಿಯ ಮೀಸೆ, ಅಸ್ಥಿಪಂಜರದಂತೆ ಇದ್ದ ಆ ಬಡಕದೇಹ. ಇದನ್ನೆಲ್ಲ ಏಕಾಂತ ಮಧ್ಯರಾತ್ರಿಯಲ್ಲಿ ಆಕಸ್ಮಾತ್ ನೋಡಿ ಯಾರು ಅಂಜಲಿಕ್ಕಿಲ್ಲ? ರಣದುಲ್ಲಾ ಖಾನನು ಕಂಚುಕಿರಾಯನ ಆ ವಿನಯದ ಮಾತುಗಳನ್ನು ಕೇಳಿ ಮತ್ತಿಷ್ಟು ಅಂಜಿ —''ಕ್ಷಮಿಸು! ಸೈತಾನ! ನನ್ನನ್ನು ಕ್ಷಮಿಸು! ನನ್ನಿಂದಾಗಲಿ ನನ್ನ ವಂಶದವರಿಂದಾಗಲಿ ಏನಾದರೂ ಅಪರಾಧ ವಾಗಿದ್ದರೆ ಅದಕ್ಕಾಗಿ ನಾನು ಈಗ ನಿನಗೆ ಕೈಜೋಡಿಸಿ ಕ್ಷಮೆ ಬೇಡುವೆನು'' ಎಂದು ನುಡಿದನು. ಖಾನನ ಈ ಪ್ರಾರ್ಥನೆಯನ್ನು ಕೇಳಿ ಕಂಚುಕಿರಾಯನು ಅಸಮಾಧಾನಪಟ್ಟು ಮನಸ್ಸಿನಲ್ಲಿ —''ನಾನು ಕಂಚುಕಿರಾಯನೆಂದು ಮೊದಲೇ ಹೇಳಿದ್ದರೆ ಖಾನರು ನನ್ನನ್ನು ಹೀಗೆ ಪ್ರಾರ್ಥಿಸುತ್ತಿದ್ದಿಲ್ಲ. ಬಹಳ ತಪ್ಪುಮಾಡಿದೆನು. ಅವರು ನನ್ನನ್ನು ಚಂಪತ ರಾಯನೆಂದಾಗಲಿ, ಆತನ ಪಕ್ಷದ ಯಾರಾದರೂ ಒಬ್ಬರೆಂದಾಗಲಿ ತಿಳಿದಿರಬಹುದಾದ್ದರಿಂದ, ಹೀಗೆ ''ಸೈತಾನ, ಸೈತಾನ'' ಎಂದು ಅನ್ನುತ್ತಿರುವರು; ಆದ್ದರಿಂದ, ಈಗಾದರೂ ನನ್ನ ಹೆಸರನ್ನು ಹೇಳಬೇಕೆಂದು ತಿಳಿದು ಆತನು –

ಕಂಚುಕಿರಾಯ —ಖಾನಸಾಹೇಬ, ನಾನು ಸೈತಾನನಲ್ಲ. ತಮ್ಮ ಚರಣಸೇವಕನಾದ ಕಂಚುಕಿರಾಯನು. ಧಾರೀರದ ರಾಜನು! ತಮ್ಮ ಚರಣ ಧೂಳಿಯು ಒಮ್ಮೆ ನನ್ನ ಅರಮನೆ ಯಲ್ಲಿ ಬಿದ್ದಿತ್ತು!

ರಣದುಲ್ಲಾ—ಏನು? ನೀನು ಸೈತಾನನಲ್ಲವೇ? ಧಾರೀರದ ರಾಜನಾದ ಕಂಚುಕಿರಾಯನೇ?

ಮೆಲ್ಲಮೆಲ್ಲನೆ ರಣದುಲ್ಲಾಖಾನನಿಗೆ ಕಂಚುಕಿರಾಯನ ಗುರುತು ಹತ್ತಹತ್ತಿತು. ಆತನು ಕಂಚುಕಿರಾಯನ ಗುರುತನ್ನು ಚನ್ನಾಗಿ ಹಿಡಿದನು. ಆತನ ಭಯವು ದೂರವಾಯಿತು. ಆತನು ಪ್ರಸನ್ನವದನದಿಂದ ಕಂಚುಕಿರಾಯನನ್ನು ಕುರಿತು—

ರಣದುಲ್ಲಾ—(ನಗುತ್ತ) ಕಂಚುಕಿರಾಯ, ನೀನು ನನ್ನನ್ನು ಒಳಿತಾಗಿ ಅಂಜಿಸಿದೆ ಬಿಡು! ನೀನು ಇಂಥ ವಿಚಿತ್ರವೇಷ ಧರಿಸಲಿಕ್ಕೆ ಕಾರಣವೇನು?

ಕಂಚುಕಿರಾಯ—ಸರಕಾರದ ಸೇವಾ! ಬೇರೆ ಕಾರಣವೇನಿರಬೇಕು? ಬಾದಶಹರ, ಅಥವಾ ಅವರ ಪರಿವಾರದವರ ಸೇವೆಯ ಪ್ರಸಂಗಬಂದರೆ ಆ ಸುಪ್ರಸಂಗವನ್ನು ನಾವು ಹೇಗೆ ವ್ಯರ್ಥಮಾಡಿಕೊಂಡೇವು?

ರಣದುಲ್ಲಾ—ನಾನು ಇಲ್ಲಿ ಚಂಪತರಾಯನ ಸೆರೆಯಾಳಾಗಿ ಬಿದ್ದಿರುವೆನೆಂಬದನ್ನು ಕುರಿತು ನೀನು ವಿಚಾರಮಾಡಬಾರದೇನು? ಕಂಚುಕಿರಾಯಾ ನಿನಗೆ ಬುದ್ಧಿಯು ಸ್ವಲ್ಪವೂ ಇಲ್ಲವಲ್ಲ! ನೀನು ಪ್ರಬಲಧಾರೀರದ ರಾಜನಿರುತ್ತೀ; ಆದರೆ ನೂರಾರುಜನ ಸೈನಿಕರೊಡನೆ ಬಂದು ಈ ಭಾವಣೆಯ ಮೇಲೆ ಬಿದ್ದು ಶೌರ್ಯದಿಂದ ನನ್ನನ್ನು ಬಿಡಿಸಿಕೊಂಡು

ಹೋಗಬಾರದಾಗಿತ್ತೆ? ಅದನ್ನು ಬಿಟ್ಟು ನನ್ನ ಸೇವೆಯನ್ನು ಈಗ ನೀನು ಏನುಮಾಡುತ್ತೀ, ನೀನು ಬಾದಶಹನ ಜನಾನಖಾನೆಯಲ್ಲಿ ಬೆಳೆದ ಕಂಚುಕಿಯು! ನಿನ್ನಿಂದ ಪರಾಕ್ರಮದ ಕೆಲಸವು ಹೇಗಾಗಬೇಕು? ಕಂಚುಕಿರಾಯ, ನನ್ನ ಈ ಮಾತು ನಿಜವಷ್ಟೇ?

ಕಂಚುಕಿರಾಯ—(ನಿರ್ಲಜ್ಜನಾಗಿ) ಅದರಲ್ಲಿ ಸಂಶಯವೇನು? ಸರದಾರ ಸಾಹೇಬರ ನನ್ನ ಸ್ವಭಾವದ ನಿಜವಾದ ಪರೀಕ್ಷೆ ಮಾಡಿದಿರಿ. ನನ್ನ ಹೆಂಡತಿಯೇ ನನ್ನನ್ನು ಹೆಂಗಸೆಂದು ಕರೆಯುವಷ್ಟು ನಾನು ಹೇಡಿಯಾಗಿದ್ದೇನೆ. ಅಂದಬಳಿಕ ನನ್ನಿಂದ ಯುದ್ಧಮಾಡುವ ಕೆಲಸವು ಹೇಗಾಗಬೇಕು? ಅದನ್ನೊಂದುಬಿಟ್ಟು ಉಳಿದ ಬೇಕಾದ ಸೇವೆಯನ್ನು ಹೇಳಿರಿ, ಅದನ್ನು ನಿಮ್ಮ ಅಂತಃಪುರದ ಸ್ತ್ರೀಯರಿಗಿಂತ ಹೆಚ್ಚು ಕೌಶಲ್ಯದಿಂದ ಮಾಡುವೆನು.

ರಣದುಲ್ಲಾ—(ನಕ್ಕು) ಓ ಶೈಯದು, ಈ ಗುರುತಿನ ಕಠಾರಿಯನ್ನು ಹಿಡಿ.

ರಣದುಲ್ಲಾಖಾನನು ಕೊಟ್ಟ ಕಠಾರಿಯನ್ನು ತಕ್ಕೊಂಡು ಕಂಚುಕಿರಾಯನು ಅದಕ್ಕೆ ಮುದ್ದಿಟ್ಟನು. ಆಗ ರಣದುಲ್ಲಾಖಾನನು ಆತನನ್ನು ಕುರಿತು—"ಕಂಚುಕಿರಾಯ, ಈ ಕಠಾರಿಯನ್ನು ನಿನಗೆ ಉಚಿತವಾಗಿ ಕೊಟ್ಟಿರುವದಿಲ್ಲ, ಗುರುತಿಗಾಗಿ ಕೊಟ್ಟಿರುತ್ತೇನೆ. ಇದನ್ನು ತಕ್ಕೊಂಡು ನೀನು ದಿಲ್ಲಿಯ ಬಾದಶಹರ ಬೇಕಾದ ಗುಪ್ತಸ್ಥಳಕ್ಕೆ ಹೋದರೂ ಅಲ್ಲಿ ನಿನ್ನ ಪ್ರವೇಶವಾಗುವದು; ಮತ್ತು ಪ್ರವೇಶಮಾಡಿದ ನೀನು ಇದನ್ನು ತೋರಿಸಿದಕೂಡಲೆ ಸುಲಭವಾಗಿ ಆ ಗುಪ್ತಸ್ಥಳದಿಂದ ಹೊರಗೆ ಬರುತ್ತೀ. ಈಗ ನೀನು ಇದನ್ನು ತಕ್ಕೊಂಡು ದಿಲ್ಲಿಗೆ ಹೋಗಿ, ಇಲ್ಲಿ ನಡೆದ ಸಂಗತಿಯನ್ನೆಲ್ಲ ಹೇಳು. ಬುಂದೇಲಖಂಡದ ಇಬ್ಬರು ಉಡಾಳ ಹುಡುಗರು ತೋರಿಸಿದ ಎಟ್ಟಿತನವನ್ನೂ, ಅದಕ್ಕಾಗಿ ಹುಡುಗರನ್ನೂ ದಂಡಿಸದೆ ಚಂಪತರಾಯನು ನನ್ನನ್ನು ಸೆರೆಯಲ್ಲಿಟ್ಟಿದ್ದನ್ನು ಒಂದುಳಿಯದಂತೆ ಹೇಳು. ಹಿಂದುಗಳ ದೇವಾಲಯಗಳನ್ನು ಕೆಡಿಸುವದಿಲ್ಲವೆಂದು ಬಾದಶಹನು ವಚನ ಕೊಡುವವರೆಗೆ ನನ್ನನ್ನು ಬಿಡುವದಿಲ್ಲವೆಂದು ಚಂಪತರಾಯನು ನಿಶ್ಚಯ ಮಾಡಿರುವದನ್ನೂ ತಿಳಿಸು.

ಕಂಚುಕಿರಾಯ—ಇಷ್ಟು ಹೇಳಿದರೆ ನಿಶ್ಚಯವಾಗಿ ನಿಮ್ಮ ಬಿಡುಗಡೆಯಾಗುವದಷ್ಟೇ?

ರಣದುಲ್ಲಾ—ಅದರ ಯೋಚನೆ ಬೇಡ. ದಿಲ್ಲಿಯ ದರ್ಬಾರಕ್ಕೆ ತನ್ನ ಯೋಗ್ಯತೆಯ ಅಭಿಮಾನವಿದೆ. ನೀನು ನಿನ್ನ ಕೆಲಸವನ್ನು ದಕ್ಷತೆಯಿಂದ ಕೊನೆಗಾಣಿಸೆಂದರಾಯಿತು.

ಕಂಚುಕಿರಾಯ—ಖಾವಂದರಿಗೆ ಅದರ ಚಿಂತೆಬೇಡ. ಇನ್ನು ನನಗೆ ಅಪ್ಪಣೆ ಕೊಡಬೇಕು.

ರಣದುಲ್ಲಾಖಾನ—(ನಗುತ್ತ) ನೀವು ಹಿಂದೂಜನರು ಮೂರ್ಖರು; ಅದರಲ್ಲಿ ನಿಮ್ಮಂಥ ಅರಸರು ಶೀರಾ ತಿಳಿಗೇಡಿಗಳಾಗಿರುವಿರಿ! ನಿಮ್ಮ ಪಾಲಿಗೆ ವಿಚಾರದ ಅಂಶವೂ ಬಂದಿರುವದಿಲ್ಲ. ಇಷ್ಟುದಿವಸ ಬಾದಶಹರ ಸೇವಾಚಾಕರಿ ಮಾಡಿದ ನಿನಗೆ, ಹೇಳಿದ ಸೇವೆಯನ್ನು ಸರಿಯಾಗಿ ಮಾಡಲಿಕ್ಕೂ ಬರಬಾರದೇನು?

ಕಂಚುಕಿರಾಯ—(ಗಾಬರಿಯಾಗಿ) ಖಾನಸಾಹೇಬರ ಸೇವೆಯಲ್ಲಿ ಏನು ತಪ್ಪಾಯಿತು?

ರಣದುಲ್ಲಾ—ನೀನೆಂತಹ ರಾಜನು, ಇಸ್ಪೇಟಿನೊಳಗಿನ ರಾಜನೇ ಸರಿ! ಅಲ್ಲೋ ಕಂಚುಕಿರಾಯಾ, ಕಠಾರಿಯನ್ನು ತಕ್ಕೊಂಡೆ; ಏನು ಹೇಳಬೇಕೆಂಬದನ್ನು ಪೂರ್ಣವಾಗಿ ಕೇಳಿ ಕೊಂಡೆ; ಆದರೆ ಯಾರಿಗೆ ಸುದ್ದಿಯನ್ನು ಹೇಳಬೇಕೆಂಬದನ್ನು ಕೇಳಿಕೊಳ್ಳುವಷ್ಟು ಮೇಲು ಬುದ್ಧಿಯೂ ನಿನಗಿರಬಾರದೇನು? ಕೌಲೆತ್ತನ ಹಾಗೆ ಹೊರಟುಬಿಟ್ಟೆ.

ಕಂಚುಕಿರಾಯ—(ಅತ್ಯಂತ ಅಭಿಮಾನದಿಂದ) ಖಾನಸಾಹೇಬ, ದಿಲ್ಲಿಯ ದರ್ಬಾರದ ವಿಷಯದಲ್ಲಿ ನಾನು ಅಷ್ಟು ತಿಳಿಗೇಡಿಯೆಂದು ನೀವು ತಿಳಿಯುವಿರೇನು? ಅಲ್ಲಿ ನಾನು ಮೂವತ್ತು ವರ್ಷ ಸೇವೆ ಮಾಡಿದ್ದೇನೆ ಮೂವತ್ತು ವರ್ಷ! ನನ್ನಷ್ಟು ಅದಾವ ಅರಸನು ದರ್ಬಾರವನ್ನು ತುಳಿದಿದ್ದಾನೆ? ಇಂಥ ನನಗೆ ಈ ಸುದ್ದಿಯನ್ನು ಬಾದಶಹರಿಗೆ ಹೇಳಬೇಕೆಂಬದು ತಿಳಿದಿರಲಿಕ್ಕಿಲ್ಲವೆ? ಖಾನಸಾಹೇಬರು ನನ್ನನ್ನು ಕತ್ತೆಯನ್ನಾಗಿ ಮಾಡಿಬಿಟ್ಟಿರಲ್ಲ!

ರಣದುಲ್ಲಾ—ಬರಿಯ ಕತ್ತೆಯಲ್ಲ-ಹೆಸರಕತ್ತೆಯು! ಅಲಮಗೀರ ಬಾದಶಹನು ಈಗ ಬೇನೆಯಿಂದ ಸಾಯಲಾಗಿ ಹಾಸಿಗೆ ಹಿಡಿದಿದ್ದಾನೆ. ಆತನ ಆರೈಕೆಯನ್ನು ಆತನ ತಂಗಿಯೂ, ಶಹಾಜಹಾನ ಬಾದಶಹನ ಪ್ರೀತಿಯ ಮಗಳೂ ಆದ ರೋಷನಾರ ಬೇಗಮೆಯು ಮಾಡುತ್ತಿರುವಳು. ಆಕೆಯ ನೂರಾರುಜನ ತಾರ್ತರ ಸ್ತ್ರೀಯರು ಬಾದಶಹನ ಸುತ್ತಲೂ ಶಸ್ತ್ರಹಿಡಿದು ಕಾಯುತ್ತಲಿದ್ದಾರೆ. ಅಂದಬಳಿಕ ಬಾದಶಹರ ಕಡೆಗೆ ಹೋಗುವದರಿಂದಾಗುವ ಪ್ರಯೋಜನವೇನು? ನೀನು ರೋಷನಾರ ಬೇಗಮಳನ್ನು ಕಾಣಬೇಕಾಗುವದು. ಆಕೆಯು ಇಂದಿಗೆ ದಿಲ್ಲಿಯ ಅನಭಿಷಿಕ್ತ ರಾಣಿಯಾಗಿದ್ದಾಳೆ. ದರ್ಬಾರದ ಎಲ್ಲ ಕೆಲಸಗಳು ಆಕೆಯ ಅಪ್ಪಣೆಯಿಂದಲೇ ನಡೆಯುತ್ತಿರುವವು. ಬಾದಶಹರ ಶಿಕ್ಕಾ-ಮೋರ್ತಬುಗಳು ಆಕೆಯ ಬಳಿಯಲ್ಲಿರುತ್ತವೆ. ಆಕೆಯ ಅಪ್ಪಣೆಯಿಂದಲೇ ನಾನು ಇಲ್ಲಿಗೆ ಬಂದಿರುತ್ತೇನೆ. ಆಕೆಯೇ ನನ್ನ ಬಿಡಗಡೆಯನ್ನು ಮಾಡುವಳು.

ಕಂಚುಕಿರಾಯ-ಸರದಾರಸಾಹೇಬ,

ಈಮೇರೆಗೆ ಕಂಚುಕಿರಾಯನು ಏನೇನೋ ಮಾತಾಡಬೇಕೆನ್ನುತ್ತಿರುವಷ್ಟರಲ್ಲಿ ದೂರದಲ್ಲಿ ಚಂಪತರಾಯನು ಕರ್ಕಶಸ್ವರದಿಂದ—''ಖಬರದಾರ, ಒಂದು ಅಕ್ಷರವನ್ನುಚ್ಚರಿಸಿದರೆ ನಿನ್ನ ದೇಹದೊಡನೆ ನಿನ್ನ ನಾಲಿಗೆಯನ್ನು ಚೂರುಚೂರು ಮಾಡಿ ಚಲ್ಲೇನು! ಯಾವ ಅಧಮನು ನೀನು? ಚಂಪತರಾಯನ ಛಾವಣಿಯಲ್ಲಿ ಬಂದು ಫಿತೂರಿ, ದಗಲ್‌ಬಾಜಿ, ವಿಶ್ವಾಸ ಘಾತಗಳನ್ನು ನಡೆಸಿರುವಿಯೇನು? ಸೌಭಾಗ್ಯಸಿಂಹ, ಈ ಮುದುಕಿಯನ್ನು ಯಾರ ಅಪ್ಪಣೆ ಯಿಂದ ಒಳಗೆ ಬಿಟ್ಟೆ?

ಸೌಭಾಗ್ಯಸಿಂಹ—(ಅಂಜುತ್ತಂಜುತ್ತ) ಮಹಾರಾಜ, ಕ್ಷಮಿಸಬೇಕು.

ಈ ಮೇರೆಗೆ ನುಡಿಯುತ್ತಿರಲು ಚಂಪತರಾಯನು ಮುಂದೆ ಮಾತಾಡಗೊಡದೆ-

ಚಂಪತರಾಯ—ನಿಮ್ಮ ಕಾರಣವನ್ನು ಹಿಂದಿನಿಂದ ಕೇಳೋಣ. ಮೊದಲು ಈ ಮುದುಕಿಯು ಯಾರು? ಇಲ್ಲಿಗೆ ಯಾಕೆ ಬಂದಳೆಂಬದು ನನಗೆ ತಿಳಿಯಬೇಕಾಗಿರುವದು. ಈಕೆಯು ಇಲ್ಲಿಗೆ ಬಂದು ಒಂದು ಗಳಿಗೆಯಂತು ಆಗಿರಬೇಕು. ಆಗಿನಿಂದ ನಾನು ಯಾರು ಮಾತಾಡುತ್ತಿರುವರೆಂಬದನ್ನು ಶೋಧಿಸುತ್ತಲೇ ಇದ್ದೇನೆ. ಏ ಮುದುಕೀ, ನೀನು ಯಾರು?

ಕಂಚುಕಿರಾಯನ ಮನಸ್ಸಿನಲ್ಲಿ ಉತ್ತರಕೊಡಬೇಕೆಂದಿದ್ದರೂ, ಆತನ ಬಾಯಿಂದ ಅಕ್ಷರಗಳೇ ಹೊರಡಲೊಲ್ಲವು. ಅಷ್ಟರಲ್ಲಿ ಚಂಪತರಾಯನು—''ಸೌಭಾಗ್ಯಸಿಂಹ, ಈಕೆ ಒಳ್ಳೆಯ ಮಾತಿನಿಂದ ಮಾತಾಡಲಿಕ್ಕಿಲ್ಲ ಸ್ವಲ್ಪ ಸಮಾಚಾರ ತೆಗೆದುಕೋ,'' ಎಂದು ಹೇಳಲು, ಸೌಬಾಗ್ಯಸಿಂಹನು ಮುಂದಕ್ಕೆ ಬಂದನು. ಆಗ ಕಂಚುಕಿರಾಯನು, ತಡೆಯುತ್ತ ತಡೆಯುತ್ತ ''ಚಂಪತರಾಯ, ನಾನು ಕಂಚುಕಿರಾಯನು, ಧಾರೀರದ ಅರಸು'' ಎಂದು ಹೇಳಿದನು. ಅದನ್ನು ಕೇಳಿ ಎಲ್ಲರೂ ಆಶ್ಚರ್ಯದಿಂದ ಆ ವಿಚಿತ್ರ ವೇಷದ ಕಂಚುಕಿರಾಯನ ಕಡೆಗೆ ನೋಡಹತ್ತಿದರು. ರಣದುಲ್ಲಾಖಾನನು ಚಿಂತೆಯಿಂದ ಅವರ ಕಡೆಗೆ ನೋಡುತ್ತಲಿದ್ದನು! ಆಗ ಚಂಪತರಾಯನು ಕಂಚುಕಿರಾಯನಿಗೆ—''ನೀನೆಂತಹ ರಾಜನು, ರಾಜ್ಯಪದದ ಅಭಿಲಾಷೆ ಯುಳ್ಳ ಪಿಶಾಚನು';' ಎಂದು ನುಡಿದನು. ಖಾನನಿಗೆ ರಾಜನ ಮಾತು ಯೋಗ್ಯವಾಗಿ ತೋರಿತು.

## ಅಪಘಾತ!

ಶ್ರೀವಿಂಧ್ಯವಾಸಿನಿಯ ವಾರ್ಷಿಕೋತ್ಸವವು ಮುಗಿದದ್ದರಿಂದ ಎಲ್ಲ ಅರಸರೂ ತಮ್ಮ ತಮ್ಮ ರಾಜಧಾನಿಗಳಿಗೆ ಹೋಗತೊಡಗಿದರು. ಕಂಚುಕಿರಾಯನು ತನ್ನ ಮಗಳಾದ ವಿಜಯೆಯನ್ನು ಓರಛಾದ ರಾಣಿಯಾದ ಹೀರಾದೇವಿಯೊಡನೆ ಆಕೆಯ ರಾಜಧಾನಿಗೆ ಕಳಿಸಿ, ತಾನು ಹೀರಾದೇವಿಯ ಅಪ್ಪಣೆಯಂತೆ ರಣದುಲ್ಲಾಖಾನನ ಸುದ್ದಿಯನ್ನು ತಿಳಿಸಲಿಕ್ಕೆ ದಿಲ್ಲಿಗೆ ಹೋದನು; ಅದರಿಂದ ಆತನ ಮಗಳಾದ ವಿಜಯೆಗೆ ವಿಮಲದೇವನ ಸಹವಾಸವು ಅನಾಯಾಸವಾಗಿ ಪ್ರಾಪ್ತವಾಗಿ, ಅವರಿಬ್ಬರು ಆನಂದದಿಂದ ಮಾರ್ಗವನ್ನು ಕ್ರಮಿಸತೊಡಗಿದರು. ವಿಜಯಾ—ವಿಮಲದೇವರು ಒಬ್ಬರನ್ನೊಬ್ಬರು ಬಹಳವಾಗಿ ಪ್ರೀತಿಸುತ್ತಿದ್ದರು. ಅಣ್ಣ–ತಂಗಿಯರಾಗಿ ನಡೆದುಕೊಳ್ಳುತ್ತಿದ್ದ ಅವರಿಬ್ಬರು ಕೂಡಿ ವನಪುಷ್ಪಗಳ ಮಾಲೆಮಾಡಿ ಶ್ರೀವಿಂಧ್ಯವಾಸಿನಿಯ ಕೊರಳಿಗೆ ಹಾಕಿದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಹೀಗೆ ಯಾವಕಾಲದಲ್ಲಾದರೂ ಅವರಿಬ್ಬರು ಕೂಡಿ ಇರುವದೇ ಬಹಳ. ಹೀರಾದೇವಿಯು ಮಾರ್ಗವನ್ನು ಕ್ರಮಿಸುತ್ತ ಮಹೋಬಕ್ಕೆ ಮುಟ್ಟಿದಳು. ವಾಸ್ತವವೆಂದರೆ ಆಕೆಯು ತಮ್ಮ ಆಪ್ತನೂ, ತಮಗೆ ಉಪಕಾರಮಾಡಿದವನೂ ಆದ ಚಂಪತರಾಯ ನಲ್ಲಿಗೆ ಹೋಗಬೇಕಾಗಿತ್ತು; ಆದರೆ ಹೀರಾದೇವಿಯು ಚಂಪತರಾಯನನ್ನು ಬಹಳವಾಗಿ ದ್ವೇಷಿಸುತ್ತಿದ್ದದ್ದರಿಂದ, ಆತನ ಮನೆಗೆ ಹೋಗದೆ ಮದನಸರೋವರದ ದಂಡೆಯ ಮೇಲೆ ಒಂದು ಪ್ರಶಸ್ತ ಸ್ಥಳನೋಡಿ ಇಳಿದುಕೊಂಡಳು! ಆಕೆಗೆ ಈಗ ಚಂಪತರಾಯನನ್ನೂ ಕಾಣಲಿಕ್ಕೂ ಮನಸ್ಸಾಗಲಿಲ್ಲ, ಪಹಾರಸಿಂಗನಂತು ಹೆಂಡತಿಯ ಮಾತು ಮೀರದವನು! ಕ್ಷುದ್ರರ ದ್ವೇಷಬುದ್ಧಿಯ ರೀತಿಯೇ ಹೀಗೆ!

ಹೀಗೆ ಹೀರಾದೇವಿಯು ಮದನಸರೋವರದ ದಂಡೆಯಲ್ಲಿ ವಸತಿಮಾಡಿರುವಾಗ ವಿಜಯಾ—ವಿಮಲದೇವರು ಇಳಿಹೊತ್ತಿನಲ್ಲಿ ಸರೋವರದ ಶೋಭೆಯನ್ನು ನೋಡುತ್ತ ಅದರ ದಂಡೆಯ ಮೇಲೆ ಸಂಚರಿಸತೊಡಗಿದರು. ಮದನಸರೋವರವು ಬಹು ರಮ್ಯವಾದದ್ದು; ಬುಂದೇಲಖಂಡದಲ್ಲಿ ಅಂತಹ ಸರೋವರಗಳು ಹಲವು ಇದ್ದರೂ, ಅವುಗಳಲ್ಲಿ ಒಂದಾದರೂ ಶೋಭೆಯಲ್ಲಿ ಮದನಸರೋವರವನ್ನು ಸರಿಗಟ್ಟುವಂತೆ ಇದ್ದಿಲ್ಲ. ಸೊಗಸುಗಾರರು ವಿಹರಿಸುವದಕ್ಕಾಗಿ ಅಲ್ಲಿ ಸಣ್ಣ ಸಣ್ಣ ಎಷ್ಟೋ ಡೋಣಿಗಳು ದಂಡೆಯಲ್ಲಿ ಕಟ್ಟಿದ್ದವು. ಇಳಿಹೊತ್ತು ಆದ ಆದಂತ ಎಷ್ಟೋ ಜನ ಸೊಗಸುಗಾರರು ಒಂದೊಂದು ಡೋಣೆಯನ್ನು ಉಚ್ಚಿಕೊಂಡು ಸರೋವರದಲ್ಲಿ ವಿಹರಿಸುತ್ತಿದ್ದರು. ಅದನ್ನು ನೋಡಿ ವಿಜಯಾ–ವಿಮಲದೇವರೂ ತಾವೊಂದು ಡೋಣೆಯನ್ನು ಉಚ್ಚಿಕೊಂಡು ಸರೋವರದಲ್ಲಿ ಸಂಚರಿಸಬೇಕೆಂದು ಮಾಡಿದರು. ಈ ಮೊದಲೇ ಅವರು ಮಹೋಬಕ್ಕೆ ಬರುತ್ತಿರುವಾಗ ಆ ಸರೋವರದಲ್ಲಿ ಎಷ್ಟೋಸಾರೆ ಡೋಣೆಯಲ್ಲಿ ಕುಳಿತು ಸಂಚರಿಸಿದ್ದರು. ಇಬ್ಬರಿಗೂ ಹುಟ್ಟುಹಾಕಲಿಕ್ಕೆ ಚನ್ನಾಗಿ ಬರುತ್ತಿತ್ತು; ಆದ್ದರಿಂದ ಅವರಿಬ್ಬರು ನಿರಾತಂಕವಾಗಿ ಅಲ್ಲಿಯದೊಂದು ಡೋಣಿಯನ್ನು ಉಚ್ಚಿಕೊಂಡು ಅದರಲ್ಲಿ ಕುಳಿತು ಸರೋವರದ ಮಧ್ಯದಲ್ಲಿರುವ ನಡುಗಡ್ಡೆಯ ಕಡೆಗೆ ಆನಂದದಿಂದ ಸಾಗಿದರು. ಅಷ್ಟರಲ್ಲಿ ಎಷ್ಟೋ ಜನ ತರುಣ–ತರುಣಿಯರ ಡೋಣಿಗಳು ಆ ಸರೋವರದ ನಡುವಿನ ಗಡ್ಡೆಯ ಕಡೆಗೆ ಸಾಗಿದ್ದವು. ತಾವು ಅವರೆಲ್ಲರಿಗಿಂತ ಮೊದಲೇ ನಡುಗಡ್ಡೆಯನ್ನು ಮುಟ್ಟಬೇಕೆಂಬ ಉಬ್ಬಿನಿಂದ ವಿಜಯೆಯು ಹುಟ್ಟುಹಾಕುತ್ತಿರಲು, ಡೋಣಿಯು ವೇಗದಿಂದ ಸಾಗತೊಡಗಿತು. ಆಗ ವಿಮಲದೇವನು ವಿಜಯೆಯನ್ನು ಕುರಿತು ಉಲ್ಲಾಸದಿಂದ—''ವಿಜಯೇ, ನಿನ್ನ ಕೈಗಳು ಸೋತ ಹಾಗೆ ಕಾಣುತ್ತವೆ. ತಾ, ನಾನು ಸ್ವಲ್ಪಹೊತ್ತು ಹುಟ್ಟು ಹಾಕುತ್ತೇನೆ. ಅನ್ನಲು ವಿಜಯೆಯು—ವಿಮಲದೇವಾ, ಇಷ್ಟರಲ್ಲಿ ನನ್ನ ಕೈಗಳು ಸೋಲುವವೇ? ಇನ್ನು ನಡುಗಡ್ಡೆಯಾದರೂ ಎಷ್ಟುದೂರವದೆ? ಅದೋ ಬಂದಿತು ನೋಡು; ಇನ್ನು ಹತ್ತಿಪ್ಪತ್ತುಸಾರೆ ಹುಟ್ಟು ಹಾಕಿದರೆ ಗಡ್ಡೆಯು ಬಂದುಬಿಡುವದು. ಗಡ್ಡೆಗೆ ಮುಟ್ಟವವರಗೆ ನಾನೇ ಹುಟ್ಟು ಹಾಕುವೆನು. ಬೇಕಾದರೆ ತಿರುಗಿ ಬರುವಾಗ ನೀನು ಹುಟ್ಟು ಹಾಕುವೆಯಂತೆ.

ಈ ಮೇರೆಗೆ ಉತ್ಸಾಹದಿಂದ ಅವರು ದ್ವೀಪದ ಕಡೆಗೆ ಸಾಗಿರಲು, ಸರೋವರದೊಳಗಿನ ವಿವಿಧ ಕಮಲ ಪುಷ್ಪಗಳ ಕಡೆಗೆ ವಿಮಲದೇವನ ಲಕ್ಷವು ಹೋಯಿತು. ಆತನು ವಿಜಯೆಯನ್ನು ಕುರಿತು–ವಿಜಯೇ, ಈ ಕಮಲಗಳನ್ನು ನೋಡಿದೆಯೇನು? ಸ್ವಲ್ಪ ಹುಟ್ಟು ಹಾಕುವದನ್ನು ಬಿಟ್ಟು ಇತ್ತ ನೋಡಬಾರದೇ? ಕೆಲವು ಕಮಲಗಳು ಪೂರಾ ಅರಳಿವೆ, ಕೆಲವು ಅರ್ಧ ಅರಳಿವೆ, ಕೆಲವು ಅರಳುವದರಲ್ಲಿವೆ. ಕೆಲವಂತು ಮೊಗ್ಗೆಗಳಿರುವವು. ಅಗೋ, ಅಲ್ಲಿ ಆ ದೊಡ್ಡ ಕಮಲವು ಎಷ್ಟು ಮನೋಹರವಿದೆ ನೋಡು. ಅದನ್ನು ನಾನು ಹರಿದುಕೊಳ್ಳಲಾ? ಎಂದು ಕೇಳಲು, ವಿಜಯೆಯು ನೌಕೆಯನ್ನು ಆ ಕಮಲದ ಕಡೆಗೆ ಸಾಗಿಸಿದಳು. ಕಮಲವು ಹತ್ತಿರ ಬಂದಕೂಡಲೆ ವಿಮಲದೇವನು ಅದನ್ನು ಕೊಯ್ಯಹೋದನು; ಆದರೆ ಅದು ಕೈಗೆ ನಿಲುಕಲೊಲ್ಲದು. ಆಗ ಆತನು ಡೋಣಿಯ ಅಂಚಿನ ಮೇಲೆ ಬಿದ್ದು ಬಾಗಿ ಕಮಲವನ್ನು ಕೊಯ್ಯಬೇಕೆಂದು ಯತ್ನಿಸ ತೊಡಗಿದನು. ಆಗ ಉತ್ಸಾಹಿ ಸ್ವಭಾವದ ವಿಜಯೆಯು ವಿಮಲದೇವನಿಗೆ ಸಹಾಯಮಾಡು

ವದಕ್ಕಾಗಿ ತನ್ನ ಹುಟ್ಟನ್ನು ಮೇಲಕ್ಕೆತ್ತಿಕೊಂಡು ವಿಲಮದೇವನ ಹತ್ತರ ಬಂದಳು. ತಮ್ಮ ಈ ಕೃತಿಯು ತಮ್ಮಿಬ್ಬರ ನಾಶಕ್ಕೆ ಕಾರಣವಾದೀತೆಂಬುದರ ಎಚ್ಚರವು ಅವರಿಗಿದ್ದಿಲ್ಲ. ಅವರಿಬ್ಬರ ಭಾರವೂ ಡೋಣಿಯ ಒಂದೇ ಮಗ್ಗಲಿಗೆ ಆದ್ದರಿಂದ, ಅದು ಒಪ್ಪರಿಯಾಗಿ ನೀರಕಡೆಗೆ ಒಲಿಯಿತು; ಆದರೂ ಅವರಿಗೆ ಅದರ ಎಚ್ಚರವೇ ಇದ್ದಿಲ್ಲ. ಅದನ್ನು ದೂರದಲ್ಲಿದ್ದ ಒಬ್ಬ ತರುಣನು ನೋಡಿ, ಇವರಿಗೆ ಇನ್ನು ಜಲಸಮಾಧಿಯು ಆಗುವದೆಂದು ನಿಶ್ಚಯಿಸಿ, ತನ್ನ ಡೋಣಿಯನ್ನು ಅವರ ಕಡೆಗೆ ಭರದಿಂದ ಸಾಗಿಸಿಕೊಂಡು ಬರತೊಡಗಿದನು; ಇದಾವದನ್ನೂ ವಿಜಯಾ-ವಿಮಲದೇವರು ಅರಿಯರು. ಈಗ ಕೈಸಿಗುವದೆಂದು ವಿಮಲದೇವನು ಹೂವನ್ನು ಹಿಡಿದು ಕೊಯ್ಯುತ್ತಿರಲು, ವಿಜಯೆಯೂ ಮುಂದಕ್ಕೆ ಸಾಗರ ಬಿದ್ದಳು. ಇಬ್ಬರ ಜೋಲಿಯಿಂದ ಡೋಣಿಯು ಬೊಕ್ಕಬೊರಲು ಆಗಿ, ಇಬ್ಬರೂ ನೀರಿನಲ್ಲಿ ಬಿದ್ದುಬಿಟ್ಟರು! ವಿಜಯೆಗೆ ಚನ್ನಾಗಿ ಈಸಲಿಕ್ಕೆ ಬರುತ್ತಿದ್ದದ್ದರಿಂದ ಆಕೆಯು ಮುಣುಗಲಿಲ್ಲ. ಆಕೆಯು ಈಸು ಬಾರದ್ದರಿಂದ ನೀರು ಗುಟುಕರಿಸತೊಡಗಿದ್ದ ವಿಮಲದೇವನ ರಟ್ಟೆಯನ್ನು ಹಿಡಿದು ಎತ್ತಿ –

ವಿಜಯೆ – ವಿಮಲದೇವಾ, ನಿನಗೆ ಈಸಲಿಕ್ಕೆ ಬರುವದಿಲ್ಲವೇ? ಹೀಗೆ ಬಡಿದಾಡಬೇಡ; ಅಂಜಬೇಡ; ನಾನು ನಿನ್ನನ್ನು ದಂಡೆಗೆ ಕರೆದೊಯ್ಯುತ್ತೇನೆ. ಸುಮ್ಮನೆ ನೀರಮೇಲೇ ಬಿದ್ದು ಕೊಂಡು ಬಿಡು. ಇತ್ತ ಕಣ್ತೆರದು ನೋಡು, ನಾನು ನಿನ್ನ ತಂಗಿ ವಿಜಯೆಯು; ನಿನ್ನ ಹತ್ತರವೆ ಇರುವೆನು, ಹೆದರಬೇಡ!

ಹೀಗೆ ಧೈರ್ಯಹೇಳುವ ವಿಜಯೆಯ ಮಾತುಗಳನ್ನು ಕೇಳಿ ವಿಮಲದೇವನು ಕಣ್ತೆರೆದು, ಸುತ್ತುಮುತ್ತಲಿನ ಜಲರಾಶಿಯನ್ನು ನೋಡಿ ಅಂಜಿ, ತನ್ನ ರಟ್ಟೆಯನ್ನು ಹಿಡಿದಿರುವ ಸುಕುಮಾರಿ ಯಾದ ವಿಜಯೆಯ ಕಡಗೆ ತಿರುಗಿ ಕಣ್ಣುಗಳಲ್ಲಿ ನೀರು ಹೋಗುತ್ತಿರಲು, ಕರುಣಾವ್ಯಂಜಕ ಸ್ವರದಿಂದ—

ವಿಮಲದೇವ — ಛೀ ಛೀ, ನನ್ನ ರಟ್ಟಿಯನ್ನು ಹಿಡಿಯಬೇಡ, ನನ್ನ ನೀರಲ್ಲಿ ಮುಣುಗಗೊಡು. ನನಗೆ ಈಸಲಕ್ಕೆ ಏನೂ ಬರುವದಿಲ್ಲ. ನನ್ನನ್ನು ಬದುಕಿಸಹೋಗಿ ನೀನೂ ಪ್ರಾಣಕ್ಕೆ ಎರವಾಗಬೇಕಾದೀತು. ನಿನ್ನಿಂದ ನನ್ನ ಸಂರಕ್ಷಣವಾಗಬಾರದು. ನಿನಗೆ ಈಸಲಿಕ್ಕೆ ಬರುವದರಿಂದ ಸಹಜವಾಗಿ ನೀನು ನಡುಗಡ್ಡೆಯನ್ನು ಮುಟ್ಟಬಹುದು.

ವಿಜಯೆ—ವಿಮಲದೇವಾ, ಹಾಗೆ ಎಂದಿಗೂ ಆಗಲಾರದು. ನಾವು ಇಬ್ಬರೂ ಒಮ್ಮೆಲೇ ಇಲ್ಲಿ ಸತ್ತುಹೋಗೋಣ, ಇಲ್ಲವೇ ಬದುಕುವ ಯೋಗವಿದ್ದರೆ,–

ಇಷ್ಟು ಮಾತಾಡುವದರೊಳಗೆ ವಿಜಯೆಗೆ ದುಮ್ಮಹತ್ತಿ ಮಾತಾಡಲಿಕ್ಕೆ ಬಾರದಾಯಿತು. ಆಗ ವಿಮಲದೇವನು – ವಿಜಯೇ, ನಿನ್ನ ಕೈಗಳು ಸೋಲಹತ್ತಿದವು. ನನ್ನ ರಟ್ಟೆಯನ್ನು ಬಿಡು. ಇಬ್ಬರು ಸಾಯುವದಕ್ಕಿಂತ ಒಬ್ಬರು ಬದುಕುವದು ಒಳ್ಳೆಯದು. ನನ್ನನ್ನು ಬದುಕಿಸಲಿಕ್ಕೆ ನೀನು ಈಪರಿ ಕಷ್ಟಪಡುವದಕ್ಕಾಗಿ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ನಿನ್ನ ಈ ಋಣವನ್ನು ಮುಂದಿನ ಜನ್ಮದಲ್ಲಿ ತೀರಿಸುವೆನು. ಬಿಡು, ನನ್ನನ್ನು ಮುಣುಗಬಿಡು, ಎಂದು ಹೇಳಿದನು. ಆಗ ವಿಜಯೆಯು ಮಾತಾಡಲಾರದೆ—''ಇಲ್ಲ ಹಾಗಾಗುವದಿಲ್ಲ, ಇಬ್ಬರೂ ಒಮ್ಮೆಲೇ

ಸಾಯೋಣ'' ಎಂದು ಬಹು ಕಷ್ಟದಿಂದ ಮಾತಾಡಿದಳು. ಈಗ ಆಕೆಯ ಕೈಗಳು ತೀರಾ ಸೋತು ಹೋಗಿದ್ದವು. ವಿಮಲದೇವನ ಸಂರಕ್ಷಣವಾಡುವ ಸಾಮರ್ಥ್ಯವು ಆಕೆಯಲ್ಲಿ ಉಳಿದಿದ್ದಿಲ್ಲ; ಆದರೂ ತನ್ನಲ್ಲಿ ಶಕ್ತಿಯಿರುವವರೆಗೆ ವಿಮಲದೇವನ ಸಂರಕ್ಷಣ ಮಾಡತಕ್ಕದ್ದೇ, ಎಂದು ಆಕೆಯು ನಿಶ್ಚಯಿಸಿದ್ದಳು; ಆದರ ವಿಮಲದೇವನು ವಿಜಯೆಯ ಕೈಯನ್ನು ಕೊಸರಿ ಬಿಡಿಸಿ ಆಕೆಯನ್ನು ಹಿಂದಕ್ಕೆ ದೂಡುತ್ತ—''ವಿಜಯೇ,'' ಎಂದು ಇನ್ನೂ ಏನೇನೋ ಹೇಳ ಬೇಕೆನ್ನುತ್ತಿರಲು, ಒಮ್ಮೆಲೇ ನೀರಿನಲ್ಲಿ ಮುಣುಗಿ ಒಮ್ಮೆ ಮೇಲಕ್ಕೆದ್ದನು. ಆಗಿನ ವಿಮಲದೇವನ ದುಸ್ಥಿತಿಯನ್ನು ನೋಡಿ ವಿಜಯೆಯು ಆಕ್ರೋಶವಾಡಿ, ಅಷ್ಟು ಕೈಸೋತಿದ್ದರೂ ವಿಮಲ ದೇವನನ್ನು ಹಿಡಿಯುವದಕ್ಕಾಗಿ ಮುಂದಕ್ಕೆ ಸಾಗಿಬಂದಳು. ಅಷ್ಟರಲ್ಲಿ ವಿಮಲದೇವನು ಮತ್ತೆ ಮುಣುಗಿದನು! ಆಗ ವಿಜಯೆಯು ದುಃಖದಿಂದ ಕಣ್ಣೀರು ಸುರಿಸುತ್ತ—''ಹೊರಟೆಯಾ! ವಿಮಲದೇವಾ, ಹೊರಟುಬಿಟ್ಟೆಯಾ! ಈ ಹೊತ್ತಿನಲ್ಲಿ ಯುವರಾಜ ಛತ್ರಸಾಲನಿದ್ದಿದ್ದರೆ'' ಎಂದು ನುಡಿಯುತ್ತಿರಲು, ಒಬ್ಬ ತರುಣನು ತನ್ನ ನೌಕೆಯನ್ನು ವಿಮಲದೇವನು ಮುಣು ಗಿದ್ದಲ್ಲಿಗೆ ತಂದು ಸರೋವರದಲ್ಲಿ ಹಾರಿ ಕ್ಷಣದಲ್ಲಿ ವಿಮಲದೇವನನ್ನು ಹೊರಗೆ ತೆಗೆದು ತನ್ನ ನೌಕೆಯಲ್ಲಿ ಹಾಕಿದನು. ಇದನ್ನು ನೋಡಿ ವಿಜಯೆಗೆ ಬಹಳ ಸಂತೋಷವಾಯಿತು. ಅಷ್ಟರಲ್ಲಿ ಆಕೆಯು ಈಸಿ ಆ ತರುಣನ ನೌಕೆಯ ಬಳಿಗೆ ಬಂದಳು. ಆಕೆಯನ್ನು ತನ್ನ ನೌಕೆಯೊಳಗೆ ಕರೆದುಕೊಳ್ಳುವದಕ್ಕಾಗಿ ಆ ತರುಣನು ತನ್ನ ಕೈಯನ್ನು ಚಾಚಿದನು. ವಿಜಯೆಯು ಆ ತರುಣನ ತೇಜಸ್ವಿ ಮುಖವನ್ನು ನೋಡಿ ಆನಂದಪರವಶಳಾಗಿ, ತನ್ನ ಕೈಯನ್ನು ಮೇಲಕ್ಕೆ ಮಾಡಿದಳು. ಕೂಡಲೇ ಆ ತರುಣನು ವಿಜಯೆಯನ್ನು ನೌಕೆಯಮೇಲೆ ಕರೆದುಕೊಂಡನು!

ಹೀಗೆ ವಿಜಯೆಯನ್ನು ಮೇಲಕ್ಕೆ ಕರಕೊಂಡ ತರುಣನು ಬೇರೆ ಯಾರೂ ಆಗಿರದೆ ಛತ್ರ ಸಾಲನೇ ಆಗಿದ್ದನು. ಅದನ್ನು ನೋಡಿ ವಿಜಯೆಗೆ ಪರಮಾನಂದವಾಯಿತು. ವಿಮಲದೇವನು ಉಸುರುಗಟ್ಟಿ ಶವದಂತೆ ಬಿದ್ದು ಬಿಟ್ಟಿದ್ದನು. ಛತ್ರಸಾಲನು ಅವನ ಹೊಟ್ಟೆ ಹಿಚಿಕಿ ಹೊಟ್ಟೆ ಯೊಳಗಿನ ನೀರು ಹೊರಡಿಸಿದ್ದರಿಂದ, ವಿಮಲದೇವನು ಚನ್ನಾಗಿ ಉಸುರಾಡಿಸಹತ್ತಿದನು; ಆದರೆ ಆತನಿಗೆ ಇನ್ನೂ ಎಚ್ಚರವಾಗಿದ್ದಿಲ್ಲ. ವಿಜಯಾ–ಛತ್ರಸಾಲರು ಆತನನ್ನು ಬಗೆಬಗೆಯಾಗಿ ಉಪಚರಿಸುವಾಗ ಆತನು ಹೆಂಗಸೆಂಬದು ಅವರಿಗೆ ಗೊತ್ತಾಗಿ ಪರಮಾಶ್ಚರ್ಯವಾಯಿತು! ಆಗ ವಿಜಯೆಯು ಛತ್ರಸಾಲನನ್ನು ಕುರಿತು–

ವಿಜಯೆ—ಛತ್ರಸಾಲ, ಈ ಆಶ್ಚರ್ಯದ ಗೂಡವೇನಿರಬಹುದು? ಏನೇ ಇರಲಿ, ವಿಮಲ ದೇವನು ವಿಮಲೆಯಾಗಿರುವಳೆಂಬದು ನಿಶ್ಚಯವು. ಈಕೆಯು ಪಹಾರಸಿಂಗನ ಮಗಳಾದದ್ದರಿಂದ ನಿನಗಂತು ತಂಗಿಯಾಗಬೇಕಾಯಿತು. ಹೀರಾದೇವಿಯ ರಾಜತಂತ್ರವು ವಿಮಲೆಯ ಪುರುಷವೇಷಕ್ಕೆ ಕಾರಣವಾಗಿರಬಹುದು; ಆದರೆ ಛತ್ರಸಾಲ, ಒಂದು ಮಾತಿನ ಸಲುವಾಗಿ ನನಗೆ ಬಹಳ ವ್ಯಸನವಾಗುತ್ತದೆ.

ಛತ್ರಸಾಲ–ಅದೇನು ವ್ಯಸನ?

ವಿಜಯೆ—ಪ್ರಿಯ ಛತ್ರಸಾಲ, ಇನ್ನು ನಾಚಿ ಫಲವೇನು? ಮೊನ್ನೆ ಶ್ರೀ ವಿಂಧ್ಯವಾಸಿನಿಯ ಕೊರಳಲ್ಲಿ ನಾನೂ ವಿಮಲದೇವನೂ ಮಾಲೆ ಹಾಕುತ್ತಿರುವಾಗ, ಆ

ಮಾಲೆಯು ಜಾರಿ ನಿನ್ನ ಕೊರಳಿಗೆ ಬಿದ್ದಿತಷ್ಟೇ? ಅದರಿಂದ ನನಗೆ ಲಜ್ಜೆಯು ಉತ್ಪನ್ನವಾದಂತೆ, ವಿಮಲದೇವನಿಗೂ ಲಜ್ಜೆಯು ಉತ್ಪನ್ನವಾದದ್ದನ್ನು ನಾನು ನೋಡಿದ್ದೆನು; ಆದರೆ ವಿಮಲ ದೇವನು ಗಂಡಸಾದದ್ದರಿಂದ ಆತನ ಲಜ್ಜೆಯ ಮಹತ್ವವು ಆಗ ನನಗೆ ತೋರಿದ್ದಿಲ್ಲ. ಆತನಂತು ಹೆಂಗಸೆಂಬ ಮಾತು ಈಗ ಗೊತ್ತಾಯಿತು. ಈಗ ಒಂದು ನೆವದಿಂದ ನೀನು ನಮ್ಮಿಬ್ಬರ ಪಾಣಿಗ್ರಹಣವನ್ನು ಇಂದು ಮಾಡಿರುವೆ. ಅಂದು ನಾವಿಬ್ಬರೂ ನಿನ್ನ ಕೊರಳಲ್ಲಿ ಮಾಲೆಹಾಕಿ ವಿವಾಹದ ಪೂರ್ವಾಂಗವನ್ನು ದೇವಿಯ ಮುಖಾಂತರ ಎಲ್ಲ ರಾಜರ ಸಮಕ್ಷ ಪೂರ್ಣ ಮಾಡಿದ್ದೆವು. ಅದರಂತೆ ವಿವಾಹದ ಉತ್ತರಾಂಗವಾದ ಪಾಣಿಗ್ರಹಣ ರೂಪ ಮುಖ್ಯವಿಧಿಯು ಇಂದು ಜಲದೇವತೆಯ ಸಾಕ್ಷಿಯಿಂದ ಪೂರ್ಣವಾಯಿತು. ಅಂದಬಳಿಕ ಈ ದೇಹವಂತು ನಿನ್ನದಾಯಿತು. ನೀನು ನನ್ನನ್ನು ಹೆಂಡತಿಯೆಂದು ಸ್ವೀಕರಿಸು ಸ್ವೀಕರಿಸದಿರು, ನಾನಂತು ನಿನ್ನ ಹೆಂಡತಿಯಾದೆನು. ನನ್ನ ಪಾಣಿಗ್ರಹಣದ ಅಧಿಕಾರವು ಇನ್ನು ಯಾವ ಪುರುಷನಿಗೂ ಬಾರದು; ಆದರೆ ನನ್ನಷ್ಟೇ ನಿನ್ನ ಮೇಲೆ ಸ್ವಾಮಿತ್ವವನ್ನು ಸ್ಥಾಪಿಸಿರುವ ಈ ವಿಮಲೆಯು ನಿನ್ನ ತಂಗಿಯಾಗಿರುವದರಿಂದ, ನೀನು ಆಕೆಯ ಪಾಣಿಗ್ರಹಣಮಾಡಿದ್ದು ವ್ಯರ್ಥವಾಗಿ, ದೇವಿಯ ಭವಿಷ್ಯಸೂಚನೆಗೆ ಭಂಗಬಂದಿತಲ್ಲ! ಪ್ರಿಯಛತ್ರಸಾಲ, ಇದಕ್ಕಿಂತ ಹೆಚ್ಚಿನ ದುಃಖದ ಸಂಗತಿಯು ಯಾವದಿರುವದು?

ಈ ಮೇರೆಗೆ ನುಡಿಯುವಾಗ ವಿಜಯೆಯ ಕಣ್ಣುಗಳಲ್ಲಿ ನೀರುಗಳು ಬಂದವು. ವಿಜಯೆಯ ಸರಳ ಹೃದಯವನ್ನೂ, ವಿಮಲದೇವನ ಮೇಲಿನ ಆಕೆಯ ಅಕೃತ್ರಿಮ ಪ್ರೇಮವನ್ನೂ ನೋಡಿ ಛತ್ರಸಾಲನಿಗೆ ಬಹಳ ಆಶ್ಚರ್ಯವಾಯಿತು. ವಿಮಲೆಯು ತನ್ನ ತಂಗಿಯಾಗಿರಲು, ದೇವಿಯ ಭವಿಷ್ಯವು ವ್ಯರ್ಥವಾದದ್ದಕ್ಕಾಗಿ ಆತನಿಗೆ ಅಸಮಾಧಾನವೂ ಆಯಿತು. ಆತನು ವಿಜಯೆಯ ಕೈಹಿಡಿದು–ವಿಜಯೇ, ಈಗ ನಾನು ಬುದ್ಧಿಪೂರ್ವಕ ನಿನ್ನ ಪಾಣಿಗ್ರಹಣ ಮಾಡಿ ನಿನ್ನನ್ನು ನನ್ನ ಅರ್ಧಾಂಗವಾಗಿ ಮಾಡಿಕೊಳ್ಳುತ್ತೇನೆ; ಆದರೆ ಈಗಂತೂ ನನ್ನ ತಂಗಿಯಾಗಿರುವ ಈ ವಿಮಲೆಯ ವಿಷಯವಾಗಿ ದೇವಿಯ ಭವಿಷ್ಯವು ಅಸಂಭವವಾಗಿ ತೋರುತ್ತಿರುವದು; ಆದರೆ ಬುಂದೇಲಖಂಡವು ಸ್ವತಂತ್ರವಾಗುವವರೆಗೆ ಈ ವಿವಾಹದ ಮಾತೇಕೆ?

ಈ ಮೇರೆಗೆ ನುಡಿಯುತ್ತಿರಲು, ವಿಮಲದೇವನು ಎಚ್ಚತ್ತು ಕಣ್ತೆರೆದು ನಾಲ್ಕೂ ಕಡೆಗೆ ನೋಡಹತ್ತಿದನು. ತನ್ನ ಬಳಿಯಲ್ಲಿ ವಿಜಯೆಯೊಡನೆ ಛತ್ರಸಾಲನು ಕುಳಿತಿರುವದನ್ನು ನೋಡಿ ತನ್ನ ಸ್ತ್ರೀ ಸ್ವಭಾವಕ್ಕನುಸರಿಸಿ ನಾಚಿ ಚಟ್ಟನೇ ಎದ್ದು ಮರ್ಯಾದೆಯಿಂದ ಕುಳಿತುಕೊಂಡನು. ತಾನು ಹೆಂಗಸೆಂಬದು ಇವರಿಗೆ ತಿಳಿದು ಹೋಗಿರುವದೆಂದು ಆತನು ನಿಶ್ಚಯಿಸಿದನು: ಇದರಿಂದ ಆತನಿಗೆ ಸಮಾಧಾನವೂ ಆಯಿತು. ಅದರಲ್ಲಿ ಛತ್ರಸಾಲನಿಗೆ ತಿಳಿದದ್ದರಿಂದಂತು ಆತನಿಗೆ ಮತ್ತಿಷ್ಟು ಸಮಾಧಾನವಾಯಿತು. ಆತನು ಕೆಲಹೊತ್ತು ತಲೆಬಾಗಿ ಕುಳಿತು ಆಲೋಚಿಸಿ–

ವಿಮಲದೇವ—ವಿಜಯೇ, ನಾವಿಬ್ಬರೂ ಪ್ರಾಣಸಂಕಟದಲ್ಲಿರುವಾಗ ಯುವರಾಜ ಛತ್ರಸಾಲನೇ ನಮ್ಮನ್ನು ಬದುಕಿಸಿರಬೇಕು, ಇಲ್ಲದಿದ್ದರೆ ಆತನು ಹೀಗೆ ತೋಯಿಸಿಕೊಳ್ಳಲಿಕ್ಕೆ

ಕಾರಣವೇನು? ಈ ಪ್ರಸಂಗದಲ್ಲಿ ನನ್ನ ಸ್ತ್ರೀ ರೂಪವು ಗೊತ್ತಾದದ್ದೊಂದು ಲಾಭವೇ! ತಂಗೀ, ದೇವಿಯ ಭವಿಷ್ಯವೆಲ್ಲಿಯಾದರೂ ಸುಳ್ಳಾಗಬಹುದೇ? ಪ್ರಿಯ ಛತ್ರಸಾಲ, ನನ್ನ ಪಾಣಿಗ್ರಹಣ ಮಾಡಿದ ನೀನು ನನ್ನ ಪತಿಯಾದೆ! ನನ್ನ ತಾಯಿಯಾದ ಹೀರಾದೇವಿಯ ಒತ್ತಾಯದಿಂದ ಈವರೆಗೆ ಪುರುಷವೇಷದಿಂದಿದ್ದ ನಾನು ಅಂತರಂಗದಲ್ಲಿ ದುಃಖದಿಂದ ಕೊರಗುತ್ತಿದ್ದೆನು. ಇಂದು ಆ ನನ್ನ ದುಃಖವು ದೂರವಾಯಿತು. ನನ್ನ ಈ ಪ್ರಿಯ ಸಖಿಯನ್ನು ನಿನ್ನ ನೌಕೆಯಲ್ಲಿ ಕರೆದು ಕೊಳ್ಳುವಾಗ ನೀನು ಆಕೆಯ ಪಾಣಿಗ್ರಹಣವನ್ನೂ ಮಾಡಿರಬಹುದು. ಒಂದು ಪಕ್ಷದಲ್ಲಿ ಮಾಡಿರದಿದ್ದರೂ, ಶ್ರೀ ವಿಂಧ್ಯವಾಸಿನಿಯ ಕೊರಳೊಳಗಿನ ಮಾಲೆಯು ನಿನ್ನ ಕೊರಳಲ್ಲಿ ಬಿದ್ದಾಗಲೇ ನಾವಿಬ್ಬರೂ ನಿನ್ನ ಪಾಣಿಗ್ರಹಣ ಮಾಡಿದಹಾಗಾಗಿರುವದು. ಯಾಕೆ ವಿಜಯೇ, ನಾನು ಹೇಳುವದು ನಿಜವಷ್ಟೇ?

ವಿಜಯೆ—ಪ್ರಿಯಸಖೀ, ನಿನ್ನ ಮಾತು ನಿಜವಾದರೆ ಅದಕ್ಕಿಂತಲೂ ಹೆಚ್ಚಿನ ಆನಂದದ ಪ್ರಸಂಗವು ನನ್ನ ಆಯುಷ್ಯದಲ್ಲಿ ಒದಗುವಹಾಗಿಲ್ಲ; ಆದರೆ ನೀನು ಯುವರಾಜ ಛತ್ರಸಾಲನಿಗೆ ತಂಗಿಯಾಗಬೇಕಲ್ಲವೇ?

ವಿಮಲೆ—ನಾನು ಪಹಾರಸಿಂಗನ ಮಗಳಾಗಿದ್ದರಷ್ಟೇ ಯುವರಾಜ ಛತ್ರಸಾಲನ ತಂಗಿಯಾಗುವದು? ನಾನು ಹೀರಾದೇವಿಯ ಹೊಟ್ಟೆಯ ಮಗಳೇ ಅಲ್ಲ! ಕೇವಲ ರಾಜ ಕಾರಣದ ಸಲುವಾಗಿ ಹೀರಾದೇವಿಯೂ, ಪಹಾರಸಿಂಗನೂ ನನ್ನನ್ನು ಸಂರಕ್ಷಿಸಿ ನನ್ನನ್ನು ಗಂಡು ಮಗನೆಂದು ಮಂದಿಗೆ ತೋರಿಸುತ್ತಿರುವರು. ಅವರ ಕಾರ್ಯವು ಸಾಧಿಸಿದ ಬಳಿಕ ನಾನು ಹೆಂಗಸು ಹೆಂಗಸಾಗತಕ್ಕವಳೇ! ತಂಗೀ, ದೇವಿಯ ಭವಿಷ್ಯವೆಲ್ಲಿಯಾದರೂ ವ್ಯರ್ಥವಾಗ ಬಹುದೇ? ನಮ್ಮಂಥ ಸತ್ಕುಲಪ್ರಸೂತ ಕ್ಷತ್ರಿಯ ಕುಮಾರಿಯರ ಮನಸ್ಸು ಅಯೋಗ್ಯಸ್ಥಾನದಲ್ಲಿ ಕುಳಿತುಕೊಳ್ಳ ಬಹುದೇನು?

ವಿಜಯೆ—(ಆಶ್ಚರ್ಯದಿಂದ) ಹಾಗಾದರೆ ನೀನು ಯಾರ ಮಗಳು?

ವಿಮಲೆ — ಅದನ್ನು ನಾನು ಈಗ ಹೇಳಲಾರೆನು. ನಾನು ಒಬ್ಬ ಕ್ಷತ್ರಿಯ ರಾಜ ಕುಮಾರಿಯೆಂಬದಿಷ್ಟು ಹೇಳುವೆನು. ಹೆಚ್ಚಿನಮಾತು ಈಗ ಹೇಳುವದು ಹಿತವಲ್ಲ, ಹಾಗೆ ಹೇಳುವದು ನನಗೆ ಯೋಗ್ಯವೂ ಅಲ್ಲ. ವಿಜಯೇ, ಬುಂದೇಲಖಂಡಕ್ಕೆ ಸ್ವಾತಂತ್ರ್ಯಪ್ರಾಪ್ತಿ ಯಾಗುವವರೆಗೆ ನಾನಂತು ಪುರುಷವೇಷವನ್ನು ಬಿಡುವಹಾಗಿಲ್ಲ, ಈ ಕಾಲದಲ್ಲಿ ಬುಂದೇಲ ಖಂಡದ ಹೆಂಗಸರು ಗಂಡಸರಾಗಬೇಕಾಗಿದೆ; ಯಾಕಂದರೆ ಅಲ್ಲಿಯ ಗಂಡಸರು ಹೆಂಗಸರಾಗಿ ಕೆಲವರು ಸೀರೆ ಉಟ್ಟುಕೊಳ್ಳತೊಡಗಿರುತ್ತಾರೆ, ಕೆಲವರು ನನ್ನ ಹಾಗೆ ಹೊರಗೆ ಗಂಡಸರಾಗಿ ತೋರಿದರೂ ಒಳಗೆ ಹೆಂಗಸರಂತೆ ಇರುತ್ತಾರೆ. ಈ ವಿಪರೀತಕಾಲವಿರುವದರಿಂದ ನಮ್ಮಂಥ ಹೆಂಗಸರು ಬೈಲಿಗೆ ಬಂದು ದೇಶಕಾರ್ಯದಲ್ಲಿ ಶೀಲವತಿಯರಾಗಿ ದೇಹವನ್ನು ಸವಿಸಬೇಕಾಗಿದೆ. ಅಂದಬಳಿಕ ಈಗ ಲಗ್ನದ ಪ್ರಸಕ್ತಿಯೇಕೆ? ಇಷ್ಟುದಿವಸ ಸಂಶಯವೃತ್ತಿಯಲ್ಲಿದ್ದದ್ದರಿಂದ ನಾನು ಕೆಲಸಕ್ಕೆ ಬಾರದಾಕೆಯಾಗಿದ್ದೆನು. ಇನ್ನು ಮೇಲೆ ಸ್ವದೇಶೋದ್ಧಾರದ ಕಾರ್ಯದಲ್ಲಿ ಯುವರಾಜ ಛತ್ರಸಾಲನಿಗೆ ವಿಮಲದೇವ ನಿಂದಾಗುವ ಸಹಾಯವನ್ನು ನೋಡು.

ಛತ್ರಸಾಲ—ವಿಮಲೆ, ಬಹು ಯೋಗ್ಯಮಾತುಗಳನ್ನಾಡಿದೆ. ನಾವು ರಣದುಲ್ಲಾಖಾನನನ್ನು ಸೆರೆಯಲ್ಲಿಟ್ಟದ್ದರಿಂದ ಕೃಷ್ಣಸರ್ಪವನ್ನು ತುಳಿದು ಸಿಟ್ಟಿಗೆಬ್ಬಿಸಿದ ಹಾಗಾಗಿರುತ್ತದೆ. ಇಂದಿಲ್ಲ ನಾಳೆ ಬಾದಶಹನು ಈ ಸುದ್ದಿಯ ಕೇಳಿ ದೊಡ್ಡ ಸೈನ್ಯದೊಡನೆ ನಮ್ಮ ಮೇಲೆ ಸಾಗಿಬರತಕ್ಕವನೇ! ಅಷ್ಟರಲ್ಲಿ ನಾವು ಒಕ್ಕಟ್ಟಿನಿಂದ ಯುದ್ಧಕ್ಕೆ ಸಿದ್ಧರಾಗಿರಬೇಕಾಗುವದು.

## ರೋಷನಾರ ಬೇಗಮ್

ದಿಲ್ಲಿಯು ಮೊಗಲ ಬಾದಶಹರ ರಾಜಧಾನಿಯು; ಐಶ್ವರ್ಯಮದದಿಂದ ಅದು ಮತ್ತವಾಗಿ ಹೋಗಿದೆ. ಅದರಲ್ಲಿಯ ಅನಾಚಾರ, ವ್ಯಸನ, ಆಲಸ್ಯಗಳ ಮಿತಿಯು ಇಲ್ಲದಾಗಿದೆ. ಅದರ ವಿಷಯಲಂಪಟತೆಯ ನೆಲೆಯು ಹತ್ತುವ ಹಾಗಿಲ್ಲ. ಆ ದಿಲ್ಲೀಪಟ್ಟಣವು ಮಹತ್ವಾಕಾಂಕ್ಷೆಯ ಬಲೆಗೆ ಬಿದ್ದು ಈವೊತ್ತಿನವರೆಗೆ ಮಾಡುತ್ತ ಬಂದಿರುವ ಅನಾಚಾರಗಳನ್ನು ಮನಸ್ಸಿನಲ್ಲಿ ತಂದರೆ ಅದರ ಖೋಡಿ ಗುಣವು ಗೊತ್ತಾಗುವದು! ಅದು ದುರ್ಯೋಧನನ ಮನಸ್ಸು ಕೆಡಿಸಿ, ಐದು ಊರುಗಳಿಂದ ಸಂತುಷ್ಟರಾಗಿರುವೆವೆಂದು ಹೇಳಿಕಳಿಸಿರುವ ಪಾಂಡವರಿಗೆ ಸೂಜಿಯ ತುದಿಗೆ ಹತ್ತುವಷ್ಟು ಮಣ್ಣನ್ನು ಕೊಡಲಿಕ್ಕಿಲ್ಲವೆಂದು ಆತನ ಬಾಯಿಂದ ಸೊಕ್ಕಿನ ಮಾತು ಆಡಿಸಿ, ರಕ್ತದ ಕಾಲಿವೆಹರಿಸಿದ್ದು ಈ ದಿಲ್ಲಿಯೆ! ಕನೋಜದ ಜಯಚಂದರಾಠೋಡನ ಮಧ್ಯಸ್ಥಿಯಿಂದ ಪೃಥ್ವೀರಾಜ ಚಹ್ವಾಣನಂಥ ತನ್ನ ವೀರಾಧಿವೀರಪತಿಯನ್ನು ಶಾಬುದ್ದೀನಘೋರಿಯಿಂದ ಕೊಲ್ಲಿಸಿ ತನ್ನ ಹಣೆಯ ಕುಂಕುಮವನ್ನು ತನ್ನ ಕೈಯಿಂದಲೇ ಅಳಿಸಿಕೊಂಡು ಮುಸಲ್ಮಾನ ಸ್ತ್ರೀಯಾದ್ದದ್ದು ಈ ದಿಲ್ಲಿಯೆ! ಹೀಗೆ ಮುಸಲ್ಮಾನ ಸ್ತ್ರೀಯಾದಬಳಿಕ ಮಾಡಿದ ದಿಲ್ಲಿಯ ಅನಾಚಾರಗಳನ್ನಂತು ವರ್ಣಿಸಲಾಸಲ್ಲ! ಮನುಷ್ಯವಧ, ರಕ್ತಪಾತ, ಕೊಲೆ ಇವು ಆಗಿನ ದಿಲ್ಲಿಯ ಆಟಗಳಾದವು. ವಜೀರರು ತಮ್ಮ ಸೇವಕಭಾವವನ್ನೂ, ಬಂಧುಗಳು ತಮ್ಮ ಬಂಧುಪ್ರೇಮವನ್ನೂ, ತಂದೆಯಾದವರು ಮಕ್ಕಳೆಂಬ ಮರುಕವನ್ನೂ, ಮಕ್ಕಳು ತಂದೆಯೆಂಬ ಗೌರವವನ್ನೂ ಬಿಟ್ಟು, ತನ್ನ ಕೈ ಹಿಡಿಯುವಂತೆ ಆಗಿನ ಕೆಟ್ಟ ದಿಲ್ಲಿಯು ಅವರಿಗೆ ಮೋಹದ ಬಲೆಯನ್ನು ಬೀಸಿತು! ಅತ್ಯಂತ ವಿಲಾಸ ಪ್ರಿಯನಾದ ತನ್ನ ಪತಿ ಶಹಾಜಹಾನನು ಸ್ವಲ್ಪ ಮುದುಕನಾಗಲು, ಕೂಡಲೇ ಅನಾಚಾರಿಯಾದ ದಿಲ್ಲಿಯು ಆತನ ಮಗ ಔರಂಗಜೇಬನ ಕೈ ಹಿಡಿದು ಆತನ ಕೈಯಿಂದ ತನ್ನ ವೃದ್ಧ ಪತಿಯನ್ನು ಸೆರೆಯಲ್ಲಿ ಹಾಕಿಸಿ, ತನ್ನ ಯಾವತ್ತು ಭಾವ–ಮೈದುನರನ್ನು ಕೊಲ್ಲಿಸಿ ಕಪಟಿಯೂ, ಸ್ವಾರ್ಥಸಾಧುವೂ, ದಾಂಭಿಕನೂ ಆದ ಔರಂಗಜೇಬನೊಡನೆ ರಮಿಸ ತೊಡಗಿತು; ಆದರೆ ಆ ದಿಲ್ಲಿಯ ಮನಸ್ಸು ಆ ಔರಂಗಜೇಬನಲ್ಲಾದರೂ ಆಸಕ್ತವಾಯಿತೇನು? ಇಲ್ಲ ಇಲ್ಲ! ಔರಂಗಜೇಬನು ಬೇನೆಯಿಂದ ಹಾಸಿಗೆ ಹಿಡಿಯಲು, ತನ್ನ ಪತಿಯೆಂಬ ಎಚ್ಚರವಿಲ್ಲದೆ, ಆ ಔರಂಗಜೇಬನ ಪ್ರೀತಿಯ ತಂಗಿಯಾದ ರೋಷನಾರಳ ಕೈಯಿಂದ

ಔರಂಗಜೇಬನನ್ನು ಕೊಲ್ಲಿಸಬೇಕೆಂದು ಯತ್ನ ನಡಿಸಿರುವದನ್ನು ನೋಡಿದರೆ, ಈ ಕಟ್ಟಡದಲ್ಲಿಯ ನೆರಳು ಬೇಡೆಂದು ಯಾರಾದರೂ ಅಂಜಬಹುದಾಗಿದೆ!

ರೋಷನಾರ ಬೇಗಮಳು ಅತ್ಯಂತ ಚಂಚಲಳು, ಕ್ರೂರಸ್ವಭಾವದವಳು, ಮನಸ್ಸಿಗೆ ಬಂದಂತೆ ನಡೆಯುವವಳು, ಯಾರ ಅಧಿಕಾರಕ್ಕೂ ಒಳಗಾಗದವಳು ಇದ್ದಳು. ಆಕೆಯೇ ಔರಂಗ ಜೇಬನಿಗೆ ದಿಲ್ಲಿಯ ಪಟ್ಟವನ್ನು ಸಾಧ್ಯಮಾಡಿ ಕೊಟ್ಟಿದ್ದರೂ, ಆ ಮಹಾತ್ಮಾಕಾಂಕ್ಷಿಯಾದ ಸ್ತ್ರೀಯು ಈಗ ಬೇನೆಯಿಂದ ಮಲಗಿದ್ದ ತನ್ನ ಅಣ್ಣ ಔರಂಗಜೇಬನನ್ನು ಕೊಲ್ಲಿಸಿ, ದಿಲ್ಲಿಯ ಸಾರ್ವಭೌಮಾಧಿಕಾರವನ್ನು ತಾನು ಸಾಗಿಸಬೇಕೆಂದು ಮಾಡಿದ್ದಳು. ಔರಂಗಜೇಬನ ಹಾಸಿಗೆಯ ಬಳಿಯಲ್ಲಿ ಕುಳಿತಿದ್ದ ಆ ದುಷ್ಟಳು ತನ್ನ ಮುಂದೆ ಗದಗುಟ್ಟಿ ನಡಗುತ್ತ ಕುಳಿತಿದ್ದ ರಾಜವೈದ್ಯನನ್ನು ಕುರಿತು ಗರ್ಜಿಸಿ –

ರೋಷನಾರ — ನಿನ್ನ ಈ ಆಟವು ಇನ್ನೂ ಎಷ್ಟುದಿವಸ ನಡೆಯಬೇಕು? ನೀನು ರಾಜ್ಯವೈದ್ಯನು, ದಿಲ್ಲಿಯ ದರ್ಬಾರದ ವೈದ್ಯನು, ಎಂತಹ ಹೊತ್ತಿನಲ್ಲಿ ಎಂತಹ ತೀಕ್ಷ್ಣ ವಿಷವು ಬೇಕಾಗುತ್ತದೆಂಬದು ನಿನಗೆ ಗೊತ್ತಿರುತ್ತದೆ. ಈ ವರೆಗಿನ ದಿಲ್ಲಿಯ ದರ್ಬಾರದ ಸಾಂಪ್ರದಾಯ ವನ್ನು ನೀನು ಅರಿಯದವನಲ್ಲ. ನಿಮ್ಮನ್ನು ದುಡ್ಡುಕೊಟ್ಟು ಇಟ್ಟಿರುವದು ಯಾತಕ್ಕೆ? ಮಾತಾಡು; ಈಗ ಎರಡು ಸಪ್ತಕಗಳಿಂದ ಔಷಧ ಕೊಡುತ್ತಿದ್ದರೂ ಔರಂಗಜೇಬನು ಇನ್ನೂ ಯಾಕೆ ಸಾಯಲೊಲ್ಲನೆಂಬದನ್ನು ಸ್ಪಷ್ಟವಾಗಿ ಹೇಳು.

ಹಕೀಮ— (ಅತ್ಯಂತ ಆರ್ಜವವೃತ್ತಿಯಿಂದ) ಬೇಗಮ ಸಾಹೇಬ, ಶಹಾನಶಹಾ ಅಲಮಗೀರ ಬಾದಶಹಾ........

ರೋಷನಾರ–ಬಾಯಿಮುಚ್ಚು! ಅಮಲಗೀರನು ಹಿಂದೆ ಶಹಾನಶಹಾ ಎಂಬ ಬಿರುದನ್ನು ಜೋಡಿಸಬೇಡ. ಆ ಶಬ್ದವನ್ನು ನೀನು ಪುನಃ ಉಚ್ಚರಿಸಿದರೆ ನಿನ್ನ ನಾಲಿಗೆಯನ್ನು ಚೂರು ಚೂರು ಮಾಡೇನು. ನಿನ್ನೊಡನೆ ಒಂದು ಕ್ಷಣ ಮಾತಾಡಬೇಕೆಂದು ಇಚ್ಛಿಸುತ್ತೇನೆ, ನನ್ನ ಆ ಇಚ್ಛೆಯು ಪೂರ್ಣವಾಗುವದರೊಳಗೇ ನಿನ್ನ ಶಿರಚ್ಛೇದಕ್ಕಾಗಿ ಅಪ್ಪಣೆಕೊಡುವಷ್ಟು ನನ್ನನ್ನು ಸಿಟ್ಟಿಗೆಬ್ಬಿಸಬೇಡ!

ಹಕೀಮ ಏನು? ನನ್ನ ಮಾತು ಪೂರಾ ಕೇಳಿಕೊಂಡಬಳಿಕ ನನ್ನನ್ನು ಕೊಲ್ಲುವದಕ್ಕಾಗಿ ಅಪ್ಪಣೆ ಕೊಡುವಿರಾ?

ರೋಷನಾರ—ಹೌದು, ಇಂದು ನಾನು ನಿನ್ನನ್ನು ಅಲ್ಲಾನಕಡೆಗೆ ಕಳಿಸುವ ನಿಶ್ಚಯ ಮಾಡಿರುತ್ತೇನೆ.

ಹಕೀಮ—ಶಾಂತಮುದ್ರೆಯಿಂದ ನನ್ನನ್ನು ಕೊಲ್ಲಿಸುವ ಕಾರಣವೇನು?

ರೋಷನಾರ—ನನ್ನ ಅಪ್ಪಣೆ ಮೀರಿದ್ದರಿಂದ! ನೀನು ವಿಷಪ್ರಯೋಗದಿಂದ ಬಾದಶಹನನ್ನು ಯಾಕೆ ಕೊಲ್ಲಲಿಲ್ಲ?

ಹಕೀಮ—ಇದೆಂತಹ ನಿನ್ನ ಕೊಳಕ ಅಪ್ಪಣೆಯು? ನನ್ನ ಅನ್ನದಾತೃವನ್ನು, ಸದ್ಧರ್ಮ ಪ್ರತಿಪಾಲಕನನ್ನು ನಾನು ಕೊಲ್ಲಬೇಕೆ?

ರೋಷಗಾರ—ಹಕೀಮ, ನನ್ನ ಅಪ್ಪಣೆಯು ಕೊಳಕವೇ?

ಹಕೀಮ—ಅಲ್ಲಾನ ಅಪ್ಪಣೆಗೆ ವಿರುದ್ಧವಾಗಿರುವ ಅಪ್ಪಣೆಗಳು, ಅವು ಬಾದಶಹನ ಬಾಯಿಂದಲೇ ಬಂದವಾಗಿರಲಿ, ನಿನ್ನಂಥ ದುಷ್ಟ ಸ್ತ್ರೀಯ ಬಾಯಿಂದಲೇ ಬಂದವಾಗಿರಲಿ, ಅವು ಸಂಪೂರ್ಣ ಮುರಿಯಲಿಕ್ಕೆ ತಕ್ಕವಾಗಿರುವವು! ಅವು ಕೊಳಕ ಅಪ್ಪಣೆಗಳೇ ಸರಿ.

ರೋಷನಾರ—ಉನ್ಮತ್ತನಾದ ಹಕೀಮನೇ, ತೆಪ್ಪಗಾಗು! ಇನ್ನು ಒಂದು ಅಕ್ಷರವನ್ನೂ ಉಚ್ಚರಿಸಬೇಡ. ನನ್ನ ದುಷ್ಟ ಸ್ತ್ರೀಯ ಪ್ರಭಾವವನ್ನು ತೋರಿಸುತ್ತೇನೆ ನೋಡು.

ಈ ಮೇರೆಗೆ ನುಡಿಯುತ್ತಿರುವಾಗ ರೋಷನಾರಳ ಕಣ್ಣುಗಳೊಳಗಿಂದ ಕಿಡಿಗಳು ಹಾರ ತೊಡಗಿದ್ದವು. ಆಗ ಆಕೆಯು—''ಎಲಾ, ಸೈತಾನಖಾ, ಬಾ,'' ಎಂದು ನುಡಿದಳು. ರೋಷನಾರಳ ಅಪ್ಪಣೆಯು ತಿರುಗತಕ್ಕದ್ದಲ್ಲವೆಂಬದು ಹಕೀಮನಿಗೆ ಗೊತ್ತಿತ್ತು. ಇನ್ನು ತನ್ನ ಆಯುಷ್ಯವು ಒಂದೆರಡು ಗಳಿಗೆಯದೆಂದು ಆತನು ತಿಳಿದುಬಿಟ್ಟಿದ್ದನು; ಆದರೂ ಆ ಸ್ವಾಮಿನಿಷ್ಠನ ಮುಖದಲ್ಲಿ ಸ್ವಲ್ಪವಾದರೂ ಚಿಂತೆಯ ಚಿಹ್ನವು ತೋರಲಿಲ್ಲ. ಅಷ್ಟರಲ್ಲಿ ಗೋಡೆಯ ಒಂದು ಗುಪ್ತ ಬಾಗಿಲು ಪಕ್ಕನೆ ತೆರೆದು ಒಬ್ಬ ಕ್ರೂರ ಮನಷ್ಯನು ರೋಷನಾರಳ ಎದುರಿಗೆ ಬಂದು ನಿಂತನು. ಆಗ ರೋಷನಾರಳು ಸಂತಾಪದಿಂದ ಉರಿಯುತ್ತ—''ಸೈತಾನ, ಈ ಹಕೀಮನನ್ನು ಎಳೆದೊಯ್ದು ಜೀವವಿರುವಾಗಲೇ ಹುಚ್ಚನಾಯಿಗಳಿಂದ ಈತನನ್ನು ಹರಿದು ತಿನ್ನಿಸು,'' ಎಂದು ಅಪ್ಪಣೆಕೊಡಲು ಹಕೀಮನು—''ದುಷ್ಟ ಸ್ತ್ರೀಯೇ, ನಿನ್ನ ಈ ಕ್ರೂರ ಅಪ್ಪಣೆಗೆ ನಾನು ಬೆದರುತ್ತೇನೆಂದು ತಿಳಿದಿರುತ್ತೀಯಾ? ಇಂದಿಲ್ಲ ಇನ್ನು ಹತ್ತು ವರ್ಷಗಳ ಮೇಲಾದರೂ ನಾನು ಅಲ್ಲಾನಬಳಿಗೆ ಹೋಗುವವನು! ಅಂದಬಳಿಕ ಆ ದೀನದಯಾಳುವಿನ ಬಳಿಗೆ ಇಂದೇ ಹೋಗಲಿಕ್ಕೆ ನಾನೇಕೆ ಅಂಜಲಿ? ನಿನ್ನಂಥ ನರರಾಕ್ಷಸಿಗೆ ನಾನೇಕೆ ತಲೆಬಾಗಿಸಲಿ? ಸ್ವಾಮಿನಿಷ್ಠೆಯಿಂದಲೂ, ಪ್ರಾಮಾಣಿಕ ತನದಿಂದಲೂ, ಧರ್ಮಶ್ರದ್ಧೆಯಿಂದಲೂ ನಡೆದು ಕೊಂಡಿರುವ ನಾನು ಅಲ್ಲಾನಬಳಿಗೆ ಹೋಗಲಿಕ್ಕೆ ಏಕೆ ಅಂಜಬೇಕು? ಸೈತಾನಖಾನ ನಡೆ.

ಸೈತಾನಖಾನನು ಹಕೀಮನನ್ನು ದಬ್ಬಿಕೊಂಡು ಹೋಗಲು, ಇತ್ತ ರೋಷನಾರಳು ಮನಸ್ಸಿನಲ್ಲಿ–ನನ್ನಂತಹ ಕರ್ತೃತ್ವಶಾಲಿನಿಗೆ ಬಾದಶಹನನ್ನು ಕೊಲ್ಲಲಿಕ್ಕೆ ಇಷ್ಟು ತಡವಾಗಬೇಕೆ? ತಡಮಾಡಿದರೆ ಮಯೂರಾಸನವು ನನಗೆ ಹೇಗೆ ದೊರೆತೀತು? ಔರಂಗಜೇಬನು ರಾಜ್ಯವನ್ನು ಭೋಗಿಸಲಿಕ್ಕೆ ಅಧಿಕಾರಿಯೇ ಅಲ್ಲ, ಆತನು ಫಕೀರನು! ಆತನು ಮಯೂರಾಸನವೇರಿದ ಬಳಿಕ ಅದರ ಮುಂದೆ ಒಮ್ಮೆಯಾದರೂ ನಾಚು–ರಂಗು ಆಗಿರುವವೇ? ಈತನ ಕಾಲದಲ್ಲಿ ಮದ್ಯ ಪಾನವು ನಿಂತುಹೋಯಿತು. ಇಂತಹ ಅರಸಿಕನಾದ ಫಕೀರನು ದಿಲ್ಲಿಯ ಸಿಂಹಾಸನವೇರು ವದರಿಂದ ಪ್ರಯೋಜನವೇನು? ದಿಲ್ಲಿಯ ಎಲ್ಲ ವಿಲಾಸಿ ಜನರು ಈ ಫಕೀರನ ಆಳಿಕೆಗೆ ಬೇಸತ್ತು ಹೋಗಿದ್ದಾರೆ. ದರ್ಬಾರದ ಜನರ ಮೋರೆಯಮೇಲಿನ ಕಳೆಯೇ ಹೋಗಿಬಿಟ್ಟಿದೆ! ಪಾಪ! ವಿಲಾಸ, ಮದ್ಯಪಾನ, ನಾಚು–ರಂಗುಗಳು ನಿಂತು ಹೋದಬಳಿಕ ಅವರ ಮೋರೆಯ ಮೇಲೆ ಕಳೆಯು ಹೇಗೆ ಬರಬೇಕು? ಈ ಸ್ಥಿತಿಯು ಒಳ್ಳೆಯದಲ್ಲ, ನನ್ನ ತಂದೆಯಾದ ಶಹಾಜ ಹಾನನು ಇಷ್ಟು ಮುದುಕನಾಗಿದ್ದರೂ ಅವನ ವಿಲಾಸವು ಕಡಿಮೆಯಾಗಿಲ್ಲ, ನಮ್ಮ ಅಜ್ಜನಾದ

ಸೇಲೀಮನು ನೂರಜಹಾನಳ ಪ್ರಾಪ್ತಿಗಾಗಿ ಆಕೆಯ ಗಂಡನನ್ನು ಕೊಲ್ಲಿಸಿದನು! ಅಂತಹ ವಿಲಾಸವು ಈಗೆಲ್ಲಿ ಉಳಿದಿದೆ? ಇನ್ನು ನಾನು ದಿಲ್ಲಿಯ ಸಿಂಹಾಸನವನ್ನು ಆಕ್ರಮಿಸಿ ವಿಲಾಸವನ್ನು ಹೆಚ್ಚಿಸುವೆನು. ಇದಕ್ಕಾಗಿ ಇನ್ನೊಬ್ಬ ವೈದ್ಯನನ್ನು ಕರೆಸಿ ಬಾದಶಹನಿಗೆ ವಿಷಪ್ರಯೋಗಮಾಡಿಸಿ ಕೂಡಲೆ ಆ ವೈದ್ಯನನ್ನು ಕೊಂದುಬಿಟ್ಟರಾಯಿತು!

ಈ ಮೇರೆಗೆ ಆಲೋಚಿಸಿ ರೋಷನಾರಳು ತನ್ನ ವಿಶ್ವಾಸದ ದಾಸಿಯಾದ ಬಿಜಲಿಯನ್ನು ಕರೆದು —ಬಿಜಲೀ, ಹೋಗು, ಪಟ್ಟಣದೊಳಗಿನ ಒಬ್ಬ ಶ್ರೀಮಂತ ಹಕೀಮನನ್ನು ಕರಕೊಂಡು ಬಾ. ಇಲ್ಲದಿದ್ದರೆ ಯಾವನಾದರೂ ಒಬ್ಬ ಬಡ ಹಕೀಮನನ್ನು ಕರಕೊಂಡು ಬಂದೀ! ಬಡವರಿಗೆ ದುಡ್ಡಿನ ಬೆಲೆಯೇ ಗೊತ್ತಿರುವದಿಲ್ಲ! ಅವರ ನೀತಿ—ಧರ್ಮ—ಸ್ವಾಮಿನಿಷ್ಠೆ—ಸತ್ಯ ಇತ್ಯಾದಿ ರಗಳೆಗೆ ಬಿದ್ದು ನಮ್ಮ ದರ್ಬಾರದ ಹಕೀಮನಿಗೆ ದುಡ್ಡೇ ಧರ್ಮವಾಗಬೇಕು, ದುಡ್ಡೇ ನ್ಯಾಯವಾಗಿರ ಬೇಕು, ದುಡ್ಡೇ ನೀತಿಯಾಗಿರಬೇಕು. ಇಂಥ ಧನಾಢ್ಯ ಹಕೀಮನನ್ನು ಕರಕೊಂಡು ಬಾ. ಒಟ್ಟಿಗೆ ದುಡ್ಡಿನ ಆಶೆಯಿಂದ ಮಂದಿಯನ್ನು ಎಗ್ಗಿಲ್ಲದೆ ಕೊಲ್ಲುವ ಹಕೀಮನಿರಬೇಕು ನೋಡು! ನಡೆ, ಒಂದು ಕ್ಷಣವೂ ವಿಲಂಬ ಮಾಡಬೇಡ, ಎಂದು ಆಜ್ಞಾಪಿಸಲು, ಬಿಜಲಿಯು "ಆಜ್ಞೆಯೇ ಪ್ರಮಾಣವು" ಎಂದು ನುಡಿದು ಹೊರಟು ಹೋದಳು. ಅಷ್ಟರಲ್ಲಿ ಫಾತಿಮೆಯೆಂಬ ದ್ವಾರರಕ್ಷಕಳು ಬಂದು ಕುರ್ನಿಸಾತಮಾಡಿ–

ಫಾತಿಮೆ—ಜನಾನಖಾನೆಯ ಮುಖ್ಯಾಧಿಕಾರಿಯಾದ ಪೋಲಾದಖಾನರು ತಮಗೆ ವಿಜ್ಞಾಪಿಸಲು ನನ್ನನ್ನು ಕಳುಹಿದ್ದಾರೆ.

ರೋಷನಾರ—(ಆಧ್ಯತೆಯಿಂದ )ಅದೇನು ವಿಜ್ಞಾಪನೆಯು ?

ಫಾತಿಮೆ —ಒಬ್ಬ ಹಿಂದೂರಾಜನು ತಮ್ಮ ದರ್ಶನಕ್ಕಾಗಿ ಹೊರಗೆ ಕಾದಿರುವನಂತೆ.

ರೋಷನಾರ—ಛೆ! ಈ ಹೊತ್ತಿನಲ್ಲಿ ನಾನು ಯಾವ ಪುರುಷನನ್ನೂ ಕಾಣಲಾಗುವದಿಲ್ಲ, ಇತ್ತ ಆ ಕನ್ನಡಿ ತೆಗೆದುಕೋ ನೋಡೋಣ (ಕನ್ನಡಿ ನೋಡಿಕೊಂಡು) ಛೇ, ಈಗ ನಾನು ಆ ರಾಜನನ್ನು ಕಾಣುವ ಹಾಗಿಲ್ಲ, ನಾನು ಮೈ ತೊಳಕೊಂಡು ಶೃಂಗಾರವಾದಬಳಿಕ ಆ ಬಿಲೋರಿಯಾ ದಿವಾಣ ಖಾನೆಯಲ್ಲಿ ಆತನನ್ನು ಕರಕೊಂಡು ಬಾ. ಫಾತಿಮೇ ನನ್ನನ್ನು ಕಾಣಬೇಕೆಂದಿರುವ ರಾಜನ ಹೆಸರೇನು ಕೇಳಿರುವೆಯೋ?

ಫಾತಿಮೆ—ಕೇಳಿರುವೆನು, ಬಂದಿರುವವನು ಧಾರೀರದ ಅರಸನಾದ ಕಂಚುಕಿರಾಯನು.

ರೋಷನಾರ—ಹೋಗು, ಆ ಮುದುವನನ್ನು ನಾನು ಕಾಣುವದಿಲ್ಲವೆಂದು ಆವನಿಗೆ ಹೇಳು. ಇಂಥ ಮುದಿ ಹದ್ದುಗಳನ್ನು ನೋಡಿದಾಗ ನನ್ನ ಮನಸ್ಸಿಗಾದ ಅಸ್ವಸ್ಥತೆಯು ಮುಂದೆ ತಾಸರಡುತಾಸು ಹೋಗುವದೇ ಇಲ್ಲ,

ಫಾತಿಮೆ—ಸರಕಾರ, ಮುದುಕರು ಅಸ್ವಸ್ಥತೆಯನ್ನು ಉಂಟುಮಾಡುವಂತೆ ಮನೋರಂಜನವನ್ನೂ ಉಂಟುಮಾಡುತ್ತಾರೆ.

ರೋಷನಾರ—ಹೀಗೋ? ಹಾಗಾದರೆ ಆ ಮುದುವನನ್ನು ಕಳಿಸು.

ಫಾತಿಮೆಯು ಹೋದ ಸ್ವಲ್ಪ ಹೊತ್ತಿನಲ್ಲಿ ಕಂಚುಕಿರಾಯನು ರೋಷನಾರಳ ಬಳಿಗೆ ಬಂದನು. ಆತನನ್ನು ನೋಡಿ ರೋಷನಾರಳು ಒಂದೇಸವನೆ ನಗತೊಡಗಿದಳು. ಬೇಗಮು

ಸಾಹೇಬರು ಒಳ್ಳೇ ಆನಂದದಲ್ಲಿರುವದೊಂದು ತನ್ನ ಕಾರ್ಯಕ್ಕೆ ಅನುಕೂಲವೆಂದು ಕಂಚುಕಿರಾಯನು ಮನಸ್ಸಿನಲ್ಲಿ ಹಿಗ್ಗಿದನು. ಆತನು ಬಹು ವಿನಯದಿಂದ ರೋಷನಾರಳಿಗೆ ಕುರ್ನಿಸಾತಮಾಡಿ ಆಕೆಯನ್ನು ಕುರಿತು—''ಸಕಲ ಗುಣಸಂಪನ್ನ ಐಶ್ವರ್ಯಶಾಲಿನಿಯೂ, ಇಹಲೋಕದ ಅಮರಾವತಿಯ ಅನಭಿಷಿಕ್ತ ಇಂದ್ರಾಣಿಯೂ ಆದ ರೋಷನಾರಬೇಗಮ ಸಾಹೇಬರವರ ಎರಡೂ ಚರಣಗಳನ್ನು ಮಸ್ತಕದಲ್ಲಿಟ್ಟುಕೊಂಡು ಈ ದಾಸಾನುದಾಸನು ಬೇಡಿಕೊಳ್ಳುವದೇನಂದರೆ–

ಈ ಮೇರೆಗೆ ನುಡಿಯಲು, ರೋಷನಾರ ಬೇಗಮೆಯು ಬಿದ್ದುಬಿದ್ದು ನಗತೊಡಗಿದಳು. ಏನು ಮಾಡಿದರೂ ಆಕೆಯ ನಗೆಯು ನಿಲ್ಲಲೊಲ್ಲದು. ಆ ಇಂದ್ರಾಣಿಯ ನಗೆಯು ನಿಲ್ಲುವ ವರೆಗೆ ಕಂಚುಕಿರಾಯನು ಮಾತಾಡುವದಾದರೂ ಹೇಗೆ? ಆತನು ಕೈಜೋಡಿಸಿ ನಿಂತುಕೊಂಡು ಬಿಟ್ಟನು. ರೋಷನಾರಳು ಹೊಟ್ಟೆತುಂಬ ನಕ್ಕು ಕಂಚುಕಿರಾಯನನ್ನು ಕುರಿತು–

ರೋಷನಾರ—ಕಂಚುಕಿರಾಯ, ನೀನು ಇಲ್ಲಿ ಇರುವದಕ್ಕಿಂತ ಈಗ ಏನೋ ವಿಲಕ್ಷಣ ವಾಗಿ ಕಾಣುತ್ತಿರುವೆಯಲ್ಲ? ನಮ್ಮಲ್ಲಿರುವಾಗ ಈ ಬೆಳ್ಳಿಯ ಗಡ್ಡ–ಮೀಸೆಗಳು ನಿನಗೆ ಇದ್ದಿಲ್ಲ. ನೀನು ಅರಸನಾದ ಬಳಿಕ ಇವನ್ನು ಮಾಡಸಿಕೊಂಡಂತೆ ಕಾಣುತ್ತದೆ; ನಿನ್ನ ಈ ಬಚ್ಚಬಾಯನ್ನೂ, ಪಚ್ಚುಬಿದ್ದ ಗಲ್ಲಗಳನ್ನೂ, ಒಳನಟ್ಟ ಕಣ್ಣುಗಳನ್ನೂ ನೋಡಿ ನನಗೆ ಬಹಳ ಅಸಹ್ಯವಾಗುತ್ತದೆ. ಇಂತಹ ಅಂಜಿಕೆ ಬರುವ ಮೋರೆಯನ್ನು ತಕ್ಕೊಂಡು ನನ್ನ ಮುಂದೆ ಯಾಕೆ ಬಂದೆ? ನಿಮ್ಮಂತ ಮುದುವರಿಗೆ ಮಂದಿಯ ಮುಂದೆ ತಿರುಗಾಡಲಿಕ್ಕೆ ನಾಚಿಕೆ ಬರುವದಿಲ್ಲವೆ?

ಕಂಚುಕಿರಾಯ—ಬೇಗಮಸಾಹೇಬರ ಮಾತು ನಿಜವು. ಬೇಗಮಸಾಹೇಬರಿಗೆ ತ್ರಾಸ ವಾಗುವಂತೆ ನಾವು ಬರಬಾರದು; ಆದರೆ ಒಂದು ರಾಜಕಾರಣದ ಸೂಕ್ಷ್ಮ ಕೆಲಸಕ್ಕಾಗಿ ಬರಬೇಕಾಯಿತು.

ರೋಷನಾರ—(ಆವೇಶದಿಂದ) ರಾಜಕಾರಣ? ನಿಮ್ಮ ಹಿಂದೂ ಜನರಿಗೆ ರಾಜಕಾರಣ ದಲ್ಲಿ ಅಧಿಕಾರವೆಲ್ಲಿದೆ? ಬಾದಶಹರೂ ಅವರ ಜಾತಿಯವರೂ ರಾಜಕಾರಣಗಳನ್ನು ನಡಿಸ ಬಹುದು. ಉಳಿದವರು ರಾಜಕಾರಣವನ್ನು ನಡಿಸಿದರೆ ಬಾದಶಹರಿಗೆ ಸಹನವಾಗದು.

ಕಂಚುಕಿರಾಯ—ಸರಕಾರ, ಈ ದಾಸಾನುದಾಸನ ಮೇಲೆ ಹೀಗೆ ಸಿಟ್ಟಾಗಬಾರದು. ದಿಲ್ಲಿಯ ಬಾದಶಹರ ಯಾವತ್ತು ಮಾಂಡಲೀಕ ರಾಜರಲ್ಲಿ ರಾಜ್ಯನಿಷ್ಠೆಯ ಸಂಬಂಧದಿಂದ ಈ ಕಂಚುಕಿರಾಯನು ಅಗ್ರಗಣ್ಯನಾಗಿರುವನು. ನನ್ನ ಶ್ರೇಷ್ಠ ಸೇವಾ ಧರ್ಮಕ್ಕೆ ಮೆಚ್ಚಿಯೇ ನಿಮ್ಮ ತಂದೆಯವರು ನನಗೆ ''ಕಂಚುಕಿರಾಯ'' ಎಂಬ ಹೆಸರನ್ನು ಕೊಟ್ಟಿದ್ದಾರೆ; ಆದರೆ ಏನು ಮಾಡಬೇಕು, ನೋಡಬಾರದ್ದನ್ನು ನೋಡುವ ಪ್ರಸಂಗ ಬಂದದ್ದರಿಂದ ತಮ್ಮ ಚರಣಗಳ ದರ್ಶನಕ್ಕೆ ಬರಬೇಕಾಯಿತು.

ರೋಷನಾರ—ಈ ಅಳಬುರಕ ರಗಳೆಯನ್ನು ನನ್ನ ಮುಂದೆ ಕೊಚ್ಚಬೇಡ. ಯಾವನಾದರೂ ಒಬ್ಬ ಮಹಮ್ಮದೀಯ ವೀರನು ನಿನ್ನ, ಅಥವಾ ನಿನ್ನ ಪ್ರಜೆಗಳ ಸಂಪತ್ತನ್ನು ಎತ್ತಿ ಹಾಕಿರಲು, ಅದನ್ನು ತಿಳಿಸುವದಕ್ಕಾಗಿ ನೀನು ನನ್ನ ಬಳಿಗೆ ಬಂದಿರಬಹುದು; ಆದರೆ ಈ

ವಿಷಯವನ್ನು ದಿಲ್ಲಿಯ ದರ್ಬಾರವು ವಿಚಾರಿಸಲಾರದು; ಯಾಕಂದರೆ ನಿಮ್ಮ ಹಿಂದೂ ಅರಸರ ಸಂಪತ್ತಿಯು ನಮ್ಮದೇ ಇದ್ದು, ನಿಮ್ಮನ್ನು ಅದರ ರಕ್ಷಕರಾಗಿ ಇಟ್ಟಿರುವೆವೆಂಬ ಭಾವನೆಯು ನಮ್ಮಲ್ಲಿ ಧೃಡವಾಗಿರುತ್ತದೆ! ಅಂತೇ ನಿಮ್ಮ ಸಂಪತ್ತನ್ನು ಯಾವಾಗ ಕರದರೂಪದಿಂದ, ಯಾವಾಗ ಕಾಣಿಕೆಯ ರೂಪದಿಂದ, ಯಾವಾಗ ಬೇರೊಂದು ಕಾರಣದಿಂದ ನಾವು ನಮ್ಮ ಭಾಂಡಾರಕ್ಕೆ ಸೇರಿಸಿಕೊಳ್ಳುತ್ತಿರುವೆವು.

ಕಂಚುಕಿರಾಯ—ಸರಕಾರ, ನನ್ನ ರಾಜ್ಯದ ಸಂಪತ್ತಿಯು ದಿಲ್ಲಿಯ ದರ್ಬಾರದ ಚರಣಕ್ಕೆ ಅರ್ಪಿಸಿದ್ದಾಗಿರುತ್ತದೆ. ಅದಕ್ಕಾಗಿ ರಗಳೆಮಾಡುವವನು ಈ ಕಂಚುಕಿರಾಯನಲ್ಲ.

ರೋಷನಾರ—(ಮುಗುಳು ನಗೆ ನಗುತ್ತ ಕಣ್ಣು ಚಿವುಟುತ್ತ) ಹಾಗಾದರೆ ಯಾವನಾದ್ರೂ ಯವನ ಬಾಹದ್ದರನು ನಿನ್ನ ಹೆಂಡತಿಯೊಡನೆ, ಅಥವಾ ತಂಗಿಯೊಡನೆ, ಅಥವಾ ನಿನ್ನ ಮಗಳೊಡನೆ ಬಲಾತ್ಕಾರದಿಂದ ನಿಕಾ ಮಾಡಿಕೊಂಡಿರಬಹುದು; ಹಾಗಿದ್ದರೆ ಅದನ್ನು ದಿಲ್ಲಿಯ ದರ್ಬಾರವು ವಿಚಾರಮಾಡುವದಿಲ್ಲ; ಯಾಕಂದರೆ, ದಿಲ್ಲಿಯ ಬಾದಶಹರ ಅಧಿಕಾರದೊಳಗಿನ ಪ್ರದೇಶದಲ್ಲಿರುವ ಸೌಂದರ್ಯವತಿಯರಾದ ತರುಣಿಯರಿಗೆ ಬಾದಶಹರ, ಅಥವಾ ಅವರ ಯವನಾಧಿಕಾರಿಗಳ ಉಪಪತ್ನಿಗಳಾಗುವ ಬಹುಮಾನ ಕೊಡುವ ಸಾಂಪ್ರದಾಯವು ದಿಲ್ಲಿಯ ದರ್ಬಾರದಲ್ಲಿ ಬಹುದಿವಸದಿಂದ ನಡೆದುಬಂದಿರುತ್ತದೆ. ಇಂತಹ ಬಹುದಿವಸದ ಹಕ್ಕನ್ನು ರಕ್ಷಿಸುವದು ನಮ್ಮ ಶ್ರೇಷ್ಠ ಕರ್ತವ್ಯವೆಂದು ನಾವು ತಿಳಿದಿರುವೆವು!

ಕಂಚುಕಿರಾಯ—ಬೇಗಮಸಾಹೇಬ, ಅರ್ಧ ಆಯುಷ್ಯವನ್ನು ಬಾದಶಹರ ಜನಾನ ಖಾನೆಯಲ್ಲಿ ಕಳೆದಿರುವ ಕಂಚುಕಿರಾಯನಿಗೆ ಈ ಮಾತು ಗೊತ್ತಿಲ್ಲವೆ? ನನ್ನ ಹೆಂಡಿರು— ಮಕ್ಕಳ ಮೇಲೆ ದಿಲ್ಲಿಯ ದರ್ಬಾರದ ಕೃಪಾದೃಷ್ಟಿಯಾದರೆ ನನ್ನನ್ನು ಧನ್ಯನೆಂದು ತಿಳಿದೇನು! ಆದರೆ ಅಂತಹ ಭಾಗ್ಯವು ನನ್ನ ದೈವದಲ್ಲೆಲ್ಲಿದೆ?

ರೋಷನಾರ—ಹಾಗಾದರೆ ಯಾಕೆ ಬಂದೆ? ದರ್ಬಾರದಿಂದ ನಿನ್ನನ್ನೇನು ಕರೆ ಕಳುಹಿರುವದಿಲ್ಲ.

ಕಂಚುಕಿರಾಯ—ದರ್ಬಾರಕ್ಕೆ ಒಂದು ಮಹತ್ವದ ಸುದ್ದಿಯನ್ನು ಹೇಳಲಿಕ್ಕೆ ಬಂದಿದ್ದೇನೆ.

ರೋಷನಾರ—ಯಾತರ ಸುದ್ದಿಯು? ವ್ಯರ್ಥ ರಗಳೆ ಕೊಚ್ಚಬೇಡ. ನನ್ನ ಶೃಂಗಾರದ ಹೊತ್ತಾಯಿತು, ಬೇಗನೆ ಹೇಳು.

ಕಂಚುಕಿರಾಯ—ಸರಕಾರ, ಆ ಸುದ್ದಿಯು ಅತ್ಯಂತ ಶೋಚನೀಯವಾದದ್ದು, ಆ ಸುದ್ದಿಯು ಅತ್ಯಂತ ಹೃದಯದ್ರಾವಕವಾದದ್ದು, ಆ ಸುದ್ದಿಯು ಅತ್ಯಂತ ಸಂತಾಪಕರವಾದದ್ದು!

ರೋಷನಾರ—ಚಿಹಕೂಬ! ನೀನು ಕತ್ತೆಯೋ ಮನುಷ್ಯನೋ? ಯಾವಸುದ್ದಿಯು ಬೇಗನೇ ಹೇಳಬಾರದೆ? ನಿಲ್ಲು; ನಿನ್ನ ನಾಲಿಗೆಯು ಏಳದಂತೆ ಅದನ್ನು ಕೊಯ್ಯುವದೇ ಯೋಗ್ಯವು!

ರೋಷನಾರಳ ಸ್ವಭಾವವನ್ನು ಬಲ್ಲ ಕಂಚುಕಿರಾಯನು ಭಯದಿಂದ ನಡುಗುತ್ತ ಬಹು ನಮ್ರನಾಗಿ-ಸರಕಾರ, ಮಹೋಬದ ಅರಸನಾದ ಚಂಪತರಾಯನು ರಣದುಲ್ಲಾಖಾನರನ್ನು ಸೆರೆಯಲ್ಲಿ ಹಾಕಿರುವನು!

ರೋಷನಾರ—ಏನು? ನಿನ್ನ ಮೈಮೇಲೆ ಎಚ್ಚರವಿರುವದೋ ಇಲ್ಲವೋ? ಚಂಪತ ರಾಯನ ಮೇಲಿನ ದ್ವೇಷದಿಂದ ನೀನು ಈ ಸುದ್ದಿಯನ್ನು ಹುಟ್ಟಿಸಿಕೊಂಡು ಹೇಳುವೆ.

ಕಂಚುಕಿರಾಯ—ಇಲ್ಲ ಸರಕಾರ, ವಿಂಧ್ಯವಾಸಿನಿಯ ದೇವಾಲಯವನ್ನು ನಾಶ ಮಾಡುವದಕ್ಕಾಗಿ ಬಂದಿದ್ದ ರಣದುಲ್ಲಾಖಾನರನ್ನು ಚಂಪತರಾಯನ ಮಗ ಛತ್ರಸಾಲನೂ, ಬೇರೆ ತುಂಟ ಹುಡುಗರೂ ಕೂಡಿ ಸೋಲಿಸಿದರು. ಚಂಪತರಾಯನು ಅದಕ್ಕಾಗಿ ಹುಡುಗರನ್ನು ದಂಡಿಸದೆ ಖಾನರನ್ನು ಸೆರೆಯಲ್ಲಿಟ್ಟಿರುವನು.

ರೋಷನಾರ—ತುಂಟ ಹುಡುಗರು ಖಾನನನ್ನು ಸೋಲಿಸಿದರೆ? ಇದೆಂತಹ ಅಶಕ್ಯ ಸುದ್ದಿಯು! ಕಂಚುಕಿರಾಯ, ಇದಕ್ಕೆ ಸಾಕ್ಷಿಯೇನು? ಸುಮ್ಮನೆ ನನಗೆ ತಾಪಕೊಟ್ಟರೆ ನಿನ್ನ ಶಿರಚ್ಛೇದವಾದೀತು!

ರೋಷನಾರಳ ಈ ಭಯಂಕರ ಮಾತಿನಿಂದ ಕಂಚುಕಿರಾಯನ ಕಾಲೇ ಹೋದವು. ಆತನು ಜೋಲಿಬಂದು ಬಿದ್ದನು; ಆದರೂ ಆ ಕ್ರೂರ ಬೇಗಮೆಯ ಕರ್ಕಶ ಸ್ವಭಾವಕ್ಕೆ ಬೆದರಿ ನಡಗುತ್ತ ಆತನು—''ಬೇಗಮಸಾಹೇಬ, ಖಾನಸಾಹೇಬರು ತಮ್ಮ ಹೆಸರಿನ ಹಿಡಿಕೆಯ ಕಠಾರಿಯನ್ನು ತಮಗೆ ತೋರಿಸುವದಕ್ಕಾಗಿ ನನ್ನ ಕೈಯಲ್ಲಿ ಕೊಟ್ಟಿದ್ದರು.

ರೋಷನಾರ—ಕತ್ತೆ! ಅದನ್ನು ಯಾಕೆ ಕೊಡಲಿಲ್ಲ? ಅದನ್ನು ತೋರಿಸಿದರೆ ನಿನ್ನ ಮಾತನ್ನು ನಿಜವೆಂದು ನಂಬುವೆನು.

ಕಂಚುಕಿರಾಯ—(ಅಂಜಿ ಕಣ್ಣು ಬೆಳ್ಳಗೆ ಮಾಡುತ್ತ) ಅದನ್ನು ಛತ್ರಸಾಲನು ಕಸಿದು ಕೊಂಡನು.

ಇದನ್ನು ಕೇಳಿ ರೋಷನಾರಳು ಸಿಟ್ಟುಬೆಂಕಿಯಾಗಿ-ಕಂಚುಕಿರಾಯಾ, ನಿನ್ನ ಈ ಅಸತ್ಯ ಭಾಷಣಕ್ಕಾಗಿ ಈಗಲೇ ನಿನ್ನ ಶಿರಚ್ಛೇದ ಮಾಡಿಸುತ್ತಿದ್ದೆನು; ಆದರೆ ಬಹುದಿವಸದ ದರ್ಬಾರದ ಸೇವಕನಾಗಿರುವದರಿಂದ ನಿನಗೆ ಮೂವತ್ತುದಿನಗಳ ಅವಧಿಯನ್ನು ಕೊಟ್ಟಿರುತ್ತೇನೆ. ಅಷ್ಟರಲ್ಲಿ ನಿನ್ನ ಸುದ್ದಿಯು ನಿಜವೆಂಬ ನಂಬಿಗೆಯು ನನಗೆ ಆದರೆ ನಿನ್ನನ್ನು ಬಿಟ್ಟುಬಿಡುವೆನು. ಇಲ್ಲದಿದ್ದರೆ ಮೂವತ್ತೊಂದನೆಯ ದಿವಸ ನಿನ್ನ ಶಿರಚ್ಛೇದವಾಯಿತೆಂದು ತಿಳಿ!

# ಆಯೇಷೆ

ಔರಂಗಜೇಬನು ದಿಲ್ಲಿಯ ಸಿಂಹಾಸನವನ್ನು ಅನ್ಯಾಯದಿಂದ ಸಂಪಾದಿಸಿ ಆರು ವರ್ಷವಾಗಿತ್ತು ತನ್ನ ಆ ಅನ್ಯಾಯದ ಕ್ರೂರ ಕೃತಿಗಳನ್ನು ಅಡಿಕೊಂಡು ತನ್ನನ್ನು ದ್ವೇಷಿಸದಂತೆ ಶೂರರನ್ನೂ, ಮುತ್ಸದ್ದಿಗಳನ್ನೂ, ಮಾಂಡಲೀಕ ಅರಸರನ್ನೂ, ಪ್ರಜೆಗಳನ್ನೂ ಲಂಚ, ಅಧಿಕಾರ, ಬಿರುದು ಮೊದಲಾದವನ್ನು ಕೊಟ್ಟು ಆ ಕ್ರೂರ ಬಾದಶಹನು ಇನ್ನೂ ಸಮಾಧಾನ ಪಡಿಸಿದ್ದಿಲ್ಲ, ತನ್ನ ಸಹಾಯಕರ್ತೃಗಳಾದ ಚಂಪತರಾಯ, ಮಿರುಜುಮ್ಲಾ ಮೊದಲಾದವರನ್ನು ಒಂದಿಲ್ಲೊಂದು ಬಗೆಯ ಪ್ರತ್ಯುಪಕಾರದಿಂದ ಇನ್ನೂ ಸಂತೋಷಪಡಿಸಿದ್ದಿಲ್ಲ. ತಂದೆಯನ್ನು ಸೆರೆಯಲ್ಲಿಹಾಕಿ, ಅಣ್ಣ-ತಮ್ಮಂದಿರನ್ನು ಕೊಲ್ಲಿಸಿ ಸಿಂಹಾಸನವೇರಿದ ಬಾದಶಹನು ಕುರಾಣದ ಮತದಂತೆ ಬಾದಶಹನೇ ಅಲ್ಲವೆಂದು ವಾದಿಸುತ್ತಿರುವ ಮೌಲವಿ, ಕಾಜಿ, ಮುಲ್ಲಾ ಮೊದಲಾದ ಧರ್ಮಾಧಿಕಾರಿಗಳ ಕೈ ಬೆಚ್ಚಗೆಮಾಡಿ ಅವರ ಬಾಯಿಕಟ್ಟಿ ಅವರ ಆಶೀರ್ವಾದ ಪಡೆಯುವದು ಇನ್ನು ಹಾಗೆಯೇ ಉಳಿದಿತ್ತು ತಾನು ಕೇವಲ ಫಕೀರನಂತೆ ಯಾವ ವ್ಯಸನಗಳಿಗೂ ಒಳಗಾಗದೆ, ರಾಜ್ಯದಲ್ಲಿಯ ಜನರನ್ನು ತನ್ನಂತೆಯೇ ನಡಿಸಿಕೊಳ್ಳತೊಡಗಿದ್ದರಿಂದ ಜನರಿಗಾಗಿದ್ದ ಅಸಮಾಧಾನವನ್ನು ಸದ್ಯದಮಟ್ಟಿಗಾದರೂ ಆತನು ಹೋಗಲಾಡಿಸಬೇಕಾಗಿತ್ತು ಈ ಎಲ್ಲ ಕೆಲಸಗಳಿಗಾಗಿ ಆತನು ರಮಜಾನದ 25ನೇ ತಾರೀಖನ್ನು ಗೊತ್ತುಮಾಡಿದ್ದನು. ಅದರ ಮೊದಲನೆಯ ದಿವಸದಿಂದ ನಾಲ್ಕುದಿವಸ ತನ್ನ ಜನಾನಖಾನೆಯ ಎಲ್ಲ ಗೋಷೆಯ ಸ್ತ್ರೀಯರೂ, ಬೇರೆಯವರ ಗೋಷೆಯ ಸ್ತ್ರೀಯರೂ ನಿರ್ಬಾಧವಾಗಿ ಸ್ವತಂತ್ರದಿಂದ ವ್ಯವಹರಿಸತಕ್ಕದ್ದೆಂದು ಗೊತ್ತಾಗಿತ್ತು

ಔರಂಗಜೇಬನ ಅಪ್ಪಣೆಯಂತೆ ದಿಲ್ಲಿಯು ಇಪ್ಪತ್ತು ಇಪ್ಪತ್ತೆರಡು ದಿವಸಗಳಿಂದ ಮನಃಪೂರ್ವಕವಾಗಿ ಶೃಂಗರಿಸಲ್ಪಡತೊಡಗಿತ್ತು ಈ ಕೆಲಸದಲ್ಲಿ ಸ್ವಲ್ಪವೂ ಕಾರ್ಪಣ್ಯಮಾಡದೆ ಕೈ ಸಡಿಲುಬಿಟ್ಟು ಹಣ ವೆಚ್ಚಮಾಡಬೇಕೆಂದು ಬಾದಶಹನು ಅಪ್ಪಣೆ ಮಾಡಿದ್ದನು. ನಾಗರೀಕರು, ವಿಶೇಷವಾಗಿ ಜನಾನಖಾನೆಯೊಳಗಿನ ಪರತಂತ್ರ ತರುಣಿಯರು ಆ ಆನಂದದ ದಿವಸಗಳನ್ನು ಎದುರು ನೋಡತೊಡಗಿದ್ದರು. ''ದಿವಾಣ-ಈ-ಆಮ'' ಎಂಬ ದರ್ಬಾರದ ಮಂದಿರವು ಅಮರಾವತಿಯ ಇಂದ್ರನ ಸಭೆಯನ್ನು ಹಿಂದಕ್ಕೆ ಸರಿಸುವಂತೆ ಶೃಂಗರಿಸಲ್ಪಡತೊಡಗಿತ್ತು ಗೋಷೆಯ ತರುಣಿಯರ ಸಲುವಾಗಿ ವಿವಿಧ ವಸ್ತುಗಳ ಪ್ರದರ್ಶನವು ನೀರಿನಂತ ಹಣವೆಚ್ಚಮಾಡಿ ಮನೋಹರವಾಗುವಂತೆ ರಚಿಸಲು ಆರಂಭವಾಗಿತ್ತು ಆ ಸಮಾರಂಭದಲ್ಲಿ ನಾಚುರಂಗು-ಮದ್ಯ ಮೊದಲಾದವುಗಳ ವಿಲಾಸಕ್ಕೆ ಪ್ರತಿಬಂಧವಿದ್ದಿಲ್ಲ, ಹೀಗಿರುವಾಗ ಔರಂಗಜೇಬನು ಅಕಸ್ಮಾತ್ ವ್ಯಾಧಿಪೀಡಿತನಾದನು. ಆತನ ಆರೈಕೆಯ ಎಲ್ಲ ಸೂತ್ರಗಳೂ ರೋಷನಾರ ಬೇಗಮೆಯು ಆಕ್ರಮಿಸಿದ್ದನ್ನು ವಾಚಕರು ಬಲ್ಲರು ಆ ಕಠೋರ ಸ್ತ್ರೀಯ ತಂತ್ರವನ್ನು ತಿಳಿಯಲಿಕ್ಕೆ ಯಾರೂ ಸಮರ್ಥರಾಗಿದ್ದಿಲ್ಲ, ಬಾದಶಹನು ಸತ್ತಿರುವನೋ, ಬದುಕಿರುವನೋ ಎಂಬದರ ಗಂಧವನ್ನು ಕೂಡ ಆಕೆಯು ಯಾರಿಗೂ ಹತ್ತಗೊಟ್ಟಿದ್ದಿಲ್ಲ. ಆ

ಮಹಾತ್ವಾಕಾಂಕ್ಷಿಯಾದ ವ್ಯಾಘ್ರಿಯು ತನ್ನ ಒಬ್ಬ ಪ್ರೀತಿಯ ರಾಣಿಯ "ಶಹಾಜಹಾನ ಅಜೀಮುಶಹಾ" ಎಂಬ ಆರು ವರ್ಷದ ಕೂಸನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ, ಆತನು ದೊಡ್ಡವನಾಗುವವರೆಗೆ ತಾನು ದಿಲ್ಲಿಯ ಸಿಂಹಾಸನದ ಸೂತ್ರಗಳನ್ನು ನಡಿಸುತ್ತ ಮೆರೆಯ ಬೇಕೆಂದು ಯೋಚಿಸಿದ್ದಳು. ಇದಕ್ಕಾಗಿ ಆಕೆಯು ಬಾದಶಹನ ಮರಣದ ಹಾದಿಯನ್ನು ನೋಡುತ್ತ ಆತನ ವಿಷಯದ ಸುದ್ದಿಯನ್ನು ಯಾರಿಗೂ ಹತ್ತಗೊಡದೆ ಬಾದಶಹನ ಸಿಕ್ಕಾ-ಮೊರ್ತಬುಗಳಿಂದ ರಾಜ್ಯಕಾರಭಾರದ ಹುಕುಮುಗಳನ್ನು ಕಳಿಸುತ್ತಲಿದ್ದಳು.

ಬಾದಶಹನ ಈ ಅಕಸ್ಮಿಕ ಬೇನೆಯಿಂದ ದರ್ಬಾರದ ಕಾರ್ಯವು ನಡೆಯುವದೋ ಇಲ್ಲವೋ ಎಂಬ ಬಗ್ಗೆ ಜನರಲ್ಲಿ ಸಂಶಯವು ಉತ್ಪನ್ನವಾಗಿ, ನಾಲ್ಕುಕಡೆಗೆ ಅಸಮಾಧಾನವು ಪಸರಿಸತೊಡಗಿತ್ತು; ಆದರೆ ದಿಲ್ಲಿಯನ್ನು ಶೃಂಗರಿಸುವ ಕೆಲಸವು ಯಥಾಸ್ಥಿತವಾಗಿ ನಡೆಯುತ್ತಲೇ ಇದ್ದಿತು. ಆ ಕೆಲಸವನ್ನು ಅತ್ಯುತ್ತಮ ರೀತಿಯಿಂದ ನೆರವೇರಿಸುವದಕ್ಕಾಗಿ ಬಾದಶಹನ ಶಿಕ್ಕಾಮೊರ್ತಬುಗಳಿಂದ ರೋಷನಾರಳು ವಜೀರನಿಗೆ ಅಪ್ಪಣೆಗಳನ್ನು ಕಳಿಸುತ್ತಲೇ ಇದ್ದಳು. ಒಂದೊಂದೇ ದಿನಗಳು ಕಳೆಯುತ್ತಿರಲು, ಉತ್ಸವದ ದಿವಸಗಳು ಸನಿಯಕ್ಕೆ ಬಂದಬಂದಂತೆ ಜನರ ಕುತೂಹಲವು ಹೆಚ್ಚುತ್ತಹೋಯಿತು. ಹೀಗಿರುವಾಗ ರಮಜಾನದ 24ನೆಯ ತಾರೀಖು ಬಂದುಬಿಟ್ಟಿತು. ಗೋಷೆಯಲ್ಲಿಯ ಯಾವತ್ತೂ ಯವನ ಸುಂದರಿಯರು ಸ್ವೇಚ್ಛೆಯಿಂದ ಪ್ರದರ್ಶನದಲ್ಲಿ ಗಂಡಸರೊಳಗೆ ಬೆರೆತು ವ್ಯವಹರಿಸಹತ್ತಿದರು. ಎಲ್ಲಿ ನೋಡಿದರೂ ಸ್ವಾತಂತ್ರ್ಯ ಸಾಮ್ರಾಜ್ಯ, ಎಲ್ಲಿ ನೋಡಿದರೂ ಸ್ವಚ್ಛಂದವೃತ್ತಿಯ ಸೊಬಗು, ಎಲ್ಲಿ ನೋಡಿದರೂ ಆನಂದದ ಅಬ್ಬರ ಈ ಚಂದದಿಂದ ದಿಲ್ಲಿಗೆ ದಿಲ್ಲಿಯೇ ವಿಲಾಸಮಗ್ನವಾಗಿ ಹೋಗಿತ್ತು. ಈ ಬಗೆಯ ಸ್ವಾತಂತ್ರ್ಯದ ವಿಲಾಸಕ್ಕೆ ನಾಲ್ಕುದಿನ ಅತಂಕ ತಂದುಕೊಳ್ಳುವದು, ಆತಂಕ ಮಾಡುವದು ಕಾಯದೆಗೆ ವಿರುದ್ಧವೆಂಬ ಮಾತು ಬಾದಶಹನ ಜಾಹೀರನಾಮೆಯಿಂದ ಎಲ್ಲರಿಗೂ ಗೊತ್ತಾಗಿ ಹೋಗಿರುವದರಿಂದ, ಯಾವ ಬಗೆಯ ಸಂಕೋಚವೂ ಜನರ ವ್ಯವಹಾರದಲ್ಲಿ ಕಂಡು ಬರುತ್ತಿದ್ದಿಲ್ಲ. ಯಾರ ಉಗುರಿನ ದರ್ಶನವೂ ಜನ್ಮದಲ್ಲಿ ದುರ್ಲಬವೋ, ಅಂತಹ ಬಾದಶಹನ ಜನಾನಖಾನೆಯ ರಾಣಿಯರೂ, ಕುಟುಂಬದೊಳಗಿನ ಸ್ತ್ರೀಯರೂ ಸ್ವಚ್ಛಂದದಿಂದ ಜನರೊಡನೆ ವ್ಯವಹರಿಸುತ್ತಿದ್ದರು.

ಇಂಥಹ ಆನಂದದ ಸಮಾರಂಭವು ನಡೆದಿದ್ದರೂ ಒಬ್ಬ ಪ್ರೌಢಸುಂದರಿಯು ಚಿಂತಾಕ್ರಾಂತಳಾಗಿ ಆ ಉತ್ಸವದಲ್ಲಿ ಸೇರದೆ ಯಾರನ್ನೋ ಹುಡುಕುತ್ತ ಯಮುನಾನದಿಯ ದಂಡೆಯಕಡೆಗೆ ಒಬ್ಬಳೇ ಸಾಗಿದ್ದಳು. ಆಕೆಗೆ ಜಗತ್ತೇ ಶೂನ್ಯವಾಗಿತ್ತು. ತಾನು ಹುಡುಕುತ್ತಿದ್ದ ಮನುಷ್ಯನು ಸಿಗದ್ದರಿಂದ ಆಕೆಯು ಬೇಸತ್ತು ನಿರಾಶಪಟ್ಟು, ಯಮುನೆಯ ದಂಡೆಯ ಮೇಲಿದ್ದ ಒಂದು ಬಂಡೆಗಲ್ಲ ಮೇಲೆ ಕುಳಿತು ಉಸುರುಹಾಕುತ್ತ ಮನಸ್ಸಿನಲ್ಲಿ ದೇವರನ್ನು ಪ್ರಾರ್ಥಿಸುತ್ತಿದ್ದಳು. ಅಂದಿನ ಆ ಮಹೋತ್ಸವವನ್ನು ಬಿಟ್ಟು ಈ ಚಿಂತಾಕ್ರಾಂತ ಸ್ತ್ರೀಯ ಚಿಂತೆಯನ್ನು ದೂರಮಾಡಲಿಕ್ಕೆ ಅಲ್ಲಿಗೆ ಯಾರು ಅಡ್ಡ ಹಣಕಬೇಕು? ಆಕೆಯು ಮನಸ್ಸಿನಲ್ಲಿ ದೇವರನ್ನು ಪ್ರಾರ್ಥಿಸುತ್ತ ಪ್ರಾರ್ಥಿಸುತ್ತ ಗಟ್ಟಿಯಾಗಿ—"ದೇವೀ, ವಿಂಧ್ಯವಾಸಿನೀ, ನಿನ್ನ ಈ

ಕನ್ಯೆಯು ಅನನ್ಯಭಾವದಿಂದ ನಿನಗೆ ಶರಣುಬಂದಿದ್ದರೂ ನೀನು ಹೀಗೆ ನಿರಾಕರಿಸುವದು ನಿನ್ನ ಕೋಮಲಹೃದಯಕ್ಕೆ ಒಪ್ಪುವದೇ? ದುಷ್ಟಶಾಸನದ ನಿನ್ನ ಅಘೋರ ಶಸ್ತ್ರಗಳು ಎಷ್ಟು ಭಯಂಕರವಿದ್ದರೂ, ಭಕ್ತರ ವಿಷಯದ ನಿನ್ನ ವಾತ್ಸಲ್ಯವು ಎಷ್ಟು ದೃಢವಾದದ್ದೆಂಬುದನ್ನು ನಾನು ಬಲ್ಲೆನು. ಇಂದಿನ ರಾತ್ರಿಯು ಕಳೆದು ನಾಳೆ ಬೆಳಗಾಗುತ್ತಲೇ ಶಹಾನಶಹಾ ಔರಂಗಜೇಬ ಬಾದಶಹನ ಅಂತವಾಗುವದು. ಇದನ್ನು ಈ ಅನಾಥೆಯು ಹೇಗೆ ಸಹಿಸಲಿ? ನಾನು ಅಜ್ಞಾನ ವಶಳಾಗಿ ವಿಲಕ್ಷಣ ಪ್ರಸಂಗದಿಂದ ಯವನನ ಕೈಹಿಡಿದ ತಪ್ಪಿಗಾಗಿ ಈಪರಿ ನನ್ನನ್ನು ನೀನು ಕಾಡಬಹುದೇ? ನನ್ನ ನಿರ್ಮಲ ಹೃದಯವನ್ನು ನೀನರಿಯೆಯಾ? ಎಂದು ನುಡಿಯುವಾಗ ಆಕೆಯ ಕಣ್ಣುಗಳೊಳಗಿಂದ ಒಂದೇಸವನೇ ನೀರುಗಳು ಹೋಗುತ್ತಿದ್ದವು. ತನ್ನ ಬೆನ್ನಹತ್ತಿ ತನ್ನ ಈ ರೀತಿಯನ್ನು ಪರೀಕ್ಷಿಸುತ್ತ ಗೊತ್ತಾಗದಂತೆ ಬಂದಿದ್ದ ಒಬ್ಬ ತರುಣನನ್ನು ಆಕೆಯು ನೊಡಿಯೇ ಇರಲಿಲ್ಲ. ತನ್ನ ದುಃಖದಲ್ಲಿ ತಾನು ಮಗ್ನಳಾಗಿಹೋಗಿದ್ದಳು. ಅಷ್ಟರಲ್ಲಿ ಆ ತರುಣನು ಸ್ಪಷ್ಟ ಧ್ವನಿಯಿಂದ–

ತರುಣ–ಪಾತಕಿಯಾದ ಸ್ತ್ರೀಯೇ, ಸಾಕು, ವಿಂಧ್ಯವಾಸಿನಿಗೆ ದೋಷವಿಡುವದನ್ನು ನಿಲ್ಲಿಸಿ ಬಿಡು. ಅನೀತಿಯ ಹಾದಿಯಹಿಡಿದು ಹುಟ್ಟಿದಮನೆಗೂ, ಕೊಟ್ಟಮನೆಗೂ ಕಲಂಕವನ್ನುಂಟು ಮಾಡುವ ಸ್ತ್ರೀಯು ಭಗವತೀ ವಿಂಧ್ಯವಾಸಿನಿಗೆ ದೋಷವಿಡುವದರಲ್ಲಿ ಆಶ್ಚರ್ಯವಾದ್ದೂ ಏನು? ಘೋರ ನರಕಕ್ಕೆ ಕೊರತೆಯಾಗಿರುವ ಪಾಪವನ್ನು ತುಂಬಿಕೊಳ್ಳುವದಕ್ಕಾಗಿಯೇ ನೀನು ಹೀಗೆ ದೇವರಿಗೆ ಹೆಸರಿಡುತ್ತೀ.

ಈ ಅಪರಿಚಿತ ಶಬ್ದಗಳು ಕಿವಿಗೆ ಬಿದ್ದಕೂಡಲೇ ಆ ಸ್ತ್ರೀಯು ತನ್ನ ಮುಚ್ಚಿದ ಕಣ್ಣುಗಳನ್ನು ತೆರೆದಳು. ಈಗ ಸಿಟ್ಟಿನಿಂದ ಅವು ಕೆಂಪಾಗಿ ಕಿಡಿಗಳನ್ನು ಸುರಿಸುತ್ತಿರುವಂತೆ ತೋರುತ್ತಿತ್ತು. ಆಕೆಯು ತನ್ನೆದುರಿಗೆ ನಿಂತಿರುವ ತರುಣನನ್ನು ಕ್ರೋಧದಿಂದ ನೋಡುತ್ತ –

ಸ್ತ್ರೀ—ತರುಣಾ, ನೀನು ನನ್ನನ್ನು ಯಾರೆಂದು ತಿಳಿದಿರುವೆ?

ತರುಣ—ಅನೀತಿಯ ಮದದಿಂದ ಮೈಮರೆತವಳೂ, ದೃಢತರವಾದ ವಿಷಯ ವಾಸನೆಯ ಬಲೆಯಲ್ಲಿ ಸಿಕ್ಕವಳೂ ಆದ ಪಾತಕೀಸ್ತ್ರೀಯೆಂದು ನಾನು ತಿಳಿದಿರುವೆನು.

ಸ್ತ್ರೀ—ಅನುಭವ ಶೂನ್ಯನಾದ ತರುಣನೇ, ಹೀಗೆ ನೀನು ವಿಚಾರವಿಲ್ಲದೆ ನುಡಿಯ ತಕ್ಕದ್ದಲ್ಲ; ನೀನು ತಿಳಿದುಕೊಂಡಿರುವಂತೆ ನಾನು ಅನೀತಿಯ ಮದದಿಂದ ಮೈಮರೆತ ಸ್ತ್ರೀಯಲ್ಲ; ವಿಷಯವಾಸನೆಯ ಬಲೆಯಲ್ಲಿ ಸಿಕ್ಕಿರುವ ಪಾತಕೀ ಸ್ತ್ರೀಯೂ ಅಲ್ಲ.

ತರುಣ—ನೀನು ಅಲ್ಲೆಂದಮಾತ್ರದಿಂದ ನನ್ನ ಮಾತು ಸುಳ್ಳಾಗಲಾರದು. ನಿನ್ನ ಈ ಹಿಂದೂ ಹೃದಯವೂ, ಯವನ ವೇಷವೂ ಸಾಕ್ಷಿಯಾಗಿರಲು, ನನ್ನ ಮಾತಿನ ಸತ್ಯತೆಗೆ ನನಗೆ ಮತ್ತೊಂದು ಬೇರೆ ಸಾಕ್ಷಿಯೇತಕ್ಕೆ ಬೇಕು? ವಿಂಧ್ಯವಾಸಿನಿಯನ್ನು ಪ್ರಾರ್ಥಿಸುತ್ತಿರುವ ನೀನು ಜಾತಿಯಿಂದ ಹಿಂದುವಾಗಿರಬೇಕು! ನಿನ್ನ ವೇಷವನ್ನು ನೋಡಿದರೆ, ನೀನು ಅನೀತಿಯಿಂದ ಮುಸಲ್ಮಾನನ ಕೈ ಹಿಡಿದಿರಬೇಕೆಂಬದು ವ್ಯಕ್ತವಾಗುತ್ತದೆ. ಅಂದಬಳಿಕ ವಿಷಯಾಸಕ್ತಳಲ್ಲದ ಪವಿತ್ರ ಸ್ತ್ರೀಯಿಂದ ಇಂಥ ಅನುಚಿತ ಕಾರ್ಯವಾಗಬಹುದೋ?

ಸ್ತ್ರೀ—(ತಿರಸ್ಕಾರದಿಂದ ನಕ್ಕು) ತರುಣ ರಜಪೂತನೇ, ಪಾಪ! ಇನ್ನೂ ನಿನ್ನ ತಲೆಯ ಮೇಲಿನ ಮಾಸವೂ ಆರಿರುವದಿಲ್ಲ. ಅಂತೇ ಈಗಿನ ಹೇಡಿ ರಜಪೂತರು ತಮ್ಮ ಹೆಣ್ಣು ಮಕ್ಕಳನ್ನು ದಿಲ್ಲಿಯ ಬಾದಶಹರ, ಹಾಗೂ ಅವರ ಅಧಿಕಾರಿಗಳ ವಶಕ್ಕೆ ಸಂತೋಷದಿಂದ ಒಪ್ಪಿಸುತ್ತಿರುವದನ್ನು ನೀನು ವಿಚಾರಿಸುವದಿಲ್ಲ. ಈ ಮಾತಿನ ವಿಚಾರವನ್ನು ನೀನು ಮಾಡಿದ್ದರೆ, ನನ್ನ ಚರಿತ್ರವನ್ನು ನೀನು ಅರಿಯದಿದ್ದರೂ, ಇಷ್ಟು ಕಠೋರತನದಿಂದ ನನ್ನನ್ನು ತಿರಸ್ಕರಿಸುವ ಸಾಹಸಕ್ಕೆ ನೀನು ಹೋಗುತ್ತಿದ್ದಿಲ್ಲ!

ತರುಣ—ಅಂತಹ ಹೇಸಿ ರಜಪೂತರ ಮಾತನ್ನು ಈ ಚಂಪತರಾಯನ ಮಗನಾದ ಛತ್ರಸಾಲನ ಮುಂದೆ ಎತ್ತಬೇಡ; ಸ್ವಂತದ ಶೀಲಕ್ಕಾಗಿ ರಣಾಂಗಣದಲ್ಲಿ ರಕ್ತದ ಹನಿಗಳನ್ನು ಸುರಿಸುವದಕ್ಕೆ ಬುಂದೇಲದ ರುದ್ರಪ್ರತಾಪನ ವಂಶಜರು ಕೆಲವರಾದರೂ ಇನ್ನೂ ಸಿದ್ಧವಾಗಿರು ವರೆಂಬದನ್ನು ಲಕ್ಷದಲ್ಲಿಡು! ಅಂತಹ ತೇಜಸ್ವಿಗಳು ನಿನ್ನನ್ನು ಯಾಕೆ ತಿರಸ್ಕರಿಸಲಿಕ್ಕಿಲ್ಲ?

ತರುಣನ ಈ ಮಾತುಗಳನ್ನು ಕೇಳಿದ ಕೂಡಲೇ ಆ ಗಂಭೀರ ಸ್ತ್ರೀಗೆ ಪರಮಾನಂದ ವಾಯಿತು. ಆ ತರುಣನಿಂದ ತನಗಾಗಿದ್ದ ಅಪಮಾನವನ್ನು ಮರೆತು ಆಕೆಯು –

ಸ್ತ್ರೀ—ಕುಮಾರ, ನೀನು ಪ್ರತಾಪಶಾಲಿಯಾದ ಚಂಪತರಾಯನ ಮಗನೇ? ಛತ್ರಸಾಲನೇ?

ತರುಣ—ಹೌದು, ನಾನು ಚಂಪತರಾಯನ ಮಗನು, ಕುಮಾರ ಛತ್ರಸಾಲನು!

ಸ್ತ್ರೀ—ಹಾಗಿದ್ದರೆ ನಾನು ಮೊರೆಯಿಟ್ಟದ್ದು ವಿಂಧ್ಯವಾಸಿನಿಯ ಕಿವಿಗೆ ಮುಟ್ಟಿತೆಂದು ತಿಳಿಯುವೆನು. ದೇವೀ, ದಯಘನೇ, ನನ್ನಮುಂದೆ ನಿಂತಿರುವ ಈ ತರುಣನು ಮಹೋಬದ ಯುವರಾಜ ಛತ್ರಸಾಲನಾಗಿರದೆ, ನನ್ನನ್ನು ಉದ್ಧರಿಸುವದಕ್ಕಾಗಿ ನೀನು ಕಳಿಸಿರುವ ನಿನ್ನ ಪ್ರತಿನಿಧಿಯೆಂದು ನಾನು ತಿಳಿಯುವೆನು. ಕುಮಾರ, ನಿನ್ನ ಬಲಗೈಯನ್ನು ಮುಂದಕ್ಕೆ ಚಾಚು. ನಾನು ಈ ರಾಖಿಯನ್ನು ನಿನ್ನ ಕೈಗೆ ಕಟ್ಟಿ ನಾನು ನಿನ್ನ ಒಡಹುಟ್ಟಿದಾಕೆಯಾಗಿರಬೇಕಾಗಿರುವದು. ನಾಳೆ ಆಗುವ ದರ್ಬಾರಕ್ಕಾಗಿ ಚಂಪತರಾಯನು ಬರುವನೆಂಬ ಸುದ್ದಿಯನ್ನು ಕೇಳಿ ಆತನ ಕೈಗೆ ಈ ರಾಖಿಯನ್ನು ಕಟ್ಟಿ ಆತನನ್ನು ನನ್ನ ಒಡಹುಟ್ಟಿದ ಅಣ್ಣನನ್ನಾಗಿ ಮಾಡಿಕೊಳ್ಳಬೇಕೆಂದು ನಾನು ಆತನನ್ನು ಹುಡುಕುತ್ತ ತಿರುಗುತ್ತಿದ್ದೆನು; ಆದರೆ ನನಗೆ ಆತನೇನು ಆತನ ಮಗನೇನು? ಯಾರಾದರೂ ನನ್ನ ಒಡಹುಟ್ಟಿದವರಾಗಿ ನನ್ನ ವಿಪತ್ತನ್ನು ದೂರಮಾಡಿದರಾಯಿತು!

ಹೀಗೆ ನುಡಿಯುವ ಸ್ತ್ರೀಯ ಮುಖವನ್ನು ಪ್ರಸನ್ನ ಮುದ್ರೆಯಿಂದ ನೋಡುತ್ತ ಛತ್ರಸಾಲನು ಸುಮ್ಮನೆ ನಿಂತುಕೊಂಡನು. ಆಗ ಆ ಸ್ತ್ರೀಯು ಸ್ವಲ್ಪ ಸಿಟ್ಟಿನಿಂದ –

ಸ್ತ್ರೀ—ಛತ್ರಸಾಲ, ನನ್ನ ಬಂಧುವೆನಿಸಿಕೊಳ್ಳಲಿಕ್ಕೆ ನಿನಗೆ ಅಪಮಾನವಾಗುತ್ತದೇನು? ಅಥವಾ ನಾಚಿಕಬರುತ್ತದೆಯೋ? ಮೋಸಹೋಗಿ ಕೈಹಿಡಿದ ತಪ್ಪಿಗಾಗಿ ಪಾತಿವ್ರತ್ಯದ ಧರ್ಮ ವನ್ನನುಸರಿಸಿ ಯವನ ಪತಿಯನ್ನು ಅನನ್ಯಭಾವದಿಂದ ಸೇವಿಸಹತ್ತಿರುವ ಮಾತ್ರದಿಂದ ನಾನು ನೀತಿ ಭ್ರಷ್ಟಳಾದೆನೆಂದು ತಿಳಿದಿರುವೆಯಾ? ಈ ಭ್ರಾಂತಿಯನ್ನು ಬಿಟ್ಟುಬಿಡು. ನಿನ್ನ ಆ ನಿರಾಧಾರದ ಕಲ್ಪನೆಯನ್ನು ದೂರಮಾಡು. ನಿನ್ನ ಮುಂದೆ ನಿಂತಿರುವ ಈ ಸ್ತ್ರೀಯು ಬುಂದೇಲ ಖಂಡದ ವೀರ ರಜಪೂತನ ರಕ್ತಮಾಂಸದಿಂದಾದವಳಿರುವಳೆಂದು ತಿಳಿದು, ಕೈಯನ್ನು ಮುಂದಕ್ಕೆ

ಚಾಚಿ ನನ್ನ ಬಂಧುವಾಗಲು ಒಪ್ಪದ ಪಕ್ಷದಲ್ಲಿ, ನಿನ್ನ ಹೃದಯದೊಳಗೆ ಭೂತದಯೆಯು ಲೇಶವಾದರೂ ವಾಸಿಸುತ್ತಿರುವದಿಲ್ಲವೆಂದು ತಿಳಿದು ಆರ್ಯಸ್ತ್ರೀಯರು ನಿನ್ನ ಮುಖಾವಲೋಕನ ಮಾಡುವದೂ ಅಮಂಗಲವೆಂದು ತಿಳಿಯುವರು. ಈ ರಾಖಿಯ ಸ್ಪರ್ಶವು ನಿನ್ನ ಕೈಗೆ ಆದಕೂಡಲೆ ನಿಜವಾದ ಬಂಧುತ್ವವು ನಿನ್ನ ಮನಸ್ಸಿನಲ್ಲಿ ಸಂಚರಿಸತೊಡಗಿ, ಇಲ್ಲಿಯವರೆಗೆ ನೀತಿಭ್ರಷ್ಟಳಾಗಿ ತೋರುವ ಈ ಸ್ತ್ರೀಯು ನಿನ್ನ ಅಕ್ಕನಾಗಲಿಕ್ಕೆ ಯೋಗ್ಯಳಿರುವಳೆಂಬದು ನಿನಗೆ ಗೊತ್ತಾದೀತು.

ಸ್ತ್ರೀಯ ಈ ಮಾತುಗಳನ್ನು ಕೇಳಿ ಛತ್ರಸಾಲನು ಗಂಭೀರಮುದ್ರೆಯನ್ನು ತಾಳಿ ತನ್ನ ಬಲಗೈಯನ್ನು ಮುಂದಕ್ಕೆ ಚಾಚಿದನು. ಆಗ ಆ ಕುಮಾರನ ವೀರ ಶ್ರೀಯುಕ್ತವಾದ ಮುಖಕಮಲದ ಕಡೆಗೂ, ಮುಂದಕ್ಕೆ ಚಾಚಿರುವ ಆತನ ಪರಿಪುಷ್ಟ ಬಾಹುವಿನ ಕಡೆಗೂ ತನ್ನ ರಾಖಿಯ (ರಕ್ಷಣದ ದಾರದ) ಕಡೆಗೂ ನೋಡುತ್ತ ತನ್ನ ರಾಖಿಯನ್ನು ಕಟ್ಟುತ್ತಿರುವಾಗ ಛತ್ರಸಾಲನ ಕೈಯೊಳಗಿನ ಕಠಾರಿಯ ಕಡೆಗೆ ಲಕ್ಷಹೋಗಲು, ಆ ಸ್ತ್ರೀಯು ರಾಖಿ ಕಟ್ಟುವದನ್ನು ಅಷ್ಟಕ್ಕೇ ಬಿಟ್ಟು ಆನಂದ ದಿಂದ ಕುಣಿಯಹತ್ತಿದಳು. ಅದನ್ನು ನೋಡಿ ಛತ್ರಸಾಲನು, ಈಕೆಯು ಹುಚ್ಚಿಯೆಂದು ನಿರ್ಣಯಿಸುತ್ತಿರುವಷ್ಟರಲ್ಲಿ ಆಕೆಯು ಛತ್ರಸಾಲನನ್ನು ಕುರಿತು–

ಸ್ತ್ರೀ—ಆಯಿತು, ನನ್ನ ಕಾರ್ಯವು ನಿಶ್ಚಯವಾಗಿ ಆಯಿತು! ದೇವೀ, ವಿಂಧ್ಯವಾಸಿನೀ, ನಿನ್ನ ಈ ಅತರ್ಕ್ಯ ಅನುಗ್ರಹಕ್ಕಾಗಿ ನಾಳಿನ ನಿನ್ನ ವಾರ್ಷಿಕೋತ್ಸವದ ದಿವಸ ನಿನ್ನ ಉಡಿಯನ್ನು ಮುತ್ತು ರತ್ನಗಳಿಂದ ತುಂಬುವೆನು; ಆದರೆ ಕುಮಾರ ಛತ್ರಸಾಲ, ನಿನ್ನ ಈ ಋಣವನ್ನು ಯಾವರೀತಿಯಿಂದ ತೀರಿಸಲಿ?

ಛತ್ರಸಾಲ–ನನ್ನದೆಂತಹ ಋಣವು? ನಾನೇನು ಈಗ ನಿನಗೆ ಉಪಕಾರಮಾಡಿದ್ದೇನೆ?

ಸ್ತ್ರೀ—ನನ್ನ ಮೇಲೆ ಉಪಕಾರಮಾಡುವ ಪ್ರಸಂಗವು ಇನ್ನು ಮೇಲೆ ನಿನಗೆ ಬೇಗನೆ ಬರುವದು! ಛತ್ರಸಾಲ, ಈ ಕಠಾರಿಯು ನಿನಗೆ ಎಲ್ಲಿ ದೊರೆಯಿತು? ರೋಷನಾರಾ ಬೇಗಮೆಯ ಈ ಕಠಾರಿಯು ಈಗ ನಿನ್ನ ಕೈಯಲ್ಲಿರುವದರಿಂದ, ನೀನು ದಿಲ್ಲಿಯ ದರ್ಬಾರದಲ್ಲಿ ಬೇಕಾದ ಕೆಲಸವನ್ನು ಮಾಡಬಹುದು. ನಿನ್ನ ಮಾತು ಕುರಾಣದ ವಾಕ್ಯದಂತೆ ಮನ್ನಿಸಲ್ಪಡುವದು.

ಛತ್ರಸಾಲ—ನಿನ್ನ ಮಾತಿನ ಅರ್ಥವೇ ನನಗೆ ತಿಳಿಯಲೊಲ್ಲದು. ಈಗ ಕಠಾರಿಯನ್ನು ನಾನು ಕಂಚುಕಿಯರಾಯನೆಂಬ ಧಾರೀರದ ಅರಸನ ಕೈಯೊಳಗಿಂದ ಕಸಿದುಕೊಂಡೆನು. ಇದರಿಂದ ನಾನು ಬೇಕಾದ ಕೆಲಸವನ್ನು ಹೇಗೆ ಮಾಡಬಹುದು?

ಸ್ತ್ರೀ—ಈ ಕಠಾರಿಯು ನಿನ್ನ ಕೈಯಲ್ಲಿರುವ ತನಕ ಸ್ವತಃ ರೋಷನಾರಾ ಬೇಗಮೆಯಿಂದ ಆಗುವಷ್ಟು ಕೆಲಸವನ್ನು ನೀನು ಮಾಡಬಹುದು. ಒಟ್ಟಿಗೆ ಈ ಕಠಾರಿಯೆಂದರೆ ರೋಷನಾರಾ ಬೇಗಮಳೆಂದು ತಿಳಿದುಬಿಡು. ಅದನ್ನು ತಕ್ಕೊಂಡು ನೀನು ಬೇಕಾದಲ್ಲಿ ಹೋದರೂ ನಿನಗೆ ಯಾರೂ ಪ್ರತಿಬಂಧವಮಾಡಲಾರರು. ಆದರೆ ಮೊದಲು ಈ ರಾಖಿಯನ್ನು ಕಟ್ಟಿಸಿಕೊಳ್ಳು, ಆಮೇಲೆ ನೀನು ಮಾಡತಕ್ಕ ಕೆಲಸವನ್ನು ಹೇಳುವೆನು.

ಈ ಮೇರೆಗೆ ನುಡಿದು ಆ ಸ್ತ್ರೀಯು ಛತ್ರಸಾಲನ ಕೈಯಲ್ಲಿ ರಾಖಿಯನ್ನು ಕಟ್ಟಿದಳು. ಬಳಿಕ ಆಕೆಯು ಛತ್ರಸಾಲನನ್ನು ಕುರಿತು–

ಸ್ತ್ರೀ—ಛತ್ರಸಾಲ, ಇಂದಿನಿಂದ ನೀನು ನನ್ನ ಒಡಹುಟ್ಟಿದ ಬಂಧುವಾದೆ. ನನ್ನ ಸಂರಕ್ಷಣದ ಭಾರವು ಇನ್ನು ನಿನ್ನನ್ನು ಕೂಡಿತು. ಔರಂಗಜೇಬಬಾದಶಹರ ತಂಗಿಯಾದ ರೋಷನಾರಳು ನಾಳೆ ಎರಡು ತಾಸುಹೊತ್ತು ಏರುವದರೊಳಗೆ ವಿಷಪ್ರಯೋಗದಿಂದ ಬಾದಶಹರನ್ನು ಕೊಲ್ಲಬೇಕೆಂದು ನಿಶ್ಚಯಿಸಿದ್ದಾಳೆ ವಿಷವು ಹೊಟ್ಟೆಯೊಳಗೆ ಇಳಿದು ಕೂಡಲೇ ಬಾದಶಹರ ಪ್ರಾಣವು ಹೋಗದಿದ್ದರೆ ಅವರ ಶಿರಚ್ಛೇದಮಾಡಬೇಕೆಂತಲೂ ಅಪ್ಪಣೆ ಮಾಡಿದ್ದಾಳೆ; ಆದ್ದರಿಂದ ಈ ಕಠಾರಿಯ ಸಹಾಯದಿಂದ ನೀನು ಬಾದಶಹರ ಜೀವವನ್ನು ಉಳಿಸಬೇಕು.

ಛತ್ರಸಾಲ—ಅಮ್ಮಾ ರಾಖಿಯನ್ನು ಕಟ್ಟಿಸಿಕೊಂಡು ನಿನ್ನ ಬಂಧುವಾಗಿರುವ ನಾನು, ನಿನ್ನ ಸಂಕಟವನ್ನು ದೂರಮಾಡುವದಕ್ಕಾಗಿ ನನ್ನ ಪ್ರಾಣವನ್ನಾದರೂ ಅರ್ಪಿಸುವೆನು; ಆದರೆ ಪ್ರತ್ಯಕ್ಷ ಔರಂಗಜೇಬ ಬಾದಶಹನ ತಂಗಿಯು ಅಣ್ಣನ ಪ್ರಾಣಹರಣಮಾಡುವದೆಂದರೆ ನನಗೆ ಪರಮಾಶ್ಚರ್ಯವಾಗಿ ತೋರುತ್ತದೆ; ಆ ಕ್ರೂರ ಮನುಷ್ಯಳು ಅಂಥ ಕ್ರೂರತನವನ್ನು ಯಾವ ಲಾಭದ ಸಲುವಾಗಿ ಮಾಡುವಳು?

ಸ್ತ್ರೀ—ತಾನು ದಿಲ್ಲಿಯ ಮಯೂರಾಸನವನ್ನೇರಿ ರಾಜ್ಯ ಕಾರಭಾರವನ್ನು ನಡಿಸಬೇಕೆಂಬ ಮಹತ್ವಾಕಾಂಕ್ಷೆಯು ಆಕೆಗೆ ಬಹು ದಿವಸಗಳಿಂದ ಇರುವದು. ಈಗ ಬಾದಶಹರನ್ನು ಕೊಂದು ತೆರವಾದ ಸಿಂಹಾಸನದ ಮೇಲೆ ಬಾದಶಹರ ಮತ್ತೊಬ್ಬ ಮಗನಾದ ಆರು ವರ್ಷದ ಶಹಾಜಾಹಾನ ಅಜೀಮಶಹಾ ಎಂಬ ಕೂಸನ್ನು ಹೆಸರಿಗೆ ಕೂಡಿಸಿ, ಆ ಕೂಸನ್ನು ತೊಡೆಯ ಮೇಲೆ ಆಡಿಸುತ್ತ ಆತನು ದೊಡ್ಡವನಾಗುವವರೆಗೆ ತಾನು ಕಾರಭಾರ ಮಾಡಬೇಕೆಂದು ಆ ದುಷ್ಟ ಬೇಗಮೆಯು ಮಾಡಿರುವಳು.

ಛತ್ರಸಾಲ—ಹಾಗಾದರೆ ಯುವರಾಜ ಮೊ ಅಜೀಮನ ಗತಿಯೇನು?

ಸ್ತ್ರೀ—ಖಡ್ಗದ ಒಂದೇ ಕಡತದಿಂದ ಸಹಜವಾಗಿ ಆತನ ತಲೆಹಾರಿಸಬಹುದೆಂದು ರೋಷನಾರಳು ತಿಳಿದಿರುವಳು; ಆದ್ದರಿಂದ ನೀನು ಈಗ ನನ್ನ ಸಂಗಡ ನಡೆ. ಆ ದುಷ್ಟ ಸ್ತ್ರೀಯು ತನ್ನ ಕಾರಸ್ಥಾನದಲ್ಲಿ ಮಗ್ನಳಾಗಿರುವದರೊಳಗೆ ನಮ್ಮ ಮನೆಗೆ ಹೋಗೋಣ, ಇಲ್ಲದಿದ್ದರೆ, ಆ ಕೃಷ್ಣಸರ್ಪದ ಕಡತದಿಂದ ಬಾದಶಹರೊಡನೆ ನಾವಿಬ್ಬರೂ ಸಾಯಬೇಕಾದೀತು. ನಾಳಿನ ದರ್ಬಾರದ ಹೊತ್ತಿಗಿಂತ ಎರಡುತಾಸು ಮುಂಚಿತವಾಗಿ, ನೆರೆದ ದರ್ಬಾರದಲ್ಲಿ ಬಾದಶಹರ ಮರಣದ ಸುದ್ದಿಯನ್ನು ಪ್ರಸಿದ್ಧಪಡಿಸಬೇಕೆಂದು ಆ ನೀಚಳು ನಿರ್ಧರಿಸಿರುವಳು. ಅಷ್ಟರಲ್ಲಿ ನಾವು ಬಾದಶಹರನ್ನು ಬಿಡಿಸೋಣ ನಡೆ. ಯುವರಾಜ ಮೋ ಅಜ್ಜಿಮನೂ ಈ ಕೆಲಸದಲ್ಲಿ ನಿನಗೆ ಸಹಾಯಮಾಡುವನು.

ಛತ್ರಸಾಲ—ಅಮ್ಮಾ ಬಾದಶಹರ ಸಲುವಾಗಿ ಇಷ್ಟು ಕರುಣಾಮಯಳಾಗಿರುವ ನೀನು ಬಾದಶಹರಿಗೆ ಏನಾಗಬೇಕು? ನಿನ್ನ ಹೆಸರೇನು?

ಸ್ತ್ರೀ—ನಾನು ಬಾದಶಹನ ಹೆಂಡತಿಯು; ನಾನು ವಿಂಧ್ಯವಾಸಿನಿಯನ್ನು ಧ್ಯಾನಿಸುವಾಗೂ, ನನ್ನ ಜನ್ಮ ಭೂಮಿಯ ಅಭೀಷ್ಟವನ್ನು ಚಿಂತಿಸುವಾಗೂ ಬುಂದೇಲಖಂಡ

ದೊಳಗಿನ ಲಲಿತೆಯಾಗಿರುವೆನು. ಬೇರೆ ಪ್ರಸಂಗದಲ್ಲಿ ಈ ದೇಹಕ್ಕೆ ಆಯೇಷಾ ಬೇಗಮ ಎಂದು ಕರೆಯುವರು.

ಛತ್ರಸಾಲ —ಅಂದರೆ ಯುವರಾಜ ಮೋ ಅಜ್ಜಿಮನ ಮಾತೃಶ್ರೀಯವರು ತಾವೇ ಏನು?

ಸ್ತ್ರೀ—ಹೌದು, ಈಗ ನಿನ್ನ ಒಡಹುಟ್ಟಿದಾಕೆಯಾಗಿರುವ ನಾನೇ ಮೋ ಅಜ್ಜಿಮನ ತಾಯಿಯು!

## ಬಾದಶಹನ ದರ್ಬಾರವು

ರಮಜಾನದ 25ನೆಯ ತಾರೀಖು. ಮೊದಲೇ ಗೊತ್ತಾದಂತೆ ದಿವಾಣ–ಇ–ಆಮದಲ್ಲಿ ಭವ್ಯವಾದ ದರ್ಬಾರು ನೆರೆದಿದೆ. ಪ್ರಧಾನಮಂಡಲದವರು ಆಢ್ಯತೆಯಿಂದ ಕುಳಿತು ಕೊಂಡಿದ್ದಾರೆ. ಸರದಾರರು, ದರಕದಾರರು, ಅಮೀರ ಉಮರಾವರರು, ಮಾಂಡಲೀಕರಾಜರು, ನವಾಬರು, ಸುಲ್ತಾನರು ತಮ್ಮ ತಮ್ಮ ಯೋಗ್ಯತೆಯಂತೆ ಉಚಿತ ಸ್ಥಾನಗಳನ್ನು ಅಲಂಕರಿಸಿರು ತ್ತಾರೆ. ಇಬ್ಬರು ರಾಜಕುಮಾರರು, ಈ ಹೊತ್ತಿನಂಥ ಮಂಗಲ ಪ್ರಸಂಗದಲ್ಲಿ ಸಾರ್ವಭೌಮ ನೃಪತಿಯ ಕಂಚುಕಿಯ ಪದವಿಯ ಮಾನವು ತಮಗೆ ದೊರೆತದ್ದಕ್ಕಾಗಿ ಹೆಮ್ಮೆಯಿಂದ ಮಯೂರಾಸನದ ಎರಡೂ ಮಗ್ಗಲಲ್ಲಿ ನಿಂತುಕೊಂಡಿದ್ದಾರೆ.

ಬೇರೆ ಇಬ್ಬರು ರಾಜಕುಮಾರರು ದಿಲ್ಲೀಪತಿಯ ಗೌರವಶಾಲಿಯಾದ ಹೆಸರನ್ನು ಬಿರುದಿ ನೊಡನೆ ಹೊಗಳಲು ಸಿದ್ಧರಾಗಿ ತಮ್ಮ ಕೈಯೊಳಗಿನ ಬಂಗಾರದ ಬೆತ್ತಗಳಕಡೆಗೆ ಅಭಿಮಾನದಿಂದ ನೋಡತೊಡಗಿರುತ್ತಾರೆ. ಬಾದಶಹನ ಧರ್ಮಗುರುವು ಮಯೂರಾಸನದ ಹತ್ತರದಲ್ಲಿಯೇ ಒಂದು ಉಚ್ಚಾಸನದ ಮೇಲೆ ಕುಳಿತಿದ್ದು, ಅಲಮಗೀರನ ದರ್ಬಾರದೊಳಗಿನ ತನ್ನ ಶ್ರೇಷ್ಠತ್ವ ವನ್ನು ಪ್ರಕಟಿಸುತ್ತಲಿದ್ದಾನೆ; ಆದರೆ ಏನಿದ್ದು ಏನು ಮಾಡಬೇಕು? ದರ್ಬಾರದ ಕಾರ್ಯಕ್ರಮದ ಕಾಲವು ಗತಿಸಿ ಹೋದರೂ ಮಯೂರಾಸವನ್ನು ಬಾದಶಹನು ಅಲಂಕರಿಸದೆ ಹೋದದ್ದರಿಂದ ತಿಲಕವಿಹೀನ ಸುಂದರಿಯಂತೆ ದರ್ಬಾರವು ಅಂದಗೆಟ್ಟು ಅಮಂಗಲ ಸುರಿಯುತ್ತಿತ್ತು! ಈ ದಿನ ಬಾದಶಹನು ಮಯೂರಾಸನವೇರುವನೋ ಬೇರೆ ಯಾರಾದರೂ ಅದನ್ನು ಆಕ್ರಮಿಸುವರೋ, ಬಾದಶಹನ ಬೇನೆಯು ನೆಟ್ಟಗಾಗಿರುವದೋ–ಅಥವಾ ಹಾಗೆಯೇ ಇರುವದೋ ಇಲ್ಲವೆ ಆತನು ಸತ್ತಿರುವನೂ ಎಂಬುದು ಯಾರಿಗೂ ಗೊತ್ತಿದ್ದಿಲ್ಲ. ಎಲ್ಲರೂ ತಮತಮಗೆ ತೋಚಿದಂತೆ ಏನಾದರೂ ಕಲ್ಪಿಸುತ್ತ ಕುಳಿತುಕೊಂಡಿದ್ದರೂ ಇತ್ತ ಯುವರಾಜ ಛತ್ರಸಾಲನು ಅಕಸ್ಮಾತ್ ಇಲ್ಲದಂತೆ ಆದದ್ದರಿಂದ ಚಂಪತರಾಯನು ಖಿನ್ನನಾಗಿರುವಾಗ, ಆತನನ್ನು ರಾಜಾ ಜಯಸಿಂಗನು ಸಮಾಧಾನಗೊಳಿಸುತ್ತಿದ್ದನು.

ಹೀಗಿರುವಾಗ ಸಶಸ್ತ್ರ ತಾರ್ತರ ತರುಣಿಯರು ಸುತ್ತುಗಟ್ಟಿರಲು, ಒಬ್ಬ ಗೋಷೆಯ ಸ್ತ್ರೀಯು ತನ್ನ ಕೈಯಲ್ಲಿ ರಾಜಮುಕುಟವನ್ನು ಹಿಡಿದುಕೊಂಡು ಒಂದು ಆರುವರ್ಷದ ಕೂಸು ಆಕೆಯ ಬೆರಳು ಹಿಡಿದುಕೊಂಡುಬರುತ್ತಿರಲು, ಜನಾನಖಾನೆಯ ಬಾಗಿಲಿನಿಂದ ಹೊರಟು ದರ್ಬಾರಕ್ಕೆ ಬಂದಳು. ಅದನ್ನು ನೋಡಿ ಎಲ್ಲರೂ ಬೆರಗಾಗಿ ಕುಳಿತುಕೊಂಡರು. ಅಂತಹ ಪ್ರಚಂಡ ದರ್ಬಾರವೆಂದರೇನು? ಸ್ತಬ್ಧವಾಗಿ ಕುಳಿತುಬಿಟ್ಟಿತು! ಆ ಸ್ತ್ರೀಯು ಸಪರಿವಾರ ಮೆಲ್ಲಮೆಲ್ಲನೆ ಮಯೂರಾಸನದ ಕಡೆಗೆ ಸಾಗಿಬರುತ್ತ ಆ ಆಸನದ ಮೊದಲನೆಯ ಪಾವಟಿಗೆ ಮೇಲೆ ಒಂದು ಕಾಲು ಇಟ್ಟು ನಿಂತುಕೊಂಡು ತನ್ನ ಮೋರೆಯ ಬುರುಕೆಯನ್ನು ತೆಗೆದು, ತನ್ನ ತೀಕ್ಷ್ಣ ದೃಷ್ಟಿಗಳಿಂದ ದರ್ಬಾರದ ನಾಲ್ಕೂ ಕಡೆಗೆ ನೋಡಹತ್ತಿದಳು. ಆಗಿನ ಆ ಪ್ರೌಢೆಯ ಸುಂದರವಾದ ತೇಜಸ್ವಿ ಮುಖಮಂಡಲವನ್ನು ನೋಡಿ, ದರ್ಬಾರಕ್ಕೆ ದರ್ಬಾರವೇ ಚಿಪ್ಪಾಗಿ ಕುಳಿತುಕೊಂಡಿತು. ಆಗ ಆ ಸ್ತ್ರೀಯು ಗಾಂಭೀರ್ಯದಿಂದ ಸಭೆಯನ್ನುದ್ದೇಶಿಸಿ—''ವೃದ್ಧ ಪ್ರಧಾನಜೀ, ವಿಲಾಸಿಗಳಾದ ಸರದಾರರೇ, ಸಮಸ್ತ ಮಾಂಡಲಿಕ ರಾಜರೆ, ನನ್ನ ಅಣ್ಣಂದಿರಾದ ಔರಂಗಜೇಬ ಬಾದಶಹರ ಮರಣವಾರ್ತೆಯನ್ನು ನಿಮ್ಮೆಲ್ಲರ ಮುಂದೆ ಹೇಳಲಿಕ್ಕೆ ನನಗೆ ಅತ್ಯಂತ ವ್ಯಸನವಾಗುತ್ತದೆ. ಬಾದಶಹರಿಗೆ ನೆಟ್ಟಗಾಗಿ ಅವರು ಪುನಃ ಮಯೂರಾಸನವನ್ನು ಅಲಂಕರಿಸಿ ರಾಜ್ಯಭಾರ ಮಾಡಬೇಕೆಂದು ನಾವು ಪರಿಪರಿಯಾಗಿ ಕಷ್ಟಪಟ್ಟದ್ದನ್ನು ನೀವು ಅರಿತಿರುವಿರಿ; ಆದರೆ ನಮಗೆ ಯಶಸ್ಸುಕೊಡುವದು ಅಲ್ಲಾನ ಮನಸ್ಸಿಗೆ ಬರಲಿಲ್ಲ! ಬಂಧುವಿನ ಮರಣಕ್ಕಾಗಿ ನಾನು ಶೋಕಮಗ್ನರಾಗುವದು ನಮ್ಮ ಕರ್ತವ್ಯವಾಗಿರುವದು; ಆದರೂ ಸಾಮ್ರಾಜ್ಯದ ಹಿತಕ್ಕೆ ಲಕ್ಷ ಗೊಟ್ಟು ಆ ದುಃಖವನ್ನುನುಂಗಿಕೊಂಡು ತೆರವಾದ ಮಯೂರಾಸನ ವನ್ನು ಅಲಂಕರಿಸುವದಕ್ಕಾಗಿ ಈ ಶಹಾಜಾದಾ ಅಜೀಮಶಹನನ್ನು ಕರೆದುಕೊಂಡು ನಾನು ದರಬಾರಕ್ಕೆ ಬರಬೇಕಾಯಿತು. ಪರಲೋಕವಾಸಿ ಅಲಮಗೀರ ಬಾದಶಹರಿಗೆ ಹಲವು ಜನ ಹೆಂಡರಿದ್ದರೂ, ಶಹಾಜಖಾನನ ಮಗಳೊಬ್ಬಳೇ ಆ ಬಾದಶಹರ ಕುರಾಣ ಸಮ್ಮತ ಹೆಂಡತಿ ಯಾಗಿರುವಳು. ಕ್ರಿಸ್ತಧರ್ಮವನ್ನ ನುಸರಿಸಿರುವ ಉದೇಪುರಿಯಾಗಲಿ, ಬುಂದೇಲಖಂಡದಿಂದ ಓಡಿಸಿಕೊಂಡು ಬಂದಿರುವ ಆಯೇಷೆಯಾಗಲಿ ಬಾದಶಹನ ನಿಜವಾದ ರಾಣಿಯರಾಗಿರದೆ, ಉಪಪತ್ನಿಯರಾಗಿರುವರೆಂಬ ನಮ್ಮ ಮತದಂತೆ ನಿಮ್ಮ ಮತವಾದರೂ ಇರಲೇಬೇಕೆಂದು ನಾನು ಇಚ್ಛಿಸುತ್ತೇನೆ. ಆಯೇಷೆ ಯನ್ನಾಗಲಿ, ಉದೇಪುರಿಯನ್ನಾಗಲಿ, ಉಳಿದ ನೂರಾರು ಸುಂದರ ತರುಣಿಯರನ್ನಾಗಲಿ ಬಾದಶಹನು ತನ್ನ ವಿಷಯಸುಖಕ್ಕಾಗಿ ಸಂಗ್ರಹಿಸಿರುವುದರಿಂದ, ಅವರ ಹೊಟ್ಟೆಯಲ್ಲಿ ಹುಟ್ಟಿದ ತಮ್ಮ ಅಸ್ಸಲಪೋರರಲ್ಲಿ ಯಾರಿಗೂ ಮಯೂರಾಸನದಮೇಲೆ ಹಕ್ಕು ಇರುವದಿಲ್ಲವೆಂದು ನಾನು ಸ್ಪಷ್ಟವಾಗಿ ಹೇಳುತ್ತೇನೆ; ಅದ್ದರಿಂದ ಈಗ ಈ ಶಹಾಜಾದಾ ಅಜೀಮನನ್ನು ದಿಲ್ಲಿಯ ಸಿಂಹಾಸನದ ನಿಜವಾದ ಬಾಧ್ಯಸ್ಥನೆಂದು ತಿಳಿದು, ನಾವು ಈಗ ಮುಂದುಮಾಡಿರುವೆವು. ಪರಮ ಕೃಪಾಳುವಾದ ಅಲ್ಲಾನ ಇಚ್ಛೆಯಂತೆ ಇಂದಿನಿಂದ ಈ ಮಯೂರಾಸನವು ಅಜೀಮಶಹನದಾಗಿದ್ದು, ಈ ಅಜ್ಞಾನ ಬಾದಶಹನ ಪ್ರತಿಪಾಲನದ ಭಾರವನ್ನು ನಾವು ಸ್ವತಃ ವಹಿಸುವವರಿದ್ದೇವೆ; ಅಂದ ಬಳಿಕ ಈ ಚಿಕ್ಕ ಬಾದಶಹನು ವಯಸ್ಸಿಗೆ

ಬರುವವರೆಗೆ ದಿಲ್ಲಿಯ ಯಾವತ್ತು ರಾಜ್ಯಸೂತ್ರಗಳನ್ನು ನಾವು ಸ್ವತಃ ಕೈಯಲ್ಲಿ ತಕ್ಕೊಂಡಿರುವವು; ಆದ್ದರಿಂದ ನೀವೆಲ್ಲರೂ ಇನ್ನು ಮೇಲೆ ಅಲ್ಪವಯಸ್ಕ ಬಾದಶಹನ ಪ್ರತಿನಿಧಿಯಾದ ರೋಷನಾರಾ ಬೇಗಮರ ಆಜ್ಞೆಯನ್ನು ಪಾಲಿಸಬೇಕಾಗುವದು. ಇಂದಿಗೆ ಔರಂಗಜೇಬ ಬಾದಶಹನ ಆಳಿಕೆಯು ಮುಗಿದುಹೋಗಿ, ರೋಷನಾರಾ ಬೇಗಮೆಯ ಆಳಿಕೆಗೆ ಆರಂಭ ವಾಗಿರುವದು. ಈ ಆಳ್ವಿಕೆಯಲ್ಲಿ ಔರಂಗಜೇಬನ ಹಿಂದಿನ ಬಾದಶಹರ ಕಾಲದಲ್ಲಿ ಯಾವತ್ತು ವಿಲಾಸಗಳು ಪುನಃ ನಡಿಸಲ್ಪಡುವವು. ನಮ್ಮ ಹೆಸರನ್ನು ಯೋಗ್ಯ ಪದವಿಯಿಂದ ಉಚ್ಚರಿಸಲು ಅಪ್ಪಣೆಕೊಡುವ ಪೂರ್ವದಲ್ಲಿ ದಯಾಮಯಾ ಅಲ್ಲಾನ ಸ್ಮರಣೆ ಮಾಡುತ್ತಾ ರಾಜನಿಷ್ಠಾ ಪೂರ್ಣವಾದ ಪ್ರಚಂಡ ಜಯಜಯಕಾರ ಧ್ವನಿಯೊಡನೆ ಈ ರಾಜಸಿಂಹಾಸನವನ್ನು ನಾವು ಸ್ವೀಕರಿಸುವೆವು.

ಈ ಮೇರೆಗೆ ನುಡಿದ ಅತ್ಯಂತ ಸಾಹಸಿಯಾದ ರೋಷನಾರಳು ಪ್ರಧಾನ ಮಂಡಲದ ಕಣ್ಣಲ್ಲಿ ಮಣ್ಣು ಚಲ್ಲುತ್ತ ತನ್ನ ಅನುಯಾಯಿಗಳಾದ ತಾರ್ತರ ತರುಣಿಯರು ಎರಡು ಸಾರೆ ಜಯಘೋಷಮಾಡುತ್ತಿರಲು, ಅಧಿಕಾರ ಮುದ್ರೆಯಿಂದ ನಾಲ್ಕೂ ಕಡೆಗೆ ನೋಡುತ್ತ ಮಯೂರಾಸನದ ಎರಡನೆಯ ಪಾವಟಿಗೆಯನ್ನು ಹತ್ತಿದಳು. ಇನ್ನೊಂದು ಸಾರೆ ಜಯಘೋಷ ವಾಗುತ್ತಿರುವಾಗ ಮೂರನೆಯ ಪಾವಟಿಗೆಯನ್ನು ಹತ್ತಿದರೆ, ಆಕೆಯ ಮಹತ್ವಾಕಾಂಕ್ಷೆಯು ಪೂರ್ಣವಾಗುತ್ತಿತ್ತು; ಆದರೆ ಹಾಗಾಗುವದು ದೇವರ ಸಂಕೇತವಿದ್ದಿಲ್ಲ. ಬೇಗಮೆಯ ತಾರ್ತರ ಸ್ತ್ರೀಯರು ಮೂರನೆಯ ಸಾರೆ ಜಯಘೋಷಮಾಡದೆ ಬಾಯಿಗೆ ಬೀಗಹಾಕಿದಂತೆ ಸುಮ್ಮನೆ ನಿಂತುಕೊಂಡರು. ಅದನ್ನು ನೋಡಿ ರೋಷನಾರಳು ಸಂತಪ್ತಳಾದಳು. ಆಕೆಯು ತಾರ್ತರ ತರುಣಿಯರ ಮೇಲೆ ಬೆಂಕಿಕಾರುತ್ತ—''ಯಾಕೆ ಸುಮ್ಮನಾದರೇ ಲೌಡಿಯರಿರಾ? ಮೂರು ಸಾರೆ ಜಯಘೋಷಮಾಡಿರೆಂದು ನನ್ನ ಬಾದಶಾಹಿಯ ಅಪ್ಪಣೆಯಾಗಿರಲು, ಹೀಗೆ ನನ್ನ ಅವಮಾನ ಮಾಡುವಿರಾ'' ಎಂದು ಗದ್ದರಿಸಿದಳು; ಆದರೂ ಆ ದಾಸಿಯರು ಜಯಘೋಷಮಾಡಲಿಲ್ಲ. ಅಷ್ಟರಲ್ಲಿ, ಈವರೆಗೆ ಸುಮ್ಮನೆ ಕುಳಿತಿದ್ದ ಪ್ರಚಂಡ ದರ್ಬಾರವು, ಔರಂಗಜೇಬಬಾದಶಹನ, ಹಾಗು ಯುವರಾಜ ಮೊ ಅಜ್ಜಿಮನ ಹೆಸರಿನಿಂದ ಜಯಧ್ವನಿ ಮಾಡತೊಡಗಿತು. ಆಗ ಪ್ರತ್ಯಕ್ಷ ಅಲಮಗೀರ ಬಾದಶಹನು ಸುಂದರ ರಾಜಪುತ್ರರಿಂದ ಸುತ್ತುಗಟ್ಟಿದವನಾಗಿ ಒಂದು ಕೈಯನ್ನು ಮೋ ಅಜ್ಜಿಮನ ಕೈಯಲ್ಲಿ ಕೊಟ್ಟು, ಒಂದು ಕೈಯನ್ನು ಒಬ್ಬ ದೇದೀಪ್ಯಮಾನನಾದ ತರುಣನ ಹೆಗಲ ಮೇಲೆ ಇಟ್ಟು, ಸಿಂಹಾಸನದ ಬಳಿಯಲ್ಲಿ ನಿಂತುಕೊಂಡಿದ್ದನು. ರೋಷನಾರಳು ಚಿತ್ರದೊಳಗಿನ ಗೊಂಬೆಯಂತೆ ಮಯೂರಾಸನದ ಎರಡನಯೆ ಪಾವಟಿಗೆ ಮೇಲೆ ನಿಂತು ಕೊಂಡಿದ್ದಳು. ಆಕೆಯು ಸ್ಥಳಬಿಟ್ಟು ಕದಲದೆ, ದರ್ಬಾರವನ್ನುದ್ದೇಶಿಸಿ—''ಈತನು ಅಲಮ ಗೀರನಲ್ಲ; ಈತನು ನಿಮ್ಮ ಬಾದಶಹನಲ್ಲ; ನಿಮ್ಮ ಬಾದಶಹನು ಯಾವಾಗೋ ಪರಲೋಕ ವಾಸಿಯಾಗಿರಬಹುದು. ಇದು ಅಲಮಗೀರನ ಪಿಶಾಚವು! ಇಂಥ ಸೈತಾನನ ಜಯ ಘೋಷವನ್ನು ಏಕೆ ಮಾಡುವಿರಿ'' ಎಂದು ಕೇಳಲು, ದರ್ಬಾರದವರು ಪುನಃ ಮೊದಲಿನಂತೆ ಪ್ರಚಂಡವಾದ ಜಯಘೋಷಮಾಡಿದರು. ಆ ಜಯಜಯಕಾರದ ಪ್ರತಿಧ್ವನಿಯನ್ನನುಸರಿಸಿ ಬಾದಶಹನು ನುಡಿದನೇನಂದರೆ–

ರೋಷನಾರ, ನೀನು ನಿಜವಾದ ಪಿಶಾಚವು! ಸೈತಾನನು ನಿನ್ನ ಕೃತಿಯನ್ನು ನೋಡಿ ನಾಚಬಹುದು. ನಿನ್ನ ಈ ಘೋರ ಅಪರಾಧಕ್ಕಾಗಿ ಇದೇ ಕ್ಷಣದಲ್ಲಿ ನಿನ್ನ ಶಿರಚ್ಛೇದವಾಗತಕ್ಕದ್ದು; ಆದರೆ ನಮ್ಮ ಹಿತಕರ್ತೃಗಳ ಅಭಿನಂದನಮಾಡುವದಕ್ಕಾಗಿಯೂ, ಪೂಜ್ಯಧರ್ಮಾಧಿಕಾರಿಗಳ ಆಶೀರ್ವಾದವನ್ನು ಪಡೆಯುವದಕ್ಕಾಗಿಯೂ ದರ್ಬಾರ ನೆರೆಸಿರುವ ಈ ಮಂಗಲ ಪ್ರಸಂಗದಲ್ಲಿ ನಿನ್ನ ಸಂಹಾರದ ಅಮಂಗಲಕಾರ್ಯವನ್ನು ಮಾಡುವದು ಸರಿಯಲ್ಲ. ಮೇಲಾಗಿ ನೀನು ಈ ಮಯೂರಾಸನವು ನನಗೆ ಪ್ರಾಪ್ತವಾಗುವದಕ್ಕಾಗಿ ಮಾಡಿದ ಸಹಾಯವನ್ನು ನಾನು ಮರೆತಿರುವದಿಲ್ಲ; ಆದ್ದರಿಂದ ನಿನಗೆ ಈಗ ಜೀವದಾನವನ್ನು ಕೊಟ್ಟಿದ್ದೇನೆ. ನಿನ್ನ ಉಪಕಾರದ ಭಾರವನ್ನು ಕೆಲಮಟ್ಟಿಗಾದರೂ ಇಳಿಸಿಕೊಳ್ಳುತ್ತಿರುವೆನು; ಆದರೆ ಇಂಥ ಕ್ಷಮೆಯನ್ನು ಅಲಮಗೀರ ಬಾದಶಹನು ಮೇಲೆ ಮೇಲೆ ಮಾಡುತ್ತಿರುವದಿಲ್ಲೆಂಬದನ್ನು ಚೆನ್ನಾಗಿ ನೆನಪಿನಲ್ಲಿಡು. ಹೇಗೂ ಇದಕ್ಕೆ ಹೆಚ್ಚಿನ ಶೋಭೆಯನ್ನು ಪಡೆಯುವ ಉಸಾಬರಿಗೆ ಹೋಗದೆ, ತಟ್ಟನೆ ಇಲ್ಲಿಂದ ಹೊರಟುಹೋಗು. ಜನಾನಖಾನೆಯೊಳಗಿನ ತಾರ್ತರ ಸ್ತ್ರೀಯರ ಬಂಡನ್ನು ಇಂದಿನಿಂದ ಪೂರಾ ಮುರಿದುಬಿಟ್ಟಿರುತ್ತದೆ. ಈ ಹುಡುಗಿಯರಲ್ಲಿ ಒಬ್ಬಳೂ ನಿನ್ನನ್ನು ಅನುಸರಿಸಿ ಜನಾನಖಾನೆಗೆ ಬರಲಾರಳು. ಹುಡಿಗಿಯರೇ, ತಾರ್ತರ ಹುಡಿಗಿಯರೇ, ಇಂದಿನಿಂದ ನಿಮ್ಮನ್ನು ಕೆಲಸದಿಂದ ದೂರಮಾಡಿರುತ್ತದೆ. ಅಲ್ಲಾನು ಮೆಚ್ಚುವಂತೆ ನೀವು ನೀತಿಯಿಂದ ನಡೆದು ಸುಖಿಗಳಾಗಿರಿ, ಹೋಗಿರಿ ಮನೆಗೆ!

ಬಾದಶಹನ ಈ ಮಾತುಗಳನ್ನು ಕೇಳಿ ರೋಷನಾರಳು ಸಿಂಹಾಸನದ ಪಾವಟಿಗೆಯಿಂದ ಇಳಿದಳು. ತಾರ್ತರ ತರುಣಿಯರು ಶಸ್ತ್ರಗಳನ್ನಿಟ್ಟು ಹೊರಟುಹೋದರು. ರೋಷನಾರಳು ತಂದಿದ್ದ ರಾಜಮುಕುಟವನ್ನು ಬಾದಶಹನು ತನ್ನ ತಲೆಯಮೇಲೆ ಹಾಕಿಕೊಂಡು ಮಯೂರಾಸನದ ಮೇಲೆ ಕುಳಿತನು. ಆತನು ಆ ದೇದೀಪ್ಯಮಾನನಾದ ತರುಣನನ್ನು ತನ್ನ ಬಲಗಡೆಗೆ ಒಂದು ಆಸನದ ಮೇಲೆ ಕುಳ್ಳಿರಿಸಿಕೊಂಡನು; ಎಡಗಡೆಗೆ ಶಹಾಜಾದಾಮು ಅಜ್ಜಿಮನನ್ನು ಒಂದು ಆಸನದಮೇಲೆ ಕುಳ್ಳಿರಿಸಿಕೊಂಡನು. ರೋಷನಾರಳು ಜನಾನಖಾನೆಗೆ ಹೋಗಲು ಹೊರಟು, ಕೈಗಡದ ಸೌಮ್ಯ ಮುದ್ರೆಯನ್ನು ತಾಳಿ ಬಾದಶಹನನ್ನು ಕುರಿತು—''ಖಾವಿಂದ, ನನ್ನ ವಿಷಯವಾಗಿ ಆಗಿರುವ ತಮ್ಮ ತಪ್ಪುತಿಳುವಳಿಕೆಯನ್ನು ಬೇಗನೆ ದೂರ ಮಾಡುವೆನು'' ಎಂದು ಹೇಳಿ, ಆ ತೇಜಸ್ವಿ ತರುಣನ ಮೇಲೆ ವಿಷಕಾರುತ್ತ ಇಲ್ಲಿಂದ ಹೊರಟುಹೋದಳು. ಆತನೇ ಬಾದಶಹನನ್ನು ಸಾವಿನ ದವಡೆಯೊಳಗಿನಿಂದ ಉಳಿಸಿರಬೇಕೆಂದು ಆ ಧೂರ್ತಳು ತರ್ಕಿಸಿದ್ದಳು. ಇತ್ತ ಅಲಮಗೀರ ಬಾದಶಹನು ದರ್ಬಾರದ ಜನರನ್ನು ಕುರಿತು ಕೃತಜ್ಞತೆಯಿಂದ—''ಪ್ರಧಾನಜೀ, ಸರದಾರರೇ, ಮಾಂಡಲಿಕ ರಾಜರೇ, ನನಗೆ ಇಂದು ಪ್ರಾಣದಾನ ಮಾಡಿದವನು ಈ ತರುಣನು! ಮೊಗಲ ಬಾದಶಾಹಿಯನ್ನು ಬೇರುಸಹಿತವಾಗಿ ಕಿತ್ತು ಒಗೆಯಬೇಕೆಂತಲೂ, ಬುಂದೇಲಖಂಡದೊಳಗಿನ ಇಸ್ಲಾಮಿ ಅಧಿಕಾರವನ್ನು ನಷ್ಟಪಡಿಸಬೇಕೆಂತಲೂ, ಹಗಲು ರಾತ್ರಿ ಯತ್ನಿಸುತ್ತಿರುವ ಯವನರ ಶತ್ರುವಾದ ಬುಂದೇಲಖಂಡದ ಪ್ರಮುಖನೆನಿಸುವ ಚಂಪತರಾಯನ ಮಗನು ಈತನು. ಈತನ ಹೆಸರು ಛತ್ರಸಾಲ!

ಈ ಮೇರೆಗೆ ನುಡಿಯುವಾಗ ಬಾದಶಹನ ಲಕ್ಷವು ತನ್ನ ಮೇಲೆ ಬಿದ್ದದ್ದನ್ನು ಚಂಪತರಾಯನು ಅರಿತನು. ಆಗ ಬಾದಶಹನು ಚಂಪತರಾಯನ್ನು ಕುರಿತು—''ಚಂಪತರಾಯ, ನಿಮ್ಮನ್ನು ಅಷ್ಟು ದೂರ ಕುಳ್ಳಿರಿಸುವದೆಂದರೆ ನಿಮ್ಮ ಅಪಮಾನಮಾಡಿದ ಹಾಗೆಯೇ ಸರಿ! ಜಯಸಿಂಗಜೀ, ಚಂಪತರಾಯನನ್ನು ಕರಕೊಂಡು ಹೀಗೆ ಇತ್ತ ಕಡೆಗೆ ಬರಬೇಕು! ಇಂದಿನ ದರ್ಬಾರದಲ್ಲಿ ಶ್ರೇಷ್ಠಸ್ಥಾನದಲ್ಲಿ ಕುಳಿತುಕೊಳ್ಳುವ ಮಾನವು ಚಂಪತರಾಯರದಿರುತ್ತದೆ'' ಎಂದು ನುಡಿಯಲು, ಒಂದೇ ಆಸನದಲ್ಲಿ ಕುಳಿತಿದ್ದ ಅವರಿಬ್ಬರು ರಜಪೂತವೀರರು ಎದ್ದುಹೋಗಿ ಬಾದಶಹನ ಬಳಿಯಲ್ಲಿ ಕುಳಿತುಕೊಂಡರು. ಆಗ ಬಾದಶಹನು ಪುನಃ ದರ್ಬಾರದ ಜನರನ್ನು ಕುರಿತು—''ಚಂಪತರಾಯಜೀ, ಮಾಂಡಲೀಕರಾಜರೇ, ಸರದಾರರೇ, ನಿಮ್ಮ ಸ್ವಾಗತಮಾಡುವ ಸುಪ್ರಸಂಗವು ಅಲ್ಲಾನ ಕೃಪೆಯಿಂದ ಒದಗಿದ್ದಕ್ಕಾಗಿ ನಮಗೆ ಮನಃಪೂರ್ವಕವಾಗಿ ಆನಂದ ವಾಗಿರುತ್ತದೆ. ನೀವೆಲ್ಲರೂ ಒಟ್ಟುಗೂಡಿ ಸಾಮ್ರಾಜ್ಯನಿಷ್ಠೆಯನ್ನು ವ್ಯಕ್ತಪಡಿಸಿದ್ದಕ್ಕಾಗಿ ನಾವು ಅತ್ಯಂತ ಅಭಿಮಾನ ಪಡುವೆನು. ನಮ್ಮ ಆಳಿಕೆಯಲ್ಲಿ ನಾವು ನಮ್ಮ ವಿಸ್ತಾರದ ಸಾಮ್ರಾಜ್ಯದೊಳಗಿನ ಪ್ರಜೆಗಳಿಗಾಗಿ, ಮಾನಕರಿಗಳಿಗಾಗಿ, ಅಧಿಕಾರಿಗಳಿಗಾಗಿ, ಅರಸರಿಗಾಗಿ, ಹಿಂದುಗಳಿಗಾಗಿ, ಮುಸಲ್ಮಾನರಿಗಾಗಿ, ರಜಪೂತರಿಗಾಗಿ, ಬುಂದೇಲಿಗಳಿಗಾಗಿ, ಶಿಯಾಗಳಿಗಾಗಿ, ಸುನ್ನಿಗಳಿಗಾಗಿ ಏನೇನು ಮಾಡಬೇಕೆಂಬದನ್ನು ಈಗ ಸುಮ್ಮನೆ ಹೇಳುತ್ತ ಕುಳಿತುಕೊಳ್ಳುವದರಲ್ಲಿ ಅರ್ಥವಿಲ್ಲ. ಬಹಳ ಮಾತಾಡುವದಕ್ಕಿಂತ ಸ್ವಲ್ಪ ಮಾಡಿತೋರಿಸುವದು ಒಳ್ಳೆಯದು. ಅಲ್ಲಾನ ಮನಸ್ಸು ಸುಪ್ರಸನ್ನವಾಗುವಂತೆ ಪೈಗಂಬರರ ವಚನಗಳಿಗೆ ಮಹತ್ವವು ಉಂಟಾಗುವಂತೆ, ನಮ್ಮ ಪವಿತ್ರ ಶಾಸ್ತ್ರವಾದ ಕುರಾಣದ ಪ್ರಸಿದ್ಧಿಯು ನಾಲ್ಕೂ ಕಡೆಗೆ ಆಗುವಂತೆ ಅಲ್ಲಾನ ಭಕ್ತಸಮೂಹವು ಹೆಚ್ಚುವಂತೆ ಮಾಡುವಾಗ ನಮ್ಮ ಹಾಗೂ ನಮ್ಮ ಸಾಮ್ರಾಜ್ಯದ ಸರ್ವಸ್ವವನ್ನೂ ಅರ್ಪಿಸುವೆವು. ಮುಹಮ್ಮದ ಪೈಗಂಬರರ ದಿವ್ಯ ಸಂದೇಶಗಳನ್ನು ಪೂರ್ಣವಾಗಿ ಬಳಿಕೆಯಲ್ಲಿ ತರುವದೇ ನಮ್ಮ ರಾಜ್ಯದಾಡಳಿತದ ಮುಖ್ಯಧ್ಯೇಯವಾಗಿರುವದು! ನಮ್ಮ ಹಿರಿಯರ ಕಾಲದಿಂದ ನಡೆದು ಬಂದಿರುವ ಯಾವತ್ತು ವಿಲಾಸಗಳು ಇನ್ನು ನಿಲ್ಲಿಸಲ್ಪಡುವವು. ಈ ಎಲ್ಲ ಸಂಗತಿಗಳನ್ನು ನಿಮ್ಮ ಮುಂದೆ ಹೇಳುವ ಸುಪ್ರಸಂಗವು ಒದಗಿದ್ದು ಈ ತರುಣನಿಂದ! ಎಲೈ ಛತ್ರಸಾಲ, ನೀನು ನನ್ನಮೇಲೆ ಮಾಡಿರುವ ಅತರ್ಕ್ಯ ಉಪಕಾರಕ್ಕಾಗಿ ನಿನಗೆ ದಿಲ್ಲಿಯ ಸಾರ್ವಭೌಮಾಧಿಕಾರವನ್ನು ಕೊಟ್ಟರೂ ನಿನ್ನ ಆ ಉಪಕಾರವು ತೀರದು. ನನ್ನ ಲಕ್ಷಾವಧಿ ರೂಪಾಯಿ ಪಗಾರ ತಿನ್ನುವ ವಜೀರರಿಂದ, ನನ್ನಿಂದ ಬಹುಮಾನದ ಪದವಿಗಳನ್ನು ಪಡೆಯುತ್ತಿರುವ ಸರದಾರರಿಂದ, ನನ್ನ ಹೊಟ್ಟೆಯ ಮಕ್ಕಳಿಂದ ಆಗದ ಕಾರ್ಯವನ್ನು ಒಬ್ಬ ಪರಸ್ಥನು ನೀನು ನಿಷ್ಕಾಮ ಬುದ್ಧಿಯಿಂದ ಮಾಡಿರುತ್ತೀ. ಅಂದ ಬಳಿಕ ನಿನ್ನ ಅಲೌಕಿಕ ಶೌರ್ಯವನ್ನೂ, ಅದ್ವಿತೀಯ ಧೈರ್ಯವನ್ನೂ, ದೈವೀತೇಜಸ್ವಿತೆಯ ಹಾಗು ಉತ್ಕಟ ದಯಾಲುತ್ವದ ಲಕ್ಷಣವನ್ನೂ ಎಷ್ಟು ವರ್ಣಿಸಿದರೂ ಸ್ವಲ್ಪವೇ ಇರುವದು. ನನ್ನ ಪ್ರಾಣವನ್ನು ಉಳಿಸಿದ ನಿನಗೆ ನಾನೇನು ಕೊಡಲಿ?

ಬಾದಶಹನ ಈ ಮಾತುಗಳನ್ನು ಕೇಳಿ ಛತ್ರಸಾಲನು ಎದ್ದುನಿಂತು —''ಔರಂಗಜೇಬ ಬಾದಶಹಾ, ನಾನು ಏನಾದರೂ ಕೇಳಿಕೊಳ್ಳಬೇಕೆಂದು ನೀನು ಇಚ್ಛಿಸುವಂತೆ ತೋರುತ್ತದೆ; ಆದರೆ ನನ್ನ ಸಲುವಾಗಿ ನನಗೆ ಏನೂ ಬೇಕಾಗಿರುವದಿಲ್ಲ. ಉತ್ಕೃಷ್ಟವಾದ ಆರೋಗ್ಯವು, ಪವಿತ್ರ ನೀತಿಮತ್ತೆಯು, ಸ್ವಧರ್ಮ-ಸ್ವದೇಶ-ಸ್ವಬಂಧುಗಳಲ್ಲಿ ನಿರ್ವ್ಯಾಜ್ಯಪ್ರೇಮವು ನನಗೆ ಲಭಿಸಿರುವದರಿಂದಲೂ, ಜೀವದ-ಗೆಳೆಯರು ಅತ್ಯಂತ ವಾತ್ಸಲ್ಯದ ತಂದೆ-ತಾಯಿಗಳು-ಸದ್ಧರ್ಮದ ತತ್ವಗಳನ್ನು ಪ್ರಕಾಶಗೊಳಿಸುವ ಪ್ರಾಣನಾಥ ಪ್ರಭುಗಳು ನನಗಿರುವದರಿಂದಲೂ ನನ್ನ ಐಹಿಕ ಕೊರತೆಗಳೆಲ್ಲ ಕೂಡಿಬಂದಿರುವವು; ಆದರೆ ನಾನು ನಿನ್ನನ್ನು ಈಗ ಕೇಳಿಕೊಳ್ಳು ವದೇನೆಂದರೆ, ನನ್ನ ಜನ್ಮಭೂಮಿಯಾದ ಬುಂದೇಲಖಂಡದ ದಾಸ್ಯವಿಮೋಚನವು! ಅಲಮ ಗೀರ, ನನ್ನದೇಶ ಬಾಂಧವರು ಮೊಗಲಬಾದಶಹರ ದಾಸರಾಗಿರುವದರಿಂದ ಅವರಲ್ಲಿ ದಾರಿದ್ರ್ಯ. ದುರ್ವ್ಯಸನ, ಅಧರ್ಮಾಚರಣೆ, ಬಂಧುದ್ವೇಷ ಮೊದಲಾದ ದುರ್ಗುಣಗಳು ಸೇರಿರುವವಲ್ಲದೆ, ಮೇಲೆ ಮೇಲೆ ಅವರು ಬರ-ಪಿಡುಗುಗಳ ಬಾದೆಗೆ ಒಳಗಾಗುತ್ತಿರುವರು; ಆದ್ದರಿಂದ ನೀನು ಏನಾದರೂ ನನಗೆ ಕೊಡಬೇಕೆಂದು ಇಚ್ಛಿಸುತ್ತಿದ್ದರೆ, ನನ್ನ ಜನ್ಮಭೂಮಿಯ ಸ್ವಾತಂತ್ರ್ಯವನ್ನು ಬೇಡುವೆನು, ಅದನ್ನು ಕೊಡು! ಅಲಮಗೀರ, ನೀನು ಇಷ್ಟು ದೊಡ್ಡಮನಸ್ಸು ಮಾಡಿದರೆ, ನನ್ನ ಉಪಕಾರವು ತೀರಿತೆಂದು ನಾನು ಸಂತೋಷದಿಂದ ಹೇಳುವೆನು!

ಛತ್ರಸಾಲನ ಈ ಮಾತುಗಳನ್ನು ಕೇಳಿ ಬಾದಶಹನು ಝುರ್ರನೆ ಇಳಿಯಲು, ಆತನ ಮೋರೆಯು ಕಪ್ಪಿಟ್ಟಿತು! ಏನು ಮಾತಾಡಬೇಕೆಂಬುದು ಆತನಿಗೆ ತಿಳಿಯದಾಯಿತು. ಛತ್ರಸಾಲನು ಸಿಕ್ಕಹಾಗೆ ಬೇಡಿಕೊಂಡನೆಂದು ಆತನು ತಿಳಿದುಕೊಂಡನು. ಆತನು ಮಾತಾಡದೆ ಸುಮ್ಮನೆ ಕುಳಿತಿರುವದನ್ನು ನೋಡಿ ಚಂಪತರಾಯನು ಆತನನ್ನು ಕುರಿತು—''ಬಾದಶಹಾ, ಕುಮಾರ ಛತ್ರಸಾಲನ ಬೇಡಿಕೆಯು, ಆತನು ನನ್ನ ಮೇಲೆ ಮಾಡಿದ ಉಪಕಾರದ ಮಾನದಿಂದ ಹೆಚ್ಚಾಯಿತೆಂದು ನಿನಗೆ ತೋರಿದರೆ, ನಾನು ಸಾಮುಗಡದ ಕಾಳಗದಲ್ಲಿ ನಿಮ್ಮ ಅಣ್ಣ ದಾರಾನನ್ನು ಸೋಲಿಸುವಾಗ ತೋರಿಸಿದ ಪರಾಕ್ರಮದ ಉಪಕಾರವನ್ನು ಅದರಲ್ಲಿ ಕೂಡಿಸಿ ಕುಮಾರನ ಬೇಡಿಕೆಯನ್ನು ಪೂರ್ಣಮಾಡು! ಅಲಮಗೀರ, ಚಂಪತರಾಯನು ಆ ದಿನ ರಣಸಾಹಸ ಮಾಡದಿದ್ದರೆ ಈ ಮಯೂರಾಸನದ ಪ್ರಾಪ್ತಿಯು ನಿನಗೆಲ್ಲಿ ಆಗುತ್ತಿತ್ತು ಹೇಳು?

ಔರಂಗಜೇಬ—(ಶಾಂತರೀತಿಯಿಂದ) ಚಂಪತರಾಯಜೀ, ನೀವು ಹೇಳುವದು ಸರ್ವಥೈವ ನಿಜವಿರುತ್ತದೆ. ದಿಲ್ಲಿಯ ಸಾರ್ವಭೌಮಪದವನ್ನು ಸಂಪಾದಿಸುವಾಗ ರಾಜಾ ಚಂಪತರಾಯರಿಂದಾದಷ್ಟು ಸಹಾಯವು ಬೇರೆ ಯಾರಿಂದಲೂ ನನಗೆ ಆಗಿರುವದಿಲ್ಲ!

ಚಂಪತರಾಯ—ಅಂದಬಳಿಕ ಯುವರಾಜ ಛತ್ರಸಾಲನ ಬೇಡಿಕೆಯನ್ನು ಯಾಕೆ ಪೂರ್ಣಮಾಡಬಾರದು? ತಂದೆಯು ಸಾಮ್ರಾಜ್ಯವನ್ನು ಒದಗಿಸಿಕೊಟ್ಟಿರುವನು, ಮಗನು ಜೀವ ಉಳಿಸಿರುವನು. ಅಂದಬಳಿಕ ಬುಂದೇಲಖಂಡಕ್ಕೆ ಸ್ವಾತಂತ್ರ್ಯವನ್ನು ಕೊಡಲಿಕ್ಕೆ ಇದಕ್ಕೂ ಹೆಚ್ಚಿನದೇನು ಮಾಡಬೇಕು?

ಚಂಪತರಾಯನ ಈ ಮಾತುಗಳಿಗೆ ಬಾದಶಹನು ಉತ್ತರ ಕೊಡದಾದನು. ಆತನು ಹೀಗೆ ಸುಮ್ಮನೆ ಕುಳಿತಿರುವದನ್ನು ನೋಡಿ ಕುಮಾರ ಛತ್ರಸಾಲನು ಆತನನ್ನು ಕುರಿತು—"ಇಲ್ಲ ನಾನು ಕೇಳಿದ್ದು ನಿನ್ನ ಮನಸ್ಸಿಗೆ ಬರುವದಿಲ್ಲ. ಬಿಕ್ಕೆಬೇಡಿದರಲ್ಲಿಯಾದರೂ ಸ್ವಾತಂತ್ರ್ಯವು ಸಿಗುವದುಂಟೆ? ಜಗತ್ತಿನ ತುಂಬೆಲ್ಲ ಇಸ್ಲಾಮಿ ಅಧಿಕಾರವನ್ನು ಸ್ಥಾಪಿಸಬೇಕೆನ್ನುವವನಲ್ಲಿ ಔದಾರ್ಯವನ್ನೂ, ದಯಾಲುತ್ವವನ್ನೂ ಆಶಿಸುವದೇ ದೊಡ್ಡತಪ್ಪು! ಬಾದಶಹಾ, ನಿನ್ನನ್ನು ವ್ಯರ್ಥವಾಗಿ ಸಂಕಟದಲ್ಲಿ ಕೆಡವಿಕೊಳ್ಳಬೇಡ. ನಮ್ಮ ಉಪಕಾರಕ್ಕೆ ಪ್ರತ್ಯುಪಕಾರಮಾಡೆಂದು ಈಗ ನಾವೇನು ನಿನ್ನ ಬಾಗಿಲ ಕಟ್ಟಿರುವದಿಲ್ಲ. ದಿಲ್ಲೀಪತಿಯು ಸ್ವತಃ ತನ್ನ ಮಾತಿಗೆ ಎಷ್ಟು ಮಹತ್ವ ಕೊಡುತ್ತಿರುವನೆಂಬದನ್ನು ಪರೀಕ್ಷಿಸುವದು ನಮ್ಮ ಮನಸ್ಸಿನಲ್ಲಿ ಇತ್ತು; ಇದರ ಪರೀಕ್ಷೆಯೂ ಆದಂತಾಯಿತು. ಇನ್ನು ನಾವು ಹೋಗಿಬರುವೆವು," ಎಂದು ಹೇಳಿ ಛತ್ರಸಾಲನು ಹೊರಟುಹೋಗುವದಕ್ಕಾಗಿ ಎದ್ದುನಿಂತನು. ಚಂಪತರಾಯನೂ ತನ್ನ ಆಸನವನ್ನು ಬಿಟ್ಟನು. ಅದನ್ನು ನೋಡಿ ಔರಂಗಜೇಬನು ವಿನಯದಿಂದ—

ಔರಂಗಜೇಬ—ಚಂಪತರಾಯಜೀ, ಛತ್ರಸಾಲ, ನನ್ನ ಮೇಲೆ ಸಿಟ್ಟಾಗಬೇಡಿರಿ. ನನ್ನ ಮೇಲೆ ನೀವು ಮಾಡಿರುವ ಉಪಕಾರವನ್ನು ನೋಡಿದರೆ, ಬುಂದೇಲಖಂಡದ ಸ್ವಾತಂತ್ರ್ಯವನ್ನು ಕೇಳುವದು ಅತ್ಯಂತ ಕ್ಷುದ್ರವಾಗಿರುವದೆಂಬದನ್ನು ನಾನು ಒಪ್ಪಿಕೊಳ್ಳವೆನು; ಆದರೆ ನಾನು ಬುಂದೇಲಖಂಡಕ್ಕೆ ಸ್ವಾತಂತ್ರ್ಯವನ್ನು ಕೊಟ್ಟರೆ, ಅಥವ ಬುಂದೇಲಖಂಡದವರಿಗೆ ತಮ್ಮ ಧರ್ಮದಂತೆ ನಡೆಯಲು ಆಸ್ಪದಕೊಟ್ಟರೆ, ನಾನು ಪರಮ ದಯಾಲುವಾದ ಅಲ್ಲಾನ ಅಪರಾಧ ಮಾಡಿದಂತಾಗುವದು. ಪೃಥ್ವಿಯ ಎಲ್ಲ ಭಾಗಗಳಲ್ಲಿ ಇಸ್ಲಾಮಿ ಧರ್ಮವನ್ನು ಪಸರಿಸಬೇಕೆಂಬ ಅಲ್ಲಾನ ಅಪ್ಪಣೆಯನ್ನು, ಮಹಮ್ಮದ ಪೈಗಂಬರರು ಸತ್ತಾಧೀಶರಾದ ನಮ್ಮ ಸಲುವಾಗಿ ಪ್ರಸಿದ್ಧ ಮಾಡಿರುವರು; ಅಂದಬಳಿಕ ಅವರ ವಿರುದ್ಧವಾಗಿ ನಾನು ಹೇಗೆ ನಡೆಯಲಿ? ಜಗತ್ತಿನೊಳಗಿನ ಬೇರೆ ಬೇರೆ ರಾಜ್ಯಗಳನ್ನು ಗೆಲ್ಲುವದು ನಮ್ಮ ಕರ್ತವ್ಯವು; ಆದರೆ ಇಸ್ಲಾಮಿ ಧರ್ಮವನ್ನು ಸ್ವೀಕರಿಸದ ಹೊರತು ಅವರನ್ನು ಸ್ವತಂತ್ರರಾಗಮಾಡುವದು ನಮ್ಮ ಕೈಯೊಳಗಿಲ್ಲವು; ಆದ್ದರಿಂದ ಚಂಪತರಾಯಜೀ, ನಿಮ್ಮ ಬೇಡಿಕೆಯನ್ನು ಮಾನ್ಯಮಾಡಲಿಕ್ಕೆ ಬರುವಹಾಗಿಲ್ಲ!

ಚಂಪತರಾಯ—ಇಂತಹದೇ ಉತ್ತರವನ್ನು ಅಧಿಕಾರ-ಮದದಿಂದ ದುರ್ಯೋಧನನು ಉಚ್ಚರಿಸಿ ವಂಶಕ್ಷಯ ಮಾಡಿಕೊಂಡಿರುವನು! ಅಂಥ ಪ್ರಸಂಗವು ದಿಲ್ಲೀ ಪತಿಗೆ ಬರಬಾರ ದೆಂಬದು ನನ್ನ ಕಟ್ಟಕಡೆಯ ಸೂಚನೆಯು!

ಔರಂಗಜೇಬ—ಚಂಪತರಾಯಜೀ, ಛತ್ರಸಾಲನ ಇಂದಿನ ಉಪಕಾರಕ್ಕಾಗಿ ನಿಮ್ಮ ಎಟ್ಟಿಮಾತನ್ನು ಸಹನಮಾಡಿಕೊಳ್ಳುವೆನು. ನೀವು ಆಡಿದ ಮಾತುಗಳನ್ನು ಇನ್ನೊಂದು ಕ್ಷಣದಮೇಲೆ ನನಗೆ ಸಹನವಾಗುವವೋ ಇಲ್ಲವೋ ಎಂಬುದನ್ನು ನಾನು ಹೇಳಲಾರೆನು. ಬುಂದೇಲಖಂಡದ ಸ್ವಾತಂತ್ರ್ಯವನ್ನಂತು ಇರಲಿ, ನಾನು ಕೈವಶಮಾಡಿಕೊಂಡಿದ್ದ ಭೂಮಿಯಲ್ಲಿ ಒಂದು ಬೆರಳಿನಷ್ಟು ಭೂಮಿಯ ಅಧಿಕಾರವನ್ನು ಬಿಟ್ಟುಕೊಡಲಿಕ್ಕೂ ನಾವು ಒಪ್ಪಿಕೊಳ್ಳು ವದಿಲ್ಲ! ಬೇಕಾದರೆ ಸರದಾರ ಪದವಿಯನ್ನು ಕೇಳಿರಿ, ಅಮೀರ ಪದವಿಯನ್ನು ಕೇಳಿರಿ,

ಇಚ್ಛೆಯಿದ್ದರೆ ನಮ್ಮ ಸಾರ್ವಭೌಮತ್ವವನ್ನು ಒಪ್ಪಿಕೊಂಡು ಬುಂದೇಲಖಂಡದ ಯಾವತ್ತು ರಾಜ್ಯವನ್ನು ಕೇಳಿರಿ; ಈ ಅಲಮಗೀರನು ಕೊಡಲಿಕ್ಕೆ ಸಿದ್ಧನಾಗಿರುವನು.

ಚಂಪತರಾಯ—ರಕ್ತಮಾಂಸಗಳಿಲ್ಲದ ಬರಿಯ ಒಣ ಎಲಬುಕಡಿಯಲಿಕ್ಕೆ ನಾವು ನಾಯಿಯಲ್ಲ! ದಿನಾಲು ಬಿಸಿ ಬಿಸಿ ರಕ್ತವನ್ನು ಕುಡಿಯಲಿಕ್ಕೆ ಕಲಿತ ಸಿಂಹವು, ಅಂತಹ ಎಲುಬನ್ನು ಕಣ್ಣೆತ್ತಿಯೂ ನೋಡಲಾರದು. ಬಾದಶಹಾ, ಸ್ವಾತಂತ್ರ್ಯವಿಲ್ಲದ ರಾಜ್ಯದಿಂದ ಪ್ರಯೋಜನವೇನು? ನೀನು ಕೊಡುವ ಸರದಾರಿಕೆ ಮೊದಲಾದವನ್ನು ನಾವು ಧಿಕ್ಕರಿಸುವೆವು. ಬುಂದೇಲಖಂಡದ ರಾಜ್ಯವನ್ನು ನೀನೇಕೆ ಕೊಡಬೇಕು? ಅದು ನಮ್ಮದೇ ಇರುವದು! ಅದು ಬುಂದೇಲಖಂಡದ ಪ್ರತಿ ಒಬ್ಬ ವ್ಯಕ್ತಿಯದಿರುವದು! ನೀನು ಅದನ್ನು ನಮಗೆ ಕೊಡಲಿಕ್ಕೆ ಯಾರು?

ಔರಂಗಜೇಬ—''ಯಾ ಅಲ್ಲಾ'' ನನ್ನ ಕೈಯಿಂದ ಅನುಚಿತ ಕಾರ್ಯವನ್ನು ಮಾಡಿಸ ಬೇಡ. ಛತ್ರಸಾಲನು ಬದುಕಬೇಕೆಂತಲೂ, ಚಂಪತರಾಯನು ಬದುಕಬೇಕೆಂತಲೂ ನಾನು ಇನ್ನೂ ಇಚ್ಛಿಸುತ್ತಿರುವೆನು. ಪ್ರಧಾನಜೀ, ದರ್ಬಾರವನ್ನು ಕೂಡಲೆ ನಿಲ್ಲಿಸಿಬಿಡಿರಿ. ದರ್ಬಾರದ ಕೆಲಸಗಳನ್ನೆಲ್ಲ ಮಧ್ಯಾನ್ಹದಲ್ಲಿ ನೋಡಿಕೊಳ್ಳಲಿಕ್ಕೆ ಬಂದೀತು! ಆದರೆ ಈ ತಂದೆ-ಮಕ್ಕಳ ಮಾತನ್ನು ಕೇಳುವದು ನನ್ನಿಂದಾಗದು! ಒಂದು ಘೋರವಾದ ಆಜ್ಞೆಯು ನನ್ನ ಬಾಯಿಂದ ಹೊರಡುವದಕ್ಕಿಂತ ಮೊದಲೇ ದರ್ಬಾರದ ಕಾರ್ಯವನ್ನು ನಿಲ್ಲಿಸಿಬಿಡುವದು ನೆಟ್ಟಗೆ!

ಈ ಮೇರೆಗೆ ನುಡಿದು ಔರಂಗಜೇಬನು ಮಯೂರಾಸನದಿಂದ ಏಳತೊಡಗಿದನು. ಆಗ ಚಂಪತರಾಯನು—''ಬಾದಶಹಾ, ಒಂದು ಬೆರಳಭೂಮಿಯನ್ನು ನೀನು ಬಿಟ್ಟುಕೊಡುವ ದಿಲ್ಲವಲ್ಲವೆ? ಆಗಲಿ, ಸೂಜಿಯತುದಿಗೆ ಹತ್ತಿದ ಮಣ್ಣುಕೊಡುವದಿಲ್ಲೆಂದು ಹೇಳಿದ ದುರ್ಯೋಧನನು ರಣಮಂಡಲದಲ್ಲಿ ಪಟ್ಟ ಅನುಭವವನ್ನು ನೀನು ಪಡದಿ'' ಎಂದು ನುಡಿದು ಚಂಪತ ರಾಯನು ಬಾದಶಹನಿಗೆ ಮುಜುರೆಯನ್ನೂ ಮಾಡದೆ ಮಗನೊಡನೆ ಹೊರಟುಹೋದನು. ದರ್ಬಾರವು ಅಷ್ಟರಮಟ್ಟಿಗೆ ಬಂದು ಆಯಿತು.

## ಪ್ರೇಮಬಂಧನ

ಔರಂಗಜೇಬಬಾದಶಹನ ದರ್ಬಾರವು ಮುಗಿದ ನಾಲ್ಕನೆಯ ದಿವಸವು ಉಷಃಕಾಲದಲ್ಲಿ ಒಬ್ಬಸುಂದರ ತರುಣಿಯು ಯಮುನಾತೀರದಲ್ಲಿ ಯಾರದೋ ಹಾದಿಯನ್ನು ನೋಡುತ್ತ ನಿಂತುಕೊಂಡಿದ್ದಳು. ಆಗಿನ ಶಾಂತ ಸಮಯದ ಸೃಷ್ಟಿಸೌಂದರ್ಯವನ್ನು ನೋಡುವದರಲ್ಲಿ ಆಕೆಯ ಮನಸ್ಸು ತೊಡಗಿಹೋಗಿತ್ತು. ಬಾದಶಹನ ಮೀನಾಬಝಾರದಲ್ಲಿ ಗೋಷೆಯನ್ನು ಚೆಲ್ಲಿಕೊಟ್ಟು ಸ್ವಚ್ಛಂದದಿಂದ ತಮ್ಮ ಪ್ರೀತಿಯ ವಸ್ತುಗಳನ್ನು ತರುಣಿಗೆ ಮಾರುವಾಗ ಒಂದು ಕ್ಷುಲ್ಲಕವಸ್ತುವಿಗೆ ಲಕ್ಷಾಂತರ ರೂಪಾಯಿ ಬೆಲೆಬರುತ್ತಿತ್ತು! ಸುಂದರಿಯರು ಕೈಮುಟ್ಟಿಹಾಕಿದ

ಕಸೂತಿಗಳೂ, ಹೆಣಿಕೆಯ ಸಾಮಾನುಗಳೂ, ಬೇರೆ ಕೌಶಲ್ಯದ ಒಡವೆಗಳೂ ಶೀರ ಅಲ್ಪ ಬೆಲೆಯವಿದ್ದರೂ ಅವನ್ನು ಮಾರುತ್ತಿರುವ ಸುಂದರಿಯ ಸೌಂದರ್ಯ, ಯೋಗ್ಯತೆಗಳಿಗನುಸರಿಸಿ ಅವಕ್ಕೆ ಹೇರಳ ಬೆಲೆ ಬರುತ್ತಲಿತ್ತು. ಬಾದಶಹನ ಮಗಳು ಹೆಣೆದ ಕರವಸ್ತ್ರವೆಂದರೆ, ಅದರ ಬೆಲೆಯು ಸಹಸ್ರಾವಧಿ ರೂಪಾಯಿಯಾಗಬಹುದು. ಲಕ್ಷಾಂತರ ರೂಪಾಯಿಗಳಾದರೂ ಆಗಬಹುದು. ಈ ವ್ಯಾಪಾರಕ್ಕೆ ವಸ್ತುಗಳ ವ್ಯಾಪಾರವೆನ್ನುವದಕ್ಕಿಂತ, ಪ್ರೇಮದ ವ್ಯಾಪಾರ ವೆಂದರೆ ಒಪ್ಪಬಹುದು. ಈ ವಸ್ತುಗಳ ವ್ಯಾಪಾರದ ನೆವದಿಂದ ತರುಣ–ತರುಣಿಯರು ತಮ್ಮ ಪ್ರೇಮದ ವ್ಯಾಪಾರವನ್ನು ಮಾಡುತ್ತಲಿದ್ದರು. ಪ್ರಸಂಗದಲ್ಲಿ ಎಷ್ಟೋ ಅವಿವಾಹಿತ ತರುಣ ಸುಂದರಿಯರು ತಮ್ಮ ಮನಸ್ಸನ್ನು ತರುಣರಿಗೆ ಒಪ್ಪಿಸಿ ತಮ್ಮ ವಿವಾಹದ ನಿಶ್ಚಯವೆಂಬ ಮಂಗಳಾಚರಣವನ್ನು ಮಾಡಿಕೊಳ್ಳುತ್ತಿದ್ದರು. ಇಂಥ ನಿಶ್ಚಯಮಾಡಿಕೊಂಡಿದ್ದ ತರುಣಿಯ ರಲ್ಲಿಯೇ ಒಬ್ಬಳು ಮೇಲೆ ಹೇಳಿದಂತೆ ಯಮುನಾತೀರದಲ್ಲಿ ತನ್ನ ಪ್ರಿಯನಿಗೆ ತನ್ನ ಮನಸ್ಸಿನ ನಿಶ್ಚಯವನ್ನು ತಿಳಿಸುವದಕ್ಕಾಗಿ ಆತನ ಹಾದಿಯನ್ನು ನೋಡುತ್ತ ನಿಂತುಕೊಂಡಿದ್ದಳು; ಆದರೆ, ತನ್ನ ಮನೋಹರನು ಬರಲು ಸ್ವಲ್ಪ ತಡವಾದದ್ದರಿಂದ, ಆ ಸುಂದರಿಯ ಮನಸ್ಸು ಚಡಪಡಿಸ ತೊಡಗಿತ್ತು. ತಾನು ತನ್ನ ಪ್ರಿಯನಿಗೆ ತಿಳಿಸಹೇಳಿದ ಸುದ್ದಿಯನ್ನು ತನ್ನ ಸಖಿಯು ತಿಳಿಸಿದಳೊ ಇಲ್ಲವೋ ಎಂದು ಆಕೆಯು ಶಂಕಿಸತೊಡಗಿದ್ದಳು. ಅಷ್ಟರಲ್ಲಿ ಒಬ್ಬ ಸುಂದರ ತರುಣನು ಧೀರ ಗಂಭೀರ ಗತಿಯಿಂದ ಅಲ್ಲಿಗೆ ಬಂದು—''ಯಾರು? ರಾಜಾಜಯಸಿಂಗರವರ ಕುಮಾರಿಯಾದ ಜಯೆಯು ಹೇಳಿದ ಸ್ತ್ರೀಯು ನೀವೇಯೋ? ನನ್ನ ಹಾದಿಯನ್ನು ನೋಡುತ್ತ ನಿಂತು ಬಹಳ ಹೊತ್ತಾಯಿತೇನು? ಹಾಗಿದ್ದರೆ ನನ್ನಿಂದಾದ ತೊಂದರೆಗಾಗಿ ನನ್ನನ್ನು ಕ್ಷಮಿಸಬೇಕು.''

ತರುಣನ ಈ ಮಾತನ್ನು ಕೇಳಿ ಆ ತರುಣಿಗೆ ಪರಮಾಶ್ಚರ್ಯವಾಯಿತು. ''ತಾನು ಮಿನಾಬಝಾರದಲ್ಲೇ ಈತನನ್ನು ಹಲವುಸಾರೆ ನೋಡಿ ನನ್ನ ಪ್ರೇಮವನ್ನು ಈತನಿಗೆ ಒಪ್ಪಿಸಿರುವಾಗ, ಈತನು ನನ್ನನ್ನು ನೋಡಿರಲಿಕ್ಕಿಲ್ಲವೆ? ಬಝಾರದಲ್ಲಿ ಈತನು ಹಲವುಸಾರೆ ನನ್ನ ಕಣ್ಣಿಗೆ ಬಿದ್ದಿರುವನು. ನನ್ನನ್ನು ನೋಡಿರುವನು; ಬರಿಯನೋಡಿರುವನಂತಲ್ಲ ಮನಃಪೂರ್ವಕವಾಗಿ ನೋಡಿರುವನು. ಆತನ ನೋಟದ ಆ ರೀತಿಯನ್ನು ನೋಡಿದರೆ, ಈತನು ನನ್ನ ಪ್ರೇಮಯಾಚನೆಗೆ ಸಹಜವಾಗಿ ಒಪ್ಪಿಕೊಳ್ಳುವನೆಂದು ನಾನು ಮಾಡಿದ್ದೆನು; ಅಂತೇ ನನ್ನ ಸಖಿಯಾದ ಜಯೆಯ ಮುಂದೆ ಈತನನ್ನು ಕಳಿಸೆಂದು ಹೇಳಿದ್ದೆನು; ಆದರೆ ಈ ಗಂಭೀರನ ಈ ಔದಾಸೀನ್ಯದ ಮಾತನ್ನು ಕೇಳಿದರೆ, ಈತನೊಡನೆ ನನ್ನ ವಿವಾಹದ ಯೋಗವು ಇರುವದೋ ಇಲ್ಲವೋ? ಹಾಗೆ ಯೋಗವಿಲ್ಲದಲ್ಲಿ ನಾನು ಕಡೆತನಕ ಅವಿವಾಹಿತಳಾಗಿಯೇ ಕಾಲಕಳೆಯ ಬೇಕಾದೀತಲ್ಲ?'' ಎಂಬಿವೆ ಮೊದಲಾದ ವಿಚಾರಗಳಲ್ಲಿ ಮಗ್ನಳಾಗಿ ಆ ತರುಣನ ಸುಂದರ ಮುಖವನ್ನು ಆಶ್ಚರ್ಯದಿಂದ ನೋಡುತ್ತ ಆಕೆಯು ನಿಂತುಬಿಟ್ಟಳು. ಆ ತರುಣನು ಆ ಭುವನ ಸುಂದರಿಯ ರೂಪವನ್ನು ನೋಡುವಲ್ಲಿ ಮಗ್ನನಾಗಿ ಹೋಗಿದ್ದನು. ಆ ಅರುಣೋದಯದ ಮಂದಪ್ರಕಾಶದಲ್ಲಿ ಆ ಕುಲೀನ ತರುಣರ ಶುದ್ಧಾಂತಃಕರಣಗಳ ಶುದ್ಧಪ್ರೇಮಗಳ ಪರಸ್ಪರ ತಾಕಲಾಟವಾಗತೊಡಗಿತ್ತು. ಆಗ ಆ ತರುಣನು ಮನಸ್ಸಿನಲ್ಲಿ—''ಈಕೆಯು ಸ್ವರ್ಗಲೋಕದ ಅಪ್ಸರೆಯಾಗಿರಬಹುದೆ? ಇಂಥವಳು ನನ್ನ ದರ್ಶನದ ಅಪೇಕ್ಷೆ ಮಾಡಿದ್ದರಿಂದ ನಾನು ಧನ್ಯನೇ

ಸರಿ! ಈಕೆಯು ನನ್ನನ್ನು ಕಾಣಲು ಯಾಕೆ ಇಚ್ಛಿಸುತ್ತಿರಬಹುದು,'' ಎಂದು ಆಲೋಚಿಸಿ ಆ ಸುಂದರಿಯನ್ನು ಕುರಿತು –

ತರುಣ–ನನ್ನನ್ನು ಬುದ್ಧಿಪೂರ್ವಕ ಕರೆಸಿಯೂ ನೀವು ಹೀಗೆಮಾತಾಡದೆ ಸುಮ್ಮನೆ ಆಶ್ಚರ್ಯದಿಂದ ನೋಡುತ್ತ ನಿಂತ ಕಾರಣವೇನು?

ತರುಣಿ—ಘನವಂತನೇ, ನಿನ್ನಿನ ಮೀನಾಬಜಾರದಲ್ಲಿ ನೀನು ನನ್ನ ಮುಂದೆ ಹಲವು ಸಾರೆ ಹಾದುಹೋಗಿರುವೆ, ನನ್ನನ್ನು ಹಲವುಸಾರೆ ಆಸಕ್ತಿಯಿಂದ ನೋಡಿರುವೆ; ಹೀಗಿದ್ದು ಎಂದೂ ನನ್ನನ್ನು ನೋಡದಿರುವವನಂತೆ ಈಗ ಪ್ರಶ್ನಮಾಡುತ್ತಿರುವೆ; ಅಂದ ಬಳಿಕ ಆಶ್ಚರ್ಯದಿಂದ ನಿನ್ನನ್ನು ನೋಡುತ್ತ ನಿಂತುಕೊಳ್ಳದೆ ಏನುಮಾಡಲಿ?

ತರುಣ—ಸುಂದರೀ, ಇರಬಹುದು; ನಾನು ಮೊನ್ನಿನ ಮೀನಾಬಝಾರದಲ್ಲಿ ನಿನ್ನ ಮುಂದೆ ಹಲವುಸಾರೆ ಹಾದುಹೋಗಿರಬಹುದು; ಆದರೆ ಯುವರಾಜ ಛತ್ರಸಾಲನಂತೆ ನಾನಾದರೂ ಆ ಶೃಂಗಾರದ ಭಝಾರದಲ್ಲಿ ತಿರುಗಾಡಲಿಕ್ಕೆ ಮನಸ್ಸಿಲ್ಲದವನಾಗಿದ್ದೆನು; ಆದರೆ ನಾನು ಕೇವಲ ರಾಮಸಿಂಗನ ಮಾತು ಮೀರಲಾರದೆ ಬಂದವನಾದದ್ದರಿಂದ, ಸುಂದರ ತರುಣಿಯರನ್ನು ಆಸಕ್ತಿಯಿಂದ ನೋಡಲಿಕ್ಕೆ ನನ್ನ ಮನಸ್ಸು ಮೆಚ್ಚಿರಲಿಲ್ಲ, ಸುಮ್ಮನೆ ಉದಾಶೀನನಾಗಿ ಬಝಾರದಲ್ಲಿ ತಿರುಗಾಡುತ್ತಿದ್ದೆನು. ಸುಂದರೀ, ನೀನೇ ಹೇಳು, ಬುಂದೇಲ ಖಂಡವು ಯವನರ ದಾಸ್ಯದಲ್ಲಿ ಕೊಳೆಯುತ್ತಿರು, ನಮ್ಮಂಥ ತರುಣ ರಜಪೂತರು ಹೆಣ್ಣು–ಹೊನ್ನುಗಳ ಬಲೆಗೆ ಬಿದ್ದು ಪ್ರತಾಪ ಹೀನರಾಗುವದು ಯೋಗ್ಯವೆ? ಅಂತೇ ನನ್ನ ಧೀರ–ಗಂಭೀರ ಮಿತ್ರನಾದ ಯುವರಾಜ ಛತ್ರಸಾಲನು ರಾಮಸಿಂಗನ ಸೂಚನೆಗೆ ಒಪ್ಪದೆ, ಯಮುನಾತೀರಕ್ಕೆ ಹೋಗಿಬಿಟ್ಟನು! ಇರಬಹುದು, ನಿಶ್ಚಯವಾಗಿ ನಾನು ನಿನ್ನ ಮುಂದೆ ಹಲವು ಸಾರೆ ಬಝಾರದಲ್ಲಿ ತಿರುಗಾಡಿರಬಹುದು; ಹಾಗೆ ತಿರುಗಾಡುವಾಗ ನಿನ್ನನ್ನು ನೋಡಿರಲೂಬಹುದು. ಹಾಗಿಲ್ಲದಿದ್ದರೆ ನಿನ್ನಂತಹ ಕುಲೀನ ಸುಂದರಿಯು ಸುಳ್ಳಾಡುವದುಂಟೆ? ಅದರಂತೆ ಜಯೆಯ ಮುಖಾಂತರ ನನ್ನನ್ನು ಕರೆಸುವದುಂಟೆ? ಆದರೆ, ಸುಂದರಿ, ನನ್ನ ಈ ಯಥಾರ್ಥ ಮಾತುಗಳಿಂದ ನಿನ್ನ ಮನಸ್ಸು ನೋಯುತ್ತಿರಬಹುದು, ಅದಕ್ಕಾಗಿ ನನ್ನನ್ನು ಕ್ಷಮಿಸಿ ನನ್ನನ್ನು ಕರೆಸಿದ ಕಾರಣವೇನೆಂಬದನ್ನು ಹೇಳು.

ತರುಣನ ಈ ಮಾತುಗಳನ್ನು ಕೇಳಿ ಆ ಸುಂದರಿಯ ಹೃದಯವು ಮತ್ತಿಷ್ಟು ಕಂಪಿಸಹತ್ತಿತು. ತಾನು ಆಸೆಬರುಕ ಸಾಮಾನ್ಯ ಸ್ತ್ರೀಯಂತೆ ಗೋಷೆಯನ್ನು ಚಲ್ಲಿಕೊಟ್ಟು ತಂದೆಯ ಪ್ರೇಮವು ನಷ್ಟವಾದೀತೆಂಬದನ್ನು ಲೆಕ್ಕಿಸದೆ, ಹೀಗೆ ನಿರ್ಲಜ್ಜ ಸ್ತ್ರೀಯಂತೆ ಅಪರಿಚಿತ ತರುಣನ ಪ್ರೇಮ ಯಾಚನೆಗಾಗಿ ಬಂದದ್ದಕ್ಕಾಗಿ ಆಕೆಯು ಪಶ್ಚಾತ್ತಾಪಪಡತೊಡಗಿದಳು! ನಮ್ಮಂಥ ತರುಣಿಯರ ಚಂಚಲವೃತ್ತಿಯು ಆದರವು ಹೀಗೆ ನಗೆಗೀಡಾಗುವದೇ ಸರಿ; ಆದರೆ ಬಂದತಪ್ಪಿಗಾಗಿ ಏನೆಂಬದನ್ನು ಮನಗಂಡುಬಿಡೋಣ, ಅಂದರೆ ಒಮ್ಮೆ ಮನಸ್ಸು ಕಲ್ಲುಮಾಡಿಕೊಂಡು ಸಮಾಧಾನದಿಂದ ಈ ಮೂರ್ತಿಯನ್ನು ಧ್ಯಾನಿಸುತ್ತ ಕಾಲಹರಣಮಾಡಲಿಕ್ಕಾದರೂ ನೆಟ್ಟಗಾಗುತ್ತದೆ.

ಈ ಮೇರೆಗೆ ಆಲೋಚಿಸಿ ಆ ಸುಂದರಿಯು ಆ ತರುಣ ರಜಪೂತನನ್ನು ಕುರಿತು–

ತರುಣಿ—ಸರದಾರಸಾಹೇಬ, ಆಗಲೆ ಛತ್ರಸಾಲನೆಂದು ಅಂದಿರಲ್ಲ ಆ ಛತ್ರಸಾಲನು ಯಾರು? ಬಾದಶಹನನ್ನು ಪ್ರಾಣಸಂಕಟದಿಂದ ಮುಕ್ತ ಮಾಡಿದ ಛತ್ರಸಾಲನೋ ಏನು?

ತರುಣ—ಹೌದು, ಬಾದಶಹನ ಮೇಲೆ ಎಂದೂ ತೀರಸಲಿಕ್ಕೆ ಬಾರದಷ್ಟು ಉಪಕಾರ ಮಾಡಿದ ಛತ್ರಸಾಲನೇ ಆತನು.

ತರುಣಿ—ಆತನು ನಿಮಗೇನಾಗಬೇಕು?

ತರುಣ—ನಿಜವಾಗಿಯೆಂದರೆ, ಆತನು ನನ್ನ ತಂದೆಯ ವೈರಿಯ ಮಗನು; ಸಂಬಂಧ ದಿಂದ ನೋಡಿದರೆ, ಆತನು ತನ್ನ ತಂದೆಯ ವೈರಿಯಾದದ್ದರಿಂದ ನನ್ನ ವೈರಿಯೂ ಆಗಬೇಕು; ಆದರೆ ಬುಂದೇಲಖಂಡಕ್ಕೆ ಸ್ವಾತಂತ್ರ್ಯವನ್ನು ಒದಗಿಸಿಕೊಡುವ ಸಂಬಂಧದಿಂದ ನಾವಿಬ್ಬರೂ ಮಿತ್ರರಾಗಿರುವಾಗ, ನನ್ನ ತಂದೆಯ ಆಜ್ಞೆಯಂತೆಯೇ ನಾನು ಛತ್ರಸಾಲನ ಸೇವಕನಾಗಿದ್ದೇನೆ. ಆತನ ಆಜ್ಞೆಯನ್ನು ಪಾಲಿಸುವದೇ ನನ್ನ ಸೇವಾಧರ್ಮವು. ಲಕ್ಷ್ಮಣನು ಶ್ರೀ ರಾಮಚಂದ್ರನ ಸೇವೆಯನ್ನು ಆತನ ವನವಾಸವು ಮುಗಿಯುವವರೆಗೆ ಬ್ರಹ್ಮಚರ್ಯದಿಂದ ಮಾಡಿದಂತೆ ಬುಂದೇಲ ಖಂಡಕ್ಕೆ ಸ್ವಾತಂತ್ರ್ಯಪ್ರಾಪ್ತಿಯಾಗುವವರೆಗೆ ನಾನೂ ಬ್ರಹ್ಮಚರ್ಯದಿಂದಲೇ ಆತನ ಸೇವೆಯನ್ನು ಮಾಡುವೆನು.

ತರುಣಿ—ಹಾಗಿದ್ದರೆ, ಬುಂದೇಲಖಂಡವು ಸ್ವತಂತ್ರವಾಗುವವರೆಗೆ, ನಾನೂ ಬ್ರಹ್ಮಚರ್ಯ ದಿಂದ ಇರಬೇಕಾಯಿತು.

ತರುಣ—ಅದೇಕೆ? ನನ್ನ ಬ್ರಹ್ಮಚರ್ಯಕ್ಕೆ ನಿನ್ನ ಸಂಬಂಧವೇನು? ನನ್ನ ಬ್ರಹ್ಮಚರ್ಯವು ಮುಗಿಯುವವರೆಗೆ ನೀನೇಕೆ ಬ್ರಹ್ಮಚರ್ಯದಿಂದಿರಬೇಕು?

ತರುಣಿ–ಮನೋಹರನೇ, ಇನ್ನು ಸಂಕೋಚಪಡುವದಾದರೂ ಏಕೆ? ಮೊನ್ನಿನ ಮೊನಾಬಝಾರದಲ್ಲಿ ನಾನು ನಿನ್ನನ್ನು ನೋಡಿದಾಗಲೇ ಈ ದೇಹವನ್ನು ನಿನ್ನ ಸೇವೆಯಲ್ಲಿ ಸವಿಸಬೇಕೆಂದು ನಿಶ್ಚಯಿಸಿರುತ್ತೇನೆ; ಅಂದಬಳಿಕ ನೀನು ನನ್ನನ್ನು ಸ್ವೀಕಾರಮಾಡದ ಪಕ್ಷದಲ್ಲಿ ನನ್ನ ವಿವಾಹಕ್ಕೆ ಅವರೆಗೆ ಆಸ್ಪದವೆಲ್ಲಿರುವದು?

ತರುಣಿಯ ಈ ಮಾತುಗಳನ್ನು ಕೇಳಿ ತರುಣನಿಗೆ ಪರಮಾಶ್ಚರ್ಯವಾಯಿತು. ಇಂಥ ಅರುಣೋದಯದ ಸಮಯದಲ್ಲಿ ಈಕೆಯು ತನ್ನನ್ನು ಕಾಣಲಿಚ್ಛಿಸಿದ ಕಾರಣದ ಸ್ಪಷ್ಟೀಕರಣವು ಈಗ ಆತನಿಗಾಯಿತು, ಇಂಥ ಲೋಕೋತ್ತರ ಸುಂದರಿಯು ತನ್ನನ್ನು ನೋಡಿದ ಮಾತ್ರದಿಂದ ಯಾವ ವಿಚಾರವನ್ನೂ ಮಾಡದೆ ತನಗೆ ತನ್ನ ದೇಹವನ್ನು ಒಪ್ಪಿಸಿದ್ದಕ್ಕಾಗಿ ಆತನು ತನ್ನನ್ನು ಧನ್ಯನೆಂದು ತಿಳಿದನು. ಆತನು ಕೃತಜ್ಞತೆಯಿಂದ ಆ ತರುಣಿಯನ್ನು ಕುರಿತು–

ತರುಣ—ಸುಂದರೀ, ನಿನ್ನ ಸ್ವರ್ಗೀಯ ಲಾವಣ್ಯವನ್ನು ಉಪಭೋಗಿಸುವ ಪಾತ್ರತೆಯು ನನ್ನಲ್ಲಿರುವದಿಲ್ಲ; ಅಧಿಕಾರ, ವಿಲಾಸ, ಐಶ್ವರ್ಯಗಳ ದೃಷ್ಟಿಯಿಂದ ಯೋಗ್ಯನಾದ ಮತ್ತೊಬ್ಬ ಯಾವನಾದರೂ ಪುರುಷನಿಗೆ ನಿನ್ನ ದೇಹವನ್ನು ಒಪ್ಪಿಸು!

ತರುಣಿ—ಹೀಗೆ ತಾವು ನನ್ನ ಅಪಮಾನ ಮಾಡಬಾರದು; ಅಧಿಕಾರ ಸಂಪತ್ತಿ–ವಿಲಾಸ ಮೊದಲಾದ ಬಾಹ್ಯಕಾರಣಗಳಿಂದ ನಾನು ಪ್ರೇಮಮಾಡುವೆನೆಂಬ ಆರೋಪವನ್ನು ತಾವು ನನ್ನ

ಮೇಲೆ ಹೊರಿಸಬಾರದು. ಅಂತಹ ಕಲಂಕಿತ ಪ್ರೇಮವು ನನ್ನದಲ್ಲ. ನನ್ನ ಪ್ರೇಮವು ಬೆಲೆ ಕೊಟ್ಟು ಕೊಂಡುಕೊಳ್ಳುವಂತಹದಲ್ಲ. ವೀರಶ್ರೇಷ್ಠನೇ, ನಿನ್ನ ತೇಜಸ್ವಿತೆಗೆ ಸ್ವಾಭಾವಿಕವಾಗಿಯೇ ನನ್ನ ಮನಸ್ಸು ಸೋತದ್ದರಿಂದ, ತ್ರಿಕರಣಪೂರ್ವಕವಾಗಿ ನಾನು ನಿನ್ನನ್ನು ಒರಿಸಿದ್ದೇನೆ. ಬೇಕಾದರೆ ನನ್ನನ್ನು ಪ್ರೀತಿಸಿ ನೀನು ನನ್ನನ್ನು ಧನ್ಯಳಾಗಮಾಡು. ಇಲ್ಲದಿದ್ದರೆ ನಾನು ಆಜನ್ಮ ಬ್ರಹ್ಮಚರ್ಯ ದಿಂದ ಇದ್ದು ನಿನ್ನನ್ನು ಧ್ಯಾನಿಸುತ್ತ ಕಾಲಹರಣ ಮಾಡುವೆನು!

ತರುಣ—ಮನೋಹರೇ, ನನ್ನ ಮನಸಿನಲ್ಲಿದ್ದದ್ದು ನಿನಗೆ ತಿಳಿದಂತೆ ತೋರಲಿಲ್ಲ. ನಿನ್ನನ್ನು ಸ್ವೀಕರಿಸಿದ ಮಾತ್ರದಿಂದ ನನ್ನ ಮೇಲೆ ಬೀಳುವ ದೊಡ್ಡಭಾರವನ್ನು ಸಹಿಸಲಾರದ್ದಕ್ಕಾಗಿ ನಿನ್ನನ್ನು ನಾನು ನಿರಾಕರಿಸುವದಿಲ್ಲ; ಆದರೆ ನಿನ್ನ ಸುಖ.......

ತರುಣನನ್ನು ಮುಂದೆ ಮಾತಾಡಗೊಡದೆ ಆ ಸ್ತ್ರೀಯು—''ನನ್ನ ಸುಖದ ಸಲುವಾಗಿ ನೀವು ಇಷ್ಟು ಚಿಂತೆಮಾಡಬೇಡಿರಿ; ನಾನು ನಿಮಗೆ ನನ್ನ ಪ್ರೇಮವನ್ನು ಅರ್ಪಿಸುವಾಗಲೇ ನನ್ನ ಸುಖ ದುಃಖಗಳು ನಿಮ್ಮ ಸುಖ ದುಃಖಗಳಲ್ಲಿ ಅಂತರ್ಭೂತವಾಗಿಹೋಗಿವೆ. ಅಂದಬಳಿಕ ನನ್ನ ಸುಖದುಃಖಗಳ ವಿಚಾರವೇಕೆ? ಸಾಕಾಯಿತು ಆ ಸುಖವು! ಜಗತ್ತಿನಲ್ಲಿ ಶ್ರೇಷ್ಠತರಗತಿಯ ಸ್ತ್ರೀಯ ಕಲ್ಪನೆಯಲ್ಲಿಯೂ ಬಾರದ ಸುಖವನ್ನು ನಾನು ಅನುಭವಿಸಿದ್ದೇನೆ; ಸ್ವರ್ಗದಲ್ಲಿ ವಿಹರಿಸುತ್ತಿರುವ ದೇವತೆಗಳು ಹೊಟ್ಟೆಕಿಚ್ಚುಪಡುವಷ್ಟು ಅತುಲ ಐಶ್ವರ್ಯವು ನನ್ನ ಸೇವಗೆ ಸಿದ್ಧವಾಗಿರುತ್ತದೆ; ಪಾತಾಳಲೋಕದಲ್ಲಿ ಸಂಚರಿಸುವ ನಾಗಕನ್ಯೆಯರೂ ಲಜ್ಜೆಯಿಂದ ತಲೆಬಾಗಿಸುವಷ್ಟು ವೈಭವವು ನನ್ನ ಸ್ವಾಧೀನದಲ್ಲಿರುತ್ತದೆ; ಆದರೆ ಸಂಪತ್ತಿ, ಐಶ್ವರ್ಯ, ವೈಭವಗಳಿಗೆ ಹೊಂದಿಕೊಂಡಿರುವದು ನನಗೆ ಬೇಸರವಾಗಿರುತ್ತದೆ. ತಮ್ಮ ಪ್ರೇಮದಲ್ಲಿ ನನಗೆ ಅವೆಲ್ಲ ಕಾಣುತ್ತಿರುವವು; ಅಂತೇ ಪ್ರೇಮಯಾಚನೆಯನ್ನು ತಮ್ಮಲ್ಲಿ ನಾನು ಮಾಡುತ್ತಿರುವೆನು.

ತರುಣಿಯ ಈ ಮಾತುಗಳನ್ನು ಕೇಳಿ ಆ ತರುಣನು ತನ್ನೊಳಗೆ—''ದೇವಾ, ಈಗ ನಾನು ಈ ತರುಣಿಗೆ ಏನೆಂದು ಉತ್ತರಕೊಡಲಿ? ಇಂಥ ಸುಂದರಿಯ ತ್ಯಾಗಮಾಡಿ ದೇಶಸೇವೆಯ ವ್ರತವನ್ನು ಏಕ ನಿಷ್ಠೆಯಿಂದ ನಡಿಸಲಾ, ಅಥವಾ ದೇಶ ಸೇವೆಯ ವ್ರತವನ್ನು ಬಿಟ್ಟುಕೊಟ್ಟು ಈ ರಮಣಿಯ ಮುಖಕಮಲವನ್ನು ನೋಡುತ್ತ ಕುಳಿತುಕೊಳ್ಳಲಾ? ಛೆ ಛೇ! ಛತ್ರಸಾಲನನ್ನು ನಿರಾಕರಿಸಿ, ಶ್ರೀ ವಿಂಧ್ಯವಾಸಿನಿಯ ದ್ರೋಹವನ್ನು ಸಂಪಾದಿಸಿ, ನನ್ನ ಪ್ರತಿಜ್ಞೆಗೆ ಭಂಗವನ್ನುಂಟು ಮಾಡಿಕೊಂಡು ನಾನು ನರಕಕ್ಕೆ ಇಳಿಯಬಹುದೋ? ಇದಕ್ಕಿಂತ ನನ್ನ ಸೌಖ್ಯವನ್ನು ಹಾಳು ಮಾಡಿಕೊಳ್ಳುವದೇ ನೆಟ್ಟಗೆ! ಬುಂದೇಲಖಂಡದ ಲಕ್ಷಾವಧಿ ಪ್ರಜೆಗಳ ಕಲ್ಯಾಣಕ್ಕಾಗಿ ನನ್ನ ಸೌಖ್ಯದ ಹೋಮವಾದರೆ, ನನ್ನಂತಹ ಧನ್ಯನು ನಾನೇ ಸರಿ! ಲೋಕಸೇವೆ, ವಿಷಯಸುಖ ಇವುಗಳಲ್ಲಿ ಪ್ರಖರ ತೇಜದ ಲೋಕಸೇವೆಯನ್ನು ಅಂಗೀಕರಿಸುವದೇ ಶ್ರೇಯಸ್ಕರವು!''

ಈಮೇರೆಗೆ ವಿಚಾರಮಾಡಿ ಆ ತರುಣನು ಆ ಸ್ತ್ರೀಯನ್ನು ಕುರಿತು—''ಸುಂದರೀ, ಆಗಲೆ ಹೇಳಿದೆನಲ್ಲವೆ ಬುಂದೇಲಖಂಡಕ್ಕೆ ಸ್ವಾತಂತ್ರ್ಯಪ್ರಾಪ್ತಿಯಾಗುವವರೆಗೆ ನಾನು ಬ್ರಹ್ಮಚರ್ಯದಿಂದಿರುವೆನೆಂದು! ಅಂದಬಳಿಕ ಅಲ್ಲಿಯವರೆಗೆ ನಮ್ಮಿಬ್ಬರ ಪ್ರೇಮಸಂಬಂಧದ ಮಾತೇಕೆ?''

ತರುಣಿ—ಅದಕ್ಕೆ ನಾನು ಸಂತೋಷದಿಂದ ಒಪ್ಪಿಕೊಳ್ಳುವೆನು. ಯಾವಾಗಾದರೂ ನನ್ನನು ಪ್ರೀತಿಸುತ್ತೇನೆಂದು ನೀವು ನನಗೆ ಹೇಳಿದ್ದೇಸಾಕು; ಆದರ ಪ್ರಿಯಕರಾ, ಬುಂದೇಲ ಖಂಡದ ಸ್ವಾತಂತ್ರ್ಯಪ್ರಾಪ್ತಿಯ ನಂತರ ನನ್ನ ಪಾಣಿಗ್ರಹಣಕ್ಕೆ ಆತಂಕವಿಲ್ಲವಷ್ಟೆ?

ತರುಣ—ಸರ್ವಥಾ ಆತಂಕವಿಲ್ಲ ಬುಂದೇಲಖಂಡವು ಸ್ವತಂತ್ರವಾದ ದಿವಸವೇ ನಾನು ನಿನ್ನವನು! ಆದರೆ ಪ್ರಿಯೇ, ಬುಂದೇಲಖಂಡದ ಸ್ವಾತಂತ್ರ್ಯವು ಹಾದಿಯ ಮೇಲೆ ಬಿದ್ದಿರುವದಿಲ್ಲ, ಮಹಾ ಸಮರ್ಥನಾದ ದಿಲ್ಲಿಯ ಬಾದಶಹನ ಮುಷ್ಟಿಯಲ್ಲಿ ಬುಂದೇಲಖಂಡದ ಸ್ವಾತಂತ್ರ್ಯವು ಸಿಕ್ಕುಬಿದ್ದಿರುತ್ತದೆ. ಅದನ್ನು ಬಿಡಿಸಿಕೊಳ್ಳುವದು ಸಣ್ಣ ಪುಟ್ಟ ಕೆಲಸವಲ್ಲ.

ತರುಣಿ—ವೀರಶ್ರೇಷ್ಠಾ, ಆ ಮಾತು ಒಪ್ಪತಕ್ಕದ್ದೇ ಸರಿ; ಯಾವದೊಂದು ಮಾರ್ಗದಿಂದ ಬುಂದೇಲಖಂಡದ ಮೇಲಿನ ದಿಲ್ಲೀಪತಿಯ ಅಧಿಕಾರವು ನಷ್ಟವಾದರೆ, ನನ್ನ ಪ್ರೇಮದ ಸ್ವೀಕಾರಮಾಡುವಿರಷ್ಟೇ?

ತರುಣ—ಅವಶ್ಯವಾಗಿ ಮಾಡುವೆನು. ಯಾವ ಗುಡಿಯಾದರೇನು, ನಿದ್ದೆ ಬಂದರಾಯಿತಷ್ಟೆ? ಪ್ರಿಯೇ, ನಿನ್ನ ಪ್ರೇಮಸಾಕ್ಷಿಯಿಂದ ಹೇಳುತ್ತೇನೆ, ಯಾವ ಉಪಾಯದಿಂದಲೇ ಆಗಲಿ, ಬುಂದೇಲಖಂಡಕ್ಕೆ ಸ್ವಾತಂತ್ರ್ಯ ಪ್ರಾಪ್ತಿಯಾದದಿವಸ ನಾನು ನಿನ್ನ ಪಾಣಿಗ್ರಹಣ ಮಾಡುತ್ತೇನೆ.

ತರಣನ ಈ ಮಾತುಗಳನ್ನು ಕೇಳಿ ಆ ಸ್ತ್ರೀಯ ಆನಂದವು ಹೊಟ್ಟೆಯಲ್ಲಿ ಹಿಡಸದಾಯಿತು. ತಾನು ಈವರೆಗೆ ಕೈಯಲ್ಲಿ ಹಿಡಿದುಕೊಂಡಿದ್ದ ಖಡ್ಗವನ್ನು ಮುಂದೆ ಮಾಡಿ ಆ ತರುಣನನ್ನು ಕುರಿತು—''ವೀರ ಶಿರೋಣಿಯೇ, ಮೊನ್ನೆ ಮೀನಾಬಝಾರದಲ್ಲಿ ಧನವಂತ ಸ್ತ್ರೀಯರ ಗುಂಪಿನಲ್ಲಿ ನಾನು ಈ ಖಡ್ಗವನ್ನು ಯೋಗ್ಯಬೆಲೆ ಬಂದಲ್ಲಿ ಕೊಡಬೇಕೆಂದು ಇಟ್ಟುಕೊಂಡು ಕುಳಿತಿದ್ದೆನು. ನನ್ನ ಎಷ್ಟೋ ಗೆಳತಿಯರು ತಾವಿಟ್ಟಿದ್ದ ವಸ್ತುಗಳನ್ನು ಸಾವಿರಾರು ಮೊಹರುಗಳಿಗೆ ಮಾರಿದರು; ಆದರೆ ನನ್ನ ಪ್ರೇಮಕ್ಕೆ ಪಾತ್ರನಾದ ಪುರುಷನಿಗೇ ಈ ಖಡ್ಗವನ್ನು ಅರ್ಪಿಸಬೇಕೆಂದು ನಾನು ಕಾದಿದ್ದೆನು. ಈಗ ನನಗೆ ಈ ಖಡ್ಗದ ಯೋಗ್ಯ ಬೆಲೆಯು ನಿನ್ನಿಂದ ದೊರೆತಿರುವದರಿಂದ, ಇದನ್ನು ಸ್ವೀಕರಿಸಬೇಕು'' ಎಂದು ಹೇಳಿ ಖಡ್ಗವನ್ನು ಕೊಟ್ಟು ಮತ್ತೆ ತರುಣನನ್ನು ಕುರಿತು—''ಈ ದಾಸಿಯ ವಿನಂತಿಯನ್ನು ಮನ್ನಿಸಿ, ನನ್ನ ಪ್ರೇಮದ ಸ್ವೀಕಾರಮಾಡುವೆನೆಂದು ಅಭಿವಚನವಿತ್ತ ಪ್ರಿಯಕರನ ಹೆಸರೇನು? ನಡುವಿನ ವಿರಹದ ಕಾಲದಲ್ಲಿ ನಾನು ಯಾವ ಹೆಸರಿನ ಜಪಮಾಡಬೇಕು?

ತರುಣ—ನನ್ನ ಹೆಸರು ''ದಳಪತರಾಯ''

ತರುಣಿ—ಸರದಾರ ಸಾಹೇಬ! ದಳಪತರಾಯಾಜೀ! ಪರಮೇಶ್ವರನ ಕೃಪೆಯಿಂದ ಬುಂದೇಲ ಖಂಡಕ್ಕೆ ಸ್ವಾತಂತ್ರ್ಯವು ಬೇಗನೆ ಪ್ರಾಪ್ತವಾದೀತು!

ದಳಪತ—(ನಿಟ್ಟುಸಿರುಬಿಟ್ಟು) ಬುಂದೇಲಖಂಡಕ್ಕೆ ಸ್ವಾಂತ್ರ್ಯವು ಬೇಗನೆ ದೊರೆಯುವಂತಿಲ್ಲ.

ತರುಣಿ—ಬೇಗನೆ ದೊರೆಯುವಂತೆ ಇಲ್ಲದಿದ್ದರೆ ನಾನು ಬೇಗನೆ ದೊರೆಯುವಂತೆ ಮಾಡುವೆನು.

ದಳಪತ—ಸುಂದರೀ, ಅಂಥ ಸಾಮರ್ಥ್ಯವು ನಿನ್ನಲ್ಲಿರುವದೇ?

ತರುಣಿ—ನಿಶ್ಚಯವಾಗಿ ಇರುವದು; ಅದರ ಚಿಂತೆ ನಿಮಗೇಕೆ?

ದಳಪತ—ಸುಮ್ಮನೆ ಚಿಂತೆಯೇಕೆಂದು ಮಾತ್ರದಿಂದ ನನಗೆ ನಂಬಿಗೆಯಾಗುವದಿಲ್ಲ. ಅದಕ್ಕೆ ಏನಾದರೂ ಸಾಕ್ಷಿ ಬೇಕು.

ತರುಣಿ—ಪ್ರಿಯಕರಾ, ಬುಂದೇಲಖಂಡದ ಮೇಲೆ ದಿಲ್ಲಿಯ ಪತಿಯ ಅಧಿಕಾರ ವಿರುತ್ತದಷ್ಟೆ? ಆ ದಿಲ್ಲೀಪತಿಯ ಮೇಲೆ ನನ್ನ ಅಧಿಕಾರವಿರುತ್ತದೆ; ಆದ್ದರಿಂದ ಬುಂದೇಲಖಂಡಕ್ಕೆ ಸ್ವಾತಂತ್ರ್ಯವನ್ನು ಒದಗಿಸಿಕೊಡಲಿಕ್ಕೆ ನನಗೆ ವಿಲಂಬವಾಗಲಾರದು!

ದಳಪತ—(ಆಶ್ಚರ್ಯದಿಂದ) ಅಂದರೆ, ನಿನ್ನ ಮಾತಿನ ಗೂಢವು ನನಗೆ ಹೇಗೆ ತಿಳಿಯ ಬೇಕು? ದಿಲ್ಲಿಯ ಬಾದಶಹನ ಮೇಲೆ ಅಧಿಕಾರ ನಡಿಸುವಂತಹ ಲೋಕೋತ್ತರ ಸ್ತ್ರೀಯು ನೀನು ಯಾರು?

ತರುಣಿ—ನಾನು ದಿಲ್ಲಿಯ ಬಾದಶಹನ ಮಗಳು, ನನ್ನ ಹೆಸರು ಬದ್ರುನ್ನಸೆ! ಬದ್ರುನ್ನಸೆಯ ಅಧಿಕಾರವು ಬಾದಶಹನ ಮೇಲೆ ಎಷ್ಟರಮಟ್ಟಿಗಿರುತ್ತದೆಂಬದನ್ನು ಯಾವತ್ತು ದಿಲ್ಲಿಯ ಪಟ್ಟಣವು ಅರಿತಿರುವದು!

ದಳಪತ—(ಆಶ್ಚರ್ಯದಿಂದ) ಹಾಗಾದರೆ ನೀನು ಯವನಿಯು! ನಮ್ಮ ಬುಂದೇಲ ಖಂಡದ ಶತ್ರುವಿನ ಮಗಳು!

ಈ ಮೇರೆಗೆ ನುಡಿದು ದಳಪತರಾಯನು ಆಶ್ಚರ್ಯಮಗ್ನನಾಗಿ ಬದ್ರುನ್ನಸೆಯ ಕಡೆಗೆ ನೋಡುತ್ತಿರಲು ಬದ್ರುನ್ನಸೆಯು ತಟ್ಟನೆ ಅಲ್ಲಿಂದ ಹೊರಟು ಬಾದಶಹನ ಜನಾನಖಾನೆಯನ್ನು ಪ್ರವೇಶಿಸಿದಳು!

## ಹೀರಾದೇವಿಯ ದುಷ್ಟತನ

ಹೀಗೆ ಇತ್ತ ದಿಲ್ಲಿಯಲ್ಲಿ ಚಂಪತರಾಯನೂ, ಆತನ ಮಗ ಛತ್ರಸಾಲನೂ ತಮ್ಮ ಓಜಸ್ವಿತೆಯಿಂದ ಪ್ರಕಾಶಮಾನರಾಗುತ್ತಿರಲು, ಅತ್ತ ಬುಂದೇಲಖಂಡದಲ್ಲಿ ಪಹಾರಸಿಂಗನ ಹೆಂಡತಿಯಾದ ಹೀರಾದೇವಿಯು ಚಂಪತರಾಯನ ವಿರುದ್ಧವಾಗಿ ಬುಂದೇಲದ ಉಳಿದ ರಾಜರೊಡನೆ ಗುಪ್ತಾಲೋಚನೆಗಳನ್ನು ಮಾಡಲು ಯತ್ನಿಸುತ್ತಿದ್ದಳು. ಪಹಾರಸಿಂಗನ ತಂದೆಯಾದ ಬೀರಸಿಂಗದೇವನು ಮಹಾ ಪರಾಕ್ರಮಿಯು; ಆತನು ತನ್ನ ಪರಾಕ್ರಮದಿಂದ ದಿಲ್ಲಿಯ ಸುತ್ತಮುತ್ತಲಿನ ಪ್ರದೇಶವನ್ನು ನಡುಗಿಸಿಬಿಟ್ಟಿದ್ದನು. ಅಕಬರ ಬಾದಶಹನ ರಾಜಕಾರಣ ಪಟುತ್ವಕ್ಕೆ ಸೊಪ್ಪುಹಾಕದೆ ಆ ಸಾಹಸಿಯಾದ ವೀರನು ತನ್ನ ಅಜ್ಜನಾದ ಪ್ರತಾಪರುದ್ರನ ಕಟ್ಟಕಡೆಯ ಇಚ್ಛೆಯಂತೆ ಯಾವತ್ತು ಬುಂದೇಲಖಂಡವನ್ನು ಸ್ವತಂತ್ರವಾಗಮಾಡುವನೆಂದು ಸ್ವಾತಂತ್ರ್ಯಪ್ರಿಯ ಬುಂದೇಲಖಂಡವು ನಂಬಿಕೊಂಡಿತ್ತು ಶ್ರೀರಾಮನು ಲಕ್ಷ್ಮಣನನ್ನು

ಪ್ರೀತಿಸುವಂತೆ, ರಾಜಾರಾಮಚಂದ್ರಸಾನು ತನ್ನ ತಮ್ಮನಾದ ಬೀರಸಿಂಗದೇವನನ್ನು ಪ್ರೀತಿಸುತ್ತಿದ್ದನು. ಹೀಗೆಯೇ ಈ ಇಬ್ಬರು ಬಂಧುಗಳ ಪ್ರೇಮವು ಕಡೆತನಕ ಶಾಶ್ವತವಾಗಿ ಉಳಿದಿದ್ದರೆ, ಶ್ರೀರಾಮನು ಅಸುರರ ಸಂಹಾರಮಾಡಿ ವಿಜಯಶಾಲಿಯಾದಂತೆ, ರಾಮಚಂದ್ರಸಾನೂ ಮುಸಲ್ಮಾನರನ್ನು ಸೋಲಿಸಿ ಬುಂದೇಲಖಂಡವನ್ನು ಸ್ವತಂತ್ರವಾಗಿ ಮಾಡಿದ ಶ್ರೇಯಸ್ಸಿಗೆ ಪಾತ್ರನಾಗುತ್ತಿದ್ದನು; ಆದರೆ ಬುಂದೇಲಖಂಡವಲ್ಲಿ ವಂಶಪರಂಪರೆಯಾಗಿ ನಡೆದುಬಂದಿದ್ದ ರೋಗವು ಬೀರಸಿಂಗದೇವನ ಮನಸ್ಸನ್ನು ಆವರಿಸಿತು. ''ತಾನು ಪರಾಕ್ರಮದಿಂದ ಕಾದುತ್ತ ಸಮರಭೂಮಿಯಲ್ಲಿ ಸಂಚರಿಸುತ್ತಿರಬೇಕು, ಅಣ್ಣನು ಸಿಂಹಾಸನದ ಮೇಲೆ ಕುಳಿತು ಸುಖಪಡಬೇಕು'' ಎಂಬ ಮಾತ್ಸರ್ಯವು ಆ ಬೀರಸಿಂಗನಲ್ಲಿ ಉತ್ಪನ್ನವಾಗಿ, ಗೃಹಕಲಹಕ್ಕೆ ಆರಂಭವಾಯಿತು. ಓರಛಾದ ಸ್ವಾತಂತ್ರದೇವಿಗೆ ಅಲಂಕಾರವಾಗಿದ್ದ ಬೀರಸಿಂಗದೇವನು ಯುವರಾಜ ಸೇಲೀಮನ ಸಂಗತಿಗೆ ಬಿದ್ದನು. ಸೇಲಿಮನ ಸಂತೋಷಕ್ಕಾಗಿ ಅಬುಲಫಜಲನಂಥ ಸರಸ್ವತೀ ಭಕ್ತನನ್ನು ''ಬಾರಕೀಸರಾಈ'' ಎಂಬಲ್ಲಿ ಕೊಂದವನು ಈ ಬೀರಸಿಂಗದೇವನೆ! ಮುಂದೆ ಸ್ವಲ್ಪ ಕಾಲದಲ್ಲಿಯೇ ಬೀರಸಿಂಗದೇವನು ತನ್ನ ಅಣ್ಣನಾದ ರಾಜಾ ರಾಮಚಂದ್ರಸಾನನ್ನು ಸಿಂಹಾಸನದಿಂದ ತಳ್ಳಿ, ತಾನು ಓರಛಾದ ಪಟ್ಟವನ್ನು ಏರಿದನು. ಆಮೇಲೆ ಈ ಕುಲನಾಶಕನು ತನ್ನ ದೇಶದ ಸ್ವಾತಂತ್ರ್ಯಕ್ಕೆ ಉಂಟಾಗಿದ್ದ ಪಾರತಂತ್ರ್ಯದ ಕಲಂಕವನ್ನು ದೂರಮಾಡಿಕೊಳ್ಳುವದಕ್ಕಾಗಿ ವಿಶ್ವಪ್ರಯತ್ನ ಮಾಡಿದರೂ ಪ್ರಯೋಜನವೇನು ಆಗದೆ ಅದರಿಂದ ಬುಂದೇಲಖಂಡದೊಳಗಿನ ಮೂರು ನಾಲ್ಕು ಸಂಸ್ಥಾನಗಳ ಸ್ವಾತಂತ್ರ್ಯವು ಮಾತ್ರ ನಷ್ಟವಾಯಿತು. ಮುಂದೆ ಬೀರಸಿಂಗದೇವನ ಒಬ್ಬನೇ ಒಬ್ಬ ಮಗನಾದ ಪಹಾರಸಿಂಗನಿಂದ ಶಹಾಜಹಾನ ಬಾದಶಹನು ಓರಛಾದ ಸಂಸ್ಥಾನವನ್ನು ಕಸಿದುಕೊಳ್ಳಲು, ಶೂರ ಚಂಪತರಾಯನು ತನ್ನ ಪರಾಕ್ರಮದಿಂದ ಅದನ್ನೇ ಗೆದ್ದು, ಅದನ್ನು ಪಹಾರಸಿಂಗನಿಗೆ ಕೊಟ್ಟನು. ಇಂತಹ ಉಪಕಾರ ಕರ್ತೃವನ್ನು ತನ್ನ ರಾಣಿಯಾದ ಹೀರಾದೇವಿಯ ಮಾತಿನಿಂದ ಪಹಾರಸಿಂಗದೇವನು ದ್ವೇಷಿಸತೊಡಗಿದ್ದು ಕೃತಘ್ನತೆಯ ಲಕ್ಷಣವನಲ್ಲದೆ ಮತ್ತೇನು?

ಪ್ರತಾಪಶಾಲಿಯಾದ ಚಂಪತರಾಯನ ಕೀರ್ತಿಯು ದಿನದಿನಕ್ಕೆ ಪಸರಿಸತೊಡಗಿದ್ದು ಈ ಕೃತಘ್ನ ದಂಪತಿಗಳಿಗೆ ಸಹನವಾಗಲಿಲ್ಲ. ಎರಡನೆಯವರ ಉತ್ಕರ್ಷವನ್ನು ಸಹಿಸದ ಈ ಕೆಟ್ಟ ಗುಣವು ಆಗಿನ ಬುಂದೇಲಖಂಡದ ರಾಜರನ್ನು ಮುಚ್ಚಿಹಾಕಿದ್ದರಿಂದ, ಬುಂದೇಲಖಂಡದ ಬಹುಜನ ಅರಸರು ಹೀರಾದೇವಿಯಪಕ್ಷವನ್ನು ವಹಿಸಿ, ಚಂಪತರಾಯನನ್ನು ದ್ವೇಷಿಸಹತ್ತಿದರು. ಔರಂಗಜೇಬನ ಕಾಲದಲ್ಲಿ ಬುಂದೇಲಖಂಡದ ಸ್ವಾತಂತ್ರ್ಯಕ್ಕಾಗಿ ಹೆಣಗುವನೆಂದರೆ, ಮಹೋಬದ ಅರಸನಾದ ಚಂಪತರಾಯನೊಬ್ಬನೇ; ರಣಧುರಂಧರನಾದ ಸಾಗರದ ಸಂಸ್ಥಾನಾಧಿಪತಿ ಸಭಾಕರಣನು ಮೊದಮೊದಲು ಚಂಪತರಾಯನ ಸಹಾಯಕನಾದದ್ದರಿಂದ, ಚಂಪತರಾಯನ ಪ್ರಯತ್ನಕ್ಕೆ ಉತ್ತೇಜನವು ದೊರೆಯುತ್ತಲಿತ್ತು; ಆದರೆ, ಕಪಟಿಯಾದ ಹೀರಾದೇವಿಯು, ಸಭಾಕರಣನು ತನ್ನ ಪಕ್ಷವನ್ನು ವಹಿಸದಿದ್ದರೆ ತನ್ನ ಪಕ್ಷವು ಬಲಿಷ್ಠವಾಗದೆಂದು ಭಾವಿಸಿ, ತನ್ನ ಕಪಟನಾಟಕದ ಪ್ರಯೋಗದಿಂದ ಸರಳಹೃದಯದ ಸಭಾಕರಣನನ್ನು ತನ್ನ ಪಕ್ಷಕ್ಕೆ

ಎಳೆದುಕೊಂಡು, ಯುದ್ಧದಲ್ಲಿ ಚಂಪತರಾಯನನ್ನು ಕೊಲ್ಲುವ ಪ್ರತಿಜ್ಞೆಯನ್ನು ಆತನಿಂದ ಮಾಡಿಸಿದ್ದಳು. ಹೀಗೆ ಚಂಪತರಾಯನಿಂದ ಹೊರತಾದ ಬುಂದೇಲಖಂಡದ ಸಂಸ್ಥಾನಿಕರೆಲ್ಲರೂ ಚಂಪತರಾಯನ ಸ್ವಾತಂತ್ರ್ಯಪ್ರಾಪ್ತಿಯ ಪ್ರಯತ್ನಕ್ಕೆ ಸಹಾಯಮಾಡುವದರ ಬದಲು, ತಟಸ್ಥ ವೃತ್ತಿಯಿಂದ ಚಂಪತರಾಯನ ನಾಶದ ಹಾದಿಯನ್ನು ನೋಡುತ್ತ ಪ್ರಸಂಗ ಒದಗಿದಕೂಡಲೆ ತಾವೆಲ್ಲರು ಒಟ್ಟಾಗಿ ಆತನನ್ನು ನಾಶಗೊಳಿಸಬೇಕೆಂದು ನಿಶ್ಚಯಿಸಿದ್ದರು!

ಛತ್ರಸಾಲನು ವಿಂಧ್ಯವಾಸಿನಿಯ ಉತ್ಸವದಲ್ಲಿ ಸೆರೆ ಹಿಡಿದುಕೊಂಡು ಬಂದಿದ್ದ ರಣುದುಲ್ಲಾಖಾನನನ್ನು ಚಂಪತರಾಯನು ಸೆರೆಯಲ್ಲಿ ಹಾಕಿದ್ದನ್ನು ವಾಚಕರು ಬಲ್ಲರಷ್ಟೆ? ಇನ್ನು ಮೇಲೆ ಮೊಗಲ ಬಾದಶಹ ಔರಂಗಜೇಬನೊಡನೆ ತಾನು ಯುದ್ಧಮಾಡಬೇಕಾಗುವದೆಂದು ತಿಳಿದು, ಚಂಪತರಾಯನು ತನ್ನ ಬಲವನ್ನು ಹೆಚ್ಚಿಸಿಕೊಳ್ಳುವದಕ್ಕಾಗಿ ಎಲ್ಲ ಅರಸರು ತನ್ನ ಕಾರ್ಯಕ್ಕೆ ಸಹಾಯಮಾಡಬೇಕೆಂದು ಅವರವರ ಕಡೆಗೆ ವಿನಂತಿಯ ಪತ್ರಗಳನ್ನು ಕಳಿಸಿದ್ದನು. ಇದು ಚಂಪತರಾಯನ ದ್ವೇಷಿಗಳಿಗೆ, ಮುಖ್ಯವಾಗಿ ಹಿರಾದೇವಿಗೆ ಸಹನವಾಗಲಿಲ್ಲ. ಚಂಪತರಾಯನ ದ್ವೇಷಿಗಳಲ್ಲಿ ಅಗ್ರೇಸರಳಾದ ಹೀರಾದೇವಿಯು, ಚಂಪತರಾಯನ ನಾಶಮಾಡುವದಕ್ಕೆ ಇದೇ ತಕ್ಕಸಮಯವೆಂದು ತಿಳಿದು, ತನ್ನ ಪಕ್ಷದ ಎಲ್ಲ ಅರಸರನ್ನು ಕರೆಸಿ ಅವರೊಡನೆ ಗುಪ್ತವಾಗಿ ಆಲೋಚಿಸಿ ಚಂಪತರಾಯನ ನಾಶದ ಉಪಾಯವನ್ನು ಗೊತ್ತು ಮಾಡಬೇಕೆಂದು ಮಾಡಿದಳು. ತನ್ನ ಮಾವನಾದ ಬೀರಸಿಂಗದೇವನು ಸೇಲೀಮನ ಸ್ವಾಗತಕ್ಕಾಗಿ ಕಟ್ಟಿಸಿದ್ದ ಸಭಾಮಂದಿರದಲ್ಲಿಯೇ ಅರಸರ ದರ್ಬಾರು ನೆರೆಸುವದನ್ನು ಆ ದುಷ್ಟರಾಣಿಯು ನಿಶ್ಚಯಿಸಿ, ತನ್ನ ಪಕ್ಷದ ಎಲ್ಲ ಅರಸರಿಗೆ ವಿನಂತಿ ಪತ್ರಗಳನ್ನು ಕಳಿಸಿದಳು. ಅದರಂತೆ ಎಲ್ಲ ಅರಸರು ಆನಂದದಿಂದ ಓರಛಾಕ್ಕೆ ಬಂದರು. ಪರತಂತ್ರ ದೇಶದಲ್ಲಿ ಗೆದ್ದ ಎತ್ತಿನ ಬಾಲಹಿಡಿಯುವವರೇ ಬಹುಜನರು ಇರುವರಲ್ಲವೆ? ಅದರಂತೆ ಮೊಗಲರ ಪ್ರಬಲ ಬಾದಶಹನಾದ ಔರಂಗಜೇಬನ ಪಕ್ಷವಹಿಸಿದ್ದ ಹೀರಾದೇವಿಯ ನಿಯಂತ್ರಣಕ್ಕೆ ಮಾನಕೊಡಲು ಯಾವ ಅರಸರೂ ಹಿಂದೆ ಮುಂದೆ ನೋಡಲಿಲ್ಲ. ಮೇಲೆ ಹೇಳಿದ ದರ್ಬಾರ ಮಂದಿರದಲ್ಲಿ ಅರಸರು ನೆರೆದರು. ಹಿರಾದೇವಿಯು ಸ್ವತಃ ಉತ್ತಮ ರೀತಿಯಿಂದ ಅವರ ಸ್ವಾಗತಮಾಡಿದಳು. ಪಹಾರಸಿಂಗನು ಅಗ್ರಾಸನವನ್ನು ಅಲಂಕರಿಸಿದನು. ಹೀರಾದೇವಿಯೂ, ಪ್ರತಾಪಶಾಲಿಯಾದ ಸಭಾಕರಣನೂ ಪಹಾರಸಿಂಗನ ಎಡಬಲದ ಉಚ್ಚಾಸನದಲ್ಲಿ ಕುಳಿತುಕೊಂಡರು. ಉಳಿದ ಅರಸರು ತಮತಮಗೆ ಉಚಿತವಾದ ಆಸನಗಳಲ್ಲಿ ಕುಳಿತುಕೊಂಡರು.

ಈ ಮೇರೆಗೆ ಎಲ್ಲರು ಸ್ತಬ್ಧರಾಗಿ ಕುಳಿತಿರಲು, ಹೀರಾದೇವಿಯು ಆಸನದ ಮೇಲೆ ಕುಳಿತೇ ಎಲ್ಲ ರಾಜರನ್ನು ಕುರಿತು ಆಢ್ಯತೆಯಿಂದ—"ಬುಂದೇಲಖಂಡದ ಸಮಸ್ತ ನೃಪವರ್ಯರೇ, ನಾನು ನಮ್ಮ ಪಕ್ಷದವರೆನ್ನುವವರಿಗೇ ವಿನಂತಿಯ ಪತ್ರಗಳನ್ನು ಕಳಿಸಿರುವದರಿಂದ ನೀವೆಲ್ಲರೂ ನಮ್ಮವರಾಗಿಯೇ ಬಂದಿರುವದು ನನಗೆ ಪರಮಸಂತೋಷಕರವು; ಆದರೆ ಯಾರಾದರೂ ದ್ರೋಹಿಗಳು ನಿಮ್ಮ ಎಡಬಲದಲ್ಲಿದ್ದರೆ ನೋಡಿ, ಅವರನ್ನು ದರ್ಬಾರದಿಂದ ಹೊರಗೆ ಹಾಕಿರಿ; ಯಾಕಂದರೆ, ನಾವು ಇನ್ನು ಆಲೋಚಿಸುವ ಸಂಗತಿಗಳು ಅತ್ಯಂತ ಗುಪ್ತವಾಗಿ

ಇರಬೇಕಾಗುವವು?'' ಎಂದು ನುಡಿದು ಸುಮ್ಮನಾಗಿ ಕ್ಷಣಹೊತ್ತು ನಾಲ್ಕೂ ಕಡೆಗೆ ನೋಡಿ— ''ಬಹಳ ಸಂತೋಷವು. ನಮ್ಮ ಪಕ್ಷವು ಇಷ್ಟು ಬಲಿಷ್ಠವಾಗಿರುವದನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ. ನಿಮ್ಮೆಲ್ಲರ ಸಹಾಯದಿಂದ ನಮ್ಮ ಶತ್ರುವಾದ ಚಂಪತರಾಯನನ್ನು ಸಹಜವಾಗಿ ಕುಗ್ಗು ಬಡಿಯಬಹುದು. ಎಷ್ಟು ಆತನ ಪ್ರತಿಷ್ಠೆಯು! ಆತನ ವಿನಂತಿ ಪತ್ರದೊಳಗಿನ ಉದ್ಧಟನವನ್ನು ನೋಡಿದಿರಾ? ತನ್ನ ವಿನಂತಿ ಪತ್ರವನ್ನು ಮನ್ನಿಸಿ ಸ್ವಾತಂತ್ರ್ಯ ಪ್ರಾಪ್ತಿಗಾಗಿ ನನಗೆ ಸಹಾಯ ಮಾಡದವರನ್ನು ತನ್ನ ಶತ್ರುಗಳೆಂದು ತಿಳಿದು ಅವರ ಶಾಸನಮಾಡುವನಂತೆ. ಅವರನ್ನು ರಾಜ್ಯಭ್ರಷ್ಟರಾಗಮಾಡುವನಂತೆ! ಆತನ ಈ ಎಟ್ಟೈತನವು ನಿಮ್ಮಂಥ ವೀರರಿಗೆ ಅಪಮಾನ ಕರವಲ್ಲವೆ? ಆ ಕಪಟಿಯಾದ ಚಂಪತರಾಯನ ಸ್ವಾತಂತ್ರ್ಯ ಪ್ರೀತಿಯು ತೋರಿಕೆಯದು. ಆತನು ತಾನೇ ಬುಂದೇಲಖಂಡದ ಸಾರ್ವಭೌಮನಾಗಬೇಕೆಂದು ಅಂತರಂಗದಲ್ಲಿ ಎಣಿಕೆ ಹಾಕುತ್ತಿರುವನು. ಈ ಮಾತು ನಿಮಗೆ ಗೊತ್ತಿಲ್ಲವೆಂದು ನಾನು ತಿಳಿದಿರುವದಿಲ್ಲ; ಆದರೆ ಪ್ರಸಂಗ ಒದಗಿದ್ದರಿಂದ ಆಡಿರುವೆನು. ನಮ್ಮ ಈ ಬಲಿಷ್ಠ ಪಕ್ಷದಿಂದ ಆತನ ಮಹತ್ವಾಕಾಂಕ್ಷೆಯು ಸಫಲವಾಗಲಾರದು. ಆ ಕಪಟಿಯ ಮೇಲೆ ಮೊಗಲ ಬಾದಶಹನ ಸೈನ್ಯವು ಸಾಗಿಬಂದಾಗ ನಾವೆಲ್ಲರೂ ಅದಕ್ಕೆ ಮನಃಪೂರ್ವಕ ಸಹಾಯಮಾಡಿ ಚಂಪತ ರಾಯನನ್ನೂ ಆತನ ರಾಜ್ಯವನ್ನೂ ಮಣ್ಣುಗೂಡಿಸಬೇಕು; ಬಾದಶಹನು ಒಂದುಪಕ್ಷದಲ್ಲಿ ಚಂಪತರಾಯನ ಶಾಸನಕ್ಕಾಗಿ ವಿಲಂಬಮಾಡಿದರೆ ನಾವೇ ಒಟ್ಟುಗೂಡಿ ಬಾದಶಹನ ಕಾರ್ಯವನ್ನು ಮಾಡತಕ್ಕದ್ದು. ಒಂದು ತಿಂಗಳೊಳಗೆ ಎಲ್ಲ ಅರಸರು ತನ್ನನ್ನು ಬಂದು ಕೂಡಬೇಕೆಂದು ನಿಮಗೆ ಕಳಿಸಿರುವ ವಿನಂತಿ ಪತ್ರದಲ್ಲಿ ಅಲ್ಲಾ, ಅಲ್ಲಾ. ಆಜ್ಞಾಪತ್ರದಲ್ಲಿ ಚಂಪತರಾಯನು ಹೇಳಿರುವನಷ್ಟೆ ? ಆ ತಿಂಗಳೊಳಗೆ ನಮ್ಮೆಲ್ಲರ ಕೈಯನ್ನು ಆ ದುಷ್ಟನಿಗೆ ತೋರಿಸಿಬಿಡಬೇಕು. ನಮ್ಮ ಕಂಚುಕಿರಾಯನು ಬಾದಶಹನನ್ನು ಕರತರುವದಕ್ಕಾಗಿಯೇ ದಿಲ್ಲಿಗೆ ಹೋಗಿರುವನು. ರಣದುಲ್ಲಾಖಾನನ ಪ್ರತಿಬಂಧದ ಸುದ್ದಿಯು ಬಾದಶಹನಿಗೆ ತಿಳಿದು, ಆತನು ಚಂಪತರಾಯನ ಮೇಲೆ ಪ್ರಚಂಡ ಸೈನ್ಯವನ್ನು ಸಿದ್ಧಗೊಳಿಸುವ ಕೆಲಸದಲ್ಲಿ ತೊಡಗಿರಬಹುದು. ಹಾಗಿಲ್ಲದಿದ್ದರೆ ಈಗೆರಡು ದಿನಗಳ ಹಿಂದೆಯೇ ಬರಬೇಕಾಗಿದ್ದ ಕಂಚುಕಿರಾಯನು ಯಾಕೆ ತಡೆಯುತ್ತಿದ್ದನು? ಬಾದಶಹನ ದಂಡಿನೊಡನೆಯೇ ಬರಬೇಕೆಂದು ಆತನು ನಿಂತಿರಬಹುದು.''

ಈ ಮೇರೆಗೆ ನುಡಿಯುತ್ತಿರಲು, ಕಂಚುಕಿರಾಯನ ಸಂಗಡ ದಿಲ್ಲಿಗೆ ಹೋಗಿದ್ದ ಕಿಸನನು ಹೊರಗೆ ಬಂದಿರುವನೆಂದು ಸೇವಕನು ಅರಿಕೆ ಮಾಡಿಕೊಂಡನು. ಕೂಡಲೆ ಹೀರಾದೇವಿಯು ಹಿಗ್ಗಿ, ಬೇಗನೆ ಆತನನ್ನು ಕರತಾರೆಂದು ಸೇವಕನನ್ನು ಆಜ್ಞಾಪಿಸಲು, ಅಷ್ಟರಲ್ಲಿ ಕಿಸನನು ದರ್ಬಾರವನ್ನು ಪ್ರವೇಶಿಸಿದನು. ಆಗಿನ ಆತನ ಬಾಡಿದ ಮೋರೆಯನ್ನೂ, ನಿರುತ್ಸಾಹದ ಮುದ್ರೆಯನ್ನೂ ನೋಡಿ ಹೀರಾದೇವಿಯು ಮನಸ್ಸಿನಲ್ಲಿ ಕುಗ್ಗಿದಳು. ಕಿಸನನು ಏನೋ ಅನಿಷ್ಟಕಾರಕ ಸುದ್ದಿಯನ್ನು ಹೇಳುವನೆಂದು ಆಕೆಯು ಭಾವಿಸಿದಳು. ಅಷ್ಟರಲ್ಲಿ ಕಿಸನನು ನಮಸ್ಕರಿಸಿ ಸುಮ್ಮನೆ ನಿಂತುಕೊಳ್ಳಲು, ಹೀರಾದೇವಿಯು ಆತನನ್ನು ಕುರಿತು–

ಹೀರಾದೇವಿ— ಯಾಕೆ ಕಿಸನ, ಬಂದು ಸುಮ್ಮನೆ ನಿಂತುಕೊಂಡೆ? ಕಂಚುಕಿರಾಯನು ಯಾಕೆ ಬರಲಿಲ್ಲ?

ಕಿಸನ–ರಾಣೀ ಸರಕಾರ, ಅತ್ಯಂತ ದುಃಖದಾಯಕ ಸಂಗತಿಯನ್ನು ತಿಳಿಸಲಿಕ್ಕೆ ನನ್ನ ಬಾಯಿಯೇ ಏಳಲೊಲ್ಲದು. ಆ ಅನಿಷ್ಟ ಸಂಗತಿಯನ್ನು ತಿಳಿಸುವದು ನನ್ನ ಪಾಲಿಗೇ ಬರುವದೆಂದರೆ ನನ್ನ ದುರ್ಭಾಗ್ಯವೇ ಸರಿ.

ಕಿಸನನ ಈ ಮಾತುಗಳನ್ನು ಕೇಳಿ, ಹಿರಾದೇವಿಯೂ, ಉಳಿದ ಅರಸರೂ ಕಂಚುಕಿರಾಯನು ಸತ್ತನೆಂದು ತಿಳಿದುಕೊಂಡರು. ಹೀರಾದೇವಿಗೆ ಆತನ ಮಾತು ಕೇಳಿ ತನ್ನ ಈ ಮೊದಲಿನ ಕರ್ತವು ಸುಳ್ಳು ಆದದ್ದಕ್ಕಾಗಿ ಬಹಳ ವ್ಯಸನವಾಯಿತು. ಆಕೆಯು ಸಂತಾಪದಿಂದ ಕಿಸನನ್ನು ಕುರಿತು–

ಹೀರಾದೇವಿ—ಆ ಅಶುಭ ವರ್ತಮಾನವನ್ನು ಇಷ್ಟು ಅವಸರದಿಂದ ನನಗೆ ತಿಳಿಸುವ ಕಾರಣವೇನು? ಕಿಸನ, ನಿನಗೆ ಹೊತ್ತು ವೇಳೆ ಯಾವದೂ ತಿಳಿಯುವದಿಲ್ಲ. ನಮ್ಮ ದುರ್ಬಾರಕ್ಕೆ ನೀನು ಸುಮ್ಮನೆ ಆತಂಕಮಾಡಿದೆ. ಹೋಗು. ಧಾರೀರದ ಅರಮನೆಗೆ ಹೋಗಿ ಕಂಚುಕಿರಾಯನ ವಿಧವೆಯಾದ ರಾಣಿಯೊಡನೆ ರಂಭಾಟಮಾಡಿ ಅಳುಹೋಗು! ಬೇಕಾದರೆ ಈ ದರ್ಬಾರದ ಕಾರ್ಯವು ಮುಗಿದಮೇಲೆ ನಾವೆಲ್ಲರೂ ಕಂಚುಕಿರಾಯನ ಮರಣಕ್ಕಾಗಿ ದುಃಖಪ್ರದರ್ಶನ ಮಾಡಿ, ನಮ್ಮ ಕರ್ತವ್ಯದಿಂದ ಮುಕ್ತರಾಗುವೆವು ಹೋಗು.

ಕಿಸನ—ಏನಂದಿರಿ? ರಾಣೀ ಸುಫಲಾದೇವಿಯವರು ವಿಧವೆಯಾದರೆ? ಕಂಚುಕಿ ರಾಯರು ಪರಲೋಕವಾಸಿಗಳಾದರೇನು?

ಕಿಸನನ ಈ ಪ್ರಶ್ನೆಗಳನ್ನು ಕೇಳಿ ಹೀರಾದೇವಿಯು ಸ್ತಂಭಿತಳಾದಳು. ನನ್ನ ತರ್ಕವು ನಿರರ್ಥಕವಾದದ್ದರಿಂದ ಮತ್ತಾವದೋ ಅಶುಭ ವರ್ತಮಾನವನ್ನು ಕಿಸನನು ಹೇಳುವಹಾಗೆ ಕಾಣುತ್ತದೆಂದು ತಿಳಿದು ಆಕೆಯು ಕಿಸನನ್ನು ಕುರಿತು–

ಹೀರಾದೇವಿ—ಕಿಸನ, ನಿನ್ನ ಅರ್ಧಮಾತುಗಳನ್ನು ಕೇಳಿ ವೃದ್ಧಕಂಚುಕಿರಾಯನು ಸತ್ತನೆಂದು ನಾನು ತರ್ಕಿಸಿದೆನು; ಆದರೆ ಈಗ ನೀನು ಯಾರ ಸಂಬಂಧದ ಅಶುಭ ವಾರ್ತೆಯನ್ನು ತಿಳಿಸುವವನು?

ಕಿಸನ—ಕುಂಚುಕಿರಾಯರ ಸಂಬಂಧದಿಂದ! ಕಂಚುಕಿರಾಯರು ರೋಷನಾರ ಬೇಗಮಳ ಮುಂದೆ ಹೇಳಿದ ರಣದುಲ್ಲಾಖಾನರ ಬಂದೀವಾಸದ ಸುದ್ದಿಯು ಆ ಬೇಗಮೆಗೆ ನಿಜವಾಗಿ ತೋರಲಿಲ್ಲವಂತೆ. ಸುಳ್ಳು ಹೇಳಿ ಬಾದಶಹರ ಅಪಮಾನಮಾಡಿದ್ದಕ್ಕಾಗಿ ಆ ಸಿಟ್ಟಿನ ಬೇಗಮೆಯು ರಾಜೇಸಾಹೇಬರಿಗೆ ದೇಹಾಂತ ಶಾಸನವನ್ನು ವಿಧಿಸಿದಳಂತೆ.

ಹೀರಾದೇವಿ—(ಆಶ್ಚರ್ಯದಿಂದ) ಏನು? ರಾಜನಿಷ್ಠೆಗೆ ಮರಣಶಿಕ್ಷೆಯೆ? ಕಿಸನ, ಕಂಚುಕಿರಾಯರ ಮರಣಶಿಕ್ಷೆಯು ಅಮಲಿನಲ್ಲಿಬಂದೀತೇನು?

ಕಿಸನ–ಇಲ್ಲ ಸರಕಾರ, ಅದಕ್ಕೆ ಇನ್ನು ಹನ್ನೆರಡು ದಿನಗಳ ಅವಕಾಶವಿರುವದು. ಅಷ್ಟರಲ್ಲಿ ಚಂಪತರಾಯರು ರಣದುಲ್ಲಾಖಾನರನ್ನು ಸೆರೆಯಲ್ಲಿ ಹಾಕಿದ ಸುದ್ದಿಯು ನಿಜವೆಂಬ ನಂಬಿಗೆಯು ದಿಲ್ಲೀದರ್ಬಾರಕ್ಕೆ ಆದರೆ ನಮ್ಮ ರಾಜೇಸಾಹೇಬರ ಬಿಡುಗಡೆಯಾಗುವದು.

ಹೀರಾದೇವಿ—ಕಂಚುಕಿರಾಯರು ಕಠಾರಿಯನ್ನು ಛತ್ರಸಾಲನಿಗೆ ಕೊಟ್ಟದ್ದೇ ಈ ಅನರ್ಥಕ್ಕೆ ಕಾರಣವು! ಆದರೆ ಇದಕ್ಕಾಗಿ ನಾವು ನಿರಾಶೆಪಡುವ ಕಾರಣವಿಲ್ಲ, ಇಂದಿಲ್ಲ ನಾಳೆ

ರಣದುಲ್ಲಾಖಾನರ ಪ್ರತಿಬಂಧದ ಸುದ್ದಿಯು ಬಾದಶಹರಕಿವಿಗೆ ಮುಟ್ಟಿಯೇ ಮುಟ್ಟುವದು; ಅಥವಾ ನಮ್ಮ ಸಾಮ್ರಾಜ್ಯನಿಷ್ಠೆಯು ಆ ಸುದ್ದಿಯನ್ನು ಬಾದಶಹರ ಕಿವಿಗೆ ಮುಟ್ಟಿಸಬಹುದು. ಆಗ ಬಾದಶಹರ ಕೋಪಾಗ್ನಿಗೆ ಚಂಪತರಾಯನು ತುತ್ತಾಗುವದು ನಿಶ್ಚಯವು. ಬಾದಶಹರ ಅಮರ್ಯಾದಿತ ಸಾಮರ್ಥ್ಯಕ್ಕೆ ಚಂಪತರಾಯನು ಎಷ್ಟರವನು?

ಹೀರಾದೇವಿಯ ಈ ಮಾತುಗಳನ್ನು ಕೇಳಿ, ಕಿಸನನು ಏನೋ ನೆನಪು ಮಾಡಿಕೊಂಡಂತೆ ಮಾಡಿ ರಾಣಿಯನ್ನು ಕುರಿತು–

ಕಿಸನ—ರಾಣೀ ಸರಕಾರ, ದಿಲ್ಲಿಯ ಬಾದಶಹರು ಚಂಪತರಾಯರ ಮೇಲೆಯೂ, ಯುವರಾಜ ಛತ್ರಸಾಲರ ಮೇಲೆಯೂ ಅತ್ಯಂತ ಸುಪ್ರಸನ್ನವಾಗಿರುವರು. ದಿಲ್ಲೀಪತಿಯು ಚಂಪತ ರಾಯರಿಗೆ ಹನ್ನೆರಡು ಸಾವಿರ ರಾವುತರ ಮನಸಬಿಕೊಟ್ಟು ಅವರನ್ನು ಶ್ರೇಷ್ಠ ಉಮರಾವರನ್ನು ಮಾಡಿರುವನು. ಇಂಥ ಹೊತ್ತಿನಲ್ಲಿ ಬಾದಶಹರು ಚಂಪತರಾಯರಿಗೆ ಸಹಾಯಮಾಡುವದನ್ನು ಬಿಟ್ಟು, ಅವರ ಮೇಲೆ ಶಸ್ತ್ರವೆತ್ತುವರೆನ್ನುವ ಹಾಗೆ ನನಗೆ ತೋರುವದಿಲ್ಲ

ಹೀರಾದೇವಿ—(ಕಣ್ಣು ಕೆಕ್ಕರಿಸಿ ನೋಡುತ್ತ) ಏನಂದಿ? ಕಿಸನ, ಚಂಪತರಾಯರು ದಿಲ್ಲಿಯ ದರ್ಬಾರದ ಮನಸಬದಾರನಾದನೆ? ಉಮರಾವರನಾದನೆ? ಹೀಗೆ ನುಡಿಯುವಾಗ ನಿನ್ನ ಮೈಮೇಲೆ ಎಚ್ಚರವಿರುವದಷ್ಟೆ?

ಕಿಸನ—ರಾಣೀಸರಕಾರ, ನಾನು ಒಂದು ಅಕ್ಷರವನ್ನಾದರೂ ಸುಳ್ಳು ಹೇಳುವದಿಲ್ಲ ಇನ್ನು ಎರಡು ಮೂರು ದಿವಸಗಳಲ್ಲಿ ಚಂಪತರಾಯರ ಸವಾರಿಯು ನಿಮ್ಮ ರಾಜಧಾನಿಯ ಬಳಿಯಿಂದ ಹೋಗುವಾಗ ನಿಮಗೆ ನನ್ನ ಮಾತಿನ ನಂಬಿಗೆಯಾಗಬಹುದು.

ಸಭಾಕರಣ—(ಆಶ್ಚರ್ಯದಿಂದ) ಏನಂದಿ ಕಿಸನ ಚಂಪತರಾಯನು ದಿಲ್ಲಿಯ ದರ್ಬಾರಕ್ಕೆ ಹೋಗಿದ್ದನೆ? ಸಾತಂತ್ರ್ಯದ ದೊಡ್ಡ ದೊಡ್ಡ ಮಾತುಗಳನ್ನಾಡುತ್ತಿರುವ ಚಂಪತ ರಾಯನು ದಿಲ್ಲೀಪತಿಯ ಉಮರಾವರನಾದನೆ? ಸ್ವಾತಂತ್ರ್ಯದೇವಿಯ ಪ್ರಸಾದಕ್ಕಿಂತ ಹನ್ನೆರಡು ಸಹಸ್ರ ರಾವುತರ ಮನಸಬು ಆತನಿಗೆ ಹೆಚ್ಚು ಪ್ರಿಯವಾಯಿತೆ? ಈವೊತ್ತಿನವರೆಗೆ ಚಂಪತ ರಾಯನು ತೋರಿಸುತ್ತಿದ್ದ ಸ್ವಾತಂತ್ರ್ಯದ ಆಡಂಬರವು ಮಾಯಾವಿಯಾದದ್ದೇನು? ವಿಂಧ್ಯ ವಾಸಿನಿಯ ಭಕ್ತಿ, ಪ್ರಾಣನಾಥ ಪ್ರಭುಗಳಲ್ಲಿಯ ವಿಶ್ವಾಸ, ಪ್ರಜಗಳ ಕಲ್ಯಾಣದ ವಿಷಯದ ಆದರ ಇವೆಲ್ಲ ಚಂಪತರಾಯನ ಸೋಗುಗಳಾಗಿದ್ದವೇನು? ಕಿಸನ, ಕೂಡಿದ ದರ್ಬಾರದಲ್ಲಿಯೆ ಚಂಪತರಾಯನು ಮನಸಬದಾರಿಯನ್ನು ಸ್ವೀಕರಿಸಿರಬಹುದಲ್ಲವೆ? ನೆರೆದ ದರ್ಬಾರದಲ್ಲಿಯೇ ಅವನು ಅಮೀರ ಪದವಿಯನ್ನು ಸ್ವೀಕರಿಸಿದನೇನು?

ಕಿಸನ ಇಲ್ಲ, ದರ್ಬಾರದಲ್ಲಿ ಚಂಪತರಾಯರು ಮನಸಬದಾರಿಯನ್ನೂ, ಅಮೀರ ಪದವಿಯನ್ನೂ ಸ್ವೀಕರಿಸಲು ಧಿಕ್ಕರಿಸಿದರು! ಬಾದಶಹರು ಮೊದಲಾಗಿ ನೆರೆದ ದರ್ಬಾರವೆಲ್ಲ ಆಶ್ಚರ್ಯದಿಂದ ನೋಡುತ್ತಿರಲು, ಬುಂದೇಲಖಂಡಕ್ಕೆ ಸ್ವಾತಂತ್ರ್ಯಕೊಡಲೊಪ್ಪದ ಬಾದಶಹನನ್ನು ಧಿಕ್ಕರಿಸಿ, ಅವರಿಗೆ ಮುಜುರೆಯನ್ನೂ ಮಾಡದೆ, ಚಂಪತರಾಯನು ಛತ್ರಸಾಲರೊಡನೆ ದರ್ಬಾರದಿಂದ ಹೊರಟುಬಂದರಂತೆ!

ಸಭಾಕರಣ–ಹಾಗಾದರೆ ಆತನು ಅಮೀರಪದವಿಯ ಸ್ವೀಕಾರವನ್ನು ಹೇಗೆ ಮಾಡಿದನು? ಹನ್ನೆರಡುಸಾವಿರ ರಾವುತರ ಮನಸಬದಾರಿಕೆಯನ್ನು ಆತನು ಹೇಗೆ ಮನ್ನಿಸಿದನು?

ಕಿಸನ—ಚಂಪತರಾಯರು ರಾಜಾ ಜಯಸಿಂಗರಲ್ಲಿ ಅತಿಥಿಗಳಾಗಿ ಇದ್ದರು. ಅಮೀರಿಯನ್ನು, ಹಾಗು ಮನಸಬದಾರಿಕೆಯನ್ನು ಸ್ವೀಕರಿಸುವಂತೆಯಾದರೂ ಮಾಡಿರೆಂದು ಬಾದಶಹರು ಜಯಸಿಂಗರವರ ಮುಖಾಂತರ ದುಂಬಾಲಬಿದ್ದದ್ದರಿಂದ, ಕಡೆಗೆ ಜಯಸಿಂಗರ ಮನಸ್ಸು ನೋಯಿಸಲಾರದೆ, ತಮ್ಮ ಮನಸ್ಸಿಲ್ಲದಿದ್ದರೂ ಚಂಪತರಾಯನು ಅವನ್ನು ಸ್ವೀಕರಿಸಿದರಂತೆ! ಈ ಮಾತು ನಾನು ಮಂದಿಯ ಬಾಯಿಂದ ಕೇಳಿದ್ದು, ಆದರೆ ನೆರೆದ ದರ್ಬಾರದಲ್ಲಿ ಚಂಪತರಾಯರು ಬಾದಶಹರ ಅನುಗ್ರಹವನ್ನು ತಿರಸ್ಕರಿಸಿದ್ದು ಮಾತ್ರ ಸತ್ಯವಾದದ್ದು. ಹಿಂದಿನಿಂದ ಅಮೀರ ಪದವಿಯನ್ನೂ, ಮನಸಬದಾರಿಕೆಯನ್ನೂ ಯಾಕೆ ಸ್ವೀಕರಿಸಿದರೆಂಬದು ನನಗೆ ಗೊತ್ತಿಲ್ಲವು.

ಸಭಾಕರಣ—(ಶಾಂತನಾಗಿ) ಆ ಮಾತು ನಿನಗೆ ಗೊತ್ತಾಗಲಾರದು. ಹಾಗೆ ಮಾಡುವದರಲ್ಲಿ ಏನಾದರೂ ರಾಜಕಾರಣವು ಇರಲೇಬೇಕು.

ಇದನ್ನೆಲ್ಲ ಕೇಳಿ ಹೀರಾದೇವಿಗೆ ಬಹಳ ವ್ಯಸನವಾಯಿತು. ದರ್ಬಾರದ ಕಾರ್ಯವನ್ನು ಮುಂದಕ್ಕೆ ಸಾಗಿಸುವದು ಆಕೆಯಿಂದಾಗಲಿಲ್ಲ. ಬಂದ ಹೊಸ ಸಂಕಟವನ್ನು ಕುರಿತು ವಿಚಾರ ಮಾಡಿದಬಳಿಕ ಮುಂದಿನ ಹಾದಿಯನ್ನು ಗೊತ್ತುಮಾಡಬೇಕೆಂದು ಆಕೆಯು ದರ್ಬಾರವನ್ನು ನಿಲ್ಲಿಸಿದಳು. ಅರಸರು ಪಹಾರಸಿಂಗನ ಆತಿಥ್ಯವನ್ನು ಸ್ವೀಕರಿಸುತ್ತ ಕೆಲವುದಿನ ಓರಛಾದಲ್ಲಿ ನಿಂತುಕೊಂಡರು.

ಆ ದಿನ ರಾತ್ರಿಯೆಲ್ಲ ಹೀರಾದೇವಿಯು ವಿಚಾರಮಗ್ನಳಾಗಿದ್ದಳು. ಆಕೆಯು ಕಣ್ಣಿಗೆಕಣ್ಣು ಹಚ್ಚಲಿಲ್ಲ. ಮರುದಿವಸ ಬೆಳಗಾಗುತ್ತಲೆ ಸಭಾಕರಣನನ್ನು ಕರೆಯಲಿಕ್ಕೆ ತನ್ನ ದಾಸಿಯಾದ ಗಿರಿಜೆಯನ್ನು ಕಳಿಸಿದಳು. ಕೆಲ ಹೊತ್ತಿನ ಮೇಲೆ ಸಭಾಕರಣನು ಹೀರಾದೇವಿಯ ಬಳಿಗೆ ಬಂದನು. ಆಗ ಆನಂದದ ಭರದಲ್ಲಿ ಹೀರಾದೇವಿಯು ಆತನ ಕಿವಿಯಲ್ಲಿ ಏನೋ ಒಟಗುಟ್ಟಿದಳು. ಆ ಒಟಗುಟ್ಟಿದ ಧ್ವನಿಯು ಕಿವಿಯನ್ನು ಸುಡುತ್ತ ಹೋಗಿ, ಆತನ ತಲೆಯ ಮಿದುಳನ್ನು ತಪ್ತವಾಗಮಾಡಿತು. ಆತನು ಭಯಗ್ರಸ್ತನಾಗಿ ಹೀರಾದೇವಿಯ ಕಡೆಗೆ ನೋಡುತ್ತ ಹೊರಟುಹೋದನು. ಆಗ ಹೀರಾದೇವಿಯ ಅಸುರೀ ಆನಂದದ ಅಮಲು ಇಳಿಯಲು, ಆಕೆಯು ಸುತ್ತುಮುತ್ತ ನೋಡುತ್ತಿರುವಾಗ, ತನ್ನ ಹತ್ತರದಲ್ಲಿಯೇ ಹತಬದ್ಧಳಾಗಿ ಕುಳಿತಿದ್ದ ವಿಜಯೆಯ ಕಣ್ಣಿಗೆ ಬಿದ್ದಳು. ಆಗ ದುಷ್ಟ ರಾಣಿಯು ವಿಜಯೆಯನ್ನು ಕುರಿತು—

ಹೀರಾದೇವಿ — ವಿಜಯೇ, ನೀನು ಇಲ್ಲಿ ಏಕೆ?

ವಿಜಯೆ—(ಭಯದಿಂದ) ಅಪ್ಪನ ಬಿಡುಗಡೆಗಾಗಿ ಯಾವ ಉಪಾಯ ಮಾಡುವಿರೆಂಬದನ್ನು ಕೇಳುವದಕ್ಕಾಗಿ ಬಂದಿದ್ದೆನು.

ಹೀರಾದೇವಿ—(ನಗುತ್ತ) ಹೋಗು, ನಿನೊಬ್ಬೇ ಅಪ್ಪನ ಪ್ರೀತಿಯ ಮಗಳು ಬಂದೆ! ಕಂಚುಕಿರಾಯನ ಬಿಡುಗಡೆಯ ಸಲುವಾಗಿ ನಾವು ಯತ್ನಿಸುವ ಕಾರಣವಿಲ್ಲ. ಈಗ ನಮಗೆ

ಕೆಲಸದಲ್ಲಿ ಕೂಡುವ ಹಾಗೂ ಇಲ್ಲ ರಾಜಾ ಚಂಪತರಾಯನೂ, ಯುವರಾಜ ಛತ್ರಸಾಲನೂ ದಿಲ್ಲಿಯ ಬಾದಶಹರಿಂದ ಬಹುಮಾನ ಪಡೆದು ಮಹೋಬಕ್ಕೆ ನಮ್ಮ ಊರ ಮೇಲೆ ಹಾದು ಹೋಗುತ್ತಿರುವರು. ನಾಳಿಗೆ ಅವರ ಆದರಾತಿಥ್ಯದ ವ್ಯವಸ್ಥೆ ಮಾಡುವದು ನಮ್ಮ ಕರ್ತವ್ಯ ವಾಗಿದೆ. ಮಹೋಬದ ಅರಸುಮನೆತನಕ್ಕೂ, ಓರಛಾದ ಅರಸು ಮನೆತನಕ್ಕೂ ಸ್ನೇಹಸಂಬಂಧ ವನ್ನುಂಟುಮಾಡಬೇಕೆಂದು ಯುವರಾಜ ವಿಮಲದೇವನು ಒಂದೇಸವನೆ ನನ್ನ ಬೆನ್ನಹತ್ತಿದ್ದಾನೆ. ಇಂದು ಯುವರಾಜನ ಇಚ್ಛೆಯನ್ನು ಪೂರ್ಣವಾಡಬೇಕಾಗಿದೆ. ಅಂದ ಬಳಿಕ ಈಗ ಕಂಚುಕಿ ರಾಯನ ಬಿಡುಗಡೆ ಮಾಡಿಸಲಿಕ್ಕೆ ನಮಗೆಲ್ಲಿ ಕೂಡುವದು? ಬೇಕಾದರೆ ನೀನೇ ದಿಲ್ಲಿಗೆಹೋಗಿ ನಿಮ್ಮ ಅಪ್ಪನನ್ನು ಬಿಡಿಸು!

ಈ ಮಾತನ್ನು ಕೇಳಿ ವಿಜಯೆಯು ಚಟ್ಟನೆ ಎದ್ದು ಹೀರಾದೇವಿಯನ್ನು ತಿರಸ್ಕಾರದಿಂದ ನೋಡುತ್ತ ಹೊರಟುಹೋದಳು. ಹೀರಾದೇವಿಯು ಮತ್ತೆ ಗಹಗಹಿಸಿ ನಕ್ಕಳು!

## ಕರ್ಕಶ ಹೀರಾದೇವಿ

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಹೀರಾದೇವಿಯು ಅತ್ಯಂತ ಉತ್ಸಾಹದಿಂದ ಚಂಪತ ರಾಯನ ಸ್ವಾಗತದ ಸಿದ್ಧತೆಯನ್ನು ಮಾಡತೊಡಗಿದಳು. ಅದನ್ನು ನೋಡಿ ಎಲ್ಲರೂ ಪರಮಾಶ್ಚರ್ಯಪಟ್ಟರು. ಕೃಷ್ಣಸರ್ಪವು ತನ್ನ ಉಗ್ರಸ್ವಭಾವವನ್ನು ಬಿಟ್ಟು ಸಾತ್ವಿಕ ವಾದಂತೆಯೂ, ಹುಲಿಯು ತನ್ನ ಹಿಂಸಾಕರ್ಮವನ್ನು ಬಿಟ್ಟು ಆಕಳುಗಳ ಹಿಂಡಿನಲ್ಲಿ ಮೇಯುತ್ತಿರುವಂತೆಯೂ ನೋಡುವವರಿಗೆ ತೋರಹತ್ತಿತು. ಮಹೋಬದ ರಾಜಮನೆತನದ ಮೇಲೆ ವಿಷಕಾರುತ್ತಿದ್ದ ತನ್ನ ಹೆಂಡತಿಯು ಈದಿನ ಇಷ್ಟು ಪ್ರೇಮದಿಂದ ಚಂಪತರಾಯನ ಆದರಾತಿಥ್ಯದ ಕಾರ್ಯದಲ್ಲಿ ನಿಮಗ್ನಳಾದದ್ದನ್ನು ನೋಡಿ ಪಹಾರಸಿಂಗನಿಗೂ ಆಶ್ಚರ್ಯವಾಯಿತು! ಯಾವ ಕಾರಣದಿಂದಲೇ ಆಗಲಿ, ಇಂದು ಚಂಪತರಾಯ–ಪಹಾರಸಿಂಗರೊಳಗಿನ ದ್ವೇಷಾಗ್ನಿಯು ಶಾಂತವಾಗಿ ಪರಸ್ಪರರು ಪ್ರೇಮದಿಂದ ನಡೆದುಕೊಳ್ಳುವ ಲಕ್ಷಣವನ್ನು ನೋಡಿ ಎಲ್ಲರಿಗೂ ಸಂತೋಷವಾಯಿತು. ಚಂಪತರಾಯನು ಮೊದಲು ಚತುರ್ಭುಜನ ಮಂದಿರಕ್ಕೆ ಬಂದು ದೇವರ ದರ್ಶನ ಮಾಡಿಕೊಂಡು ಆ ಮೇಲೆ ಅರಮನೆಯನ್ನು ಪ್ರವೇಶಿಸುವೆನೆಂದು ಹೇಳಿದ್ದರಿಂದ, ಆ ದೇವಸ್ಥಾನವನ್ನು ಮನಃಪೂರ್ವಕವಾಗಿ ಶೃಂಗರಿಸಿದ್ದರು. ಪಹಾರಸಿಂಗನು ಹೀರಾದೇವಿಯು ಹೇಳಿಕೆಯಂತೆ ಚಂಪತರಾಯನ ಸ್ವಾಗತವನ್ನು ಪ್ರೇಮದಿಂದ ಮಾಡುವದಕ್ಕಾಗಿ ಚತುರ್ಭುಜನ ಮಂದಿರದಲ್ಲಿ ಸಿದ್ಧನಾಗಿ ಕಾದಿದ್ದನು. ಚಂಪತರಾಯನು ಚತ್ರಸಾಲ–ದಲಪತರೊಡನೆ ಶೃಂಗರಿಸಿದ ರಾಜಮಾರ್ಗದಿಂದ ಬರುತ್ತಿರುವಾಗ ಪುರಜನರು ಆತನ ಮೇಲೆ ಪುಷ್ಪವೃಷ್ಟಿಗರೆದರು. ಈಪರಿಯು ತನ್ನ ಆದರವನ್ನು ನೋಡಿ ಸರಳಮನಸ್ಸಿನ

ಚಂಪತರಾಯನು ಅತ್ಯಂತ ಸಂತುಷ್ಟನಾದನು. ಪಹಾರಸಿಂಗ–ಹೀರಾದೇವಿಯರ ವಿಷಯದ ದ್ವೇಷಭಾವವೆಲ್ಲ ಅಳಿದು ಹೋಯಿತು!

ಈ ಮೇರೆಗೆ ಸಮಾರಂಭದಿಂದ ಪುರಜನರ ಸತ್ಕಾರವನ್ನು ಸ್ವೀಕರಿಸುತ್ತ ಚಂಪತರಾಯನು ಶ್ರೀ ಚತುರ್ಭುಜನ ಮಂದಿರಕ್ಕೆ ಬರಲು, ಪಹಾರಸಿಂಗನು ಅತ್ಯಂತ ಆದರದಿಂದ ಆತನನ್ನು ಬರಮಾಡಿಕೊಂಡನು. ಆಗ ಆ ಬಂಧುಗಳು ಪರಸ್ಪರರನ್ನು ಆಲಿಂಗಿಸುವಾಗ ಬಹುಜನರ ಕಣ್ಣೊಳಗಿಂದ ಆನಂದಬಾಷ್ಪಗಳು ಉದುರಿದವು. ಛತ್ರಸಾಲನು ಈ ದಾಯಾದ್ಯಮತ್ಸರದ ನಾಶವಾದದ್ದು ಬುಂದೇಲಖಂಡದ ಸ್ವಾತಂತ್ರ್ಯಕ್ಕೆ ಎಷ್ಟು ಅನುಕೂಲವಾಯಿತೆಂಬದನ್ನು ದಲಪತರಾಯನ ಮುಂದೆ ವರ್ಣಿಸತೊಡಗಿದ್ದನು. ಚಂಪತರಾಯನು ಶ್ರೀ ಚತುರ್ಭುಜನ ಮಂದಿರದಿಂದ ಹೊರಟು ಅರಮನೆಯ ಬಾಗಿಲಿಗೆ ಬರಲು, ಹೀರಾದೇವಿಯು ಸ್ವತಃ ಆರತಿಯನ್ನು ತಕ್ಕೊಂಡು ಬಹು ಜನ ಸುವಾಸಿನಿಯರೊಡನೆ ಚಂಪತರಾಯನಿಗೆ ಆರತಿ ಮಾಡಿದಳು. ಅದನ್ನು ನೋಡಿ ಚಂಪತರಾಯನಪ್ರತಾಪನ ವಂಶಜರ ಮುಖಾಂತರವಾಗಿಯೇ ಬುಂದೇಲಖಂಡದ ಸ್ವಾತಂತ್ರ್ಯವು ಶ್ರೀ ಚತುರ್ಭುಜನ ಕೃಪೆಯಿಂದ ಸಾಧಿಸಲ್ಪಡುವದೆಂಬ ನಂಬಿಗೆಯು ನನ್ನಲ್ಲಿ ದೃಢವಾಗತೊಡಗಿದೆ! ರಣದುಲ್ಲಾಖಾನನನ್ನು ನಾನು ಸೆರೆಯಲ್ಲಿ ಹಾಕಿದ ವರ್ತಮಾನವು ಇನ್ನೂ ಔರಂಗಜೇಬನ ಕಿವಿಗೆ ಮುಟ್ಟಿರುವದಿಲ್ಲ, ಸುದ್ದಿಯು ಹತ್ತಿದಕೂಡಲೆ ಆ ಧರ್ಮಮೂಢ ಬಾದಶಹನು ತನ್ನ ಸಾಮ್ರಾಜ್ಯದ ಸಾಮರ್ಥ್ಯವನ್ನೆಲ್ಲ ಒಟ್ಟುಗೂಡಿಸಿ ಬುಂದೇಲಖಂಡವನ್ನು ಚೂರು ಚೂರು ಮಾಡುವದಕ್ಕಾಗಿ ಬರುವನು. ಆ ಕಾಲದಲ್ಲಿ ನಮ್ಮ ಕ್ಷಾತ್ರತೇಜವನ್ನು ಒಟ್ಟು ಗೂಡಿಸಬೇಕೆಂದು ನಾನು ಯಾವತ್ತೂ ಬುಂದೇಲಖಂಡದ ರಾಜರಿಗೆ ವಿನಂತಿಪತ್ರವನ್ನು ಬರೆದುಕೊಂಡಿರುವೆನು. ಆ ಪತ್ರದ ಸುಪರಿಣಾಮವಾದದ್ದನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ.'' ಎಂದು ಅಭಿನಂದಿಸಿದನು. ಚಂಪತರಾಯನ ಈ ಮಾತುಗಳನ್ನು ಕೇಳಿ ಹಿರಾದೇವಿಯು ಹಿರಿಹಿರಿ ಹಿಗ್ಗಿದಳು. ತನ್ನ ತಂತ್ರವು ನಿಸ್ಸಂಶಯವಾಗಿ ಕೊನೆಗಾಣುವದೆಂದು ಭಾವಿಸುತ್ತ ಸಂತೋಷದಿಂದ ಆಕೆಯು ಮರುದಿನದ ಮೇಜವಾನಿಯ ಕೆಲಸದಲ್ಲಿ ತೊಡಗಿದಳು.

ಮಧ್ಯರಾತ್ರಿಯು ಮೀರಿಹೋಗಿ, ಚಂದ್ರನು ಅದೇ ಅಸ್ತಂಗತನಾದದ್ದರಿಂದ ನಾಲ್ಕೂ ಕಡೆಗೆ ಪುನಃ ಕತ್ತಲೆಯು ಮುಸುಕತೊಡಗಿತು. ಚಂಪತರಾಯನು ಸ್ವಾತಂತ್ರ್ಯಪ್ರಾಪ್ತಿಯ ಸಮಯವು ಈದಿನ ಸಮೀಪಿಸಿದಂತಾಯಿತೆಂದು ಭಾವಿಸಿ, ಆತನು ಹಲವು ಬಗೆಯ ವಿಚಾರ ಗಳಲ್ಲಿ ಮಗ್ನನಾಗಿಹೋಗಿದ್ದನು. ಹೀಗಿರುವಾಗ ಯಾರೋ ಒಬ್ಬರು ತನ್ನ ಬಳಿಯಲ್ಲಿ ಬಂದು ನಿಂತಿರುವಂತೆ ಆತನಿಗೆ ತೋರಿತು. ಇಷ್ಟು ಮಧ್ಯರಾತ್ರಿಯಲ್ಲಿ ಇವರು ಯಾರು ಬಂದಿರುವ ರೆಂದು ಆತುರದಿಂದ ಆತನು ನೋಡಲು, ಒಬ್ಬ ಬಾಲಸುಂದರಿಯು! ಆಕೆಯನ್ನು ನೋಡಿ ಚಂಪತರಾಯನಿಗೆ ಬಹಳ ಆಶ್ಚರ್ಯವಾಯಿತು. ಆತನು ಪ್ರೇಮಲ ಸ್ವರದಿಂದ–

ಚಂಪತರಾಯ—ತಂಗೀ ಯಾರಮ್ಮಾ ನೀನು? ಇಷ್ಟು ರಾತ್ರಿಯಲ್ಲಿ ನೀನು ಇಲ್ಲಿ ಏಕೆ?

ವಿಜಯೆ—ಮಹಾರಾಜ, ನಾನು ವಿಜಯೆಯು, ಧಾರೀರದ ಕಂಚುಕಿರಾಯನ ಮಗಳು; ಹೀರಾದೇವಿಯ ಆತಿಥ್ಯದ ನಿಜವಾದ ಸ್ವರೂಪವನ್ನು ತಿಳಿಸುವದಕ್ಕಾಗಿ ನಾನು ಇಲ್ಲಿಗೆ ಬಂದಿದ್ದೆನು. ಪಹಾರಸಿಂಗನೂ, ರಾಣೀ ಹೀರಾದೇವಿಯು ನಿಮ್ಮ ಆತಿಥ್ಯದಲ್ಲಿ ತೋರಿಸಿದ ದಕ್ಷತೆಯಿಂದ ನೀವು ಅತ್ಯಂತ ಸಂತುಷ್ಟರಾದಂತೆ ತೋರುತ್ತದೆ; ಆದರೆ ಮಹಾರಾಜ, ಇಂದಿನ ಅವರ ಆತಿಥ್ಯವು ಮೃಗಜಲದಂತೆ ಕೇವಲ ತೋರಿಕೆಯದು ಮಾತ್ರ ಇರುವದು; ಅದರ ಮೂಲದಲ್ಲಿ ನಿಜವಾದ ಪ್ರೇಮದ ಅಂಶವೂ ಇರುವದಿಲ್ಲ!

ಚಂಪತರಾಯ—ತಂಗೀ, ನಿನ್ನ ಮಾತು ಕೇಳಿ ನನಗೆ ಆಶ್ಚರ್ಯವಾಗುವದು. ಹೀಗೆ ಹುಡುಗರ ಮಾತು ಕೇಳಿ ಒಬ್ಬರ ವಿಷಯವಾಗಿ ಸಂಶಯ ಪಡುವಂಥ ಚಂಚಲ ಮನಸ್ಸಿನವನು ಚಂಪತರಾಯನಲ್ಲವೆಂಬದು ನಿನಗೆ ಗೊತ್ತಿಲ್ಲ; ಆದ್ದರಿಂದಲೇ ನೀನು ಇಂಥ ಸಾಹಸಮಾಡಿರುತ್ತೀ. ಹೀಗೆ ಮಂದಿಯ ಮಾತು ಕೇಳಿಯೇ ಮಹೋಬದ ಮನೆತನಕ್ಕೂ, ಓರಛಾದ ಮನೆತನಕ್ಕೂ ಈವರೆಗೆ ಕಲಹ ಬೆಳೆದು ಅನರ್ಥಕ್ಕೆ ಕಾರಣವಾಗಿತ್ತು; ಆದರೆ ಈಗ ಆ ಎರಡೂ ಮನೆತನಗಳು ಪರಸ್ಪರ ಪ್ರೇಮಪಾಶದಿಂದ ಬದ್ಧವಾಗುತ್ತಿರಲು, ನಿನ್ನಂಥ ಅಪ್ರಬುದ್ಧಳ ಮಾತು ಕೇಳಿ ಮನಸ್ಸಿನಲ್ಲಿ ಪುನಃ ದ್ವೇಷದ ಬೀಜವನ್ನು ನಾನು ಬಿತ್ತಿಕೊಳ್ಳಲಾರೆನು; ಹೋಗು, ನಿನ್ನನ್ನು ಯಾರು ಇಲ್ಲಿಗೆ ಹೀಗೆ ಹೇಳಲಿಕ್ಕೆ ಕಳಿಸಿರುವರೋ ಅವರಿಗೆ ಸ್ಪಷ್ಟವಾಗಿ ಹೇಳುಹೋಗು. ಚಂಪತರಾಯನು ಇಂತಹ ಚಾಡಿಯ ಮಾತಿಗೆ ಕಿವಿಗೊಡುವವನಲ್ಲ!

ವಿಜಯೆ—ಮಹಾರಾಜ, ನಾನು ಹುಡುಗೆಯು, ಅಪ್ರಬುದ್ಧಳು, ಸರಿ! ಆದರೆ ಕಪಟಿಯಲ್ಲವೆಂಬುದನ್ನು ಮಾತ್ರ ತಮಗೆ ವಿನಯದಿಂದ ತಿಳಿಸದೆ ಇರಲಾರೆನು; ಹೀರಾದೇವಿಯ ಕಪಟವನ್ನು ನಾನು ಅರಿತಿರುವದರಿಂದಲೇ ಮನಸ್ಸು ನಿಲ್ಲಲಾರದೆ ತಮ್ಮನ್ನು ಎಚ್ಚರಗೊಳಿಸಲಿಕ್ಕೆ ಬಂದಿದ್ದೇನೆ. ಇಲ್ಲದಿದ್ದರೆ ಇಷ್ಟು ಮಧ್ಯರಾತ್ರಿಯಲ್ಲಿ ನಿದ್ದೆಗೆಟ್ಟು ಬರಲಿಕ್ಕೆ ನನಗೇನು ಬೇಕಾಗಿತ್ತು? ಹೀರಾದೇವಿಯ ಹಿಂದಿನ ಚಾರಿತ್ರ್ಯವನ್ನೆಲ್ಲ ನೆನಪಿಗೆ ತಂದುಕೊಳ್ಳಿರಿ. ನೀವು ಕಳಿಸಿದ ವಿನಂತಿಪತ್ರದ ವಿರುದ್ಧವಾಗಿ ಆಚರಿಸಲು ಒಳಸಂಚುಮಾಡುವದಕ್ಕಾಗಿ ಈಗೆರಡು ದಿನಗಳ ಹಿಂದೆ ಬುಂದೇಲಖಂಡದ ರಾಜರನ್ನೆಲ್ಲ ಕರೆಸಿ ದರ್ಬಾರು ನೆರೆಸಿ, ತಮಗೆ ಯಾರು ಸಹಾಯ ಮಾಡಬಾರದೆಂದು ಬೋಧಿಸುತ್ತಿದ್ದಳು; ಆದರೆ ಅಷ್ಟರಲ್ಲಿ ತಮಗೆ ಬಾದಶಹರಿಂದ ಮಾನಕರಿಯ ಪದವಿಯೂ, ಹನ್ನೆರಡುಸಾವಿರ ರಾವುತರ ಮನಸಬದಾರಿಕೆಯೂ ದೊರೆತದ್ದನ್ನು ಕೇಳಿದಕೂಡಲೆ ಆ ದುಷ್ಟ ಹೀರಾದೇವಿಯು ನಿಮ್ಮ ಮೇಲೆ ಹೀಗೆ ಮೋಹಜಾಲವನ್ನು ಬೀಸಿರುತ್ತಾಳೆ; ಆದ್ದರಿಂದ ನನ್ನ ಮಾತುಗಳನ್ನು, ಹುಡುಗಿಯ ಮಾತುಗಳೆಂದು ನಿರಾಕರಿಸಬೇಡಿರೆಂದು ಬೇಡಿಕೊಳ್ಳುವೆನು.

ಈ ಮೇರೆಗೆ ವಿಜಯೆಯು ಸ್ಪಷ್ಟವಾಗಿ ಮಾತಾಡುವದನ್ನು ಕೇಳಿ ಚಂಪತರಾಯನು ವಿಚಾರಕ್ಕೊಳಗಾಗಿ, ಹೀರಾದೇವಿಯ ಹಿಂದಿನ ಹಾಗು ಈಗಿನ ನಡತೆಗಳನ್ನು ಸರಿಹಚ್ಚಿ ನೋಡಹತ್ತಿದನು. ಆಗ ವಿಜಯೆಯು ಮತ್ತೆ ಚಂಪತರಾಯನನ್ನು ಕುರಿತು—

ವಿಜಯೆ—ಮಹಾರಾಜ, ಇಷ್ಟು ಕಾರಣವು ಸಾಕಾಗದಿದ್ದರೆ, ಇನ್ನೊಂದು ಸಂಗತಿಯನ್ನು ಹೇಳುವೆನು ಕೇಳಿರಿ. ನೀವು ರಣದುಲ್ಲಾಖಾನನನ್ನು ಸೆರೆಯಲ್ಲಿಟ್ಟಿರುವ ಸಂಗತಿಯನ್ನು ದಿಲ್ಲಿಯ ಬಾದಶಹನಿಗೆ ತಿಳಿಸಿ, ನಿಮ್ಮ ನಾಶಪಡಿಸಬೇಕೆಂದು ಹೀರಾದೇವಿಯು ಅಪ್ಪನನ್ನು ದಿಲ್ಲಿಗೆ ಕಳಿಸಿರುವಳು; ಆದರೆ ರೋಷನಾರಳು ಅಪ್ಪನ ಮಾತಿನಲ್ಲಿ ವಿಶ್ವಾಸವಿಡದ್ದರಿಂದ ದಿಲ್ಲಿಯ ಸೈನ್ಯವು ಈವರೆಗೆ ತಮ್ಮ ಮೇಲೆ ಸಾಗಿಬಂದಿರುವದಿಲ್ಲ. ಇಂಥ ಹೀರಾದೇವಿಯು ತಮ್ಮನ್ನು ನಿಜವಾಗಿ ಸತ್ಕರಿಸುತ್ತಿರಬಹುದೆ?

ಚಂಪತರಾಯ—ನೀನು ಯಾವ ಧೈರ್ಯದಿಂದ ಹೀರಾದೇವಿಯ ದುಷ್ಟತನವನ್ನು ನನ್ನ ಮುಂದೆ ಹೇಳುತ್ತೀ?

ವಿಜಯೆ—ನಾನು ಕಣ್ಣುಮುಟ್ಟ ನೋಡಿದ್ದರಿಂದ, ಕಿವಿಮುಟ್ಟ ಕೇಳಿದ್ದರಿಂದ ಹೇಳುತ್ತೇನೆ.

ಚಂಪತರಾಯ—ನೀನು ನೋಡಿದ್ದೇನು? ಕೇಳಿದ್ದೇನು?

ವಿಜಯೆ—ಮಹಾರಾಜ, ನಿಮ್ಮ ನಾಶದ ಉಪಾಯವನ್ನು ಹೀರಾದೇವಿಯು ಸಭಾಕರಣನ ಕಿವಿಯಲ್ಲಿ ಹೇಳಲು, ಅಂತಹ ನಿಮ್ಮ ಆ ಭಯಂಕರ ಶತ್ರುವು ಕೂಡ ಅಂಜಿದನು; ಆತನ ಮೋರೆಯು ಕಪ್ಪಿಟ್ಟಿತು. ಆಗಿನ ಹೀರಾದೇವಿಯ ಅಸುರಿ ಆನಂದವನ್ನು ಹೇಳಲಾಸಲ್ಲ. ಆ ಆನಂದದ ಭರದಲ್ಲಿ ಸಭಾಕರಣನ ಮುಂದೆ ಮೆಲ್ಲಗೆ ಹೇಳುವ ಮಾತನ್ನು ಗಟ್ಟಿಯಾಗಿ ಹೇಳಿದ್ದರಿಂದ ಅದು ನನ್ನ ಕಿವಿಗೆ ಬಿದ್ದಿತು.

ಚಂಪತರಾಯ—ಯಾವ ಮಾತು ಅದು?

ವಿಜಯೆ—ಮಹಾರಾಜ, ನಾಳಿನ ಮೇಜವಾನಿಯಲ್ಲಿ ನಿಮಗೆ ವಿಷಪ್ರಯೋಗ ಮಾಡುವೆನೆಂದು ಆ ದುಷ್ಟಳು ಸಭಾಕರಣನ ಮುಂದೆ ಹೇಳಿದಳು.

ಚಂಪತರಾಯ—ಏನು? ಹೀರಾದೇವಿಯು ನಾಳೆ ನನಗೆ ವಿಷಹಾಕುವಳೆ? ಈ ಮಾತು ನನಗೆ ಸತ್ಯವೆಂದು ತೋರಲೊಲ್ಲದು.

ವಿಜಯೆ—ಆ ಜಗನ್ಮಾತೆಯಾದ ವಿಂಧ್ಯವಾಸಿನಿಯ ಸಾಕ್ಷಿಯಿಂದ ಹೇಳುತ್ತೇನೆ, ಅಸತ್ಯವೆಂದರೇನೆಂಬದರ ಕಲ್ಪನೆಯು ಈ ವಿಜಯೆಗೆ ಇನ್ನೂ ಆಗಿರುವದಿಲ್ಲ!

ವಿಜಯೆಯ ಈ ನಿರ್ಧಾರದ ಮಾತನ್ನು ಕೇಳಿ ಚಂಪತರಾಯನು—''ತಂಗೀ, ಏನೇ ಆಗಲಿ, ಇಂಥಮಾತನ್ನು ಒಮ್ಮೆಲೆ ನಂಬಲಿಕ್ಕೆ ಬರುವದಿಲ್ಲ'' ಎಂದು ನುಡಿಯುತ್ತಿರಲು, ಒಂದು ಭವ್ಯವಾದ ಆಕೃತಿಯು ತನ್ನ ಕಡೆಗೆ ಸಾಗಿ ಬರುತ್ತಿರುವದನ್ನು ಆತನು ನೋಡಿದನು. ಇವರಾರು ಬರುವರೆಂದು ಯೋಚಿಸುತ್ತಿರಲು, ಆ ಆಕೃತಿಯು ಗಾಂಭೀರ್ಯದಿಂದ–

ಆಕೃತಿ—ಚಂಪತರಾಯ, ನಿನಗೆ ನನ್ನ ಗುರುತು ಹತ್ತಿತ್ತೋ?

ಚಂಪತರಾಯ—ಹತ್ತಿತು.

ಆಕೃತಿ—ಅಸತ್ಯವನ್ನು ನಾನು ಬಹಳವಾಗಿ ತಿರಸ್ಕರಿಸುವೆನೆಂಬಮಾತು ನಿನಗೆ ಗೊತ್ತಿದೆಯೋ?

ಚಂಪತ—ಗೊತ್ತಿದೆ

ಆಕೃತಿ—ನನ್ನ ಮಾತಿನ ಮೇಲೆ ಈಗ ನಿನ್ನ ವಿಶ್ವಾಸವು ಕೂಡಬಹುದೋ?

ಚಂಪತ—(ಬಹಳ ಹೊತ್ತು ವಿಚಾರಮಾಡಿ) ಕೊಡುವದು!

ಆಕೃತಿ—ಚಂಪತರಾಯ, ಈ ಹುಡುಗಿಯ ಮಾತನ್ನು ಅಸತ್ಯವೆಂದು ತಿಳಿಯಬೇಡ. ಈಕೆಯು ಮೂರ್ತಿಮಂತ ಸತ್ಯವಾಗಿರುವಳು. ಈಕೆಯು ನಿನಗೆ ಹೇಳಿದ ಸುದ್ದಿಯು ಪೂರಾ ನಿಜವಿರುವದು. ಚಂಪತರಾಯ, ನಾನು ನಿನ್ನ ಶತ್ರುವು; ನಿನ್ನನ್ನು ಸಮರಭೂಮಿಯಲ್ಲಿ ಸಂಹರಿಸಬೇಕೆಂದು ನಾನು ಪ್ರತಿಜ್ಞೆ ಮಾಡಿದ್ದೇನೆ; ಆದರೆ ವಿಷಪ್ರಯೋಗದಂತಹ ನೀಚ ಕೆಲಸವು ನನಗೆ ಸಮ್ಮತವಾದದ್ದಲ್ಲ; ಹಾಗೆ ಹೀರಾದೇವಿಯು ನಿನ್ನ ಪ್ರಾಣಹರಣ ಮಾಡುವದು ನನ್ನ ಪ್ರತಿಜ್ಞೆಗೆ ಸಹನವಾಗದ್ದರಿಂದ, ನಿನ್ನನ್ನು ಎಚ್ಚರಗೊಳಿಸಲು, ಬುದ್ಧಿಪೂರ್ವಕವಾಗಿ ಬಂದಿದ್ದೇನೆ; ನನ್ನ ಸಂಗಡ ರಣಭೂಮಿಯಲ್ಲಿ ಕಾದಬೇಕೆಂಬ ಇಚ್ಛೆ ನಿನಗಿದ್ದರೆ, ನಾಳಿನ ವಿಷಪ್ರಯೋಗದ ಸಂಕಟದಿಂದ ಪಾರಾಗುವ ಯತ್ನಮಾಡು!

ಈಮೇರೆಗೆ ನುಡಿದು ಆ ವ್ಯಕ್ತಿಯು ಬಂದ ದಾರಿಯಿಂದ ತಿರುಗಿ ಹೋಗಿಬಿಡಲು, ವಿಜಯೆಯು–ಮಹಾರಾಜ, ಈಗಾದರೂ ನನ್ನ ಮಾತಿನಲ್ಲಿ ತಮ್ಮ ನಂಬಿಗೆಯಾಯಿತೇ?

ಚಂಪತರಾಯ—ಸಭಾಕರಣನ ಮಾತಿನಲ್ಲಿ ಯಾವನು ಅವಿಶ್ವಾಸಪಟ್ಟಾನು? ಆದರೆ ವಿಜಯೇ, ನಾಳಿನ ಸಂಕಟದಿಂದ ಪಾರಾಗಬೇಕಾದರೆ ಏನು ಮಾಡಬೇಕು ಹೇಳು?

ವಿಜಯೆ—ಮಹಾರಾಜ, ನಾಳೆ ಮೇಜವಾನಿಯಲ್ಲಿ ತಮಗಾಗಿ ಬಡಿಸಿ ತಂದು ಇಟ್ಟ ಸುವರ್ಣಪಾತ್ರವನ್ನು ತಾವು ಯಾವದೊಂದು ನೆವಹೇಳಿ ಸ್ವೀಕರಿಸದಿದ್ದರಾಯಿತು. ನಿಮ್ಮ ಪ್ರೀತಿಯ ವಸ್ತುವೆಂದು ಹೀರಾದೇವಿಯು ಬಡಿಸಬಂದ ಪದಾರ್ಥವನ್ನು ನೀವು ಸ್ವೀಕರಿಸಬೇಡಿರಿ.

ಚಂಪತರಾಯ—ಹಾಗೇ ಆಗಲಿ, ನಾಳೆ ವಿಜಯೆಯ ಇಚ್ಛೆಯಂತೆ ಎಲ್ಲ ಆಗುವದು; ಆದರೆ ವಿಜಯೇ, ಇಲ್ಲಿ ಕೂಡಿರುವ ಅರಸರೆಲ್ಲರೂ ಒಳಸಂಚಿನಲ್ಲಿ ಸೇರಿರುವರೇನು?

ವಿಜಯೆ—ಹೀರಾದೇವಿಯಿಂದ ಅದಕ್ಕಾಗಿಯೇ ಕರೆಸಲ್ಪಟ್ಟಿರುವರು!

ಚಂಪತರಾಯ—(ಸಂತಾಪದಿಂದ) ಈ ದೇಶದ್ರೋಹಿಗಳ ಪಾರಪತ್ಯವನ್ನು ಮೊದಲುಮಾಡಬೇಕು. ವಿಜಯೆ, ಮಹೋಬದ ಚಂಪತರಾಯನು ನಿನ್ನ ಯೋಗಕ್ಷೇಮವನ್ನು ವಿಚಾರಿಸಿದನೆಂತಲೂ, ನಿನ್ನ ಮಗಳಾದ ವಿಜಯೆಯ ಸದ್ಗುಣಗಳಿಗೆ ಲುಬ್ಧನಾಗಿರುವನೆಂತಲೂ ನಿನ್ನ ತಾಯಿಯಾದ ಸಾಧ್ವೀ ಸುಫಲಾದೇವಿಗೆ ಹೇಳು. ಅಂಥ ಸಾಧ್ವಿಯರ ಪುಣ್ಯದಿಂದಲೇ ಬುಂದೇಲಖಂಡಕ್ಕೆ ಸ್ವಾತಂತ್ರ್ಯವು ಪ್ರಾಪ್ತವಾಗಬೇಕಾಗಿರುತ್ತದೆ; ಆದುದರಿಂದ ವಿಜಯೇ, ನೀನೂ ಸುಫಲಾದೇವಿಯೂ ಕಂಚುಕಿರಾಯರ ಮನಸ್ಸನ್ನು ತಿರುಗಿಸಿ, ಅವರು ದೇಶದ ಸ್ವಾತಂತ್ರ್ಯವನ್ನೂ ಸಂಪಾದಿಸಲಿಕ್ಕೆ ಸಹಾಯಮಾಡುವಂತೆ ಮಾಡಿರಿ!

ವಿಜಯೆ—(ದುಃಖದಿಂದ) ಮಹಾರಾಜ, ಅಪ್ಪನು ಯೋಗ್ಯಮಾರ್ಗವನ್ನು ಹಿಡಿಯುವಂತೆ ಬೋಧಿಸುವದು ಅವ್ವನ ಹಣೆಯಬರಹದಲ್ಲಿ ಬರೆದಿಲ್ಲ! ಇಂದಿನಿಂದ ಹತ್ತುದಿನಗಳಲ್ಲಿ ಅಪ್ಪನ ಶಿರಚ್ಛೇದವಾಗಬೇಕಾಗಿರುವದು; ಧಾರೀರ ಸಂಸ್ಥಾನವು ಅಲ್ಪಾವಧಿಯಲ್ಲಿಯೇ ದೊಡ್ಡ ವಿಪತ್ತಿಗೆ ಗುರಿಯಾಗಬೇಕಾಗಿರುವದು!

ಚಂಪತರಾಯ—ಏನು? ಸಫಲಾದೇವಿಗೆ ವೈಧವ್ಯವು ಪ್ರಾಪ್ತವಾಗುವದೇ? ಕಂಚುಕಿ ರಾಯರು ರೋಷನಾರಬೇಗಮೆಯ ಸೆರೆಯಲ್ಲಿರುವನೆಂದು ನಾನು ಕೇಳಿದ್ದೆನು; ಅಂದಬಳಿಕ ಈ ಶಿರಚ್ಛೇದದ ಸುದ್ದಿಯಲ್ಲಿಯದು?

ಕಿಸನನು ಹೇಳಿದ ಯಾವತ್ತು ಸಂಗತಿಯನ್ನು ವಿಜಯೆಯು ಚಂಪತರಾಯನಿಗೆ ಹೇಳಿದಳು. ಅದನ್ನು ಕೇಳಿ ಚಂಪತರಾಯನು ಆಶ್ಚರ್ಯಮಗ್ನನಾಗಿ –

ಚಂಪತರಾಯ—ಈಗ ರೋಷನಾರಬೇಗಮೆಯ ಮೂರುಮುಕ್ಕಾಲುಗಳಿಗೆಯ ಆಳಿಕೆಯು ಮುಗಿದುಹೋಗಿದೆ; ಆದರೂ ಆ ಕುನಸಿನ ಹಟಮಾರಿ ಸ್ತ್ರೀಯು ಕಂಚುಕಿರಾಯನ ಶಿರಚ್ಛೇದ ಮಾಡಿಸದೆ ಬಿಡಲಿಕ್ಕಿಲ್ಲ; ಆದ್ದರಿಂದ ಆಕೆಯ ನಂಬಿಗೆಯಾಗಿ ಕಂಚುಕಿರಾಯನ ಬಿಡುಗಡೆಯಾಗಬೇಕಾದರೆ ಕೂಡಲೆ ರಣದುಲ್ಲಾಖಾನನ ಬಿಡುಗಡೆಮಾಡುವದೇ ಯೋಗ್ಯವು. ಬೇರೆ ಉಪಾಯದಿಂದ ರೋಷನಾರಳ ನಂಬಿಗೆಮಾಡಿ ಕೊಡುವದು ಅಸಾಧ್ಯವು.

ವಿಜಯೆ—ಹಾಗೆ ಮಾಡಿದರೆ ತಾವಾಗಿ ತಮ್ಮ ಮೇಲೆ ಸಂಕಟವನ್ನು ತಂದುಕೊಂಡಂತೆ ಆಗುವದಿಲ್ಲವೆ? ತಮ್ಮ ಯುದ್ಧದ ಸಿದ್ಧತೆಯಾಗುವದರೊಳಗಾಗಿ ಮೊಗಲರ ಪ್ರಚಂಡ ಸೈನ್ಯವು ಬುಂದೇಲಖಂಡದ ಮೇಲೆ ಸಾಗಿಬಂದರೆ, ಅನರ್ಥವಾದೀತಲ್ಲ!

ಚಂಪತರಾಯ—ರಣದುಲ್ಲಾಖಾನನನ್ನು ನಾನು ಸೆರೆಯಲ್ಲಿ ಹಾಕಿದ ಸುದ್ದಿಯು ಅನ್ಯ ಮಾರ್ಗದಿಂದ ಬಾದಶಹನಿಗೆ ತಿಳಿಯುವ ಮೊದಲೇ ರಣದುಲ್ಲಾಖಾನನನ್ನು ಬಾದಶಹನ ಬಳಿಗೆ ಕಳಿಸುವದು ನನಗೆ ಯೋಗ್ಯವಾಗಿ ಕಾಣುತ್ತದೆ. ದಿಲ್ಲೀಪತಿಯು ದಿಲ್ಲಿಯ ದರ್ಬಾರದ ಕಾಲದಲ್ಲಿ ನನ್ನೊಡನೆ ಬಳಸಿದ ಸ್ನೇಹಕ್ಕೆ ಇದು ಒಪ್ಪುವದು. ಇದರಿಂದ ಬಾದಶಹನು ಕೆಲದಿನ ಗಳವರೆಗಾದರೂ ನನ್ನ ಮೇಲೆ ದಂಡೆತ್ತಿ ಬಾರದೆ ಇರಬಹುದು. ಆ ಅವಧಿಯೊಳಗೆ ನಾನು ಬುಂದೇಲಖಂಡದ ದೇಶದ್ರೋಹಿಗಳ ಸದ್ದು ಅಡಗಿಸಬಹುದು. ಒಂದು ರಾಜಕಾರಣದ ಸಲುವಾಗಿ ರಾಜಾ ಜಯಸಿಂಗನ ಸೂಚನೆಯಂತೆ ನಾನು ದಿಲ್ಲಿಯ ಬಾದಶಹನ ಮಾನಕರಿ ಯಾದದ್ದು, ಈಗ ರಣದುಲ್ಲಾಖಾನನನ್ನು ಬಂಧಮುಕ್ತಮಾಡದಿದ್ದರೆ ಸಫಲವಾಗಲಾರದು. ಒಟ್ಟಿಗೆ ರಣದುಲ್ಲಾಖಾನನನ್ನು ಬಂಧಮುಕ್ತಮಾಡುವದರಿಂದ ನನ್ನ ಹಾನಿಯೇನು ಆಗದೆ, ಅದರಿಂದ ಸುಫಲಾದೇವಿಯ ಸೌಭಾಗ್ಯ ರಕ್ಷಣವಾಗುವದು. ಆದ್ದರಿಂದ ನಾನು ಇಂದೇ ರಣದುಲ್ಲಾಖಾನನನ್ನು ಬಂಧಮುಕ್ತನಾಗಮಾಡಿ ಆತನನ್ನು ಬಾದಶಹನಿಗೆ ಒಪ್ಪಿಸುವದಕ್ಕಾಗಿ ಸೌಭಾಗ್ಯಸಿಂಹನನ್ನು ಮಹೋಬಕ್ಕೆ ಕಳಿಸುವೆನು. ಹೋಗು, ವಿಜಯೇ, ನೀನು ನಿಶ್ಶಂಕೆಯಿಂದ ಮನೆಗೆ ಹೋಗು. ಸ್ವಲ್ಪದಿನಗಳಲ್ಲಿಯೇ ನಿನ್ನ ತಂದೆಯು ನಿನ್ನ ಕಣ್ಣಿಗೆ ಬೀಳುವನು.

ಚಂಪತರಾಯನ ಅಪ್ಪಣೆಯಂತೆ ವಿಜಯೆಯು ಮನೆಗೆ ಹೋಗುವದಕ್ಕಾಗಿ ಹೊರಡಲು, ಕೃತಜ್ಞತೆಯಿಂದ ಆಕೆಯ ನೇತ್ರಗಳು ಅಶ್ರುಪೂರ್ಣವಾದವು. ಹೋಗುವಾಗ ಆಕೆಯು ಕೈಜೋಡಿಸಿ ಚಂಪತರಾಯನನ್ನು ಕುರಿತು—"ಮಹಾರಾಜ, ನನ್ನ ಮೇಲೆ ತಮ್ಮ ಅನಂತ ಉಪಕಾರವಾಗಿರುವದು. ಧಾರೀರದ ರಾಜಮನೆತನವು ನಿಮ್ಮ ಸೇವೆಯಲ್ಲಿ ಸದಾ ತತ್ಪರ ವಾಗಿರುವದು. ಸ್ವಾತಂತ್ರ್ಯ ಸಂಪಾದನದ ಕಾರ್ಯದಲ್ಲಿ ಚಂಪತರಾಯರಿಗೆ ಮೊಟ್ಟಮೊದಲು

ಸಹಾಯ ಮಾಡತೊಡಗಿದ ಮಾನವು ಧಾರೀರ ಸಂಸ್ಥಾನಕ್ಕೆ ಒದಗಿದ ಲೌಕಿಕವನ್ನು ತಾವು ಬೇಗನೆ ಕೇಳಬಹುದು'' ಎಂದು ನುಡಿದು, ವಿಜಯೆಯು ಚಂಪತರಾಯನ ಶಯ್ಯಾಗೃಹದಿಂದ ಹೊರಟು ಹೋದಳು.

ಮರುದಿವಸವೇ ಮೇಜವಾನಿಯ ಸಮಾರಂಭವಾಯಿತು. ಸಭಾಕರಣನ ಹೊರತು ಬುಂದೇಲಖಂಡದ ಯಾವತ್ತು ರಾಜರು ಮೇಜವಾನಿಗೆ ಬಂದಿದ್ದರು. ಪಹಾರಸಿಂಗನು ಚಂಪತ ರಾಯನ ಬಳಿಯಲ್ಲಿ ಕುಳಿತುಕೊಂಡಿದ್ದು ಆತನ ಮನಸ್ಸನ್ನು ಪ್ರಸನ್ನವಾಗಮಾಡುವದಕ್ಕಾಗಿ ಹಲವು ಬಗೆಯಿಂದ ಯತ್ನಿಸುತ್ತಿದ್ದನು. ಹೀರಾದೇವಿಯು ಬಳಿಯಲ್ಲಿಯೇ ನಿಂತುಕೊಂಡು ಬಡಿಸುವ ವ್ಯವಸ್ಥೆಯನ್ನು ನೋಡುತ್ತಿದ್ದಳು. ಬಡಿಸುವದೆಲ್ಲ ಆಯಿತು. ಹೀರಾದೇವಿಯು ತಾನು ಕೃತಕೃತ್ಯಳಾದೆನೆಂಬ ಆನಂದದಿಂದ ಅಲ್ಲಿ ನಿಲ್ಲಲಾರದೆ ಒಳಗೆ ಹೋಗಿ ತನ್ನೊಳಗೆ ನಲಿದಾಡು ತ್ತಿದ್ದಳು. ಪಹಾರಸಿಂಗನು ಊಟಕ್ಕೆ ಕುಳಿತುಕೊಳ್ಳುವದಕ್ಕಾಗಿ ಚಂಪತರಾಯನಿಗೆ ಸೂಚಿಸಿ, ದೇವರ ನಾಮಘೋಷಮಾಡಲು, ಚಂಪತರಾಯನು ಎಚ್ಚತ್ತು ಪಕ್ವಾನ್ನಗಳಿಂದ ತುಂಬಿದ ಬಂಗಾರದ ಪಾತ್ರೆಯನ್ನು ನೋಡಿ—''ನಾನು ಸುವರ್ಣಪಾತ್ರೆಯಲ್ಲಿ ಭೋಜನಮಾಡುವದಿಲ್ಲ ನನ್ನ ಸಲುವಾಗಿ ಬೇರೊಂದು ಪಾತ್ರೆಯನ್ನು ತರಿಸಿರಿ,'' ಎಂದು ಹೇಳಿದನು. ಅದನ್ನು ಕೇಳಿ ಪಹಾರಸಿಂಗನು, ಚಂಪತರಾಯನನ್ನು ಸಂತೋಷಪಡಿಸಬೇಕೆಂದು ಹೇಳಿದ ತನ್ನ ಹೆಂಡತಿಯ ಇಚ್ಛೆಯನ್ನು ಪೂರ್ಣಮಾಡುವದಕ್ಕಾಗಿ ಆ ರಾಯನನ್ನು ಕುರಿತು—''ಬೇಡ, ಎರಡನೆಯ ಪಾತ್ರೆಯನ್ನು ತರುವದೇಕೆ? ನನ್ನ ಬೆಳ್ಳಿಯ ಪ್ರಾತೆಯನ್ನೇ ನೀವು ತಕ್ಕೊಳ್ಳಿರಿ, ನಿಮ್ಮ ಬಂಗಾರದ ಪಾತ್ರೆಯಲ್ಲಿ ನಾನು ಉಣ್ಣುವೆನು'' ಎಂದು ಹೇಳಿ ತಾಟುಗಳ ಅದಲಾ-ಬದಲು ಮಾಡಿ ಊಟಕ್ಕೆ ಕುಳಿತುಕೊಂಡನು. ಎಲ್ಲರೂ ಸ್ತಬ್ಧರಾಗಿ ಊಟಮಾಡುತ್ತಿರುವದನ್ನು ನೋಡಿ ಹೀರಾ ದೇವಿಯು ತನ್ನ ಕಾರ್ಯವಾಯಿತೆಂಬ ಉಬ್ಬಿನಿಂದ ಒಳಗೆ ಬಂದು ನೋಡಲು, ಸುವರ್ಣ ಪಾತ್ರೆಯು ತನ್ನ ಗಂಡನ ಮುಂದಿರುವದನ್ನು ನೋಡಿ ಗಡಬಡಿಸಿ ಧಾವಿಸಿ ಬಂದು ಗಾಬರಿಯಾಗಿ—''ಎಲ! ಇದೇನು? ಪಾತ್ರೆಗಳನ್ನು ಬದಲಿಸಿದವರಾರು? ಇವರಂತು ಅರ್ಧ ಉಂಡುಬಿಟ್ಟಿರುವರಲ್ಲ! ಇನ್ನೇನುಗತಿ'' ಎನ್ನುತ್ತಿರಲು, ಚಂಪತರಾಯನು ಪಹಾರಸಿಂಗನ ಕೈಯನ್ನು ಹಿಡಿದು ಆತನ ಊಟವನ್ನು ನಿಲ್ಲಿಸಿ—''ಪಹಾರಸಿಂಗ, ಇನ್ನು ಒಂದು ತುತ್ತನ್ನೂ ಬಾಯಲ್ಲಿ ಹಾಕಿಕೊಳ್ಳಬೇಡ. ಈ ಬಂಗಾರದ ತಾಟಿನೊಳಗಿನ ಅನ್ನದಲ್ಲಿ ವಿಷವು ಕೂಡಿರುತ್ತದೆ'' ಎಂದುಹೇಳಿ, ಆತನನ್ನು ಅರ್ಧ ಊಟದಲ್ಲಿಯೇ ಎಬ್ಬಿಸಿದನು! ಆದರೆ ಅದರಿಂದ ಪ್ರಯೋಜನ ವೇನು ಆಗಲಿಲ್ಲ, ಅಂತಹ ಜಾಜ್ವಲ್ಯ ವಿಷವನ್ನೇ ಹೀರಾದೇವಿಯು ಅನ್ನದಲ್ಲಿ ಹಾಕಿದ್ದಳು; ಆದ್ದರಿಂದ ರಾಜವೈದ್ಯನ ಉಪಚಾರಗಳೆಲ್ಲ ವ್ಯರ್ಥವಾಗಿ, ಪಹಾರಸಿಂಗನು ಪ್ರತಿಕ್ಷಣಕ್ಕೂ ಅಸ್ವಸ್ಥನಾಗತೊಡಗಿದನು. ಇನ್ನು ಒಂದು ಗಳಿಗೆಯಲ್ಲಿ ಅವಸಾನವಾಗುವದೆಂದು ರಾಜವೈದ್ಯನು ಹೇಳಿದನು. ಎಲ್ಲರೂ ದುಃಖಿಸತೊಡಗಿದರು.

ಪಹಾರಸಿಂಗನ ಮನಸ್ಸಿನಲ್ಲಿ ಬಹಳ ಮಾತಾಡಬೇಕೆಂದಿತ್ತು; ಆದರೆ ಒಂದು ಅಕ್ಷರ ಮಾತಾಡುವದೂ ಆತನಿಂದಾಗಲೊಲ್ಲದು. ಆತನು ಬಹು ಕಷ್ಟದಿಂದ—''ಚಂಪತರಾಯಜೀ,

ಈ ವರೆಗಿನ ನನ್ನ ನೀಚತನಕ್ಕಾಗಿ ನನ್ನನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುವೆನು. ಚಂಪತರಾಯಜೀ, ಹೀಗೆ ಇತ್ತಕಡೆಗೆ ಬರುವರಾಗಿರಿ! ಇದ್ದಸಂಗತಿಯನ್ನು ಸ್ಪಷ್ಟವಾಗಿ ಹೇಳಿದ ಹೊರತು ನನಗೆ ಸುಖದಿಂದ ಮರಣವು ಉಂಟಾಗಲಾರದು. ಇಲ್ಲಿ ನೆರೆದಿರುವ ಎಲ್ಲ ಸಜ್ಜನರ ಸಾಕ್ಷಿಯಿಂದ ಓರಛಾದ ರಾಜ್ಯವನ್ನು ನಾನು ನಿಮಗೆ ಒಪ್ಪಿಸುತ್ತಿರುವೆನು. ಯುವರಾಜ ಛತ್ರ ಸಾಲನನ್ನು ಇಲ್ಲಿಯ ರಾಜಸಿಂಹಾಸನದ ಮೇಲೆ ಕುಳ್ಳಿರಿಸಿ, ಇಲ್ಲಿಯ ಪ್ರಜೆಗಳನ್ನು ಸುಖಿಗಳಾಗಿ ಮಾಡಿರಿ.

ಚಂಪತರಾಯ—ಪಹಾರಸಿಂಗ, ನಿನ್ನ ಈ ಇಚ್ಛೆಯನ್ನು ನಾನು ಪೂರ್ಣಮಾಡಲಾರೆನು. ಯುವರಾಜ ವಿಮಲದೇವನು ಓರಛಾದ ರಾಜಸಿಂಹಾಸನ ಸಶಾಸ್ತ್ರಸಂಬಂಧಿಕನಿರಲು, ಛತ್ರ ಸಾಲನು ಎಂದೂ ಆ ಸಿಂಹಾಸನವನ್ನು ಮುಟ್ಟಲಾರನು. ಯುವರಾಜ ವಿಮಲದೇವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ, ಆತನನ್ನು ರಕ್ಷಿಸುವದು ನನ್ನ ಕರ್ತವ್ಯವಾಗಿರುವದು.

ಪಹಾರಸಿಂಗ—(ಅತ್ಯಂತ ಪ್ರಯಾಸದಿಂದ) ಏನಂದಿರಿ? ವಿಮಲದೇವನು ರಾಜ ಸಿಂಹಾಸನವೇರುವನೆ? ಆತನು ಸರ್ವಥಾ ಸಿಂಹಾಸನವೇರಲು ಯೋಗ್ಯನಲ್ಲ. ವಿಮಲನು ನನ್ನ ಹೊಟ್ಟೆಯ ಮಗನಲ್ಲ. ಓರಛಾ ಸಂಸ್ಥಾನದ ಶಾಸ್ತ್ರಸಮ್ಮತ ಹಕ್ಕುದಾರರೆಂದರೆ ನೀವು! ಆದ್ದರಿಂದಲೇ ಓರಛಾದ ರಾಜ್ಯವನ್ನು ನಿಮಗೆ ಒಪ್ಪಿಸುತ್ತೇನೆ. ಛತ್ರಸಾಲನು ಓರಛಾದ ಸಿಂಹಾಸನವನ್ನೇರಬೇಕು. ವಿಮಲದೇವನು ಆತನ ಪವಿತ್ರ ಸಹವಾಸದಲ್ಲಿ ಸುಖದಿಂದ ಕಾಲಹರಣ ಮಾಡಬೇಕು! ವಿಮಲ! ನೀನು ಯಾರಿರುವೆಯೆಂಬದನ್ನು ಹೇಳಿದನೆಂದರೆ, ನನ್ನ ನರಕದ ದಾರಿಯನ್ನು ಹಿಡಿಯಲಿಕ್ಕೆ ನನಗೆ ನೆಟ್ಟಗಾಗುತ್ತದೆ.

ಈಮೇರೆಗೆ ನುಡಿಯುತ್ತಿರಲು, ಹೀರಾದೇವಿಯು ಕರೆಯ ಹಾವಿನಂತೆ ಬುಸುಗುಟ್ಟುತ್ತ ತನ್ನ ಗಂಡನನ್ನು ಕುರಿತು ಸಂತಾಪದಿಂದ—''ನೀವು ನರಕಕ್ಕಾದರೂ ಹೋಗಿರಿ, ಅಥವಾ ನರಕದಿಂದತ್ತ ಕಡೆಗಾದರೂ ಹೋಗಿರಿ; ಆದರೆ ವಿಮಲದೇವನ ಸಂಬಂಧದಿಂದ ಒಂದು ಅಕ್ಷರ ವನ್ನೂ ಉಚ್ಚರಿಸಬೇಡಿರಿ. ಮರಣವ್ಯಥೆಯಿಂದ ನೀವು ಭ್ರಮಿಷ್ಟರಾಗಿರುವದರಿಂದ ಮೈಮೇಲೆ ಎಚ್ಚರವಿಲ್ಲದೆ ಏನಾದರೂ ಹರಟುತ್ತಿರುವಿರಿ. ಅದನ್ನು ನಿಜವೆಂದು ತಿಳಿದು ಚಂಪತರಾಯ ನಾಗಲಿ, ಬೇರೆ ಯಾರಾದರೂ ಆಗಲಿ ವಿಮಲದೇವನ ಅಧಿಕಾರದಲ್ಲಿ ಕೈಹಾಕಿದರೆ, ರಾಜ ದ್ರೋಹಿಗಳೆಂದು ಅವರಿಗೆ ತಕ್ಕ ಶಾಸನ ಮಾಡಲಾದೀತು! ವಿಮಲದೇವನೇ ಇನ್ನು ಒಂದೆರಡು ಕ್ಷಣದಲ್ಲಿ ಓರಛಾದ ರಾಜನಾಗುವನು. ನಾನು ಮರಣೋನ್ಮುಖರಾಗಿರುವ ಪಹಾರಸಿಂಗರವರ ಪತ್ನೀತ್ವವನ್ನು ಚಲ್ಲಿಕೊಟ್ಟು, ವಿಮಲದೇವನ ಮಾತೃತ್ವವನ್ನು ಅಂಗೀಕರಿಸಿದ್ದೇನೆ! ಅನ್ನಲು, ಪಹಾರಸಿಂಗನು ಸಂತಾಪದಿಂದ ಆಕೆಯನ್ನು ನೋಡುತ್ತ ಅತ್ಯಂತ ಕ್ಷೀಣಸ್ವರದಿಂದ—''ನೀನು ಸಾಹಸಿಯು! ಚಾಂಡಾಳಲು, ಪಾತಕಿಯು, ಅಧಮಳು!''

ಮುಂದಿನ ಶಬ್ದಗಳನ್ನು ನುಡಿಯುವ ತ್ರಾಣವು ಪಹಾರಸಿಂಗನಲ್ಲಿ ಉಳಿಯಲಿಲ್ಲ. ಆತನು ಹೀರಾದೇವಿಯ ಕಡೆಗೆ ಕಣ್ಣುಕೆಕ್ಕರಿಸಿ ದ್ವೇಷದಿಂದ ಬಿರಿ ಬಿರಿ ನೋಡುತ್ತ ಗತಪ್ರಾಣನಾದನು!!

# ಸ್ವಾತಂತ್ರ್ಯವು ದಾನದ ವಸ್ತುವೇ ಅಲ್ಲ!

ಔರಂಗಜೇಬ ಬಾದಶಹನು ತನಗೆ ಉಪಕಾರ ಮಾಡಿದ ಚಂಪತರಾಯನ, ಹಾಗು ಆತನ ಮಗ ಛತ್ರಸಾಲನ ಬೇಡಿಕೆಯನ್ನು ತಿರಸ್ಕರಿಸಿದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ; ಅದರಿಂದ ಔರಂಗಜೇಬನು ಬಹು ಕಠೋರನೂ, ಕೃತಘ್ನನೂ, ಧರ್ಮಮೂಢನೂ ಎಂಬ ಭಾವನೆಯು ವಾಚಕರಲ್ಲಿ ಉಂಟಾಗಿರಬಹುದು. ಔರಂಗಜೇಬನು ತಂದೆಯನ್ನು ಸೆರೆಯಲ್ಲಿಟ್ಟವನೆಂತಲೂ, ಅಣ್ಣ-ತಮ್ಮಂದಿರನ್ನು ಕೊಲ್ಲಿಸಿದನೆಂತಲೂ, ಹೆಜ್ಜೆ ಹೆಜ್ಜೆಗೆ ಕೊಟ್ಟ ವಚನಗಳನ್ನು ಮುರಿಯುವ ಮೋಸಗಾರನೆಂತಲೂ, ಪರಧರ್ಮದವರಿಗೆ ''ಜೆಜಿಯಾ'' ಕರ ಕೂಡಿಸಿ ಹಿಂಸೆಪಡಿಸುವ ಧರ್ಮ ಮೂಢನೆಂತಲೂ ಇತಿಹಾಸವು ಹೇಳುತ್ತಿರುವದು; ಅಂದಬಳಿಕ ಇಂತಹ ದುಷ್ಟ ಬಾದಶಹನು ಚಂಪತರಾಯ-ಛತ್ರಸಾಲರೊಡನೆ ನಡೆದ ಬಗೆಯು ಅಷ್ಟು ಆಶ್ಚರ್ಯಕರ ವಾದದ್ದೆಂದು ಯಾಕೆ ಹೇಳಬೇಕು? ಆದರೆ ಇಂಥ ಕಠೋರನಾದ ಬಾದಶಹನು ಮಕ್ಕಳ ಮೋಹದಲ್ಲಿ ಅತ್ಯಂತ ಕೋಮಲ ಹೃದಯದವನೂ, ದಯಾಲುವೂ, ಸಜ್ಜನನೂ ಆಗುತ್ತಿರುವದು ಮಾತ್ರ ಆಶ್ಚರ್ಯದ ಸಂಗತಿಯೇ ಸರಿ. ಔರಂಗಜೇಬನು ತಾನು ತಂದೆಯನ್ನು ಸೆರೆಯಲ್ಲಿಟ್ಟು ರಾಜ್ಯಗಳಿಸಿದವ ನಾದದ್ದರಿಂದ, ತನ್ನ ಮಕ್ಕಳಾದರೂ ತನ್ನನ್ನು ಸೆರೆಯಲ್ಲಿಟ್ಟು ಎಲ್ಲಿ ತನ್ನ ರಾಜ್ಯವನ್ನು ಕಸಿದುಕೊಳ್ಳುವರೋ, ಎಂಬ ಭಯದಿಂದ ಗಂಡುಮಕ್ಕಳನ್ನು ದೂರ ದೂರೇ ಇಟ್ಟಿರುತ್ತಿದ್ದನು. ಅವರ ಸಂಗಡ ಆತನ ಪ್ರೇಮದ ಬಳಿಕೆ ಇದ್ದಿಲ್ಲ, ಹೆಣ್ಣುಮಕ್ಕಳಲ್ಲಿ ''ಜೆಬುನ್ನಿಸಾ'' ಎಂಬವಳು ರೋಷನಾರಳಂತೆ ಯಾವಾಗಲೂ ರಾಜಕಾರಣದಲ್ಲಿ ಸೇರತಕ್ಕವ ಳಾದದ್ದರಿಂದ, ಅವಳ ಮೇಲೆಯೂ ಬಾದಶಹನ ಪ್ರೇಮವು ಅಷ್ಟಕ್ಕಷ್ಟೇ ಇದ್ದಿತು; ಆದರೆ ವಾಚಕರ ಅತ್ಯಂತ ಪರಿಚಯದವಳಾಗಿರುವ ಬದ್ರುನ್ನಿಸೆಯು ಸರಳ ಮನಸ್ಸಿನವಳೂ, ಆನಂದ ವೃತ್ತಿಯವಳೂ, ನಗೆಮೊಗದವಳೂ ಇದ್ದದ್ದರಿಂದ, ಆಕೆಯಮೇಲೆ ಬಾದಶಹನು ನಿಸ್ಸೀಮ ಪ್ರೇಮ ಮಾಡುತ್ತಿದ್ದನು. ಬಾದಶಹನ ಅಸ್ವಸ್ಥವಾದ ಮನಸ್ಸು ಸಮಾಧಾನಪಡುವ ಸ್ಥಾನ ಗಳೆಂದರೆ, ಮಕ್ಕಳಲ್ಲಿ ಬದ್ರುನ್ನಿಸೆಯ ಮಂದಿರವು; ಹೆಂಡಿರಲ್ಲಿ ಬದ್ರುನ್ನಿಸೆಯ ತಾಯಿಯಾದ ಆಯೇಷೆಯ ಮಂದಿರವು! ಅವರೆಡರಲ್ಲಿಯೂ ಬದ್ರುನ್ನಿಸೆಯ ಸಾನ್ನಿಧ್ಯವು ಬಾದಶಹನಿಗೆ ಅತ್ಯಂತ ಸಮಾಧಾನಕರವಾದದ್ದಿತ್ತು. ತನ್ನ ಮೇಲೆ ಬಾದಶಹನ ಈ ಪರಿಯ ಪ್ರೇಮವಿರುವದ ರಿಂದಲೇ ಬದ್ರುನ್ನಿಸೆಯು ಹಿಂದೆ ಹೇಳಿದಂತೆ ತನ್ನ ಪ್ರಿಯನಾದ ದಳಪತರಾಯನಿಗೆ ಬುಂದೇಲ ಖಂಡದ ಸ್ವಾತಂತ್ರ್ಯವನ್ನು ಬೇಗನೇ ಒದಗಿಸಿಕೊಡುವೆನೆಂದು ಹೇಳಿದ್ದಳು.

ದಕ್ಷಿಣ ಹಿಂದುಸ್ಥಾನದೊಳಗಿನ ದೇವಗಡದ ಅಥವಾ ದೌಲತ್ತಾಬಾದದ ಕೋಟೆಯನ್ನು ಸ್ವಾಧೀನಪಡಿಸಿಕೊಳ್ಳುವದಕ್ಕಾಗಿ ದಂಡೆತ್ತಿ ಹೋಗಿದ್ದ ಬಾದಶಹನ ಸರದಾರನಾದ ಬಹದ್ದೂರ ಖಾನಕೋಕಾ ಎಂಬವನು ಬಹುದಿವಸ ಕೋಟೆಯನ್ನು ಮುತ್ತಿದರೂ ಪ್ರಯೋಜನವಿಲ್ಲದೆ ಹೋಗಿತ್ತು, ಅಲ್ಲದೆ, ದೊಡ್ಡ ಸೈನ್ಯವನ್ನು ತನ್ನ ಸಹಾಯಕ್ಕೆ ಕಳಿಸದಿದ್ದರೆ ಮುತ್ತಿಗೆಯನ್ನು ಎಬ್ಬಿಸಿ ತಿರುಗಿ ದಿಲ್ಲಿಗೆ ಬರಬೇಕಾಗುವದೆಂತಲೂ ಖಾನನು ಬಾದಶಹನಿಗೆ ಬರೆದಿದ್ದನು; ಆದ್ದರಿಂದ

ಬಾದಶಹನು ಅದರ ವ್ಯವಸ್ಥೆ ಮಾಡುವದಕ್ಕಾಗಿ ದಿವಾಣ, ಈ-ಆಮದಲ್ಲಿ ತನ್ನ ವಿಶ್ವಾಸದ ಸಾಮ್ರಾಜ್ಯ ಭಕ್ತರ ದರ್ಬಾರು ನೆರಸಿ ಆಲೋಚನೆ ನಡಿಸಿದನು. ರಾಜಾ ಜಯಸಿಂಗನು ಅಲ್ಲಲ್ಲಿ ಪಸರಿಸಿರುವ ಮೊಗಲ ಸೈನ್ಯವನ್ನು ಹಿಂದಕ್ಕೆ ಕರೆಸಿಕೊಂಡು ಒಟ್ಟಗೂಡಿಸಿ ದೊಡ್ಡ ಸೈನ್ಯದೊಡನೆ ದೇವಗಡದ ಮುತ್ತಿಗೆ ಸಹಾಯಕ್ಕಾಗಿ ಹೋಗಬೇಕೆಂದು ಗೊತ್ತಾಯಿತು. ಇಡಿಯ ಭರತ ಭೂಮಿಯಲ್ಲಿ ಇಸ್ಲಾಮಿ ಅಧಿಕಾರವನ್ನು ಸ್ಥಾಪಿಸಬೇಕೆಂಬ ಮಹತ್ವಾಕಾಂಕ್ಷೆಯನ್ನು ತಾಳಿರುವ ಬಾದಶಹನ ಮನಸ್ಸು ಆಗಾಗ ಅಸ್ವಸ್ಥವಾಗುತ್ತಲಿತ್ತು. ಉತ್ತರದಲ್ಲಿ ರಜಪೂತರನ್ನೂ, ದಕ್ಷಿಣದಲ್ಲಿ ಮರಾಟರನ್ನೂ ಸ್ಮರಿಸಿ ಆತನು ಆಗಾಗ ಅಸ್ವಸ್ಥವಾಗುತ್ತಿದ್ದನು. ಇವರಲ್ಲದೆ ಮುಸಲ್ಮಾನರಲ್ಲಿಯೂ ವಿಜಾಪುರ-ಗೋವಳಕೊಂಡ ಬಾದಶಹರಂಥವರು ಬಾದಶಹನ ಮನಸ್ಸನ್ನು ಮೇಲೆಮೇಲೆ ಅಸ್ವಸ್ಥಗೊಳಿಸುತ್ತಿದ್ದರು. ಒಟ್ಟಿಗೆ, ಆ ಮಹತ್ವಾಕಾಂಕ್ಷಿಯಾದ ಬಾದಶಹನ ಮನಸ್ಸು ಆಗಾಗ್ಗೆ ಒಂದಿಲ್ಲೊಂದು ಕಾರಣದಿಂದ ಅಸ್ವಸ್ಥವಾಗುವದು ವಾಡಿಕೆಯಾಗಿತ್ತು. ಈದಿನ ದೇವಗಡದ ಮುತ್ತಿಗೆಯ ವಿಷಯದ ಅನಿಷ್ಟ ಸಂಗತಿಯಿಂದ ಮನಸ್ಸು ಬಹಳ ಅಸ್ವಸ್ಥವಾದದ್ದರಿಂದ ಬಾದಶಹನು ನೆಟ್ಟಗೆ ಬದ್ರುನ್ನಿಸೆಯ ಬಳಿಗೆ ಹೋದನು.

ಬಾದಶಹನು ಹೋದಾಗ ಬದ್ರುನ್ನಿಸೆಯು ತನ್ನ ಮಂದಿರದ ಕಿಡಕೆಯೊಳಗಿಂದ ಯಮುನೆಯ ಪ್ರವಾಹದ ಕಡೆಗೋ ಅಥವಾ ಆಕಾಶದಲ್ಲಿ ಪ್ರಕಾಶಿಸುತ್ತಿರುವ ನಕ್ಷತ್ರಗಳ ಕಡೆಗೋ ನೋಡುವದರಲ್ಲಿ ಮಗ್ನಳಾಗಿ ಹೋಗಿದ್ದಳು. ವಿಚಾರದ ಭರದಲ್ಲಿ ತನ್ನ ತಂದೆಯು ತನ್ನನ್ನು ಆಶ್ಚರ್ಯದಿಂದ ನೋಡುತ್ತ ತನ್ನ ಬಳಿಯಲ್ಲಿಯೇ ನಿಂತಿರುವದು ಆಕೆಗೆ ಗೊತ್ತೇ ಆಗಲಿಲ್ಲ. ಮಗಳ ಆ ವಿಚಾರಮಗ್ನ ಸುಂದರ ಮೂರ್ತಿಯನ್ನು ನೋಡಿ ಬಾದಶಹನು ಪರಮ ಸಂತುಷ್ಟನಾದನು; ಈ ಬದ್ರುನಿಸೆಯು ತನಗೆ ಖುದಾನು ಸ್ವರ್ಗದಿಂದ ಕಳಿಸಿದ ಮನೋಹರ ವಾದ ಶಾಂತಿದಾಯಕ ವಸ್ತುವೆಂದು ಆತನು ಭಾವಿಸಿದನು. ಬಾದಶಹನು ಬದ್ರುನ್ನಿಸೆಯ ಗಂಭೀರವಾದ ಸುಪ್ರಪನ್ನ ಮುಖವನ್ನು ನೋಡಿ ಆಶ್ಚರ್ಯದಿಂದ-

ಔರಂಗಜೇಬ—ಬೇಟೀ, ಯಾವ ವಿಚಾರದಲ್ಲಿ ಇಷ್ಟು ಮಗ್ನಳಾಗಿ ಹೋಗಿರುವೆ? ವಿಚಾರಮಾಡಿ ಮನಸ್ಸನ್ನು ವ್ಯರ್ಥ ನೋಯಿಸಿಕೊಳ್ಳುವದೇಕೆ? ನಿನ್ನ ಸುಖ-ಸಾಧನದಲ್ಲಿ ಏತರ ಕೊರತೆಯಿದೆ? ಈ ದಿಲ್ಲೀಪತಿಯು ತನ್ನ ಮಗಳ ಸುಖದ ಸಲುವಾಗಿ ಇಷ್ಟು ಯತ್ನಿಸುತ್ತಿದ್ದರೂ ಬದ್ರುನ್ನಿಸೆಯು ಚಿಂತಾತುರಳು ಯಾಕೆಂಬದು ಆತನಿಗೆ ತಿಳಿಯಲೊಲ್ಲದು.

ಬದ್ರುನ್ನಿಸೆಯು ಎಚ್ಚತ್ತು ಗಾಬರಿಯಾಗಿ ಗಾಳಿಯಿಂದ ಅಲ್ಲಾಡುವ ತನ್ನ ತಲೆಗೂದಲು ಗಳನ್ನು ತನ್ನ ಸುಕುಮಾರ ಕರಗಳಿಂದ ಸರಿಮಾಡಿಕೊಳ್ಳುತ್ತ ತನ್ನ ತಂದೆಯಬಳಿಗೆ ಹೋಗಿ ಅಚ್ಚೆಯಿಂದ-

ಬದ್ರುನ್ನಿಸೆ-ತಮ್ಮ ಕೃಪೆಯಿಂದ ನನಗೆ ಯಾತಕ್ಕೂ ಕೊರತೆಯಿಲ್ಲ; ಆದರೂ ನನ್ನ ಮನಸ್ಸು ಏನನ್ನಾದರೂ ಹೊಸದನ್ನು ನೆನಿಸಿ ಅಸ್ವಸ್ಥವಾಗುತ್ತದಲ್ಲ! ಹೀಗೆ ಯಾಕಾಗಬೇಕೆಂಬದನ್ನು ಕುರಿತು ವಿಚಾರಮಾಡುತ್ತ ನಾನು ಈ ಯಮುನಾ ಪ್ರವಾಹದ ಕಡೆಗೂ, ಆಕಾಶದಲ್ಲಿ ಹೊಳೆಯುತ್ತಿರುವ ನಕ್ಷತ್ರಗಳ ಕಡೆಗೂ, ಈ ಉಪವನದಲ್ಲಿರುವ ಹೂವಿನ ಗಿಡಗಳ ಕಡೆಗೂ

ನೋಡುತ್ತ ಕುಳಿತುಕೊಂಡಿದ್ದೆನು. ಈ ನಕ್ಷತ್ರಗಳು ಎಂದಿನಿಂದಲೋ ಒಂದೇಸವನೆ ಹೊಳೆಯುತ್ತ ತಮ್ಮ ಸ್ಥಿತಿಯಲ್ಲಿಯೇ ಸಂತುಷ್ಟವಾಗಿವೆ, ಹೊಸದನ್ನು ಬಯಸಿ ನಮ್ಮ ಹಾಗೆ ಅಸಂತುಷ್ಟವಾಗುವದಿಲ್ಲ; ಈ ಯಮುನಾ ನದಿಯು ಎಂದಿನಿಂದಲೋ ಒಂದೇಸವನೆ ಹರಿಯುತ್ತ ತನ್ನ ಆ ಸ್ಥಿತಿಯಲ್ಲಿಯೇ ಸಂತುಷ್ಟವಾಗಿರುತ್ತದೆ, ಹೊಸದನ್ನು ಬಯಸಿ ನಮ್ಮಂತೆ ಚಿಂತಿಸುತ್ತ ಕುಳಿತಿರುವದಿಲ್ಲ; ಅದರಂತೆ ಈ ಹೂವಿನ ಗಿಡಗಳಾದರೂ ಒಂದೇಸವನೆ ಮೊಗ್ಗುತ್ತ ಹೂ ಬಿಡುತ್ತ ಆನಂದದಿಂದಿವೆ.; ಅವು ಬೇಸತ್ತು ಅಸಮಾಧಾನಪಟ್ಟಂತೆ ತೋರುವದಿಲ್ಲ; ಆದರೆ, ನಮ್ಮ ಮನುಷ್ಯರ ಮನಸ್ಸು ಹೀಗೆ ಹೊಸ ಹೊಸದನ್ನು ಬಯಸಿ ಅಸಂತುಷ್ಟವು ಯಾಕಾಗಬೇಕು? ಎಂದು ವಿಚಾರಿಸುತ್ತ ಕುಳಿತುಕೊಂಡಿದ್ದೆನು.

ಔರಂಗಜೇಬ—(ಗಾಂಭೀರ್ಯದಿಂದ) ಬದ್ರುನ್ನಿಸೇ, ಖುದಾನು ಆ ನಿರ್ಜೀವ ಪದಾರ್ಥಗಳನ್ನು ತಾನು ಗೊತ್ತುಮಾಡಿಕೊಟ್ಟಷ್ಟು ಕೆಲಸವನ್ನು ಮಾಡುತ್ತಿರುವಂತೆ ಮಾಡಿರುವದರಿಂದ ಅವು ಒಂದೇಸವನೆ ತಮ್ಮ ಕೆಲಸ ಮಾಡುತ್ತಿರುವವು. ಆದರೆ ಮನುಷ್ಯ ಪ್ರಾಣಿಯು ಅವುಗಳಂತೆ ನಿರ್ಜೀವ ವಸ್ತುವಲ್ಲ, ಈತನನ್ನು ಖುದಾನು ಹೊಸಹೊಸದನ್ನು ಬಯಸುತ್ತ ತನ್ನ ಸೃಷ್ಟಿಯೊಳಗಿನ ಉಚ್ಚತರ ಸುಖಗಳನ್ನು ಪ್ರಯತ್ನದಿಂದ ಕೈಸೇರಿಸಿಕೊಳ್ಳುವಂತೆ ಮಾಡಿರುವನು; ಅದರಿಂದ ನಾವು ದೊರೆತಿದ್ದ ಸುಖದಲ್ಲಿ ಸಂತುಷ್ಟರಾಗದೆ, ಹೊಸಹೊಸದನ್ನು ಬಯಸುವೆವು. ಇದರಿಂದ ತೀರ ಹೀನಸ್ಥಿತಿಯಲ್ಲಿದ್ದ ಮನುಷ್ಯನು ತನ್ನ ಪ್ರಯತ್ನದಿಂದ ಉಚ್ಚಸ್ಥಿತಿಗೆ ಹೋದದ್ದು ನಮ್ಮ ಕಣ್ಣಿಗೆ ಬೀಳುತ್ತಿರುವದು. ನಮ್ಮ ಪೂರ್ವಜನಾದ ಮಹಾ ಪ್ರತಾಪಶಾಲಿ ಬಾಬರನು ತನ್ನ ಸಮರ್ಕಂದದ ಸಣ್ಣ ರಾಜ್ಯದಿಂದ ಸಂತುಷ್ಟನಾಗದೆ ದಿಲ್ಲಿಯ ಪ್ರಾಂತದಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಅಲ್ಲಿಂದ ಆತನ ಮೊಮ್ಮಗನಾದ ಅಕಬರನು ಅಷ್ಟರಿಂದ ಸಂತುಷ್ಟನಾಗದೆ ಉತ್ತರ ಹಿಂದುಸ್ಥಾನವನ್ನೆಲ್ಲ ಗೆದ್ದನು; ಆದರೆ ಅವನು ಗೆಲ್ಲದೆ ಉಳಿದಿರುವ ದಕ್ಷಿಣಹಿಂದುಸ್ಥಾನವನ್ನು ನಾನು ಗೆಲ್ಲಬೇಕೆಂದು ಮಾಡಿದ್ದೇನೆ.

ಬದ್ರುನ್ನಿಸೆ —ಆದರೆ ಮಹತ್ವಾಕಾಂಕ್ಷೆಗಳ ಪಾವಟಿಗೆಗಳನ್ನು ನೀವು ಏರುತ್ತಿರುವಾಗ ಎರಡನೇಯವರನ್ನು ಎಷ್ಟು ತುಳಿಯುತ್ತಿರುವಿರೆಂಬದರ ಕಲ್ಪನೆಯಾದರೂ ನಿಮಗಿರುತ್ತದೆಯೇ? ಒಬ್ಬರನ್ನು ತುಳಿದು ಅವರ ಸುಖಸಾಧನಗಳನ್ನು ಕಸಿದುಕೊಂಡು ತಮ್ಮ ಸುಖವನ್ನು ಹೆಚ್ಚಿಸುವದು ಖುದಾನ ಮನಸ್ಸಿಗೆ ಬರುತ್ತಿರಬಹುದೆ? ನಾವು ದಿಲ್ಲಿಯಲ್ಲಿ ಅನುಭವಿಸುತ್ತಿರುವ ಸುಖಗಳ ಮೂಲವನ್ನು ನೋಡಿದರೆ, ಬಡ–ಬಗ್ಗರ ರಕ್ತಹೀರಿ ನಮ್ಮ ತೃಪ್ತಿಯನ್ನು ಮಾಡಿಕೊಳ್ಳುವ ಹಾಗೆ ತೋರುತ್ತದಲ್ಲವೆ? ಅಪ್ಪಾ, ನಾನು ಹೀಗೆ ಕೇಳುವದಕ್ಕಾಗಿ ನನ್ನನ್ನು ಕ್ಷಮಿಸಬೇಕು. ಹಿಂದುಸ್ಥಾನದ ಪ್ರಜೆಗಳೆಂದರೆ ನಮ್ಮಂತೆ ಖುದಾನ ಮಕ್ಕಳೇ ಅಲ್ಲವೆ? ಅಂದಬಳಿಕ ಆತನ ಮಕ್ಕಳು ಒಬ್ಬರ ರಕ್ತವನ್ನು ಒಬ್ಬರು ಕುಡಿಯಹತ್ತಿದರೆ ಆತನಿಗೆ ಹೇಗೆ ಸಂತೋಷವಾದೀತು. ಬಾಬರನು ದಿಲ್ಲಿಯ ಪ್ರದೇಶದ ಪ್ರಜೆಗಳನ್ನು ಹಿಂಡಿದನು. ಅಕಬರನು ಉತ್ತರಹಿಂದುಸ್ಥಾನದ ಪ್ರಜೆಗಳನ್ನು ಹಿಂಡಿದನು, ಅಪ್ಪಾ, ನೀವು ಇಡಿಯ ಹಿಂದುಸ್ಥಾನದ ಪ್ರಜೆಗಳ ರಕ್ತವನ್ನು ಹೀರಬೇಕೆನ್ನುವಿರಿ! ಈ ಮಾತು ಅತ್ಯಂತ ದಯಾಲುವೂ, ನ್ಯಾಯಪ್ರಿಯನೂ ಆಗಿರುವ ಖುದಾನಿಗೆ ಸೇರಬಹುದೆ?

ಔರಂಗಜೇಬ—(ಆಶ್ಚರ್ಯದಿಂದ) ಬದ್ರುನ್ನಿಸೇ, ಈದಿನ ನೀನು ಹೀಗೇಕೆ ಮಾತಾಡುತ್ತೀ? ನಮ್ಮ ಮನೆತನಕ್ಕೆ ದಿಲ್ಲಿಯ ಸಾಮ್ರಾಜ್ಯಪದವು ಪ್ರಾಪ್ತವಾದದ್ದು ನಮ್ಮ ಮೇಲಿನ ಖುದಾನ ಪ್ರೇಮದ ಲಕ್ಷಣವೆಂದು ಕಾಜಿಗಳು ನಮಗೆ ಹೇಳುತ್ತಿರುವರಲ್ಲವೆ? ಇಸ್ಲಾಮಿ ಧರ್ಮವನ್ನು ಎಲ್ಲಕಡೆಗೆ ಹಬ್ಬಿಸುವದಕ್ಕಾಗಿ, ಶಸ್ತ್ರವನ್ನು ಉಪಯೋಗಿಸುವ ಪೈಗಂಬರೀ ಮಂತ್ರವನ್ನು ನಮ್ಮ ಕಾಜಿಗಳು ನಮಗೆ ಉಪದೇಶಿಸುವದಿಲ್ಲವೆ?

ಬದ್ರುನ್ನಿಸೆ—ಇಂಥ ಅನ್ಯಾಯದ ಮಾತನ್ನು ಪೈಗಂಬರರು ಹೇಳಿರಬಹುದೇ, ಎಂದು ನಾನು ಕುರಾಣವನ್ನು ಎರಡುಸಾರೆ ಓದಿನೋಡಿದೆನು; ಆದರೆ ಶಸ್ತ್ರದಿಂದ ಧರ್ಮವನ್ನು ಹಬ್ಬಿಸಬೇಕೆಂದು ಹೇಳಿದ್ದು ನನಗೇನು ಕಂಡುಬರಲಿಲ್ಲ. ನಿಮ್ಮದ ಬಾರದ ಕಾಜಿ–ಮುಲ್ಲಾಗಳು ತಮ್ಮ ಹೊಟ್ಟೆತುಂಬಿ ಹರಿಯುವಷ್ಟು ವೇತನವನ್ನು ನಿಮ್ಮಿಂದ ಪಡೆಯುತ್ತಿರುವದರಿಂದ ನಿಮ್ಮ ಮನಸ್ಸಿಗೆ ಸಂತೋಷವಾಗುವಂತೆ, ತಾವು ದೊಡ್ಡ ಸಾರ್ವಭೌಮನ ಗುರುಗಳೆನಿಸುವ ಮಹತ್ವಾಕಾಂಕ್ಷೆಯಿಂದ ಹೀಗೆ ಹೇಳುತ್ತಿರಬಹುದು, ಆದರೆ ಅಪ್ಪಾ, ಈ ಸಂಸಾರದಕ್ಷ ಗುರುಗಳ ಉಪದೇಶದಂತೆ ಹೋಗಲಿಕ್ಕೆ ನೀವೇನು ಬುದ್ಧಿಹೀನರೇ? ಸ್ವತಃ ಅಲ್ಲಾನ ಸಮತೆಯನ್ನು ವಿಚಾರಮಾಡಲಿಕ್ಕೆ ನೀವೇನು ಅಸಮರ್ಥರೆ? ಅಲ್ಲಾನ ಇಚ್ಛೆಗೆ ವಿರುದ್ಧವಾಗಿರುವ ಆಚರಣೆಗಳು ಸೈತಾನನ ಆಚರಣೆಗಳೆಂಬದು ತಾವು ಅರಿಯರಿರಾ? ಈ ತಾರಕಾ ಪುಂಜಗಳು ತಮತಮಗೆ ಪರಮೇಶ್ವರನು ನಿಯಮಿಸಿಕೊಟ್ಟಿದ್ದ ಕ್ಷೇತ್ರದಲ್ಲಿ ಪ್ರಕಾಶಿಸುತ್ತ ಜಗತ್ತಿನ ಶಾಂತಿಗೆ ಭಂಗವನ್ನುಂಟುಮಾಡದಿರುವಂತೆ ಮನುಷ್ಯರಾದರೂ ತಮ್ಮ ತಮ್ಮ ಕ್ಷೇತ್ರದಲ್ಲಿದ್ದು ಬೇಕಾದರೆ ಖುದಾನ ವೈಭವವನ್ನು ತಿಳಿದುಕೊಳ್ಳುವದಕ್ಕಾಗಿ ಯತ್ನಿಸಿ ಆನಂದಪಡುತ್ತ ಜಗತ್ತಿನ ಶಾಂತಿಯನ್ನು ಯಾಕೆ ಕಾದುಕೊಳ್ಳಬಾರದು? ಸಮರ್ಕಂದದ ಮೊಗಲರು ಹಿಂದುಸ್ಥಾನದ ಧನವನ್ನು ಕರದ ರೂಪದಿಂದಾಗಲಿ, ದಂಡದ ರೂಪದಿಂದಾಗಲಿ, ಸಾಲದ ರೂಪದಿಂದಾಗಲಿ ಯಾಕೆ ಸುಲಿಯಬೇಕು? ಪ್ರಾಣಕ್ಕಿಂತಲೂ ಪ್ರಿಯವಾಗಿರುವ ಹಿಂದುಗಳ ಸ್ವಾತಂತ್ರ್ಯವನ್ನು ಕಸಿದುಕೊಂಡು ಅವರನ್ನು ಗುಲಾಮರಾಗಿ ಮಾಡುವ ಬಾಧ್ಯತೆಯು ಈ ಭಿನ್ನ ದೇಶದ ಮೊಗಲರಿಗೆ ಹೇಗೆ ಉಂಟಾಗುವದು?

ಔರಂಗಜೇಬ—(ಕುಂಠಿತನಾಗಿ) ಬುದ್ರುನ್ನಿಸೇ, ಒಬ್ಬಾನೊಬ್ಬ ಬಂಡಖೋರ ಹಿಂದುವಿನಂತೆ ನೀನು ಇಂದು ಮಾತಾಡುತ್ತಿರುವೆ! ಮೊನ್ನಿನ ದರ್ಬಾರದಲ್ಲಿ ಮಹೋಬದ ಚಂಪತರಾಯನೂ, ಆತನ ಮಗ ಛತ್ರಸಾಲನೂ ಎಲ್ಲರ ಸಮಕ್ಷ ನನ್ನ ಮುಂದೆ ಹೀಗೆಯೇ ಚಮತ್ಕಾರದ ಹರಟೆಗಳನ್ನು ಕೊಚ್ಚಿದರು. ಅವರ ಆ ರಾಜದ್ರೋಹಕ್ಕಾಗಿ ಅದೇ ಕೈಯಲ್ಲಿ ಶಿಕ್ಷೆಯನ್ನು ವಿಧಿಸುತ್ತಿದ್ದೆನು; ಆದರೆ –

ಈ ಮೇರೆಗೆ ನುಡಿಯುತ್ತಿರಲು, ಪಟ್ಟರಾಣಿಯಾದ ಆಯೇಷೆಯು ಅಲ್ಲಿಗೆ ಬಂದು— ''ಹಾಗೆ ಶಿಕ್ಷೆಯನ್ನು ವಿಧಿಸಿದ್ದರೆ, ದಿಲ್ಲೀಪತಿಯ ಕೀರ್ತಿಧ್ವಜವು ಜಗತ್ತಿನಲ್ಲಿ ಮೆರೆಯುತ್ತಿತ್ತು! ಶಹಾನಶಹಾ! ಅಂದು ಛತ್ರಸಾಲನು ತಮಗೆ ಪ್ರಾಣದಾನಮಾಡಿದ ಆಗಾಧಕಾರ್ಯವನ್ನು ತಾವು ನ್ಯಾಯತಃ ಮನಸ್ಸಿನಲ್ಲಿ ತಂದಿದ್ದರೆ, ಬರಿಯ ಬುಂದೇಲಖಂಡದ ಸ್ವಾತಂತ್ರ್ಯವನ್ನೇ ಏಕೆ? ತಮ್ಮ ಸಾಮ್ರಾಜ್ಯದ ಸ್ವಾತಂತ್ರ್ಯವನ್ನು ಕೊಡಲಿಕ್ಕೂ ತಾವು ಹಿಂದೆಮುಂದೆ ನೋಡುತ್ತಿದ್ದಿಲ್ಲ!

ಖಾವಿಂದ, ತಮ್ಮ ಜೀವಕ್ಕೆ ಏನೂ ಬೆಲೆಯಿಲ್ಲವೆ? ನಿಮ್ಮ ದಾಸಿಯಾದ ಈ ಆಯೇಷೆಯು ತನ್ನ ಜೀವವನ್ನು ಯಾವತ್ತು ಜಗತ್ತಿಗಿಂತ ಪ್ರಿಯವಾದದ್ದೆಂದು ನೋಡುತ್ತಿದ್ದು, ಅಂತಹ ಆ ತನ್ನ ಬೆಲೆಯುಳ್ಳ ಜೀವವನ್ನು ಆಕೆಯು ನಿಮ್ಮ ಜೀವದ ಮೇಲೆ ನಿವಾಳಿಸಿ ಚಲ್ಲಲು ಸಿದ್ಧಳಿರುವಳು! ಶಹಾನಶಹಾ! ಛತ್ರಸಾಲನೇ ನಿಮ್ಮ ಪ್ರಾಣವನ್ನು ಉಳಿಸದಿದ್ದರೆ, ನೀವು ಆತನಿಗೆ ರಾಜದ್ರೋಹಿ ಯೆಂದು ಶಿಕ್ಷೆಯನ್ನು ವಿಧಿಸಲಿಕ್ಕೆ ಮಯೂರಾಸನದ ಮೇಲೆ ಎಲ್ಲಿ ಕುಳಿತಿರುತ್ತಿದ್ದಿರಿ? ಅಂತಹ ನೀಗದ ದುಃಖದ ಪ್ರಸಂಗವು ಒದಗಿದ್ದರೆ, ಖುದಾವಂತ! ತಮ್ಮ ಮುಂದೆ ಈ ತಾಯಿ–ಮಕ್ಕಳು ಇಂದು ಹೀಗೆ ಮಾತಾಡಲಿಕ್ಕೆ ಇಲ್ಲಿ ಹೇಗೆ ಕುಳಿತುಕೊಳ್ಳುತ್ತಿದ್ದೆವು?

ಹೀಗೆ ನುಡಿಯುವಾಗ ಆಯೇಷೆಯ ಕಣ್ಣುಗಳು ನೀರಿನಿಂದ ತುಂಬಿದವು! ಆಗ ಬದ್ರುನ್ನಿಸೆಯು ಅಳುವ ಮೋರೆಯಿಂದ—''ಅಪ್ಪಾ, ಕುದಾನು ಛತ್ರಸಾಲನ ಮುಖಾಂತರ ವಾಗಿ ನಿಮ್ಮ ಅಮೂಲ್ಯ ಪ್ರಾಣವನ್ನು ಉಳಿಸದಿದ್ದರೆ, ಇಷ್ಟು ಹೊತ್ತಿಗೆ ನಮ್ಮ ಗತಿಯು ಏನು ಆಗುತ್ತಿತ್ತು? ಛತ್ರಸಾಲನ ಉಪಕಾರವು ನಿಮ್ಮ ಮೇಲೆಯಷ್ಟೇ ಅಲ್ಲ ನನ್ನ ಮೇಲೆಯೂ, ಅವ್ವನ ಮೇಲೆಯೂ, ಶಹಾಜಾದಾ ಅಜ್ಜಿಮನ ಮೇಲೆಯೂ, ಇಡಿಯ ಮೊಗಲ ರಾಜನಿಷ್ಠ ಪ್ರಜೆಗಳ ಮೇಲೇಯೂ ಅನಂತವಾಗಿ ಆಗಿರುವದು! ಇಂತಹ ಖುದಾನ ಪ್ರತಿನಿಧಿ ಛತ್ರ ಸಾಲನಿಗೆ ನೀವು ಬುಂದೇಲದ ಸ್ವಾತಂತ್ರ್ಯವನ್ನು ಕೊಡುವದಿಲ್ಲವೆಂದು ಹೇಳುವದು ನಿಮಗೆ ಯೋಗ್ಯವೆ? ನಮಗೆ ಸಹ್ಯವೇ? ನಿಮ್ಮ ರಾಜನಿಷ್ಠ ಪ್ರಜೆಗಳಿಗೆ ಮಾನ್ಯವೆ?

ತಾಯಿ ಮಕ್ಕಳ ಈ ಹೃದಯದ್ರಾವಕ ಭಾಷಣದಿಂದ ಔರಂಗಜೇಬನ ಕಲ್ಲೆದೆಯು ಕರಗಿತು! ತಾನು ಹಾಗೆ ಚಂಪತರಾಯ–ಛತ್ರಸಾಲರನ್ನು ನಿರಾಕರಿಸಿದ್ದು ಯೋಗ್ಯವಾಗಲಿಲ್ಲ ವೆಂದು ಆತನು ಪಶ್ಚಾತ್ತಾಪಪಡತೊಡಗಿದ್ದನು; ಆದರೂ ಆ ತಂತ್ರಗಾರನಾದ ಬಾದಶಹನು ತನ್ನ ಆ ಪಶ್ಚಾತ್ತಾಪದ ಸ್ಥಿತಿಯನ್ನು ಒಮ್ಮೆಲೆ ತೋರಗೊಡದೆ, ಆಯೇಷೆಯನ್ನು ಕುರಿತು–

ಔರಂಗಜೇಬ—ಪ್ರಿಯೇ, ನಿನ್ನ ಮಾತು ಯೋಗ್ಯವಾದದ್ದು; ಆದರೆ ನಿಮ್ಮ ಸಹವಾಸ ದಲ್ಲಿರುವ ಪ್ರೇಮಲ ಔರಂಗಜೇಬನು ಬೇರೆ, ಮಯೂರಾಸನವೇರಿ ರಾಜಕಾರಣ ನಡಿಸುವ ಕ್ರೂರ ಔರಂಗಜೇಬನು ಬೇರೆ. ನೀವು ಆ ಕ್ರೂರ ಔರಂಗಜೇಬನನ್ನು ನೆನಿಸಿ ಅಸಮಾಧಾನ ಪಡದೆ, ನಿಮ್ಮ ಬಳಿಯಲ್ಲಿ ಕುಳಿತಿರುವ ಪ್ರೇಮಲ ಔರಂಗಜೇಬನನ್ನು ನೋಡಿ ಸಮಾಧಾನ ಪಡಿರಿ. ರಾಜಕಾರಣವೇ ಬಹು ತೊಡಕಿನ ಸ್ವಭಾವದ್ದಿರುವದು!

ಆಯೇಷೆ—(ಅತ್ಯಂತ ಕೋಮಲ ಸ್ವರದಿಂದ) ಖಾವಿಂದ ನಾವು ತಮ್ಮ ರಾಜಕಾರಣ ದಲ್ಲಿ ಲೇಶಮಾತ್ರವೂ ಕೈಹಾಕಲಾರೆವು. ದರ್ಬಾರದೊಳಗಿನ ತಮ್ಮ ನಡತೆಗೆ ನಾವು ದೋಷ ವಿಡುವ ಕಾರಣವೂ ಇಲ್ಲ; ಆದರೆ ಛತ್ರಸಾಲ ಚಂಪತರಾಯರಿಗೆ ಕೊಟ್ಟ ವಚನಭಂಗವು......

ಔರಂಗಜೇಬ—(ವಿಕಟ ಹಾಸ್ಯದಿಂದ) ಆಯೆಷೇ? ಎಂತಹ ಹುಚ್ಚಿಯೇ ನೀನು? ಕುಟಿಲ ರಾಜನೀತಿಯಲ್ಲಿ ವಚನಕ್ಕೆ ಮಹತ್ವವೆ? ರಾಜಕಾರಣದಲ್ಲಿ ನಾವು ಮೇಲೆ ಮೇಲೆ ವಚನಭಂಗ ಮಾಡಬೇಕಾಗುವದು. ನಿಮ್ಮ ರಜಪೂತರ ಹಾಗೆ ವಚನದ ಮಬ್ಬಿಗೆ ಬಿದ್ದು ನನ್ನ ಸರ್ವಸ್ವದ ನಾಶಮಾಡಿಕೊಳ್ಳೆಂದು ಹೇಳುತ್ತಿಯೋ ಏನು? ಸಾಮ್ರಾಜ್ಯಕ್ಕೆ ನಾಶಕಾಲವು ಒದಗಿದಾಗ ಬೇಕಾದಷ್ಟು ವಚನ ಕೊಡಬೇಕು, ಮುಂದೆ ಸಾಮ್ರಾಜ್ಯವು ಸುರಕ್ಷಿತವಾಯಿ

ತೆಂದರೆ, ಕೊಟ್ಟಹಾಗೆ ಆ ವಚನಗಳನ್ನು ಮುರಿದುಬಿಡಬೇಕು! ಈ ವಚನಭಂಗದ ದೊಡ್ಡ ಬಲದಿಂದಲೇ ಬರಿಯ ಔರಂಗಜೇಬನಿದ್ದವನು ನಾನು ಶಹಾನಶಹಾ ಅಲಮಗೀರ ಔರಂಗ ಜೇಬನಾದೆನು! ಹೀಗಾಗುವಾಗ ನಾನು ಮುರಾದನಿಗೆ ವಚನಕೊಟ್ಟು ಮುರಿದೆನು; ಸುಜಾನಿಗೆ ವಚನಕೊಟ್ಟುಮುರಿದೆನು; ಸ್ವತಃ ನನ್ನ ತಂದೆಗೆ ವಚನಕೊಟ್ಟು ಮುರಿದೆನು; ಪ್ರಿಯೇ, ಆಯೇಷೆ, ಬಹಳ ಹೇಳುವದೇನು? ಪ್ರತ್ಯಕ್ಷ ಅಲ್ಲಾನಿಗೆ ವಚನಕೊಟ್ಟೆನು, ಕಾರ್ಯವಾದ ಮೇಲೆ ಆ ವಚನವನ್ನು ಮುರಿದೂ ಬಿಟ್ಟೆನು! ವಚನದ ಮಬ್ಬಿಗೆ ಬಿದ್ದು ಬುಂದೇಲಖಂಡಕ್ಕೆ ಸ್ವಾತಂತ್ರ್ಯವನ್ನು ಕೊಟ್ಟರೆ, ಆ ಕಾಟಕ ಸ್ವಭಾವದ ಶೂರ ರಜಪೂತರು ಇಷ್ಟು ಸನೆಯ ದಲ್ಲಿರುವ ನಮಗೆ ಸುಖದಿಂದ ನಿದ್ದೆಮಾಡಗೊಡಬಹುದೆ? ಪ್ರಸಂಗಬಂದರೆ, ನಮ್ಮನ್ನು ದಿಲ್ಲಿಯಿಂದ ಓಡಿಸಲಿಕ್ಕೂ ಅವರು ಹಿಂದೆಮುಂದೆ ನೋಡಲಿಕ್ಕಿಲ್ಲ!

ಬದ್ರುನ್ನಿಸೆ—(ಖಿನ್ನಳಾಗಿ) ಅಪ್ಪಾ, ಹೀಗನ್ನಬೇಡಿರಿ. ಬುಂದೇಲದ ಜನರು ನೀವು ಕೊಟ್ಟ ಸ್ವಾತಂತ್ರ್ಯದಿಂದ ಸಂತುಷ್ಟರಾಗಿರುವರು. ಅವರು ಕೃತಘ್ನರಾಗಿ ದಿಲ್ಲಿಯ ಕಡೆಗೆ ಹಣಿಕಿಯೂ ನೋಡಲಾರರು!

ಔರಂಗಜೇಬ—(ಆಶ್ಚರ್ಯದಿಂದ ಬುದ್ರುನ್ನಿಶೆಯ ಕಡೆಗೆ ನೋಡುತ್ತ) ಎಲ! ಇದೇನು? ಬದ್ರುನ್ನಿಸೇ, ನೀನೂ ಬುಂದೇಲಖಂಡದ ಪಕ್ಷಕಟ್ಟಿ ಮಾತಾಡಹತ್ತಿದೆಯಲ್ಲ! ನಿನ್ನ ತಾಯಿಯು ಬುಂದೇಲಖಂಡದೊಳಗಿನವಳಿರುವದರಿಂದ ಆಕೆಯು ಬುಂದೇಲಖಂಡದ ಪಕ್ಷವಹಿಸುವದು ಸಯುಕ್ತಿಕವಾದದ್ದು; ಆದರೆ ನಿನ್ನ ಒಲವು ಬುಂದೇಲಖಂಡದ ಕಡೆಗೇಕೆ?

ಆಯೇಷೆ—ಶಹಾನಶಹಾ! ನಾನು ಬುಂದೇಲಖಂಡದಿಂದ ತಮ್ಮ ಬೆನ್ನು ಹತ್ತಿ ಬಂದವಳು; ಆದರೆ ಬದ್ರುನ್ನಿಸೆಯು ಇನ್ನು ಮೇಲೆ ಬುಂದೇಲಖಂಡದಲ್ಲಿಯೇ ತನ್ನ ಆಯುಷ್ಯವನ್ನು ಕಳೆಯುವದಕ್ಕೆ ಹೋಗುವವಳು!

ಔರಂಗಜೇಬ—(ಆಶ್ಚರ್ಯದಿಂದ) ಏನಂದಿ? ಬದ್ರುನ್ನಿಸೆಯು ಇನ್ನು ಮೇಲೆ ಬುಂದೇಲಖಂಡದಲ್ಲಿ ತನ್ನ ಆಯುಷ್ಯವನ್ನು ಕಳೆಯುವದಕ್ಕೆ ಹೋಗುವವಳೆ? ಅದು ಹೇಗೆ?

ತಂದೆ ಮಾಡಿದ ಈ ಪ್ರಶ್ನೆಗೆ ಅವ್ವನು ಕೊಡುವ ಉತ್ತರವನ್ನು ಕೇಳಲಿಕ್ಕೆ ಅಲ್ಲಿ ಕುಳಿತು ಕೊಳ್ಳಲಾರದೆ ಬದ್ರುನ್ನಿಸೆಯು ನಾಚಿ, ಏನೋ ಕೆಲಸವಿದ್ದವಳಂತೆ ತಟ್ಟನೆ ಅಲ್ಲಿಂದ ಎದ್ದು ಹೋಗಿ ಕಿಡಿಕೆಯ ಬಳಿಯಲ್ಲಿ ನಿಂತು ಹೊರಗೆ ನೋಡುವವಳಂತೆ ತೋರಿಸಹತ್ತಿದಳು. ಅಷ್ಟರಲ್ಲಿ ಆಯೇಷೆಯು ಬಾದಶಹನನ್ನು ಕುರಿತು –

ಆಯೇಷೆ — ಖಾವಿಂದ, ಮೊನ್ನಿನ ಮೀನಾ ಬಝಾರದಲ್ಲಿ ಬದ್ರುನ್ನಿಸೆಯು ಸಾಗರದ ಅರಸನಾದ ಸಭಾಕರಣನ ಮಗ ದಳಪತರಾಯನಿಗೆ ತನ್ನ ಪ್ರೇಮವನ್ನು ಒಪ್ಪಿಸಿರುವಳು; ಆದರೆ ದಳಪತರಾಯನು ಬುಂದೇಲಖಂಡಕ್ಕೆ ಸ್ವಾತಂತ್ರ್ಯ ಪ್ರಾಪ್ತಿಯಾಗುವವರೆಗೆ ತಾನು ಬದ್ರುನ್ನಿಸೆಯ ಪಾಣಿಗ್ರಹಣ ಮಾಡುವದಿಲ್ಲವೆಂದು ಹೇಳಿದ್ದರಿಂದ, ಬುಂದೇಲಖಂಡದ ಸ್ವಾತಂತ್ರ್ಯದ ಹಾದಿಯನ್ನು ಬದ್ರುನ್ನಿಸೆಯು ನೋಡಬೇಕಾಗಿರುವದು!

ಆಯೇಷೆಯ ಈ ಮಾತುಗಳನ್ನು ಕೇಳಿ ಬಾದಶಹನು ಸಂತಪ್ತನಾದನು; ಆತನ ಆಗಿನ ಮುಖಮುದ್ರೆಯನ್ನು ನೋಡಿ ಬದ್ರುನ್ನಿಸೆಯ ಎದೆಯು ದಸಕ್ಕೆಂದಿತು! ತನ್ನ ಉದ್ದೇಶವು ಸಫಲವಾಗುವದಿಲ್ಲವೆಂದು ಆಕೆಯು ನಿರಾಶೆಪಟ್ಟಳು. ಆಗ ಔರಂಗಜೇಬನು–

ಔರಂಗಜೇಬ—ಏನು? ನನ್ನ ಮಗಳು ನನ್ನ ಒಬ್ಬ ಶತ್ರುವನ್ನು ಮದುವೆ ಯಾಗುವಳೋ? ನನ್ನ ಸಾಮ್ರಾಜ್ಯದೊಳಗಿನ ಯಾವದೊಂದು ದೇಶದ ಸ್ವಾತಂತ್ರ್ಯಕ್ಕಾಗಿ ಯತ್ನಿಸುವವರೆಲ್ಲ ನನ್ನ ಶತ್ರುಗಳಾಗಿರುವರು.

ಆಯೇಷೆ—ಹೀಗೆ ಅವಿಚಾರ ಮಾಡಬೇಡಿರಿ. ಪ್ರೇಮದ ಪ್ರಭಾವವು ಎಷ್ಟು ವಿಲಕ್ಷಣ ವಾಗಿರುವದೆಂಬದರ ಗೊತ್ತು ನಿಮಗಿರುವದು. ಹದಿನಾರು ವರ್ಷಗಳ ಹಿಂದಿನ ಕಾಲವನ್ನು ನೆನಪಿನಲ್ಲಿ ತಂದುಕೊಳ್ಳಿರಿ. ಆಗ ನೀವು ರಜಪೂತ ವೇಷದಿಂದ ಬುಂದೇಲಖಂಡದಲ್ಲಿ ಸಂಚರಿಸುತ್ತಿದ್ದದ್ದನ್ನು ನೆನಿಸಿರಿ. ನಿಮ್ಮ ಸಲುವಾಗಿ, ನಿಮ್ಮ ಪ್ರೇಮದ ಸಲುವಾಗಿ ದಿಲ್ಲಿಗೆ ಬರಲಿಕ್ಕೆ ನಾನು ಹೇಗೆ ಸಿದ್ಧಳಾದೆನೆಂಬದನ್ನೂ, ನನ್ನ ಮನಸ್ಸಿನ ಚಾಂಚಲ್ಯವು ಬೈಲಿಗೆ ಬಿದ್ದರೆ ನನ್ನ ಮನೆತನಕ್ಕೆ ಕುಂದು ಉಂಟಾದೀತೆಂದು ನಾನು ಹೇಗೆ ಎಚ್ಚರಪಟ್ಟೆನೆಂಬದನ್ನೂ, ಕಡೆಗೆ ನನ್ನ ಹಾಗೂ ನನ್ನ ಆಪ್ತೇಷ್ಟರ ಪರಲು ಹರಿದುಕೊಂಡು ನಿಮ್ಮೊಡನೆ ನಾನು ದಿಲ್ಲಿಗೆ ಹೇಗೆ ಗುಪ್ತ ರೀತಿಯಿಂದ ಬಂದೆನೆಂಬದನ್ನೂ ಸ್ಮರಿಸಿರಿ; ಅಂದರೆ ಬುದ್ರುನ್ನಿಸೆಯ ಮನಸ್ಸಿನ ಪರೀಕ್ಷೆ ಮಾಡಲಿಕ್ಕೆ ನಿಮಗೆ ಬಂದೀತು. ಕುಮಾರ ದಳಪತರಾಯನು ಸ್ವಾತಂತ್ರ್ಯದ ಸಲುವಾಗಿ ಯತ್ನಿಸುವನೆಂಬ ಕಾರಣದಿಂದ ನಿಮ್ಮ ಶತ್ರುವಾಗಿದ್ದರೆ, ಆತನನ್ನು ಮಿತ್ರನಾಗಿ ಮಾಡಿ ಕೊಳ್ಳುವದು ನಿಮಗೆ ಅಸಾಧ್ಯವಿಲ್ಲ.

ಔರಂಗಜೇಬ—ಏನು? ದಳಪತರಾಯನು ಇಸ್ಲಾಮಿ ಧರ್ಮವನ್ನು ಸ್ವೀಕರಿಸುವನೋ? ಹಾಗೆಮಾಡಿದರೆ, ಆತನಿಗೆ ಬದ್ರುನ್ನಿಸೆಯನ್ನು ಕೊಡುವದು ನನಗೆ ಸಂಕಟಕರವಾಗದು. ಆತನು ಒಮ್ಮೆ ಯವನನಾಗಿ ನನ್ನ ಅಳಿಯನಾದರೆ, ಬುಂದೇಲಖಂಡದ ರಾಜ್ಯ ಒಂದೇ ಏಕೆ? ಅಂಥ ಹಲವು ರಾಜ್ಯಗಳು ಆತನ ಕಾಲದೆಸೆಗೆ ಉರುಳಾಡುವಂತೆ ಆತನ ಯೋಗ್ಯತೆಯನ್ನು ನಾನು ಹೆಚ್ಚಿಸುವೆನು!

ಆಯೇಷೆ—(ತೀಕ್ಷ್ಣದೃಷ್ಟಿಯಿಂದ ನೋಡುತ್ತ) ಪ್ರೇಮದ ಸಾಮ್ರಾಜ್ಯದಲ್ಲಿ ಧಾರ್ಮಿಕ ಪ್ರತಿಬಂಧವನ್ನು ಎಣಿಸುವದು ಸರ್ವಥಾ ತಪ್ಪು ಎಂದು ನೀವೇ ನನಗೆ ಹೇಳಿದ್ದಿರಲ್ಲವೆ? ಬುಂದೇಲದ ರಜಪೂತರ ಮಗಳಾದ ನನ್ನನ್ನು ನಿಮ್ಮ ಗೋಷೆಯಲ್ಲಿ ಕರಕೊಳ್ಳವಾಗ ನಿಮಗೆ ಧರ್ಮದ ಹಂಗು ಸ್ವಲ್ಪವೂ ತೋರಲಿಲ್ಲ; ಆದರೆ ಈಗ ನಿಮ್ಮ ಮಗಳು ಬುಂದೇಲಿಯ ರಜಪೂತ ನನ್ನು ಪ್ರೀತಿಸತೊಡಗಿದ ಕೂಡಲೆ, ಧರ್ಮದ ನೆವವನ್ನು ತೋರಿಸುವದು ನಿಮಗಾದರೂ ಯೋಗ್ಯವಲ್ಲ!

ಆಯೇಷೆಯ ಭಾಷಣದಿಂದ ಬಾದಶಹನ ಮನಸ್ಸು ಕರಗಿತು. .ತಾನು ಬುಂದೇಲ ಖಂಡಕ್ಕೆ ಸ್ವಾತಂತ್ರ್ಯವನ್ನು ಕೊಡದಿದ್ದರೆ, ಬದ್ರುನ್ನಿಸೆಯ ಆಯುಷ್ಯವು ದುಃಖದಾಯಕ ವಾಗುವದೆಂಬ ವಿಚಾರವು ಆತನ ಮನಸ್ಸಿನಲ್ಲಿ ಬಂದಿತು. ಬದ್ರುನ್ನಿಸೆಗೆ ದುಃಖಕೊಡುವದು ಆತನಿಂದಾಗ ಲೊಲ್ಲದು. ತನ್ನ ಮಗಳನ್ನು ಆಜನ್ಮ ದುಃಖದಲ್ಲಿ ಕೊರಗಗೊಡುವದು, ಆಕೆಯ ಮೇಲಿನ ತನ್ನ ಪ್ರೇಮಕ್ಕೆ ಲಾಂಛನವೆಂದು ಆತನು ತಿಳಿದನು. ತನ್ನ ಪ್ರೀಯ ಮಗಳ

ವಿಷಯವಾಗಿ ಆತನು ಅಷ್ಟು ಕಠೋರತನ ತೋರಿಸುವದು ಶಕ್ಯವೂ ಇದ್ದಿಲ್ಲ. ಆತನು ಮಗಳ ಮೋಹದಲ್ಲಿ ಸಿಕ್ಕು ಆಕೆಯನ್ನು ಕುರಿತು ಅತ್ಯಂತ ಪ್ರೇಮದಿಂದ –

ಔರಂಗಜೇಬ—ವತ್ಸೇ, ಬದ್ರುನ್ನಿಸೆ, ಅಸಮಾಧಾನಪಡಬೇಡ ನಿನ್ನ ಮನಸ್ಸನ್ನು ನೋಯಿಸುವದು ನನ್ನಿಂದಾಗದು. ಸಾಗರದ ಯುವರಾಜ ದಳಪತರಾಯನು ನಿನ್ನ ಪತಿಯಾಗುವನು. ನಿನ್ನ ಸ್ವೀಕಾರಮಾಡಿ ನಿನ್ನನ್ನು ಸಂತೋಷಪಡಿಸುವ ಸಂಧಿಯು ಆತನಿಗೆ ಒದಗುವದಕ್ಕಾಗಿ ಬುಂದೇಲಖಂಡಕ್ಕೆ ನಾನು ಪೂರ್ಣ ಸ್ವಾತಂತ್ರ್ಯವನ್ನು ಕೊಡುವೆನು!

ಬಾದಶಹನ ಈ ಅಮೃತವಾಣಿಯನ್ನು ಕೇಳಿ ಆ ತಾಯಿ–ಮಕ್ಕಳಿಬ್ಬರೂ ಆನಂದ ಪರವಶರಾದರು. ತನ್ನ ಸಲುವಾಗಿ ತನ್ನ ತಂದೆಯು ಈಪರಿ ಸ್ವಾರ್ಥತ್ಯಾಗ ಮಾಡಿದ್ದನ್ನು ನೋಡಿ ಬದ್ರುನ್ನಿಸೆಯು ತಂದೆಯ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಕೃತಜ್ಞತೆಯ ಭರದಲ್ಲಿ ಆಕೆಯ ಕಂಠವು ಬಿಗಿದದ್ದರಿಂದ ಆಕೆಯ ಬಾಯಿಂದ ಮಾತುಗಳು ಹೊರಡದಾದವು; ಆಕೆಯ ಆನಂದಾಶ್ರುಗಳು ತಂದೆಯ ಪಾದಪ್ರಕ್ಷಾಲನ ಮಾಡತೊಡಗಿದವು. ಆಗ ಬಾದಶಹನು ಶಹಾಜಾದೆಯನ್ನು ಎಬ್ಬಿಸುತ್ತ—''ಬದ್ರುನ್ನಿಸೇ, ಬೇಡ, ಇಷ್ಟರಲ್ಲಿ ನನ್ನ ಚರಣಗಳಿಗೆರಗಬೇಡ. ಉಪಕಾರಮಾಡುವ ದೊಡ್ಡಸ್ತಿಕೆಯು ನನ್ನ ಮನಸ್ಸಿಗೆ ಅಪರಿಚಿತವಾದದ್ದು! ಸ್ವಾತಂತ್ರ್ಯದಾನದಂಥ ಉಪಕಾರವು ಅತ್ಯಂತ ಉದಾರ ಬುದ್ಧಿಯ ರಾಜನಿಂದಲೂ ಆಗುವದು ಕಠಿಣವು! ಆದ್ದರಿಂದ ನನ್ನ ವಚನವು ಪೂರ್ಣವಾಗಲಿ; ಸ್ವಾತಂತ್ರ್ಯದ ಪತ್ರವು ಮಹೋಬದ ಪಂಚತರಾಯನ ಕೈಯಲ್ಲಿ ಬೀಳಲಿ; ಆಮೇಲೆ ನೀವು ನನ್ನ ಉಪಕಾರವನ್ನು ಸ್ಮರಿಸಿ! ಬುಂದೇಲಖಂಡದ ಸ್ವಾತಂತ್ರ್ಯದ ಸನದು ಈಗಿಂದೀಗಲೇ ಸಿದ್ಧವಾಗಬೇಕು. ಒಂದು ಕ್ಷಣದ ಅವಧಿಯಲ್ಲಿಯೂ ನನ್ನ ಮನಸ್ಸು ಬದಲಾಗಬಹುದು. ಬದ್ರುನ್ನಿಸೇ, ಸನದು, ಬರೆಯುವದಕ್ಕಾಗಿ ನೀನು ದೌತಿ–ಲೆಕ್ಕಣಿಕೆಯ ಮೊದಲಾದವನ್ನು ಸಿದ್ಧಮಾಡು, ಅಷ್ಟರಲ್ಲಿ ಆಯೇಷೆಯು ನನ್ನ ಸಿಕ್ಕಾ–ಮೊರ್ತಬುಗಳನ್ನು ತರುವಳು!

ತಾಯಿ–ಮಕ್ಕಳಿಬ್ಬರೂ ಬಾದಶಹನ ಇಚ್ಛೆಯನ್ನು ಕ್ಷಣದಲ್ಲಿ ಪೂರ್ಣಮಾಡಿದರು. ಸ್ವಾತಂತ್ರ್ಯದಾನದ ಸನದು ಬರೆದು ಸಿದ್ಧವಾಯಿತು. ಬಾದಶಹನು ತನ್ನ ಮೊಹರು ಮಾಡಲಿಕ್ಕೆ ಸಿದ್ಧನಾದನು. ಬದ್ರುನ್ನಿಸೆಯು ಆನಂದದಿಂದ ಸನದನ್ನು ನೋಡುತ್ತಲಿದ್ದಳು. ಅಷ್ಟರಲ್ಲಿ ಆ ಪವಿತ್ರ ಸ್ಥಳದ ಪಾವಿತ್ರ್ಯವನ್ನು ನಷ್ಟಪಡಿಸುತ್ತ ರೋಷನಾರ ಬೇಗಮೆಯು ಅಲ್ಲಿಗೆ ಬಂದು ಬಾದಶಹನ ಮುಂದೆ ನಿಂತಳು! ಆಗ ಬಾದಶಹನು ಘಾತಕಿಯಾದ ತನ್ನ ಆ ತಂಗಿಯ ಕಡೆಗೆ ಸಿಟ್ಟಿನಿಂದ ನೋಡುತ್ತ—''ಇಂದು ಯಾವ ಸಂಕಟದಲ್ಲಿ ನನ್ನನ್ನು ಕೆಡವಬೇಕೆಂದು ನೀನು ಯೋಚಿಸಿರುತ್ತೀ? ರಾತ್ರಿಯ ಹೊತ್ತಿನಲ್ಲಿ ಇಷ್ಟು ಅವಸರದಿಂದ ಬರಲಿಕ್ಕೆ ಅಂತಹ ದುರ್ಧರ ಪ್ರಸಂಗವೇನು ನಿನ್ನ ಮೇಲೆ ಬಂದಿತ್ತು?

ಬಾದಶಹನ ಈ ಭಾಷಣವನ್ನು ದುರ್ಲಕ್ಷಿಸಿ ರೋಷನಾರಳು ಸನದನ್ನು ನೋಡುತ್ತ— ''ಶಹಾನಶಹಾ, ನೀವು ಇದಾವ ಸನದನ್ನು ಸಿದ್ಧಮಾಡುತ್ತಿರುವಿರಿ?'' ಎಂದು ಕೇಳಿದಳು. ಆಗ ಔರಂಗಜೇಬನು ಬೇಗಮಳ ಮನಸ್ಸಿಗೆ ನಡುವಂತೆ ನಗುತ್ತ—''ಈ ಸನದಿನೊಳಗಿನ

ಸಂಗತಿಯನ್ನು ನೀನು ನೋಡಲೇಬೇಕು. ನಿನ್ನ ಕಪಟದ ಕೃತಿಯನ್ನು ಬೇರುಸಹಿತ ಕಿತ್ತು ಒಗೆದು ನನ್ನ ಮೇಲೆ ಮಹದುಪಕಾರಮಾಡಿದ ತರುಣ ಛತ್ರಸಾಲನ ಉಪಕಾರದ ಹೊರೆಯನ್ನು ಇಳಿಸುವದಕ್ಕಾಗಿ ನಾನು ಈ ಅಲ್ಪ ಪ್ರಯತ್ನವನ್ನು ಮಾಡುತ್ತಿರುವೆನು. ಈ ಸನದು ಬುಂದೇಲ ಖಂಡದ ಸ್ವಾತಂತ್ರ್ಯವನ್ನು ಒಪ್ಪಿಕೊಳ್ಳುತ್ತಿರುವದು.

ರೋಷನಾರ—ಏನು? ದಿಲ್ಲಿಯ ದರ್ಬಾರದ ಅಪಮಾನವಮಾಡುವವನಿಗೆ ಸ್ವಾತಂತ್ರ್ಯ ದಾನವೆ? ಈ ಸನದಿನ ಮೇಲೆ ಮೊಹರುಮಾಡುವ ಮೊದಲು ದಿಲ್ಲಿಯ ದರ್ಬಾರದ ಅಪಮಾನವು ಬಾದಶಹರ ಕಿವಿಗೆ ಬೀಳಲಿ! ಸರದಾರ ಸಾಹೇಬ! ಕಂಚುಕಿರಾವ! ಹೀಗೆ ಬನ್ನಿರಿ. ಚಂಪತರಾಯನ ಉದ್ಧತತನವನ್ನು ಬಾದಶಹರಿಗೆ ಅರಿಕೆಮಾಡಿಕೊಳ್ಳಿರಿ.

ಈ ಮೇರೆಗೆ ರೋಷನಾರಳು ನುಡಿಯಲು, ರಣದುಲ್ಲಾಖಾನನು ಮುಂದಕ್ಕೆ ಬಂದು ಬಾದಶಹನಿಗೆ ಕುರ್ನಿಸಾತ ಮಾಡಿ, ಚಂಪತರಾಯನು ತನ್ನನ್ನು ಸೆರೆಯಲ್ಲಿ ಹಾಕಿದ ಸಂಗತಿಯನ್ನೆಲ್ಲ ಸಾದ್ಯಂತವಾಗಿ ಉಪ್ಪುಕಾರ ಹಚ್ಚಿ ಹೇಳಿದನು! ಆಗ ದುರಭಿಮಾನಿಯಾದ ಬಾದಶಹನ ಸ್ಥಿತಿಯನ್ನು ವರ್ಣಿಸುವದೇನು? ಆತನ ಆ ಸಂತಪ್ತ ಮುದ್ರೆಯನ್ನು ನೋಡಿ ಆಯೇಷೆಯೂ, ಬದ್ರುನ್ನಿಸೆಯೂ ಕೈಗೆಬಂದ ತುತ್ತು ಬಾಯಿಗೆ ಬರುವ ಸಂಭವವಿಲ್ಲವೆಂದು ನಿರಾಶೆಪಟ್ಟರು. ಅಷ್ಟರಲ್ಲಿ ಬಾದಶಹನು ತನ್ನ ಕೈಯೊಳಗಿನ ಸನದನ್ನು ತಿರಸ್ಕಾರದಿಂದ ನೋಡುತ್ತ—"ಈ ಸನದನ್ನು ಈಗಲೇ ಸುಟ್ಟು ಬೂದಿಮಾಡತಕ್ಕದ್ದು; ಮತ್ತು ದಿಲ್ಲಿಯ ದರ್ಬಾರದ ಅಪಮಾನ ಮಾಡುವ ಮೋಹಬದ ಮನೆತನದ ನಾಶವು ಬೇಗನೆ ಹೇಗಾದೀ ತೆಂಬದನ್ನು ಕುರಿತು ಆಲೋಚಿಸಿ ನಿಶ್ಚಯಿಸತಕ್ಕದ್ದು! ರೋಷನಾರ, ಕ್ಷಣವೂ ವಿಲಂಬಮಾಡದೆ ದಿವಾಣ–ಇ–ಆಮದಲ್ಲಿ ದರ್ಬಾರು ನೆರೆಯುವದು; ಅಲ್ಲಿಗೆ ರಣದುಲ್ಲಾಖಾನನನ್ನೂ, ಕಂಚುಕಿರಾಯನನ್ನೂ ಕರೆದುಕೊಂಡು ಬಾ" ಎಂದು ಹೇಳಿ ಮಗಳನ್ನು ಕುರಿತು— "ಬದ್ರುನ್ನಿಸೇ, ಬುಂದೇಲಖಂಡದ ಸ್ವಾತಂತ್ರ್ಯದ ಸನದಿನ ಈ ಅವಸ್ಥೆಯನ್ನು ನೋಡು. ದಿಲ್ಲಿಯ ದರ್ಬಾರದ ಅಪಮಾನದ ಮುಂದೆ ಅಪತ್ಯಪ್ರೇಮದ ಆಟವು ನಡೆಯಲಾರದು," ಎಂದು ನುಡಿದು ಬಾದಶಹನು ಸನದನ್ನು ಚೂರು ಚೂರು ಮಾಡಿ ಹರಿದು ಚಲ್ಲಿ ಅದನ್ನು ತುಳಿಯುತ್ತ—"ಆಯೇಷೇ, ನಿನ್ನ ಬಾಂಧವರಿಗೆ ಸ್ವಾತಂತ್ರ್ಯ ಪ್ರಾಪ್ತಿಯಾಗಲಾರದು, ಬದ್ರುನ್ನಿಸೇ, ನಿನ್ನ ಪ್ರಿಯಕರನಿಗೆ ಸ್ವಾತಂತ್ರ್ಯದಾನವು ದೊರೆಯಲಾರದು" ಎಂದು ನುಡಿಯುತ್ತ ದಿವಾಣ–ಇ–ಆಮದ ಕಡೆಗೆ ನಡೆದನು! ದರ್ಬಾರದ ಕೆಲಸವು ಪೂರ್ಣವಾಗಿ, ಚಂಪತರಾಯನ ನಾಶದ ಉಪಾಯವು ನಿಶ್ಚಿತವಾಯಿತು! ಸ್ವಲ್ಪ ಹೊತ್ತಿನಲ್ಲಿ ಕಂಚುಕಿರಾಯನು ಒಂದು ಫರ್ಮಾನವನ್ನು ತಕ್ಕೊಂಡು ತನ್ನ ಮನಸ್ಸಿನಂತೆ ಆಯಿತೆಂದು ಕುಣಿಯುತ್ತ ಓರಛಾದ ಹಾದಿಯನ್ನು ಹಿಡಿದನು. ಬೆಳಗಾಗಲು, ಬದ್ರುನ್ನಿಸೆಯು ತನ್ನ ಮಹಾಲಿನಿಂದ ಎಲ್ಲಿಯೋ ಹೊರಟು ಹೋದಳೆಂಬ ಸುದ್ದಿಯು ಎಲ್ಲ ಕಡೆಗೂ ಹಬ್ಬಿತು! ಸ್ವಾತಂತ್ರ್ಯವು ದಾನದ ವಸ್ತುವೇ ಅಲ್ಲ!

# ಅಚ್ಚ ಕ್ಷಾತ್ರಧರ್ಮ!

ಪಹಾರಸಿಂಗನು ಸಾಯುವಾಗ ಆಡಿದ ಮಾತುಗಳು ಎಚ್ಚರಿಲ್ಲದವೆಂದು ಹೇಳಿ, ಹೀರಾದೇವಿಯು ಆತನ ಉತ್ತರಕ್ರಿಯೆಗಳನ್ನು ಯುವರಾಜ ವಿಮಲದೇವನ ಕೈಯಿಂದ ಮಾಡಿಸಿದಳು. ಪಹಾರಸಿಂಗನ ಪ್ರೇತಕ್ಕೆ ಅಗ್ನಿಸಂಸ್ಕಾರವಾದ ಕೂಡಲೆ ಚಂಪತರಾಯನು, ಯುವರಾಜ ಛತ್ರಸಾಲನನ್ನೂ ಯುವರಾಜ ದಳಪತರಾಯನನ್ನೂ, ತನ್ನ ಉಳಿದ ಪರಿವಾರವನ್ನೂ ಕೂಡಿಕೊಂಡು ಮಹೋಬದ ಹಾದಿಯನ್ನು ಹಿಡಿದನು. ವಿಮಲದೇವನ ಪಟ್ಟಾಭಿಷೇಕಕ್ಕೆ ಬರುವೆವೆಂದು ಹೇಳಿ, ಎಲ್ಲ ಅರಸರೂ ತಮ್ಮ ತಮ್ಮ ರಾಜಧಾನಿಗಳಿಗೆ ಹೋದರು. ಮೇಜವಾನಿಯ ದಿವಸ ಇಲ್ಲದ ಹಾಗಾಗಿದ್ದ ಸಭಾಕರಣನು ಪುನಃ ಹೀರಾದೇವಿಯ ಕಣ್ಣಿಗೆ ಬೀಳಲಿಲ್ಲ. ಆತನು ತನ್ನ ಸಾಗರದ ಕೋಟೆಯಲ್ಲಿದ್ದು, ದಿಲ್ಲಿಗೆ ಹೋದ ಕಂಚುಕಿರಾಯನು ಏನು ಮಾಡಿಕೊಂಡು ಬರುವನೆಂಬದರ ಹಾದಿಯನ್ನು ನೋಡುತ್ತಲಿದ್ದನು. ಪಹಾರಸಿಂಗನು ವಿಷಪ್ರಯೋಗದಿಂದ ಸತ್ತನೆಂಬ ಸುದ್ದಿಯು ಆತನಿಗೆ ಹತ್ತಿತು. ಈ ಆಪತ್ತಿಯ ಮೂಲಕವಾಗಿಯಾದರೂ ಹೀರಾದೇವಿಯು ಪಶ್ಚಾತ್ತಾಪಪಟ್ಟು, ತನ್ನ ನೀಚವರ್ತನದಿಂದ ಹಿಂದಿರುಗಬಹುದೆಂದು ಆತನು ಮಾಡಿದ್ದನು; ಆದರೆ ಅಂಥ ಆಪತ್ಕಾಲದಲ್ಲಿಯೂ ಆಕೆಯು ಯುದ್ಧಕ್ಕಾಗಿ ಸೈನ್ಯವನ್ನು ಒಳ್ಳೇ ಆಸಕ್ತಿಯಿಂದ ಕೂಡಿಸುತ್ತಿರುವಳೆಂಬ ಸುದ್ದಿಯು ಆತನಿಗೆ ಹತ್ತಿತು! ಇದರ ತರುವಾಯ ಸ್ವಲ್ಪ ದಿವಸಗಳಲ್ಲಿಯೇ ಹೀರಾದೇವಿಯು ಸಭಾಕರಣನಿಗೆ—"ನೀವು ಒಳಸಂಚಿನಲ್ಲಿ ಸೇರಿದ ಯಾವತ್ತು ರಾಜರ ಪ್ರಚಂಡ ಸೇನೆಯ ಆದಿಪತ್ಯವನ್ನು ಸ್ವೀಕರಿಸಿ, ಚಂಪತರಾಯನೊಡನೆ ಯುದ್ಧಕ್ಕೆ ಹೋಗಬೇಕೆಂದು" ಅಜ್ಞಾಪತ್ರವನ್ನು ತನ್ನ ಸಹಿ–ಮುದ್ರೆಗಳೊಡನೆ ಕಳುಹಿದಳು. ಪಾಪ! ಸಭಾಕರಣನು ಪ್ರತಿಜ್ಞೆಯ ಪಿಶಾಚವು ಬಡಿದವನಾದಕಾರಣ ಒಂದು ಕ್ಷಣವೂ ವಿಲಂಬಮಾಡದೆ ಓರಛಾಕ್ಕೆ ಹೊರಟುಹೋದನು.

ಓರಛಾದ ರಾಜಪ್ರಸಾದಕ್ಕೆ ಹೋದ ಕೂಡಲೇ ಆತನಿಗೆ ಮೊದಲು ಕಂಚುಕಿರಾಯನ ಭೆಟ್ಟಿಯಾಯಿತು. ಆ ವೃದ್ಧ ರಾಜನು ತಾನು ದಿಲ್ಲಿಯಿಂದ ಮಾಡಿಕೊಂಡು ಬಂದಿರುವ ಮಹಾಕಾರ್ಯದ ವರ್ಣನವನ್ನು ಒಳ್ಳೇ ಅಭಿಮಾನದಿಂದ ಸಭಾಕರಣನ ಮುಂದೆ ಮಾಡಿದನು. ದಿಲ್ಲೀಪತಿಯು ಚಂಪತರಾಯನ ಮೇಲೆ ಎಷ್ಟು ಸಿಟ್ಟಾಗಿರುವನೆಂಬದನ್ನು ವಿವರಿಸಿ ಹೇಳಿ—"ಸಭಾಕರಣಜೀ, ರೋಷನಾರಾ ಬೇಗಮೆಯ ಚಾತುರ್ಯವನ್ನೂ, ಕರ್ತವ್ಯದಕ್ಷತೆಯನ್ನೂ, ಎಷ್ಟು ವರ್ಣಿಸಿದರೂ ತೀರದು! ಆಕೆಯು ನಮ್ಮ ಹೀರಾದೇವಿಯ ಎರಡನೆಯ ಮೂರ್ತಿಯೇ ಆಗಿರುವಳು! ರಣದುಲ್ಲಾಖಾನನು ದಿಲ್ಲಿಗೆ ಬಂದು ರೋಷನಾರಳನ್ನು ಕಂಡಬಳಿಕ ಒಂದು ಕ್ಷಣದ ವಿಲಂಬವಾಗಿದ್ದರೆ, ಯಾವತ್ತು ಬುಂದೇಲಖಂಡದಮೇಲೆ ಎಂತಹ ವಿಪತ್ತು ಬರುತ್ತಿತ್ತೆಂಬದನ್ನು ನಾನೇನು ಹೇಳಲಿ? ಬುಂದೇಲಖಂಡದ ಸ್ವಾತಂತ್ರ್ಯದ ಸನದು, ಲೇಖನದ ಸೀಮೆಯು ಮುಗಿದುಹೋಗಿ ಸಿದ್ಧವಾಗಿತ್ತು, ದಿಲ್ಲೀಪತಿಯ ಮೊಹರು ಇನ್ನು ಆ ಸನದಿನ ಮೇಲೆ ಆಗತಕ್ಕದ್ದು, ಅಷ್ಟರಲ್ಲಿ ರೋಷನಾರಳು ರಾತ್ರಿಯೆಂದು ನೋಡದೆ, ರಣದುಲ್ಲಾಖಾನನನ್ನೂ,

ನನ್ನನ್ನೂ ಬಾದಶಹನ ಬಳಿಗೆ ಕರೆದುಕೊಂಡು ಹೋದದ್ದರಿಂದ, ಬುಂದೇಲಖಂಡವು ಸ್ವತಂತ್ರವಾಗುವ ದೊಡ್ಡ ವಿಪತ್ತಿನ ಪರಾಭವವಾಯಿತು. ಹಾಗಾಗದಿದ್ದರೆ ಚಂಪತರಾಯನ ಕೀರ್ತಿಯು ನಾಲ್ಕು ಕಡೆಗೆ ಹಬ್ಬಿ, ನಮ್ಮ ಒಳಸಂಚು ವ್ಯರ್ಥವಾಗುತ್ತಿತ್ತಲ್ಲದೆ, ನಮಗೆ ಪ್ರಾಪ್ತವಾಗಿರುವ ದಿಲ್ಲೀಪತಿಯ ಅಬಾಧಿತ ಸೇವೆಯ ಸುಯೋಗವು ತಪ್ಪಿ ಹೋಗುತ್ತಿತ್ತು! ಅದರೆ ರಣದುಲ್ಲಾಖಾನನು ತನ್ನ ಬಂದಿವಾಸದ ಪ್ರಸಂಗವನ್ನು ಸವಿಸ್ತಾರವಾಗಿ ಹೇಳಿದ್ದರಿಂದ, ಪೂರಾ ಬರೆದುಹೋಗಿದ್ದ ಸನದು ಚೂರುಚೂರು ಆಯಿತು. ನಮ್ಮ ಒಳಸಂಚಿಗೆ ಸಾಮ್ರಾಜ್ಯ ನಿಷ್ಠೆಯೆಂದು ಹೇಳುವ ಈ ಮಹತ್ವದ ಸನದನ್ನು ಬಾದಶಹರು ನಿಮ್ಮ ಕೈಯಲ್ಲಿ ಕೊಡಬೇಕೆಂದು ಹೇಳಿರುತ್ತಾರೆ,'' ಎಂದು ನುಡಿದು, ದಿಲ್ಲಿಯಿಂದ ತಾನು ತಂದಿದ್ದ ಫರ್ಮಾನವನ್ನು ಸಭಾಕರಣನ ಕೈಯಲ್ಲಿ ಕೊಟ್ಟನು. ಆಗ ಸಭಾಕರಣನು, ಆ ಕಾಗದವನ್ನೂ, ಅದನ್ನು ಅಭಿಮಾನದಿಂದ ತನ್ನ ಕೈಯಲ್ಲಿ ಕೊಡುತ್ತಿರುವ ಕಂಚುಕಿರಾಯನನ್ನೂ ತಿರಸ್ಕಾರದಿಂದ ನೋಡುತ್ತ ಕಂಚುಕಿ ರಾಯನಿಗೆ—''ದಿಲ್ಲೀಪತಿಯು ಏನನ್ನುವನು? ಆತನು ಈ ಫರ್ಮಾನದಲ್ಲಿ ಏನು ಬರೆದಿರುವನು?'' ಎಂದು ಕೇಳಿದನು!

ಕಂಚುಕಿರಾಯನು ರಾಜಭಾಷೆಯಲ್ಲಿಯ ತನ್ನ ಅಗಾಧ ಜ್ಞಾನಕ್ಕಾಗಿ ಅಹಂಕಾರಪಡುತ್ತ ಅಚ್ಚ ಉರ್ದೂ ಭಾಷೆಯಲ್ಲಿ ಬರೆದಿರುವ ಆ ಫರ್ಮಾನದ ಭಾಷಾಂತರವನ್ನು ಮಾಡಲು ಸಿದ್ಧನಾದನು. ಅಷ್ಟರಲ್ಲಿ ಹೀರಾದೇವಿಯು ತನ್ನ ವೈಧವ್ಯದ ನಾಚಿಕೆಯು ಸ್ವಲ್ಪವೂ ಇಲ್ಲದೆ ಉತ್ಸಾಹದಿಂದ ಕುಣಿಯುತ್ತ ಅಲ್ಲಿಗೆ ಬಂದು—''ಸಭಾಕರಣ, ನಿಮ್ಮನ್ನು ನಾನು ಮನಃ ಪೂರ್ವವಾಗಿ ಅಭಿನಂದಿಸುವೆನು. ನೀವು ದಿಲ್ಲೀಪತಿಯ ಸನ್ಮಾನ್ಯ ಸರದಾರರಾಗಿರುತ್ತೀರಿ. ದಿಲ್ಲೀಪತಿಯ ಭಯಂಕರ ಶತ್ರುವಾಗಿರುವ ಚಂಪತರಾಯನ ಶಾಸನಮಾಡುವದಕ್ಕಾಗಿ ಬಾದಶಹನು ನಿಮ್ಮನ್ನು ನಿಯಮಿಸಿರುವನು. ಬುಂದೇಲಖಂಡದೊಳಗಿನ ಯಾವತ್ತು ಮಾಂಡಲೀಕ ರಾಜರ ಸೈನ್ಯಗಳನ್ನು ಒಟ್ಟುಗೂಡಿಸಿಕೊಂಡು ನೀವು ಮಹೋಬದ ಮೇಲೆ ಸಾಗಿಹೋಗಬೇಕೆಂದು ದಿಲ್ಲೀಪತಿಯು ಆಜ್ಞಾಪಿಸುವನಲ್ಲದೆ, ತಾನು ಸ್ವತಃ ಪ್ರಚಂಡ ಸೈನ್ಯವನ್ನು ತಕ್ಕೊಂಡು ಬಂದು ನಿಮ್ಮನ್ನು ಕೂಡಿಕೊಳ್ಳುವವನಿರುವನು. ಚಂಪತರಾಯನನ್ನು ನಾಶ ಮಾಡುವದಕ್ಕಾಗಿ ನಾವೆಲ್ಲರೂ ಕೂಡಿ ಆಲೋಚಿಸಿದ ಆಲೋಚನೆಯು ಸಫಲವಾಗುವ ಹಾಗೆ ತೋರುತ್ತದೆ. ಕಂಚುಕಿರಾಯನು ತನ್ನ ಕೆಲಸವನ್ನು ಉತ್ತಮ ರೀತಿಯಿಂದ ಮಾಡಿದನು. ಬುಂದೇಲಖಂಡದೊಳಗಿನ ಬಹುತರ ಎಲ್ಲ ಮಾಂಡಲಿಕರ ಸೈನ್ಯಗಳು ನಿಮ್ಮ ಹಾದಿಯನ್ನು ನೋಡುತ್ತ ಕುಳಿತುಕೊಂಡಿರುವವು. ನಾಡದು ಗರ್ಗಾಚಾರ್ಯರ ಮುಹೂರ್ತದಲ್ಲಿ ಪ್ರಯಾಣ ಬೆಳಿಸಬೇಕೆಂದು ಸದರಜೋಯಿಸರು ಮುಹೂರ್ತ ತೆಗೆದುಕೊಟ್ಟಿರುವರು. ಆ ದಿವಸ ನೀವು ನಿಮ್ಮ ಪ್ರತಿಜ್ಞೆಯನ್ನು ಪೂರ್ಣಮಾಡು ವದಕ್ಕಾಗಿಯೂ, ದಿಲ್ಲೀಪತಿಯ ಅಪ್ಪಣೆಯನ್ನು ಪಾಲಿಸುವದಕ್ಕಾಗಿಯೂ ಪ್ರಚಂಡ ಸೈನ್ಯದ ಆಧಿಪತ್ಯವನ್ನು ಕೈಕೊಳ್ಳಬೇಕು'' ಎಂದು ಹೇಳಿದಳು. ಸಭಾಕರಣನು ಮಹೋಬದ ಮೇಲೆ ಸಾಗಿಹೋಗುವ ಸೈನ್ಯದ ಅಧಿಪತ್ಯವನ್ನು ಬಹಳ ಅಸಮಾಧಾನದಿಂದ ಕೈಕೊಂಡನು. ದೇಶದ ಈ ಸ್ವಾತಂತ್ರ್ಯ ವಿಘಾತಕ ಕಾರ್ಯಕ್ಕೆ ತಾನು

ಮುಂದಾಳಾಗಿರುವದು ಕೇವಲ ನರಕಸಾಧನವೆಂದು ಆತನು ತಿಳಿದನು; ಆದರೆ ಮಾಡುತ್ತಾನೇನು? ಪ್ರತಿಜ್ಞೆಯ ಹಗ್ಗದಿಂದ ಆತನು ಗಟ್ಟಿಮುಟ್ಟಿಯಾಗಿ ಕಟ್ಟಿಹೋಗಿದ್ದನಲ್ಲವೆ? ಆ ಸತ್ಯವಾದಿಯಾದ ಕ್ಷತ್ರಿಯ ವೀರನು ಮಹೋಬದ ಸನಿಸನಿಯಕ್ಕೆ ಹೋದಹೋದಂತೆ ಪ್ರತಿಜ್ಞೆ ಸ್ಮರಣದಿಂದ ವೀರಾವೇಶಗೊಳ್ಳಹತ್ತಿದನು. ಪ್ರತಿಜ್ಞೆಗಾಗಿ ಪ್ರಾಣಕೊಡುವ ರಜಪೂತರ ಪದ್ಧತಿಯು ಪ್ರಸಿದ್ಧವಾದದ್ದು.

ಇತ್ತ ಚಂಪತರಾಯನು ವಿಜಯೆಯ ಮುಖದಿಂದ ಬುಂದೇಲಖಂಡದ ಎಲ್ಲ ಅರಸರ ಒಳಸಂಚಿನ ಸುದ್ದಿಯನ್ನು ಕೇಳಿದಂದಿನಿಂದ ಸಂತಾಪಗೊಂಡಿದ್ದನು. ಈ ದೇಶದ್ರೋಹಿಗಳಾದ ಅರಸರ ನಾಶವನ್ನು ಮೊದಲು ಮಾಡಬೇಕೆಂದು ಆತನು ನಿಶ್ಚಯಿಸಿದನು, ಆತನು ಓರಛಾದಿಂದ ಮಹೋಬಕ್ಕೆ ಬಂದಕೂಡಲೆ ಸೈನ್ಯವನ್ನು ಕೂಡಿಸತೊಡಗಿದನು. ಮಹೋಬದ ಅರಮನೆಯ ಮುಂದೆ ಪ್ರತಿದಿನ ಮುಂಜಾವಿನಲ್ಲಿ ಶಸ್ತ್ರಗಳ ರಾಶಿಗೆ ರಾಶಿಯು ಬೀಳಬೇಕು, ಸಂಜೆಯೊಳಗೆ ಅವನೆಲ್ಲ ಸೈನಿಕರು ತಕ್ಕೊಂಡು ಹೋಗಬೇಕು. ಈ ಕ್ರಮವು ಅಖಂಡ ಹದಿನೈದು ದಿನಗಳವರೆಗೆ ಸಾಗಿತ್ತು. ಇಷ್ಟು ಶಸ್ತ್ರಗಳ, ಹಾಗು ಇಷ್ಟು ಶಸ್ತ್ರಗಳನ್ನು ಉಪಯೋಗಿಸುವ ವೀರರ ಸಾಮರ್ಥ್ಯದ ಉಪಯೋಗವು ತಮ್ಮ ಬಂಧುಗಳ ನಾಶಕ್ಕಾಗಿಯೇ ಆಗುವದನ್ನು ನೆನಿಸಿ ಛತ್ರಸಾಲನು ದುಃಖಪಟ್ಟನು. ''ಹೀಗೆ ನಮ್ಮ ಬಂಧುಗಳನ್ನು ದೇಶದ್ರೋಹಿಗಳೆಂಬ ಕಾರಣದಿಂದ ಸಂಹಾರಮಾಡಿದ್ದರೆ, ಮುಂದೆ ಯಾರ ಬೆಂಬಲದಿಂದ ನಾವು ದಿಲ್ಲೀಪತಿಯೊಡನೆ ಕಾದಿ ಸ್ವಾತಂತ್ರ್ಯವನ್ನು ಪಡೆಯಬೇಕು? ಸ್ವಾತಂತ್ರ್ಯವನ್ನಾದರೂ ಯಾರ ಸಲುವಾಗಿ ಸಂಪಾದಿಸಬೇಕು? ಸಭಾಕರಣನಂಥ ವೀರಾಗ್ರೇಸರನ ಮನಸ್ಸಿನೊಳಗಿನ ದ್ವೇಷವನ್ನು ಯೋಗ್ಯ ಪ್ರಯತ್ನದಿಂದಾಗಲಿ, ಸೋತಾಗಲಿ, ಕಡೆಗೆ ಕ್ಷಮೆ ಬೇಡಿಯಾಗಲಿ ದೂರಮಾಡಿದರೆ ಎಷ್ಟು ಹಿತವಾಗಬಹುದು. ಬುಂದೇಲ ಖಂಡದ ಈ ರಾಜರನ್ನು ಶತ್ರುಗಳೆಂದು ತಿಳಿದು ಅವರ ಮೇಲೆ ಶಸ್ತ್ರವೆತ್ತುವದಕ್ಕಿಂತ ಅವರ ಕಲಂಕಿತ ಮನಸ್ಸನ್ನು ಸ್ವಚ್ಛವಾಗಮಾಡಿ ಅವರನ್ನು ಸ್ವಾತಂತ್ರ್ಯ ಪ್ರಾಪ್ತಿಗಾಗಿ ಕಾದುವಂತೆ ಮಾಡಿದರೆ ಸ್ವಾತಂತ್ರ್ಯ ಪ್ರಾಪ್ತಿಯ ಮಾರ್ಗವು ಎಷ್ಟು ಸುಲಭವಾಗಬಹುದು! ತಮ್ಮ ತಮ್ಮೊಳಗೆ ಹೊಡೆದಾಡಿ ಬುಂದೇಲಖಂಡದ ಉಳಿದಿರುವ ಸಾಮರ್ಥ್ಯವನ್ನು ಇಲ್ಲದಂತೆ ಮಾಡಿಕೊಳ್ಳುವದಕ್ಕಿಂತ, ಆ ಸಾಮರ್ಥ್ಯವನ್ನು ಒಕ್ಕಟ್ಟಿನ ಹಗ್ಗದಿಂದ ಒಟ್ಟುಗೂಡಿಸಿ ಬಿಗಿದರೆ ಅದು ಎಷ್ಟು ಅಭೇದ್ಯವೂ, ಅಚಿಂತ್ಯವೂ, ಬಲಾಢ್ಯವೂ ಆಗಬಹುದು!'' ಎಂಬಿವೇ ಮೊದಲಾದ ವಿಚಾರಗಳು ಛತ್ರಸಾಲನ ಮನಸ್ಸಿನಲ್ಲಿ ಬಂದು, ಆತನು ತಳಮಳಿಸತೊಡಗುವನು. ತನ್ನ ತಂದೆಯು ಸ್ವಾತಂತ್ರ್ಯಕ್ಕಾಗಿ ಮನಃಪೂರ್ವಕವಾಗಿ ಯತ್ನಿಸುವದನ್ನು ನೋಡಿ ಆ ತರುಣ ಯುವರಾಜನಿಗೆ ಸಮಾಧಾನವಾಗುತ್ತಿದ್ದರೂ, ಸರಳ ಸ್ವಭಾವದ ತನ್ನ ತಂದೆಯ ಈ ಸ್ವಜನ ಘಾತದ ಮಾರ್ಗಕ್ಕಾಗಿ ಆತನು ನೊಂದುಕೊಳ್ಳುತ್ತಿದ್ದನು. ಸಭಾಕರಣನ ಪ್ರಬಲ ಸೈನ್ಯವು ಮಹೋಬದಿಂದ ಐದು ಹರದಾರಿಯ ಮೇಲೆ ಬಂದು ಇಳಿಯಿತು. ಚಂಪತರಾಯನ ಮಸ್ತಕವು ಕ್ರೋಧದಿಂದ ತಪ್ತವಾಯಿತು. ಪುತ್ರದರ್ಮಕ್ಕನುಸರಿಸಿ ಛತ್ರಸಾಲನು ಎಷ್ಟೋ ಸೈನ್ಯದ ಆಧಿಪತ್ಯವನ್ನು ಸ್ವೀಕರಿಸಬೇಕಾಯಿತು. ದಳಪತರಾಯನು ತನ್ನ ತಂದೆ ಸಭಾಕರಣನೊಡನೆ

ಯುದ್ಧಮಾಡುವದಕ್ಕಾಗಿ ಸಜ್ಜಾದನು. ಚಂಪತರಾಯನು ಕುದುರೆಯನ್ನು ಹತ್ತಿ ತನ್ನ ಸೈನ್ಯವನ್ನು ಸಜ್ಜುಗೊಳಿಸುತ್ತ ಅದರ ಸುತ್ತಮುತ್ತು ಸಂಚರಿಸತೊಡಗಿದನು. ಸೈನ್ಯವು ಸಾಗಿಹೋಗುವ ಸೂಚನೆಯನ್ನು ಮಾಡುವ ರಣವಾದ್ಯಗಳು ಕರ್ಕಶಧ್ವನಿಮಾಡತೊಡಗಿದವು.

ಹೀಗೆ ಉಭಯ ಪಕ್ಷದ ಪ್ರಚಂಡ ಸೈನ್ಯಗಳು ಯಾವ ಹಿತೊದ್ದೇಶವೂ ಸಾಧಿಸದಿರುವ ನಾಶಕಾರಕ ಮಾರ್ಗ ಹಿಡಿದು ಕಾದತೊಡಗಿದವು! ಒಂದು ಮನೆತನದೊಳಗಿನ ಅಣ್ಣ–ತಮ್ಮಂದಿರು ಹೊಟ್ಟೆಯಕಿಚ್ಚಿನಿಂದ ಒಬ್ಬರ ನಾಶವನ್ನೊಬ್ಬರು ಮಾಡಿಕೊಳ್ಳಲಿಕ್ಕೆ ನಿಂತಲ್ಲಿ ಎಷ್ಟಾದರೂ ಮನೆತನದ ನಾಶವೇ ಆದೀತಲ್ಲದೆ, ಮನೆತನದ ಹಿತವಾಗಲಾರದು. ಅದೇ ಮಾತು ದೇಶಬಾಂಧವರಿಗೂ ಹತ್ತುವದು. ಬುಂದೇಲಖಂಡದ ಕ್ಷತ್ರಿಯರು ಪರಸ್ಪರ ಹೊಟ್ಟೇಕಿಚ್ಚಿನಿಂದ ಕಾದಹತ್ತಿದ್ದರಿಂದ ಬುಂದೇಲವು ಕಸುವುಗೆಟ್ಟು ಕುರಿಯಂತೆ ಆಗುವದರಿಂದ ಔರಂಗಜೇಬನಂಥ ಸೊಕ್ಕಿದ ಸಿಂಹಕ್ಕೆ ಸುಲಭ ಸಾಧ್ಯ ಆಹಾರ ಮಾತ್ರ ಆಗಬಹುದಾಗಿತ್ತು. ಈ ವಿಚಾರವು ಛತ್ರಸಾಲನ ಮನಸ್ಸಿನಲ್ಲಿ ಬಂದದ್ದರಿಂದ ಆತನು ಯುದ್ಧವ್ಯಾಪಾರದಲ್ಲಿ ಉದಾಸೀನನಾಗಿದ್ದನು. ಯುದ್ಧದ ಈ ಮೊದಲನೆಯ ದಿವಸ ಚಂಪತರಾಯನಿಗೆ ಜಯವಾಯಿತು. ಈ ದಿನ ದಳಪತರಾಯನು ಬಹು ಪರಾಕ್ರಮದಿಂದ ತನ್ನ ತಂದೆಯೊಡನೆ ಕಾದಿದನು. ಇದನ್ನು ನೋಡಿ ಛತ್ರಸಾಲನು—''ಈ ತಂದೆ–ಮಕ್ಕಳು ಹೀಗೆ ವಿರೋಧಿಗಳಾಗಿ ಕಾದುವದನ್ನು ಬಿಟ್ಟು, ಇಬ್ಬರೂ ಕೂಡಿ ಮೊಗಲ ಬಾದಶಹನೊಡನೆ ಕಾದಿದ್ದರೆ ಸ್ವಾತಂತ್ರ್ಯವು ಎಷ್ಟು ಸನಿಯಕ್ಕೆ ಬಂದ ಹಾಗಾಗುತ್ತಿತ್ತಲ್ಲ'' ಎಂದು ಚಿಂತಿಸುತ್ತ ಆ ತಂದೆ– ಮಕ್ಕಳ ಯುದ್ಧವನ್ನು ಅಸಮಾಧಾನದಿಂದ ನೋಡುತ್ತನಿಂತುಕೊಂಡಿದ್ದನು. ಚಂಪತರಾಯನು ತಾನು ಹಿಡಿದ ಮಾರ್ಗವು ಸ್ವಾತಂತ್ರ್ಯಪ್ರಾಪ್ತಿಗೆ ಅನುಕೂಲವಾದದ್ದೆಂದು ನಂಬಿಕೊಂಡದ್ದರಿಂದ, ಅಂದಿನ ಯುದ್ಧದಲ್ಲಿ ಜೀವದ ಹಂಗು ಇಲ್ಲದೆ ಕಾದಿದನು. ಶೂರನಾದ ಸಭಾಕರಣನು ಮೂರುಸಾರೆ ಚಂಪತರಾಯನ ಸೈನ್ಯದಮೇಲೆ ಆವೇಶದಿಂದ ನುಗ್ಗಿ ಬಂದನು; ಆದರೆ ದಳಪತರಾಯನ ಪರಾಕ್ರಮದ ಮುಂದೆ ಆತನು ನಿಲ್ಲಲಾರದೆ ಮೂರುಸಾರೆಯೂ ಹಿಂದಕ್ಕೆ ಸರಿಯಬೇಕಾಯಿತು. ದಳಪತರಾಯನ ಮೂರನೆಯಸಾರೆಯ ಸಂತಾಪದ ಹೊಡತದಿಂದಂತು, ಸಭಾಕರಣನ ಸೈನ್ಯವು ಒಂದು ಹರದಾರಿ ಹಿಂದಕ್ಕೆ ಸರಿಯಿತು! ಸಭಾಕರಣನು ಮಗನ ಈ ಶೌರ್ಯವನ್ನು ಮನಃಪೂರ್ವಕವಾಗಿ ಅಭಿನಂದಿಸಿದನು! ದಳಪತರಾಯನ ಪರಾಕ್ರಮವನ್ನು ಹೊಗಳುತ್ತ ಚಂಪತರಾಯನ ಸೈನ್ಯವು ಶಿಬಿರದ ಕಡೆಗೆ ಸಾಗಿತ್ತು, ಆ ದಿವಸ ಛತ್ರಸಾಲನು ತನ್ನ ಖಡ್ಗವನ್ನು ಒರೆಯಿಂದ ತೆಗೆಯಲೇ ಇಲ್ಲ.

ಎರಡನೆಯ ದಿವಸ ಭಯಂಕರ ಯುದ್ಧವು ಆರಂಭವಾಗುವ ಮೊದಲು ಛತ್ರಸಾಲನು ತನ್ನ ತಂದೆಯನ್ನು ಕಾಣುವದಕ್ಕಾಗಿ ಹೋದನು. ಆಗ ಚಂಪತರಾಯನು ತನ್ನ ಅಧಿಕಾರಿಗಳಿಗೆ ನಾಳಿನ ಯುದ್ಧವನ್ನು ಹೇಗೆ ಮಾಡಬೇಕೆಂಬುದನ್ನು ತಿಳಿಸುತ್ತಲಿದ್ದನು. ಶೂರರಾದ ದಳಪತರಾಯನೇ ಮೊದಲಾದವರು ಅದನ್ನು ಮನಸ್ಸುಗೊಟ್ಟು ಕೇಳುತ್ತಿದ್ದರು. ಚಂಪತರಾಯನ ಮಾತು ಮುಗಿದಕೂಡಲೆ ಯಾವತ್ತು ವೀರರ ಮನಸ್ಸಿನಲ್ಲಿ ಶೌರ್ಯದ ಸಂಚಾರವಾಗುವದಕ್ಕಾಗಿ

ಕವನಗಳ ಗಾಯನವನ್ನು ತಾನು ಯಾವಾಗ ಮಾಡೇನೆಂದು ಚಾರಣದೇವನು ಹಾದಿಯ ನೋಡುತ್ತಿದ್ದನು. ಅಷ್ಟರಲ್ಲಿ ಛತ್ರಸಾಲನು ಮುಂದಕ್ಕೆ ಬಂದು ತಂದೆಯನ್ನು ಕುರಿತು— ''ಅಪ್ಪಾ, ಈ ಯುದ್ಧವೆಂದರೆ ನಿರ್ದಯದ ಪರಮಾವಧಿಯು! ಈ ಬಗೆಯ ನಮ್ಮನಮ್ಮೊಳಗಿನ ಯುದ್ಧದಿಂದ ಬುಂದೇಲಖಂಡದ ಕಲ್ಯಾಣವೇನಾಗುವದು? ಬುಂದೇಲಖಂಡದೊಳಗಿನ ಈ ಜನಸಂಹಾರವು ಬುಂದೇಲಖಂಡದ ಯಾವ ಹಿತವನ್ನು ಸಾಧಿಸುವದು? ಈ ದಾಯಾದ್ಯ ಮತ್ಸರದಲ್ಲಿಯೇ ಬುಂದೇಲಖಂಡದ ಶಕ್ತಿಸರ್ವಸ್ವದ ನಾಶವಾದರೆ, ಮತ್ತು ಈ ನಮ್ಮೊಳಗಿನ ದ್ವೇಷದಲ್ಲಿಯೇ ಬುಂದೇಲಖಂಡದ ಅಪ್ರತಿಮ ಕ್ಷಾತ್ರತೇಜದ ಲಯವಾದರೆ, ಅದರಂತೆ ಈ ಕಲಹಾಗ್ನಿಯಲ್ಲಿಯೇ ನಮ್ಮಲ್ಲಿಯ ಆರಿಸಿದ ವೀರರ ಆಹುತಿಯಾದರೆ ಬುಂದೇಲಖಂಡದ ಸ್ವಾತಂತ್ರ್ಯದ ಕಾರ್ಯವು ಹೇಗೆ ಕೊನೆಗಾಣುವದು? ಅಪ್ಪಾ, ಮುಂದೆ ಯುದ್ಧವನ್ನು ಸಾಗಿಸುವದರಿಂದ ಬುಂದೇಲಖಂಡದ ಹಿತವು ಸ್ವಲ್ಪವೂ ಸಾಧಿಸಲಾರದೆಂದು ನನಗೆ ತೋರುತ್ತದೆ!''

ಮಗನ ಈ ಮಾತುಗಳನ್ನು ಕೇಳಿ ಚಂಪತರಾಯನು ಆಶ್ಚರ್ಯದಿಂದ—''ಯಾರು? ಛತ್ರಸಾಲ, ಈ ಮಾತುಗಳನ್ನು ಆಡುವ ನೀನು ಛತ್ರಸಾಲನೇ ಏನು? ಬುಂದೇಲದ ಹಿತವು ಯಾತರಿಂದಾಗುವದೆಂಬ ಮಾತು ನನಗೆ ಸಂಪೂರ್ಣ ಗೊತ್ತಿರುತ್ತದೆ. ಸ್ವಾತಂತ್ರ್ಯದೇವಿಯ ಭಕ್ತಿಯಲ್ಲಿ ಆಯುಷ್ಯವನ್ನು ಕಳೆದಿದ್ದ ವೀರರಿಗೆ ಹುಡುಗರು ಬುದ್ಧಿಯ ಹೇಳುವದೆಂದರೆ ಸಾಹಸವೇ ಸರಿ; ಛತ್ರಸಾಲ, ನಿನ್ನ ಇಂದಿನ ಹೇಡಿತನದ ಮಾತಿಗಾಗಿ ಚಂಪತರಾಯನು ನಿನ್ನನ್ನು ಕ್ಷಮಿಸುವನು. ಇಂಥ ಅಂಜುಬುರುಕನದ ಮಾತನ್ನು ಇನ್ನೊಮ್ಮೆ ಆಡಿದರೆ'' ಇಷ್ಟಕ್ಕೆ ಚಂಪತರಾಯನು ತನ್ನ ಸಿಟ್ಟನ್ನು ನುಂಗಿಕೊಂಡನು. ಚಾರಣದೇವನು ಉಚ್ಚಸ್ವರದಿಂದ ಬುಂದೇಲಖಂಡದೊಳಗಿನ ವೀರರ ಶೌರ್ಯದ ಗಾಯನಮಾಡತೊಡಗಿದನು. ಚಂಪತರಾಯ, ದಳಪತರಾಯ, ಬೇರೆ ವೀರರು ಇವರಲ್ಲಿ ವೀರಶ್ರೀಯು ಸಂಚಾರವಾಯಿತು! ಯುದ್ಧದ ಕೊಂಬು ದೊಡ್ಡಧ್ವನಿಯಿಂದ ಕೂಗತೊಡಗಿತು; ಆಕಾಶವನ್ನು ಭೇದಿಸುವಂತೆ ವಿಂಧ್ಯವಾಸಿನಿಯ ಜಯಜಯಕಾರಧ್ವನಿಯು ಆಗತೊಡಗಿತು. ನಿಕರದ ಕಾಳಗವು ಆರಂಭವಾಗಿ ಜನಸಂಹಾರದ ಕಾರ್ಯವು ಭರದಿಂದ ನಡೆಯಿತು; ಆದರೆ ಆ ದಿವಸವೂ ಛತ್ರಸಾಲನು ಯುದ್ಧಮಾಡಲಿಲ್ಲ, ಆ ದಿವಸವೂ ಆತನು ತನ್ನ ಖಡ್ಗವನ್ನು ಒರೆಯೊಳಗಿಂದ ಹಿರಿಯಲಿಲ್ಲ.

ತಮ್ಮತಮ್ಮೊಳಗೆ ನಡೆದಿದ್ದ ಬುಂದೇಲಖಂಡದೊಳಗಿನ ಈ ಯುದ್ಧವು ಜಯಪ್ರಾಪ್ತಿಯಾಗುವವರೆಗೆ ಎಷ್ಟೋದಿವಸ ನಡೆದಿತ್ತು. ಇಷ್ಟು ದಿವಸಗಳಲ್ಲಿ ಚಂಪತರಾಯನು ಅಪಕೀರ್ತಿಯನ್ನು ಪಡೆದು ಎಂದೂ ಹಿಂದಿರುಗಿ ಹೋಗಲಿಲ್ಲ; ಆದರೆ ಇದೇ ಕ್ರಮವು ಇನ್ನೂ ಕೆಲವು ದಿವಸ ನಡೆದರೆ, ದಿನದಿನಕ್ಕೆ ಸೊರಗತೊಡಗಿದ್ದ ತನ್ನ ವೀರರ ಸಂಖ್ಯೆಯು ಕಡೆಗೆ ನಾಮಶೇಷವಾಗುವದೋ ಏನೋ ಎಂಬ ಸಂಶಯವು ಚಂಪತರಾಯನ ಮನಸ್ಸಿನಲ್ಲಿ ಉತ್ಪನ್ನವಾಯಿತು. ಸಭಾಕರಣನ ಸೈನ್ಯವಾದರೂ ಅಲ್ಪ ಸ್ವಲ್ಪ ನಾಶವಾಗಿದ್ದಿಲ್ಲ; ಆದರೆ ಹೀರಾದೇವಿಯು ಮೇಲಿಂದ ಮೇಲೆ ಹೊಸ ಸೈನ್ಯದ ಪೂರೈಕೆ ಮಾಡಿಕೊಡುತ್ತಿದ್ದದ್ದರಿಂದ, ಸಭಾಕರಣನ ಸೈನ್ಯವು ಈವರೆಗೆ ತಡೆದು ನಿಂತಿತ್ತು. ಇಷ್ಟುದಿವಸ ಯುದ್ಧನಡೆದರೂ ಚಂಪತರಾಯನ ವರ್ಚಸ್ಸಿಗೆ

ಚ್ಯುತಿಯುಂಟಾಗದೆ, ಆತನ ವಿರುದ್ಧಪಕ್ಷದ ಬುಂದೇಲಿಗಳ ನಾಶವು ವಿಶೇಷವಾಗಿ ಆದದ್ದನ್ನು ಕೇಳಿ, ಔರಂಗಜೇಬನು ಸ್ವತಃ ಪ್ರಚಂಡ ಸೈನ್ಯದೊಡನೆ ಬುಂದೇಲ ಖಂಡದ ಮೇಲೆ ಸಾಗಿಬಂದನು. ಈ ಸುದ್ದಿಯನ್ನು ಕೇಳಿ ಚಂಪತರಾಯನು ಎದೆಗುಂದದೆ ಬಾದಶಹನೊಡನೆ ಯುದ್ಧಕ್ಕೆ ಸಿದ್ಧನಾದನು. ಕಲ್ಪನೆಗಿಂತ ಬೇಗನೆ ಬಾದಶಹನ ಸೈನ್ಯವು ತನ್ನ ಮೇಲೆ ಸಾಗಿಬಂದಿತೆಂಬ ಚಿಂತೆಯು ಆ ವೀರಪುಂಗವನಿಗೆ ಲೇಶವೂ ಉಂಟಾಗಲಿಲ್ಲ! ಈವರೆಗೆ ಸಮರಾಂಗಣದಲ್ಲಿ ತಟಸ್ಥವೃತ್ತಿಯಿಂದ ಕಾಲಹರಣ ಮಾಡಿದ್ದ ಛತ್ರಸಾಲನೂ, ಇಂದು ಒರೆಯಿಂದ ಶಸ್ತ್ರವನ್ನು ಹಿರಿದು ಆಕಾಶಮಧ್ಯದಲ್ಲಿರುವ ಸೂರ್ಯನಂತೆ ಪ್ರಕಾಶಿಸತೊಡಗಿದನು. ಛತ್ರಸಾಲನ ಈ ಅದ್ವಿತೀಯ ಉತ್ಸಾಹವನ್ನು ನೋಡಿ, ಚಂಪತರಾಯನ ಉಳಿದ ಸೈನಿಕರಿಗೆ ಹೊಸ ಉತ್ಸಾಹವು ಉತ್ಪನ್ನವಾಯಿತು. ಅವರು ಬಾದಶಹನ, ಹಾಗು ಸಭಾಕರಣನ ಮಿಶ್ರ ಸೈನ್ಯಕ್ಕೆ ಯಮನಂತೆ ತೋರಹತ್ತಿದರು. ಮಹಾ ಕಪಟಿಯಾದ ಔರಂಗಜೇಬನು ಸಭಾಕರಣನ ಸಹಾಯದಿಂದ ಆಯಕಟ್ಟಿನ ಸ್ಥಳನೋಡಿ ನಿಂತು ಚಂಪತರಾಯನ ಸೈನ್ಯವನ್ನು ಹಣಿಯಹತ್ತಿದನು; ಆದರೂ ಚಂಪತರಾಯನ ಶೂರ ಸೈನಿಕರು ಹಿಂಜರಿಯದೆ ಶೌರ್ಯದಿಂದ ಕಾದಿ ರಣಭೂಮಿಯಲ್ಲಿ ದೇಹವಿಡತೊಡಗಿದರು. ಹೀಗೆ ವೀರರ ಸಂಖ್ಯೆಯು ಕಡಿಮೆಯಾಗುತ್ತ ಹೋದಂತೆ, ಚಂಪತರಾಯನು ಕ್ಷೀಣಬಲನಾಗತೊಡಗಿದನು.

ಸ್ವಜನರೆಲ್ಲರೂ ಚಂಪತರಾಯನ ಕೈಬಿಟ್ಟರು; ಚಂಪತರಾಯನಿಗೆ ಎಲ್ಲಿಯೂ ವಿಶ್ವಾಸವು ತೋರದಾಯಿತು. ಮೊಗಲರ ಪ್ರಚಂಡ ಸೇನೆಯ ಹೊಡತದಿಂದ ಆಗುತ್ತಿರುವ ಮಹೋಬದ ಜನರ ನಾಶವನ್ನು ಆತನು ನೋಡದಾದನು. ಇನ್ನು ತಾನು ಮಹೋಬವನ್ನು ರಕ್ಷಿಸುವದು ಅಶಕ್ಯವೆಂದು ತಿಳಿದು, ದುಃಖದಿಂದ ಸ್ವದೇಶತ್ಯಾಗ ಮಾಡಿ ಅರಣ್ಯವನ್ನು ಸೇರಿದನು. ಪರಾಕ್ರಮದಿಂದ ಕಾದುತ್ತಿದ್ದ ಯುವರಾಜ ಛತ್ರಸಾಲನೂ, ಯುವರಾಜ ದಳಪತರಾಯನೂ ಚಂಪತರಾಯನನ್ನು ಅನುಸರಿಸಿ ಅರಣ್ಯದ ಮಾರ್ಗವನ್ನು ಹಿಡಿದರು. ಛತ್ರಸಾಲನ ತಾಯಿಯಾದ ಸರಲಾದೇವಿಯು ಕೈಯಲ್ಲಿ ಶಸ್ತ್ರವನ್ನು ಧರಿಸಿ ಪತಿಯನ್ನು ಅನುಸರಿಸಿ ನಡೆದಳು. ಈಗ ಚಂಪತರಾಯನ ಬಳಿಯಲ್ಲಿ ಐವತ್ತು ಜನ ವೀರರು ಮಾತ್ರ ಉಳಿದಿದ್ದರು. ಇತ್ತ ಮಹೋಬದ ಮೇಲೆ ದಿಲ್ಲೀಪತಿಯ ಹಸರು ನಿಶಾನೆಯು ಮೆರೆಯಹತ್ತಲು, ಹೀರಾದೇವಿಯ ಆನಂದವು ಹೊಟ್ಟೆಯಲ್ಲಿ ಹಿಡಿಸದಾಯಿತು. ಆಕೆಯ ಆನಂದದಲ್ಲಿ ಚಂಪತರಾಯ-ಛತ್ರಸಾಲರಿಬ್ಬರು ರಣಭೂಮಿಯಲ್ಲಿ ಇನ್ನೂ ಮಡಿಯಲಿಲ್ಲವಲ್ಲ, ಎಂಬುದೊಂದೇ ಕೊರತೆಯಿತ್ತು. ಈ ಮೇರೆಗೆ ಆ ದುಷ್ಟ ಸ್ತ್ರೀ ಹೀರಾದೇವಿಯು ಬುಂದೇಲಖಂಡದೊಳಗಿನ ಯಾವತ್ತು ಶೌರ್ಯವನ್ನು ಒಟ್ಟುಗೂಡಿಸಿ ಚಂಪತರಾಯನಿಗೆ ವಿರೋಧಿಯಾಗಿ ದಿಲ್ಲಿಯ ಬಾದಶಹನಿಗೆ ಸಹಾಯಮಾಡುತ್ತಿರುವಾಗ ದಿನಾಲು ಒಂದಿಲ್ಲೊಂದು ಕಡೆಯಲ್ಲಿ ಚಂಪತರಾಯನಿಗೂ, ಬಾದಶಹನ ಸೈನ್ಯಕ್ಕೂ ಯುದ್ಧವಾಗುತ್ತಿತ್ತು, ಚಂಪತರಾಯನೂ, ದಳಪತರಾಯನೂ ಜೀವದ ಆಶೆಬಿಟ್ಟು ಕಾದುತ್ತಿರುವಾಗ, ಪ್ರತಿದಿನ ಅವರ ಕಡೆಯ ಕೆಲವು ಶೂರರ ಸಂಹಾರವಾಗುತ್ತಿತ್ತು ಹೀಗಿರುವಾಗ ಚಂಪತರಾಯನು ಅತ್ಯಂತ ಕ್ಷೀಣಬಲನಾದನು. ಯುದ್ಧಮಾಡುವ

ಸಾಮರ್ಥ್ಯವು ಆ ವೀರಪುರಂಗವನಲ್ಲಿ ಸರ್ವಥಾ ಉಳಿಯಲಿಲ್ಲ. ಈ ಸ್ಥಿತಿಯಲ್ಲಿ ಆತನ ಪರಿವಾರವೆಂದರೆ, ಆತನ ಧರ್ಮಪತ್ನಿ ಸರಳಾದೇವಿ, ಮಗನಾದ ಛತ್ರಸಾಲ, ವಿರಾಗ್ರಣಿ ದಳಪತರಾಯ, ಕೆಲಜನ ಶೂರ ದಂಡಾಳುಗಳು ಇಷ್ಟೆ! ಈ ಸ್ಥಿತಿಯಲ್ಲಿಯೂ ಆ ಸ್ವಾತಂತ್ರ್ಯ ಪ್ರಿಯನು ಬಾದಶಹನಿಗೆ ಶರಣಹೋಗಲಿಚ್ಛಿಸಲಿಲ್ಲ. ಆ ವೀರನ ನಿಶ್ಚಿತವಾದ ಇಚ್ಛೆಗಳು ಎರಡೇ ಇದ್ದವು. ಒಂದನೆಯದು ಶತ್ರುವನ್ನು ಸೋಲಿಸಿ ಜಯ ಸಂಪಾದಿಸುವದು, ಎರಡನೆಯದು ತಾನು ದುರ್ದೈವದಿಂದ ಜಯಶಾಲಿಯಾಗದಿದ್ದರೆ ಸಮರಭೂಮಿಯಲ್ಲಿ ಶತ್ರುಗಳೊಡನೆ ಕಾದುತ್ತ ಕಾದುತ್ತ ಧಾರಾತೀರ್ಥದಲ್ಲಿ ಪತನಹೊಂದಿ ವೀರಸ್ವರ್ಗವನ್ನು ಹೊಂದುವದು! ಇವುಗಳಲ್ಲಿ ಎರಡನೆಯ ಇಚ್ಛೆಯನ್ನು ಪೂರ್ಣಮಾಡಿಕೊಳ್ಳುವದಕ್ಕಾಗಿ ಆತನು ಆಲೋಚಿಸತೊಡಗಿದನು; ಯಾಕಂದರೆ, ಚಂಪತರಾಯನು ಮೂರ್ತಿಮಂತ ಅಚ್ಚ ಕ್ಷಾತ್ರ ಧರ್ಮವಾಗಿದ್ದನು!

## ಸತ್ಯಸಂಧತೆಯ ಪ್ರಭಾವ!

ಹೀಗೆ ಮೂರ್ತಿಮಂತ ಅಚ್ಚ ಕ್ಷಾತ್ರಧರ್ಮವಾಗಿದ್ದ ಚಂಪತರಾಯನು ಸಮರ ಭೂಮಿಯಲ್ಲಿ ದೇಹವಿಡುವದನ್ನು ನಿಶ್ಚಯಿಸಿ, ಅರಣ್ಯದೊಳಗಿನ ಒಂದು ಪ್ರಶಸ್ತ ಶಿಲೆಯ ಮೇಲೆ ಗಾಂಭೀರ್ಯದಿಂದ ವಿಚಾರಮಾಡುತ್ತ ಕುಳಿತುಕೊಂಡಿದ್ದನು. ಯುವರಾಜ ಪುತ್ರಸಾಲನೂ, ಯುವರಾಜ ದಳಪತರಾಯನೂ ಗಂಭೀರಮುದ್ರೆಯನ್ನು ತಾಳಿ ಆತನ ಬಳಿಯಲ್ಲಿಯೇ ಕುಳಿತುಕೊಂಡಿದ್ದರು. ಸಾಧ್ವಿಯಾದ ಸರಲಾದೇವಿಯು ತನ್ನ ಪತಿಗೆ ಹಾಗು ಛತ್ರಮಿತ್ರರಿಗೆ ಅಕಸ್ಮಿಕವಾಗಿ ಒದಗಿದ ನಿಕೃಷ್ಟಾವಸ್ಥೆಯನ್ನು ಶೋಕದಗ್ಧ ಹೃದಯದಿಂದ ನೋಡುತ್ತ ಕುಳಿತುಕೊಂಡಿದ್ದಳು. ಉಳಿದ ಒಬ್ಬಿಬ್ಬ ಕೆಚ್ಚೆದೆಯ ಕ್ಷತ್ರಿಯ ವೀರ ದಂಡಾಳುಗಳು ತಮ್ಮ ಪ್ರಭುವಿನ ಆಜ್ಞೆಯ ನಿರೀಕ್ಷಣ ಮಾಡುತ್ತ ಕುಳಿತುಕೊಂಡಿದ್ದರು. ಹೀಗೆ ಅವರೆಲ್ಲರೂ ಆ ಅರಣ್ಯ ಮಧ್ಯದಲ್ಲಿ ವಿಚಾರಮಾಡುತ್ತ ಕೆಲಹೊತ್ತು ಸುಮ್ಮನೆ ಕುಳಿತಿರುವಾಗ, ಚಂಪತ ರಾಯನು ತನ್ನ ಪರಿವಾರವನ್ನುದ್ದೇಶಿಸಿ ಗಾಂಭೀರ್ಯದಿಂದ—''ಒಳ್ಳೆಯ ಕಠಿಣ ಪ್ರಸಂಗವಂತು ಒದಗಿತು. ಕಾದುತ್ತ ಕಾದುತ್ತ ಸಾಯಬೇಕು, ಇಲ್ಲವೆ ನಿರ್ಲಜ್ಜೆಯಿಂದ ಶತ್ರುವಿನ ಸ್ವಾಧೀನವಾಗಬೇಕು. ಇದರ ಹೊರತು ಬೇರೆ ಉಪಾಯವಿಲ್ಲ. ಸಾಯಬಹುದು; ಆದರೆ ಸಾಯುವಾಗ ಸ್ವದೇಶದ ದೈನ್ಯಾವಸ್ಥೆಯು ಕಣ್ಣಿಗೆ ಕಟ್ಟಲು, ಮನಸ್ಸಿಗೆ ಆಗುವ ವ್ಯಥೆಯನ್ನು ಸಹಿಸಲಾಸಲ್ಲ! ಹಾಗಾದರೆ ಬದಕುಬೇಕೆ? ಬದುಕಿದರೆ ಆ ವಚನಭ್ರಷ್ಟ ಔರಂಗಜೇಬನ ಗುಲಾಮನಾಗಬೇಕು. ಛೆ! ಹಾಗೆ ಬದಕುವದು ನರಕವಾಸಕ್ಕಿಂತ ಕಠಿಣವೇ ಸರಿ! ಸತ್ತು ವೀರ ಸ್ವರ್ಗಕ್ಕೆ ಹೋಗಿ ದೇವತೆಗಳ ಮುಂದೆ ಬುಂದೇಲಖಂಡದ ಪಾರತಂತ್ರ್ಯವನ್ನು ವರ್ಣಿಸಿ ಹೇಳೋಣ! ನಿಶ್ಚಯವು, ಇನ್ನು ಸಾಯುವದೇ ನಿಶ್ಚಯವು. ಇನ್ನು ಕಣ್ಣಿಗೆ ಬಿದ್ದ ಶತ್ರುಗಳ

ಗುಂಪಿನ ಮೇಲೆ ಈ ಚಂಪತರಾಯನು ಹುಲಿಯಂತೆ ಜಿಗಿಯತಕ್ಕವನು! ಚಂಪತರಾಯನ ಐಹಿಕ ಕರ್ತವ್ಯವು ಮುಗಿಯಿತು. ಸರಲೆ, ನೀನು ವ್ಯರ್ಥವಾಗಿ ಶೋಕಮಾಡಬೇಡ. ಛತ್ರಸಾಲ–ದಲಪತರಾಯ, ನೀವೂ ದುಃಖಮಾಡಬೇಡಿರಿ. ಇನ್ನು ನಾನು ಕೆಲವು ತಾಸು ಬದುಕಿ ಇರತಕ್ಕವನು. ಇಷ್ಟು ಕಾಲವನ್ನು ನಾವು ಆನಂದದಿಂದ ಕಳೆಯೋಣ. ಒಬ್ಬರನ್ನೊಬ್ಬರು ಪ್ರೇಮದಿಂದ ಕಾಣೋಣ, ಒಬ್ಬರ ಅನುಭವವನ್ನೊಬ್ಬರು ಪರಸ್ಪರರಿಗೆ ಹೇಳೋಣ!

ಈವರೆಗೆ ಸಮಾಧಾನದಿಂದ ಕುಳಿತಿದ್ದ ಸರಲಾದೇವಿಯು ಪತಿಯ ಈ ಮಾತುಗಳನ್ನು ಕೇಳಿ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಆಗ ಚಂಪತರಾಯನು ''ಸರಲೇ, ನೀನು ಹುಚ್ಚಿಯಲ್ಲವೆ? ಶತ್ರುಗಳು ನಾಲ್ಕೂ ಕಡೆಯಿಂದ ಅರಣ್ಯವನ್ನು ಸುತ್ತುಹಾಕಿದ್ದು, ಯಾವಾಗ ಅವರು ನಮ್ಮ ಮೇಲೆ ಬಿದ್ದಾರೆಂಬದರ ನಿಯಮವಿಲ್ಲ. ಅಂದಬಳಿಕ ಶತ್ರುಗಳು ಬಂದಬಳಿಕ ಯಾವ ಮಾತು ಆಡಲಿಕ್ಕೆ ಬಂದೀತು? ಆದ್ದರಿಂದ ಸರಲೇ, ನಿನ್ನ ಕಟ್ಟಕಡೆಯ ಆಲಿಂಗನವನ್ನು ನನಗೆ ಕೊಡು'' ಎನ್ನಲು, ಸರಲಾದೇವಿಯು ಆತುರದಿಂದ ಧಾವಿಸಿ ಪತಿಯನ್ನು ಆಲಂಗಿಸಿದಳು. ತನ್ನ ತಾಯಿ–ತಂದೆಗಳ ಈ ಕಟ್ಟಕಡೆಯ ಕಾಣೋಣವನ್ನು ನೋಡಿ ಛತ್ರಸಾಲನ ಕಣ್ಣುಗಳಲ್ಲಿ ನೀರು ಬಂದವು; ಆದರೆ ತಾನು ಕಣ್ಣೀರು ಹಾಕುವದು ಅಪ್ಪನ ಕಣ್ಣಿಗೆ ಬಿದ್ದರೆ ಆತನಿಗೆ ಪರಮಾವಧಿ ದುಃಖವಾದೀತೆಂದು ತಿಳಿದು, ದುಃಖವನ್ನು ಬಹು ಪ್ರಯಾಸದಿಂದ ನುಂಗಿಕೊಂಡನು. ಸ್ವಲ್ಪಕಾಲದಲ್ಲಿ ಚಂಪತರಾಯನು ತನ್ನನ್ನು ಆಲಿಂಗಿಸಿದ್ದ ತನ್ನ ಹೆಂಡತಿಯನ್ನು ಹಿಂದಕ್ಕೆ ಸರಿಸಿ—''ಪ್ರಿಯೇ, ಇನ್ನು ನಿನಗೆ ನನ್ನ ದರ್ಶನವು ಸ್ವರ್ಗಲೋಕದಲ್ಲಿ! ಸರಳೇ, ನಾನು ಸ್ವರ್ಗಕ್ಕೆ ಹೋದಬಳಿಕ ಅಲ್ಲಿ ನಮ್ಮ ವಾಸಸ್ಥಳ ಮುಂತಾದವುಗಳ ವ್ಯವಸ್ಥೆ ಮಾಡುವೆನು; ಅಷ್ಟರಲ್ಲಿ ನೀನು ನನ್ನ ಉಳಿದಿರುವ ಕೆಲಸಗಳನ್ನು ತೀರಿಸಿಕೊಂಡು ಅಲ್ಲಿಗೆ ಹೊರಟು ಬಾ! ಯುವರಾಜನು ಇನ್ನೂ ಸಣ್ಣವನಿರುವನು. ಆತನ ಸಂಗೋಪನಕ್ಕೆ ಇನ್ನೂ ಮಾತೃಪ್ರೇಮದ ಅವಶ್ಯಕತೆಯಿರುವದು. ಅಷ್ಟು ತೀರುವವರೆಗೆ ನೀನು ಈ ಲೋಕದಲ್ಲಿಯೇ ವಾಸಿಸು. ಛತ್ರಸಾಲ, ನಿನ್ನನ್ನು ಕಾಣುವ ಮೊದಲು ನನ್ನ ಆಯುಷ್ಯದೊಳಗಿನದೊಂದು ಅನುಭವವನ್ನು ನಿನಗೆ ಹೇಳುವೆನು, ಅದನ್ನು ಮನಸ್ಸುಗೊಟ್ಟು ಕೇಳು.

ಯುವರಾಜ ಛತ್ರಸಾಲನು ಕೈಜೋಡಿಸಿ, ಮೋರೆಯನ್ನು ತಗ್ಗಿಸಿ ತನ್ನ ತಂದೆಯ ಮುಂದೆ ನಿಂತುಕೊಂಡನು. ದಳಪತರಾಯನು ವೀರಾಗ್ರಹಣಿ ಚಂಪತರಾಯನ ಕಟ್ಟಕಡೆಯ ಭಾಷಣವನ್ನು ಲಕ್ಷಪೂರ್ವಕವಾಗಿ ಕೇಳತೊಡಗಿದನು. ಆಗ ಚಂಪತರಾಯನು ಮಗನನ್ನು ಕುರಿತು—''ಛತ್ರಸಾಲ, ಸ್ವಜನರೊಡನೆ ಕಾದುವದು ದೇಶಕ್ಕೆ ಹಿತಕರವಲ್ಲವೆಂಬಮಾತನ್ನು ನೀನು ಯುದ್ಧದ ಎರಡನೆಯದಿವಸ ನನಗೆ ಹೇಳಿದೆ; ಆದರೆ ಅದರ ಮಹತ್ವವು ನನಗೆ ಬಹಳ ತಡವಾಗಿ ಗೊತ್ತಾಯಿತು! ನಾನು ಸ್ವಾತಂತ್ರ್ಯಪ್ರಾಪ್ತಿಗಾಗಿ ವಿಶ್ವಪ್ರಯತ್ನ ಮಾಡಿದೆನು, ಸರ್ವ ಸುಖಗಳನ್ನು ಬಿಟ್ಟುಕೊಟ್ಟೆನು, ಯಾವಾಗಲೂ ನನ್ನ ಮನಸ್ಸಿನಲ್ಲಿ ಸ್ವಾತಂತ್ರ್ಯದ ವಿಚಾರವು ಒಂದೇ ಕಟೆಯುತ್ತಿತ್ತು, ನಾನು ಈ ಮೊದಲೇ ಸಾಮುಗಡದ ಯುದ್ಧದಲ್ಲಿ ಔರಂಗಜೇಬನಿಗೆ ಸಹಾಯ ಮಾಡಿದೆನು, ಈಗ ಔರಂಗಜೇಬನೊಡನೆ ಯುದ್ಧಮಾಡುತ್ತಿರುವೆನು; ಈ ಮೊದಲು

ನಾನು ಸಭಾಕರಣನ ಭುಜಕ್ಕೆ ಭುಜವನ್ನು ಆನಿಸಿ ನಿಂತು ಸ್ವದೇಶದ ಸ್ವಾತಂತ್ರ್ಯಕ್ಕಾಗಿ ಕಾದಿದೆನು, ಈಗ ಅದೇ ಸಭಾಕರಣನ ಸಂಗಡ ಎದೆಗೆ ಎದೆ ಆನಿಸಿ ಯುದ್ಧಮಾಡುತ್ತಿರುವೆನು; ಈ ಮೊದಲೇ ಹೀರಾದೇವಿಯನ್ನು ಓರಛಾದ ಪಟ್ಟದ ರಾಣಿಯಾಗಮಾಡುವದು ನನಗೆ ಯೋಗ್ಯವಾಗಿ ತೋರಿತು, ಈಗ ಸೈನ್ಯದೊಡನೆ ಕಾದುವದು ನನಗೆ ಇಷ್ಟವಾಗಿ ತೋರುತ್ತದೆ. ಹೀಗೆ ಪರಸ್ಪರ ವಿರೋಧವಾಗಿರುವ ಕಾರ್ಯಗಳನ್ನು ಮಾಡುವಾಗೂ ಸ್ವಾತಂತ್ರ್ಯ ಪ್ರಾಪ್ತಿಯ ಇಚ್ಛೆಯ ದಿವ್ಯಜ್ಯೋತಿಯು ನನ್ನ ಹೃದಯದಲ್ಲಿ ಪ್ರಕಾಶಿಸುತ್ತಲಿತ್ತು; ಆದರೂ ಸ್ವಾತಂತ್ರ್ಯ ಪ್ರಾಪ್ತಿಯ ಕಾರ್ಯದಲ್ಲಿ ನನಗೆ ಯಶಸ್ಸುದೊರೆಯಲಿಲ್ಲ! ನನ್ನ ಪ್ರಯತ್ನದೊಳಗಿನ ದೋಷವನ್ನು ನಾನು ಕಂಡು ಹಿಡಿಯುವ ಪ್ರಯತ್ನವನ್ನು ಎಷ್ಟು ಮಾಡಿದರೂ ಆಗ ಅದು ನನಗೆ ಗೊತ್ತಾಗ ಲಿಲ್ಲ, ಛತ್ರಸಾಲ, ನಾನು ಸ್ವಾತಂತ್ರ್ಯದ ಮಂದಿರವನ್ನು ಕಟ್ಟುವದಕ್ಕಾಗಿ ಪ್ರಯತ್ನಮಾಡಿದೆನು; ಆದರೆ ಆ ಮಂದಿರದ ತಳಹದಿಯು ಭದ್ರವಾಗಿದೆಯೋ ಇಲ್ಲವೋ ಎಂಬದನ್ನು ನೊಡಲಿಲ್ಲ. ಒಬ್ಬರ ಆಳಾಗಿರಲಿಕ್ಕೆ ಬುಂದೇಲಖಂಡವು ಎಷ್ಟು ಮೆಚ್ಚಿರುವದೆಂಬದನ್ನೂ, ಅದರ ಆ ಮೆಚ್ಚಿಗೆಯ ಮೂಲಕ ದಾಶತ್ವದ ಅಂಗಗಳಾದ ನೀಚಸ್ವಾರ್ಥಪರತೆ, ಅಸೂಯೆ, ವಿಷಯಾಸಕ್ತಿ ಮುಂತಾದ ದುರ್ಗುಣಗಳಿಂದ ಅದರ ಸದ್ಗುಣಗಳೆಲ್ಲ ಹೇಗೆ ಕುಗ್ಗಿರುವವೆಂಬದನ್ನೂ ನಾನು ಲಕ್ಷಪೂರ್ವಕವಾಗಿ ನೋಡಿ ಅವುಗಳನ್ನು ಹೋಗಲಾಡಿಸಲಿಕ್ಕೆ ತಕ್ಕ ಉಪಾಯಗಳನ್ನು ಮಾಡಲಿಲ್ಲ. ತಮಗೆ ಅಂಟಿಕೊಂಡಿರುವ ಈ ದುರ್ಗುಣಗಳ ರೋಗದಿಂದ ಬುಂದೇಲಿಗಳು ಪರಾಧೀನರಾಗಿ ನನ್ನ ಸ್ವಾತಂತ್ರ್ಯದ ಕಾರ್ಯಕ್ಕೆ ವಿರೋಧಿಗಳಾಗಲು, ಬುದ್ಧಿಪೂರ್ವಕವಾಗಿ ಅವರು ನನ್ನನ್ನು ದ್ವೇಷಿಸುವರೆಂದು ತಿಳಿದು ನಾನು ಅವರ ನಾಶಮಾಡಲು ತೊಡಗಿದೆನು. ಇಂತ ರೋಗಗ್ರಸ್ತ ಕೊಳಕ ಜನರ ಕೊಳೆಯನ್ನು ದೂರಮಾಡುವದನ್ನು ಬಿಟ್ಟು, ನಾನು ಅವರನ್ನು ನಮ್ಮ ಶತ್ರುಗಳಾದ ಯವನರ ಸಾಲಿನಲ್ಲಿ ಕುಳ್ಳಿರಿಸಿದೆನು! ವತ್ಸಾ, ಛತ್ರಸಾಲಾ, ಪ್ರಾಣನಾಥ ಪ್ರಭುಗಳ ಕೃಪೆಯಿಂದಲೂ, ಶ್ರೀ ವಿಂಧ್ಯವಾಸಿನಿಯ ಅನುಗ್ರಹದಿಂದಲೂ ನಿನಗೆ ಈ ಮಾತಿನ ಎಚ್ಚರವು ಸ್ವಾಭಾವಿಕವಾಗಿಯೇ ಇರುವದನ್ನು ತಿಳಿದು ನನಗೆ ಬಹಳ ಸಂತೋಷವಾಗಿದೆ. ನನ್ನ ಬುಂದೇಲಿಗಳನ್ನೆಲ್ಲ ಒಟ್ಟುಗೂಡಿಸಬೇಕೆಂಬ ವಿಚಾರವು ನನ್ನಲ್ಲಿ ಹುಟ್ಟಲಿಲ್ಲ. ನನಗೆ ಬೇಡಾದವರನ್ನು ಮೊದಲು ನಾಶ ಮಾಡಿ, ಆಮೇಲೆ ಸ್ವಾತಂತ್ರ್ಯವನ್ನು ಸಂಪಾದಿಸಬೇಕೆಂಬ ಸಂಕಲ್ಪಮಾಡಿದ ನನ್ನ ಸಂಕಲ್ಪವು, ಮೊದಲು ಬುಂದೇಲಖಂಡವನ್ನೆಲ್ಲ ನಿರ್ಮಾನುಷವಾಗಿ ಮಾಡಿ, ಆಮೇಲೆ ಸ್ವಾತಂತ್ರ್ಯದ ಪ್ರಯೋಜನವೇ ಉಳಿಯಲಿಲ್ಲವಲ್ಲ ಎಂಬ ಪಶ್ಚಾತಾಪದಿಂದ ಬೆಂದು ಸಾಯುವ ಮೂರ್ಖನ ಸಂಕಲ್ಪದಂತೆ ಆಯಿತು! ನಾನು ಇಡಿಯ ಬುಂದೇಲಖಂಡದ ರಾಜರಿಗೆಲ್ಲ ಬೇಡಾಗಿರುವೆನು. ಇದು ನನ್ನ ಸರಳ ಹೃದಯದ, ಅಥವಾ ಇವರೆಲ್ಲರೂ ನನ್ನಂತೆ ಇಲ್ಲವಲ್ಲ ಎಂಬ ತಾಪದ ಪರಿಣಾಮವಾಗಿದ್ದರೂ, ಅದು ಬೇರೆ ಬೇರೆ ಸ್ವಭಾವದ ಬುಂದೇಲಿಗಳನ್ನು ಒಟ್ಟುಗೂಡಿಸಿ ಅವರ ಬಲವನ್ನು ಹೆಚ್ಚಿಸಿ ಅವರ ಸಹಾಯದಿಂದ ಬುಂದೇಲದ ಸ್ವಾತಂತ್ರ್ಯವನ್ನು ಸಂಪಾದಿಸುವ ಹಿತಕಾರಕ ಮಾರ್ಗಕ್ಕೆ ಉಪಯುಕ್ತವಾದದ್ದಲ್ಲ! ಛತ್ರಸಾಲ, ನಾನು ಈ ಪ್ರಸಂಗದಲ್ಲಿ ಮಹಾರಾಷ್ಟ್ರ ರಾಜ್ಯಸ್ಥಾಪಕನಾದ

ಶಿವರಾಯನನ್ನು ಗುರುವನ್ನಾಗಿ ಮಾಡಿಕೊಳ್ಳತಕ್ಕದ್ದಿತ್ತು; ಆದರೆ ಅಷ್ಟು ಪುಣ್ಯವನ್ನು ನಾನು ಮಾಡಿರಲಿಲ್ಲ ನನ್ನ ಎಟ್ಟಿ ಸ್ವಭಾವದ ಮೂಲಕ ಬುಂದೇಲಿಗಳೆಲ್ಲ ರೇಗಿದರು. ಉಪದೇಶದಿಂದ, ಪ್ರಾರ್ಥನೆಯಿಂದ, ಪ್ರಸಂಗ ಒದಗಿದಲ್ಲಿ ಕ್ಷಮೆ ಬೇಡಿ ನಾನು ನನ್ನ ದೇಶಬಾಂಧವರ ಮನಸನ್ನು ಒಲಿಸಿಕೊಳ್ಳಲಿಲ್ಲ, ಛತ್ರಸಾಲ, ನೀನಾದರೂ ನಾನು ಮಾಡಿದ ತಪ್ಪುಗಳನ್ನು ಮಾಡದಂತೆ ಎಚ್ಚರವಾಗಿರು; ನೀನಾದರೂ ಆ ಮಹಾತ್ಮನಾದ ಶಿವರಾಯನನ್ನು ಗುರುವಾಗಿ ಮಾಡಿಕೊಳ್ಳು ವದಕ್ಕಾಗಿ ದಕ್ಷಿಣ ಹಿಂದುಸ್ತಾನಕ್ಕೆ ಹೋಗದೆ ಇರಬೇಡ; ಬುಂದೇಲಖಂಡವನ್ನು ಸ್ವತಂತ್ರವಾಗ ಮಾಡಬೇಕೆಂಬ ಸಂಕಲ್ಪವು ದೃಢವಾಗಿ ನಿನ್ನ ಹೃದಯದಲ್ಲಿರಲಿ; ವಿಂಧ್ಯವಾಸಿನಿಯ ಕೃಪೆ ಯಿಂದಲೂ ಪ್ರಾಣನಾಥ ಪ್ರಭುಗಳ ಅನುಗ್ರಹದಿಂದಲೂ ನಿನ್ನ ಆ ಸಂಕಲ್ಪವು ಪೂರ್ಣವಾಗುವದು! ಅದೋ ನೋಡು, ಅಲ್ಲಿ ಯವನರ ಸೇನೆಯದೊಂದು ಗುಂಪು ಇತ್ತ ಕಡೆಗೆ ಸಾಗಿ ಬರುತ್ತಿರುವದು. ನಿನ್ನ ತಾಯಿಯ ಸಂರಕ್ಷಣದ ಭಾರವನ್ನು ನಿನ್ನ ತಲೆಯ ಮೇಲೆ ಹೊರಿಸುವೆನು. ನಾನು ಕಟ್ಟಕಡೆಯ ಭಯಂಕರ ಸಂಗ್ರಾಮವನ್ನು ಮಾಡಲೇಬೇಕಾಗಿರುವದು. ಛತ್ರಸಾಲ, ದಲಪತ, ಇನ್ನು ಯುದ್ಧಕ್ಕಾಗಿ ನನಗೆ ಅನುಮತಿ ಕೊಡಿರಿ! ದೇವರು ನಿಮಗೆ ಕಲ್ಯಾಣ ಮಾಡಲಿ!''

ಈಮೇರೆಗೆ ನುಡಿದು ಚಂಪತರಾಯನು ಯವನರ ಗುಂಪನ್ನು ದ್ವೇಷದಿಂದ ನೋಡುತ್ತ ಅದರ ಮೇಲೆ ಬೀಳುವದಕ್ಕಾಗಿ ಹೋಗುತ್ತಿರಲು, ಛತ್ರಸಾಲನು ಆತನನ್ನು ತಡೆದು —''ಅಪ್ಪಾ, ಇನ್ನೂ ತಮ್ಮ ಪ್ರಾಣವನ್ನು ರಕ್ಷಿಸಿಕೊಳ್ಳಲಿಕ್ಕೆ ಬರುವಹಾಗಿರುವದು; ಆದ್ದರಿಂದ ಬುದ್ಧಿಪೂರ್ವಕವಾಗಿ ಬೆಂಕಿಯಲ್ಲಿ ಹಾರಿಕೊಳ್ಳಬಾರದು.'' ಎಂದು ಹೇಳುತ್ತಿರಲು, ಚಂಪತರಾಯನು—''ಛತ್ರಸಾಲ, ನಾನು ಬದುಕುವದಕ್ಕಿಂತ ಸಾಯುವದರಿಂದಲೇ ಬುಂದೇಲಖಂಡದ ಕಲ್ಯಾಣವು ಸಾಧಿಸುವಹಾಗಿದೆ! ಬುಂದೇಲಿಗಳ ಮನಸ್ಸನ್ನು ಸುಡುತ್ತಿರುವ ಮಾತ್ಸರ್ಯಾಗ್ನಿಯು, ನಾನು ಸಾಯುವದರಿಂದಲೇ ಶಾಂತವಾಗುವದು. ಸ್ವಾತಂತ್ರ್ಯವೆಂದರೆ ಚಂಪತರಾಯನೆಂದು ಬಹುಜನ ಬುಂದೇಲಿಗಳು ತಿಳಿದಿರುವದರಿಂದ, ನನ್ನನ್ನು ಮತ್ಸರಿಸುವ ನೆವದಿಂದ ಅವರು ಸ್ವಾತಂತ್ರ್ಯದೇವಿಯನ್ನು ಮತ್ಸರಿಸುವರು; ಆದ್ದರಿಂದ ವತ್ಸಾ, ದೇಶಹಿತಕ್ಕಾಗಿ ಈಗ ನಾನು ಸಾಯಲೇಬೇಕಾಗಿರುವದು! ನಾನು ಸತ್ತರೆ ನೀನು ಇರುವೆಯಲ್ಲ, ಅಂದಬಳಿಕ ಬುಂದೇಲದ ಸ್ವಾತಂತ್ರ್ಯದ ಚಿಂತೆ ನನಗೇಕೆ? ಛತ್ರಸಾಲ, ಈಗ ನಾನು ಸಮರಾಂಗಣದಲ್ಲಿ ವಿರೋಚಿತವಾದ ಮರಣವನ್ನು ಹೊಂದುವದೇ ಯೋಗ್ಯವಾಗಿರುವದು; ಬುಂದೇಲದ ಈ ಪಾರತಂತ್ರ್ಯದ ನರಕದಲ್ಲಿರುವದು ನನಗೆ ಬೇಸರಿಟ್ಟಿದೆ. ಹೋಗು. ನಿನ್ನ ತಾಯಿಯ ಸಂರಕ್ಷಣದ ಕಾರ್ಯವನ್ನು ಮನಃಪೂರ್ವಕವಾಗಿ ಮಾಡು ನಡೆ!'' ಎಂದು ಹೇಳಿ ಯವನ ಸೈನ್ಯದ ಮೇಲೆ ಬಿದ್ದನು. ದಳಪತರಾಯನು ಮನಃಪೂರ್ವರ್ಕವಾಗಿ ಆತನಿಗೆ ಸಹಾಯ ಮಾಡತೊಡಗಿದನು. ಛತ್ರಸಾಲನು ತನ್ನ ತಾಯಿಯ ಸಂರಕ್ಷಣವನ್ನು ದಕ್ಷತೆಯಿಂದ ಮಾಡತೊಡಗಿದನು.

ಚಂಪತರಾಯನ ಅಂದಿನ ಶೌರ್ಯವು ಅವರ್ಣನೀಯವಾದದ್ದು. ನಾಲ್ಕೂ ಕಡೆಯಿಂದ ಶತ್ರುಗಳು ಆತನನ್ನು ಮುತ್ತಿದರು. ಹಲವು ಗಾಯಗಳಾದದ್ದರಿಂದ ಆತನ ದೇಹದಿಂದ ರಕ್ತವು

ಸುರಿಯುತ್ತಿತ್ತು; ಆದರೂ ಆತನ ಖಡ್ಗವು ತನ್ನ ಸಂಹಾರದ ಕಾರ್ಯವನ್ನು ಮಾಡುತ್ತಲೇ ಇತ್ತು. ಆತನು ಹಲವು ಯವನವೀರರನ್ನು ಕೊಂದನು. ಮೂರುತಾಸುಗಳವರೆಗೆ ಚಂಪತರಾಯನು ಯುದ್ಧಮಾಡಿದನು. ಆತನ ಅತುಲ ಪರಾಕ್ರಮವನ್ನು ಶತ್ರುಗಳು ಹೊಗಳಹತ್ತಿದರು. ಕಟ್ಟಕಡೆಯ ಯುದ್ಧದಲ್ಲಿ ತಾನು ಚನ್ನಾಗಿ ಪರಾಕ್ರಮವನ್ನು ತೋರಿಸಿದೆನೆಂಬ ಸಮಾಧಾನವು ಆತನಿಗಾಯಿತು; ಆದರೆ, ಮೈಯೊಳಗಿಂದ ಒಂದೇಸವನೆ ರಕ್ತ ಹೋಗಹತ್ತಿದ್ದರಿಂದ, ಚಂಪತ ರಾಯನು ಮೆಲ್ಲಮೆಲ್ಲನೆ ಕಸವು ಗೆಡತೊಡಗಿದನು! ಸ್ವಲ್ಪ ಹೊತ್ತಿನಲ್ಲಿ ಆತನಿಗೆ ಮೂರ್ಛೆ ಬರತೊಡಗಿತು. ಈ ಸಂಧಿಯನ್ನು ಸಾಧಿಸಿ ಆತನ ಬಳಿಯಲ್ಲಿರುವ ನಾಲ್ವರು ಯವನರು ಆತನಮೇಲೆ ಬಿದ್ದರು. ಆ ಸ್ಥಿತಿಯಲ್ಲಿಯೂ ಚಂಪತರಾಯನು ಮೂವರನ್ನು ನೆಲಕ್ಕುರುಳಿಸಿದನು; ಆದರೆ ನಾಲ್ಕನೆಯವನ ಹೊಡತವನ್ನು ತಪ್ಪಿಸಿಕೊಳ್ಳುವದು ಆತನಿಂದ ಆಗಲಿಲ್ಲ! ಆತನು ಮರಣೋನ್ಮುಖನಾಗಿ ವೀರರಿಗೆ ಉಚಿತವಾದ ಹಾಸಿಗೆಯ ಮೇಲೆ ಮಲಗಿದನು. ''ರಾಜಾ ಚಂಪತರಾಯನು ಬಿದ್ದನು! ಮಹೋಬದ ಅರಸನು ಬಿದ್ದನು!'' ಎಂದು ಎಲ್ಲ ಕಡೆಗೆ ಗುಲ್ಲು ಆಯಿತು. ಅತ್ತ ದಳಪತರಾಯನು ಒಬ್ಬ ಯವನ ವೀರನನ್ನು ಸಂಹರಿಸುವುದಕ್ಕಾಗಿ ಖಡ್ಗವೆತ್ತಿರಲು, ಈ ಸುದ್ದಿಯನ್ನು ಕೇಳಿ ಆತನು ಬೇಗನೆ ಚಂಪತರಾಯನನ್ನು ಹುಡುಕುತ್ತ ಬಂದನು. ರಕ್ತದಲ್ಲಿ ಮುಣುಗಿ ಮರಣೋನ್ಮುಖವಾಗಿ ಬಿದ್ದಿರುವ ಚಂಪತ ರಾಯನನ್ನೂ, ಆತನ ಬಳಿಯಲ್ಲಿ ಶಸ್ತ್ರಧಾರಿಯಾಗಿ ನಿಂತಿದ್ದ ತನ್ನ ತಂದೆಯಾದ ಸಭಾಕರಣನನ್ನೂ ಆತನು ನೋಡಿದನು. ತನ್ನ ತಂದೆಯೇ ಚಂಪತರಾಯನನ್ನು ಕೆಡವಿದನೆಂದು ತಿಳಿದು, ದಳಪತರಾಯನು ತ್ವೇಷದಿಂದ ತನ್ನ ತಂದೆಯ ಮೇಲೆ ಶಸ್ತ್ರವೆತ್ತಿದನು. ಆಗ ಚಂಪತರಾಯನು ಕ್ಷೀಣ ಸ್ವರದಿಂದ—''ದಳಪತ, ಕೈ ಬಿಗಿ ಹಿಡಿ; ಕಾರಣವಿಲ್ಲದೆ ತಂದೆಯನ್ನು ಸಂಹರಿಸಿ ನರಕದ ಹಾದಿಯನ್ನು ಹಿಡಿಯಬೇಡ! ಈ ಮೊದಲೆ ನಿನಗೆ ಮಾಡಿದ ಉಪದೇಶವನ್ನು ಇಷ್ಟರಲ್ಲಿಯೇ ಮರೆತುಬಿಟ್ಟೆಯಾ? ಸ್ವಜನರೊಡನೆ ಯುದ್ಧಮಾಡ ಬಾರದೆಂಬ ನನ್ನ ಕಟ್ಟಕಡೆಯ ಉಪದೇಶ ವನ್ನು ನೀನು ಮರೆತುಬಿಟ್ಟಿಯೇನು.'' ಎಂದು ಕೇಳುತ್ತಿರಲು, ದಳಪತರಾಯನು ಎತ್ತಿದ ಶಸ್ತ್ರವನ್ನು ಹಿಂದಕ್ಕೆ ತಕ್ಕೊಳ್ಳದೆ ಸಂತಪ್ತ ಮುದ್ರೆಯಿಂದ–

ದಳಪತ—ಈ ಸಭಾಕರಣನು ನಿಮ್ಮ ಮೇಲೆ ಶಸ್ತ್ರಪ್ರಯೋಗ ಮಾಡಲಿಲ್ಲವೇ?

ಸಭಾಕರಣ—ಇಲ್ಲ, ಅಷ್ಟು ಪುಣ್ಯವನ್ನು ನಾನು ಮಾಡಿರುವುದಿಲ್ಲ! ಚಂಪತರಾಯನು ಈ ಅರಣ್ಯದಲ್ಲಿರುವನೆಂಬುದನ್ನು ಕೇಳಿ, ನನ್ನ ಪ್ರತಿಜ್ಞೆಯನ್ನು ಕೊನೆಗಾಣಿಸುವುದಕ್ಕಾಗಿ ಇಲ್ಲಿಗೆ ಓಡಿಬಂದೆನು; ಆದರೆ ಹಲವು ಶಸ್ತ್ರಗಳಿಂದ ಛಿನ್ನವಿಚ್ಛಿನ್ನವಾಗಿರುವ ಈ ಚಂಪತರಾಯನು ನನ್ನ ಕಣ್ಣಿಗೆಬಿದ್ದನು. ಇನ್ನು ಈತನ ಅಂತಕಾಲದ ವ್ಯಥೆಯನ್ನು ನೋಡಿಯೇ ನಾನು ಸಮಾಧಾನಪಡ ಬೇಕಾಗಿರುವದು

ಚಂಪತರಾಯ—(ಕಷ್ಟದಿಂದ) ದಳಪತರಾಯ, ಸಭಾಕರಣನು ಆಡುವ ಮಾತು ಸತ್ಯವಾದದ್ದು; ಆತನು ನನ್ನ ಮೇಲೆ ಶಸ್ತ್ರವೆತ್ತಲಿಲ್ಲ; ಶಸ್ತ್ರವನ್ನು ಹಿಂದಕ್ಕೆ ತೆಗೆದುಕೋ. ವ್ಯರ್ಥವಾಗಿ ಪಿತೃವಧವನ್ನು ಮಾಡಬೇಡ.

ದಳಪತರಾಯನು ಶಸ್ತ್ರವನ್ನು ಒರೆಗಾಣಿಸಿ ಚಂಪತರಾಯನ ತಲೆಯನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡು ಆತನಿಗೆ ಗಾಳಿಯ ಹಾಕಹತ್ತಿದನು. ಇದರಿಂದ ಚಂಪತರಾಯನ ಅಂತಕಾಲದ ವ್ಯಥೆಯು ಕಡಿಮೆಯಾಗುವದೆಂದು ಆತನು ತಿಳಿದಿದ್ದನು. ಚಂಪತರಾಯನು ಬಿದ್ದ ಸುದ್ದಿಯನ್ನು ತಿಳಿಸುವದಕ್ಕಾಗಿ ಯವನ ಸೈನಿಕರು ನಾಮುಂದೆ ನಾ ಮುಂದೆ ಅನ್ನುತ್ತ ಬಾದಶಹನ ಛಾವಣಿಯ ಕಡೆಗೆ ಓಡಹತ್ತಿದರು. ತನ್ನ ತಾಯಿಯನ್ನು ಕರಕೊಂಡು ತನ್ನ ತಂದೆಯ ಬಳಿಗೆ ಬರಲಿಕ್ಕೆ ಛತ್ರಸಾಲನ ಹಾದಿಯು ತೆರವಾಯಿತು. ಆತನು ಸ್ವಲ್ಪ ವೇಳೆಯಲ್ಲಿಯೇ ಹೆಣಗಳನ್ನು ತುಳಿಯುತ್ತ ಸರಲಾದೇವಿಯೊಡನೆ ತನ್ನ ತಂದೆಯ ಬಳಿಗೆ ಬಂದನು. ಸರಲಾದೇವಿಯ, ಹಾಗು ಛತ್ರಸಾಲನ ಮನೋಧೈರ್ಯವನ್ನು ಪರೀಕ್ಷಿಸುವ ಪ್ರಸಂಗವು ಆಗಿನದಾಗಿತ್ತು! ಚಂಪತರಾಯನು ಮರಣಕಾಲದ ಕಷ್ಟದಿಂದ ಚಡಪಡಿಸುವದನ್ನು ನೋಡಿ ಅವರ ಅಂತಃಕರುಣಗಳು ಶೋಕದಗ್ಧವಾದವು; ಆದರೆ ಅವರು ಕಣ್ಣೀರ ಒಂದು ಹನಿಯನ್ನಾದರೂ ಹೊರಬೀಳಗೊಡಲಿಲ್ಲ; ಬಾಯಿಂದ ಒಂದು ದುಃಖೋದ್ಗಾರವನ್ನೂ ಹೊರಗೆಡವಲಿಲ್ಲ! ಚಂಪತರಾಯನ ಈ ಶೋಚನೀಯ ಅವಸ್ಥೆಯನ್ನು ನೋಡಿ ಸಭಾಕರಣನಿಗೆ ಒಂದುಕ್ಷಣ ತನ್ನ ಪ್ರತಿಜ್ಞೆಯ ಮರವಾಯಿತು. ಆ ಅವಸರದಲ್ಲಿ ಆತನಿಗೆ ಹುಡುಗರಾಗಿದ್ದಾಗಿನ ತಮ್ಮಿಬ್ಬರ ಗೆಳೆತನದ ರೀತಿಯೂ, ತಾವಿಬ್ಬರೂ ಬುಂದೇಲದ ಸ್ವಾತಂತ್ರ್ಯಕ್ಕಾಗಿ ಮೊಗಲ ರೊಡನೆ ಹೊಡೆದಾಡಿದ ಪ್ರಸಂಗಗಳೂ ನೆನಪಾಗಿ, ಆತನು ದುಃಖಿಸತೊಡಗಿದನು! ತನ್ನ ಮಿತ್ರನೊಬ್ಬನು ಇಹಲೋಕದ ಯಾತ್ರೆಯನ್ನು ಮುಗಿಸಿ ಹೊರಟನೆಂದು ದುಃಖದಿಂದ ಆತನ ಕಣ್ಣುಗಳಿಂದ ನೀರುಗಳು ಸುರಿಯಹತ್ತಿದವು; ಆ ಕಣ್ಣೀರ ಎರಡು ಹನಿಗಳು ಚಂಪತರಾಯನ ಮುಖದ ಮೇಲೆ ಬೀಳಲು, ಚಂಪತರಾಯನು ತೀರ ಕ್ಷೀಣ ಸ್ವರದಿಂದ– ''ಛತ್ರಸಾಲ, ನೀನು ನನ್ನ ಸಲುವಾಗಿ ಅಳವೆಯಾ? ಸರಲೇ, ನೀನು ನನ್ನ ಸಲುವಾಗಿ ಕಣ್ಣೀರು ಹಾಕುವೆಯಾ? ಛೀ ಛೀ! ನನ್ನ ಛತ್ರಸಾಲನೂ, ನನ್ನ ಸರಲೆಯೂ ನನ್ನ ಅಪ್ಪಣೆಯನ್ನು ಮೀರಲಾರರು'' ಎಂದುನುಡಿದು ಚಂಪತರಾಯನು ಬಹು ಕಷ್ಟದಿಂದ ಕಣ್ಣುತೆರೆದು ನೋಡಲು, ಸಭಾಕರ್ಣನು ಕಣ್ಣೀರು ಸುರಿಸುತ್ತ ನಿಂತುಕೊಂಡಿದ್ದನು. ಅದನ್ನು ನೋಡಿ ಚಂಪತರಾಯ ಮುಖದ ಪ್ರೇತಕಳೆಯಲ್ಲಿ ಆಶ್ಚರ್ಯದ ಚಿಹ್ನವು ತೋರಹತ್ತಿತು. ಆತನು ಅತ್ಯಂತ ಕ್ಷೀಣ ಸ್ವರದಿಂದ— ''ಸಭಾಕರಣನು ನನ್ನ ಸಲುವಾಗಿ ಶೋಕಮಾಡುತ್ತಿರುವನು! ನಾನು ಸಾಯುವೆನೆಂದು ಸಭಾಕರಣನು ದುಃಖಮಾಡುತ್ತಿರುವನೇನು?'' ಎಂದು ನುಡಿಯಲು, ರಣಧೀರ ಸಭಾಕರಣನು ಬಿಕ್ಕಿಬಿಕ್ಕಿ ಅಳತೊಡಗಿದನು. ಆಗ ಚಂಪತರಾಯನು—

ಚಂಪತರಾಯ—ಸಭಾಕರಣ! ದುಃಖಿಸಬೇಡ. ನನ್ನ ಅಂತಕಾಲದಲ್ಲಾದರೂ ನಿನ್ನ ಮನಸ್ಸು ನನ್ನ ವಿಷಯವಾಗಿ ನಿಷ್ಕಲಂಕವಾದದ್ದನ್ನು ನೋಡಿ ನನಗೆ ಸಮಾಧಾನವಾಗುವದು.

ಸಭಾಕರಣ—(ದುಃಖವನ್ನು ನುಂಗಿಕೊಂಡು) ಚಂಪತರಾಯ, ಸಭಾಕರಣನು ಸುಳ್ಳು ಆಡುವದಿಲ್ಲ, ನಿನ್ನ ಸಲುವಾಗಿ ನನ್ನ ಮನಸ್ಸು ನಿಷ್ಕಲಂಕವಾಗಿರುವದಿಲ್ಲ, ವ್ಯರ್ಥವಾಗಿ ಸಮಾಧಾನಪಡಬೇಡ. ಚಿಕ್ಕಂದಿನ ನಮ್ಮಿಬ್ಬರ ಪ್ರೇಮದ ನೆನಪಾಗಿ ನನಗೆ ದುಃಖವಾಯಿತಷ್ಟೆ!

ಚಂಪತರಾಯ — ಸಭಾಕರಣ, ಈವರೆಗೆ ನಿನ್ನ ಮನಸ್ಸು ನಿಷ್ಕಲಂಕವಾಗುವಂತಹ ಅಪರಾಧವನ್ನು ನಾನೇನು ಮಾಡಿದ್ದೇನೆ?

ಸಭಾಕರಣ—ಚಂಪತರಾಯ, ಆ ಘೋರಪಾತಕದ ನೆನಪನ್ನು ನಿನ್ನ ಅಂತಕಾಲದಲ್ಲಿ ನಾನು ಮಾಡಿಕೊಡಲೇ ಬೇಕು, ಅಂದರೆ ಪಶ್ಚಾತ್ತಾಪದಿಂದ ಅಂತಕಾಲದಲ್ಲಿ ನಿನ್ನ ಹೃದಯವು ಸುಟ್ಟುಶುದ್ಧವಾಗಿ ನೀನು ನೆಟ್ಟಗೆ ಸ್ವರ್ಗಕ್ಕೆ ಹೋದೀ! ಚಂಪತರಾಯ, ಲಲಿತೆಯೆಂಬ ಸಾಗರದ ರಾಜಕನ್ನೆಯು, ನನ್ನ ತಂಗಿಯು ಒಬ್ಬಳಿದ್ದಳೆಂದು ನಿನ್ನ ನೆನಪಿನಲ್ಲಿರುವುದೋ?

ಚಂಪತರಾಯ—ಆ ಸೌಂದರ್ಯಶಾಲಿನಿಯ ಮರವು ನನಗೆ ಹೇಗಾದೀತು?

ಸಭಾಕರಣ—ಆ ಲಲಿತೆಯು ಆತ್ಮಹತ್ಯ ಮಾಡಿಕೊಂಡಳು! ಅದಕ್ಕೆ ನಿನ್ನ ಅನೀತಿಯ ಆಚರಣವೇ ಕಾರಣವು!

ಇದನ್ನು ಕೇಳಿ ಚಂಪತರಾಯನ ಮುಖದಲ್ಲಿಯ ಪ್ರೇತಕಳೆಯಲ್ಲಿ ಆಶ್ಚರ್ಯದ, ಹಾಗು ದುಃಖದ ಚಿಹ್ನಗಳು ತೋರಹತ್ತಿದವು. ಆತನು ಅತ್ಯಂತ ಕ್ಷೀಣ ಸ್ವರದಿಂದ—

ಚಂಪತರಾಯ—ಸಭಾಕರಣ, ಚಂಪತರಾಯ-ಲಲಿತೆಯರಲ್ಲಿಯ ಪ್ರೇಮವು ಅಣ್ಣ-ತಂಗಿಯರದಾಗಿತ್ತು, ಲಲಿತೆಯು ನನ್ನ ತಂಗಿಯು. ತನ್ನ ತಂಗಿಯ ಸಲುವಾಗಿ, ಹಾಗು ತನ್ನ ಮಿತ್ರನ ಸಲುವಾಗಿ ಹೀಗೆ ಅಪವಾದ ಹೊರಿಸುವ ಸಭಾಕರಣನ ಬಾಳಿಗೆ ಧಿಕ್ಕಾರವು! ಸಭಾಕರಣಾ, ಸುಮ್ಮನೆ ಇಲ್ಲದ ಸಂಶಯಕ್ಕೆ ಗುರಿಯಾಗಿ ದೇಶಕಾರ್ಯಕ್ಕೆ ಎರವಾದೆ! ಇನ್ನಾದರೂ ಎಚ್ಚರಪಡು!

ಚಂಪತರಾಯನ ಈ ಮಾತುಗಳನ್ನು ಕೇಳಿ ಸಭಾಕರಣನ ಮೋರೆಯು ಕಪ್ಪಿಟ್ಟಿತು! ಆತನ ಕಣ್ಣೀರುಗಳು ದಳದಳ ಇಳಿಯುತ್ತಿರಲು, ''ಈ ಮಾತು ನನಗೆ ಮೊದಲೇ ಗೊತ್ತಾಗಲಿಲ್ಲವಲ್ಲ'' ಎಂದು ಆತನು ದುಃಖಿಸತೊಡಗಿದನು.ಇತ್ತ ಚಂಪತರಾಯನ ಆತ್ಮವು ಇಹಲೋಕವನ್ನು ಬಿಟ್ಟು ಹೋರಟುಹೋಯಿತು. ಆತನು ತನ್ನ ಕಟ್ಟಕಡೆಯ ದೃಷ್ಟಿಯನ್ನು ತನ್ನ ಹೆಂಡತಿಯ ಮೇಲೆ, ತನ್ನ ಮಗನ ಮೇಲೆ, ತನ್ನ ಬಾಲಮಿತ್ರನ ಮೇಲೆ, ಕರ್ತವ್ಯದಕ್ಷ ದಲಪತರಾಯನ ಮೇಲೆ ಹೊರಳಿಸಿ, ಸ್ವರ್ಗಕ್ಕೆ ತೆರಳಿದನು! ಸರಲಾದೇವಿ ಛತ್ರಸಾಲರ ಶೋಕಧ್ವನಿಯು ದಿಗಂತವನ್ನು ವ್ಯಾಪಿಸುತ್ತಿರಲು, ಅದರಲ್ಲಿ ಸಭಾಕರಣನ ದುಃಖಧ್ವನಿಯು ಬೆರತು ಆ ತೇಜಸ್ವಿಗಳಾದ ಕ್ಷತ್ರಿಯರ ಪರಿವಾರವು ಪರಸ್ಪರ ಮಮಕಾರದಿಂದ ಬದ್ಧವಾಯಿತು! ಸತ್ಯಸಂಧನಾದ ಚಂಪತ ರಾಯನ ಒಂದೇ ಒಂದು ಮಾತಿನಿಂದ ಸಭಾಕರಣನ ಸಂಶಯ ನಿವೃತ್ತಿಯಾಗಿ, ಚಂಪತರಾಯನ ಪರಿವಾರವನ್ನು ಆತನು ತನ್ನದೆಂದು ಭಾವಿಸತೊಡಗಿದನು! ಸತ್ಯಸಂಧತೆಯೇ, ನಿನ್ನ ಪ್ರಭಾವವು ದೊಡ್ಡದು!

# ಸಾಧ್ವಿ ಸುಫಲಾದೇವಿ

ಹೀಗೆ ಬುಂದೇಲಖಂಡದ ಸ್ವಾತಂತ್ರ್ಯರವಿಯು ಅಸ್ತಂಗತನಾದದ್ದರಿಂದ, ಪಾರತಂತ್ರ್ಯದ ಕಗ್ಗತ್ತಲೆಯು ಬುಂದೇಲಖಂಡವನ್ನೆಲ್ಲ ವ್ಯಾಪಿಸಿತು. ಚಂಪತರಾಯನಂಥ ಸ್ವಾತಂತ್ರ್ಯಪ್ರಿಯ ಕ್ಷತ್ರಿಯ ವೀರನೊಬ್ಬನು ಮಹೋಬದ ರಾಜ್ಯದಲ್ಲಿ ಮಿನುಗುತ್ತಿದ್ದದ್ದರಿಂದ, ಬುಂದೇಲ ಖಂಡವನ್ನು ಸ್ವಾತಂತ್ರ್ಯದ ಅಲ್ಪ ಸ್ವಲ್ಪ ಪ್ರಕಾಶವಾದರೂ ಬೆಳಗುತ್ತಲಿತ್ತು; ಅದರಿಂದ ಔರಂಗಜೇಬನಂಥ ಮಹತ್ವಾಕಾಂಕ್ಷಿ ಧರ್ಮಮೂಢನಿಗೆ, ಇದಿಷ್ಟು ಪ್ರಕಾಶವನ್ನು ಅಡಗಿಸಿ ಬುಂದೇಲಖಂಡವನ್ನು ಪಾರತಂತ್ರ್ಯದ ಕತ್ತಲೆಯಲ್ಲಿ ಮುಣುಗಿಸಿಬಿಟ್ಟರೆ, ತನ್ನ ಸಾರ್ವಭೌಮಾಧಿ ಕಾರವು ಅಷ್ಟರಮಟ್ಟಿಗೆ ನಿಷ್ಕಂಟಕವಾಗುವದೆಂದು ಎಣಿಕೆಹಾಕುತ್ತಿದ್ದನು. ತನ್ನ ದಿಲ್ಲಿಯ ಇಷ್ಟು ಸನಿಯದಲ್ಲಿರುವ ಬುಂದೇಲಖಂಡದಲ್ಲಿ ಬುಂದೇಲಿಗಳಂಥ ಕಾಟಕ ಕ್ಷತ್ರಿಯರು ಸ್ವತಂತ್ರರಾದರೆ, ಅವರು ತನಗೆ ಬೆಳತನಕ ನಿದ್ದೆಮಾಡಗೊಡಲಿಕ್ಕಿಲ್ಲವೆಂಬ ಮಾತು ಆತನಿಗೆ ಚನ್ನಾಗಿ ಗೊತ್ತಿದ್ದಿತು; ಆದ್ದರಿಂದಲೇ ಅಂತಹ ಉಪಕಾರಮಾಡಿದ ಚಂಪತರಾಯನ, ಹಾಗು ಛತ್ರಸಾಲನ ಬೇಡಿಕೆ ಯನ್ನು, ತಾನು ವಚನಭ್ರಷ್ಟನಾಗುವೆನೆಂಬದರ ಎಚ್ಚರವಿಲ್ಲದೆ ನೆರೆದ ದರ್ಬಾರದಲ್ಲಿ ಆತನು ತಿರಸ್ಕರಿಸಿದನು! ಅಂತಹ ಕುಟಿಲ ನೀತಿಯ ಬಾದಶಹನಿಗೆ ಚಂಪತರಾಯನ ಮರಣದಿಂದ ಸಮಾಧಾನವಾದದ್ದು ಆಶ್ಚರ್ಯವಲ್ಲ; ಆದರೂ ಆ ಶೂರ ಬಾದಶಹನು ಚಂಪತರಾಯನ ಗುಣಗಳನ್ನೂ, ತನ್ನ ಸಿಂಹಾಸನದ ಪ್ರಾಪ್ತಿಯಲ್ಲಿ ಆತನಿಂದ ತನಗಾದ ಮಹತ್ವದ ಸಹಾಯವನ್ನೂ ನೆನಿಸದೆ ಇರಲಿಲ್ಲ; ಅದಕ್ಕಾಗಿ ಆ ಕುಟಿಲರಾಜಕಾರಣ ಪಟುವಿಗೆ ಕ್ಷಣಕಾಲ ದುಃಖವೂ ಆಗಿರಬಹುದು; ಯಾಕಂದರೆ ವೀರರ ಯೋಗ್ಯತೆಯನ್ನು ವೀರರು ತಿಳಿಯದೆ ಹೋಗುವದಿಲ್ಲ. ತನ್ನ ದರ್ಬಾರ ದಲ್ಲಿಯ ಚಂಪತರಾಯನ ತೇಜಸ್ವಿತೆಯ ಭಾಷಣವು ಈ ಕಾಲದಲ್ಲಿ ಬಾದಶಹನಿಗೆ ನೆನಪಾಯಿತು! ಅಂತಹ ಸ್ವಾತಂತ್ರ್ಯಪ್ರಿಯ ರಾಜರನ್ನು ತಾನು ಇಷ್ಟು ಅಟ್ಟಹಾಸ ಮಾಡಿ ನಾಶಮಾಡಿದ್ದಕ್ಕಾಗಿ ಸ್ವಲ್ಪ ಪಶ್ಚಾತ್ತಾಪವೂ ಆತನಿಗಾಯಿತು; ಆದರೆ ಚಂಪತ ರಾಯನ ಮರಣದಿಂದ ತಾನು ನಿಶ್ಚಿಂತನಾದೆನೆಂಬ ಆನಂದವನ್ನು ಅಲಂಕರಿಸುವ ಮಟ್ಟಿಗೆ ಚಂದ್ರಕಲೆಯಂತೆ ಬಾದಶಹನ ಈ ದುಃಖ-ಪಶ್ಚಾತಾಪಗಳಿದ್ದವಲ್ಲದೆ ಅವು ನಿಜವಾಗಿಯೂ ಚಂಪತರಾಯನ ಸಹಾನುಭೂತಿಯನ್ನು ತೋರಿಸತಕ್ಕಂತಹವಿದ್ದಿಲ್ಲವೆಂದು ಹೇಳಬಹುದು; ಅಂತೇ ಆ ದುಷ್ಟ ಬಾದಶಹನು ಚಂಪತರಾಯನ ಮಗ ಛತ್ರಸಾಲನನ್ನು ಸೆರೆಹಿಡಿದು ತನ್ನ ಕಡೆಗೆ ಕಳಿಸಬೇಕೆಂದು ಹೀರಾದೇವಿಯನ್ನು ಆಜ್ಞಾಪಿಸಿದನು.

ಚಂಪತರಾಯನ ಮರಣಕ್ಕಾಗಿ ಹೀಗೆ ಬಾದಶಹನಷ್ಟು ದುಃಖ-ಪಶ್ಚಾತ್ತಾಪಪಡುವಷ್ಟು ಪಾತ್ರತೆಯೂ ಹೀರಾದೇವಿಯಲ್ಲಾಗಲ್ಲಿ, ಕಂಚುಕಿರಾಯನಂಥ ಬುಂದೇಲಖಂಡದ ಹೇಡಿ ಅರಸರಲ್ಲಾಗಲಿ ಇದ್ದಿಲ್ಲವೆಂದು ಸ್ಪಷ್ಟವಾಗಿ ಹೇಳಬಹುದು! ಅವರು ಚಂಪತರಾಯನ ಮರಣಕ್ಕಾಗಿ ಪರಮಾನಂದಪಟ್ಟು, ತಮ್ಮ ಶ್ರಮವು ಸಾರ್ಥಕವಾಯಿತೆಂದು ತಮ್ಮ ತಮ್ಮೊಳಗೆ ಕೃತಕೃತ್ಯರಾದರು! ಆದರೆ ಸುಫಲಾದೇವಿಯಂಥ ಸ್ವಾತಂತ್ರ್ಯಪ್ರಿಯ ಸ್ತ್ರೀಯರಿಗೆ ಮಾತ್ರ

ಚಂಪತರಾಯನ ಮರಣದಿಂದ ಅತ್ಯಂತ ವ್ಯಸನವಾಯಿತು. ಇಂದಿಗೆ ಬುಂದೇಲಖಂಡದ ಸ್ವಾತಂತ್ರ ತಂತುವೇ ಹರಿದುಹೋಯಿತೆಂತಲೂ, ಸ್ವಾತಂತ್ರ್ಯರವಿಯ ಸಂಧಿಪ್ರಕಾಶದಂತಹ ಮಂದಪ್ರಕಾಶವೂ ಬುಂದೇಲಖಂಡದ ಸಾಲಿಗೆ ಇಲ್ಲದ ಹಾಗಾದದ್ದರಿಂದ, ನಾವೆಲ್ಲರೂ ಪಾರತಂತ್ರ್ಯದ ಕತ್ತಲೆಯಲ್ಲಿ ಮುಣುಗಿಹೋದೆವೆಂತಲೂ ಅವರು ವ್ಯಸನಪಡತೊಡಗಿದರು. ಸುಫಲಾದೇವಿಗೆ ಈ ದುಷ್ಟವಾರ್ತೆಯನ್ನು ಕೇಳಿದಾಗಿನಿಂದ ಏನೂ ಬೇಡಾಯಿತು. ಆಕೆಯು ತೀರಾ ಉದಾಸೀನಳಾದಳು. ಆ ವಂದನೀಯ ಸತಿಯು ಕಂಚುಕಿರಾಯನಂಥ ಅಧಮ ಕ್ಷತ್ರಿಯನ ಕೈಯನ್ನು ಹಿಡಿದಿದ್ದರೂ, ತನ್ನ ಸದ್ಗುಣಗಳ ಯೋಗದಿಂದ ಪತಿಯ ದೋಷಗಳ ದುಷ್ಪರಿಣಾಮವು ತನ್ನ ರಾಜ್ಯದ ಮೇಲೆ ಆಗಗೊಡದಷ್ಟು ಆಕೆಯು ತೇಜಸ್ವಿಯಾಗಿದ್ದಳು. ತನ್ನ ಧಾರೀರದ ರಾಜ್ಯದ ಸ್ವಾಮಿನಿಷ್ಠ ಮಂತ್ರಿಯಾದ ಸಜ್ಜನರಾಯನ ಸಹಾಯದಿಂದ ರಾಜ್ಯಸೂತ್ರಗಳನ್ನು ಸರಿಯಾಗಿ ಸಾಗಿಸಿ, ತನ್ನ ಪ್ರಜೆಗಳ ಅಧಃಪತನವಾಗದಂತೆ ಆಕೆಯು ಮಾಡಿದ್ದಳು. ಕಂಚುಕಿರಾಯನು ನಾಮಧಾರಿರಾಜನು; ಸಿಂಹಾಸನವನ್ನು ಪ್ರಸಂಗವಶಾತ್ ಅಲಂಕರಿಸುವದು, ಅವನ ಕೆಲಸವಾಗಿತ್ತು; ಆದರೆ ಅಂಥವನ ಹುಳಕೂ ಸುಫಲಾದೇವಿಯ ಪುಣ್ಯದಿಂದ ಮುಚ್ಚಿಹೋಗಿತ್ತು. ಇಂಥ ಪುಣ್ಯವಂತ ಸುಫಲಾದೇವಿಯು ಒಂದುದಿನ ರಾತ್ರಿ ಚಂಪತರಾಯನ ಮರಣದಿಂದಾದ ಬುಂದೇಲಖಂಡದ ಹಾನಿಯನ್ನು ಕುರಿತು ವಿಚಾರಿಸುತ್ತ ತನ್ನ ಮಗಳಾದ ವಿಜಯೆಯೊಡನೆ ಉಪವನದಲ್ಲಿ ಕುಳಿತಿದ್ದಳು. ವಿಜಯೆಗಂತು ಚಂಪತರಾಯನ ಮರಣದಿಂದ ಹೇಳಕೊಡದಷ್ಟು ದುಃಖವಾಗಿತ್ತು. ತಾನು ವಿಷಪ್ರಯೋಗದ ಸುದ್ದಿಯನ್ನು ಆ ಪ್ರತಾಪಿ ಚಂಪತರಾಯನಿಗೆ ತಿಳಿಸಿದಾಗ ವ್ಯಕ್ತವಾದ ಆತನ ದೊಡ್ಡಸ್ತಿಕೆಯನ್ನು ನೆನಿಸಿ, ಆಕೆಯು ಕಣ್ಣೀರು ಸುರಿಸಿದಳು. ಆಕೆಯು ಕಣ್ಣು ಒರಿಸಿಕೊಳ್ಳುತ್ತ ತನ್ನ ತಾಯಿಯನ್ನು ಕುರಿತು –

ವಿಜಯೆ—ಅವ್ವಾ, ಸೂರ್ಯನು ಮುಣುಗಿದ ಕೂಡಲೆ ಗೂಗೆಗಳು ಅಮಂಗಲ ಧ್ವನಿ ಮಾಡುತ್ತ ಎಲ್ಲ ಕಡೆಗೂ ಆನಂದದಿಂದ ಹೊರಬಿದ್ದು ಹಾರಾಡುವಂತೆ, ಸ್ವಾತಂತ್ರ್ಯ ರವಿಯಾದ ಚಂಪತರಾಯನು ಮರಣಹೊಂದಿದ್ದರಿಂದ, ಔರಂಗಜೇಬ ಬಾದಶಹನ ಪರಿವಾರದವರು ಇನ್ನು ಬುಂದೇಲಖಂಡದ ತುಂಬ ಗೊಂದಲ ಹಾಕಬಹುದಲ್ಲವೆ?

ಸುಫಲಾದೇವಿ—ಅದರಲ್ಲಿ ಸಂಶಯವೇನು? ಆ ಗೂಗೆಗಳ ಗೊಂದಲವಷ್ಟೇ ಅಲ್ಲ; ಹೀರಾದೇವಿ, ಸಭಾಕರಣರಂಥ ಪಿಶಾಚಗಳ ಬಾಧೆಯೂ ಬುಂದೇಲಖಂಡವನ್ನು ಬಾಧಿಸದೆ ಬಿಡದು! ಈ ಉದ್ಯಾನದೊಳಗಿನ ಬಿಳಿಯ ಹೂಗಳು ಈ ಕತ್ತಲೆ ಮುಸುಕಿರುವಾಗ ಕಾಣದಿರುವಂತೆ ಚಂಪತರಾಯನ ಮರಣದಿಂದ ಪಾರತಂತ್ರ್ಯದ ಕತ್ತಲೆ ಮುಸುಕಿದ ಬುಂದೇಲಖಂಡದಲ್ಲಿ ಚಂಪತರಾಯನ ಪವಿತ್ರ ಕೃತಿಗಳೂ ಇನ್ನು ಕಣ್ಣಿಗೆ ಕಾಣದೆ ಹೋಗುವವು!

ವಿಜಯೆ—ಅವ್ವಾ, ಕತ್ತಲೆಯಲ್ಲಿ ಹೂಗಳು ಕಾಣದಿದ್ದರೂ, ಅವುಗಳ ಸುಗಂಧದಿಂದ ಇಲ್ಲಿ ಹೂ ಇರುವವೆಂಬ ಮಾತು ಗೊತ್ತಾಗುವಂತೆ, ಚಂಪತರಾಯರು ಮರಣಹೊಂದಿದ್ದರೂ ಅವರ ಕೀರ್ತಿಯು ಅವರು ಇದ್ದದ್ದರ ಸ್ಮರಣ ಮಾಡಿಕೊಡದೆ ಹೋಗುವದಿಲ್ಲ. ನಾಳೆ ಬೆಳಗಾಗಲಿ ನೋಡು, ಹೂಗಳು ಮತ್ತೆ ಕಾಣುವದಿಲ್ಲವೆ? ಅದರಂತೆ, ನಾಳೆ ಚಂಪತರಾಯರ

ಮಗ ಛತ್ರಸಾಲನು ಸ್ವಾತಂತ್ರ್ಯದ ತೇಜದಿಂದ ಬೆಳಗಹತ್ತಿದನೆಂದರೆ, ಚಂಪತರಾಯರ ಪವಿತ್ರ ಕೃತಿಗಳು ಮತ್ತೆ ಅನುಭವಕ್ಕೆ ಬರುವವು!

ಸುಫಲಾದೇವಿ—ವಿಂಧ್ಯವಾಸಿನಿಯು ಅಷ್ಟುಮಾಡಿಸಬೇಕು!

ವಿಜಯೆ—ಮಾಡಿಸಿಯೇಮಾಡಿಸುವಳು! ಅವ್ವಾ, ಆ ಚಂಪತರಾಯರ ಮಗನಾದ ಯುವರಾಜ ಛತ್ರಸಾಲನನ್ನು ನೀನು ಇನ್ನೂ ನೋಡಿಲ್ಲ ನೋಡಿದರೆ ನನ್ನ ಮಾತು ನಿನಗೂ ನಿಜವಾಗಿ ಕಂಡೀತು. ಆತನೂ, ದಲಪತರಾಯನೂ ಶೌರ್ಯದಿಂದ ಕಾದಿ ರಣದುಲ್ಲಾ ಖಾನನ್ನು ಸೆರೆಹಿಡಿದದ್ದನ್ನು ಮೊನ್ನೆ ವಿಂಧ್ಯವಾಸಿನಿಯ ಉತ್ಸವದಲ್ಲಿ ನಾನು ಕಣ್ಣುಮುಟ್ಟ ನೋಡಿದ್ದೇನೆ. ನಿಜವಾಗಿಯೆಂದರೆ, ಚಂಪತರಾಯನಿಗೆ ಸ್ವಾತಂತ್ರ್ಯ ಸೂರ್ಯನೆನ್ನುವದಕ್ಕಿಂತ, ಸ್ವಾತಂತ್ರ್ಯ ಸೂರ್ಯನ ಸಾರಥಿ ಅರುಣನೆಂದರೆ ಚನ್ನಾಗಿ ಒಪ್ಪುವದು. ನಾನಂತು ಬುಂದೇಲ ಖಂಡದ ಸ್ವಾತಂತ್ರ್ಯಸೂರ್ಯನ ಉದಯವನ್ನು ಸೂಚಿಸುವ ಅರುಣನು ಸ್ವಾತಂತ್ರ್ಯ ಸೂರ್ಯ ಪ್ರಕಾಶದಲ್ಲಿ ಅಸ್ತವಾದನೆಂದು ತಿಳಿದುಕೊಳ್ಳುವೆನು. ಇನ್ನು ಸ್ವಲ್ಪಕಾಲದಲ್ಲಿಯೇ ಬುಂದೇಲ ಖಂಡದ ಭಾಗ್ಯ ರವಿಯಾದ ಮಹೋಬದ ಛತ್ರಸಾಲನು ಸ್ವಾತಂತ್ರ್ಯದ ತೇಜದಿಂದ ಪ್ರಕಾಶಿಸತೊಡಗುವನು!

ಈ ಮೇರೆಗೆ ವಿಜಯೆಯು ನುಡಿಯುತ್ತಿರಲು, ''ವಿಜಯೇ ನಿನ್ನ ಮಾತು ಸತ್ಯವಾಗಲಿ'' ಎಂದು ಆ ತಾಯಿಮಕ್ಕಳ ಕೇವಲ ಪರಿಚಯದ ಧ್ವನಿಯಿಂದ ಹೊರಟ ವರದವಾಣಿಯು ಅವರ ಕಿವಿಗೆ ಬಿದ್ದಿತು. ಕೂಡಲೆ ಅವರು ಆಶ್ಚರ್ಯದಿಂದ ತಮ್ಮ ಆಸನದಿಂದ ಎದ್ದು ಆ ಧ್ವನಿಯು ಕೇಳಬಂದ ದಿಕ್ಕಿನಕಡೆಗೆ ಸಾಗಿಹೋಗಿ, ಅತ್ಯಂತ ನಮ್ರತೆಯಿಂದ ತಲೆಬಾಗಿ ವಿನಯದಿಂದ— ''ಪ್ರಾಣನಾಥಪ್ರಭೂ! ನಮ್ಮ ನಮನದ ಸ್ವೀಕಾರವಾಗಬೇಕು, ನಾವು ಮನಃಪೂರ್ವಕ ಪ್ರಭುಗಳ ಸ್ವಾಗತಮಾಡುವೆವು'' ಎಂದು ನುಡಿಯಲು, ಪ್ರಾಣನಾಥ ಪ್ರಭುಗಳು— ''ಸುಫಲಾದೇವೀ, ಈ ಏಕಾಂತದ ಸ್ಥಳದಲ್ಲಿ ನಿಮ್ಮನ್ನು ಕಂಡದ್ದು ಬಹಳ ನೆಟ್ಟಗಾಯಿತು. ನನ್ನ ಸಂಗಡ ಇನ್ನೂ ಮೂವರು ಇದ್ದಾರೆ. ನಾನು ಸುಫಲಾದೇವಿಯನ್ನು ಏಕಾಂತದಲ್ಲಿ ಕಾಣಬೇಕಾದುದರಿಂದ ನಾವು ರಾಜಮಾರ್ಗದಿಂದ ರಾಜಮಂದಿರವನ್ನು ಪ್ರವೇಶಿಸದೆ, ಗುಪ್ತಮಾರ್ಗದಿಂದ ಇಲ್ಲಿಗೆ ಬಂದಿದ್ದೇವೆ.

ಸುಫಲಾದೇವಿ—(ಅತ್ಯಂತ ಆದರದಿಂದ) ಪ್ರಭೋ, ನಿಮ್ಮ ಸಂಗಡ ಬಂದಿರುವವರ ಸ್ವಾಗತವನ್ನು ನಾನು ಅತ್ಯಾನಂದದಿಂದ ಮಾಡುತ್ತೇನೆ. ಪೂಜ್ಯ ಅತಿಥಿಗಳೇ, ನನ್ನ ಬೆನ್ನಹತ್ತಿ ಹೀಗೆ ದಯಮಾಡಿಸಬೇಕು, ನಿಮ್ಮನ್ನು ಯಾರೂ ನೋಡಲಾರರು.

ಸ್ವಲ್ಪ ಹೊತ್ತಿನಲ್ಲಿಯೇ ಸುಫಲಾದೇವಿಯು ಪ್ರಾಣನಾಥ ಪ್ರಭುಗಳನ್ನು, ಉಳಿದ ಅಪರಿಚಿತ ಅತಿಥಿಗಳನ್ನು ಕರೆದುಕೊಂಡು ತನ್ನ ಅಂತಃಪುರದಲ್ಲಿ ಬಂದಳು. ಅಷ್ಟರಲ್ಲಿ ವಿಜಯೆಯು ಮುಂದೆ ಬಂದು ಅಂತಃಪುರದೊಳಗಿನ ಎಲ್ಲ ದಾಸಿಯರನ್ನು ಹೊರಗೆ ಕಳಿಸಿಬಿಟ್ಟದ್ದರಿಂದ, ತಮ್ಮ ಹೊರತು ಇಲ್ಲಿ ಬೇರೆಯಾರೂ ಇರುವದಿಲ್ಲವೆಂಬದನ್ನು ನೋಡಿ ಪ್ರಾಣನಾಥಪ್ರಭುಗಳಿಗೆ ಬಹಳ ಸಮಾಧಾನವಾಯಿತು. ವಿಜಯೆಯು ತನ್ನ ಕೆಲಸವನ್ನು ತೀರಿಸಿಕೊಂಡು ಹೊರಗೆ ಹೋಗತೊಡಗಲು, ಪ್ರಾಣನಾಥಪ್ರಭುಗಳು–

ಪ್ರಾಣನಾಥ—ವಿಜಯೇ, ನೀನು ಇಲ್ಲಿ ಇದ್ದರೂ ಚಿಂತೆಯಿಲ್ಲ, ನಿನ್ನಂತಹ ಪವಿತ್ರಮನಸ್ಸಿನ ಬಾಲಿಕೆಯ ಮುಂದೆ ನಾವೇನೂ ಬಚ್ಚಿ ಇಡಲಾರೆವು. ಸುಫಲಾದೇವೀ, ಇಷ್ಟು ಆಶ್ಚರ್ಯದಿಂದ ಯಾಕೆ ನೋಡುತ್ತೀ? ಈ ಸರಲಾದೇವಿಯು ನಿನ್ನ ಚಿಕ್ಕಂದಿನ ಗೆಳತಿಯಾಗಿದ್ದು ನಿನಗೆ ಇನ್ನೂ ಆಕೆಯ ಗುರುತು ಹತ್ತಲೊಲ್ಲದೇನು? ಛತ್ರಸಾಲ, ದಲಪತರಾಯ, ಈ ಧಾರೀರದ ಅರಮನೆಯು ರಾಜಾಕಂಚುಕಿರಾಯರದಾಗಿದ್ದರೂ, ಸುಫಲಾದೇವಿಯ ಅಪ್ಪಣೆಯು ಇಲ್ಲಿ ಶಿರಸಾವಂದ್ಯವಾಗಿ ಪಾಲಿಸಲ್ಪಡುವದು. ನೀವು ಯಾವ ಬಗೆಯ ಸಂಶಯವನ್ನೂ ಮನಸ್ಸಿನಲ್ಲಿ ತಾರದೆ, ಸುಫಲಾದೇವಿಯ ಆದರಾತಿಥ್ಯವನ್ನು ಸ್ವಿಕರಿಸಿರಿ.

ಪ್ರಾಣನಾಥ ಪ್ರಭುಗಳ ಸಂಗಡ ಬಂದವರು ಅಪರಿಚಿತ ಅತಿಥಿಗಳು ಯಾರೆಂಬದು ಈ ಸುಫಲಾದೇವಿಗೆ ಗೊತ್ತಾದದ್ದರಿಂದ, ಆಕೆಯು ತನ್ನ ಚಿಕ್ಕಂದಿನ ಅನಾಥ ಗೆಳತಿಯನ್ನು ಅತ್ಯಂತ ಆದರದಿಂದ ಕೆಳಗೆ ಕುಳ್ಳಿರಿಸಿಕೊಂಡು ಭಕ್ತಿಯಿಂದ—

ಸುಫಲಾದೇವಿ—ಅಂಥ ಪುಣ್ಯಶೀಲರ ಚರಣಸ್ಪರ್ಶವು ಧಾರೀರದ ಅರಮನೆಗೆ ಆದದ್ದು ಮಹದ್ಭಾಗ್ಯವೇ ಸರಿ! ಧಾರೀರದ ರಾಜ್ಯವು ಈವರೆಗೆ ಹಿಡಿದಿರುವ ಪಾಪದ ಅಪವಿತ್ರ ದಾರಿಯನ್ನು ಬಿಟ್ಟು, ಇನ್ನು ಪುಣ್ಯದ ಪವಿತ್ರದಾರಿಯನ್ನು ಹಿಡಿಯುವದಕ್ಕೆ ಈಗ ಶುಭಶಕುನವಾಯಿತೆಂದು ನಾನು ತಿಳಿದುಕೊಳ್ಳುವೆನು! ಸರಲಾದೇವೀ, ನೀನೂ ನಾನು ಚಿಕ್ಕಂದಿನಲ್ಲಿ ಒಂದೇ ಕಡೆ ಕೆಲವು ಕಾಲ ಕೂಡಿ ಆಡಿರುವೆವು. ಆದರೆ ಆಗಿನಕಾಲದ ಸರಳೆಗಿಂತ, ಸ್ವಾತಂತ್ರ್ಯದ ವಾತಾವರಣದಲ್ಲಿ ಬೆಳೆದಿರುವ ಈಗಿನ ಸರಲಾದೇವಿಯು ಎಷ್ಟು ಶಾಂತಳೂ, ಪವಿತ್ರಳೂ, ಪೂಜ್ಯಳೂ ಆಗಿರುವಳು! ಸರಲಾದೇವಿ, ನನಗೆ ನಿಮ್ಮ ಚರಣಗಳ ಮೇಲೆ ನನ್ನ ಮಸ್ತಕವಿಡಗೊಡಿರಿ! ಛತ್ರಸಾಲನಂಥ ಸ್ವಾತಂತ್ರ್ಯಪ್ರಿಯ ವೀರನಿಗೆ ಜನ್ಮಕೊಡುವ ಪುಣ್ಯವತಿ ಮಾತೆಯ ಪಾದವನ್ನು ಬುಂದೇಲಖಂಡದೊಳಗಿನ ಪ್ರತಿಯೊಬ್ಬ ಸ್ತ್ರೀಯೂ, ಪ್ರತಿಯೊಬ್ಬ ಪುರುಷನೂ ಭಕ್ತಿಯಿಂದ ವಂದಿಸಲೇಬೇಕು!

ಈಮೇರೆಗೆ ನುಡಿದು ಸುಫಲಾದೇವಿಯು ಸರಲಾದೇವಿಯ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು! ಆಗ ಸರಲಾದೇವಿಯು—''ಅವ್ವಾ, ಸುಫಲಾದೇವಿ, ಬೇಡ, ಈ ಭಾಗ್ಯ ಹೀನಳ ಕಾಲುಹಿಡಿದುಕೊಳ್ಳಬೇಡ,'' ಎಂದು ನುಡಿಯುತ್ತಿರಲು, ಸುಫಲಾದೇವಿಯು—''ದೇವಿ, ನೀನು ಭಾಗ್ಯಹೀನಳೆ? ಬುಂದೇಲಖಂಡದ ಚಂಪತರಾಯರಂಥ ತೇಜಸ್ವಿ ರತ್ನವನ್ನು ಅಲಂಕರಿಸಿದ ಸಾಧ್ವೀಮಣಿಯು ನೀನು, ಕೀರ್ತಿಶೇಷರಾಗಿ ಚಂಪತರಾಯರು ಆಚಂದ್ರಾರ್ಕ ಶಾಶ್ವತರಾಗಿರಲು, ನೀನು ಭಾಗ್ಯಹೀನಳೇ? ಅವ್ವಾ, ಭಾಗ್ಯಹೀನರು ನಾವು! ಹುಳದಹಾಗೆ ಹುಟ್ಟುವೆವು, ಹುಳದಹಾಗೆ ಸತ್ತುಹೋಗುವೆವು! ದೇವೀ, ಬುಂದೇಲಖಂಡದ ಭಾಗ್ಯ ಲಕ್ಷ್ಮಿಯೇ, ಛತ್ರಸಾಲನಂತಹ ವೀರಾಗ್ರಣಿಯು ನಿನ್ನ ಪವಿತ್ರ ಉದರವನ್ನು ಅಲಂಕರಿಸಿ ನಿನ್ನನ್ನು ವೀರಮಾತೆಯಾಗಮಾಡಿರುವಾಗ, ನೀನು ಸೌಭಾಗ್ಯಹೀನಳೆ? ನಿನ್ನ ಭಾಗ್ಯದಮುಂದೆ ಈ ಪರತಂತ್ರ ಸುಫಲೆಯ ಭಾಗ್ಯವೇನು ಹೇಳು? ತೇಜಸ್ವಿನಿಯಾದ ಈ ನಮ್ಮ ವಿಜಯೆಯ ಪುಣ್ಯದಿಂದ ನಾನು ಸ್ವಾತಂತ್ರ್ಯದ ಭಾಗ್ಯವನ್ನು ಕಂಡರೆ ಕಾಣಬೇಕು.

ಈ ಮೇರೆಗೆ ನುಡಿದು ಸುಫಲಾದೇವಿಯು ಕೆಲಹೊತ್ತು ಸುಮ್ಮನೆ ಕುಳಿತು, ತನ್ನ ಹಾಗು ಸರಲಾದೇವಿಯ ಸ್ಥಿತಿಯನ್ನು ಹೋಲಿಸಿ ನೋಡುತ್ತ ಛತ್ರಸಾಲನ ಕಡೆಗೆ ನೋಡಿದಳು. ಉಕ್ಕಿಬರುವ ಆತನ ಕ್ಷಾತ್ರತೇಜಸ್ಸಿನಿಂದ ಆ ಸುಫಲಾದೇವಿಯ ಮನಸ್ಸು ಪರಮ ಸಂತುಷ್ಟ ವಾಯಿತು; ಛತ್ರಸಾಲನು ನಿಶ್ಚಯ ಬುದ್ಧಿಯವನು, ಆದರೆ ಅವನ ಸ್ವಭಾವವು ಪ್ರೇಮಲ; ತೇಜಸ್ವಿಯು, ಆದರೆ ಸರಳನು; ಮಾನನನು, ಆದರೆ ಗರ್ವರಹಿತನು. ಇವೆಲ್ಲ ಲಕ್ಷಣಗಳು ಅವನ ಮುಖಮುದ್ರೆಯಲ್ಲಿ ತೋರುವದನ್ನು ನೋಡಿ, ಸುಫಲಾದೇವಿಯ ಮನಸ್ಸು ಕರಗಿ ಹೋಗಿ ಛತ್ರಸಾಲನ ವಿಷಯವಾಗಿ ಆಕೆಯು ಅತ್ಯಂತ ಆದರಭಾವವುಳ್ಳವಳಾದಳು! ಈ ಪ್ರಸಂಗದಲ್ಲಿ ತಾನು ಅಪುತ್ರವತಿಯೆಂಬ ವಿಷಯದಲ್ಲಿ ಆಕೆಯ ಮನಸ್ಸು ಸ್ವಲ್ಪ ಕುಗ್ಗಿತು; ಆದರೆ ತನ್ನ ಪ್ರಿಯ ಪುತ್ರಿಯಾದ ವಿಜಯೆಯ ನೆನಪಾಗಲು, ಆ ಕುಗ್ಗಿದ ಮನಸ್ಸು ಮತ್ತೆ ಹಿಗ್ಗಿತು. ಆಕೆಯ ಮನಸ್ಸಿನಲ್ಲಿ—''ಈ ಸರಲಾದೇವಿಯ ಮಗ ಛತ್ರಸಾಲನು ಮಹಾ ಪರಾಕ್ರಮಿಯೂ, ಸ್ವದೇಶಾಭಿಮಾನಿಯೂ, ಸ್ವಧರ್ಮನಿರತನೂ, ಅತ್ಯಂತ ಮನೋಹರನೂ ಆಗಿರುವದರಿಂದ, ಆತನು ಸರಲಾದೇವಿಯೊಬ್ಬಳ ಮಗನೇ ಆಗಿರದೆ, ಬುಂದೇಲಖಂಡದ ಸತ್ಪುತ್ರನೂ ಆಗಿರುವನು; ಯಾಕಂದರೆ ಆತನ ಮೇಲೆ ಪ್ರೇಮಮಾಡುವ ಅಧಿಕಾರವೂ, ಆತನಿಂದ ಪುತ್ರನ ಕರ್ತವ್ಯಗಳನ್ನು ಮಾಡಿಸಿಕೊಳ್ಳುವ ಅಧಿಕಾರವೂ ಇಡಿಯ ಬುಂದೇಲ ಖಂಡಕ್ಕೇ ಇರುತ್ತದೆ! ಅದರೆ ಇಂಥ ಈ ಸತ್ಪುತ್ರನ ಜೋಡು ವಿವಾಹ ಬಂಧನದಿಂದ ನಮ್ಮ ವಿಜಯೆಗೆ ಆದರೆ, ನನಗೆ ಪುತ್ರ ಪ್ರಾಪ್ತಿಯ ಲಾಭವೂ, ಸರಲಾದೇವಿಗೆ ಕನ್ಯಾಪ್ರಾಪ್ತಿಯ ಲಾಭವೂ ಆಗುವದಲ್ಲವೆ?'' ಎಂಬಿವೇ ಮೊದಲಾದ ಸದಾಲೋಚನೆಗಳಿಂದ ಅನಂದಪಡುತ್ತ ಅತಿಥಿಗಳ ಸತ್ಕಾರದ ವ್ಯವಸ್ಥೆಯನ್ನು ಬೇಗನೆ ಮಾಡುವದಕ್ಕಾಗಿ ವಿಜಯೆಗೆ ಏನೋ ಸೂಚಿಸುತ್ತಿರಲು, ಪ್ರಾಣನಾಥ ಪ್ರಭುಗಳು ಸುಫಲಾದೇವಿಯನ್ನು ಕುರಿತು—

ಪ್ರಾಣನಾಥಪ್ರಭು—ಸುಫಲಾದೇವೀ, ಛತ್ರಸಾಲನೂ, ದಲಪತರಾಯನೂ ಇಂದು ಬಹು ದೂರದಿಂದ ದಣಿದು ಬಂದಿರುವರು. ನಿನ್ನೆ ರಾತ್ರಿಯಿಂದ ಅವರು ಬಾಯಲ್ಲಿ ನೀರು ಹಾಕಿರುವದಿಲ್ಲ, ಅವರಿಗೆ ಸುಫಲಾದೇವಿಯ ಅತಿಥ್ಯದ ಅವಶ್ಯಕತೆಯು ವಿಶೇಷ ವಾಗಿರುತ್ತದೆ; ಆದರೆ ಅವರು ಇಲ್ಲಿಗೆ ಬಂದ ಉದ್ದೇಶವು ಸಫಲವಾದಹೊರತು ಅವರು ಅನ್ನಗ್ರಹಣಮಾಡುವದಿಲ್ಲ; ಹಾಗೂ ವಿಶ್ರಾಂತಿಯನ್ನೂ ಹೊಂದುವದಿಲ್ಲ!

ಸುಫಲ—(ಕೈಜೋಡಿಸಿ) ಪ್ರಭೂ, ನಾನು ಅವರ ಸುಲವಾಗಿ ಏನು ಮಾಡಲಿ? ಯಾವ ಸೇವನೆಯನ್ನು ಮಾಡಿದರೆ ಸರಲಾದೇವಿಯು ಸಂತುಷ್ಟಳಾಗುವಳು? ಕುಮಾರ ಛತ್ರಸಾಲ ನಂಥ ಬುಂದೇಲಖಂಡದ ಭಾಗ್ಯರವಿಯು ಯಾವ ಉದಾತ್ತ ಉದ್ದೇಶದಿಂದ ಧಾರೀರದ ಅರಮನೆಗೆ ಬಂದಿರುವನು? ಹೇಳಿರಿ, ಪ್ರಾಣನಾಥಪ್ರಭೂ, ನನಗೆ ವಂಧ್ಯರಾಗಿರುವ ಈ ಅತಿಥಿಗಳ ಉದ್ದೇಶವೇನೆಂಬದನ್ನು ಹೇಳಿರಿ; ಅಂದರೆ ಅದನ್ನು ಪೂರ್ಣಮಾಡಲಿಕ್ಕೆ ನನಗೆ ನೆಟ್ಟಗಾಗುವದು.

ಪ್ರಾಣನಾಥಪ್ರಭು—(ಆನಂದದಿಂದ) ದೇವೀ, ನೀನು ಬಹು ದೊಡ್ಡ ಮನುಷ್ಯಳು, ಶುದ್ಧಮನಸ್ಸಿನವಳು! ಚಂಪತರಾಯನು ಮರಣಹೊಂದಿದ್ದರಿಂದ ಮಹೋಬದ ರಾಜಮನೆತನದ ಮೇಲೆ ಎಂತಹ ದುರ್ಧರ ಪ್ರಸಂಗವು ಒದಗಿರುವದೆಂಬದು ಯಾವತ್ತು ಬುಂದೇಲಖಂಡದಲ್ಲಿ ಪ್ರಸಿದ್ಧವಾಗಿರುವದು. ಚಂಪತರಾಯನು ಮರಣಹೊಂದಿದ್ದರೂ, ಚಂಪತರಾಯನ ರಾಜಧಾನಿಯ ಮೇಲೆ ಯವನರ ಹಸರು ನಿಶಾನೆಯೇರಿದರೂ ಹೀರಾದೇವಿಗೆ ಸಮಾಧಾನ ವಾಗಿಲ್ಲ; ಆಕೆಯು ಚಂಪತರಾಯನ ವಂಶವನ್ನೇ ಹುರಿದುಬಿಡಬೇಕೆಂದು ತನ್ನ ಸೇವಕರನ್ನು ನಾಲ್ಕೂಕಡೆಗೆ ಇವರ ಶೋಧಕ್ಕಾಗಿ ಕಳಿಸಿರುವದಲ್ಲದೆ, ಇವರನ್ನು ಹುಡುಕಿ ಕೊಟ್ಟವರಿಗೆ ದೊಡ್ಡ ದೊಡ್ಡ ಇನಾಮುಗಳನ್ನು ಕೊಡುವೆನೆಂದು ಡಂಗುರಸಾರಿಸಿರುವಳು! ಅತ್ತ ಮೊಗಲ ಬಾದಶಹನೂ ಇವರನ್ನು ಹಿಡಿಯುವದಕ್ಕಾಗಿ ಯತ್ನಿಸುತ್ತಿರುವನು. ಅಂದಬಳಿಕ ಇವರ ಸಂರಕ್ಷಣದ ಭಾರವು ಎಷ್ಟು ದುಸ್ಸಹವಾದದ್ದೆಂಬದನ್ನು ನಾನು ವಿವರಿಸಿ ಹೇಳುವ ಕಾರಣವಿಲ್ಲ. ಅಂತಹ ಭಾರವನ್ನು ನಿನ್ನ ಮೇಲೆ ಹೊರಿಸಬೇಕೆಂದು ನಾನು ಬಂದಿರುವೆನು. ಈ ವಿಷಯವಾಗಿ ಹಲವು ಕಡೆಗೆ ಪ್ರಯತ್ನಮಾಡಿ ನಿರಾಶೆಪಟ್ಟಿರುವೆನು. ಯಾರು ಹೀರಾದೇವಿಯ ಭಯದಿಂದ, ಯಾರು ಬಾದಶಹನ ಭಯದಿಂದ ಈ ಭಾರ ಹೊರಲಿಕ್ಕೆ ಹಿಂಜರಿದರು. ಈಗ ನಿನ್ನ ಬಳಿಗೆ ಬಂದಿರುವದೆಂದರೆ, ಕಟ್ಟಕಡೆಯ ಯತ್ನವು! ಈಗ ನೀನು ಧೈರ್ಯಮಾಡಿ ಬುಂದೇಲಖಂಡದ ಮರ್ಯಾದೆಯನ್ನಾದರೂ ಉಳಿಸು, ಇಲ್ಲವೆ, ಸ್ವಾತಂತ್ರ್ಯಪ್ರಾಪ್ತಿಗಾಗಿ ಹೆಣಗಾಡುತ್ತಿದ್ದ ಚಂಪತರಾಯನ ಅನಾಥ ಕುಟುಂಬಕ್ಕೆ ವಿಪತ್ಕಾಲದಲ್ಲಿ ಸಹಾಯ ಮಾಡಲಿಲ್ಲವೆಂಬ ಅಪಕೀರ್ತಿಯು ಬುಂದೇಲಖಂಡಕ್ಕೆ ಉಂಟಾಗುವಂತೆಯಾದರೂ ಮಾಡು!

ಸುಫಲಾದೇವಿ—(ಗಾಂಭೀರ್ಯದಿಂದ) ಚಂಪತರಾಯರು ಇಡಿಯ ಬುಂದೇಲಖಂಡದ ಮೇಲೆ ಮಾಡಿರುವ ಉಪಕಾರದಲ್ಲಿ ಈ ಸುಫಲಾದೇವಿಯ ಪಾಲಿಗೆ ಅಲ್ಪಸ್ವಲ್ಪವಾದರೂ ಬಂದಿರಬಹುದು; ಆದರೆ ನನ್ನ ಪತಿಗೆ ಪ್ರಾಣ ದಾನಮಾಡಿ ನನಗೆ ಸೌಭಾಗ್ಯದಾನ ಮಾಡಿದ ಆ ಮಹಾತ್ಮನ ಅನಂತವಾದ ಉಪಕಾರವನ್ನು ನಾನು ಹೇಗೆ ಮರೆಯಲಿ? ಪ್ರಭೂ ಆ ಉಪಕಾರಕ್ಕಾಗಿ ನಾನು ನನ್ನ ಮೈದೊಗಲ ಜೋಡನ್ನು ಮಾಡಿ ಈ ಸರಲಾದೇವಿಯ ಕಾಲಿಗೆ ಹಾಕಿದರಾರೂ ಆ ಉದಾರ ಹೃದಯದ ಮಹಾತ್ಮನ ಉಪಕಾರವು ತೀರಬಹುದೆ? ಸರಲಾದೇವಿಯ ಸಲುವಾಗಿ, ಛತ್ರಸಾಲನ ಸಲುವಾಗಿ ನಾನು ಏನು ಮಾಡಬೇಕೆಂಬದನ್ನು ಅಜ್ಞಾಪಿಸಿರಿ; ನಿಮ್ಮಂತ ಅಲೌಕಿಕ ಮಹಾಮಹಿಮರ ಕೃಪಾದೃಷ್ಟಿಯು ಅವರ ಮೇಲೆ ಇರುವಾಗ, ನಾನು ಅವರಮೇಲೆ ಯಾವ ಉಪಕಾರ ಮಾಡುವದಕ್ಕಾಗಿಯಾಗಲಿ ಯಾಕೆ ಹೆದರಬೇಕು? ಸತ್ಪುರುಷರ ಕೃಪೆಯಿಂದ ಸಕಲ ವಿಪತ್ತುಗಳೂ ದೂರವಾಗುತ್ತಿರಲು, ಅನಾಯಾಸವಾಗಿ ನನಗುಂಟಾಗಬಹುದಾದ ಕೃತಕೃತ್ಯತೆಗಾಗಿ ನಾನು ಯಾಕೆ ಹಿಂದೆ ಮುಂದೆ ನೋಡಲಿ? ಮಹಾತ್ಮನ್ನ, ಸರಲಾದೇವಿ—ಛತ್ರಸಾಲರ ಕಾರ್ಯನಿರ್ವಾಹಕ್ಕಾಗಿ ಈ ಧಾರೀರದ ಸಮಸ್ತ ರಾಜ್ಯವನ್ನು ಪ್ರಭುಗಳ ಚರಣಕ್ಕೆ ಅರ್ಪಿಸುತ್ತೇನೆ. ಬೇಕಾದರೆ ಛತ್ರಸಾಲನು ಇಂದೇ ಈ ಧಾರೀರದ ರಾಜ್ಯದ ರಾಜಧಾನಿಯ ಮೇಲೆ ತನ್ನ ಸ್ವಾತಂತ್ರ್ಯದ ಧ್ವಜವನ್ನು

ನಿಲ್ಲಿಸಲಿ! ಪ್ರಾಣನಾಥ ಪ್ರಭೋ, ಇಲ್ಲಿಯ ಸಂಪತ್ತಿ ಇಲ್ಲಿಯ ದಾಸದಾಸಿಯರು, ಇಲ್ಲಿಯ ಅಭೇದ್ಯ ಕೋಟೆಯು, ಇಲ್ಲಿಯ ಸೈನ್ಯ, ಇಲ್ಲಿಯ ಪ್ರತಿ ಒಂದು ವಸ್ತುವು ಚಂಪತರಾಯರವೇ ಇರುತ್ತವೆಂದು ತಿಳಿದು, ನಿಮ್ಮ ಮನಸ್ಸಿಗೆ ಬಂದಹಾಗೆ ಅವುಗಳ ವ್ಯವಸ್ಥೆಮಾಡಿರಿ. ಸರಲಾದೇವೀ, ಈ ಅರಮನೆಯು ಧಾರೀರದ ಅರಮನೆಯೆಂದು ತಿಳಿಯಬೇಡಿರಿ. ಇದು ಮಹೋಬುದ ಅರಮನೆಯು. ಇಲ್ಲಿ ನೀವು ಕುಮಾರಛತ್ರಸಾಲನೊಡನೆ ಸಂತೋಷದಿಂದ ಇರಬೇಕು. ಸರಲಾದೇವಿಯ ಸೇವೆಯಿಂದ ಸುಫಲಾದೇವಿಯು ಧನ್ಯಳಾಗತಕ್ಕವಳಿದ್ದಾಳೆ!

ಪ್ರಾಣನಾಥ—(ಹರ್ಷಭರದಿಂದ) ಸುಫಲಾದೇವೀ, ನೀನು ನಿಜವಾಗಿಯೂ ಉದಾರ ಹೃದಯದ ಸಾಧ್ವಿಯೆಂಬದರಲ್ಲಿ ಸಂಶಯವಿಲ್ಲ. ನೀನು ಕಂಚುಕಿರಾಯನಂಥ ಪರಾವಲಂಬಿ ರಾಜನ ಕೈಹಿಡಿದಿದ್ದರೂ, ನಿನ್ನ ಸದ್ಗುಣಗಳ ಪರಿಮಳವು ಸ್ವಲ್ಪವೂ ಕಡಿಮೆಯಾಗಿರುವದಿಲ್ಲ. ನೀನು ಬುಂದೇಲಖಂಡದ ಮರ್ಯಾದೆಯನ್ನು ಕಾದೆ! ಇಲ್ಲದಿದ್ದರೆ ಸ್ವಾತಂತ್ರ್ಯಪ್ರಿಯ ಚಂಪತರಾಯನ ಕುಟುಂಬದವರಿಗೆ ಅವರ ವಿಪತ್ಕಾಲದಲ್ಲಿ ಯಾರೂ ಸಹಾಯಮಾಡಿಲ್ಲವೆಂಬ ಕಲಂಕವು ಕಡೆತನಕ ಅದಕ್ಕೆ ತಗಲುತ್ತಿತ್ತು.

ಈಮೇರೆಗೆ ಸಂಭಾಷಣಗಳು ನಡೆದಿರಲು, ವಿಜಯೆಯು ಊಟದ ಸಿದ್ಧತೆಯಾಗಿರುವದೆಂದು ಸೂಚಿಸಿದಳು. ಛತ್ರಸಾಲನು ತಮ್ಮ ಮನೆಗೆ ಬಂದಿದ್ದರಿಂದ ವಿಜಯೆಗೆ ಪರಮಾನಂದವಾಗಿತ್ತು. ಹಿಂದಕ್ಕೆ ಮದನ ಸರೋವರದ ಮೇಲೆ ನಡೆದ ಪ್ರಸಂಗವು ಆಕೆಯ ಕಣ್ಣಿಗೆ ಈಗ ಕಟ್ಟಿದಹಾಗಾಯಿತು. ತನ್ನ ಹಾಗು ವಿಮಲದೇವನೆಂದು ಕರೆಸಿಕೊಳ್ಳುತ್ತಿರುವ ವಿಮಲೆಯ ಜೀವವನ್ನು ಬದುಕಿಸಿದ ಆ ಮನೋಹರ ಮೂರ್ತಿಯನ್ನು ಎಷ್ಟು ನೋಡಿದರೂ ಆಕೆಗೆ ತೃಪ್ತಿಯಾಗದಾಯಿತು. ಪ್ರಾಣನಾಥ ಪ್ರಭುಗಳ ಅಪ್ಪಣೆಯಂತೆ ಎಲ್ಲರೂ ಭೋಜನಕ್ಕಾಗಿ ಎದ್ದರು. ಚಂಪತರಾಯನು ಮರಣಹೊಂದಿದ ಬಳಿಕ, ಆತನ ಈ ಪರಿವಾರವು ಊಟಕ್ಕೆ ಕುಳಿತದ್ದೆಂದರೆ ಇದೇ ಮೊದಲು! ಪತಿವಿಯೋಗ ದುಃಖದಿಂದಲೂ, ಇನ್ನು ಮೇಲೆ ಆಗಬೇಕಾಗಿರುವ ಪುತ್ರವಿಯೋಗ ದುಃಖದಿಂದಲೂ ಸರಲಾದೇವಿಗೆ ಊಟವು ಹೋಗಲಿಲ್ಲ! ಆದರೂ ಸುಫಲಾದೇವಿಯಂಥ ಸಾಧ್ವಿಯ ನಿರ್ಭಯದ ಆಸರವು ದೊರೆತದ್ದಕ್ಕಾಗಿ ಆಕೆಯು ಸಮಾಧಾನಪಟ್ಟಳು.

## ಸ್ವಾತಂತ್ರ್ಯ ಪ್ರಾಪ್ತಿಯ ಗುಟ್ಟು.

ಭೋಜನವಾದ ಬಳಿಕ ಎಲ್ಲರೂ ಮತ್ತೆ ಒತ್ತಟ್ಟಿಗೆ ಕುಳಿತು ಹಲವು ಸಂಗತಿಗಳನ್ನು ಕುರಿತು ಸಂಭಾಷಣ ನಡಿಸಿದರು. ಪ್ರಾಣನಾಥ ಪ್ರಭುಗಳಂಥ ಮಹಾತ್ಮರ, ಹಾಗು ಚಂಪತರಾಯನ ಪರಿವಾರದಂಥ ಸ್ವಾತಂತ್ರ್ಯಪ್ರಿಯ ಪರಿವಾರದ ಸಹವಾಸವಾದದ್ದರಿಂದ ಸುಫಲಾದೇವಿಗೆ ಎಂದೂ ಅನುಭವಕ್ಕೆ ಬಂದಿರದ ಆನಂದವು ಉಂಟಾಯಿತು. ಈ ಆನಂದವು ಬಹುಕಾಲ

ಒದಗುವ ಸಂಭವವಿರುವದಕ್ಕಾಗಿ ಆಕೆಯು ಉತ್ಸಾಹಗೊಂಡಳು. ಅತಿಥಿಗಳು ದಣಿದು ಬಂದವರಾದದ್ದರಿಂದ ಅವರು ವಿಶ್ರಾಂತಿಯನ್ನು ತಕ್ಕೊಳ್ಳಲೆಂದು ಆಕೆಯು ಎಲ್ಲ ಸಿದ್ಧತೆಮಾಡಿಸಿ ಪ್ರಭುಗಳನ್ನು ಕುರಿತು–

ಸುಫಲಾದೇವಿ–ಪ್ರಭೋ, ಮಾತಾಡಲಿಕ್ಕೆ ನಾಳೆ ಬೇಕಾದಷ್ಟು ಹೊತ್ತು ಇದೆ. ಇಂದು ಎಲ್ಲರೂ ದಣಿದುಬಂದವರಾಗಿರುವದರಿಂದ ವಿಶ್ರಾಂತಿಯನ್ನು ಹೊಂದುವದು ಯೋಗ್ಯವಾಗಿ ತೋರುತ್ತದೆ. ರಾತ್ರಿಯೂ ಆರು ತಾಸು ಮೀರಿತು.

ಪ್ರಭುಗಳು—ದೇವೀ, ನಮಗಿನ್ನೆಲ್ಲಿಯ ವಿಶ್ರಾಂತಿಯು! ಬುಂದೇಲಖಂಡಕ್ಕೆ ಸ್ವಾತಂತ್ರ್ಯ ಪ್ರಾಪ್ತಿಯಾಗುವವರೆಗೆ ನಾವು ವಿಶ್ರಾಂತಿಯ ಮಾತು ಎತ್ತುವಹಾಗಿಲ್ಲ. ಸರಲಾದೇವಿಯೊಬ್ಬಳು ನಿನ್ನ ಆಶ್ರಯದಲ್ಲಿರುವಳು. ಆಕೆಯನ್ನಷ್ಟು ಜೋಕೆ; ಯಾಕಂದರೆ, ಕಂಚುಕಿರಾಯನು ಕೇವಲ ಮೊಗಲ ಪಕ್ಷಪಾತಿಯು, ಬಾದಶಹನ ಸಂತೋಷಕ್ಕಾಗಿ ಆತನು ಏನುಮಾಡಲಿಕ್ಕೂ ಹೇಸುವ ವನಲ್ಲ. ಕೇವಲ ನಿನ್ನ ಧೈರ್ಯದಿಂದ ಚಂಪತರಾಯ ಪತ್ನಿಯನ್ನು ಛತ್ರಸಾಲನ ಮಾತೆಯನ್ನು ನಿನ್ನಬಳಿಯಲ್ಲಿ ಬಿಟ್ಟುಹೋಗುತ್ತೇವೆ. ಆಕೆಯನ್ನಷ್ಟು ದಕ್ಷತೆಯಿಂದ ರಕ್ಷಿಸು. ಆಕೆಯು ಇಲ್ಲಿ ಇರುವಳೆಂಬ ಸುದ್ದಿಯು ಎಷ್ಟು ಮಾತ್ರವೂ ಹೊರಬೀಳಲಾಗದು.

ಸುಫಲಾದೇವಿ—ಭಗವನ್ನ, ಅದರ ಚಿಂತೆ ತಮಗೆಬೇಡ. ಇಷ್ಟುರಾತ್ರಿಯಲ್ಲಿ ತಾವು ಮೂವರೂ ಹೋಗುವದೆಲ್ಲಿಗೆ? ಸತ್ಸಮಾಗಮವು ಕೆಲದಿನಗಳವರೆಗಾದರೂ ಈ ಪಾಮರಳಿಗೆ ಆಗಬಾರದೇನು? ಕುಮಾರ ಛತ್ರಸಾಲನು ಅನುಕೂಲ ಕಾಲವು ಬರುವವರೆಗೆ ಇಲ್ಲಿ ಇರುವದು ನೆಟ್ಟಗಲ್ಲವೆ? ಬೇಕಾದರೆ ನಾನು ಆಗಲೆ ಹೇಳಿದಂತೆ ಆತನು ಈ ಧಾರೀರದ ಕೋಟೆಯ ಮೇಲೆ ತನ್ನ ಸ್ವಾತಂತ್ರ್ಯದ ಧ್ವಜವನ್ನು ನಿಲ್ಲಿಸಿ, ಸ್ವಾತಂತ್ರ್ಯಪ್ರಾಪ್ತಿಗಾಗಿ ಯತ್ನಿಸಲೂಬಹುದು!

ಛತ್ರಸಾಲ—ದೇವೀ, ಸ್ವಾತಂತ್ರ್ಯಕ್ಕಾಗಿ ಬಾದಶಹನೊಡನೆ ಕಾದುವ ಪ್ರಸಂಗದಲ್ಲಿ ಧಾರೀರದ ಕೋಟೆಯಂಥ ಭದ್ರವಾದ ಕೋಟೆಯ ಉಪಯೋಗವನ್ನು ಮಾಡಿಕೊಳ್ಳಲೇ ಬೇಕಾಗುವದು; ಆದರೆ ಈಗ ಆ ಕೆಲಸಮಾಡುವದು ಸರಿಯಲ್ಲ; ಮತ್ತು ನೀನು ಹೇಳಿದಂತೆ ಅನುಕೂಲಕಾಲದ ಹಾದಿಯ ನೋಡುತ್ತ ಧಾರೀರದ ಕೋಟೆಯಲ್ಲಿ ಅಡಗಿಕೊಂಡು ಕುಳಿತು ಕೊಳ್ಳುವದೂ ಸರಿಯಲ್ಲ; ಆದ್ದರಿಂದ ಅನುಕೂಲಕಾಲವು ಬೇಗನೆ ಒದಗುವಂತೆ ಮಾಡುವದಕ್ಕಾಗಿ ಪ್ರಭುಗಳೊಡನೆ ನಾನು ಹೋಗಲೇ ಬೇಕಾಗುವದು.

ಸುಫಲಾದೇವಿ—ಕುಮಾರ ಛತ್ರಸಾಲ, ಈಗ ನೀನು ಹೋಗುವದಾದರೂ ಎಲ್ಲಿಗೇ?

ಛತ್ರಸಾಲ—ಔರಂಗಜೇಬನ ಸರದಾರನಾದ ರಾಜಾ ಜಯಸಿಂಗನ ಸೇನೆಯೊಡನೆ ದಕ್ಷಿಣಕ್ಕೆ ಹೋಗುವೆನು.

ಸುಫಲಾದೇವಿ—(ಆಶ್ಚರ್ಯದಿಂದ)ಏನು? ಛತ್ರಸಾಲನು ರಾಜಾ ಜಯಸಿಂಗನ ಚಾಕರಿಯನ್ನು ಮಾಡುವನೋ? ರಾಜಾ ಚಂಪತರಾಯನ ಮಗನು ದಿಲ್ಲೀಪತಿಯ ಸೇವಕನಾಗುವನೇನು?

ಛತ್ರಸಾಲ—(ಗಾಂಭೀರ್ಯದಿಂದ)ನನಗೆ ಅತ್ಯಂತ ಅಪ್ರಿಯವಾಗಿರುವ ಬಾದಶಹನ ಸೇವೆಯನ್ನು ಸ್ವಾತಂತ್ರ್ಯಪ್ರಾಪ್ತಿಗಾಗಿ ಕೆಲವುದಿನ ನಾನು ಮಾಡಬೇಕಾದೀತು? ಮುಖ್ಯಮಾತು,

ಯಾವ ದಾರಿಯಿಂದಾದರೂ ಬುಂದೇಲಕ್ಕೆ ಸ್ವಾತಂತ್ರ್ಯಪ್ರಾಪ್ತಿಯಾಗುವದು ಛತ್ರಸಾಲನಿಗೆ ಬೇಕಾಗಿದೆ!

ಸುಫಲಾದೇವಿ—ಯೋಗ್ಯವಿಚಾರವು; ಆದರೆ ರಾಜಾ ಜಯಸಿಂಗನು ಈಗ ದಕ್ಷಿಣಕ್ಕೆ ದಂಡೆತ್ತಿಹೋಗುವ ಕಾರಣವೇನು?

ಛತ್ರಸಾಲ—ದಿಲ್ಲೀಪತಿಯ ಒಬ್ಬ ಅಧಿಕಾರಿಯಾದ ಬಹದ್ದೂರ ಖಾನಕೋಕಾ ಎಂಬಾತನು ದಕ್ಷಿಣದಲ್ಲಿಯ ದೇವಗಡಕ್ಕೆ ಮುತ್ತಿಗೆ ಹಾಕಿಕೊಂಡು ಕುಳಿತಿರುತ್ತಾನೆ. ಆತನಿಗೆ ಸಹಾಯಮಾಡುವದಕ್ಕಾಗಿ ದಿಲ್ಲೀಪತಿಯ ಅಪ್ಪಣೆಯಂತೆ ರಾಜಾ ಜಯಸಿಂಗನು ಅಲ್ಲಿಗೆ ಹೋಗುತ್ತಿರುವನು.

ಸುಫಲಾದೇವಿ—ದಿಲ್ಲೀಪತಿಯ ಕಡೆಯವನಾಗಿ ಛತ್ರಸಾಲನು ದಕ್ಷಿಣದಲ್ಲಿ ಸಮರ ಪಟ್ಟುತ್ವವನ್ನು ತೋರಿಸುವದು ಪ್ರಭುಗಳ ಮನಸ್ಸಿಗೆ ಬರುವದೋ?

ಪ್ರಾಣನಾಥಪ್ರಭು—ಸುಫಲಾದೇವೀ, ನಿನ್ನಂತ ಸ್ವಾತಂತ್ರ್ಯಪ್ರಿಯಳಾದ ಸ್ವಾಭಿಮಾನದ ಸಾಧ್ವಿಗೆ ಈ ಪ್ರಶ್ನವು ಬಹಳವಾಗಿ ಒಪ್ಪುವದು. ಛತ್ರಸಾಲನು ಕೇವಲ ದಿಲ್ಲಿಯ ಬಾದಶಹನ ಪಕ್ಷದಿಂದ ಕಾದುವಕ್ಕಾಗಿ ಹೋಗುವದಿಲ್ಲ, ದಕ್ಷಿಣದಲ್ಲಿರುವ ಸ್ವಾತಂತ್ರ್ಯಪ್ರಿಯ ಶಿವಾಜಿಯು ತನ್ನ ಮಹಾರಾಷ್ಟ್ರಕ್ಕೆ ಸ್ವಾತಂತ್ರ್ಯವನ್ನು ಒದಗಿಸಿ ಕೊಡವದಕ್ಕಾಗಿ ಮಾಡುತ್ತಿರುವ ಯತ್ನವನ್ನು ಕಣ್ಣುಮುಟ್ಟಿ ನೋಡಿ, ಆ ಮಹಾಪುರುಷನ ಪ್ರತ್ಯಕ್ಷ ದರ್ಶನಮಾಡಿಕೊಂಡು ಆತನ ಆಲೋಚನೆಯನ್ನು ಕೇಳಿ, ಆಮೇಲೆ ಬುಂದೇಲಖಂಡದ ಸ್ವಾತಂತ್ರ್ಯ ಸಂಪಾದನದ ಕಾರ್ಯಕ್ಕಾಗಿ ಕಂಕಣಕಟ್ಟಿಕೊಳ್ಳಬೇಕೆಂದು ಆತನು ಮಾಡಿರುವನು! ದೇವೀ, ರಾಜಾ ಜಯಸಿಂಗನು ಚಂಪತರಾಯನ ಮಿತ್ರನಾಗಿರುವದಿಂದ, ಛತ್ರಸಾಲನ ಸಂಕರ್ಷಣದ ಸಲುವಾಗಿ ಚಿಂತೆ ಮಾಡುವಂತೆ ಇಲ್ಲ. ರಾಜಾ ಜಯಸಿಂಗನು ಪ್ರತಿಜ್ಞೆ ಒಳಗಾಗಿ ತಾನು ದಿಲ್ಲಿಯ ಬಾದಶಹನಿಗೆ ಅಂಕಿತನಾಗಿದ್ದರೂ, ಸ್ವಾತಂತ್ರ್ಯಕ್ಕಾಗಿ ಯತ್ನಿಸುವವರನ್ನು ನೋಡಿ ಆತನು ಸಂತೋಷಪಡುವನು. ಬಾದಶಹನ ಅಪ್ಪಣೆಯ ಹೊರತು ಅಂತವರ ಕಾರ್ಯಕ್ಕೆ ವಿಘ್ನತರುವ ಗೊಡವಿಗೆ ಆತನು ಹೋಗುವದಿಲ್ಲ; ಆದ್ದರಿಂದ ದಕ್ಷಿಣದ ಕಠಿಣತರದ ಪ್ರವಾಸವನ್ನು ಸುಲಭ ರೀತಿಯಿಂದ ಮಾಡುವದಕ್ಕಾಗಿ ಛತ್ರಸಾಲನು ಆ ನರವೀರನ ಸಂಗಡ ಹೋಗುತ್ತಿರುವನು. ಸುಫಲಾದೇವೀ, ಹೀಗೆ ಛತ್ರಸಾಲನು ಮೊಗಲಸೈನ್ಯದ ಸಂಗಡ ಹೋಗುವದರಲ್ಲಿ ದೊಡ್ಡ ಲಾಭವುಂಟು. ಮುಂದೆ ಛತ್ರಸಾಲನು ಮೊಗಲ ಬಾದಶಹನ ಸೈನ್ಯದೊಡನೆ ಕಾದಬೇಕಾಗಿರುವದಷ್ಟೆ? ಅಂದಬಳಿಕ ಮೊಗಲ ಸೈನ್ಯದ ಸಾಮರ್ಥ್ಯವೆಷ್ಟು? ಆ ಸೈನ್ಯಿಕರು ಯುದ್ಧಮಾಡುವ ಬಗೆಹೇಗೆ? ಅವರು ಬಾದಶಹನ ಅಪ್ಪಣೆಯನ್ನು ಯಾವ ಮನಸ್ಸಿನಿಂದ ಪಾಲಿಸುವರು ಇತ್ಯಾದಿ ಒಂದಲ್ಲ ಎರಡು, ಹಲವು ಸಂಗತಿಗಳನ್ನು ಕಣ್ಣುಮುಟ್ಟಿ ನೋಡುವದು ಅವಶ್ಯವಾಗಿರುವದು. ಇದಕ್ಕಾಗಿ ದಿಲ್ಲೀಪತಿಯ ನೌಕರಿಯ ನೆವದಿಂದ ಕೆಲಕಾಲ ಸೈನ್ಯದಲ್ಲಿ ಕಳೆಯುವದು ಅವಶ್ಯವೆಂದು ಛತ್ರಸಾಲನು ದಕ್ಷಿಣಕ್ಕೆ ಹೋಗುತ್ತಿರುವನು.

ಸುಫಲಾದೇವಿ—ಸರಿಸರಿ! ಆದರೆ ಪ್ರಭೋ, ಈ ವೀರನಾರು? ತನ್ನ ಅತುಲ ಕ್ಷಾತ್ರತೇಜದಿಂದ ತನ್ನ ಮನಸ್ಸನ್ನು ಯಾವಾಗೋ ಎಳೆದುಕೊಂಡುಬಿಟ್ಟಿರುವದರಿಂದ, ಆತನ ಪರಿಚಯ ಮಾಡಿಕೊಂಡ ಹೊರತು ನನಗೆ ಸಮಾಧಾನವಾಗುವ ಹಾಗಿಲ್ಲ?

ಪ್ರಾಣನಾಥ—ದೇವೀ, ಆತನು ವೀರಾಗ್ರಣಿ ಸಭಾಕರಣನ ಪುತ್ರನಾದ ದಳಪತ ರಾಯನು, ಸಾಗರದ ಯುವರಾಜನು!

ಸುಫಲಾ—(ಆಶ್ಚರ್ಯದಿಂದ) ಏನು? ಸ್ವದೇಶೋದ್ಧಾರಕ್ಕಾಗಿ ತನ್ನ ಯುವರಾಜ ಪದವಿಯನ್ನು ಬಿಟ್ಟುಕೊಟ್ಟು, ತಂದೆಯ ಬಳಿಯಿಂದ ಹೊರಟು ಚಂಪತರಾಯರ ಆಶ್ರಯ ವನ್ನು ಹೊಂದಿದ ವೀರನು ಈತನೇಯೇನು? ಇಂತಹ ತರುಣವೀರನು ಬುಂದೇಲಖಂಡದಲ್ಲಿ ಹುಟ್ಟುತ್ತಿರುವಾಗ ಅದು ಪಾರತಂತ್ರ್ಯದ ಕೆಸರಿನಲ್ಲಿ ಎಷ್ಟು ದಿವಸ ಸಿಕ್ಕು ಬಿದ್ದೀತು? ಕುಮಾರ ದಲಪತ, ಧನ್ಯನು, ನೀನು ಪರಮಧನ್ಯನು! ನೀನು ದೀರ್ಘಾಯುಷಿಯಾಗಿ ಕುಮಾರ ಛತ್ರಸಾಲನ ಕಾರ್ಯಕ್ಕೆ ಸಹಾಯಮಾಡೆಂದು ನಾನು ಹರಿಸುವೆನು.

ದಳಪತ—ಅಮ್ಮಾ ತಮ್ಮಂತಹ ಸತ್ವಸ್ಥ ಸಾಧ್ವಿಯರ ಆಶೀರ್ವಚನವು ಅಸತ್ಯವಾಗ ಬಹುದೆ? ತಮ್ಮಂತವರ ಅಮೋಘವಾದ ಆಶೀರ್ವಾದವನ್ನು ಪಡೆದವನೇ ಧನ್ಯನು!

ಪ್ರಾಣನಾಥಪ್ರಭು–ದಳಪತರಾಯನ ಶೌರ್ಯವು ಛತ್ರಸಾಲನ ಶೌರ್ಯಕ್ಕೆ ಸಮಾನ ವಾಗಿದ್ದು ಇದೇ ಈಗ ನಡೆದು ಮುಗಿದಿದ್ದ ಯುದ್ಧದಲ್ಲಿ ತನ್ನ ರಣಪಾಂಡಿತ್ಯದಿಂದ ಈತನು ತನ್ನ ಪ್ರತ್ಯಕ್ಷ ತಂದೆಯನ್ನು ಹಿಂದಕ್ಕೆ ಸರಿಸಿ ನಾಚಿಸಿರುವನು! ದೇವೀ, ಸಭಾಕರಣನ ಪ್ರತಾಪಾತಿಶಯುವನ್ನು ನೀನು ಕೇಳಿಯಾದರೂಬಲ್ಲೆಯಷ್ಟೆ? ಅಂತಹ ತಂದೆಯನ್ನು ಪರಾಜಯಪಡಿಸಿದ ಈ ವೀರ ಪುತ್ರನು ಧನ್ಯನಲ್ಲವೇ? ಈಗ ಈತನು ತನ್ನಂತೆ ಸ್ವದೇಶದ ಸ್ವಾತಂತ್ರ್ಯಕ್ಕಾಗಿ ತಳಮಳಿಸುತ್ತಿರುವ ತರುಣ ವೀರರು ಬುಂದೇಲಖಂಡದಲ್ಲಿ ಎಲ್ಲೆಲ್ಲಿ ಇರುವ ರೆಂಬದನ್ನು ಹುಡುಕಿ, ಸ್ವಾತಂತ್ರ್ಯದ ತಳಮಳವಿಲ್ಲದವರ ಮನಸ್ಸಿನಲ್ಲಿ ತಳಮಳವನ್ನು ಹುಟ್ಟಿಸಿ, ಅವರೆಲ್ಲರನ್ನು ಒಟ್ಟುಗೂಡಿಸುವದಕ್ಕಾಗಿ ಬುಂದೇಲಖಂಡದಲ್ಲೆಲ್ಲ ಸಂಚಾರಮಾಡಲಿಕ್ಕೆ ಹೋಗುತ್ತಿರುವನು.

ಸುಫಲಾದೇವಿ—ಅತ್ಯಂತ ಸುತ್ತ್ಯವಾದ ಉದ್ಯೋಗವು; ಇಂತಹ ಪೌರುಷದ ಉದ್ಯೋಗವು ಈ ಕುಮಾರ ದಳಪತರಾಯನಂಥ ಪೌರುಷಿಗಳಿಗೆ ಒಪ್ಪುವದು.

ಛತ್ರಸಾಲ—(ಅತ್ಯಂತ ವಿನಯದಿಂದ)ದೇವೀ, ನಾನು ರಾಜಾ ಜಯಸಿಂಗನೊಡನೆ ದಕ್ಷಿಣಕ್ಕೆ ಹೋಗಿ ಮೊಗಲ ಸೈನ್ಯದ ಮಟ್ಟನ್ನು ತಿಳಿದುಕೊಂಡು ಮಾಡುವದೇನು? ಅಥವಾ ದಳಪತರಾಯನಂಥ ಶೂರರು ಬುಂದೇಲಖಂಡವನ್ನೆಲ್ಲ ತಿರುಗಿ ತರುಣವೀರರನ್ನು ಒಟ್ಟುಗೂಡಿಸಿ ಮಾಡುವದೇನು? ಹದಮಾಡದೆ ಇದ್ದ ಕಸುವುಗೆಟ್ಟ ಒಣಭೂಮಿಯನ್ನು ಬಿತ್ತಿದ ಬೀಜವು ವ್ಯರ್ಥವಾಗುವಂತೆ, ಪ್ರಭುಗಳಂತಹ ಮಹಾತ್ಮರು ತಮ್ಮ ತಪೋಬಲದಿಂದ ಬುಂದೇಲಖಂಡದ ಜನರ ಮನೋಭೂಮಿಯೊಳಗಿನ ದುರ್ಗುಣ–ದೋಷಗಳನ್ನು ಕಳೆದು ಶುದ್ಧಮಾಡಿ, ಸದ್ಗುಣಮಂಡಿತ ಕ್ಷಾತ್ರತೇಜದ ಗೊಬ್ಬರವನ್ನು ಆ ಭೂಮಿಗೆ ಹಾಕಿ,

ಭೂತದಯೆಯಿಂದ ಆ ಮನೋಭೂಮಿಯನ್ನು ಆರ್ದ್ರವಾಡದಿದ್ದರೆ, ನನ್ನಂತಹ ನೂರಾರು ಛತ್ರಸಾಲರೂ, ನನ್ನ ಪ್ರಿಯಮಿತ್ರ ದಳಪತನಂತಹ ನೂರಾರು ದಳಪತರು ಕೂಡಿದರೂ ವ್ಯರ್ಥವೇ ಸರಿ! ದೇವಿ, ಬರಿಯ ನಮ್ಮಂಥ ಅಹಂಕಾರಯುಕ್ತ ಲೌಕಿಕರ ಪರೋಪದೇಶ ಪಾಂಡಿತ್ಯ ಬೋಧದಿಂದ ಕಾರ್ಯವಾಗುವದೊತ್ತಟ್ಟಿಗುಳಿದು, ಕಾರ್ಯಹಾನಿಯು ಮಾತ್ರ ಆಗುವದು. ನಮ್ಮಂಥ ಪಂಡಿತಮನ್ಯರ ಬೋಧವು ಹೆಚ್ಚಾದಂತೆ ದೇಶದಲ್ಲಿ ಏಕತ್ವವು ಉಂಟಾಗುವದರ ಬದಲು ಅನೇಕತ್ವವು ಉಂಟಾಗುವದು; ಪರಸ್ಪರರಲ್ಲಿ ಪ್ರೇಮವು ಬೆಳೆಯುವದರ ಬದಲು ದ್ವೇಷವು ಬೆಳೆಯುವದು; ಆದ್ದರಿಂದ ನಿಜವಾದ ಕಾರ್ಯಸಾಧಕ ರೆಂದರೆ ಪ್ರಭುಗಳಂತಹ ತಪೋಧನರು. ಮಹಾರಾಷ್ಟ್ರಕ್ಕೆ ಶ್ರೀ ಸಮರ್ಥ ರಾಮದಾಸರು ಶಿವರಾಯನಿಗೆ ಸಹಾಯಕರಾಗಿ ದೊರೆತಿರುವಂತೆ, ಬುಂದೇಲಖಂಡದ ಪುಣ್ಯದಿಂದ ಪ್ರಭುಗಳು ಇಲ್ಲಿಯ ಸ್ವಾತಂತ್ರ್ಯಪ್ರಿಯರಿಗೆ ಸಹಾಯಕರಾಗಿ ದೊರೆತಿರುವರು. ದೇವೀ, ಬರಿಯ ಸದ್ಬೋಧವು ಕಿವಿಯಲ್ಲಿ ಹೋಗುವದರಿಂದ ಮನುಷ್ಯನ ಮನೋವೃತ್ತಿಗಳ ತಿದ್ದುಪಡೆ ಯಾಗುವದಿಲ್ಲ; ಸದ್ಬೋಧಕ್ಕಿಂತ ಸದ್ವಸ್ತುದರ್ಶನದಿಂದ ಮನೋವೃತ್ತಿಗಳು ತಟ್ಟನೆ ತಿದ್ದಿ ಹೋಗುತ್ತವೆ. ಪ್ರಭುಗಳಂತಹ ಮಹಾತ್ಮರು ಕರುಣಾಳುಗಳಾಗಿ, ನಾವು ಉದ್ಧಾರವಾಗಬೇಕೆಂಬ ಸಂಕಲ್ಪದಿಂದ ನಮ್ಮ ಕಡೆಗೆ ನೋಡಿದರೆ ಸಾಕು, ನಾವು ಪತಿತರು ಹೋಗಿ ಪಾವನರು ಆಗುವೆವು; ಆದರೆ, ದೇವರ ಸಂಕೇತಕ್ಕೆ ವಿರುದ್ಧವಾಗಿ ಸೃಷ್ಟಿಯ ವ್ಯಾಪಾರದಲ್ಲಿ ಹೆಚ್ಚು ಕಡಿಮೆ ಮಾಡುವದು ತಮ್ಮ ಧರ್ಮವಲ್ಲವೆಂದು ಅವರು ತಿಳಿದಿರುವದರಿಂದ, ನಮ್ಮ ಉದ್ಧಾರಕ್ಕೆ ವಿಲಂಬವಾಗುತ್ತಿರುವದು.

ಈಮೇರೆಗೆ ನುಡಿದು ಛತ್ರಸಾಲನು ಮೋರೆತಗ್ಗಿಸಿ ಕಷ್ಟದಿಂದ ಉಸುರ್ಗರೆಯಲು, ಪ್ರಾಣನಾಥ ಪ್ರಭುಗಳು ಕರುಣಾಳುಗಳಾಗಿ, ಆ ತರುಣವೀರನನ್ನು ಕುರಿತು—"ಕುಮಾರಾ, ಛತ್ರಸಾಲಾ, ನೀನು ಬಹು ಯೋಗ್ಯವಾಗಿ ಮಾತಾಡಿದೆ. ಯುಗಧರ್ಮಕ್ಕನುಸರಿಸಿ ಸೃಷ್ಟಿ ವ್ಯವಹಾರಗಳು ನಡೆಯಬೇಕೆಂದು ಈಶ್ವರೀ ಸಂಕೇತವಿರುವದರಿಂದ, ಜ್ಞಾನಿಗಳಾದವರು ತಮ್ಮ ಪ್ರಭಾವದಿಂದ ಆ ಈಶ್ವರೀಸಂಕೇತಕ್ಕೆ ಭಂಗವುಂಟುಮಾಡುವ ಗೊಡವಿಗೆ ಹೋಗುವದಿಲ್ಲ; ಆದರೆ ತೀರ ಧರ್ಮಗ್ಲಾನಿಯಾಗಿ ಸೃಷ್ಟಿಯು ನಾಶದ ಪಂಥವನ್ನು ಹಿಡಿಯಲು, ಆಗ ಪರಮೇಶ್ವರನು ಅಂಶತಃ ಅವತಾರಮಾಡಿ ಜನರ ಮನೋವೃತ್ತಿಗಳನ್ನು ತಿದ್ದತೊಡಗಿದಾಗ, ಸತ್ಪುರುಷರು ಆ ಪ್ರಭುವಿಗೆ ಸಹಾಯಕರಾಗಿ ಮುಂದೆ ಬರುವರು. ಛತ್ರಸಾಲಾ, ನೀನು ಹೇಳಿದ ಶಿವರಾಯ –ಸಮರ್ಥ ರಾಮದಾಸರ ಜೋಡಿಯನ್ನು ಈ ದೃಷ್ಟಿಯಿಂದಲೇ ನೋಡು. ಶಿವರಾಯನು ಈಶ್ವರಾಂಶನಾದುದರಿಂದಲೇ ಸ್ವದೇಶೋದ್ಧಾರದ ಕಾರ್ಯಕ್ಕೆ ಕೈಹಾಕಲು, ಮಹಾಪುರುಷರಾದ ಸಮರ್ಥರಾಮದಾಸರು ಆತನಿಗೆ ಸಹಾಯಮಾಡುವದಕ್ಕಾಗಿ ಬೈಲಿಗೆ ಬರುತ್ತಿರುವರು. ಛತ್ರಸಾಲಾ, ಶಿವರಾಯನು ಈಶ್ವರಾಂಶನೆಂದು ಹೇಳಿದ ಮಾತ್ರದಿಂದ ನಾನು ಈಶ್ವರಾಂಶನಲ್ಲೆಂದು ನೀನು ನಿರಾಶೆಪಡಬೇಡ. ನಿಸ್ಪೃಹವೃತ್ತಿಯ ಪರೋಪಕಾರಿ ಯಾದ ವೀರನು ಸತ್ವಾತಿಶಯದಿಂದ ಸ್ವಭಾಂಧವರ ಉದ್ಧಾರಕ್ಕಾಗಿ ಟೊಂಕ ಕಟ್ಟಲು, ಆತನಲ್ಲಿ

ಈಶ್ವರನ ಆವೇಶವು ಆಗಿಯೇ ಆಗುತ್ತದೆ. ಶಿವರಾಯನಿಗೆ ಕಷ್ಟಕಾಲದಲ್ಲಿ ಶ್ರೀಭವಾನಿಯ ಆವೇಶವಾಗುತ್ತಿರುವದನ್ನು ನೀನು ಕೇಳಿಲ್ಲವೆ? ಹಾಗೆಯೇ ನೀನು ಅಹಂಕಾರರಹಿತನಾಗಿ ಸ್ವದೇಶೋದ್ಧಾರದಲ್ಲಿಯೇ ದೃಷ್ಟಿಯನ್ನಿಟ್ಟು ಮದಮಾತ್ಸರ್ಯಾದಿ ದೋಷಗಳಿಗೆ ಎಡಗೊಡದೆ, ಸರ್ವಕ್ಕೂ ಕರ್ತೃವು ಪರಮೇಶ್ವರನೆಂಬ ದೃಢವಾದ ನಂಬಿಗೆಯಿಂದ ಸ್ವದೇಶೋದ್ಧಾರದ ಕಾರ್ಯದಲ್ಲಿ ತಲ್ಲೀನನಾದೆಯೆಂದರೆ, ಸತ್ಪುರುಷರಿದ್ದವರು ಬೈಲಿಗೆಬಂದು ನಿನಗೆ ಸಹಾಯ ಮಾಡಿಯೇ ಮಾಡುವರು. ತರುಣವೀರಾ, ಛತ್ರಸಾಲಾ, ಸತ್ಪುರುಷರ ಸಹಾಯವು ದೈವೀಭಾವಕ್ಕಲ್ಲದೆ ಅಸುರೀಭಾವಕ್ಕೆ ಸರ್ವಥಾ ದೊರೆಯದೆಂಬದನ್ನು ಚನ್ನಾಗಿ ನೆನಪಿನಲ್ಲಿಡು. ಅಸುರೀ ಭಾವವೆಂದರೆ, ನನ್ನಿಂದ ಕಾರ್ಯವಾಗುತ್ತದೆಂಬ ಭಾವವು! ದೈವೀ ಭಾವವೆಂದರೆ ದೇವರಿಂದ ಕಾರ್ಯವಾಗುತ್ತದೆಂಬ ಭಾವವು! ದೈವೀ ಭಾವದವರಿಗೆ ಸತ್ಪುರುಷರ ಸಹಾಯವು ಒದಗಿ ಲೋಕಕ್ಕೆ ಶಾಂತಿಯು ದೊರೆಯುವದು. ಅಸುರೀ ಭಾವದವರಿಗೆ ದುಷ್ಟರ ಸಹಾಯವು ಒದಗಿ ಲೋಕಕ್ಕೆ ತಾಪವುಂಟಾಗುವದು; ಆದ್ದರಿಂದ ಛತ್ರಸಾಲಾ, ದಳಪತರಾಯಾ, ಎಲ್ಲ ನಿಮ್ಮ ಕೈಯ್ಯಲ್ಲಿರುತ್ತದೆ. ನೀವು ಪೌರುಷಿಗಳಾಗಿ ನಿಸ್ಪೃಹತೆಯಿಂದಲೂ, ನಿರಹಂಕಾರದಿಂದಲೂ ಬುಂದೇಲದ ಸ್ವಾತಂತ್ರ್ಯದ ಕಾರ್ಯದಲ್ಲಿ ತೊಡಗಿರಿ; ಅಂದರೆ ಪ್ರಾಣನಾಥನೂ ತನ್ನ ಯೋಗ್ಯತೆಯಂತೆ ಸಹಾಯಮಾಡುವನು!

ಹೀಗೆ ಪ್ರಾಣನಾಥ ಪ್ರಭುಗಳು ಅಭಿವಚನವಿತ್ತದ್ದನ್ನು ಕೇಳಿ ಎಲ್ಲರಿಗೂ ಪರಮಾನಂದವಾಯಿತು. ಸುಫಲಾದೇವಿಯು ಆನಂದಪರವಶಳಾಗಿ ಪ್ರಾಣನಾಥ ಪ್ರಭುಗಳನ್ನು ಕುರಿತು— ಪ್ರಭೋ, ಬುಂದೇಲಖಂಡದ ಮಹದ್ಭಾಗ್ಯವು ತಮ್ಮ ವರದವಾಣಿಯಿಂದ ಇಂದು ತೆರೆಯಿತೆಂದು ನಾನು ನಿಶ್ಚಯವಾಗಿ ತಿಳಿದುಕೊಳ್ಳುವೆನು. ಬುಂದೇಲಖಂಡದ ಭಾಗ್ಯದ ಕಾಲವು ಸಮೀಪಿಸಿದ್ದರಿಂದಲೇ ತಮ್ಮಂಥ ಮಹಾತ್ಮರ ವರದವಾಣಿಯು ಹೊರಡುವದು. ದಕ್ಷಿಣದಲ್ಲಿ ಶಿವರಾಯನೂ ರಾಜ್ಯಸ್ಥಾಪಿಸುವದಕ್ಕಿಂತ ಮೊದಲೇ ಶ್ರೀ ಸಮರ್ಥ ರಾಮದಾಸರೂ, ಅವರ ಶಿಷ್ಯರೂ ಮಹಾರಾಷ್ಟ್ರದಲ್ಲೆಲ್ಲ ಸಂಚರಿಸಿ ಜನರ ಮನೋವೃತ್ತಿಗಳನ್ನು ಉಜ್ವಲಗೊಳಿಸಹತ್ತಿದ್ದರೆಂದು ಕೇಳಿದ್ದೇನೆ. ಔರಂಗಜೇಬನಂಥ ಕಪಟಪಟು ಬಾದಶಹನಿಗೂ ನಾಮಹಚ್ಚುತ್ತಿರುವ ಶಿವರಾಯನ ಚರಿತ್ರವನ್ನು ಹೇಳುತ್ತಿರುವಾಗ, ಇಂತಹ ಎಷ್ಟೋ ಮಾತುಗಳು ಹೊರಡುತ್ತಿರುವವು; ಆದರೆ ಪ್ರಭೋ, ನಮ್ಮ ಸುದೈವದಿಂದ ನಮ್ಮ ಬುಂದೇಲಿಗಳ ಮನೋವೃತ್ತಿಗಳು ತಿದ್ದಿ ಅವು ಪರಿಶುದ್ಧವಾಗಿ ಸ್ವಾತಂತ್ರ್ಯಪ್ರಾಪ್ತಿಗೆ ಬೇಕಾಗುವ ಉದಾತ್ತ ಗುಣಗಳಿಂದ ಅಲಂಕೃತವಾಗುವದನ್ನು ನಾವು ಬೇಗನೆ ನೋಡುವೆವೆಂದು ನಿಶ್ಚಯವಾಗಿ ತಿಳಿದುಕೊಳ್ಳುತ್ತೇನೆ.

ಪ್ರಭು—ವಿಂಧ್ಯವಾಸಿನಿಯ ಕೃಪೆಯಿಂದ ಬುಂದೇಲಕ್ಕೆ ಬೇಗನೆ ಸ್ವಾತಂತ್ರ್ಯವು ಪ್ರಾಪ್ತವಾಗುವದು; ಆದರೆ ಸುಫಲಾದೇವೀ, ಇನ್ನು ನಮಗೆ ಹೋಗಲಿಕ್ಕೆ ಅನುಜ್ಞೆಯನ್ನು ಕೊಡು. ನಾವು ಇಲ್ಲಿ ಬಹಳ ಹೊತ್ತು ಇರಲಾಗುವದಿಲ್ಲ. ಬುಂದೇಲಖಂಡವು ದಿನದಿನಕ್ಕೆ ಹೆಚ್ಚುಹೆಚ್ಚು ಪರತಂತ್ರವಾಗುತ್ತಿರಲು, ಮತ್ತು ಸ್ವಾತಂತ್ರ್ಯದ್ರೋಹಿಗಳ ಕಾಟವು ದೇಶದಲ್ಲಿ ದಿನದಿನಕ್ಕೆ ಹೆಚ್ಚುತ್ತಿರಲು, ದೇಶೋದ್ಧಾರದ ಭಾರವನ್ನು ಹೊತ್ತಿರುವವರು ಒಂದು ಕ್ಷಣವೂ ಆಲಸ್ಯಕ್ಕೆ

ಒಳಗಾಗತಕ್ಕದ್ದಲ್ಲ. ಅನುಕೂಲ ಕಾಲವು ಒದಗಿತೆಂದು ಒಂದು ಕ್ಷಣವೂ ಸುಮ್ಮನೆ ಕುಳಿತು ಕೊಳ್ಳಬಾರದು. ದೇಶಕಾರ್ಯಮಾಡುವವರು ಒಮ್ಮೊಮ್ಮೆ ಸುಮ್ಮನೆ ಕುಳಿತುಕೊಳ್ಳಬೇಕಾಗುವ ದೆಂಬದು ನಿಜವು; ಆಗ ಅವರು ಬಹಿರಂಗ ವ್ಯಾಪಾರಶೂನ್ಯರಾಗಿದ್ದಂತೆ ತೋರಿದರೂ ಅವರ ಅಂತರಂಗದ ವ್ಯಾಪಾರವು ಅವ್ಯಾಹತವಾಗಿ ನಡದೇ ಇರುವದು. ಈ ಅಂತರಂಗ ವ್ಯಾಪಾರವು ಆತ್ಮಶುದ್ಧಿಯದಾಗಿರಬಹುದು; ಅಥವಾ ಅನುಕೂಲಕಾಲವನ್ನು ಒದಗಿಸಿಕೊಡುವಂತೆ ದೇವರನ್ನು ಪ್ರಾರ್ಥಿಸುವದಾಗಿರಬಹುದು; ಅಥವಾ ಸದುಪದೇಶದಿಂದ ಜನರ ಅಜ್ಞಾನವನ್ನು ಹೊರದೂಡವದಾಗಿರಬಹುದು. ಹೀಗೆ ಒಂದಿಲ್ಲೊಂದು ಬಗೆಯ ಕಾರ್ಯದಲ್ಲಿ ತೊಡಗಿ ಅನುಕೂಲ ಕಾಲವನ್ನೂ, ಅನುಕೂಲ ಪರಿಸ್ಥಿತಿಯನ್ನೂ ತಂದುಕೊಳ್ಳಬೇಕಾಗುವದಲ್ಲದೆ, ಬಹರಿಯ ಮಾರ್ಗನಿರೀಕ್ಷಣಮಾಡುತ್ತ ಕೈಮುಚ್ಚಿಕುಳಿತುಕೊಂಡರೆ ಯಾವ ಕಾರ್ಯವೂ ಆಗಲಿಕ್ಕಿಲ್ಲ; ಆದ್ದರಿಂದ ಸುಫಲಾದೇವೀ, ಇನ್ನು ನಾವು ಮೂವರೂ ಹೊರಡುವೆವು. ಬುಂದೇಲಖಂಡದಲ್ಲಿ ಅನುಕೂಲ ಪರಿಸ್ಥಿತಿಯು ಉಂಟಾಗುವವರೆಗೆ ನೀನು ಸರಲಾದೇವಿಯ ಸಂರಕ್ಷಣದ ಒಂದೇ ಕಾರ್ಯವನ್ನು ಮಾಡಬೇಕಾಗುವದು. ರಾಜಾಜಯಸಿಂಗನು ಚಂಪತರಾಯನ ಮಿತ್ರನಿರುವದರಿಂದ ಛತ್ರಸಾಲನ ಚಿಂತೆಯು ನಮಗಿದ್ದಿಲ್ಲ; ಸರಲಾದೇವಿಯನ್ನು ಎಲ್ಲಿ ಇಡಬೇಕೆಂಬ ಚಿಂತೆಯು ನಮ್ಮನ್ನು ಬಹಳವಾಗಿ ಭಾದಿಸುತ್ತಿತ್ತು; ಆದರೆ ನಿನ್ನಿಂದ ಅಭಯವಚನವು ಸಿಕ್ಕದ್ದರಿಂದ ಆ ಚಿಂತೆಯ ಪರಿಹಾರವೂ ಇಂದು ಆಯಿತು. ಸುಫಲಾದೇವೀ, ಸರಲಾದೇವಿಯ ಮೇಲೆ ನಿನ್ನ ಪ್ರೇಮವು ವಿಶೇವಾಗಿರುತ್ತಿದ್ದರೂ, ಆಕೆಯು ಇಲ್ಲಿ ಅಜ್ಞಾತ ವಾಸದಲ್ಲಿ ಕಾಲಹರಣ ಮಾಡಬೇಕೆಂದಿರುವ ಳೆಂಬದನ್ನು ಮರೆಯಬೇಡ. ರಾಜಾಕಂಚುಕಿ ರಾಯನು ಹೀರಾದೇವಿಯ ಕೈಗೊಂಬೆಯಾಗಿರುವನು. ಆತನು ಸರಲಾದೇವಿಯ ಮೇಲೆ ಯಾವ ಬಗೆಯ ವಿಪತ್ತನ್ನುಂಟುಮಾಡುವ ನೆಂಬದನ್ನು ಹೇಳಿಕೊಳ್ಳಲಾಗುವದಿಲ್ಲ; ಆದ್ದರಿಂದ ನಾನು ಮತ್ತೆ ಮತ್ತೆ ಈ ಮಾತನ್ನು ನಿನಗೆ ಹೇಳುತ್ತಿರುವೆನು.

## ಲಲಿತೆಯ ಪಿಶಾಚವು

ಚಂಪತರಾಯನು ಮರಣಕಾಲದಲ್ಲಿ ಆಡಿದ ಮಾತುಗಳಿಂದ ಸಭಾಕರಣನ ಸಂಶಯವು ದೂರವಾಯಿತೆಂಬದನ್ನು ವಾಚಕರು ಬಲ್ಲರು. ಅಂದಿನಿಂದ ಸಭಾಕರಣನ ಹೃದಯವು ಪಶ್ಚಾತ್ತಾಪದಿಂದ ದಗ್ಧವಾಗತೊಡಗಿತು. ಆತನು ಅತ್ಯಂತ ಉದಾಶೀನನಾದನು. ನಾನು ಒಂದು ಸಣ್ಣ ಮಾತಿನ ಸ್ಪಷ್ಟೀಕರಣವನ್ನು ಮಾಡಿಕೊಳ್ಳದೆ ಹೀರಾದೇವಿಯಂತಹ ನೀಚಸ್ತ್ರೀಯ ಮಾತನ್ನು ಕೇಳಿ ಎಂಥ ಭಯಂಕರ ಕೆಲಸವನ್ನು ಮಾಡಿದೆನಲ್ಲ! ಈಗ ಕೇಳಿದಂತೆ ಹೀರಾದೇವಿಯು ನನ್ನ ಮನಸ್ಸನ್ನು ಕೆಡಿಸಿದ ದಿವಸವೇ ನಾನು ಚಂಪತರಾಯನನ್ನು ಯಾಕೆ ಕೇಳಿರಲಿಕ್ಕಿಲ್ಲ? ಚಂಪತರಾಯನು ನನ್ನ ಮಿತ್ರನಿದ್ದಿಲ್ಲವೆ? ಅಂತಹ ಮಹಾತ್ಮನಾದ ಬಾಲಮಿತ್ರ

ನಲ್ಲಿಯೂ ದೋಷವನ್ನು ಆರೋಪಿಸಿ ತಟ್ಟನೆ ಆತನ ನಾಶಕ್ಕಾಗಿ ನಾನು ಪ್ರತಿಜ್ಞೆಯನ್ನು ಮಾಡಬಹುದೆ? ಎಂತಹ ನನ್ನ ಅವಿಚಾರವಿದು! ನಾನು ಎಷ್ಟು ಶೀಘ್ರಕೋಪಿಯು! ದುಷ್ಟನು ನಾನು ದೇಶದ್ರೋಹಿಯಾಗಿ ಹಲವು ಜನ ದೇಶಬಾಂಧವರ ಕೊಲೆಮಾಡಿದೆನು; ಚಂಪತ ರಾಯನಂಥ ಮಹಾತ್ಮನಾದ ದೇಶಭಕ್ತನ ದ್ರೋಹಬಗೆದು ಆತನನ್ನು ನಾಶಗೊಳಿಸಿದೆನು. ಈ ಮಹಾ ಪರಾಧಕ್ಕಾಗಿ ಯಮಲೋಕದಲ್ಲಿ ನನಗೆ ಯಾವ ನರಕವು ಸಿದ್ಧವಾಗಿರಬಹುದು! ಸಭಾಕರಣಾ, ಏನು ನಿನ್ನ ಯೋಗ್ಯತೆಯು! ನೀನು ಮಹಾ ಪ್ರತಾಪಿಯೂ, ಶೂರನೂ, ಅಚಲ ಧೈರ್ಯಶಾಲಿಯೂ, ಸತ್ಯಪ್ರತಿಜ್ಞನೂ ಎಂದು ಬುಂದೇಲಖಂಡವು ಅಭಿಮಾನದಿಂದ ಹೇಳಿಕೊಳ್ಳುತ್ತಿತ್ತಲ್ಲ! ಆದರೆ ದೇಶದ್ರೋಹದಿಂದ ತೇಜೋಹೀನನಾದ ನೀನು ಇನ್ನು ಲೋಕದಲ್ಲಿ ಏನೆಂದು ಪ್ರಸಿದ್ಧನಾಗುವೆ? ಇಂಥ ಕೆಟ್ಟ ಮೋರೆಯ ಸಭಾಕರಣನು ನೀನು ಬುಂದೇಲಖಂಡಕ್ಕೆ ಇನ್ನು ಮೋರೆಯನ್ನು ಹೇಗೆ ತೋರಿಸುವೆ? ಛಿ ಛೀ! ನಾನು ಬಾಳಿದ್ದು ವ್ಯರ್ಥವಾಯಿತು; ಇನ್ನು ಬಾಳುವದೂ ವ್ಯರ್ಥವೇಸರಿ! ಆದರೆ ಮಾಡಲೇನು? ಸ್ತ್ರೀಯರಂತೆ ಆತ್ಮಹತ್ಯ ಮಾಡಿಕೊಳ್ಳಲಾ? ದುರ್ಮರಣದಿಂದ ನರಕವಲ್ಲದೆ ಯಾವ ಪುರುಷಾರ್ಥವು ಸಾಧಿಸುವದು? ಹಾಗೆ ಮಾಡುವದು ಯೋಗ್ಯವಲ್ಲ. ಮೊದಲು ಹೀರಾದೇವಿಯನ್ನು ಕಂಡು ನನ್ನ ಪ್ರಿಯ ಲಲಿತೆಯ ನಿಜವಾದ ಸಂಗತಿಯನ್ನು ಕೇಳಿಕೊಳ್ಳುವೆನು. ಆ ದುಷ್ಟಳು ಸುಳ್ಳು ಹೇಳಿದಳೆಂಬ ಮಾತು ಸಿದ್ಧವಾದ ಕೂಡಲೆ ಆಕೆಗೆ ತಕ್ಕ ಶಾಸನ ಮಾಡಿ, ಪ್ರಿಯ ಛತ್ರಸಾಲನ ದೇಶೋದ್ಧಾರದ ಕಾರ್ಯಕ್ಕೆ ಸಹಾಯ ಮಾಡುತ್ತ ರಣಭೂಮಿಯಲ್ಲಿ ದೇಹವಿಡುವೆನು.

ಈಮೇರೆಗೆ ಆಲೋಚಿಸಿ ಸಭಾಕರಣನು ಸಮರಭೂಮಿಯಿಂದ ನೆಟ್ಟಗೆ ಹೀರಾದೇವಿಯ ಬಳಿಗೆ ಬಂದನು. ಆಗ ಹೀರಾದೇವಿಯು ತನ್ನ ಶಯ್ಯಾಗೃಹದಲ್ಲಿ ಕಂಚುಕಿರಾಯನೊಡನೆ ಏನೋ ಆಲೋಚಿಸುತ್ತ ಕುಳಿತಿದ್ದಳು; ಆಕೆಯ ಆಲೋಚನೆಯೊಳಗಿನ ದುಷ್ಟತನವು ಆಕೆಯ ಮುಖದಲ್ಲಿ ಸ್ಪಷ್ಟವಾಗಿ ಕಾಣುತ್ತಿತ್ತು. ಅಷ್ಟರಲ್ಲಿ ಸಭಾಕರಣನು ಶಯ್ಯಾಗೃಹದ ಬಾಗಿಲನ್ನು ದಡಲ್ಲನೆ ತೆರೆದು ಒಳಗೆ ಹೋದನು. ಆಗ ಹೀರಾದೇವಿಯು ಮೆಟ್ಟಿಬಿದ್ದು ಬಾಗಿಲಕಡೆಗೆ ನೋಡುತ್ತಾಳೆ, ಸಭಾಕರಣನು! ಆತನ ನಿಸ್ತೇಜವಾದ, ಆದರೆ ಉಗ್ರವಾಗಿರುವ ಮೋರೆಯನ್ನು ನೋಡಿ ಆಕೆಯು ಬೆದರಿದಳು; ಕಂಚುಕಿರಾಯನ ಅವಸ್ಥೆಯು ಕಂಚುಕಿರಾಯನಿಗೆ ಆಗಿಹೋಗಿತ್ತು! ಆತನು ತನ್ನ ಜರದ ಶಾಲನ್ನು ಎಷ್ಟು ಮೈತುಂಬ ಹೊದ್ದುಕೊಂಡರೂ ನಡುಗುನಿಲ್ಲಲೊಲ್ಲದು. ಆತನು ಆಗಿನ ಸಭಾಕರಣನಮುಂದೆ ಕುಳಿತುಕೊಳ್ಳಲಾರದೆ ತಟ್ಟನೆ ಎದ್ದು ನಿಂತನು. ಹೀರಾದೇವಿಯೂ ತನಗುಂಟಾಗಿದ್ದ ಅಂಜಿಕೆಯನ್ನು ಅಡಗಿಸಿಕೊಳ್ಳುತ್ತ ಸಭಾಕರಣನನ್ನು ಕುರಿತು—

ಹೀರಾದೇವಿ—ಯಾರು? ಸಭಾಕರಣ! ನೀವು ಗುರುತು ಸಿಗದಹಾಗೆ ಆಗಿರುವಿರಲ್ಲ? ನಿಮ್ಮ ಮೋರೆಯು ಇಷ್ಟೇಕೆ ಕಪ್ಪಿಟ್ಟಿದೆ? ಯುದ್ಧದಲ್ಲಿ ಬಲವಾದ ಗಾಯವಾಗಿ ನಿಮ್ಮ ಮೈಯೊಳಗಿನ ರಕ್ತ ಹೋಗಲು, ಇಷ್ಟು ನೀವು ತೇಜೋಹೀನರಾಗಿರುವಿರೋ ಏನು?

ಈ ಮೇರೆಗೆ ಉಪಚಾರದ ಮಾತುಗಳನ್ನಾಡುತ್ತಿರಲು, ಸಭಾಕರಣನು ನಡುವೆ ಬಾಯಿಹಾಕಿ—

ಸಭಾಕರಣ—ಹೀರಾದೇವೀ, ನಿನ್ನ ಉಪಚಾರದ ಮಾತು ಸಾಕು! ಲಲಿತೆಯ ವಿಷಯವಾಗಿ ನೀನು ನನ್ನ ಮುಂದೆ ಸುಳ್ಳು ಹೇಳಿರುವೆ; ಆದರೆ ಒಳ್ಳೆಯಮಾತಿನಿಂದ ನಿಜವಾದ ಸಂಗತಿಯನ್ನು ಹೇಳು. ದುಷ್ಟಳೇ, ನನ್ನ ಮೋರೆಯು ಕಪ್ಪಿಟ್ಟಿರುವದೆಂದು ಚೇಷ್ಟೆ ಮಾಡುವೆಯಾ? ದೇಶದ್ರೋಹಿಯೂ, ಮಿತ್ರದ್ರೋಹಿಯೂ, ಬಂಧುದ್ರೋಹಿಯೂ ಆಗಿರುವ ಸಭಾಕರಣನ ಮೊರೆಯು ಕಪ್ಪಿಡದೆ ಪ್ರಕಾಶಿತವಾದೀತೇ? ಈ ಸಭಾಕರಣನ ತೇಜೋಹಾನಿಗೆ ನೀನೇ ಕಾರಣಳು, ಹೇಳು, ಲಲಿತೆಯ ನಿಜವಾದ ಸಂಗತಿಯನ್ನು ಬೇಗನೆ ಹೇಳು, ತಡಮಾಡಿದರೆ ದಯಾಶೂನ್ಯ ನಾಗಿರುವ ಈ ಸಭಾಕರಣನು ಏನು ಮಾಡುವ ನೆಂಬದನ್ನು ಹೇಳಲಾಗುವದಿಲ್ಲ!

ಸಭಾಕರಣನ ಈ ಚಮತ್ಕಾರದ ಪ್ರಶ್ನವು ಅಕಸ್ಮಾತ ಕಿವಿಗೆ ಬಿದ್ದದ್ದರಿಂದ ಹೀರಾದೇವಿಯು ಆಶ್ಚರ್ಯಮಗ್ನಳಾಗಿರುತ್ತಿರುವಾಗ, ಆಕೆಯ ಹೃದಯವು ಭಯದಿಂದ ನಡುಗತೊಡಗಿತು. ಸಭಾಕರಣನ ಮನಸ್ಸನ್ನು ಕೆಡಿಸಿ ತನ್ನ ದುರಾಲೋಚನೆಗೆ ಆತನನ್ನು ಅನುಕೂಲ ಮಾಡಿಕೊಳ್ಳ ಬೇಕೆಂದು ಲಲಿತೆಯ ಸುದ್ದಿಯನ್ನು ತಾನು ಸುಳ್ಳೇ ಹುಟ್ಟಿಸಿಕೊಂಡು ಹೇಳಿದ್ದು, ಈಗ ಯಾಕೆ ಈತನ ಮನಸ್ಸಿನಲ್ಲಿ ಆ ಸುದ್ದಿಯು ಬಂದಿತೆಂಬದನ್ನು ಆಕೆಯು ತಿಳಿಯದಾದಳು. ಆ ಸಂಗತಿಯು ಒದಗಿ ಇಂದಿಗೆ ಹದಿನಾರು ವರ್ಷಗಳಾಗಿ ಹೋದದ್ದರಿಂದ, ಲಲಿತೆಯ ಹೆಸರನ್ನೂ ಎಲ್ಲರೂ ಮರೆತು ಬಿಟ್ಟಿದ್ದರೆಂದು ಹೇಳಬಹುದು. ಸಭಾಕರಣನಂತು ತನ್ನ ಆ ತಂಗಿಯ ಹೆಸರನ್ನು, ಆಕೆಯು ಕೆಟ್ಟನಡತೆಯವಳೆಂದು ತಿಳಿದು ಬುದ್ಧಿಪೂರ್ವಕವಾಗಿ ಮರೆತುಬಿಟ್ಟಿದ್ದನು. ಆ ಸೌಂದರ್ಯದ ಲಲಿತೆಯು, ಆ ಸದ್ಗುಣಗಳ ಖನಿಯು ಅಕಸ್ಮಾತ್ ಬುಂದೇಲಖಂಡದಲ್ಲಿ ಇಲ್ಲದಹಾಗಾದದ್ದಕ್ಕಾಗಿ ಬೇರೆ ಬೇರೆ ಜನರಲ್ಲಿ ಬೇರೆ ಬೇರೆ ತರ್ಕಗಳು ಆಗಿ, ಆ ತರ್ಕಗಳೆಲ್ಲ ಒಂದೊಂದು ಕಥೆಗಳಾಗಿ ಹೋಗಿದ್ದವು! ಹೀಗಿರಲು, ಯಮಸ್ವರೂಪಿಯಾದ ಸಭಾಕರಣನು ಅತ್ಯಂತ ನಿಷ್ಠುರನಾಗಿ ಲಲಿತೆಯ ನಿಜವಾದ ಸುದ್ದಿಯನ್ನು ಹೇಳೆಂದು ಗದ್ದರಿಸಿ ಕೇಳಿದ್ದರಿಂದ, ಹೀರಾದೇವಿಯ ಬಾಯಿಂದ ಮಾತುಗಳೇ ಹೊರಡದಾದವು. ಅದನ್ನು ನೋಡಿ ಸಭಾಕರಣನು—''ಯಾಕೆ ಹೀರಾದೇವಿ, ಮಾತಾಡಲೊಲ್ಲೆ? ಹೀಗೆ ಸುಮ್ಮನೆ ಕುಳಿತರೆ ಪಾರಾದೆಯೆಂದು ತಿಳಿದಿರುವೆಯೇನು? ಹೇಳು, ನಿನ್ನ ಅಪರಾಧಕ್ಕೆ ಯಾವ ಶಿಕ್ಷೆಯನ್ನು ಕೊಡಲಿ ಹೇಳು. ದುಷ್ಟಳೇ, ಸಭಾಕರಣನ ಬುದ್ಧಿಯನ್ನು ಕೆಡಿಸಿ ದೇಶದ್ರೋಹದ ಕಾರ್ಯದಲ್ಲಿ ಆತನನ್ನು ತೊಡಗಿಸಿದೆ; ವಿಷಪ್ರಯೋಗದಿಂದ ಚಂಪತರಾಯನನ್ನು ಕೊಲ್ಲಹೋಗಿ ನಿನ್ನ ಗಂಡನನ್ನು ಕೊಂದೆ; ಬುಂದೇಲದ ರಾಜರ ದುರ್ಬಲವಾದ ನೀಚಮನೋವೃತ್ತಿಗಳನ್ನು ನಿನ್ನಕಡೆಗೆ ಎಳಕೊಂಡು, ಚಂಪತರಾಯನಂಥ ಮಹಾತ್ಮನನ್ನು ನೀಗಿ ಇಟ್ಟೆ! ಅಧಮಸ್ತ್ರೀಯೇ, ನಿನ್ನ ಈ ಎಲ್ಲ ಅಪರಾಧಗಳಿಗೆ ತಕ್ಕ ಶಿಕ್ಷೆ ಯಾವದೆಂಬದು ನನಗೆ ಗೊತ್ತಾಗಲೊಲ್ಲದು. ನೀನೇ ಹೇಳು, ನಿನಗೆ ಯಾವ ಶಿಕ್ಷೆಕೊಡಲಿ? ಅಥವಾ ಈ ಹೇಡಿ ಕಂಚುಕಿರಾಯನಾದರೂ ನಿನಗೆ ಯಾವ ಶಿಕ್ಷೆಕೊಡಬೇಕೆಂಬದನ್ನು ಹೇಳಲಿ! ಏ ಅಂಜುಬುರುಕಾ, ನೀನು ದಿಲ್ಲಿಯ ಜನಾನಖಾನೆಯಲ್ಲಿ ಬಹುದಿವಸ ಕಾಲಕಳೆದಿರುವದರಿಂದ, ಜನರ ಪ್ರಾಣಹರಣ ಮಾಡುವ ಹಲವು ಕ್ರೂರತನದ ಶಿಕ್ಷೆಗಳು ನಿನಗೆ ಗೊತ್ತಿರುವವು! ಆದ್ದರಿಂದ ಹೇಳು, ಈ ಅಧಮಳಿಗೆ ಯಾವ ಶಿಕ್ಷೆ ಕೊಡಲಿ ಹೇಳು.

ಇಷ್ಟೇ ಅವಕಾಶವು ದೊರೆಯಲು, ಹೀರಾದೇವಿಯು ತನ್ನ ಅಂಜಿಕೆಯ ಚಿಹ್ನವನ್ನು ಕೃತ್ರಿಮ ನಗೆಯಿಂದ ಅಡಗಿಸಿಕೊಳ್ಳುತ್ತ ಮೃದುಸ್ವರದಿಂದ –

ಹೀರಾದೇವಿ—ಸಭಾಕರಣ, ಸ್ವಲ್ಪ ಶಾಂತರಾಗಿರಿ! ನಾನು ನಿಜವಾಗಿಯೇ ಶಿಕ್ಷೆಗೆ ಪಾತ್ರಳಿದ್ದರೆ, ನೀವು ಉಚ್ಚರಿಸಿದ ಶಿಕ್ಷೆಯನ್ನು ನಾನು ಆನಂದದಿಂದ ಭೋಗಿಸುವೆನು; ಆದರೆ ಶಿಕ್ಷೆಕೊಡುವ ಮೊದಲು ಕ್ಷಣಮಾತ್ರ ವಿಚಾರಮಾಡಿರಿ. ಸಾಗರದ ಲಲಿತೆಯ ವಿಷಯದ ಸುಳ್ಳುಸುದ್ದಿ ಹೇಳಿದೆನೆಂದು ನನ್ನ ಮೇಲೆ ನಿಮ್ಮ ಆರೋಪವಿರುವದಲ್ಲವೆ?

ಸಭಾಕರಣ—(ತಿರಸ್ಕಾರದಿಂದ) ಹೌದು.

ಹೀರಾದೇವಿ— ಚಂಪತರಾಯನು ಲಲಿತೆಯಮೇಲೆ ಬಲಾತ್ಕಾರಮಾಡಿರುವದಿಲ್ಲವೆಂಬ ಬಗ್ಗೆ • ನಿಮ್ಮ ನಂಬಿಗೆಯು ಸಂಪೂರ್ಣವಾಗಿ ಆಗಿದೆಯೋ?

ಸಭಾಕರಣ—ಹೀರಾದೇವಿ, ಹಾಗೆ ನಂಬಿಗೆಯಾಗದೆ ಸಭಾಕರಣನು ನಿನ್ನನ್ನು ಕೇಳುತ್ತಾನೆಂದು ತಿಳಿದಿರುವೆಯೇನು? ಲಲಿತೆಯು ನನಗೆ ಏನಾಗಬೇಕೆಂಬದರ ಎಚ್ಚರವು ನಿನಗಿರುವದಷ್ಟೆ? ನನ್ನ ತಂಗಿಯ ವಿಷಯವಾಗಿ ಕೆಟ್ಟ ಆರೋಪ ಮಾಡಿ ನನ್ನ ಮನಸ್ಸು ಕೆಡಿಸಿದ ನೀನು, ಈಗ ಮತ್ತೆ ಅದೇ ಆರೋಪವನ್ನು ನನ್ನ ಮುಂದೆ ಉಚ್ಚರಿಸುತ್ತಿಯಾ? ಹೀರಾದೇವೀ, ಲಲಿತೆಯ ಕೌಮಾರ್ಯದ ಭಂಗವಾಗಿರುವದಿಲ್ಲ, ಬುಂದೇಲದ ತನ್ನ ಬಂಧು–ಭಗಿನಿಯರ ಸಲುವಾಗಿ ತನ್ನ ಸರ್ವಸ್ವವನ್ನು ಕಳೆದುಕೊಳ್ಳಲು ಸಿದ್ಧನಾಗಿ ಪರಿಪರಿಯ ಕಷ್ಟಗಳನ್ನು ಹೊಂದಿದ ಮಹಾತ್ಮನಾದ ಚಂಪತರಾಯನು, ಒಬ್ಬ ಸಚ್ಛೀಲ ಕುಮಾರಿಕೆಯ ಮೇಲೆ ಕೈ ಮಾಡುವನೆಂದು ತಿಳಿದುಕೊಳ್ಳುವದು ಅತ್ಯಂತ ಅಧಮತನವು! ಹೀರಾದೇವೀ, ಚಂಪತ ರಾಯನು ಲಲಿತೆಯನ್ನು ತನ್ನ ತಂಗಿಯೆಂದು ತಿಳಿದು ಪ್ರೀತಿಸುತ್ತಿದ್ದನು. ಅವರಿಬ್ಬರು ಅಣ್ಣ–ತಂಗಿಯರಾಗಿದ್ದರೆಂಬ ನಂಬಿಗೆಯು ನನಗೆ ಸಂಪೂರ್ಣವಾಗಿ ಆಗಿದೆ.

ಈಮಾತುಗಳನ್ನು ಕೇಳಿ ಹೀರಾದೇವಿಯ ಮುಖವು ನಿಸ್ತೇಜವಾಯಿತು. ಆದರೂ ಆಕೆಯು ಕೃತ್ರಿಮ ಧೈರ್ಯದಿಂದ –

ಹೀರಾದೇವಿ – ಲಲಿತೆಯು ಚಂಪತರಾಯನ ಪಾಪಾಚರಣೆಯಿಂದ ದೇಹತ್ಯಾಗ ಮಾಡಿರುವದಿಲ್ಲೆಂಬ ನಂಬಿಗೆಯು ನಿನಗೆ ಹೇಗೆ ಆಯಿತು?

ಸಭಾಕರಣ—ಪಾತಕಿ ಸ್ತ್ರೀಯೇ, ಮಹಾತ್ಮನಾದ ಚಂಪತರಾಯನು ಸಮರ ಭೂಮಿಯಲ್ಲಿ ಬಿದ್ದು ಪ್ರಾಣಬಿಡುವಾಗ ಲಲಿತೆಯ ಮೇಲೆ ನನ್ನ ಶುದ್ಧವಾದ ಭಗಿನೀ ಪ್ರೇಮವಿತ್ತೆಂದು ಸ್ವತಃ ತನ್ನ ಬಾಯಿಂದ ಹೇಳಿರುವನು. ಜನ್ಮದಲ್ಲಿ ಚಂಪತರಾಯನು ಸುಳ್ಳು ಮಾತಾಡಿದವನಲ್ಲ, ಅಂದ ಬಳಿಕ ಅಂತಕಾಲದಲ್ಲಿ ತನ್ನ ವಾಣಿಗೆ ಅಸತ್ಯದ ಕಲಂಕವನ್ನು ತಗಲಿಸಿಕೊಂಡು ಆತನು ಯಾಕೆ ನರಕಕ್ಕೆ ಗುರಿಯಾದಾನು?

ಹೀರಾದೇವಿ—(ನಗುತ್ತ) ಸಭಾಕರಣ, ಏನು ನಿಮ್ಮ ವಿಶ್ವಾಸವು! ನೀವು ಸಮರ ಭೂಮಿಯಲ್ಲಿ ಪರಾಕ್ರಮಿಗಳಷ್ಟೇ ಅಲ್ಲದೆ, ಮನುಷ್ಯರ ಪರೀಕ್ಷೆಯು ನಿಮಗೆ ಆಗುವದಿಲ್ಲ! ಆ ಧೂರ್ತ ಚಂಪತರಾಯನು ನಿಮ್ಮಿಬ್ಬರ ಮನಸ್ಸು ಕೆಡಿಸುವದಕ್ಕಾಗಿ ಹೀಗೆ ಆಡಿರಬಹುದು;

ಇಷ್ಟೂ ನಿಮಗೆ ತಿಳಿಯಬಾರದೇನು? ಯಾಕೆ, ಕಂಚುಕಿರಾವ, ನನ್ನ ತರ್ಕವು ನಿಜವಿರ ಬಹುದಲ್ಲವೆ?

ಕಂಚುಕಿರಾವ—(ತಲೆಯಲ್ಲಾಡಿಸುತ್ತ) ಹೀರಾದೇವಿಯ ತರ್ಕವು ಈವರೆಗೆ ಎಲ್ಲಿಯಾದರೂ ಸುಳ್ಳಾಗಿರುವದೇ? ದಿಲ್ಲಿಯ ಸಾಮ್ರಾಜ್ಯದಲ್ಲಿ ರೋಷನಾರಳು, ಬುಂದೇಲ ಖಂಡದಲ್ಲಿ ಹೀರಾದೇವಿಯು! ಇವರ ಚಾತುರ್ಯವನ್ನು ಯಾರು ಒಪ್ಪಿಸಿಕೊಳ್ಳಲಿಕ್ಕಿಲ್ಲ!

ಸಭಾಕರಣ—(ಸಂತಾಪದಿಂದ) ಎಲಾ, ದಿಲ್ಲಿಯ ಕಂಚುಕಿಯೇ, ಹೀರಾದೇವಿಯಂತಹ ಕಟಕಳ ಮೇಲುಗಟ್ಟುವ ಪಿಶಾಚವೇ, ವ್ಯರ್ಥ ಬಡಬಡಿಸಬೇಡ. ನೀನೂ, ಮಾಯಾವಿಯಾದ ಹೀರಾದೇವಿಯೂ ನನ್ನ ಉಪಾಹಾಸ ಮಾಡುವಿರಾ? ಹೀರಾದೇವೀ , ಅದು ಏನೇ ಇರಲಿ, ನಿನಗೆ ದೇಹಾಂತ ಪ್ರಾಯಶ್ಚಿತ್ತ ಕೊಡಲು ನಾನು ನಿಶ್ಚಯಿಸಿರುತ್ತೇನೆ. ನೀನು ಬದುಕಿರುವವರೆಗೆ ಬುಂದೇಲಖಂಡಕ್ಕೆ ಸ್ವಾತಂತ್ರ್ಯಪ್ರಾಪ್ತಿಯು ಆಗಲಾರದು. ಹೇಳು, ನಿನ್ನನ್ನು ಹೇಗೆ ಕೊಲ್ಲಲಿ? ಕುತ್ತಿಗೆ ಹಿಚುಕಿಕೊಲ್ಲಲಾ, ಅಥವಾ ವಜ್ರಮುಷ್ಟಿಯಿಂದ ಗುದ್ದಿ ಕೊಲ್ಲಲಾ, ಅಥವಾ ಒದೆದು ಕೊಲ್ಲಲಾ? ಆದರೆ ಈ ಉಪಾಯಗಳಿಂದ ನಿನ್ನನ್ನು ಕೊಲ್ಲುವಾಗ ನಿನ್ನ ಅಪವಿತ್ರ ಅಂಗಕ್ಕೆ ನಾನು ಸ್ಪರ್ಶಮಾಡಬೇಕಾಗುವದು; ಮತ್ತು ಆ ಪಾತಕವನ್ನು ಕಳೆದುಕೊಳ್ಳುವದಕ್ಕಾಗಿ ಕಂಚುಕಿರಾಯನಂಥ ದೇಶದ್ರೋಹಿಯನ್ನು ಕೊಲ್ಲಬೇಕಾಗುವದು; ಆದ್ದರಿಂದ ಅಸ್ಥಿಪಂಜರ ವಾಗಿರುವ ಈ ಕಂಚುಕಿರಾಯನನ್ನು ನಿನ್ನ ಮೇಲೆ ಅಪ್ಪಳಿಸಿ, ಇಬ್ಬರನ್ನೂ ಒಮ್ಮೆಲೆ ಕೊಂದು ಬಿಡುವದು ನೆಟ್ಟಗೆ!

ಮಹಾ ಸಮರ್ಥನಾದ ಸಭಾಕರಣನ ಈ ಮಾತುಗಳನ್ನು ಕೇಳಿ ಕಂಚುಕಿರಾಯನು ಥರಥರ ನಡಗಹತ್ತಿದನು. ತಾನು ಹೀರಾದೇವಿಯನ್ನು ಕೊಲ್ಲುವದೊಂದು ಸಾಧನವಾಗುವೆ ನೆಂದು ಆತನು ಬಾಯಿಬಿಡಹತ್ತಿದನು. ಆತನ ಮೋರೆಯ ಮೇಲೆ ಹೆಣದ ಕಳೆ ಸುರಿಯ ಹತ್ತಿತು. ಆತನು ಜೀವ ಉಳಿಸಿಕೊಳ್ಳುವದಕ್ಕಾಗಿ ಸಭಾಕರಣನನ್ನು ಕುರಿತು—

ಕುಂಚುಕಿರಾಯ—(ಕೈಜೋಡಿಸಿ) ಸಭಾಕರಣ, ಹೀಗೆ ಅನ್ಯಾಯ ಮಾಡಬೇಡಿರಿ, ಬೇಕಾದರೆ ದಿಲ್ಲಿಯ ದರ್ಬಾರದೊಳಗಿನ, ಅಥವಾ ದಿಲ್ಲಿಯ ಜನಾನಖಾನೆಯೊಳಗಿನ ಮನುಷ್ಯ ವಧದ ಬೇರೆಬೇರೆ ಪ್ರಕಾರಗಳನ್ನು ನಾನು ನಿಮಗೆ ಹೇಳುವೆನು. ಅವುಗಳಲ್ಲಿ ನಿಮಗೆ ಯೋಗ್ಯಕಂಡ ಉಪಾಯವನ್ನು ನೀವು ಕೈಕೊಳ್ಳಿರಿ; ಆದರೆ ನನ್ನಿಂದ ಹೊಡೆದು ಎರಡು ಜೀವಗಳನ್ನು ತಕ್ಕೊಳ್ಳಬೇಡಿರಿ. ನಾನು ಸತ್ತಬಳಿಕ ನನ್ನ ಪತ್ನಿಯಾದ ಸಾಧ್ವೀಸುಘಲಾದೇವಿಯು ಜೀವದಿಂದಿರಲಾರಳು!

ಸಭಾಕರಣ—(ಸ್ವಲ್ಪ ಶಾಂತನಾಗಿ) ಒಳ್ಳೇದು. ಸಾಧ್ವೀ ಸುಘಲಾದೇವಿಗೆ ದುಃಖವಾಗ ಬಾರದೆಂದು ನಾನು ನಿನಗೆ ಜೀವದಾನ ಕೊಡುವೆನು. ಹೋಗು, ಒಂದು ಕ್ಷಣವೂ ಇಲ್ಲಿ ನಿಲ್ಲಬೇಡ. ನಾನು ಇನ್ನು ಹೀರಾದೇವಿಯ ಪ್ರಾಣಹರಣ ಮಾಡುವೆನು; ಆ ಭಯಂಕರ ಪ್ರಕಾರವನ್ನು ನೋಡುವದು ನಿನ್ನಿಂದಾಗಲಿಕ್ಕಿಲ್ಲ ಹೋಗು.

ತನ್ನ ಜೀವವು ಉಳಿಯಿತೆಂಬ ಆನಂದಿದಂದ ಕಂಚುಕಿರಾಯನು ಹೊರಟುಹೋದನು. ಆಗ ಸಭಾಕರಣನು ಹೀರಾದೇವಿಯನ್ನು ಕುರಿತು—

ಸಭಾಕರಣ—ಏ! ಹೀರಾದೇವಿ, ಹೇಳು, ಲಲಿತೆಯು ಆತ್ಮಹತ್ಯವನ್ನು ಯಾಕೆ ಮಾಡಿಕೊಂಡಳೆಂಬದನ್ನು ನಿಜವಾಗಿ ಹೇಳು.

ಹೀರಾದೇವಿ—ಸಭಾಕರಣ, ನಾನು ರಾಜಕಾರಣದಲ್ಲಿ ಸುಳ್ಳು ಆಡಿರಬಹುದು, ಇತರರೊಡನೆ ನಾನು ಮರೆಮೋಸ ಮಾಡುತ್ತಿರಬಹುದು; ಆದರೆ ನಿಮಗೆ ಒಂದು ಅಕ್ಷರವನ್ನೂ ಸುಳ್ಳು ಹೇಳಿರುವದಿಲ್ಲ. ಬಟವಾನದಿಯ ಮಡುವಿನಲ್ಲಿ ಬಾತು ತೇಲಿಬಂದ ನಿಮ್ಮ ತಂಗಿಯ ಹೆಣವನ್ನು ನೀವು ಗುರುತಿಸಲಿಲ್ಲವೆ? ಮಡುವಿನದಂಡೆಯ ಮೇಲೆ ಬಿದ್ದಿರುವ ಆಭರಣಗಳೂ, ಸೀರೆಯೂ ಲಲಿತೆಯವೇ ಎಂದು ನೀವೇ ಹೇಳಲಿಲ್ಲವೆ? ಲಲಿತೆಯು ಆತ್ಮಹತ್ಯಮಾಡಿ ಕೊಂಡಳೆಂಬ ನಂಬಿಗೆಯು ನಿಮಗೆ ಆಗಿದ್ದಿಲ್ಲವೆ?

ಸಭಾಕರಣ —ಆ ಮಾತು ಸತ್ಯವು, ಲಲಿತೆಯು ಆತ್ಮಹತ್ಯೆಮಾಡಿಕೊಂಡಳೆಂಬದನ್ನು ನಾನು ಒಪ್ಪಿಕೊಳ್ಳುತ್ತೇನೆ; ಆದರೆ ಆಕೆಯು ಆತ್ಮಹತ್ಯವನ್ನು ಮಾಡಿಕೊಂಡ ಕಾರಣವನ್ನು ಹೇಳಬಾರದೆ?

ಹೀರಾದೇವಿ— ಬೇರೆ ಕಾರಣವೇನಿರಬೇಕು? ಚಂಪತರಾಯನು ಲಲಿತೆಯ ಮೇಲೆ ಬಲಾತ್ಕಾರ—

ಸಭಾಕರಣ—ದುಷ್ಟೇ, ಮತ್ತೆ ಚಂಪತರಾಯನ ಹೆಸರು ಹೇಳುವೆಯಾ? ಮತ್ತೆ ನನ್ನ ತಂಗಿಯ ಮೇಲೆ ಹೊಲಸು ಆರೋಪವನ್ನು ಹೊರಿಸತೊಡಗುವೆಯಾ? ಚಂಪತರಾಯನ ಸ್ವಭಾವವನ್ನೂ, ಆತನ ಸತ್ಯನಿಷ್ಠೆಯನ್ನೂ, ಆತನ ಧರ್ಮಪರಾಯಣತೆಯನ್ನೂ ನಾನು ಚಿಕ್ಕಂದಿನಿಂದ ನೋಡುತ್ತ ಬಂದಿರುವೆನು. ನಿನ್ನ ಮಾತಿನ ಮೇಲಿಂದ ಚಂಪತರಾಯನ ಸಂಗಡ ನಾನು ದ್ವೇಷ ಬಳಿಸಹತ್ತಿದ ಮೇಲೆಯೂ ಆ ಮಹಾತ್ಮನ ಯೋಗ್ಯತೆಯನ್ನು ನಾನು ಪರೀಕ್ಷಿಸುತ್ತ ಬಂದಿರುವೆನು. ಅಂಥ ಪುಣ್ಯಾತ್ಮನ ವಿಷಯವಾಗಿ ನಿನ್ನಂತಹ ಚಂಡಾಲಳ ಮಾತಿನಿಂದಂತು ಇರಲಿ, ಪ್ರತ್ಯಕ್ಷ ಆಕಾಶವಾಣಿಯಿಂದಲೂ, ಲಲಿತೆಯೇ ಮೂರ್ತಿಮಂತಳಾಗಿ ನನ್ನ ಎದುರಿಗೆ ಬಂದು ಹೇಳಿದರೂ ನಾನು ಸಂಶಯಪಡಲಾರೆನು! ಆ ಮಹಾತ್ಮನ ಅಂತಕಾಲದ ಶಬ್ದಗಳು ನನ್ನ ಮನಸ್ಸನ್ನು ಪರಿಶುದ್ಧವಾಗಿ ಮಾಡಿಬಿಟ್ಟಿವೆ. ಇನ್ನು ಆತನ ವಿಷಯವಾಗಿ ನನ್ನ ಆ ಮನಸ್ಸನ್ನು ಅಪವಿತ್ರವಾಗಮಾಡುವದು ಯಾರಿಗೂ ಶಕ್ಯವಿಲ್ಲ. ನೀನಂತು ಆ ಪ್ರಯತ್ನಕ್ಕೆ ಸರ್ವಥಾ ಹೋಗಬೇಡ. ಲಲಿತೆಯ ಆತ್ಮಹತ್ಯದ ನಿಜವಾದ ಕಾರಣವನ್ನು ಹೇಳು; ಮತ್ತು ಮಾಡಿದ ಅಪರಾಧಕ್ಕಾಗಿ ಶಿಕ್ಷೆಯನ್ನು ಅನುಭವಿಸಲಿಕ್ಕೆ ಸಮಾಧಾನದಿಂದ ಸಿದ್ಧಳಾಗು.

ಸಭಾಕರಣನ ಈ ಮಾತುಗಳನ್ನು ಕೇಳಿ ಹೀರಾದೇವಿಯು ತನ್ನ ಆಸನದಿಂದ ಎದ್ದು ತನ್ನ ಮಲಗುವ ಕೋಣೆಯ ಕಡೆಗೆ ಒಡೊಂದೇ ಹೆಜ್ಜೆ ಹೋಗುತ್ತ ಸಭಾಕರಣನನ್ನು ಕುರಿತು— "ನಾನು ಸತ್ಯವನ್ನೇನು ಹೇಳಲಿ? ಅಸತ್ಯವನ್ನು ಆಡಿದ್ದರಷ್ಟೆ ಈಗ ಸತ್ಯವನ್ನು ಹೇಳುವದು! ಈಗ ಹದಿನಾರು ವರ್ಷಗಳ ಹಿಂದೆ ಸುಕುಮಾರಿಯಾದ ಲಲಿತೆಯು ಇದೇ ಹೊತ್ತಿನಲ್ಲಿ ಅದೋ ಅಲ್ಲಿಕಾಣುವ ಮಡುವಿನಲ್ಲಿ ಹಾರಿಕೊಂಡಳು. ಆಗ ಹೀಗೆಯೇ ಬೆಳದಿಂಗಳು ಸ್ವಚ್ಛವಾಗಿ ಬಿದ್ದಿತ್ತು; ಸುಳಿಗಾಳಿಯು ಹೀಗೆಯೇ ಸುಳಿದಾಡುತ್ತಲಿತ್ತು; ವಿರಲ ನಕ್ಷತ್ರಗಳು ಹೀಗೆಯೇ

ಮಿನುಗುತ್ತಲಿದ್ದವು; ಆದರೆ ಇವೆಲ್ಲ ಸಾಕ್ಷಿದಾರರಿಗೆ ಸಾಕ್ಷಿ ಹೇಳಲಿಕ್ಕೆ ಬಾಯೆಲ್ಲಿರುವದು? ಆದರೆ ಸಭಾಕರಣ, ನಿಲ್ಲಿರಿ, ಆತ್ಮಹತ್ಯ ಮಾಡಿಕೊಂಡವರಿಗೆ ಸರ್ವಥಾ ಸದ್ಗತಿಯಾಗದೆಂಬ ನಿಯಮವಿರುವದು. ಅಂತಹವರು ದೆವ್ವವಾಗಿ ಜೀವಿಟ್ಟ ಸ್ಥಳದಲ್ಲಿಯೇ ಸಂಚರಿಸುತ್ತ ಬಹುಕಾಲ ಇರುವರೆಂದು ಹೇಳುವರು. ಹಾಗೆ ಲಲಿತೆಯು ಪಿಶಾಚವಾಗಿರಬಹುದು, ಆಕೆಯನ್ನೇ ನೀವು ಕೇಳಿ ನನ್ನ ಮಾತಿನ ಸತ್ಯತೆಯ ಬಗ್ಗೆ ನಂಬಿಗೆ ಮಾಡಿಕೊಳ್ಳಬಹುದು. ಆಗೋ ನೋಡಿರಿ, ಅದೇ ಮಡುವಿನಲ್ಲಿ ಲಲಿತೆಯು ಜೀವಕೊಟ್ಟದ್ದು. ಲಲಿತೆಯು ಶುಭ್ರವಸ್ತ್ರವನ್ನು ಬಹು ಪ್ರೀತಿಯಿಂದ ಉಟ್ಟುಕೊಳ್ಳುತ್ತಿದ್ದಳಾದ್ದರಿಂದ, ಆಕೆಯ ಪಿಶಾಚವಾದರೂ ಬಿಳಿಯ ವಸ್ತ್ರವನ್ನು ಉಟ್ಟುಕೊಂಡಿರಬಹುದು; ಆದದ್ದರಿಂದ ಈಗ ಪಿಟ್ಟುಚಲ್ಲಿದ ಹಾಗೆ ಬಿದ್ದಿರುವ ಬೆಳದಿಂಗಳಿನಲ್ಲಿ ದಿಟ್ಟಿಸಿ ನೋಡಿದ ಹೊರತು ಲಲಿತೆಯ ಪಿಶಾಚವು ಕಣ್ಣಿಗೆ ಕಾಣಲಿಕ್ಕಿಲ್ಲ

ಈ ಮೇರೆಗೆ ಹೀರಾದೇವಿಯು ನುಡಿಯಲು, ಸಭಾಕರಣನು ಮಡುವಿನ ಕಡೆಗೆ ದಿಟ್ಟಿಸಿ ನೋಡತೊಡಗಿದನು. ಅಷ್ಟರಲ್ಲಿ ಹೀರಾದೇವಿಯು ಮತ್ತೆ ನಾಲ್ಕು ಹೆಜ್ಜೆ ಹಿಂದಕ್ಕೆ ಸರಿದು ಮಲಗುವ ಕೋಣೆಯ ಬಾಗಿಲಿಗೆ ಮುಟ್ಟಿದಳು. ಸಭಾಕರಣನು ಮಡುವಿನ ಕಡೆಗೆ ನೋಡುತ್ತಲೇ ಇದ್ದನು. ಅಷ್ಟರಲ್ಲಿ ಹೀರಾದೇವಿಯು ತನ್ನ ಮಲಗುವ ಕೋಣೆಯನ್ನು ಹೊಕ್ಕು ಬಾಗಿಲು ಹಾಕಿಕೊಳ್ಳತಕ್ಕವಳು; ಆದರೆ ಆ ಕೋಣೆಯೊಳಗಿನ ಕಿಡಿಕೆಯೊಳಗಿಂದ ಬಟವಾನದಿಯ ಆ ಮಡುವು ಸ್ವಚ್ಛವಾಗಿ ಕಾಣಹತ್ತಿ ನಿಜವಾಗಿಯೇ ಒಬ್ಬ ತರುಣಿಯು ಬಿಳಿಯ ವಸ್ತ್ರವನ್ನು ಉಟ್ಟುಕೊಂಡು ಆ ಮಡುವಿನ ದಂಡೆಯ ಮೇಲೆ ಸಂಚರಿಸುತ್ತಿದ್ದಳು. ಅದನ್ನು ನೋಡಿದ ಕೂಡಲೆ, ತನ್ನ ಜೀವ ಉಳಿಸಿಕೊಳ್ಳುವದಕ್ಕಾಗಿ ಓಡಿ ಹೋಗಬೇಕೆಂದು ಈ ಹಂಚಿಕೆ ತೆಗೆದಿದ್ದ ಹೀರಾದೇವಿಯು, ತನ್ನ ಜೀವ ಉಳಿಸಿಕೊಳ್ಳುವದರ ಪರಿವೆಯಿಲ್ಲದೆ, ಆ ತರುಣಿಯನ್ನು ನೋಡುತ್ತ ಕಲ್ಲಿನಂತೆ ಬಾಗಿಲಲ್ಲಿ ನಿಂತುಬಿಟ್ಟಳು. ಸಭಾಕರಣನಿಗಂತು ಆ ತರುಣಿಯು ಸ್ಪಷ್ಟವಾಗಿ ಕಾಣಹತ್ತಿದಳು. ಹೀರಾದೇವಿಯ ಕಡೆಗೆ ಆತನ ಲಕ್ಷವು ಎಷ್ಟು ಮಾತ್ರವೂ ಇದ್ದಿಲ್ಲ, ಆತನು ಆ ಬಿಳಿಯ ವಸ್ತ್ರವನ್ನುಟ್ಟುಕೊಂಡಿದ್ದ ತರುಣಿಯನ್ನೇ ದಿಟ್ಟಿಸಿ ನೋಡತೊಡಗಿದ್ದನು. ಆತನಿಗೆ ಆ ತರುಣಿಯು ತನ್ನ ತಂಗಿಯಾದ ಲಲಿತೆಯಂತೆಯೇ ತೋರಹತ್ತಿದಳು. ಅದೇ ಸೌಂದರ್ಯ, ಅದೇ ಎತ್ತರ, ಅದೇ ನಡಿಗೆ ಇದನ್ನೆಲ್ಲ ನೋಡಿ ಆತನು, ಆಶ್ಚರ್ಯದಿಂದ ಆ ಸ್ತ್ರೀಯನ್ನು ನೋಡುತ್ತ ನಿಂತುಬಿಟ್ಟನು. ನೋಡುವ ಭರದಲ್ಲಿ ಆತನು ಬಾಹ್ಯ ಜಗತ್ತನ್ನೇ ಮರೆತಿದ್ದನೆಂದು ಹೇಳಬಹುದು. ಈ ಪ್ರಸಂಗದಲ್ಲಿ ಹೀರಾದೇವಿಯು ಬೇಕಾದಹಾಗೆ ಓಡಿಹೋಗಿ ತನ್ನ ಜೀವವನ್ನು ಉಳಿಸಿಕೊಳ್ಳಬಹುದಾಗಿತ್ತು; ಆದರೆ ಆ ತರುಣ ಸ್ತ್ರೀಯನ್ನು ನೋಡಿ ಆಕೆಯ ಕಾಲುಗಳೂ ಕಿತ್ತದಾದವು. ಸಭಾಕರಣನು ಆ ತರುಣಿಯನ್ನು ನೋಡುತ್ತ ನೋಡುತ್ತ ಹೀರಾದೇವಿಯನ್ನು ಕುರಿತು ಹೀರಾದೇವೀ, ಏನಂದೆ? ಆ ಪಿಶಾಚವನ್ನೇ ಕೇಳೆಂದು ನೀನು ಅನ್ನಲಿಲ್ಲವೆ? ನಾನು ಪಿಶಾಚವನ್ನು ಕೇಳಲಾ? ನೋಡು, ಲಲಿತೆಯ ಪಿಶಾಚವು ಮಡುವಿನ ಮೇಲೆ ಓಡಾಡುತ್ತಿರುವದು! ನಿಲ್ಲು, ಅದನ್ನು ಕೇಳಿಬಂದು ನಿನಗೆ ಮಾಡತಕ್ಕ ಶಿಕ್ಷೆಯನ್ನು ಮಾಡುವೆನು ನಿಲ್ಲು, ಎಲೈ ಸುಕುಮಾರ ಪಿಶಾಚಿಯೇ, ಕ್ಷಣಹೊತ್ತು ನಿಂತುಕೊಳ್ಳು.

ನೀನು ಬದುಕಿರುವಾಗಿನ ನಿನ್ನ ಅಣ್ಣ ಸಭಾಕರಣನು ನಿನ್ನ ಬಳಿಗೆ ವಾಯುವೇಗದಿಂದ ಬರುವನು ನಿಲ್ಲು, ಅಲ್ಲಿಯವರೆಗೆ ಅದೃಶ್ಯವಾಗಬೇಡ. ಎಂದು ನುಡಿದು ಸಭಾಕರಣನು ಹೀರಾದೇವಿಯ ಮಲಗುವ ಕೋಣೆಯೊಳಗಿನ ಕಿಡಿಕಿಯೊಳಗಿಂದ ಬಟವಾ ನದಿಯ ಮಡುವಿನಲ್ಲಿ ದಡಮ್ಮನೆ ಹಾರಿಕೊಂಡನು!

## ಅಘಟಿತ ಘಟನೆ!

ಹೀಗೆ ಸಭಾಕರಣನು ಮಡುವಿನಲ್ಲಿ ಹಾರಿಕೊಂಡದ್ದನ್ನು ನೋಡಿ ಹೀರಾದೇವಿಗೆ ಆಶ್ಚರ್ಯವಾದದ್ದಕ್ಕಿಂತ, ಮಡುವಿನ ದಂಡೆಯಲ್ಲಿ ಲಲಿತೆಯು ಸುಳಿದಾಡುತ್ತಿರುವದನ್ನು ನೋಡಿ ಆಕೆಗೆ ಹೆಚ್ಚು ಆಶ್ಚರ್ಯವಾಗಿತ್ತು. ತಾನು ಸಭಾಕರಣನ ಕೈಯಿಂದ ಪಾರಾಗಿ ಹೋಗುವದಕ್ಕಾಗಿ ಆತನ ಲಕ್ಷ್ಯವನ್ನು ಬೇರೆಕಡೆಗೆ ಒಯ್ಯಬೇಕೆಂದು ಈ ಯುಕ್ತಿಯನ್ನು ಆಕೆಯು ಮಾಡಿದ್ದಲ್ಲದೆ ಲಲಿತೆಯ ಪಿಶಾಚವು ಅಲ್ಲಿ ಇರುವದೆಂಬದನ್ನು ಸೂಚಿಸುವದಕ್ಕಾಗಿ ಆಕೆಯು ಹೀಗೆ ಸಭಾಕರಣನಿಗೆ ಹೇಳಿದ್ದಿಲ್ಲ. ಯಾಕಂದರೆ ಲಲಿತೆಯು ಎಲ್ಲಿ ಇರುವಳೆಂಬದು ಆ ಕಪಟಿಯಾದ ಸ್ತ್ರೀಗೆ ಗೊತ್ತು ಇದ್ದಿತು. ಲಲಿತೆಯು ಆತ್ಮಹತ್ಯ ಮಾಡಿಕೊಂಡಿದ್ದ ಸುಳ್ಳುಸುದ್ದಿಯನ್ನು ಸಭಾಕರಣನ ಮುಂದೆ ಆಕೆಯು ಹೇಳಿ, ಆತನಿಂದ ಚಂಪತರಾಯನನ್ನು ಕೊಲ್ಲುವ ಪ್ರತಿಜ್ಞೆ ಮಾಡಿಸಿಕೊಂಡಿರಲು, ಲಲಿತೆಯ ಪಿಶಾಚದ ಕಲ್ಪನೆಯು ಆಕೆಗೆ ಎಲ್ಲಿಂದ ಬರಬೇಕು? ಆದರೆ ಸಾವಿನ ದವಡೆಯೊಳಗಿಂದ ಪಾರಾಗುವದಕ್ಕಾಗಿ ತಾನೊಂದು ಯುಕ್ತಿಯೆಂದು ಆ ಪಿಶಾಚದ ಮಾತು ಹೇಳಲಿಕ್ಕೂ, ಲಲಿತೆಯ ರೂಪದ ಸ್ತ್ರೀಯು ಮಡುವಿನ ದಂಡೆಯ ಮೇಲೆ ಕಣ್ಣಿಗೆ ಬೀಳಲಿಕ್ಕೂ ಗಂಟೇ ಬಿದ್ದಬಳಿಕ ಆಕೆಗೆ ಆಶ್ಚರ್ಯವಾಗದೇನು ಮಾಡೀತು? ಆಕೆಯು ಮತ್ತೆ ಆ ತರುಣಿಯ ಕಡೆಗೆ ನೋಡುತ್ತ ತನ್ನೊಳಗೆ —''ಆಕೆಯೇ ಈಕೆಯು! ಆ ಲಲಿತೆಯಲ್ಲದೆ ಬೇರೆ ಯಾರಿರುವರು? ಆಕೆಗೆ ಪುನಃ ಬುಂದೇಲ ಖಂಡದಲ್ಲಿ ಬರುವ ಧೈರ್ಯವು ಹೇಗೆ ಆಯಿತು? ಹೀಗೆ ಸ್ವಚ್ಛಂದದಿಂದ ತಿರುಗುವದಕ್ಕಾಗಿ ಆಕೆಗೆ ಒಪ್ಪಿಗೆಯು ಹೇಗೆ ದೊರೆತಿರಬಹುದು! ಆ ಲಲಿತೆಯು ಹೋಗಿ ಹದಿನಾರು ವರ್ಷವಾಗಿರಲು, ಆಕೆಯು ಆಗಿನ ಹದಿನೈದು ವರ್ಷದ ತರುಣಿಯಂತೆಯೇ ಈಗೂ ಇರುವಳಲ್ಲ! ಹದಿನಾರು ವರ್ಷದಲ್ಲಿ ಆಕೆಯ ಚಲ್ವಿಕೆಯಲ್ಲಿ, ತಾರುಣ್ಯದಲ್ಲಿ, ಪ್ರಸನ್ನತೆಯಲ್ಲಿ ಸ್ವಲ್ಪವೂ ಹೆಚ್ಚು ಕಡಿಮೆಯಾಗಿರಲಿಕ್ಕಿಲ್ಲವೆ? ಇದು ಲಲಿತೆಯ ಪಿಶಾಚವೇ ಆಗಿರಬಹುದೇನು? ಲಲಿತೆಯು ಸತ್ತುಹೋಗಿ ಪಿಶಾಚವಾಗಿ ಇಲ್ಲಿಗೆ ಬಂದಿರ ಬಹುದೆ?

ಈಮೇರೆಗೆ ಹೀರಾದೇವಿಯು ಮೂಢಳಾಗಿ ವಿಚಾರಮಾಡುತ್ತ ನಿಂತಿರಲು, ಅತ್ತ ಸಭಾ ಕರಣನು ಬಟವಾನದಿಯ ನೀರನ್ನು ಕಸುವಿನಿಂದ ಬಗೆಯುತ್ತ ದಂಡೆಯಕಡೆಗೆ ಸಾಗಿದ್ದನು; ಆದರೆ ಆ ಪಿಶಾಚದ ಕಡೆಗಿದ್ದ ಆತನ ದೃಷ್ಟಿಯು ಮಾತ್ರ ಚಲಿಸಿದ್ದಿಲ್ಲ; ಯಾಕಂದರೆ,

ಕಣ್ಣುಮುಚ್ಚಿ ಕಣ್ಣು ತೆರೆಯುವದರೊಳಗಾಗಿ ಪಿಶಾಚವು ಎಲ್ಲಿ ಮಾಯವಾಗುವದೋ, ಎಂಬ ಅಂಜಿಕೆಯು ಆತನಿಗೆ ಬಹಳವಾಗಿ ಇತ್ತು, ಪಿಶಾಚದ ಸನಿಸನಿಯಕ್ಕೆ ಹೋದಂತೆ ಆತನ ಆತುರತೆಯು ಹೆಚ್ಚುತ್ತ ಹೋಯಿತು. ಆತನು ಆಗ ಹೆದರುತ್ತಿದ್ದದ್ದು ಪಿಶಾಚವು ಬಡಿದು ಕೊಂದೀತೆಂದು ಅಲ್ಲ, ಆದರೆ ತನ್ನ ಕಾಲ ಸಪ್ಪಳಕೇಳಿ ಅದು ಎಲ್ಲಿ ಅದೃಶ್ಯವಾಗುವದೋ ಎಂದು! ಆಗ ಆ ತರುಣಿಯು ಬೆಳದಿಂಗಳಲ್ಲಿ ಜಟವಾನದಿಯು ಶಾಂತರೀತಿಯಿಂದ ಹರಿದು ಹೋಗುತ್ತಿರುವದನ್ನು ಏಕಾಗ್ರದಿಂದ ನೋಡುತ್ತಿದ್ದಳು. ಆ ಸುಂದರ ತರುಣಿಯ ಮನಸ್ಸಿನಲ್ಲಿ ವಿವಿಧ ವಿಚಾರ ತರಂಗಗಳು ಉತ್ಪನ್ನವಾಗಿದ್ದವು. ತನ್ನ ಆ ವಿಚಾರಮಗ್ನ ಸ್ಥಿತಿಯಲ್ಲಿ ಸಭಾಕರಣನು ಈಸಿ ಬರುವದನ್ನು ಆಕೆಯು ನೋಡಿದ್ದಿಲ್ಲ. ಆಕೆಯು ತನ್ಮಯಳಾಗಿ ಪ್ರವಾಹವನ್ನು ನೋಡುತ್ತ ನಿಂತಿರಲು, ಯಾರೋ ತನ್ನ ಕೈಹಿಡಿದಂತೆ ಆಕೆಗೆ ಆಯಿತು. ಆಕೆಯು ಎಚ್ಚತ್ತು ಸಭೆಯ ದೃಷ್ಟಿಯಿಂದ ನೋಡಲು, ಒಬ್ಬ ಭವ್ಯ ಪುರುಷನು ತನ್ನ ಕೈಯನ್ನು ಹಿಡಿದುಕೊಂಡು ದಯಾರ್ದ್ರ ದೃಷ್ಟಿಯಿಂದ ತನ್ನ ಕಡೆಗೆ ನೋಡುತ್ತಿರುವದು ಆಕೆಯ ಕಣ್ಣಿಗೆ ಬಿದ್ದಿತು; ಆದರೆ ಹಾಗೆ ಕೈಹಿಡಿದವನು ಸಾಗರದರಾಜನಾದ ಸಭಾಕರಣನೆಂಬದು ಆಕೆಗೇನು ಗೊತ್ತು! ಆಕೆಯು ಹಾಗೆಯೇ ಆಶ್ಚರ್ಯದಿಂದ ನೋಡುತ್ತ ನಿಂತಿರಲು ಸಭಾಕರಣನು –

ಸಭಾಕರಣ—ಸುಕುಮಾರ ಪಿಶಾಚವೇ, ಕ್ಷಣಹೊತ್ತು ನನ್ನ ಸಂಗಡ ಮಾತಾಡಿ, ಆಮೇಲೆ ಅದೃಶ್ಯವಾಗು. ನನ್ನ ಪ್ರಶ್ನೆಗೆ ಯೋಗ್ಯ ಉತ್ತರ ಕೊಟ್ಟು ನನ್ನನ್ನು ಸಮಾಧಾನ ಗೊಳಿಸುವ ತನಕ ನಿನ್ನ ಕೈಯನ್ನು ನಾನು ಬಿಟ್ಟವನಲ್ಲ.

ಸ್ತ್ರೀ—ನೀವು ಯಾರು ? ನನಗೆ ನೀವು ಪಿಶಾಚವೆಂದು ಯಾಕೆ ಅನ್ನುವಿರಿ? ನಾನಿರುವ ಸ್ಥಳವು ಇಲ್ಲಿಯೇ ಸಮೀಪದಲ್ಲಿದೆ, ಅಲ್ಲಿ ನಮ್ಮ ಜನರೂ ಇದ್ದಾರೆ; ಆದರೆ ನಿದ್ದೆಬಾರದ್ದರಿಂದ ಸುಮ್ಮನೆ ವಿಶ್ರಾಂತಿಹೊಂದುವದಕ್ಕಾಗಿ ಈ ನದೀತಿರಕ್ಕೆ ನಾನು ಬಂದಿರುವೆನು.

ಸಭಾಕರಣ—(ಆನಂದದಿಂದ) ಆಹಾ! ಅದೇ ದನಿಯು! ನಮ್ಮ ಲಲಿತೆಯ ದನಿಯೂ ಇಷ್ಟು ಕರ್ಣ ಮಧುರವಾಗಿಯೇ ಇತ್ತು. ಲಲಿತೆಯನ್ನು ಅಂಜಿಸಿದರೆ ಹೀಗೆಯೇ ಆಕೆಯು ಗಾಬರಿಯಾಗುತ್ತಿದ್ದಳು. ಎಲೈ ಲಲಿತೆಯ ಪಿಶಾಚವೇ, ನಿನ್ನಲ್ಲಿ ಲಲಿತೆಯ ಪೂರ್ಣ ಸೌಂದರ್ಯವಿಷ್ಟೇ ಅಲ್ಲ, ಲಲಿತೆಯ ಕೋಮಲ ಧ್ವನಿಯೂ, ಲಲಿತೆಯ ಮಧುರ ದೃಷ್ಟಿಪಾತವೂ, ಲಲಿತೆಯ ಅವರ್ಣನೀಯ ಪ್ರಸನ್ನ ಮುದ್ರೆಯೂ ನಿನ್ನಲ್ಲಿ ಪೂರ್ಣವಾಗಿ ಮೂಡಿರುವವು! ಈ ಮಡುವಿನಲ್ಲಿ ಸತ್ತಿದ್ದ ಲಲಿತೆಯನ್ನು ನಾನು ನೋಡಿರದಿದ್ದರೆ, ನಿನ್ನನ್ನೇ ನಾನು ಲಲಿತೆಯೆಂದು ಸಾಗರದ ಅರಮನೆಗೆ ಕರಕೊಂಡು ಹೋಗುತ್ತಿದ್ದೆನು. ಸುಕುಮಾರ ಪಿಶಾಚವೇ, ನಿನಗೆ ಈ ಪಿಶಾಚಜನ್ಮವು ಯಾಕೆ ಬಂದಿತು?

ತರುಣಿ—(ಹೃದಯಕರಗಿ) ಸದ್ಗೃಹಸ್ಥನೇ, ನಿನ್ನ ಮೆದುಳಿಗೆ ಏನಾದರೂ ಅಪಾಯ ವಾಗಿರಬಹುದು; ಹಾಗಲ್ಲದಿದ್ದರೆ ಪ್ರತ್ಯಕ್ಷ ಮನುಷ್ಯಳಾದ ನನ್ನನ್ನು ಪಿಶಾಚವೆಂದು ಕರೆಯುತ್ತಿದ್ದೆಯಾ? ನನ್ನನ್ನು ಲಲಿತೆಯ ಪಿಶಾಚವೆಂದು ತಿಳಿದಿರುವ ನಿನಗೆ, ಆ ಲಲಿತೆಯು ಏನಾಗಬೇಕು?

ಸಭಾಕರಣ—ಲಲಿತೆಯು ನನಗೆ ತಂಗಿಯಾಗಬೇಕು.

ತರುಣಿ—ಆಕೆಯು ಸತ್ತಿರುವಳೋ?

ಸಭಾಕರಣ—ಆಕೆಯು ಇದೇ ಮಡುವಿನಲ್ಲಿ ಹಾರಿಕೊಂಡು ಜೀವಕಳಕೊಂಡಳು. ಆತ್ಮಹತ್ಯಮಾಡಿಕೊಂಡಿರುವದರಿಂದಲೇ ಲಲಿತೆಯು ಪಿಶಾಚವಾಗಿ ಸಂಚರಿಸುತ್ತಿರುವಳು. ನನ್ನ ತಂಗಿಯು, ನನ್ನ ಲಲಿತೆಯು ಆತ್ಮಹತ್ಯವನ್ನು ಏಕೆ ಮಾಡಿಕೊಂಡಳು?

ತರುಣಿ—ಅದನ್ನು ನಾನು ಹೇಗೆ ಹೇಳಲಿ? ದುರ್ದೈವಿ ಪುರುಷನೇ, ನನ್ನನ್ನು ನೀನು ಪಿಶಾಚವೆಂದು ತಿಳಿಯುತ್ತೀ; ಆದರೆ ನಾನು ಪಿಶಾಚವಲ್ಲ.

ಸಭಾಕರಣ—ಏನು? ನೀನು ಪಿಶಾಚವಲ್ಲವೆ? ಹಾಗಾದರೆ ಯಾರು?

ತರುಣಿ—ನಾನು ಮನುಷ್ಯ ಸ್ತ್ರೀ ಇರುವೆನು.

ಸಭಾಕರಣ—ನೀನು ಮನುಷ್ಯಸ್ತ್ರೀ ಇರುವೆಯಾ? ಹಾಗಿದ್ದರೆ ಇಷ್ಟು ರಾತ್ರಿಯಲ್ಲಿ ಮನುಷ್ಯರ ಸುಳವಿಲ್ಲದ ಸ್ಥಳದಲ್ಲಿ ನಮ್ಮ ಲಲಿತೆಯು ಆತ್ಮಹತ್ಯಮಾಡಿಕೊಂಡ ಸ್ಥಳದಲ್ಲಿಯೇ ನೀನು ಯಾಕೆ ಸಂಚರಿಸುತ್ತಿರುವೆ?

ತರುಣಿ—ನಾನು ಆಗಲೆ ನಿನಗೆ ಹೇಳಲಿಲ್ಲವೆ? ನಾನು ಇಳಿದುಕೊಂಡ ಸ್ಥಳವು ಇಲ್ಲಿಯೇ ಸಮೀಪದಲ್ಲಿರುವದು. ಅಲ್ಲಿ ನನ್ನ ಜನರೂ ಇರುವರು. ನನಗೆ ನಿದ್ರೆ ಬಾರದ ಹಾಗಾದದ್ದರಿಂದ ಸುಮ್ಮನೇ ನಾನು ಇಲ್ಲಿಗೆ ಬಂದುಬಿಟ್ಟೆನು. ನನ್ನನ್ನು ಈಗ ಒಬ್ಬಳೆಂದು ತಿಳಿಯಬೇಡ. ಇದೋ ನೋಡು ಈ ತೀಕ್ಷ್ಣಕಠಾರಿಯು ಪ್ರಸಂಗದಲ್ಲಿ ನನ್ನ ಸಂರಕ್ಷಕ ಬಂಧುವಾಗಿ ನನ್ನ ಬಳಿಯಲ್ಲಿರುವದು!

ಸಭಾಕರಣ—(ಆಶ್ಚರ್ಯದಿಂದ) ನೀನು ಎಲ್ಲಿಯವಳು? ನಿನ್ನ ಹೆಸರೇನು?

ತರುಣಿ—ನಾನು ದಿಲ್ಲಿಯವಳು. ನನ್ನ ಹೆಸರು ಬದ್ರುನ್ನಿಸೆ.

ಸಭಾಕರಣ—(ಆಶ್ಚರ್ಯದಿಂದ) ಬದ್ರುನ್ನಿಸಾ, ನೀನು ಯವನಿಯೆನ್ನುವ ಹಾಗೆ ತೋರುತ್ತದೆ; ಆದರೆ ನಮ್ಮ ಮಾತನ್ನು ಇಷ್ಟು ಸರಳವಾಗಿ ಹೇಗೆ ಆಡುತ್ತೀ? ನಿನಗೆ ನಮ್ಮ ಉಡಿಗೆ-ತೊಡಿಗೆಗಳೇಕೆ?

ತರುಣಿ—ಇದು ನನ್ನ ಸೇರಿಕೆಯ ಮಾತು. ಬುಂದೇಲಖಂಡ ಸ್ತ್ರೀಯರಂತೆಯೇ ನಾನು ಉಡ-ತೊಡುವುದಕ್ಕೇ ಮೆಚ್ಚಿದವಳಾಗಿರುತ್ತೇನೆ. ನನ್ನ ತಾಯಿಯು ಬುಂದೇಲಖಂಡ ದೊಳಗಿನವಳಿರುವದರಿಂದ ಆಕೆಗೆ ಇಲ್ಲಿಯ ಭಾಷೆಯೂ, ಇಲ್ಲಿಯ ಸ್ಥಿತಿ-ರೀತಿಗಳೂ ಬಹಳವಾಗಿ ಸೇರುತ್ತವೆ. ಆಕೆಯು ನನಗೆ ಈ ಮಾತನ್ನು ಕಲಿಸಿದಳು.

ಸಭಾಕರಣ—ನಿನ್ನ ತಾಯಿಯು ಬಂದೇಲಖಂಡದೊಳಗಿನವಳಾಗಿದ್ದರೂ, ಲಗ್ನವಾಗುವ ಮೊದಲು ಆಕೆಯು ಯವನಿಯೇ ಆಗಿದ್ದಳಲ್ಲವೆ?

ಬದ್ರುನ್ನಿಸೆ—ಛೆ! ನನ್ನ ತಾಯಿಯ ಜನ್ಮವು ಬುಂದೇಲಖಂಡದ ಒಂದು ಉಚ್ಚ ಮನೆತನದಲ್ಲಾಗಿರುವದು. ಆಕೆಯು ಯವನನನ್ನು ಲಗ್ನವಾಗಿದ್ದರೂ, ತನ್ನ ಧರ್ಮವನ್ನು ಬಿಟ್ಟಿರುವದಿಲ್ಲ. ಆಕೆಯು ದೇವೀ ವಿಂಧ್ಯವಾಸಿನಿಯ ಭಕ್ತಳಾಗಿರುವಳು.

ಬುದ್ರುನಿಸೆಯ ಈ ಮಾತುಗಳನ್ನು ಕೇಳಿ ಸಭಾಕರಣನಿಗೆ ಮಾವದೋ ಮಾತಿನ ಸಂಶಯ ಬಂದಹಾಗಾಯಿತು. ಆತನು ಬದ್ರುನ್ನಿಸೆಯನ್ನು ಕುರಿತು—

ಸಭಾಕರಣ—ಬದ್ರುನ್ನಿಸೇ, ನಿನ್ನ ತಾಯಿಯು ಎಷ್ಟು ವರ್ಷದ ವಯಸ್ಸಿನವಳಿರುವಳು?

ಬದ್ರುನ್ನಿಸೆ—ಆಕೆಯು ಸುಮಾರು ಮೂವತ್ತೆರಡು ವರ್ಷದ ವಯಸ್ಸಿನವಳಿರಬಹುದು. ತಾನು ಬುಂದೇಲಖಂಡವನ್ನು ಬಿಟ್ಟು ಹದಿನಾರು ವರ್ಷವಾಯಿತೆಂದೂ, ಬುಂದೇಲ ಖಂಡವನ್ನು ಬಿಡುವಾಗ ತಾನು ಹದಿನಾರು ವರ್ಷದವಳಿದ್ದನೆಂದೂ ಆಕೆಯು ಒಮ್ಮೊಮ್ಮೆ ಅನ್ನುತ್ತಿದ್ದಳು.

ಸಭಾಕರಣ—ನಿಮ್ಮ ಅವ್ವನ ಅಂದಚಂದಗಳು ಹೇಗಿವೆ?

ಬದ್ರುನ್ನಿಸೆ—ತದ್ರೂಪ ನನ್ನ ಹಾಗೆಯೇ ಇವೆ; ಆಕೆಯು ವಯಸ್ಸಿನಿಂದ ನನಗಿಂತ ಹಿರಿಯಳಿರುವದರಿಂದ ಸ್ವಲ್ಪ ಪ್ರೌಢಳಾಗಿ ತೋರುವಳು. ಅಷ್ಟಲ್ಲದೆ ನಮ್ಮಿಬ್ಬರ ಸ್ವರೂಪದಲ್ಲಿ ಏನೂ ಹೆಚ್ಚುಕಡಿಮೆ ಇರುವದಿಲ್ಲ

ಬದ್ರುನಿಸೆಯ ಈ ಮಾತುಗಳನ್ನು ಕೇಳಿ ಸಭಾಕರಣನು ತನ್ನೊಳಗೆ—''ಈ ಸುಕುಮಾರಿಯ ತಾಯಿಯು ಲಲಿತೆಯಾಗಿರಬಹುದೊ? ಈ ಆಳವಾದ ಮಡಿವಿನಲ್ಲಿ ಹಾರಿಕೊಳ್ಳುವದರ ಬದಲು, ಯವನರ ಗೋಷೆಯನ್ನು ಆಕೆಯು ಸ್ವೀಕರಿಸಬಹುದೋ? ನನ್ನ ಲಲಿತೆಯನ್ನು ನಾನು ಮತ್ತೆ ನೋಡಬಹುದಲ್ಲವೆ? ಹೀರಾದೇವಿಯು ಯಾವದಾದರೂ ಒಂದು ಹೆಂಗಸಿನ ಹೆಣವನ್ನು ತೋರಿಸಿ ಲಲಿತೆಯನ್ನು ಆತ್ಮಹತ್ಯವಮಾಡಿಕೊಂಡಳೆಂದು ಹೇಳಿ ನನ್ನನ್ನು ಯಾಕೆ ಮೋಸಗೊಳಿಸಿರಬಾರದು? ಲಲಿತೆಯು ತಾನಾಗಿಯಾಗಲಿ, ಒಬ್ಬರ ಒತ್ತಾಯ ದಿಂದಾಗಲಿ ಯವನರ ಗೋಷೆಯಲ್ಲಿ ಸೇರಿರುವದೇ ನಿಜವು; ಆದ್ದರಿಂದ ಬದ್ರುನ್ನಿಸೆಯ ತಾಯಿಯನ್ನು ನಾನು ನೋಡಲೇಬೇಕು; ಆಕೆಯ ಸ್ಥಿತಿ-ಗತಿಯ ವಿಚಾರವನ್ನು ಮಾಡಲೇಬೇಕು.'' ಎಂದು ವಿಚಾರಿಸಿ ಈವರೆಗೆ ಹಿಡಿದುಕೊಂಡಿದ್ದ ಬದ್ರುನ್ನಿಸೆಯ ಕೈಯನ್ನು ಬಿಟ್ಟು ಆಕೆಯನ್ನು ಕುರಿತು –

ಸಭಾಕರಣ—ತಂಗೀ, ನಿನ್ನ ತಾಯಿಯೇ ನನ್ನ ಪ್ರೀತಿಯ ತಂಗಿಯು ಇರಬೇಕೆಂದು ನನಗೆ ಸಂಶಯವು ಬರತೊಡಗಿದೆ; ಆದ್ದರಿಂದ ದಿಲ್ಲಿಗೆ ಹೋಗಿ ನಿಜವಾದ ಸಂಗತಿಯನ್ನು ತಿಳಿದುಕೊಳ್ಳುವೆನು.

ಇದನ್ನು ಕೇಳಿ ಬದ್ರುನ್ನಿಸೆಯು ವಿಚಾರಮಗ್ನಳಾದಳು. ಆಕೆಯು ಏನೂ ಮಾತಾಡಲಿಲ್ಲ, ಮತ್ತೆ ಸಭಾಕರಣನು–

ಸಭಾಕರಣ—ತಂಗೀ, ನಿನ್ನ ತಾಯಿಯ ಈಗಿನ ಹೆಸರೇನು? ಆಕೆಯು ದಿಲ್ಲಿಯಲ್ಲಿ ಎಲ್ಲಿರುವಳು?

ಬದ್ರುನ್ನಿಸೆ ಆಕೆಯ ಹೆಸರು ಆಯೇಷೆ. ಆಕೆಯು ಸಾರ್ವಭೌಮ ದಿಲ್ಲೀಪತಿಯ ಜನಾನಖಾನೆಯಲ್ಲಿರುವಳು.

ಸಭಾಕರಣ—ದಿಲ್ಲೀಪತಿಯ ಜನಾನಖಾನೆಯಲ್ಲಿ? ಅದೇಕೆ? ಅಲ್ಲಿ ಏಕೆ ಇರುವಳು?

ಬದ್ರುನ್ನಿಸೆ—(ಗಾಂಭೀರ್ಯದಿಂದ) ನನ್ನ ತಾಯಿಯಾದ ಆಯೇಷೆಯು ಶಹಾನಶಹಾ ಔರಂಗಜೇಬ ಬಾದಶಹನ ಪಟ್ಟದರಸಿ ಇರುವದರಿಂದ, ಆ ಸಾರ್ವಭೌಮರಾಜನ ಜನಾನಖಾನೆಯಲ್ಲಿರುವಳು.

ಅದನ್ನು ಕೇಳಿ ಸಭಾಕರಣನು ಆಶ್ಚರ್ಯಮಗ್ನನಾದನು. ಕೆಲಹೊತ್ತಿನವರೆಗೆ ವಿಚಾರ ಮಾಡುತ್ತಾ ನಿಂತುಬಿಟ್ಟನು. ತನ್ನ ತಂಗಿಯು ಕ್ಷುದ್ರರ ಪಾಶಕ್ಕೆ ಬೀಳತಕ್ಕಂತಹ ಸಾಮಾನ್ಯ ಸ್ತ್ರೀಯಲ್ಲವೆಂತಲೂ, ಯಾವ ಕಾರಣದಿಂದಲೋ ಮೋಸಹೋಗಿಯಾಗಲಿ ಬಲಾತ್ಕಾರಕ್ಕೊಳಗಾಗಿಯಾಗಲಿ ಆಕೆಯು ಬಾದಶಹನ ಪಟ್ಟದ ರಾಣಿಯಾಗಿರಬೇಕೆಂತಲೂ ಆತನು ತರ್ಕಿಸಿದನು. ಆತನು ಆತುರತೆಯಿಂದ ಮತ್ತೆ ಬದ್ರುನ್ನಿಸೆಯನ್ನು ಕುರಿತು

ಸಭಾಕರಣ— ದಿಲ್ಲೀಪತಿಯ ಜನಾನಖಾನೆಯಲ್ಲಿ ನಾನು ಹೋಗಬೇಕಾಯಿತು, ಸುಂದರಳಾದ ಶಹಾಜಾದೀ ಬಾದಶಹನ ಜನಾನಖಾನೆಯೊಳಗಿನ ವಿಲಾಸವನ್ನು ಬಿಟ್ಟು ಹೀಗೆ ನೀನೊಬ್ಬಳೇ ಯಾಕೆ ತಿರುಗುತ್ತಿರುವೆ?

ಬದ್ರುನ್ನಿಸೆ— ಬಾದಶಹನ ಜನಾನಖಾನೆಯಲ್ಲಿರುವ ಸುಖಕ್ಕಿಂತಲೂ ಶ್ರೇಷ್ಠ ಸುಖದ ಸ್ಥಾನವನ್ನು ನಾನು ನೋಡಿದ್ದರಿಂದ, ನಾನು ಆ ಸ್ಥಾನವನ್ನು ಹುಡುಕುತ್ತಿರುವೆನು. ನೀವು ನನ್ನ ತಾಯಿಯನ್ನು ಕಾಣುವದಿದ್ದರೆ, ಇಗೋ, ಈ ಉಂಗುರವು ನಿಮ್ಮ ಬಳಿಯಲ್ಲಿ ಇರಲಿ. ಈ ಉಂಗುರವನ್ನು ಜನಾನಖಾನೆಯಲ್ಲಿ ಕಾವಲುಗಾರರಿಗೆ ತೋರಿಸಿದರೆ, ಅವರು ನಿಮ್ಮನ್ನು ನೆಟ್ಟಗೆ ನನ್ನ ತಾಯಿಯ ಬಳಿಗೆ ಕರೆದುಕೊಂಡು ಹೋಗುವರು. ಅಲ್ಲಿ ಹೋದಬಳಿಕ ನನ್ನ ತಾಯಿಗೆ ಈ ಉಂಗುರವನ್ನು ತೋರಿಸಿ, ಬದ್ರುನ್ನಿಸೆಯು ಸುರಕ್ಷಿತವಾಗಿರುವಳೆಂದು ಆಕೆಗೆ ಹೇಳಿರಿ.

ಬದ್ರುನ್ನಿಸೆಯ ಈ ಮಾತುಗಳನ್ನು ಕೇಳಿ ಸಭಾಕರಣನು ಪರಮ ಸಂತುಷ್ಟನಾಗಿ ಅತ್ಯಂತ ಆದರದಿಂದ ಆಕೆಯ ಉಂಗುರವನ್ನು ಇಸಕೊಂಡನು. ಈ ಅಕಲ್ಪಿತ ಯೋಗವು ಒದಗಿದ್ದಕ್ಕಾಗಿ ಆತನಿಗೆ ಪರಮಾಶ್ಚರ್ಯವಾಯಿತು. ದೀರ್ಘಪ್ರಯತ್ನದಿಂದಲೂ ಸಾಧಿಸದೆ ಇದ್ದ ಅನುಕೂಲತೆಯು ಅನಾಯಾಸವಾಗಿ ಒದಗಿದ್ದನ್ನು ನೋಡಿ, ಸೃಷ್ಟಿಯೊಳಗಿನ ದೇವರ ಒಂದೊಂದು ಅಗಾಧ ಘಟನೆಗಳು ಆಶ್ಚರ್ಯಕರವಾದವುಗಳೆಂದು ಭಾವಿಸಿ, ತನ್ನಂಥ ಮನುಷ್ಯಪ್ರಾಣಿಗಳ ಅಹಂಕಾರಕ್ಕಾಗಿ ಆತನು ಮನಸ್ಸಿನಲ್ಲಿ ಬಹಳವಾಗಿ ನಾಚಿಕೊಂಡನು. ಆತನು ಅತ್ಯಂತ ಕೃತಜ್ಞತೆಯಿಂದ ಬದ್ರುನ್ನಿಸೆಯನ್ನು ಕುರಿತು –

ಸಭಾಕರಣ — ತಂಗೀ, ನನ್ನ ಮೇಲೆ ನಿನ್ನ ಉಪಕಾರವು ಬಹಳವಾಯಿತು. ಅದಕ್ಕಾಗಿ ನಾನು ನಿನಗೇನು ಹಿತಮಾಡಲಿ ಹೇಳು?

ಬದ್ರುನ್ನಿಸೆ— ದಿಲ್ಲಿಯ ಜನಾನಖಾನೆಯನ್ನು ಬಿಟ್ಟಂದಿನಿಂದ ನನಗೆ ಯಾತರ ಕೊರತೆಯೂ ಆಗಿರುವದಿಲ್ಲ; ಆದರೆ ನಾನು ಹುಡುಕುತ್ತಿರುವ ಪ್ರೀತಿಯ ವಸ್ತುವು ಮಾತ್ರ ನನಗೆ ಇನ್ನೂ ದೊರೆತಿರುವದಿಲ್ಲ.

ಸಭಾಕರಣ —(ಆಶ್ಚರ್ಯದಿಂದ) ಶಹಾಜಾದಿ ಬದ್ರುನಿಸೆಯು ಇಷ್ಟು ಗುಪ್ತರೀತಿಯಿಂದ ಯಾವ ಪ್ರೀತಿಯ ವಸ್ತುವನ್ನು ಹುಡುಕುತ್ತಿರುವಳು?

ಬದ್ರುನ್ನಿಸೆ— ''ಸಭಾಕರಣ'' ಎಂಬ ಹೆಸರಿನ ಸಾಗರದ ರಾಜರ ಗುರುತು ತಮಗೆ ಇರುವದೋ? ನಾನು ಅವರ ಕುಮಾರರಾದ ದಳಪತರಾಯಜಿಯವರನ್ನು ಹುಡುಕುತ್ತಿರುವೆನು.

ಸಭಾಕರಣ—ರಾಜಾ ಚಂಪತರಾಯನು ಬುದೇಲಖಂಡದ ಸ್ವಾತಂತ್ರ್ಯಕ್ಕಾಗಿ ಯತ್ನಿಸು ತ್ತಿದ್ದನು. ಆತನ ಆ ಯತ್ನವನ್ನು ದಿಲ್ಲೀಪತಿಯು ವ್ಯರ್ಥಗೊಳಿಸಿದ್ದರಿಂದ, ಸ್ವಾತಂತ್ರ್ಯಪ್ರಾಪ್ತಿಯ ಸಲುವಾಗಿ ಹೆಣಗುತ್ತಿರುವ ಸ್ವಲ್ಪಜನರೊಡನೆ ದಳಪತರಾಯನು ಅಜ್ಞಾತವಾಸದಲ್ಲಿರುವನು.

ಬದ್ರುನ್ನಿಸೆ—ಏನು? ಬುಂದೇಲಖಂಡದ ಸ್ವಾತಂತ್ರ್ಯದ ಪ್ರಯತ್ನವು ವ್ಯರ್ಥವಾಯಿತೆ?

ಈ ಮೇರೆಗೆ ಬದ್ರುನಿಸೆಯು ದುಃಖಪೂರ್ಣವಾದ ಧ್ವನಿಯಿಂದ ನುಡಿಯುವಾಗ ಆಕೆಯ ಕಣ್ಣುಗಳಿಂದ ನೀರು ಬಂದುವು. ಆಕೆಯ ಮೋರೆಯು ಬಾಡಿತು; ದುಃಖದಿಂದ ಉಸುರ್ಗರೆ ಯುತ್ತ ಆಕೆಯು ಸಭಾಕರಣನ ಮೋರೆಯನ್ನು ಕನಿಕರದ ಮುದ್ರೆಯಿಂದ ನೋಡತೊಡಗಿದಳು! ಅದನ್ನು ನೋಡಿ ಸಭಾಕರಣನಿಗೆ ಏನೂ ತೋಚದಾಯಿತು. ಬುಂದೇಲಖಂಡವನ್ನು ಪಾರತಂತ್ರ್ಯದ ಕೆಸರಿನಲ್ಲಿ ಮುಣುಗಿಸುವ ದಿಲ್ಲೀಪತಿಯ ಮಗಳು ಬುಂದೇಲಖಂಡದ ಸ್ವಾತಂತ್ರ್ಯ ಪ್ರಾಪ್ತಿಯ ಯತ್ನವು ನಿಷ್ಫಲವಾದದ್ದಕ್ಕಾಗಿ ಈಪರಿ ದುಃಖಿಸುವದರ ಗೂಢವನ್ನು ಆತನು ತಿಳಿಯದಾದನು. ಆಗ ಆ ರಜಪೂತವೀರನು ದೇಶದ್ರೋಹದ ಕೃತಿಯ ಮೂಲಕ ತನ್ನ ಮೋರೆಗೆ ಹತ್ತಿದ ಮಶಿಯನ್ನು ಬೇಗನೆ ಕಳೆದುಕೊಳ್ಳಬೇಕೆಂದು ನಿಶ್ಚಯಿಸಿ, ಅಲ್ಲಿ ಒಂದು ಕ್ಷಣವಾದರೂ ನಿಂತುಕೊಳ್ಳದೆ, ಸಾಮ್ರಾಜ್ಞಿಯನ್ನು ಕಾಣುವುದಕ್ಕಾಗಿ ದಿಲ್ಲಿಗೆ ಹೊರಟು ಹೊದನು.

## ಮೆಚ್ಚಿದವರಿಗೆ ಹಂದಿಯೇ ಮುದ್ದು

ಔರಂಗಜೇಬ ಬಾದಶಹನು ಯಾವತ್ತು ಬುಂದೇಲಖಂಡದ ಸ್ವಾತಂತ್ರ್ಯವನ್ನು ಮಣ್ಣುಗೂಡಿಸಿ, ಬುಂದೇಲಿಗಳನ್ನು ತನ್ನ ದಾಸಾನುದಾಸರನ್ನಾಗಿ ಮಾಡಿ ದಿಲ್ಲಿಗೆ ಹೊರಟು ಹೋದನು. ರಣದುಲ್ಲಾಖಾನನ್ನು ಸೆರೆಹಿಡಿದು ಚಂಪತರಾಯನು ದಿಲ್ಲಿಯ ದರ್ಬಾರದ ಅಪಮಾನಮಾಡಿದ್ದರಿಂದ, ಆ ಅಪಮಾನವನ್ನು ಕಳೆದುಕೊಳ್ಳುವದಕ್ಕಾಗಿ ಬಾದಶಹನು ರಣದುಲ್ಲಾಖಾನನನ್ನು ಬೇಕೆಂತಲೇ ಬುಂದೇಲಖಂಡದ ಅಧಿಕಾರಿಯನ್ನಾಗಿ ನಿಯಮಿಸಿ ಓರಭಾ ಸಂಸ್ಥಾನಕ್ಕೆ ಕಳಿಸಿದನು. ರಣದುಲ್ಲಾಖಾನನು ಈಗ ಓರಭಾದ ಮುಲಾಖತ ದಿವಾಣಖಾನೆಯಲ್ಲಿ ವಾಸಮಾಡಿದ್ದನು. ಬಾದಶಹನ ಆಗಮನಕ್ಕಾಗಿ ಹೀರಾದೇವಿಯಿಂದ ಶೃಂಗರಿಸಿ ಆ ದಿವಾಣ ಖಾನೆಯು ಅನಾಯಾಸವಾಗಿಯೇ ರಣದುಲ್ಲಾಖಾನನ ಉಪಭೋಗಕ್ಕಾಗಿ ಸಿದ್ಧವಾಗಿ ಇದ್ದಿತು. ಸುಗಂಧದೆಣ್ಣೆ ದೀಪಗಳು ಅಲ್ಲಲ್ಲಿ ತಮ್ಮ ಸುಗಂಧವನ್ನು ನಾಲ್ಕೂಕಡೆಗೆ ಪಸರಿಸುತ್ತಲಿದ್ದವು. ಮೂರು ತಾಸು ರಾತ್ರಿಯಾಗಿತ್ತು, ಖಾನನು ಅದೇ ಉಂಡು ಗುಡಗುಡಿಯನ್ನು ಸೇದುತ್ತ ಕುಳಿತುಕೊಂಡಿದ್ದನು. ಆ ತರುಣನ ಮನಸ್ಸಿನಲ್ಲಿ ಹಲವು ವಿಚಾರ ತರಂಗಗಳು ಉತ್ಪನ್ನ ವಾಗಿದ್ದವು. ತಾನು ಯಾವನೊಬ್ಬ ಹಿಂದು ದುರ್ಬಲರಾಜನ ಪಟ್ಟವನ್ನು ಆಕ್ರಮಿಸಿ ತಾನು ಆತನ ಸಿಂಹಾಸನವನ್ನೇರಿ ಬುಂದೇಲ ಖಂಡದ ಉಳಿದ ಮಾಂಡಲಿಕ ರಾಜರಿಂದ ಸೇವೆಯನ್ನು

ಸ್ವೀಕರಿಸಬೇಕೆಂದು ಆತನು ಎಣಿಕೆಹಾಕುತ್ತಿದ್ದನು. ಹೀಗಿರುವಾಗ ಆತನಿಗೆ ವಿಜಯೆಯ ನೆನಪಾಯಿತು. ವಿಜಯೆಯು ಖಾನನ ಕಾರಾಗೃಹವಾಸಕ್ಕೆ ಕಾರಣಳಾದದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ವಿಜಯೆ-ವಿಮಲದೇವರು ಆತನನ್ನು ವಿಂಧ್ಯವಾಸಿನಿಯ ಗುಡಿಗೆ ಕರೆದು ಕೊಂಡು ಹೋಗುತ್ತೇವೆಂದು ಹೇಳಿ, ಗುಡಿಯ ವಿರುದ್ಧ ದಿಕ್ಕಿಗೆ ಕರೆದುಕೊಂಡು ಹೋಗಿದ್ದ ರೆಂಬದು ವಾಚಕರ ಸ್ಮರಣದಲ್ಲಿರಬಹುದು. ಆ ಖಾನನ ವಿಷಯವಾಸನೆಯ ಹೃದಯದಲ್ಲಿ ವಿಜಯೆಯು ಮೂಡಿಹೋಗಿದ್ದಳು! ಅಲ್ಲದೆ, ವಿಜಯೆಯು ಕುಮಾರಿಕೆಯಾಗಿದ್ದು, ಆಕೆಯು ದುರ್ಬಲನಾದ ಕಂಚುಕಿರಾಯನ ಮಗಳೆಂಬದನ್ನು ಆತನು ತಿಳಿದುಕೊಂಡಿದ್ದನು.

ಈ ಮೊದಲೇ ರಣದುಲ್ಲಾಖಾನನು ಯಾವದೋ ಒಂದು ಕೆಲಸಕ್ಕಾಗಿ ಕಂಚುಕಿ ರಾಯನನ್ನು ಕರೆಸಿದ್ದನು. ಖಾನನ ಮನಸ್ಸು ವಿಜೆಯೆಯ ಸ್ಮರಣದಿಂದ ಚಂಚಲವಾದ ಕೂಡಲೇ, ಕಂಚುಕಿರಾಯನು ಇನ್ನೂ ಏಕೆ ಬರಲಿಲ್ಲವೆಂದು ಆತನು ಚಡಪಡಿಸಹತ್ತಿದನು. ಆತನು ತನ್ನ ಸೇವಕರನ್ನು ಕುರಿತು—''ಇನ್ನೂ ಕಂಚುಕಿರಾಯನು ಏಕೆ ಬರಲಿಲ್ಲ?'' ಎಂದು ಕೇಳಲು, ಸೇವಕರು ''ಖಾವಿಂದ, ತಾವು ಖಾನಾಕ್ಕೆ ಹೊರಟಿರುವಾಗಲೇ ಕಂಚುಕಿರಾಯರು ಬಂದಿದ್ದು ಕೆಳಗೆ ತಮ್ಮ ಅಪ್ಪಣೆಯ ಹಾದಿಯನ್ನು ನೋಡುತ್ತ ಕುಳಿತುಕೊಂಡಿರುವರು'' ಎಂದು ಹೇಳಿದನು. ಖಾನನ ಅಪ್ಪಣೆಯಿಂದ ಕಂಚುಕಿರಾಯನು ಕೂಡಲೇ ಬಂದು ವಿನಯದಿಂದ ಮುಜುರೆಮಾಡಿ ದೂರ ಮೋರೆತಗ್ಗಿಸಿ ನಿಂತುಕೊಂಡನು. ''ಖಾನರು ತಾವಾಗಿ ತನ್ನ ನೆನಪು ಮಾಡಿದರಲ್ಲ'' ಎಂದು ಆತನಿಗೆ ಹಿಡಿಸಲಾರದಷ್ಟು ಸಂತೋಷವಾಗಿತ್ತು. ಸಂತೋಷದ ಭರದಲ್ಲಿ ಆತನು ಖಾನನನ್ನು ಕುರಿತು –

ಕಂಚುಕಿರಾಯ—ಸರದಾರಸಾಹೇಬರಿಗೆ ನನ್ನ ನೆನಪು ಆದದ್ದಕ್ಕಾಗಿ ನನ್ನನ್ನು ಧನ್ಯನೆಂದು ತಿಳಿಯುವೆನು! ಖಾನಸಾಹೇಬ, ಈ ಗುಲಾಮನಿಗೆ ಯಾವ ಅಪ್ಪಣೆಯಿರುವದು?

ಖಾನ—ಕಂಚುಕಿರಾಯ, ನಿನ್ನ ದಡ್ಡತನದಿಂದ, ಹಾಗೂ ನಿನ್ನ ತಿಳಿಗೇಡಿ ಮಗಳ ಅತಿ ಪ್ರಸಂಗದಿಂದ ನಾನು ಚಂಪತರಾಯನ ಘೋರ ಕಾರಾಗೃಹವಾಸದಲ್ಲಿ ಕಾಲಕಳೆಯ ಬೇಕಾಯಿತು! ಆದರಿಂದ ನಮ್ಮ ಅಪಮಾನಕ್ಕೆ ಹೊಣೆಯಾರು? ಆಗ ನಮಗಾದ ತ್ರಾಸವನ್ನೂ, ನಮ್ಮ ವಿಲಾಸಕ್ಕೆ ಆದ ತೊಂದರೆಯನ್ನೂ ಈಗ ತುಂಬಿಕೊಡುವವರಾರು? ಆ ಪ್ರಸಂಗದಲ್ಲಿ ನಮಗಾಗಿದ್ದ ಹಾನಿಯನ್ನು ನಿನ್ನ ಕೈಯಿಂದ ನಾವು ಈಗ ತುಂಬಿಕೊಳ್ಳಬೇಕೆಂದು ಮಾಡಿದ್ದೇವೆ.

ಕಂಚುಕಿರಾಯ—(ಅಂಜಿ ನಡುಗುತ್ತ) ಸರದಾರಸಾಹೇಬ, ತಮ್ಮ ಬಿಡುಗಡೆಗೆ ನನ್ನ ಮಗಳೇ ಕಾರಣಳಾಗಿರುವಳು. ಆಕೆಯು ಚಂಪತರಾಯನ ಮುಂದೆ-

ಖಾನ—(ಮುಂದೆ ಮಾತಾಡಗೊಡದೆ) ಆ ಪುರಾಣವನ್ನು ನನ್ನ ಮುಂದೆ ಉಚ್ಚಬೇಡ; ನಾವು ಹಾನಿಯಾಗಿದೆಯೆಂದಬಳಿಕ ನೀನು ಅದಕ್ಕೆ ಒಪ್ಪಿಕೊಳ್ಳಲೇಬೇಕು; ನಾವು ಲಾಭವಾಗಿದೆ ಯೆಂದರೆ ನೀನು ಲಾಭವಾಗಿದೆಯೆಂದು ತಿಳಿಯಬೇಕು. ನಾವು ಗೆದ್ದವರು, ನೀವು ಗೆಲ್ಲಲ್ಪಟ್ಟವರು, ನಿಮ್ಮ ಮರ್ಯಾದೆಯ ಮೆಟ್ಟು ಕಡಿಮೆಯದಿದ್ದಂತೆ, ನಿಮ್ಮ ಜ್ಞಾನದ ಮೆಟ್ಟಾದರೂ ಕಡಿಮೆಯದಿರಲೇಬೇಕು. ಇದನ್ನರಿತು ವಿಚಾರದಿಂದ ಮಾತಾಡುತ್ತ ಬಾ.

ನೀನೂ ನಿನ್ನ ಮಗಳೂ ನನ್ನ ಹಾನಿಯನ್ನು ಮಾಡಿರುವಿರೆಂದು ನಾವು ತಿಳಿದಿರುವೆವು. ಈ ಹಾನಿಯನ್ನು ಈಗ ತುಂಬಿಕೊಳ್ಳಬೇಕೆಂದು ನಾವು ಇಚ್ಛಿಸುತ್ತೇವೆ.

ಕಂಚುಕಿರಾಯ—ಖಾವಂದರ ಯಾವ ಸೇವೆಯನ್ನು ಮಾಡಿದರೆ ಈ ದಾಸನು ಹಾನಿಯನ್ನು ತುಂಬಿಕೊಟ್ಟನೆಂದು ತಿಳಿಯಲಾಗುವದು?

ಖಾನ—ಹಾ! ಹೀಗೆ ಹಾದಿಗೆಬಂದು ಮಾತಾಡು. ನಿನ್ನ ಹೊಟ್ಟೆಯಲ್ಲಿ ಗಂಡುಮಕ್ಕಳಿಲ್ಲ ವೆಂಬ ಸಂಗತಿಯು ನಿಜವಷ್ಟೇ?

ಕಂಚುಕಿರಾಯ—(ದುಃಖದಿಂದ) ಧಾರೀರದ ರಾಜನಿಗೆ ಯುವರಾಯನಿಲ್ಲವೆಂಬ ಮಾತು ನಿಜವು.

ಖಾನ—ಹಾಗಾದರೆ ನಿನ್ನ ತುರವಾಯದಲ್ಲಿ ಧಾರೀರ ರಾಜ್ಯ ವ್ಯವಸ್ಥೆಯನ್ನು ಹೇಗೆ ಮಾಡಬೇಕೆಂದು ಯೋಚಿಸಿರುತ್ತಿ?

ಕಂಚುಕಿರಾಯ—ಸರದಾರಸಾಹೇಬ, ಆ ಮಾತಿನ ವಿಚಾರವನ್ನು ನಾನು ಇನ್ನೂ ಮಾಡಿರುವದಿಲ್ಲ, ಆ ಸಂಬಂಧದಿಂದ ಯೋಗ್ಯ ಸೂಚನೆಯನ್ನು ಮಾಡಿದರೆ ನಾನು ಅತ್ಯಂತ ಋಣಿಯಾಗುವೆನು.

ಖಾನ—ಅದಕ್ಕಾಗಿಯೇ ಈಗ ನಿನ್ನನ್ನು ಬುದ್ಧಿಪೂರ್ವಕವಾಗಿ ಕರೆಸಿದ್ದು. ಈ ರಣದುಲ್ಲಾ ಖಾನನ ಯೋಗ್ಯತೆಯನ್ನೂ, ಅಧಿಕಾರವನ್ನೂ, ಲೌಕಿಕವನ್ನೂ, ಮಾನಮರ್ಯಾದೆಯನ್ನೂ ನೀನು ಅರಿತವನೇ ಇರುತ್ತೀ, ಹೊಸದಾಗಿ ಹೇಳಬೇಕೆನ್ನುವ ಹಾಗಿಲ್ಲ! ನಮ್ಮಂಥ ರೂಪಸಂಪನ್ನನಾದ ಯೋಗ್ಯತೆಯ ಸುಂದರ ಅಳಿಯನು ನಿನಗೆ ಸಿಗುವದು ದರ್ಲಭವೇ ಸರಿ! ನಾನು ಹೀಗೆ ಅಳಿಯನಾದೇನೆಂದು ರಜಪೂತಸ್ಥಾನದ ರಜಪೂತ ಅರಸರು ಮೇಲಾಟದಿಂದ ಹಾದಿಯ ನೋಡುತ್ತಿರುವರು. ಆದರೆ ನಮ್ಮನ್ನು ಅಳಿಯನಾಗಿ ತಿಳಿಯುವ ಬಹುಮಾನವನ್ನು ನಾವು ನಿನಗೆ ಕೊಡಬೇಕೆಂದು ಮಾಡಿರುತ್ತೇವೆ. ನಿನ್ನ ಚಲುವೆಯಾದ ಮಗಳ ಕೈಹಿಡಿದು ನಮ್ಮ ಹಾನಿಯನ್ನು ತುಂಬಿಕೊಳ್ಳಬೇಕೆಂತಲೂ, ನಿನ್ನ ಪಶ್ಚಾತ್ ಧಾರೀರದ ರಾಜ್ಯದ ವ್ಯವಸ್ಥೆಯು ಏನಾದೀತೆಂಬ ನಿನ್ನ ಚಿಂತೆಯನ್ನು ದೂರಮಾಡಬೇಕೆಂತಲೂ ನಾವು ನಿಶ್ಚಯಿಸಿರುತ್ತೇವೆ.

ಕಂಚುಕಿರಾಯ—ಸರದಾರಸಾಹೇಬ, ನೀವು ನನ್ನ ಮೇಲೆ ಬಹುದೊಡ್ಡ ಉಪಕಾರ ಮಾಡುತ್ತಿರುವಿರಿ! ವಿಜಯೆಯನ್ನು ತಾವು ಸ್ವೀಕರಿಸಿದರೆ ಆಕೆಯು ತಮ್ಮ ಜನ್ಮದ ಋಣಿ ಯಾಗುವಳು. ಮಗಳ ಸಲುವಾಗಿ ವರನನ್ನು ಹುಡುಕುವ ಚಿಂತೆಯಿಂದ, ಹಾಗು ನನ್ನ ಪಶ್ಚಾತ್ ನನ್ನ ರಾಜ್ಯದ ವ್ಯವಸ್ಥೆ ಯೇನಾದೀತೆಂಬ ಚಿಂತೆಯಿಂದ ನನ್ನನ್ನು ಮುಕ್ತಮಾಡುವ ತಮ್ಮ ವಿಚಾರವು ಅಭಿನಂದನೀಯವು!

ತನ್ನ ಕಲ್ಪನೆಗಿಂತಲೂ ಹೆಚ್ಚು ಕೆಲಸವಾದದ್ದನ್ನು ನೋಡಿ ಖಾನನು ಬಹಳ ಸಂತೋಷ ಪಟ್ಟನು. ಆತನು ಕಂಚುಕಿರಾಯನನ್ನು ಕುರಿತು—

ಖಾನ–ಕಂಚುಕಿರಾಯ, ನೀನು ದಿಲ್ಲಿಯ ದರ್ಬಾರದಲ್ಲಿ ಕೆಲದಿನಗಳನ್ನು ಕಳೆದಿರುವದರಿಂದ, ಯಾವ ಪ್ರಸಂಗದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬದನ್ನು ಚನ್ನಾಗಿ ಅರಿತಿರುತ್ತೀ. ನಮ್ಮಂಥ ಅಧಿಕಾರಿಗಳ ಮನಸ್ಸನ್ನೊಲಿಸಿಕೊಂಡು ನಮ್ಮ ಒಲಿವಿನಂತೆ ನಡೆಯುವ

ಕಲೆಯನ್ನು ನೀನು ಚನ್ನಾಗಿ ಸಂಪಾದಿಸಿರುತ್ತೀ. ನಿನ್ನ ಸ್ವಂತದ ಕಲ್ಯಾಣದ ಯೋಗ್ಯ ಮಾರ್ಗವನ್ನು ನೀನು ಹಿಡಿದ ಹಾಗಾಯಿತು. ನಿನ್ನ-ನಮ್ಮ ಸಂಬಂಧವು ಒಂದು ಕೂಡಿ ಬರಲಿ, ನಿನ್ನ ತಲೆಯ ಮೇಲಿನ ರಾಜ್ಯದ ಜವಾಬುದಾರಿಯ ಹೊರೆಯನ್ನು ಹೇಗೆ ಇಳಿಸಿಬಿಡುತ್ತೇನೆಂಬದರ ಅನುಭವವು ನಿನಗೆ ಬಾರದೆಯಿರಲಿಕ್ಕಿಲ್ಲ!

ಕಂಚುಕಿರಾಯ—(ಗಡಬಡಿಸಿ) ಸರದಾರಸಾಹೇಬ, ರಾಜ್ಯ ಕಾರಭಾರದಲ್ಲಿ ತಮ್ಮ ಯೋಗ್ಯವಾದ ಆಲೋಚನೆಯ ಅವಶ್ಯಕತೆಯು ನನಗೆ ಆಗಾಗ್ಗೆ ಬೇಕಾಗುವಲ್ಲಿ ಸಂಶಯವಿಲ್ಲ; ಅಥವಾ ತಮ್ಮ ಸಮ್ಮತಿಯ ಹೊರತು ಧಾರೀರದ ರಾಜ್ಯಕಾರಭಾರವು ನಡೆಯಲಾರದು; ಆದರೆ ರಾಜಸಿಂಹಾಸನವೇರುವ ಮಾನವು ಮಾತ್ರ ಕಡೆತನಕ ನನಗೇ ಇರಬೇಕೆಂಬ ನನ್ನ ಮಾತನ್ನು ನಡೆಸುವ ಮೆಹರ್ಬಾನಿಗಿಯಾಗಬೇಕೆಂದು ಪ್ರಾರ್ಥಿಸುತ್ತೇನೆ. ನನ್ನ ಪಶ್ಚಾತ ಧಾರೀರದ ಪ್ರಬಲರಾಜ್ಯವು ತಮ್ಮದೇ ಇರುತ್ತದೆ?

ಖಾನ—ನಿನಗೆ ಅದರ ಚಿಂತೆಬೇಡ. ಅದು ನನ್ನ ಅಧಿಕಾರದೊಳಗಿನ ಮಾತು. ನಾಳೆ ಬೆಳಗಾಗುತ್ತಲೇ ನೀನು ನಿನ್ನ ರಾಜಧಾನಿಗೆ ಹೋಗು.ಆದಷ್ಟು ಬೇಗನೆ ನಮ್ಮ ಲಗ್ನದ ವ್ಯವಸ್ಥೆಯನ್ನು ಮಾಡು. ನಾನು ಯಾವ ದಿವಸ ಅಲ್ಲಿಗೆ ಬರಬೇಕೆಂಬದನ್ನು ನನಗೆ ತಿಳಿಸು. ನಾವು ಇಲ್ಲಿಯ ಕೆಲಸವನ್ನು ಮಾಡುತ್ತ ನಿನ್ನ ಪತ್ರದ ಹಾದಿಯನ್ನು ನೋಡುತ್ತಿರುವೆವು.

ಕಂಚುಕಿರಾಯ—ತಮ್ಮ ಅಪ್ಪಣೆಯು ಶಿರಸಾವಂದ್ಯವಾಗಿರುವದು. ಲಗ್ನದ ವಿಧಿಯು ಯಥಾಸಾಂಗವಾಗಿ ಆಗುವದಕ್ಕಾಗಿ ಕಾಜಿಯನ್ನು ಇಲ್ಲಿಂದಲೇ ಕರೆದುಕೊಂಡು ಹೋಗಬೇಕೆಂದು ಮಾಡಿದ್ದೇನೆ. ಯಾಕಂದರೆ ಧಾರೀರದ ಕಾಜಿಗೆ ಅಷ್ಟು ಕುರಾಣದ ಜ್ಞಾನವಿಲ್ಲೆಂದು ನನ್ನ ತಿಳುವಳಿಕೆಯಾಗಿದೆ. ಲಗ್ನದಂತಹ ಮಹತ್ವದ ವಿಧಿಯು ಯಥಾಕುರಾಣವಾಗುವದು ಅತ್ಯವಶ್ಯವಾಗಿರುತ್ತದೆ. ನಾನು ಧಾರೀರಕ್ಕೆ ಹೋದಕೂಡಲೇ ತಿಥಿಯನ್ನು ಗೊತ್ತು ಮಾಡಿ ತಮಗೆ ತಿಳಿಸುವೆನು. ತಮ್ಮ ಸಲುವಾಗಿ ನನ್ನ ಖಾಸ ರಾಜಮಂದಿರವನ್ನೇ ಶೃಂಗರಿಸಿ ಇಟ್ಟಿರುವೆನು. ಲಗ್ನವಾಗುವತನಕ ನಾವು ಅರಮನೆಯ ಸಮೀಪದ ಕುದುರೆಯ ಮನೆಯಲ್ಲಿರುವೆವು.

ಖಾನ—ಶಾಬಾಸ! ಕಂಚುಕಿರಾಯಾ, ನಿನ್ನ ಮೇಲೆ ನಾವು ಸುಪ್ರಸನ್ನರಾಗಿರುವೆವು. ದಿಲ್ಲೀಪತಿಯನ್ನು ಕಾಣುವ ಪ್ರಸಂಗ ಒದಗಿರುವಾಗ ನಿನಗೋಸ್ಕರ ಒಂದು ಸನ್ಮಾನದ ಉಚ್ಚತರ ಪದವಿಯನ್ನು ಕೊಡುವದಕ್ಕಾಗಿ ನಾವು ಹೇಳಿಕೊಳ್ಳುವೆವು. ಹೋಗು, ನಮ್ಮ ಅಮೃತಪಾನದ ಹೊತ್ತಾಯಿತು!

ಕಂಚುಕಿರಾಯನು ಅಲ್ಲಿಂದ ಹೊರಟನು. ಮುಂದೆ ತನ್ನ ಅಳಿಯನಾಗಬೇಕಾಗಿರುವ ರಣದುಲ್ಲಾ ಖಾನನಿಗೆ ಬಹು ವಿನಯದಿಂದ ಕುರ್ನಿಸಾತ ಮಾಡಿದನು. ಇನ್ನು ಹೋಗುವದಕ್ಕಾಗಿ ಕಾಲು ಕಿತ್ತತಕ್ಕವನು, ಅಷ್ಟರಲ್ಲಿ ಆತನಿಗೆ ಹೀರಾದೇವಿಯು ಹೇಳಿದ ಮಾತು ನೆನಪಾಯಿತು. ಆತನು ಪುನಃ ಸರದಾರಸಾಹೇಬರ ಕಡೆಗೆ ತಿರುಗಿ ಬಂದು ವಿನಯದಿಂದ –

ಕಂಚುಕಿರಾಯ—ತಮ್ಮ ಅಪ್ಪಣೆಯಂತೆ ತಮ್ಮ ಬಳಿಗೆ ಬರುವದಕ್ಕಾಗಿ ನಾನು ಹೊರಟಿರಲು, ದಾರಿಯಲ್ಲಿ ಹೀರಾದೇವಿಯು ನನ್ನನ್ನು ಕಂಡಳು. ಸರದಾರಸಾಹೇಬರು

ಇಲ್ಲಿಯವರೆಗೆ ಬರುವ ಶ್ರಮವನ್ನು ಯಾಕೆ ವಹಿಸಿದರೆಂಬುದು ತಿಳಿಯಲಿಕ್ಕೆ ಶಕ್ಯವಿದ್ದರೆ, ಕೇಳಿಕೊಂಡು ಬಾರೆಂದು ನನಗೆ ಹೇಳಿರುವಳು. ನನ್ನ ಮಗಳನ್ನು ಧನ್ಯಳಾಗಮಾಡುವ ಉದ್ದೇಶದ ಹೊರತು ಬೇರೆ ಉದ್ದೇಶವಿದ್ದಲ್ಲಿ ತಿಳಿಸುವಹಾಗಿದ್ದರೆ ಈ ದಾಸನಿಗೆ ತಿಳಿಸುವ ಕೃಪೆಮಾಡಬೇಕು.

ರಣದುಲ್ಲಾಖಾನ—(ಆಡ್ಡ್ಯತೆಯಿಂದ) ನಾನು ಇಲ್ಲಿಗೆ ಬಂದಿರುವ ಹೇತುಗಳು ಎರಡು. ಒಂದು ಸ್ವಂತದ ಹಿತವನ್ನು ಸಾಧಿಸುವದು, ಮತ್ತೊಂದು ಸಾರ್ವಜನಿಕ ಹಿತವನ್ನು ಸಾಧಿಸುವದು. ಸ್ವಂತದ ಹಿತದ ಮಾತನ್ನಂತು ಈಗ ಸ್ವಲ್ಪದರಲ್ಲಿ ನಿನ್ನ ಮುಂದೆ ಹೇಳಿಯೇ ಇರುವೆವು, ಇನ್ನು ಸಾರ್ವಜನಿಕ ಹಿತದ ಮಾತನ್ನು ಹೇಳುವೆವು ಕೇಳು. ಮುಹಮ್ಮದ ಪೈಗಂಬರರ ಪವಿತ್ರ ಆಜ್ಞೆಯನ್ನು ಪಾಲಿಸುವದಕ್ಕಾಗಿ ನಾವು ವಿಂಧ್ಯವಾಸಿನಿಯ ದೇವಸ್ಥಾನವನ್ನು ನಾಶಮಾಡಲು ಈ ಮೊದಲೆ ಬಂದಿದ್ದೆವಷ್ಟೇ? ಆಗ ನಮಗಾದ ಅಪಮಾನವು ನಿನಗೆ ಗೊತ್ತೇ ಇರುವದು. ಆ ಅಪಮಾನವು ರಣದುಲ್ಲಾಖಾನನೆಂಬ ಹೆಸರಿನ ಒಬ್ಬ ವ್ಯಕ್ತಿಯದೇ ಆಗಿರದೆ, ದಿಲ್ಲಿಯ ಇಸ್ಲಾಮಿ ಸಿಂಹಾಸನದ, ಪೈಗಂಬರರ ತೇಜಸ್ವಿಗಳಾದ ಭಕ್ತರ, ಅಲ್ಲಾನ ಮಹತ್ವದ ತತ್ವದ ಅಪಮಾನವು ಆಗಿರುತ್ತದೆಂಬ ತಳಮಳವು ದಿಲ್ಲಿಯಬಾದಶಹರಿಗೆ ಆಗಿರುತ್ತದೆ. ಸಾವಿರಾರು ಬುಂದೇಲಿಗಳ ರಕ್ತಪಾತವಾಯಿತು; ಚಂಪತರಾಯನು ರಣಭೂಮಿಯಲ್ಲಿ ಬಿದ್ದನು; ಮಹೋಬದ ಮೇಲೆ ದಿಲ್ಲಿಯ ನಿಶಾನಿಯು ಏರಿತು; ಛತ್ರಸಾಲನು ಅವನ ಅನುಯಾಯಿಗಳು ದೇಶಭ್ರಷ್ಟರಾದರು; ಇಷ್ಟಾದರೂ ದಿಲ್ಲೀಪತಿಯ ತಾಪವು ಶಾಂತವಾಗಿರುವದಿಲ್ಲ! ಇನ್ನೂ ಇಸ್ಲಾಮಿ ಧರ್ಮದ ಸಾರ್ವಜನಿಕ ಅಪಮಾನವು ಕೂಡಿಬಂದಿರುವದಿಲ್ಲವೆಂದೂ ಬಾದಶಹರು ತಿಳಿದಿರುವರು. ಬುಂದೇಲಖಂಡದೊಳಗಿನ ಒಂದು ದೇವಾಲಯವು ಉಳಿಯದಂತೆ ಕಾಫಿರರ ದೇವಸ್ಥಾನಗಳೆಲ್ಲ ನೆಲಸಮವಾದ ಹೊರತು ನನಗೆ ಸಮಾಧಾನವಾಗದೆಂದು ದಿಲ್ಲೀಪತಿಗಳು ಕೂಡಿದ ದರ್ಬಾರದಲ್ಲಿ ಆಡಿ ತೋರಿಸಿರುವರು; ಆದ್ದರಿಂದ ಬುಂದೇಲಖಂಡದಲ್ಲಿಯ ಯಾವತ್ತು ದೇವಸ್ಥಾನಗಳನ್ನು ನಾಶಮಾಡುವದಕ್ಕಾಗಿ ಇಲ್ಲಿಯ ಸುಬೇದಾರನಾದ ಫಿಯಾದಖಾನನಿಗೆ ಆಜ್ಞಾಪಿಸಿ, ಆತನಿಗೆ ಸಹಾಯಮಾಡುವದಕ್ಕಾಗಿ ಬಾದಶಹರು ನನ್ನನ್ನು ಕಳುಹಿಸಿರುವರು. ಸುಭೇದಾರ ಫಿಯಾದಖಾನನ ಸಹಾಯದಿಂದ ರಾಜಧಾನಿಗಳಲ್ಲಿ, ಪಟ್ಟಣಗಳಲ್ಲಿ, ಹಳ್ಳಿಗಳಲ್ಲಿ, ಅರಣ್ಯಗಳಲ್ಲಿ, ಗುಡ್ಡಗಳಲ್ಲಿ ಇರುವ ದೇವಸ್ಥಾನಗಳನ್ನೆಲ್ಲ ನೆಲಸಮಮಾಡುವದೇ ನಮ್ಮ ಸಾರ್ವಜನಿಕ ಹಿತದ ಉದ್ದೇಶವಾಗಿರುತ್ತದೆ!

ಸತ್ತಾಧಾರಿಗಳ ಸ್ವಂತದ, ಹಾಗು ಸಾರ್ವಜನಿಕವಾದ ಹಿತದ ಉದ್ದೇಶಗಳು ಎಷ್ಟು ಉದಾತ್ತವಾಗಿರುವವೆಂಬದನ್ನು ಆಲೋಚಿಸುತ್ತ ಕಂಚುಕಿರಾಯರು ಮುಲಾಕತದಿವಾಣ ಖಾನೆಯಿಂದ ಕಾಲು ಕಿತ್ತಿದನು. ಮರುದಿವಸವೇ ಆತನು ಸೂರ್ಯೋದಯಕ್ಕೆ ಮುಂಚೆ ಓರಛಾ ರಾಜಧಾನಿಯನ್ನು ಬಿಟ್ಟು, ತನ್ನ ಧಾರೀರ ರಾಜಧಾನಿಯ ಹಾದಿಯನ್ನು ಹಿಡಿದನು. ಈ ಆನಂದದ ಸುದ್ದಿಯನ್ನು ತನ್ನ ಹೆಂಡತಿಯಾದ ಸುಫಲಾದೇವಿಗೂ, ಮಗಳಾದ ವಿಜಯೆಗೂ ಯಾವಾಗ ಹೇಳೇನೆಂಬ ಆತುರದಿಂದ ಆ ವೃದ್ಧ ಕಂಚುಕಿರಾಯನು ಒಂಟೆಯ ಮೇಲೆ ಕುಳಿತು ವೇಗದಿಂದ ಸಾಗಿದ್ದನು. ಮೆಚ್ಚಿದವರಿಗೆ ಹಂದಿಯೇ ಮುದ್ದು!

# ಛತ್ರಸಾಲನ ತೇಜಸ್ವಿತೆ!

ವಿಜಯಪ್ರಾಪ್ತಿಯ ಆನಂದದ ಸವಿಯನ್ನು, ಪರಾಕ್ರಮದಿಂದ ಕಾದಿ ಜಯವನ್ನು ಸಂಪಾದಿಸಿದವರೇ ಬಲ್ಲರು. ಉಳಿದವರಿಗೆ ಆ ಆನಂದದ ಕಲ್ಪನೆಯೂ ಆಗಲಾರದು. ದೇವಗಡದ ಕೋಟೆಯು ಕೈಸೇರಿದ್ದರಿಂದ ದಿಲ್ಲೀಪತಿಯ ಜಯಶಾಲಿಯಾದ ಸೈನ್ಯವು ವಿಜಯೋತ್ಸವದಲ್ಲಿ ಮುಳುಗಿಹೋಗಿತ್ತು. ಮಧ್ಯರಾತ್ರಿಯು ಮೀರಿಹೋಗಿದ್ದರೂ ಸೈನಿಕರ ಉತ್ಸವದ ಭರವು ಹೆಚ್ಚುತ್ತಲೇ ಇತ್ತು. ರಾಜಾ ಜಯಸಿಂಗನು ದೇವಗಡದ ಗೆಲವಿನ ವರ್ಣನದ ಇಷ್ಟುದ್ದ ಪತ್ರವನ್ನು ಬಾದಶಹನಿಗೆ ಬರೆದು ಅದನ್ನು ಸಾಂಡಣಿಯ ಸವಾರನ ಸಂಗಡ ದಿಲ್ಲಿಗೆ ಅದೇ ಕಳಿಸಿ ಸಮಾಧಾನಹೊಂದಿದ್ದನು. ತಾನು ಮಾಡತಕ್ಕ ಅವಶ್ಯದ ಮಹತ್ವದ ಕೆಲಸವನ್ನು ಮಾಡಿಬಿಟ್ಟೆನೆಂಬ ಸಂತೋಷವು ಆಗ ಆತನಿಗೆ ಆಗಿದ್ದಿತ್ತು. ಗೆಲವಿನ ಸುದ್ದಿಯನ್ನು ಕೇಳಿದ ಕೂಡಲೆ ದಿಲ್ಲೀಪತಿಯು ಎಷ್ಟು ಸಂತುಷ್ಟನಾದಾನು, ಇಷ್ಟು ಬೇಗನೆ ದೇವಗಡವು ಕೈಸೇರಿದ್ದನ್ನು ಓದಿದಕೂಡಲೆ ಆತನಿಗೆ ನನ್ನ ಸಲುವಾಗಿ ಎಷ್ಟು ಧನ್ಯತೆಯುಂಟಾದೀತು. ಎಂಬ ಅನೇಕ ವಿಚಾರಗಳು ಆ ಸ್ವಾಮಿಭಕ್ತ ರಜಪೂತ ವೀರನ ಮನಸ್ಸಿನಲ್ಲಿ ವಿಹರಿಸುತ್ತಿದ್ದವು. ವಿಜಯ ಪ್ರಾಪ್ತಿಯ ನಿಜವಾದ ಆನಂದವು ಆತನ ಮುಖದಲ್ಲಿ ಉಕ್ಕುತ್ತಲಿತ್ತು. ಇಷ್ಟೆಲ್ಲ ಜನರ ಆನಂದದ ಕಾರಣವು ಒಂದು ವಿಜಯವು! ಆ ವಿಜಯಕ್ಕೆ ಕುಮಾರ ಛತ್ರಸಾಲನ ಮಹಾ ಪರಾಕ್ರಮವು ಕಾರಣವೆಂಬದನ್ನು ನೆನಿಸಿ ಆ ಪ್ರತಾಪಿ ರಜಪೂತನು ಛತ್ರಸಾಲನ ವಿಷಯವಾಗಿ ಅತ್ಯಂತ ಪ್ರೇಮಭಾವವನ್ನು ವಹಿಸಿದ್ದನು. ಛತ್ರಸಾಲನನ್ನು ಅಭಿನಂದಿಸುವದಕ್ಕಾಗಿ ಆ ಗಂಭೀರನಾದ ಕ್ಷತ್ರಿಯನು ಛತ್ರಸಾಲನ ರಾಹುಟಿಯ ಕಡೆಗೆ ಸಾಗಿದ್ದನು. ಛತ್ರಸಾಲನ ಇಂದಿನ ಪರಾಕ್ರಮವು ಕಳೆದುಹೋಗಿದ್ದ ಆತನ ವೈಭವವನ್ನು ಆತನಿಗೆ ಮತ್ತೆ ಸಂಪಾದಿಸಿಕೊಡುವದೆಂಬ ಆನಂದದ ವಿಚಾರದಿಂದ ಆ ವೃದ್ಧವೀರನು ಉತ್ತೇಜಿತನಾಗಿದ್ದನು.

ಕುಮಾರ ಛತ್ರಸಾಲನು ಒಂದು ಕಲ್ಲಮೇಲೆ ಬಾಡಿದ ಮೋರೆಯಿಂದ ವಿಚಾರಮಾಡುತ್ತ ಕುಳಿತುಕೊಂಡಿದ್ದನು. ರಾಜಾ ಜಯಸಿಂಗನು ಆತನನ್ನು ಬಹಳ ಹೊತ್ತು ದಿಟ್ಟಿಸಿನೋಡಿ ಆತನನ್ನು ಕುರಿತು—''ಕುಮಾರ ಛತ್ರಸಾಲ, ಹೀಗೆ ನಿನ್ನ ಬಾಡಿದ ಮೋರೆಯೇಕೆ?'' ಎಂದು ಕೇಳಿದನು. ಅದಕ್ಕೆ ಯಾವ ಉತ್ತರವೂ ದೊರೆಯಲಿಲ್ಲ, ತರುಣನ ಮುಖದಲ್ಲಿಯ ಚಿಂತೆಯ ಚಿಹ್ನವಾಗಲಿ, ಆತನ ಮನಸ್ಸಿನ ಏಕಾಗ್ರತೆಯಾಗಲಿ ಲೇಶವೂ ಕಡಿಮೆಯಾಗಲಿಲ್ಲ, ಆಗ ರಾಜಾ ಜಯಸಿಂಗನು ಎರಡು ಹಜ್ಜೆ ಮುಂದಕ್ಕೆ ಬಂದು ತರಣನ ಹೆಗಲ ಮೇಲೆ ಕೈಯಿಟ್ಟು ಆಶ್ಚರ್ಯದ ಪ್ರೇಮದಿಂದ —''ಕುಮಾರ, ನಿನ್ನ ಖಿನ್ನತೆಯ ಕಾರಣವೇನು? ನಿನ್ನ ಪ್ರತಾಪ ಶಾಲಿಯಾದ ತಂದೆಯ ನೆನಪಾದದ್ದರಿಂದ ಹೀಗೆ ಖಿನ್ನನಾಗಿರುವೆಯೋ?

ರಾಜಾ ಜಯಸಿಂಗನ ಈ ಮಾತುಗಳನ್ನು ಕೇಳಿ ಛತ್ರಸಾಲನು ಗಡಬಡಿಸಿ ಎಚ್ಚತ್ತು ಎದ್ದುನಿಂತು ಜಯಸಿಂಗನನ್ನು ವಿನಯದಿಂದ ನಮಸ್ಕರಿಸಿ—''ಕಾಕಾಜಿ, ಈ ಕಾಲವು ತಮ್ಮ ವಿಶ್ರಾಂತಿಯದಾಗಿತ್ತು ಹೀಗೆ ನನ್ನ ಕಡೆಗೆ ಬರುವ ಆಯಾಸವನ್ನು ಯಾಕೆ ಹೊಂದಿದ್ದಿರಿ? ತಮ್ಮ

ಸಲುವಾಗಿ ನಾನು ಏನು ಮಾಡಲಿ? ನನಗೆ ಯಾವ ಸೇವೆಯನ್ನು ಹೇಳಿ ಧನ್ಯನಾಗ ಮಾಡುವಿರಿ?'' ಎಂದು ಕೇಳಿದನು. ಅದಕ್ಕೆ ಜಯಸಿಂಗನು—''ಕುಮಾರ ಇಂದಿನ ಗೆಲವಿನ ಕೀರ್ತಿಯು ಸಂಪೂರ್ಣವಾಗಿ ನಿನ್ನದಾಗಿದ್ದು, ನೀನು ಹೀಗೆ ಖಿನ್ನನಾಗಿರುವದೇಕೆ? ನಿನ್ನ ಶೌರ್ಯದ ಅಭಿನಂದನ ಮಾಡುವದಕ್ಕಾಗಿ ನಾನು ನಿನ್ನ ಬಳಿಗೆ ಬಂದಿರಲು, ನಿನ್ನ ಈ ಬಾಡಿದ ಮೋರೆಯು ನನ್ನ ಕಣ್ಣಿಗೆ ಬಿದ್ದಿತು. ನಿನಗೆ ಗೆಲವಿನ ಆನಂದವು ಸ್ವಲ್ಪವೂ ಆಗುವದಿಲ್ಲವೇನು?''

ಛತ್ರಸಾಲ—(ದುಃಖದಿಂದ) ಕಾಕಾಸಾಹೇಬ, ಯಾರ ಗೆಲವಿಗೆ ಯಾರು ಆನಂದ ಪಡಬೇಕು? ಇಂದಿನ ಗೆಲವು ದಿಲ್ಲೀಪತಿಯದು, ಆತನ ಜಾತಿಯವರದು; ಅದಕ್ಕಾಗಿ ಛತ್ರಸಾಲನು ಏಕೆ ಆನಂದಪಡಬೇಕು? ಆದರೆ ಕಾಕಾಜಿ, ನಿಮ್ಮ ಆಶ್ರಯದಲ್ಲಿ ನಾನು ಇಷ್ಟುದಿವಸ ಇದ್ದೆನು; ಆಶ್ರಯದಿಂದ ದಿಲ್ಲೀಪತಿಯ ಸೈನ್ಯದ ಒಳಗಿನ ಹುರುಳು ನನಗೆ ಗೊತ್ತಾಯಿತು. ನಿಮ್ಮ ಆಶ್ರಯವು ನನ್ನ ಮುಂದಿನ ವೈಭವಕ್ಕೆ ಕಾರಣವಾಗುವದೆಂದು ತಿಳಿದೇ ನಿಮ್ಮನ್ನು ಸಂತೋಷಪಡಿಸುವದಕ್ಕಾಗಿ ಇಂದು ಛತ್ರಸಾಲನು ಬಾಡಿಗೆಯ ಯುದ್ಧವನ್ನು ಮಾಡಿರುವನು. ದೇವಗಡವು ಕೈಸೇರಿದರೆ, ಅಥವಾ ದಿಲ್ಲೀಪತಿಗೆ ಜಯವಾದರೆ ಕಾಕಾಜಿಯವರು ಸಂತುಷ್ಟರಾಗುವರೆಂದು ತಿಳಿದು, ಇಂದಿನ ನನ್ನ ಕಟು ಕರ್ತವ್ಯವನ್ನು ಕಷ್ಟದಿಂದ ಕೊನೆಗಾಣಿಸಿರುವೆನು. ಅಂದಬಳಿಕ ನನಗೆ ಆನಂದವು ಹೇಗಾಗಬೇಕು?

ರಾಜಾಜಯಸಿಂಗ—(ಬೆರಳುಮಾಡಿ ಸುತ್ತುಮುತ್ತು ತೋರಿಸುತ್ತ)—ಈ ಸುತ್ತ ಮುತ್ತಲಿನ ಪ್ರದೇಶದ ಕಡೆಗೆ ನೋಡು. ವಿಜಯೋತ್ಸವದಲ್ಲಿ ಮುಳುಗಿಹೋಗಿರುವವರೆಲ್ಲ ಯವನರೇ ಇರುವರೇನು? ಅದರಲ್ಲಿ ಅರ್ಧಕ್ಕಿಂತ ಹೆಚ್ಚು ಜನರು ನಮ್ಮ ದೇಶದವರೇ ಇರುವರು. ಅಂದ ಬಳಿಕ ಇವರು ವಿಜಯೋತ್ಸವವನ್ನು ಯಾಕೆ ಮಾಡಬೇಕು?

ಛತ್ರಸಾಲ ಇದೇ ನನಗೆ ತಿಳಿಯಲೊಲ್ಲದು; ನಿಜವಾಗಿಯೇ ಆದರೆ ಇಂದಿನ ಯವನರ ವಿಜಯಕ್ಕಾಗಿ ನನ್ನಂತೆ ನಮ್ಮವರಿಗೂ ಆನಂದವಾಗಬಾರದು; ಆದರೆ ಕಾಕಾಸಾಹೇಬ, ತಾವು ಪರಾಕ್ರಮದಿಂದ ಕಾದಿ ಗೆದ್ದುಕೊಂಡ ತಮ್ಮ ದೇಶವನ್ನೇ ಬಾದಶಹನಿಗೆ ಸಂತೋಷದಿಂದ ಅರ್ಪಿಸುವಷ್ಟು ಮೂಢರಾಗಿರುವ ಜನರು ಆನಂದಬಟ್ಟರೆ ಯಾರು ಮಾಡುವದೇನು? ಸ್ವದೇಶದ ಮೇಲೆ ತಿರುಗಿ ಬಿದ್ದಿರುವ ಇಂಥ ಈ ತಿಳುವಳಿಕೆಯಿಲ್ಲದ ಸ್ವಾರ್ಥಪರಾಯಣ ಸೈನಿಕರ ಸಾಲಿನಲ್ಲಿ ಸ್ವಾತಂತ್ರ್ಯ ಪ್ರೀಯನಾದ ಚಂಪತರಾಯನ ಮಗನನ್ನು ಕೂಡಿಸುವಿರೇನು? ಗೇಣು ಹೊಟ್ಟೆಯ ತೆಗ್ಗನ್ನು ತುಂಬಿಕೊಳ್ಳುವದಕ್ಕಾಗಿ ದೇಶದ್ರೋಹಿಗಳಾಗಿರುವ ಕ್ಷುದ್ರ ಸೈನಿಕರ ಮನಸ್ಸಿಗೆ, ಸ್ವದೇಶಭಕ್ತ ಚಂಪತರಾಯನ ಮಗನ ಮನಸ್ಸನ್ನು ಹೋಲಿಸಿನೋಡುವಿರೇನು? ನನ್ನ ಪರಾಕ್ರಮದಿಂದ ಬುಂದೇಲಖಂಡಕ್ಕೆ ಸ್ವಾತಂತ್ರ್ಯವು ದೊರೆತರೆ ಮಾತ್ರ ನನಗೆ ಆನಂದವಾಗುವದು.

ರಾಜಾಜಯಸಿಂಗ—ಕುಮಾರ, ಬುಂದೇಲಖಂಡದ ಸ್ವಾತಂತ್ರ್ಯದ ನಿನ್ನ ಹಂಬಲವು ಇನ್ನೂ ಹೋಗಿರುವದಿಲ್ಲವೇ? ಚಂಪತರಾಯನ ವಿನಾಶದಿಂದಲಾದರೂ ನಿನ್ನ ಕಣ್ಣುಗಳು ತೆರೆಯಬೇಕಾಗಿತ್ತು, ಬುಂದೇಲಖಂಡದಲ್ಲುಂಟಾದ ಭಯಂಕರ ರಕ್ತಪಾತವನ್ನು ನೋಡಿ

ಯಾದರೂ ನಾವು ದೇಶಕಲ್ಯಾಣದ ಹಾದಿಯನ್ನು ತಪ್ಪುತ್ತಿರುವೆವೆಂದು ನೀನು ತಿಳಿದುಕೊಳ್ಳ ಬಹುದಾಗಿತ್ತು, ಆದರೆ ಬುಂದೇಲಖಂಡದ ದುರ್ದೈವದ ಕಾಲವು ಇನ್ನೂ ತೀರಿರುವದಿಲ್ಲ ವೆಂಬಂತೆ ತೋರುತ್ತದೆ!

ಛತ್ರಸಾಲ—(ಆವೇಶದಿಂದ) ಕಾಕಾಜಿ, ಸ್ಪಷ್ಟ ಮಾತಾಡುವೆನೆಂದು ಸಿಟ್ಟಾಗಬಾರದು. ರಾಜಸ್ಥಾನಕ್ಕಷ್ಟೇ ಅಲ್ಲ, ಇಡಿಯ ಭರತಖಂಡಕ್ಕೆ ಹಿತವಾಗಬೇಕೆಂದು ದಿಲ್ಲಿಯ ದರ್ಬಾರದಲ್ಲಿ ನೀವು ಇಷ್ಟುದಿವಸ ವ್ಯವಹರಿಸುತ್ತಿರುವಿರಲ್ಲ, ನಿಮ್ಮಿಂದ ರಾಜಾಸ್ಥಾನಕ್ಕಾಗಲಿ, ಭರತಖಂಡ ಕ್ಕಾಗಲಿ ಎಷ್ಟರ ಮಟ್ಟಿಗೆ ಹಿತವಾಗಿರುತ್ತದೆ?

ಜಯಸಿಂಗ—(ವಿಚಾರದ ಮುದ್ರೆಯಿಂದ) ಛತ್ರಸಾಲ, ನಿನ್ನ ಮಾತಿನಿಂದ ನನಗೆ ಸಿಟ್ಟು ಬರುವದಿಲ್ಲ. ದಿಲ್ಲಿಯ ದರ್ಬಾರದಲ್ಲಿ ನಾನು ಇದ್ದದ್ದರಿಂದ ಜನತೆಯ ಕಲ್ಯಾಣವೇನೂ ಆಗಿರುವದಿಲ್ಲವೆಂದು ತಿಳಿದು ನೀನೊಬ್ಬನೇ ನನ್ನನ್ನು ಆರೋಪಿಸುತ್ತಿರುವದಿಲ್ಲ; ಆದರೆ ಜನರ ಆರೋಪವನ್ನು ಲಕ್ಷಿಸದೆ ನನ್ನ ಕರ್ತವ್ಯವನ್ನು ಮೆಲ್ಲ ಮೆಲ್ಲನೆ ಸಾಗಿಸಿಕೊಂಡು ಹೋಗಬೇಕೆಂದು ನಾನು ನಿಶ್ಚಯಿಸಿದ್ದೇನೆ. ನನ್ನ ಪ್ರಯತ್ನದಿಂದ ಸಾಮ್ರಾಜ್ಯದೊಳಗಿನ ನನ್ನ ಬಂಧುಗಳ ಹೆಚ್ಚಿನ ಲಾಭವಾಗದಿದ್ದರೂ, ಈ ಜಯಸಿಂಗನ ಪ್ರಯತ್ನದಿಂದಲೇ ಎಷ್ಟೋ ತಲೆಭಾರವಾದ ಕರಗಳನ್ನು ಬಾದಶಹನು ತೆಗೆದುಬಿಡಬೇಕಾಗಿದೆಯೆಂಬದನ್ನು ಎಲ್ಲರೂ ಲಕ್ಷದಲ್ಲಿಡತಕ್ಕದ್ದು.

ಛತ್ರಸಾಲ—ಮತ್ತು ಅದೇ ಕಾಲದಲ್ಲಿ ದಿಲ್ಲೀಪತಿಯು ಎಷ್ಟೋ ಹೊಸ ಕರಗಳ ಭಾರವನ್ನು ಪ್ರಜಗಳ ಮೇಲೆ ಹೊರಿಸಿರುವನೆಂಬದನ್ನೂ ಲಕ್ಷದಲ್ಲಿಡತಕ್ಕದ್ದು, ಕಾಕಾಜೀ, ರಾಜಕಾರಣದೊಳಗಿನ ಈ ಸ್ಪಷ್ಟವಾದ ಹಿಡಿತಗಳು ನಿಮಗೆ ನಿಚ್ಚಳವಾಗಿ ಕಾಣುತ್ತಿರುವವು. ಒಂದು ಹಕ್ಕನ್ನು ಕೊಡಬೇಕು, ಅಂತಹವೇ ಎರಡು ಹಕ್ಕುಗಳನ್ನು ಕಸಿದುಕೊಳ್ಳಬೇಕು; ಎರಡು ಕರಗಳನ್ನು ತೆಗೆದು ಬಿಡಬೇಕು, ಆ ತೆಗೆದ ಕರಗಳಿಂದಾದ ಹಾನಿಯು ತುಂಬಿ ಹೆಚ್ಚು ಉಳಿತಾಯವಾಗುವಂತೆ ಬಹುದೊಡ್ಡ ಭಾರದ ಒಂದು ಕರವನ್ನು ಹೇರಬೇಕು. ಇವು ರಾಜಕಾರಣದ ಹಿಡತಗಳು. ಇವುಗಳನ್ನು ನನ್ನಂತಹ ಹುಡುಗನು ನಿಮ್ಮ ಮುಂದೆ ಸ್ಪಷ್ಟಮಾಡಿ ಹೇಳಲು ಸಮರ್ಥನಾಗಬಹುದೆ? ನಿಮಗೆಲ್ಲ ಅದು ಗೊತ್ತಿರುವದು. ಸ್ವಲ್ಪ ವಿಚಾರಮಾಡಿ ನೋಡಿದರೆ, ಮಹಾರಾಣಾ ರಾಜಸಿಂಹನ ಪ್ರಯತ್ನವು ನಿಮ್ಮ ಪ್ರಯತ್ನಕ್ಕಿಂತ ಯಾಕೆ ಶ್ರೇಷ್ಠ ವಾದದ್ದೆಂಬ ಮಾತು ನಿಮ್ಮ ಲಕ್ಷದಲ್ಲಿ ಬರಬಹುದು. ಮಹಾರಾಣಾ ರಾಜಸಿಂಹನ ಖಡ್ಗವು ರಾಜಾಸ್ಥಾನದಲ್ಲಿ ಯಾಕೆ ಹೊರಬಿದ್ದಿರುವದೋ, ಮಹಾತ್ಮನಾದ ಶಿವಾಜಿಯ ಖಡ್ಗವು ದಕ್ಷಿಣದಲ್ಲಿ ಯಾಕೆ ಹೊಳೆಯುತ್ತಿರುವದೋ, ಅದಕ್ಕಾಗಿಯೇ ನನ್ನ ತಂದೆಯಾದ ಚಂಪತರಾಯನ ಖಡ್ಗವು ಬುಂದೇಲಖಂಡದಲ್ಲಿ ಕಡೆತನಕ ಪ್ರಕಾಶಿಸುತ್ತಲಿತ್ತು, ಉದೇಪುರದ ಪುಣ್ಯವು ಬಲವತ್ತರವಾಗಿತ್ತು, ದಕ್ಷಿಣದ ದೈವವು ತೆರೆದಿತ್ತು; ಅಂತೇ ಮಹಾರಾಣಾರಾಜ ಸಿಂಹರ, ಹಾಗು ಮಹಾತ್ಮರಾದ ಶಿವಾಜಿಯವರ ಕೆಲಸಕ್ಕೆ ಯಶಸ್ಸು ದೊರೆಯಿತು; ಆದರೆ ಬುಂದೇಲ ಖಂಡದ ದುರ್ದೈವದ ಕಾಲವು ಇನ್ನೂ ತೀರಿರದ್ದರಿಂದ, ಚಂಪತರಾಯರ ಪ್ರಯತ್ನಕ್ಕೆ ಯಶಸ್ಸು ಬರಲಿಲ್ಲ. ಇಷ್ಟರ ಮೇಲಿಂದ ನಮ್ಮ ತಂದೆಯವರ ಪ್ರಯತ್ನವನ್ನು ವ್ಯರ್ಥವೆಂದು ಹೇಳಬಹುದೋ?

ಜಯಸಿಂಹ—ಬುಂದೇಲಖಂಡದ ದೈವವು ಎಂದು ತೆರೆಯುವದೋ ತೆರೆಯಲಿ, ಆದರೆ ಅಲ್ಲಿಯವರೆಗೆ ಹೀಗೆ ಹೀನಾವಸ್ಥೆಯಲ್ಲಿ ಕಾಲ ಕಳೆಯುವದಕ್ಕಿಂತ, ಇಂದಿನ ವಿಜಯದಿಂದಾಗುವ ಲಾಭವನ್ನು ಪಡೆದು, ಕಳೆದುಕೊಂಡಿದ್ದ ವೈಭವವನ್ನು ಪುನಃ ನೀನು ಸಂಪಾದಿಸಬೇಕೆಂದು ನಾನು ಇಚ್ಛಿಸುತ್ತೇನೆ. ನಾಳೆ ನಮ್ಮ ಸೈನ್ಯವು ದಿಲ್ಲಿಯ ಕಡೆಗೆ ಹೋಗುವದಕ್ಕಾಗಿ ಪಾಳೆಯವನ್ನು ಕಿತ್ತತಕ್ಕದ್ದಿದೆ. ನೀನೂ ನಮ್ಮ ಸಂಗಡ ದಿಲ್ಲಿಗೆ ನಡೆ. ಛತ್ರಸಾಲಾ, ನನ್ನ ಸೂಚನೆಯನ್ನು ಧಿಕ್ಕರಿಸಬೇಡ. ಮಹೋಬದ ರಾಜ್ಯವನ್ನು ನಿನಗೆ ತಿರುಗಿ ಕೊಡುವ ಬಗ್ಗೆ ನಾನು ಹೊಣೆಯಾಗುತ್ತೇನೆ.

ಛತ್ರಸಾಲ—ಮಹೋಬದ ರಾಜ್ಯವು ದೊರೆತರೆ ಬುಂದೇಲಖಂಡದ ಸ್ವಾತಂತ್ರ್ಯವು ದೊರೆತಹಾಗಾಗಲಿಲ್ಲ, ಅಪ್ಪನಕಾಲದ ಎಲ್ಲ ಐಶ್ವರ್ಯವು ದೊರೆತರೆ ಬುಂದೇಲಖಂಡದ ಸ್ವಾತಂತ್ರ್ಯವು ದೊರೆತಹಾಗಾಗಲಿಲ್ಲ, ಕಾಕಾಸಾಹೇಬ, ಹಸಿದ ಸಿಂಹವು ನರಿಯ ಮಾಂಸದಿಂದ ತನ್ನ ಹಸಿವೆಯನ್ನು ದೂರಮಾಡಿಕೊಳ್ಳಲು ಇಚ್ಛಿಸಬಹುದೋ? ಅದರಂತೆ, ಯಾವತ್ತು ಬುಂದೇಲ ಖಂಡದ ಸ್ವಾತಂತ್ರ್ಯವನ್ನು ಇಚ್ಛಿಸುತ್ತಿರುವ ಈ ಛತ್ರಸಾಲನು, ಮಹೋಬದ ಮಾಂಡಲಿಕತ್ವ ದಿಂದಾಗಲಿ, ಅಥವಾ ದಿಲ್ಲಿಯ ದರ್ಬಾರದ ಅಮೀರಿಯಿಂದಾಗಲಿ ಹೇಗೆ ಸಂತುಷ್ಟನಾದಾನು?

ಜಯಸಿಂಗ—(ಪ್ರೇಮದಿಂದ ನೋಡುತ್ತ) ಕುಮಾರ, ನೀನನ್ನುವದು ನಿಜವು. ಚಂಪತರಾಯನು ದಿಲ್ಲಿಯ ಪತಿಯ ಅಮೀರಿಯನ್ನು ಸ್ವೀಕರಿಸುವಾಗ ಹೀಗೆಯೇ ಅಂದನು. ಆದರೆ ಕಾಲ-ಪರಿಸ್ಥಿತಿಗಳನ್ನು ನೋಡಿ ಸುಜ್ಞರು ನಡೆಯತಕ್ಕದ್ದು. ನೀನು ನನ್ನ ಸಂಗಡ ದಿಲ್ಲಿಗೆ ನಡೆ. ಈ ದಿನದ ನಿನ್ನ ಉಪಕಾರದ ಸಂಗಡ ಹಿಂದಿನ ನಿನ್ನ ಉಪಕಾರದ ನೆನಪನ್ನು ಬಾದಶಹರಿಗೆ ಮಾಡಿಕೊಡೋಣ. ಬುಂದೇಲಖಂಡದ ಸುದೈವದಿಂದ ಅದಕ್ಕೆ ಸ್ವಾತಂತ್ರ್ಯವು ದೊರೆತರೆ ದೊರೆತೇ ಹೋಯಿತು. ಇಂದಿನ ವಿಜಯದಿಂದ ದಿಲ್ಲಿಯ ಪತಿಯ ಕೈಸೇರಿದ ಪ್ರಾಂತದ ವಿಸ್ತಾರದ ಪಾಸಂಗಕ್ಕೆ ನಿನ್ನ ಬುಂದೇಲಖಂಡದ ಸೀಮೆಯು ಹತ್ತಲಾರದು

ಛತ್ರಸಾಲ — ಅದೆಲ್ಲ ನಿಜವು! ಆದರೆ ನಿಮ್ಮಂಥ ಕ್ಷತ್ರಿಯ ವೀರರು ಔರಂಗಜೇಬನ ಪ್ರಾಣಪ್ರತಿಷ್ಠಾಪನೆಯಿಂದ ಆರಂಭಿಸಿ, ಆತನನ್ನು ಇಂದಿನ ವೈಭವದ ಶಿಖರಕ್ಕೆ ಮುಟ್ಟಿಸಿರಲು, ಮತ್ತು ಈಗಲೂ ನೀವು ದಿಲ್ಲಿಯ ಬಾದಶಾಹಿಯ ಮಂದಿರದ ಮುಖ್ಯ ಆಧಾರಸ್ತಂಭ ವಾಗಿರಲು, ಆ ದುಷ್ಟ ಬಾದಶಹನು ನಿಮಗೆ ಸ್ವಾತಂತ್ರ್ಯವನ್ನು ಎಲ್ಲಿ ಕೊಟ್ಟಿರುವನು? ಅಂದಬಳಿಕ ನಿಮ್ಮ ಮಾತಿನಿಂದ ದಿಲ್ಲೀಪತಿಯು ನನ್ನಂತಹ ಒಂದೆರಡು ಉಪಕಾರಮಾಡಿದ ಕ್ಷುದ್ರರಿಗೆ ಸ್ವಾತಂತ್ರ್ಯವನ್ನು ಕೊಡುವದುಂಟೆ? ಈ ಮಾತಿನ ಅನುಭವವು ಹಿಂದೆ ದಿವಾಣ-ಇ-ಆಮುದೊಳಗಿನ ದರ್ಬಾರದಲ್ಲಿ ಅಪ್ಪನಿಗೂ, ನನಗೂ ಪೂರಾ ಬಂದು ಹೋಗಿರುವದು. ಬಿಕ್ಕೆ ಬೇಡಿದರೆ ಸ್ವಾತಂತ್ರ್ಯವು ದೊರೆಯುವದಿಲ್ಲವೆಂಬ ಮಾತು ನಮಗೆ ಗಟ್ಟಿಮುಟ್ಟಿಯಾಗಿ ಗೊತ್ತಾಗಿದೆ.

ಜಯಸಿಂಗ—(ಆಗ್ರಹದಿಂದ) ಅದೇನೇ ಇರಲಿ, ನನ್ನಮಾತಿಗೆ ಒಪ್ಪಿ ನೀನು ದಿಲ್ಲಿಗೆ ಬರಲೇಬೇಕು. ಚಂಪತರಾಯನ ಮಗನನ್ನು ನಾನು ಬುಂದೇಲಖಂಡದಲ್ಲಿ ಅಸಹಾಯ

ವಾಗಿ ಇರಗೊಡಲಾರೆನು. ಹೀರಾದೇವಿಯ ಗುಪ್ತಚಾರರು ಬುಂದೇಲಖಂಡದ ತುಂಬ ಸಂಚರಿಸುತ್ತಿರಲು, ನಿನ್ನೊಬ್ಬನನ್ನೇ ಬುಂದೇಲಖಂಡದಲ್ಲಿ ಬಿಡುವದು ಮೂರ್ಖತನವೇ ಸರಿ!

ಛತ್ರಸಾಲ—ಕಾಕಾಜಿ, ನೀವು ನನ್ನ ವಿಷಯವಾಗಿ ವಹಿಸಿರುವ ಸದಯತೆಗಾಗಿ ನಾನು ನಿಮಗೆ ಅತ್ಯಂತ ಕೃತಜ್ಞನಾಗಿರುವೆನು; ಆದರೆ ನನ್ನ ವಿಷಯವಾಗಿ ತಾವು ಇಷ್ಟು ಅಂಜುವ ಕಾರಣವಿಲ್ಲವೆಂದು ಹೇಳಿಕೊಳ್ಳುವೆನು. ಬುಂದೇಲಖಂಡದಲ್ಲಿ ಒಬ್ಬ ಹೀರಾದೇವಿಯು ನನ್ನ ಪ್ರಾಣಹರಣಕ್ಕಾಗಿ ಹೊಂಚುಹಾಕಿದ್ದರೂ, ಪ್ರಾಣನಾಥ ಪ್ರಭುಗಳ ಕೃಪೆಯಿಂದ ಇಡಿಯ

ಬುಂದೇಲಖಂಡವೇ ನನ್ನ ಸಂರಕ್ಷಣದ ಸಲುವಾಗಿ ಪ್ರಾಣಕೊಡಲಿಕ್ಕೆ ಸಿದ್ಧವಾದೀತು; ಆದ್ದರಿಂದ ಕಾಕಾಜಿ, ನನ್ನ ಚಿಂತೆಯನ್ನು ತಾವು ಮಾಡಬಾರದು. ಮಹೋಬದ ಕೋಟೆಯು ನನ್ನನ್ನು ರಕ್ಷಿಸಲು ಸಮರ್ಥವಾಗದಿದ್ದರೂ, ಅಪ್ಪನ ಯೋಗದಿಂದ ನಾನು ಸಂಪಾದಿಸಿರುವ ಧೈರ್ಯರೂಪ ದುರ್ಗವು ಇನ್ನು ಮುಂದೆ ನನ್ನ ಸಂರಕ್ಷಣವನ್ನು ನಿಶ್ಚಯವಾಗಿ ಮಾಡುವದು! ತಂದೆಯ ಪ್ರೇಮವು ಈಗ ಪ್ರತ್ಯಕ್ಷವಾಗಿ ನನ್ನನ್ನು ರಕ್ಷಿಸದಿದ್ದರೂ, ವಿಂಧ್ಯವಾಸಿನೀದೇವಿಯು ಈ ಪ್ರೇಮಲ ಭಕ್ತನ ಯೋಗಕ್ಷೇಮವನ್ನು ತಕ್ಕೊಳ್ಳದೆ ಬಿಡುವಹಾಗಿಲ್ಲ. ಮನಸ್ಸಿನಲ್ಲಿ ಸ್ವಾತಂತ್ರ್ಯದ ದಿವ್ಯಜ್ಯೋತಿಯು ಪ್ರಕಾಶಿಸುತ್ತಿರುವಾಗ, ಧೈರ್ಯರೂಪ ತಂದೆಯು ರಕ್ಷಿಸುತ್ತಿರುವಾಗ, ದೇಶಹಿತ ದಂತ ಪವಿತ್ರ ಕಾರ್ಯವನ್ನು ಮಾಡುತ್ತಿರುವಾಗ, ಪ್ರಾಣನಾಥ ಪ್ರಭುಗಳ ಹಾಗು ತಮ್ಮಂಥ ಗುರುಹಿರಿಯರ ಆಶೀರ್ವಾದದ ಅಭಯಹಸ್ತವು ತಲೆಯ ಮೇಲಿರುವಾಗ, ಶ್ರೀವಿಂಧ್ಯ ವಾಸಿನಿಯು ಕೃಪಾದೃಷ್ಟಿಯಿಂದ ನೋಡುತ್ತಿರುವಾಗ ನಾನು ಹೀರಾದೇವಿಯಂಥ ಕಟಕಳಿಗೆ ಏಕೆ ಅಂಜಬೇಕು? ಕಾಕಾಜೀ, ನಾನು ದಿಲ್ಲಿಗೆ ಬರಲೇಬೇಕೆಂದು ನೀವು ಆಗ್ರಹ ಪಡಬೇಡಿರಿ. ನಾನು ಈ ಪ್ರಾಂತದಲ್ಲಿ ಅತ್ಯಂತ ಮಹತ್ವದ ಕೆಲಸಗಳನ್ನು ಮಾಡಬೇಕಾಗಿದೆ. ಇಷ್ಟು ಬೇಗನೇ, ನಾಳಿಗೇ ದಕ್ಷಿಣವನ್ನು ಬಿಡುವದು ನನ್ನಿಂದ ಆಗುವಹಾಗಿಲ್ಲ.

ಜಯಸಿಂಗ—(ಆಶ್ಚರ್ಯದಿಂದ) ಏನು? ನೀನು ನಮ್ಮ ಸಂಗಡ ಬುಂದೇಲಖಂಡಕ್ಕೂ ಬರುವದಿಲ್ಲವೇ?

ಛತ್ರಸಾಲ —ಇಲ್ಲ, ನಾನು ದಕ್ಷಿಣದಲ್ಲಿ ಕೆಲಕಾಲ ಇರಬೇಕಾಗಿದೆ.

ಜಯಸಿಂಗ—ಯಾಕೆ? ನೀನು ದಕ್ಷಿಣದಲ್ಲಿ ಯಾಕೆ ಇರುವೆ?

ಛತ್ರಸಾಲ—(ಗಾಂಭೀರ್ಯದಿಂದ) ಮಹಾತ್ಮರಾದ ಶಿವಾಜಿ ಬೋಸಲೆಯವರ ದರ್ಶನ ಮಾಡಿಕೊಳ್ಳುವೆನು.

ಜಯಸಿಂಗ—(ಸ್ವಲ್ಪ ವಿಚಾರಿಸಿ ಆನಂದದಿಂದ ತಲೆದೂಗುತ್ತ) ಅತ್ಯಂತ ಸ್ತುತ್ಯವು, ಅತ್ಯಂತ ಪ್ರಶಂಸನೀಯವು; ಛತ್ರಸಾಲ, ನೀನು ಬಹುಯೋಗ್ಯ ಕೆಲಸವನ್ನು ಮಾಡುತ್ತಿರುವೆ. ಆ ಪುಣ್ಯವಂತನಾದ ಮಹಾತ್ಮನ ದರ್ಶನಕ್ಕೆ ಅವಶ್ಯವಾಗಿ ಹೋಗಿ, ಆತನ ಗುರು ಮಂತ್ರವನ್ನು ಸ್ವೀಕರಿಸು. ನಿನಗೆ ಗುರುಮಂತ್ರವನ್ನು ಉಪದೇಶಿಸಲಿಕ್ಕೆ ಆತನು ಸರ್ವಥೈವ ಯೋಗ್ಯನಾಗಿರುವನು; ಆದರೆ ದಕ್ಷಿಣದಲ್ಲಿಯ ನಿನ್ನ ಕೆಲಸವಾದ ಕೂಡಲೆ ದಿಲ್ಲಿಗೆ ಬಾರದೆ ಇರಬೇಡ. ಇಂದಿನ ನಿನ್ನ ಅಪ್ರತಿಮ ಶೌರ್ಯದ ಲಾಭವನ್ನೇನಾದರೂ ಮಾಡಿಕೊಳ್ಳಲೇಬೇಕು.

ಛತ್ರಸಾಲ—ಈ ವಿಷಯವಾಗಿ ಮಹಾತ್ಮನಾದ ಶಿವಾಜಿಯ ಆಲೋಚನೆಯನ್ನು ಕೇಳಿಕೊಳ್ಳುವೆನು. ಆತನು ತೋರಿಸಿಕೊಟ್ಟ ಹಾದಿಯಿಂದಲೇ ನಾನು ಬುಂದೇಲಖಂಡದ ಸ್ವಾತಂತ್ರ್ಯದ ವಿಷಯವಾಗಿ ಪ್ರಯತ್ನ ಮಾಡಬೇಕೆಂದಿದ್ದೇನೆ. ಅಪ್ಪನೂ ಸಮರಭೂಮಿಯಲ್ಲಿ ದೇಹವಿಡುವಾಗ ಇದೇ ಮಾತು ಹೇಳಿರುವನು. ನನ್ನ ಗುರುವು ದಿಲ್ಲಿಗೆ ಹೋಗೆಂದು ನನಗೆ ಹೇಳಿದರೆ, ಕಾಕಾಜೀ, ತಾವು ದಿಲ್ಲಿಗೆ ಮುಟ್ಟುವದರೊಳಗಾಗಿಯೇ ತಮ್ಮ ಚರಣ ಸನ್ನಿಧಿಗೆ ನಾನು ಬರುವೆನು.

## ಸುಫಲಾದೇವಿಯ ಸದಭಿಮಾನ

ರಣದುಲ್ಲಾಖಾನನ ಅಪ್ಪಣೆಯಂತೆ ಓರಛಾದಿಂದ ಹೊರಟ ಕಂಚುಕಿರಾಯನು ಅತೀ ವೇಗದಿಂದ ಧಾರೀರಕ್ಕೆ ಬಂದು ದರ್ಬಾರು ನೆರಿಸಿದನು. ಈಗ ತಾನು ಬಾದಶಹನ ಪ್ರೀತಿಯ ಒಬ್ಬ ಸರದಾರನನ್ನು ಅಳಿಯನಾಗಿಮಾಡಿಕೊಂಡುಬಂದ ಮಹತ್ವದ ಸುದ್ದಿಯನ್ನು ತನ್ನ ಹೆಂಡತಿಗೂ, ಪ್ರಧಾನರಿಗೂ, ಪ್ರಜೆಗಳಿಗೂ ಯಾವಾಗ ಹೇಳೇನೆನ್ನುವಹಾಗೆ ಆತನಿಗೆ ಆಗಿತ್ತು ಬಹುದಿವಸಗಳ ಮೇಲೆ ರಾಜದರ್ಶನದ ಯೋಗವು ಒದಗಿದ್ದರಿಂದ ಧಾರೀರದ ದರ್ಬಾರದ ಮಂದಿರವು ರಾಜ್ಯಾಧಿಕಾರಿಗಳಿಂದಲೂ ಪ್ರಜೆಗಳಿಂದಲೂ ತುಂಬಿ ಹೋಗಿತ್ತು. ಯಾವ ಮಹತ್ವದ ಕಾರ್ಯಕ್ಕಾಗಿ ಇಂದಿನ ದರ್ಬಾರವು ನೆರೆದಿರುವದೆಂಬದನ್ನು ತಿಳಿದು ಕೊಳ್ಳುವದಕ್ಕಾಗಿ ಎಲ್ಲರೂ ಉತ್ಸುಕರಾಗಿದ್ದರು. ಪ್ರಧಾನನಿಗೆ ದರ್ಬಾರದ ಕಾರಣವು ಗೊತ್ತಾಗಿದ್ದಿಲ್ಲ. ಇಂತಹ ದೊಡ್ಡ ದರ್ಬಾರನೆರೆಸಿ ತಮ್ಮ ರಾಜೇಸಾಹೇಬರು ಏನು ಹೇಳುವರೋ? ಎಂದು ಸಜ್ಜನರಾಯನು ಚಿಂತಾತುರನಾಗಿ ಆಶ್ಚರ್ಯದಿಂದ ಎದುರು ನೋಡುತ್ತಿದ್ದನು. ರಾಣೀ ಸುಫಲಾದೇವಿಯೂ, ವಿಜಯೆಯೂ ಕಂಚುಕಿರಾಯನ ಅತ್ಯಾಗ್ರಹ ದಿಂದ ಆತನ ಭಾಷಣವನ್ನು ಕೇಳುವದಕ್ಕಾಗಿ ಪರದೆಯ ಮರೆಯಲ್ಲಿ ಕುಳಿತುಕೊಂಡಿದ್ದರು. ಅಷ್ಟರಲ್ಲಿ ಕಂಚುಕಿರಾಯನು ದರ್ಬಾರದ ಕೈಗಡದ ಆಧ್ಯತೆಯಿಂದ ದರ್ಬಾರವನ್ನು ಕುರಿತು–

ಪ್ರಧಾನಜೀ, ಮಾನಕರಿಗಳೇ, ಹಾಗು ಧಾರೀರದ ಸಮಸ್ತನಾಗರಿಕರೇ, ಇಂದಿನ ನಿಮ್ಮ ರಾಜನಿಷ್ಠೆಯನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ. ನಾವು ಸಿಂಹಾಸನವೇರಿ ದಂದಿನಿಂದ ಧಾರೀರದ ಗೌರವವನ್ನು ಹೆಚ್ಚಿಸುವದಕ್ಕಾಗಿ ನಾವು ಪಡುತ್ತಿರುವ ಶ್ರಮವನ್ನು ನೀವು ಅರಿತೇ ಇರುವಿರಿ. ನಮ್ಮ ಧಾರೀರದ ರಾಜ್ಯವು ಎಷ್ಟು ಪ್ರಬಲವಿದ್ದರೂ, ದಿಲ್ಲೀಪತಿಯ ಸಾಮ್ರಾಜ್ಯಕ್ಕೆ ಅದನ್ನು ಹೋಲಿಸಿ ನೋಡಿದರೆ, ಅದು ಕೇವಲ ಬಿಂದುಮಾತ್ರವೇ ಸರಿಯೆಂಬ ಮಾತನ್ನು ನೀವು ಮರೆಯಲಾಗದು. ಸಾಮ್ರಾಜ್ಯಸತ್ತೆಯ ವಿಸ್ತಾರವಾದ ನೆರಳಲ್ಲಿ ನಮಗೆ ಆಶ್ರಯ ದೊರೆತದ್ದು ಮಹಧ್ಭಾಗ್ಯವೇ ಸರಿ. ದೈವಯೋಗದಿಂದ ನಮಗೆ ಪುತ್ರಸಂತತಿ ಯಾಗಲಿಲ್ಲ, ಇನ್ನು ಮುಂದೆ ಆದೀತೆಂಬ ನಂಬಿಗೆಯೂ ಇರುವದಿಲ್ಲ. ನಮಗೆ ಪುತ್ರ

ಸಂತಾನವಿಲ್ಲವೆಂಬ ಕಾರಣದಿಂದ ನನಗೆ ದುಃಖವಾಗುವಷ್ಟೇ ನಮಗೆ ಆನಂದವೂ ಆಗುತ್ತದೆ; ಯಾಕಂದರೆ ಸದ್ಯದ ಬುಂದೇಲಖಂಡದ ದೂಷಿತವಾದ ವಾತಾವರಣದ ಯೋಗದಿಂದ, ಪ್ರತಿ ಒಬ್ಬ ತರುಣನ ತಲೆಯು ಸಾಮ್ರಾಜ್ಯ ದ್ರೋಹದಿಂದ ತಿರುಗಿಹೋಗಿದೆ. ಸಾಗರದ ರಾಜನಾದ ಸಭಾಕರಣನಿಗೆ ಮಗನಿಂದ ಎಷ್ಟು ಸುಖವಾಗಿದೆಯೆಂಬದನ್ನು ನೀವು ನೋಡುತ್ತಲೇ ಇರುವಿರಿ. ಛತ್ರಸಾಲನಂತು ಬಂಡಾಯಗಾರನ ಮುಖ್ಯನು! ಆತನು ಎಂತಹ ತಲೆತಿರುಕನು, ಎಂತಹ ಅತ್ಯಾಚಾರಿಯು ಎಂಬದನ್ನು ನಾನು ನಿಮಗೆ ವಿವರಿಸಿ ಹೇಳುವ ಕಾರಣವಿಲ್ಲ; ಆತನ ಅವಿಚಾರದಿಂದ ಬುಂದೇಲಖಂಡದಲ್ಲಿ ರಕ್ತದ ಕಾಲುವೆ ಹರಿಯಿತು. ಛತ್ರಸಾಲನಂತಹ, ಅಥವಾ ಸಾಗರದ ಯುವರಾಜ ದಳಪತನಂತಹ ಮಕ್ಕಳಿರುವದಕ್ಕಿಂತ ನಿಪುತ್ರಕರಾಗಿರುವದು ಯೋಗ್ಯವೆಂದು ನನಗೆ ತೋರುತ್ತದೆ!

ಈಗಿನ ಕಾಲದಲ್ಲಿ ಪುತ್ರಸಂತತಿಯಿಂದ ಆಗುವ ಅನರ್ಥವನ್ನು ನಿಮ್ಮ ಮುಂದೆ ಹೇಳಿದೆನು; ಅಂದಬಳಿಕ ನಾವು ಪುತ್ರಸಂತತಿಯ ಇಚ್ಛೆಯನ್ನು ಯಾಕೆ ಮಾಡಬೇಕು? ಸಾರ್ವಭೌಮ ದಿಲ್ಲೀಪತಿಯ ಜನಾನಖಾನೆಯ ಕಡೆಗೆ ನೋಡಿದರೆ, ಹಾಗು ಬಾದಶಹರ ಸರದಾರ, ದರಕದಾರ, ಅಮೀರ, ಉಮರಾವರರನ್ನು ಮನಸ್ಸಿನಲ್ಲಿ ತಂದರೆ ಸದ್ಯದ ಕಾಲವು ಗಂಡು ಮಕ್ಕಳದಾಗಿರದೆ ಹೆಣ್ಣು ಮಕ್ಕಳದಾಗಿರುವದೆಂಬದು ಕೂಡಲೆ ಮನಸ್ಸಿನಲ್ಲಿ ಬರುವದು! ಗಂಡು ಮಕ್ಕಳು ತಂದೆಯಮೇಲೆ ಸಂಕಟವನ್ನು ತಂದರೆ, ಹೆಣ್ಣುಮಕ್ಕಳು ತಂದೆಯ ಉತ್ಕರ್ಷ ಮಾಡುವರೆಂಬ ಉದಾಹರಣಗಳು ಹೇರಳವಾಗಿ ದೊರೆಯುವವು. ಸಾರ್ವಭೌಮ ದಿಲ್ಲೀಪತಿಗೂ, ಆತನ ಜಾತಿಯವರಾದ ಅಧಿಕಾರಿಗಳಿಗೂ ನಮ್ಮ ಗಂಡು ಮಕ್ಕಳನ್ನು ನೋಡಿದ ಕೂಡಲೆ ತ್ರಾಸವಾಗು ವಂತೆ, ನಮ್ಮ ಹೆಣ್ಣು ಮಕ್ಕಳನ್ನು ನೋಡಿದರೆ ಆನಂದವಾಗುವದು. ಪ್ರತ್ಯಕ್ಷ ದಿಲ್ಲೀದರ್ಬಾರದಲ್ಲಿ ನಮ್ಮ ಸುಂದರ ತರುಣ ಕನ್ಯೆಯರ ವರ್ಚಸ್ಸು ಚನ್ನಾಗಿರುವದು. ಅಂತಹ ಕನ್ನೆಯರು ಹತ ವೈಭವದ ರಾಜನನ್ನು ವೈಭವಶಾಲಿಯನ್ನಾಗಿ ಮಾಡಿದರು; ಬಿಕ್ಕೆ ಬೇಡುತ್ತಿರುವ ತಂದೆಯನ್ನು ಸರದಾರನಾಗ ಮಾಡಿದರು; ವಿಚಾರಗೇಡಿ ತಂದೆಯನ್ನು ದಿವಾಣನಾಗಿಮಾಡಿದರು. ನಮ್ಮ ಹೆಣ್ಣುಮಕ್ಕಳು, ದರ್ಬಾರದೊಳಗಿನ ದೊಡ್ಡ ದೊಡ್ಡ ಅಧಿಕಾರಗಳನ್ನು ತಮ್ಮ ತಂದೆಗೆ ಕೊಡಿಸಿದರು; ತಮ್ಮ ತಂದೆಯ ಮೇಲಿದ್ದ ಬಾದಶಹನ ಬಹು ದಿವಸದ ಸಿಟ್ಟನ್ನು ಇಳಿಸಿ ಬಾದಶಹನನ್ನು ಸುಪ್ರಸನ್ನನಾಗುವಂತೆ ಮಾಡಿರುವರು. ಇಂತಹ ಹಲವು ಹಿತಕಾರಕ ಉದಾಹರಣೆಗಳನ್ನು ನಾವು ನೋಡಿರುವದ ರಿಂದಲೇ ಸದ್ಯದ ಕಾಲವು ಗಂಡುಮಕ್ಕಳದಾಗಿರದೆ ಹೆಣ್ಣು ಮಕ್ಕಳದಾಗಿರುತ್ತದೆಂದು ನಾವು ಹೇಳಿದೆವು.

ನಮ್ಮ ರಾಜನು ಎತ್ತೋ ಹೊರಟು ನಡೆದಿರುವನೆಂಬ ದಾರುಣವಾದ ಚಿಂತೆಯು ಸಜ್ಜನರಾಯನಿಗೆ ಉತ್ಪನ್ನವಾಯಿತು. ಇನ್ನು ಅವರು ಏನು ಮಾತಾಡುವರೋ, ಏನಿಲ್ಲವೋ ಎಂದು ಆತನು ಆಲೋಚಿಸತೊಡಗಿದನು. ತಮ್ಮ ಅರಸರ ಭಾಷಣವನ್ನು ಹೇಗೆ ನಿಲ್ಲಿಸಬೇಕೆಂಬದು ಆತನಿಗೆ ತಿಳಿಯದಾಗಲು, ಆ ಸ್ವಾಮಿನಿಷ್ಠನು ಹತ ಬುದ್ಧನಾಗಿ ಸುಮ್ಮನೆ ಕುಳಿತುಕೊಂಡನು. ಅಷ್ಟರಲ್ಲಿ ಕಂಚುಕಿರಾಯನ ರಗಳೆಯು ಮತ್ತೆ ಆರಂಭವಾಯಿತು. ಆತನು ಮತ್ತೆ ದರ್ಬಾರವನ್ನು ಕುರಿತು–

ನಮ್ಮ ನೆರೆಯವರಾದ ರಜಪೂತ ಬಂಧುಗಳಕಡೆಗೆ ನೋಡಿದರೆ, ಕನ್ಯೆಯರ ಉಪಯುಕ್ತತೆಯು ನಮಗಿಂತಲೂ ಅವರಿಗೆ ಹೆಚ್ಚು ಚನ್ನಾಗಿ ಹೇಗೆ ತಿಳಿದಿರುವದೆಂಬದೂ, ಕನ್ಯೆಯರ ಸದುಪಯೋಗ ಮಾಡಿಕೊಳ್ಳುವ ಸಂಬಂಧದಿಂದ ಅವರಿಗಿಂತ ನಾವು ಹೇಗೆ ಹಿಂದೆ ಉಳಿದಿರುವೆವೆಂಬದೂ ಚನ್ನಾಗಿ ಲಕ್ಷದಲ್ಲಿ ಬರಬಹುದು. ಸಾಮ್ರಾಟ್ ಅಕಬರನ ಕಾಲದಿಂದಲೇ ಕನ್ಯೆಯರ ಉಪಯುಕ್ತತೆಯನ್ನು ಅವರು ಚನ್ನಾಗಿ ಕಂಡುಹಿಡಿದರು. ಅಲ್ಲಿಂದ ಅವರು ದಿಲ್ಲೀಪತಿಯ ಚರಣಕಮಲಗಳಿಗೆ ತಮ್ಮ ಕನ್ಯೆಯರನ್ನು ಎರೆದು, ದೊಡ್ಡ ದೊಡ್ಡ ಅಧಿಕಾರಗಳನ್ನೂ, ದೊಡ್ಡ ದೊಡ್ಡ ಬಿರುದುಗಳನ್ನೂ ಸಂಪಾದಿಸಲಿಕ್ಕೆ ಆರಂಭಿಸಿದರು. ಒಬ್ಬೊಬ್ಬ ರಜಪೂತರ ಬಿರುದಾವಳಿಯ ಉದ್ದಳತೆಯನ್ನು ನೋಡಿದರೆ, ಮನಸ್ಸು ಆಶ್ಚರ್ಯ ಮಗ್ನವಾಗದೆ ಇರದು; ಒಬ್ಬೊಬ್ಬ ರಜಪೂತನ ಹುದ್ದೆಯ ವರ್ಣನವನ್ನು ಕೇಳಿದರೆ, ಅಂತಃ ಕರಣದಲ್ಲಿ ಲೋಭವು ಉಕ್ಕಿಬರುವದು; ಒಬ್ಬೊಬ್ಬ ರಜಪೂತನ ಅಧಿಕಾರದ ಕಥೆಗಳನ್ನು ಕೇಳಿದರೆ, ಹೃದಯದಲ್ಲಿ ಸ್ಫುರಣವು ಉಂಟಾಗುತ್ತದೆ. ಸದ್ಗೃಹಸ್ಥರೇ, ಕನ್ಯೆಯರ ಯೋಗದಿಂದ ಅಧಿಕಾರ ಭೋಗಿಸುವಂಥ, ಕನ್ಯೆಯರ ಯೋಗದಿಂದ ವಿಷಯಲಂಪಟರಾಗಿರುವಂಥ, ಕನ್ಯೆಯರ ಯೋಗದಿಂದ ರಾಜ್ಯಸುಖವನ್ನು ಭೋಗಿಸುವಂಥ ಭಾಗ್ಯಶಾಲಿಗಳಾದ ರಜಪೂತರನ್ನು ನೀವು ನೋಡಿದರೆ, ನಮ್ಮ ಗಂಡುಮಕ್ಕಳೆಲ್ಲರೂ ಹೆಣ್ಣು ಮಕ್ಕಳಾದ ದಿನವೇ ಸುದಿನವೆಂದು ನಿಮಗೆ ತೋರದೇ ಇರಲಿಕ್ಕಿಲ್ಲ!

ಪ್ರಧಾನ ಸಜ್ಜನರಾಯನಿಂದ, ಅರಸನ ಭಾಷಣವನ್ನು ಕೇಳುವದಾಗಲೊಲ್ಲದು. ಆತನು ವಿನಯದಿಂದ ಮೆಲ್ಲನೆ—''ರಾಜನ್, ನೀವು ಇದೇ ದೂರದ ಪ್ರವಾಸ ಮುಗಿಸಿ ಬಂದಿರುವಿರಿ. ವ್ಯರ್ಥವಾಗಿ ಹೆಚ್ಚು ಮಾತಾಡುವ ಆಯಾಸವನ್ನು ಮಾಡಿಕೊಳ್ಳಬಾರದು. ತಮ್ಮ ಭಾಷಣದ ಉದ್ದೇಶವೆಲ್ಲ ದುರ್ಬಾರದವರಿಗೆ ತಿಳಿದಿರುವದು; ಆದ್ದರಿಂದ ಭಾಷಣವನ್ನು ನಿಲ್ಲಿಸಿದರೆ ಮಾನಕರಿಗಳನ್ನೂ, ನಾಗರೀಕರನ್ನೂ ತಾಂಬೂಲಾದಿಗಳಿಂದ ಸತ್ಕರಿಸಿ ಇಂದಿನ ದರ್ಬಾರದ ಕಾರ್ಯವನ್ನು ಮುಗಿಸಿಬಿಡುವೆನು. ಎಂದು ಬೇಡಿಕೊಂಡನು. ಅದಕ್ಕೆ ಕಂಚುಕಿರಾಯನು ನಗುತ್ತ – ಪ್ರಧಾನಜೀ, ದರ್ಬಾರದಕಾರ್ಯದಲ್ಲಿ ಇಷ್ಟು ಅವಸರಮಾಡುವದು ನೆಟ್ಟಗಲ್ಲ. ದಿಲ್ಲೀಪತಿಯ ದರ್ಬಾರದ ಕೆಲಸವು ಒಮ್ಮೆ ಆರಂಭವಾಯಿತೆಂದರೆ, ಆರಾರುತಾಸು ಒಂದೇ ಸವನೆ ನಡೆಯುತ್ತಿತ್ತು, ಸ್ತುತಿಪಾಠಕರಿಗೂ, ಕಂಚುಕಿಗಳಿಗೂ ಬಂಗಾರದ ಬೆತ್ತದ ಬಲವಾದ ಆಧಾರ ವಿರುತ್ತಿದ್ದರೂ, ನಿಂತು ನಿಂತು ನಮ್ಮ ಕಾಲು ನೋಯುತ್ತಿರುವಾಗ ದರ್ಬಾರದ ಕಾರ್ಯವು ನಡೆಯುತ್ತಲೇ ಇರುವದರ ಹಳೆಯ ಅನುಭವವು ನಮಗಿರುವದು; ಆದ್ದರಿಂದ ದರ್ಬಾರದ ಕಾರ್ಯವು ತೀರಕಡಿಮೆಯೆಂದರೆ ಮೂರು ತಾಸಾದರೂ ನಡೆಯಬೇಕೆಂದು ನಮ್ಮ ನಿಶ್ಚಿತ ಅಭಿಪ್ರಾಯವಿರುವದು; ಇನ್ನು ಮುಖ್ಯ ವಿಷಯವನ್ನು ಕುರಿತು ನಿಮಗೆ ನಾಲ್ಕುಮಾತು ಹೇಳುತ್ತೇನೆ.

ಪ್ರಿಯ ಸಭಾಸದರೇ, ಮಂತ್ರಿಗಳೇ, ಈಗಿನ ಕಾಲದಲ್ಲಿ ಗಂಡುಮಕ್ಕಳಿಂದ ರಾಜ್ಯಕ್ಕಾಗುವ ಹಾನಿಯನ್ನೂ, ಹೆಣ್ಣುಮಕ್ಕಳಿಂದಾಗುವ ಲಾಭವನ್ನೂ ಕುರಿತು ನಾನು ಸೋಪಪತ್ತಿಕವಾಗಿ ನಿಮಗೆ ಹೇಳಿದೆನಷ್ಟೇ? ಇನ್ನು ನಮ್ಮ ಅನುಭವದಿಂದ ನಮ್ಮ ರಾಜ್ಯದ ಗೌರವವೂ, ನಿಮ್ಮ

ಸುಖವೂ ಹೆಚ್ಚುವದಕ್ಕಾಗಿ ನಾವು ಯಾವ ಉಪಾಯವನ್ನು ಯೋಚಿಸಿರುತ್ತೇವೆಂಬದನ್ನು ನಿಮಗೆ ಹೇಳುವೆನು. ನಮ್ಮ ಹೊಟ್ಟೆಯಲ್ಲಿ ವಿಜಯೆಯೆಂಬ ಕನ್ಯಾರತ್ನವು ಜನಿಸಿರುವದನ್ನು ನೀವು ಬಲ್ಲಿರಿ. ಆ ರತ್ನದ ಪ್ರಭೆಯು ದಿಲ್ಲಿಯ ಬಾದಶಹನ ಕಣ್ಣುಗಳನ್ನು, ಅಥವಾ ಯಾವನಾದರೊಬ್ಬ ವಿಲಾಸಿ ಶಹಾಜಾದಾನ ಕಣ್ಣುಗಳನ್ನು ಕುಕ್ಕಿತೆಂದು ನಾನು ಮಾಡಿದ್ದೆನು; ಆದರೆ ಅಷ್ಟು ಭಾಗ್ಯವು ನಮ್ಮ ದೈವದಲ್ಲಿಲ್ಲ; ಆದರೂ ಚಲುವೆಯಾದ ಹೊಟ್ಟೆಯಮಗಳ ಉಪಯೋಗವನ್ನು ಶಕ್ಯವಿದ್ದಷ್ಟುಮಟ್ಟಿಗೆ ಯೋಗ್ಯರೀತಿಯಿಂದ ಮಾಡಿಕೊಳ್ಳುವ ಶ್ರೇಷ್ಠವಾದ ಯುಕ್ತಿಯನ್ನು ನಾವು ಕಂಡುಹಿಡಿದಿದ್ದೇವೆ. ಆ ಯುಕ್ತಿಯು ಸಫಲವಾದರೆ, ಧಾರೀರದ ರಾಜ್ಯದ ಗೌರವವು ಎಷ್ಟು ಹೆಚ್ಚುವದೆಂಬದನ್ನು ನಾನೇನು ಹೇಳಲಿ? ನಮ್ಮ ಆ ಯುಕ್ತಿಯಿಂದ ಕನ್ಯಾದಾನದ, ಹಾಗು ರಾಜ್ಯಕಾರಭಾರದ ನಮ್ಮ ತಾಪವು ತನ್ನಿಂದ ತಾನೇ ಇಲ್ಲದಂತಾಗಿ, ನಾವು ದಿಲ್ಲಿಯ ದರ್ಬಾರದ ಬಿರುದಾವಳಿಗಳಿಗೆ ಭೂಷಿತವಾಗುವದರಲ್ಲಿ ಎಳ್ಳಷ್ಟು ಸಂಶಯ ವಿಲ್ಲ! ಆ ಯುಕ್ತಿಯೆಂದರೆ, ಸರ್ವಗುಣ ಸಂಪನ್ನನಾದ ದಿಲ್ಲಿಯ ದರ್ಬಾರದ ಪ್ರತಾಪಶಾಲಿ ಸರದಾರನಾದ ರಣದುಲ್ಲಾಖಾನನು ನಮ್ಮ ವಿಜಯೆಯ ಪತಿಯಾಗಿ ನಮ್ಮ ಪಶ್ಚಾತ್ ಧಾರೀರದ ಅಧಿಪತಿಯೂ ಆಗಬೇಕೆಂಬದು!

ಕಂಚುಕಿರಾಯನ ಈ ಅಮಂಗಲ ಮಾತುಗಳನ್ನು ಕೇಳಿ ಕ್ರೋಧ ದುಃಖ–ಶೋಕಗಳ ಧ್ವನಿಗಳು ಉತ್ಪನ್ನವಾಗಿ, ದರ್ಬಾರದಲ್ಲಿ ಗದ್ದಲವುಂಟಾಯಿತು! ಜನತೆಯ ಈ ಕ್ರೋಧಾಗ್ನಿಯ ಶಕೆಯು ಕಂಚುಕಿರಾಯನಿಗೆ ಬಡಿಯದೆ ಬಿಡದೆಂದು ಸಜ್ಜನರಾಯನು ಕ್ಷಣಹೊತ್ತು ಯೋಚಿಸಿ ಎದ್ದು ಜನರನ್ನು ಕುರಿತು–ನಾಗರೀಕರೇ, ಶಾಂತರಾಗಿರಿ–ಶಾಂತರಾಗಿರಿ! ರಾಜೇಸಾಹೇಬರಿಗೆ ಅಪಮಾನವಾಗುವಂತಹ ಒಂದು ಶಬ್ದವನ್ನು ಕೂಡ ಉಚ್ಚರಿಸಬೇಡಿರಿ. ರಾಜೇಸಾಹೇಬರು ದರ್ಬಾರದಲ್ಲಿ ಮಾತಾಡಿದ ಮಾತ್ರದಿಂದ, ಕೂಡಲೆ ನಿಮ್ಮ ವಿಜಯೆಯ ವಿವಾಹವು ವಿಧರ್ಮಿಯಾದ ಯವನನೊಡನೆ ಆಯಿತೆಂದು ನೀವು ತಿಳಿಯಬೇಡಿರಿ. ರಾಜೇಸಾಹೇಬರು ವಿಚಾರಿಗಳಿರುವರು. ಇನ್ನೂ ವಿಚಾರ ಮಾಡತಕ್ಕ ಸಂಗತಿಯಿರುವದು. ಧಾರೀರದ ಅರಸು ಮನೆತನದ ಪಾವಿತ್ರ್ಯವೂ, ಸತ್ತೆಯೂ ವಿಧರ್ಮಿಗಳಾದ ಯವನರ ಕೈಯಲ್ಲಿ ಹೋಗುವಂತಹ ಕಾರ್ಯವನ್ನು ಮಹಾರಾಜರಿಂದ ನಾನು ಸರ್ವಥಾಮಾಡಗೊಡಲಾರೆನು. ನೀವು ಶಾಂತರಾಗಿರಿ.

ಕಂಚುಕಿರಾಯ—(ಸಂತಾಪದಿಂದ ಗದ್ದರಿಸಿ) ಸಜ್ಜನರಾಯ, ರಣದುಲ್ಲಾಖಾನನಂತ ದಿಲ್ಲಿಯ ದರ್ಬಾರದ ಪ್ರೀತಿಯ ಸರದಾರನಿಗೆ ನಮ್ಮಂತಹ ಹಿಂದೂ ರಾಜರು ತಮ್ಮ ಮಗಳನ್ನು ಕೊಡುವದು ಅವಿಚಾರವೇನು? ದಿಲ್ಲೀಪತಿಯಾಗಲಿ, ದಿಲ್ಲೀಪತಿಯ ಜಾತಿಯ ಬೇರೆ ಘನವಂತರಾಗಲಿ ನಮ್ಮ ಮಕ್ಕಳು ಮರಿಗಳನ್ನು ತಮ್ಮ ಜನಾನಖಾನೆಯಲ್ಲಿ ಸೇರಿಸಿಕೊಳ್ಳುವದು ಮಹದ್ಭಾಗ್ಯವಲ್ಲದೆ ಮತ್ತೇನು? ಸಜ್ಜನರಾಯ, ನಾನು ಪೂರಾ ವಿಚಾರಮಾಡಿಯೇ ನನ್ನ ಮಗಳನ್ನು ರಣದುಲ್ಲಾ ಖಾನನಿಗೆ ಕೊಟ್ಟು, ನನ್ನ ಪಶ್ಚಾತ್ ನನ್ನ ಧಾರೀರದ ರಾಜ್ಯವನ್ನು ನನ್ನ ಅಳಿಯನಿಗೆ ಒಪ್ಪಿಸಬೇಕೆಂದು ನಿಶ್ಚಯಿಸಿರುತ್ತೇನೆ.

ಒಬ್ಬನಾಗರಿಕ—(ತಡೆಯಲಾರದೆ ಸಂತಾಪದಿಂದ) ರಾಜನ್, ಧಾರೀರದ ರಾಜ ವಂಶವೂ, ರಾಜಸತ್ತೆಯೂ ಪವಿತ್ರವಾಗಿಯೇ ಇರುವಂತೆಯೂ, ವಿಧರ್ಮಿಯವನರ ಪಾತಕೀ

ಸಂಸರ್ಗವು ಆದಕ್ಕೆ ಆಗದಂತೆಯೂ ಪ್ರಯತ್ನ ಮಾಡುವದು ನಮ್ಮ ಶ್ರೇಷ್ಠ ಕರ್ತವ್ಯ ವಾಗಿರುವದು. ನಿಮ್ಮ ಆ ಅಮಂಗಲ ನಿಶ್ಚಯವು ಧಾರೀರದ ಪ್ರಜೆಗಳಿಗೆ ಸರ್ವಥಾ ಸಹನವಾಗಲಾರದು. ರಾಜನ್, ಕುಮಾರಿ ವಿಜಯೆಯು ನಮ್ಮ ರಾಜಲಕ್ಷ್ಮಿಯಾಗಿರುವಳು. ಆ ರಾಜಪುತ್ರಿಯ ವಿವಾಹವು ಬುಂದೇಲಿ ತರುಣನೊಡನೆಯೇ ಆಗಬೇಕು.

ನಾಗರಿಕರ ಈ ಸ್ಪಷ್ಟವಾದ ಆಕ್ಷೇಪವನ್ನು ಕೇಳಿ ಪ್ರಧಾನ ಸಜ್ಜನರಾಯನು ನಾಗರೀಕರನ್ನು ಕುರಿತು–ನಾಗರಿಕರೇ, ಸಿಟ್ಟಿನ ಭರದಲ್ಲಿ ಮನಸ್ಸಿಗೆ ಬಂದಂತೆ ಮಾತಾಡಿ ನೀವು ಅರಸರ ಅಪಮಾನಮಾಡುತ್ತಿರುವಿರಿ! ಮಹಾರಾಣಿ ಸುಫಲಾದೇವಿಯವರ ಸಮ್ಮತಿಯ ಹೊರತು ರಾಜಕುಮಾರಿಯ ವಿವಾಹ ಸಂಬಂಧವಾಗಲಾರದು. ಸಿಂಹಾಸನದ ಏಕನಿಷ್ಠ ಸೇವಕ ನಾದ ಸಜ್ಜನರಾಯನಿಗೂ ನಿಮ್ಮಂತೆಯೇ ವಿವಾಹದ ಪ್ರಸಕ್ತಿಯು ಇಂದೇ ಗೊತ್ತಾಗಿರುವದು. ದಿಲ್ಲೀಪತಿಯು ಸಿಟ್ಟಾಗಬಾರದೆಂದು ರಾಜೇಸಾಹೇಬರು ದರ್ಬಾರನೆರೆಸಿರುವರಷ್ಟೇ! ನಾನಾದರೂ ಶಕ್ಯವಿದ್ದ ಮಟ್ಟಿಗೆ ಪ್ರಯತ್ನಮಾಡಿ ರಾಜ್ಯದಕೀರ್ತಿಯು ನಿಷ್ಕಲಂಕವಾಗಿರುವಂತೆ ಯತ್ನಿಸುವೆನು. ನೀವು ನಿಶಂಕೆಯಿಂದ ಮನೆಗೆ ಹೋಗಿರಿ, ರಾಜನ್, ದರ್ಬಾರದ ಕಾರ್ಯವನ್ನು ನಿಲ್ಲಿಸುವದಕ್ಕೆ ಅಪ್ಪಣೆ ಕೊಡೋಣವಾಗಬೇಕು.

ಕಂಚುಕಿರಾಯ — ಇಷ್ಟರಲ್ಲಿಯೇ ದರ್ಬಾರದ ಕೆಲಸವು ನಿಲ್ಲಲಾರದು. ಸಜ್ಜನರಾಯ, ಹೆಸರಿನಂತೆ ನೀನು ಸಜ್ಜನನೆಂದು ನಾನು ಈವರೆಗೆ ತಿಳಿದಿದ್ದೆನು. ಇಂದಿಗೆ ನನ್ನ ಭ್ರಾಂತಿಯು ದೂರವಾಯಿತು. ನೀನು ಪ್ರಜೆಗಳಲ್ಲಿ ಅರಾಜಕ ಭಾವನೆಯನ್ನುಂಟುಮಾಡುತ್ತ ಬಂದಿರುತ್ತೀ. ನಿನ್ನ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವದರಲ್ಲಿಯೇ ನಿನ್ನ ತಂತ್ರವು ಈವರೆಗೆ ನಡೆಯುತ್ತ ಬಂದಿರುವದೆಂಬದು ಸ್ಪಷ್ಟವಾಗಿ ತೋರುತ್ತದೆ. ಆದ್ದರಿಂದ ನಿನ್ನನ್ನು ಹೀಗೆಯೇ ಸ್ವತಂತ್ರವಾಗಿ ಇರಗೊಟ್ಟರೆ, ರಣದುಲ್ಲಾಖಾನನೊಡನೆ ಆಗುವ ವಿಜಯೆಯ ಲಗ್ನಕ್ಕೆ ಪ್ರಯತ್ನ ಪೂರ್ವಕ ವಾಗಿ ನೀನು ವಿಘ್ನವನ್ನುಂಟುಮಾಡಿ; ಆದ್ದರಿಂದ ಆ ಉದ್ಧಟ ನಾಗರೀಕನೊಡನೆ ನಿನ್ನನ್ನೂ ಸೆರೆಯಲ್ಲಿಡಿಸಬೇಕೆಂದು ನಾನು ಆಜ್ಞಾಪಿಸುತ್ತೇನೆ. ನೀನು ಈ ಅರಾಜಕ ನಾಗರಿಕರೊಡನೆ ಕಾರಾಗ್ರಹ ಶಿಕ್ಷೆಯನ್ನು ಭೋಗಿಸಬೇಕು.

ಈ ಮೇರೆಗೆ ಕಂಚುಕಿರಾಯನು ನುಡಿಯುತ್ತಿರಲು, ಪರದೆಯ ಮರೆಗೆ ಕುಳಿತಿದ್ದ ಸುಫಲಾದೇವಿಯು ನಿರ್ವಾಹವಿಲ್ಲದೆ ಹೊರಗೆ ಬಂದು ಸಿಂಹಾಸನದ ಬಳಿಯಲ್ಲಿ ನಿಂತಳು. ಆಕೆಯ ಮಂಗಲಕಾರಕ ಮುಖವನ್ನು ನೋಡಿದಕೂಡಲೆ ಕ್ಷೋಭಿಸಿದ ದರ್ಬಾರವು ಶಾಂತ ವಾಯಿತು. ಕಂಚುಕಿರಾಯನು ಹೆಂಡತಿಯ ಮೋರೆಯನ್ನು ಆಶ್ಚರ್ಯದಿಂದ ನೋಡತೊಡ ಗಿದನು. ಆಗ ಸುಫಲಾದೇವಿಯು ವಿನಯದಿಂದ–

ಸುಫಲಾದೇವಿ —ಪ್ರಾಣನಾಥ, ತಾವು ನಿಶ್ಚಿಂತರಾಗಿರಬೇಕು. ಧಾರೀರದ ಪ್ರಜೆಗಳು ತಮ್ಮ ಅಪ್ಪಣೆಯನ್ನು ಅಮಾನ್ಯಮಾಡಲಾರರು. ಪ್ರಧಾನಜೀ, ರಾಜಾಜ್ಞೆಯಂತೆ ನೀವು ಕಾರಾಗೃಹಕ್ಕೆ ಹೋಗಬೇಕು. ನಾಗರೀಕರೇ, ನಿಮ್ಮ ಈ ಸ್ವಾಭಿಮಾನಿ ಬಂಧುವು ರಾಜಾಜ್ಞೆಯಂತೆ ಕಾರಾಗ್ರಹ ವಾಸವನ್ನು ಭೋಗಿಸಬೇಕಾಗುವದು. ನೆರೆದ ದರ್ಬಾರದಲ್ಲಿ ಹೀಗೆ ರಾಜಾಜ್ಞೆಯನ್ನು ಉಲ್ಲಂಘಿಸುವದು ಹಿಂದುಗಳ ಶೀಲವಲ್ಲ, ಅರಸರು ನಿಮ್ಮೊಳಗಿನವ

ನೊಬ್ಬ ಮನುಷ್ಯನೇ ಆಗಿರುವದರಿಂದ, ಆತನ ಕೈಯಿಂದಲೂ ತಪ್ಪುಗಳಾಗುವ ಸಂಭವವುಂಟು. ರಾಜಾಜ್ಞೆಯನ್ನು ಶಾಂತರೀತಿಯಿಂದ ಮನ್ನಿಸಬೇಕು; ಆಮೇಲೆ ಅದು ತಪ್ಪಿನದಾಗಿದ್ದರೆ ಅರಸನಿಗೆ ಅದರ ಸತ್ಯತೆಯನ್ನು ತೋರಿಸಿ, ಅದರಿಂದುಂಟಾಗುವ ದುಷ್ಪರಿಣಾಮವನ್ನು ಶಾಂತರೀತಿಯಿಂದ, ಚಾತುರ್ಯದಿಂದ, ಪ್ರೇಮಲ ಮಾತುಗಳಿಂದ ದೂರಮಾಡಬೇಕು. ಇದು ರಾಜಮಾರ್ಗವು. ಇನ್ನು ಅರಸರ ವಿಚಾರವು ನಿಮ್ಮಂತೆ ನನಗೂ ಸರ್ವಥಾ ಮಾನ್ಯವಾಗಿರುವದಿಲ್ಲ. ನಾಗರಿಕರೇ, ನೀವು ಸ್ವಸ್ಥಚಿತ್ತದಿಂದ ಮನೆಗೆ ಹೋಗಿರಿ. ನಿಮ್ಮ ಕರ್ತವ್ಯ-ತತ್ಪರ ಪ್ರಧಾನನಿಗೂ, ನಿಮ್ಮ ಪ್ರೇಮಲ ಬಂಧುವಿಗೂ ಲೇಶವೂ ತ್ರಾಸವಾಗದೆಂಬ ಬಗ್ಗೆ ನಾನು ಹೊಣೆಯಾಗುವೆನು. ನನ್ನ ವಿಜಯೆಯು ರಣದುಲ್ಲಾಖಾನನ ಹೆಂಡತಿಯಾಗಲಾರಳು. ನನ್ನ ವಿಜಯೆಯು ಯವನರ ಗೋಷೆಯಲ್ಲಿ ಸೇರಲಾರಳು. ಸ್ವರ್ಗಲೋಕದ ಇಂದ್ರನು ವಿಜಯೆಯು ಪಾಣಿಗ್ರಹಣ ಮಾಡಲಿಚ್ಛಿಸಿದರೂ, ವಿಜಯೆಯು ಆತನ ಪಾಣಿಗ್ರಹಣ ಮಾಡಲಾರಳು; ಯಾಕಂದರೆ, ವಿಜಯೆಯ ಪತಿಯು ಚಂಪತರಾಯನ ಪುತ್ರನಾದ ಯುವರಾಜ ಛತ್ರಸಾಲನೆಂಬದು ಈ ಮೊದಲೇ ಗೊತ್ತಾಗಿ ಹೋಗಿದೆ, ಎಂದು ಹೇಳಿದಳು. ಈ ಮಾತನ್ನು ಕೇಳಿದ ಕೂಡಲೇ ಎಲ್ಲ ನಾಗರಿಕರು ಸದಭಿಮಾನದ ಆನಂದದಿಂದ ತಮ್ಮ ತಮ್ಮ ಮನೆಗಳಿಗೆ ಹೋದರು! ಸದಭಿಮಾನವು ಯಾರನ್ನು ಆನಂದ ಪಡಿಸಲಿಕ್ಕಿಲ್ಲ?

## ಪಾಪ! ಬಡ ಕಂಚುಕಿರಾಯನು!

ಸಿಟ್ಟಿನ ಹೆಚ್ಚಳದಿಂದ ಎಚ್ಚರದಪ್ಪಿದ ಕಂಚುಕಿರಾಯನು ಗರ್ಜಿಸುತ್ತ ಸುಫಲದೇವಿಗೆ- ನಾನಿಲ್ಲದಾಗ ವಿಜಯೆಯ ನಿಶ್ಚಯವು ಹೇಗಾಯಿತು? ಛತ್ರಸಾಲನಂತಹ ಬಿಕ್ಕೆಬೇಡುವ ತಲೆತಿರುಕನಿಗೆ ವಾಗ್‌ನಿಶ್ಚಯವನ್ನು ಯಾರು ಮಾಡಿದರು? ನನ್ನ ನಿಶ್ಚಯವು ಸುಳ್ಳಾಗಲಾರದು. ರಣದುಲ್ಲಾಖಾನನೊಡನೆಯೇ ವಿಜಯೆಯ ಲಗ್ನವನ್ನು ನಾನು ಮಾಡುವವನು!

ಸುಫಲಾ—(ಉಸುರ್ಗರೆದು) ವಿಚಾರಮಾಡಿರಿ, ಒಂದೆರಡುಗಳಿಗೆ ಶಾಂತಮನಸ್ಸಿನಿಂದ ವಿಚಾರಮಾಡಿರಿ. ವಿಜಯೆಗೆ ನೀವು ಜನ್ಮ ಕೊಟ್ಟಿರುವವರಾಗುವಂತೆ, ನಾನು ಆಕೆಯನ್ನು ಒಂಬತ್ತು ತಿಂಗಳು ಹೊತ್ತುಹಡೆದು ಸಣ್ಣವಳನ್ನು ದೊಡ್ಡವಳನ್ನಾಗಿ ಮಾಡಿದ್ದೇನೆ. ನನ್ನ ವಿಚಾರವನ್ನು ಕೇಳದೆ ನೀವು ರಣದುಲ್ಲಾ ಖಾನನಿಗೆ ಆಕೆಯನ್ನು ಕೊಡುವ ನಿಶ್ಚಯವನ್ನು ಮಾಡಬಹುದೋ? ವಿಜಯೆ ಏನು ಸಣ್ಣವಳಲ್ಲ. ಆಕೆಗೆ ತನ್ನ ಹಿತಾಹಿತಗಳು ತಿಳಿಯುತ್ತವೆ. ಶ್ರೀವಿಂಧ್ಯವಾಸಿನಿಯ ಉತ್ಸವದ ಕಾಲದಲ್ಲಿ ವಿಜಯೆಯು ದೇವಿಗೆ ಅರ್ಪಿಸಿದ ಮಾಲೆಯು ಛತ್ರಸಾಲನ ಕೊರಳಲ್ಲಿ ಬಿದ್ದಾಗಲೇ ವಿಜಯೆಯು ಮನಸ್ಸಿನಿಂದ ಛತ್ರಸಾಲನನ್ನು ಪತಿಯಾಗಿ ಭಾವಿಸಿರುವಳು. ಇಂತಹ ಸೂಕ್ಷ್ಮ ವಿಚಾರಗಳು ಗಂಡಸರಿಗೆ ತಿಳಿಯಲಾರವು. ಪ್ರಾಣನಾಥ,

ರಣದುಲ್ಲಾಖಾನನು ಬಾದಶಹರ ಪ್ರೀತಿಯ ಸರದಾರನಾಗಿದ್ದರೆ, ನೀವು ಸಾಮ್ರಾಜ್ಯದ ಏಕನಿಷ್ಠೆಯ ಭಕ್ತರಾಗಿದ್ದರೆ, ರಣದುಲ್ಲಾಖಾನನಿಗೆ ಕಾಣಿಕೆಯಾಗಿ ಆನೆ–ಕುದುರೆಗಳನ್ನು ಕೊಡಿರಿ; ಮುತ್ತುರತ್ನಗಳನ್ನು ಕೊಡಿರಿ; ವಿಪುಲ ಧನವನ್ನು ಕೊಡಿರಿ; ಆದರೆ ಹೊಟ್ಟೆಯ ಮಕ್ಕಳನ್ನು ಕಾಣಿಕೆಯಾಗಿ ಕೊಡುವದು ನಿಮ್ಮಂಥ ಕ್ಷತ್ರಿಯ ವೀರರಿಗೆ ಒಪ್ಪುವದಿಲ್ಲ!

ಕಂಚುಕಿರಾಯ —ಅದೇನೇ ಇರಲಿ, ಸುಫಲೇ ನಾನು ಇಲ್ಲದಾಗ ನೀನೂ, ಸಜ್ಜನ ರಾಯನೂ ಜನರ ಮನಸ್ಸನ್ನು ನಿಮ್ಮ ಕಡೆಗೆ ಮಾಡಿಕೊಂಡಿರುತ್ತೀರಿ. ನೆನಪಿನಲ್ಲಿಡಿರಿ, ನಾನು ಕಂಚುಕಿರಾಯನಿರುತ್ತೇನೆ. ನಾಳೆ ಬೆಳಗಿನಲ್ಲಿ ಲಗ್ನದ ತಿಥಿಯನ್ನು ತಿಳಿಸುವದಕ್ಕಾಗಿ ಇಲ್ಲಿಂದ ಸಾಂಡಣಿಯ ಸವಾರನು ಓರಭಾಕ್ಕೆ ರಣದುಲ್ಲಾಖಾನನ ಕಡೆಗೆ ಹೋಗುವನು; ಆಗ ಅವನ ಸಂಗಡ ನಿಮ್ಮ ಈ ಒಳಸಂಚನ್ನು ಖಾನನಿಗೆ ತಿಳಿಸಿ, ಬಾದಶಹರ ಪ್ರಚಂಡ ಸೈನ್ಯದೊಡನೆ ಖಾನನನ್ನು ಬರಮಾಡಿಕೊಂಡು ನಾಗರಿಕರ ಸೊಕ್ಕು ಇಳಿಸುವೆನು. ಸುಫಲೇ, ನೀನೂ ಎಚ್ಚರದಿಂದ ಇರು. ನಾವು ನಿಶ್ಚಯಿಸಿದ ಲಗ್ನಕ್ಕೆ ಏನಾದರೂ ತೊಂದರೆಯುಂಟುಮಾಡಿದರೆ, ಸಜ್ಜನರಾಯನಿಗಾದ ಗತಿಯೇ ನಿನಗೂ ಆದೀತು!

ಹೊತ್ತು ಮುಣುಗಿತು, ನಾಲ್ಕುತಾಸು ರಾತ್ರಿಯಾಯಿತು. ಸುಫಲಾದೇವಿಯು ವಿಜಯೆಯನ್ನು ಕರಕೊಂಡು ಆಕೆಗೆ ಬಂದಿದ್ದ ವಿಪತ್ತನ್ನು ದೂರಮಾಡುವದಕ್ಕಾಗಿ ಸಜ್ಜನರಾಯನ ಕಾರಾಗ್ರಹದ ಕಡೆಗೆ ಸಾಗಿದಳು! ಆಕೆಯು ಪ್ರಧಾನ ಸಜ್ಜನರಾಯನನ್ನೂ, ಆ ಸ್ವಾಭಿಮಾನಿ ನಾಗರಿಕನಾದ ದಳಪತರಾಯನನ್ನೂ ಸೆರೆಯಲ್ಲಿರಿಸಿರುವ ಮನೆಯ ಬೀಗವನ್ನು ಸಾವಕಾಶವಾಗಿ ತೆಗೆದು, ಸೆರೆಮನೆಯ ಬಾಗಿಲನ್ನು ಪೂರಾ ತೆರೆದುಬಿಟ್ಟಳು. ಸಂಗಡ ಬಂದಿದ್ದ ವಿಜಯೆಯನ್ನು ಹೊರಗೆ ನಿಲ್ಲಿಸಿ ತಾನೊಬ್ಬಳೇ ಕೋಣೆಯನ್ನು ಹೊಕ್ಕಳು. ಪ್ರಧಾನನೂ, ದಳಪತರಾಯನೂ ಸುಖದಿಂದ ನಿದ್ದೆ ಮಾಡುತ್ತಿರುವದನ್ನು ನೋಡಿ ಅವರ ಮನೋಧೈರ್ಯಕ್ಕಾಗಿ ಆಕೆಗೆ ಆಶ್ಚರ್ಯವಾಯಿತು. ಸುಫಲಾದೇವಿಯು ಗಂಭೀರಸ್ವರದಿಂದ—''ಸಜ್ಜನರಾಯ, ಎಚ್ಚರಾಗಿರಿ ಎಚ್ಚರಾಗಿರಿ, ಆ ತರುಣನನ್ನು ಎಬ್ಬಿಸಿರಿ'' ಎಂದು ನುಡಿಯಲು, ಸಜ್ಜನರಾಯನು ಗಡಬಡಿಸಿ ಎಚ್ಚತ್ತು ದನಿಯಮೇಲಿಂದ, ಬಂದವರು ರಾಣೇಸುಫಲಾದೇವಿಯರೆಂದು ತಿಳಿದು ತರುಣನನ್ನು ಎಬ್ಬಿಸುತ್ತ–

ಸಜ್ಜನರಾಯ — ಯಾರು? ರಾಣೇಸುಫಲಾದೇವೀ, ನೀವು ಇಷ್ಟು ರಾತ್ರಿಯಲ್ಲಿ ಇಲ್ಲಿಗೆ ಏಕೆಬಂದಿರಿ? ಕಾರಾಗ್ರಹದಲ್ಲಿ ಪರಾಧೀನನಾಗಿ ಬಿದ್ದಿರುವ ಸಜ್ಜನರಾಯನು ನಿಮ್ಮ ಯಾವ ಸೇವೆಯನ್ನು ಮಾಡಲು ಸಮರ್ಥನಾದಾನು?

ಸುಫಲಾದೇವಿ — ಸಜ್ಜನರಾಯ, ಧಾರೀರದ ರಾಜ ಮನೆತನವನ್ನೂ, ರಾಜಸಿಂಹಾಸನ ವನ್ನೂ ನಿಷ್ಕಲಂಕವಾಗಿರಿಸುವದಕ್ಕಾಗಿ ನಾವು ಕಪಟಕಾರ ಸ್ಥಾನವನ್ನು ಕೈಕೊಳ್ಳದಿದ್ದರೆ ನಿರ್ವಾಹವಿಲ್ಲ,

ಸಜ್ಜನರಾಯ—(ಆಶ್ಚರ್ಯದಿಂದ) ಏನು? ರಾಜಾ ಕಂಚುಕಿರಾಯರವರು ನಿಮ್ಮ ಪ್ರಾರ್ಥನೆಯನ್ನು ಮನ್ನಿಸಲಿಲ್ಲವೇ? ತಮ್ಮ ಹಟವನ್ನೇ ನಡಿಸಬೇಕೆಂದಿರುವರೇ?

ಸುಫಲಾದೇವಿ—ನಿಮ್ಮ ರಾಜರ ನಿಶ್ಚಯವು ಚಲಿಸುವ ಹಾಗಿಲ್ಲ. ''ಏನುಬೇಕಾದದ್ದಾಗಲಿ–ಮಾನ ಹೋಗಲಿ, ಪೂರ್ವಜರಿಂದ ಸಹಿತವಾಗಿ ತಾವು ನರಕಕ್ಕಿಳಿಯಲಿ, ತಮ್ಮ ನಾಶವಾಗಲಿ ವಿಜಯೆಯ ಲಗ್ನವನ್ನು ರಣದುಲ್ಲಾಖಾನನೊಡನೆ ಮಾಡಿದರೆಯೇ ನಾನು ನಿಜವಾದ ಸಾಮ್ರಾಜ್ಯಭಕ್ತನು'' ಎಂಬ ಪ್ರತಿಜ್ಞೆಯ ಜಪವನ್ನು ಒಂದೇಸವನೆ ಮಾಡುತ್ತಿರುವರು!

ಸಜ್ಜನರಾಯ—(ಗಂಭೀರ ಮುದ್ರೆಯಿಂದ) ಸದ್ಯದ ಆಪತ್ತಿನಿಂದ ಪಾರಾಗುವದಕ್ಕಾಗಿ ರಾಣೀ ಸುಫಲಾದೇವಿಯವರು ಯಾವ ಯುಕ್ತಿಯನ್ನು ಸೂಚಿಸುತ್ತಿರುವರು? ಅದನ್ನು ಸಿದ್ಧಿಗೊಯ್ಯುವದಕ್ಕಾಗಿ ನಾನು ನನ್ನ ಪ್ರಾಣವನ್ನೂ ಲಕ್ಷಿಸಲಾರೆನು.

ಸುಫಲಾದೇವಿ—ಆ ಮಾತು ನನಗೆ ಗೊತ್ತಿರುವದರಿಂದಲೇ ನಾನು ನಿಮ್ಮ ಬಳಿಗೆ ಬಂದಿರುವೆನು. ಪ್ರಧಾನಜೀ, ನೀವು ಈ ಕಾರಾಗ್ರಹವಾಸವನ್ನು ಬಿಟ್ಟು ಈಗಿಂದೀಗಲೇ ಓರಛಾದ ಹಾದಿಯನ್ನು ಹಿಡಿಯಿರಿ. ರಾಜಕುಮಾರಿ ವಿಜಯೆಯು ನಿಮ್ಮ ಸಂಗಡ ಓರಛಾಕ್ಕೆ ಬರುವಳು. ಈ ಕೋಟೆಯಿಂದ ಹೊರಬೀಳುವ ಗುಪ್ತಮಾರ್ಗವು ನಿಮಗೆ ಗೊತ್ತೇ ಇರುತ್ತದೆ. ಆ ಗುಪ್ತಮಾರ್ಗದಿಂದ ನೀವು ಹೊರಬಿದ್ದೆರೆಂದರೆ, ನಿಮ್ಮ ಸಲುವಾಗಿ ಎರಡು ಕುದುರೆಗಳನ್ನು ಹಿಡಿದು ಕೊಂಡಿದ್ದ ಕಿಸನನು ನಿಮ್ಮ ಕಣ್ಣಿಗೆ ಬೀಳಬಹುದು. ನೀವೂ, ವಿಜಯೆಯೂ ಕುದುರೆಗಳನ್ನು ಹತ್ತಿಕೊಂಡು ಒಮ್ಮೆಲೆ ಓರಛಾದ ಹಾದಿಯನ್ನು ಹಿಡಿಯಿರಿ.

ಸಜ್ಜನರಾಯ—(ನಡುವೆ ಬಾಯಿಹಾಕಿ) ಓರಛಾಕ್ಕೆ ಹೋಗಿ ರಾಣಿಹೀರಾದೇವಿಯ ಆಶ್ರಯದಲ್ಲಿ ರಾಜಕುಮಾರಿಯನ್ನು ಇಡಬೇಕೆಂದು ನಿಮ್ಮ ಮನಸ್ಸಿನಲ್ಲಿ ಇರುವದೇನು? ಹಾಗಿದ್ದರೆ ನಿಮ್ಮ ಯುಕ್ತಿಯು ಸಫಲವಾಗಲಾರದು; ಯಾಕಂದರೆ ಹೀರಾದೇವಿ–

ಸುಫಲಾದೇವಿ — ಸಜ್ಜನರಾಯ, ನಾನು ಹೇಳುವದನ್ನು ಪೂರ್ಣವಾಗಿ ಕೇಳಿಕೊಳ್ಳಿರಿ. ನೀವು ವಿಜಯೆಯೊಡನೆ ಹೀರಾದೇವಿಯ ಕಡೆಗೆ ಹೋಗಬೇಕು. ನಾನು ಧಾರೀರದ ಅರಸನ ಕಡೆಯಿಂದ ಬಂದಿರುವೆನೆಂದು ಪ್ರಸಿದ್ಧಮಾಡಿರಿ. ರಾಣೀಹೀರಾದೇವಿಗೆ ನಿಮ್ಮ ಗುರುತು ಇರುವದು. ಆಕೆಯು ನಿಮ್ಮ ಆದರ ಸತ್ಕಾರವನ್ನು ಮಾಡದೆ ಇರಲಾರಳು. ರಾಣೀ ಹೀರಾದೇವಿಯನ್ನು ಏಕಾಂತದಲ್ಲಿ ಕಂಡು ಆಕೆಗೆ—''ಸುಫಲಾದೇವಿಯು ವಿಜಯೆಯನ್ನು ಛತ್ರಸಾಲನಿಗೆ ಕೊಡುವದನ್ನು ನಿಶ್ಚಯಿಸಿ, ಧಾರೀರದ ರಾಜ್ಯವನ್ನು ಛತ್ರಸಾಲನಿಗೆ ಕೊಡಬೇಕೆಂದು ಮಾಡಿರುವಳು; ಆದ್ದರಿಂದ ಕಂಚುಕಿರಾಯರು ವಿಜಯೆಯನ್ನು ನನ್ನ ಸಂಗಡ ಕಳಿಸಿಕೊಟ್ಟಿದ್ದಾರೆ; ನೀವು ಆದಷ್ಟು ಬೇಗನೆ ವಿಜಯೆಯ ಲಗ್ನವನ್ನು, ಯುವರಾಜ ವಿಮಲದೇವನ ಸಂಗಡ ಮಾಡಿಬಿಡ ಬೇಕು; ಅಂದರೆ ಧಾರೀರದ ಮೇಲಿನ ವಿಪತ್ತು ದೂರವಾಗಿ, ಛತ್ರಸಾಲನು ಕಂಗಾಲನಾಗಿಯೇ ಅಡವಡವಿ ತಿರುಗುತ್ತಿರುವನು'' ಎಂದು ಹೇಳಿರಿ. ಛತ್ರಸಾಲನನ್ನು ದ್ವೇಷಿಸುತ್ತಿರುವ ಹೀರಾದೇವಿಗೆ ನಿಮ್ಮ ಮಾತು ಒಪ್ಪಿಗೆಯಾಗಿ, ಬೇಗನೆ ಲಗ್ನ ಸಮಾರಂಭಕ್ಕೆ ಆಕೆಯು ಒಪ್ಪಿಕೊಳ್ಳುವಳು. ಛತ್ರಸಾಲನ ಕಡೆಯವರಾಗಲಿ, ಹೀರಾದೇವಿಯ ಕಡೆಯವರಾಗಲಿ ಲಗ್ನಕ್ಕೆ ವಿಘ್ನಮಾಡ ಬಹುದಾದುದರಿಂದ, ಆದಷ್ಟು ಗುಪ್ತರೀತಿಯಿಂದ ಮೊದಲನೆಯ ಲಗ್ನ ಮುಹೂರ್ತಕ್ಕೇ ಲಗ್ನ ಮಾಡಿಬಿಡೆಂದು ಹೇಳಿರಿ.

ಸುಫಲಾದೇವಿಯ ಮಾತು ಮುಗಿದರೂ ಸಜ್ಜನರಾಯನ ಬಾಯಿಂದ ಮಾತುಗಳು ಹೊರಡದಾದವು. ವಿಚಾರಮಗ್ನ ಸ್ಥಿತಿಯಲ್ಲಿ ಚಿತ್ರದೊಳಗಿನ ಗೊಂಬೆಯಂತೆ ಆತನು ನಿಂತುಬಿಟ್ಟನು. ಇದನ್ನು ನೋಡಿ ರಾಣೀ ಸುಫಲಾದೇವಿಯು ಮತ್ತೆ ಸಜ್ಜನರಾಯನನ್ನು ಕುರಿತು—''ನಾನು ಹೇಳಿದ ಯುಕ್ತಿಯು ನಿಮ್ಮ ಮನಸ್ಸಿಗೆ ಬರಲಿಲ್ಲವೇನು? ತನ್ನ ಕಪಟ ಪ್ರಬಂಧವು ನಿಮಗೆ ಯೋಗ್ಯವಾಗಿ ತೋರೊಲ್ಲದೇನು? ಲಕ್ಷಾವಧಿ ಜನರ ಕಲ್ಯಾಣಕ್ಕಾಗಿರಲೊ ಎರಡುಮಾತು ಸುಳ್ಳು ಆಡಲಿಕ್ಕೆ ನಿಮಗೆ ಅಂಜಿಕೆಬರುವದೇನು? ಸ್ವಾಮಿಯು ತಾನಾಗಿ ತನ್ನಮೇಲೆ ವಿಪತ್ತು ತಂದುಕೊಂಡಿರುವಾಗ, ಅದನ್ನು ದೂರಮಾಡುವದಕ್ಕಾಗಿ ಸ್ವಾಮಿಯೊಡನೆ ಕಪಟವನ್ನು ಆಚರಿಸಲಿಕ್ಕೆ ನಿಮ್ಮ ಸ್ವಾಮಿ ಭಕ್ತಿಗೆ ಸಹನವಾಗಲೊಲ್ಲದೇನು? ನಾನಾದರೂ ಏನುಮಾಡಲಿ? ವಿಜಯೆಯನ್ನು ರಕ್ಷಿಸಲಿಕ್ಕೆ, ಧಾರೀರದ ಪ್ರಜೆಗಳ ಆಪತ್ತನ್ನು ದೂರಮಾಡಲಿಕ್ಕೆ ನನಗೆ ಬೇರೆ ಉಪಾಯವು ತೋರಲೊಲ್ಲದು; ಅದರಿಂದ ನಾನು ಪ್ರಾಣನಾಥರೊಡನೆ ಕಪಟವನ್ನು ಆಚರಿಸಬೇಕಾಗಿರುವದು. ಸಜ್ಜನರಾಯ, ನಾಳೆ ಧಾರೀರದ ಅರಮನೆಯಿಂದ ಹೊರಡುವ ಸಾಂಡಣಿಯ ಸವಾರನು ರಣದುಲ್ಲಾಖಾನನ ಕಡೆಗೆ ಹೋಗದಂತೆ ವ್ಯವಸ್ಥೆ ಮಾಡಿರುವೆನು. ಇನ್ನು ಮೇಲೆ ರಣದುಲ್ಲಾಖಾನನ ಕಡೆಗೆ ಹೋಗುವ ಪ್ರಾಣನಾಥರ ಪತ್ರಗಳು ಮೊದಲು ನನ್ನ ಕಡೆಗೆ ಬರುವವು. ಅದರಂತೆ ರಣದುಲ್ಲಾಖಾನನಿಂದ ಬರುವ ಯಾವದೊಂದು ಪತ್ರವು ನನ್ನ ಕಡೆಗೆ ಮೊದಲು ಬಾರದೆ ಇರುವಹಾಗಿಲ್ಲ. ನಾಳಿನಿಂದ ಈ ಸುಫಲಾದೇವಿಯು ವಿಜಯಾ-ರಣದುಲ್ಲಾಖಾನರ ವಿವಾಹದ ವಿಷಯದಲ್ಲಿ ಸಮ್ಮತಿಯನ್ನು ಪ್ರಕಟಿಸುತ್ತ ಹೋಗುವಳು! ನಿಜವಾದ ವಿಜಯೆಯು ಓರಛಾದಲ್ಲಿ ವಿಮಲದೇವನೊಡನೆ ವಿವಾಹಬದ್ಧ ಳಾಗುತ್ತಿರುವಾಗ, ಮೋಸದ ವಿಜಯೆಯು ರಣದುಲ್ಲಾಖಾನನ ಭಾವೀ ಪತ್ನಿಯೆಂದು ಬುರುಕೆ ಯಿಂದ ಮೋರೆಯನ್ನು ಪೂರಾಮುಚ್ಚಿಕೊಂಡು, ಧಾರೀರದ ಅರಮನೆಯಲ್ಲಿ ಆನಂದದಿಂದ ಸಂಚರಿಸತೊಡಗುವಳು.

ಸಜ್ಜನರಾಯ-ಸುಫಲಾದೇವೀ, ಮಧುರ ಫಲಗಳನ್ನು ಉತ್ಪನ್ನಮಾಡಲಿಕ್ಕೆ ಎಷ್ಟೋಸಾರೆ ಗಿಡಗಳಿಗೆ ಹೊಲಸು ಗೊಬ್ಬರವನ್ನು ಹಾಕಬೇಕಾಗುತ್ತದೆ. ಅದರಂತೆಯೇ ಅತ್ಯಂತ ನ್ಯಾಯವೂ, ಪವಿತ್ರವೂ, ಸತ್ಯವೂ ಆದ ಪಕ್ಷವನ್ನು ಜಯಶಾಲಿಯಾಗ ಮಾಡುವದಕ್ಕಾಗಿ ಅಸತ್ಯರೂಪವಾದ ಗೊಬ್ಬರವನ್ನು ಒಮ್ಮೊಮ್ಮೆ ಸ್ಪರ್ಶಮಾಡಬೇಕಾಗುತ್ತದೆ. ಸದ್ಯದ ಪ್ರಸಂಗವು ಅಂತಹದೇ ಇರುತ್ತದೆ. ರಾಣೀ, ನೀವು ಒಪ್ಪಿಸುವ ಕೆಲಸವನ್ನು ನಾನು ಮನಃಪೂರ್ವಕವಾಗಿ ಮಾಡಲು ಒಪ್ಪಿಕೊಳ್ಳು ತ್ತೇನೆ; ಆದರೆ ನಿನ್ನೆ ನೀವು ಹೇಳಿದಂತೆ ಮಹೋಬದ ಛತ್ರಸಾಲನು ಧಾರೀರದ ಸಿಂಹಾಸನವೇರುವ ಯೋಗವು ಇದರಿಂದ ತಪ್ಪಿಹೋಗುತ್ತದಲ್ಲ? ವಿಜಯೆಯು ವಿಮಲದೇವನ ಕೊರಳಲ್ಲಿ ಮಾಲೆ ಹಾಕಿದಕೂಡಲೇ ಹೀರಾದೇವಿಯ ಕ್ರೂರತನದ ಆಳಿಕೆಗೆ ಧಾರೀರದ ಸಂಸ್ಥಾನವು ಒಳಪಡ ಬೇಕಾಗುವದು!

ಸುಫಲಾದೇವಿ-ಸಜ್ಜನರಾಯ, ಹೀಗೆ ಚಿಂತೆಗೊಳಗಾಗಬೇಡಿರಿ. ಇಲ್ಲಿಯ ರಾಜ ಸಿಂಹಾಸನದ ಮೇಲೆ ಛತ್ರಸಾಲನೇ ಕುಳಿತುಕೊಳ್ಳುವನು.

ಈ ಮೇರೆಗೆ ನುಡಿದು ಸುಫಲಾದೇವಿಯು ಒಂದು ಲಕ್ಕೋಟಿಯನ್ನು ಉಡಿಯೊಳಗಿಂದ ತೆಗೆದು ತೇಜಸ್ವಿಯಾದ ದಳಪತರಾಯನನ್ನು ಕುರಿತು–ದಳಪತರಾಯ, ನಿನ್ನೆ ನೀನು ಮಾತಾಡಿದಾಗಲೇ ನಿನ್ನ ಗುರುತು ನನಗೆ ಆಗಿರುತ್ತದೆ. ನೀನು ಈ ಲಕ್ಕೋಟಿಯನ್ನು ಬುಂದೇಲ ಖಂಡದಲ್ಲಿರುವ ಪ್ರಾಣನಾಥ ಪ್ರಭುಗಳಿಗೆ ಮುಟ್ಟಿಸು. ಅವರು ಆದಷ್ಟು ಬೇಗನೆ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಯತ್ನಿಸಲಿಕ್ಕೆ ಛತ್ರಸಾಲನನ್ನು ಆಜ್ಞಾಪಿಸುವರು.

ಸಜ್ಜನರಾಯ—(ನಿಟ್ಟುಸಿರುಬಿಟ್ಟು) ಈ ರೀತಿಯಿಂದ ಸ್ವಾತಂತ್ರ್ಯವನ್ನು ಸಂಪಾದಿಸಿದ ಬಳಿಕ ಛತ್ರಸಾಲನು ಇಲ್ಲಿ ಬರುವವನೇನು? ರಾಣೀ, ಬುಂದೇಲಖಂಡಕ್ಕೆ ಸ್ವಾತಂತ್ರ್ಯವು ಅಲ್ಪ ಕಾಲದಲ್ಲಿ ದೊರೆಯಲಾರದು. ರಾಣೀಹೀರಾದೇವಿಯ ಅಧಿಕಾರವು ಧಾರೀರದಮೇಲೆ ನಡೆಯತೊಡಗುವದು.

ಸುಫಲಾದೇವಿ—ರಣದುಲ್ಲಾಖಾನನ, ಅಥವಾ ಆ ದುಷ್ಟ ಹೀರಾದೇವಿಯ ಸಂಬಂಧವು ಧಾರಿರದ ಸಂಸ್ಥಾನಕ್ಕೇನಿರುವದು? ರಾಜಾವಿಮಲದೇವನೊಡನೆ ಆಗುವ ವಿಜಯೆಯ ಲಗ್ನವು ಕೇವಲ ನಾಟಕವಾಗಿರುವದು.

ಸಜ್ಜನರಾಯ—(ಆಶ್ಚರ್ಯದಿಂದ) ವಿಮಲದೇವನೊಡನೆ ವಿಜಯೆಯ ಸಶಾಸ್ತ್ರ ವಿವಾಹವಾದ ಬಳಿಕ, ವಿಜಯೆಯು ತಿರುಗಿ ಛತ್ರಸಾಲನ ಹೆಂಡತಿಯಾಗುವ ಬಗೆಯೇನು?

ಸುಫಲಾದೇವಿ—ಸಜ್ಜನರಾಯ, ಅದನ್ನು ಸ್ಪಷ್ಟವಾಗಿ ಹೇಳುವೆನು ಕೇಳಿರಿ. ಓರಛಾದ ಯುವರಾಜನಾದ ವಿಮಲದೇವನು ಪುರುಷನಲ್ಲ, ಸ್ತ್ರೀಯು. ತನಗೆ ಗಂಡುಮಕ್ಕಳಿಲ್ಲದ್ದರಿಂದ ತನ್ನ ಪಶ್ಚಾತ್ ತನ್ನ ರಾಜ್ಯವು ಮಹೋಬದ ಅರಸುಮನೆತನಕ್ಕೆ ಸೇರುವದೆಂಬ ಹೊಟ್ಟೇ ಕಿಚ್ಚಿನಿಂದ ಹೀರಾದೇವಿಯು ಹೆಣ್ಣು ಹುಡುಗಿಗೆ ಗಂಡುವೇಷ ಹಾಕಿ ಆಕೆಗೆ ವಿಮಲದೇವನೆಂಬ ಹೆಸರನ್ನು ಇಟ್ಟು ಈವರೆಗೆ ಆತನನ್ನು ಯುವರಾಜನನ್ನಾಗಿ ನಡಿಸಿಕೊಳ್ಳುತ್ತ ಬಂದಿರುವಳು. ವಿಮಲದೇವನ ಪಟ್ಟಾಭಿಷೇಕ ಸಮಾರಂಭವನ್ನು ಹೀರಾದೇವಿಯು ಬೇಗನೆ ಮಾಡುವವಳಿದ್ದಾಳೆ. ಅಷ್ಟರಲ್ಲಿ ಈ ಲಗ್ನದ ಕೆಲಸವನ್ನು ತೀರಿಸಿಬಿಡಿರಿ.

ಸುಫಲಾದೇವಿಯ ಈ ಮಾತುಗಳನ್ನು ಕೇಳಿ ಸಜ್ಜನರಾಯನ ಮುಖದಲ್ಲಿ ಆನಂದಾಶ್ಚರ್ಯಗಳ ಕಳೆಯು ಉಕ್ಕಹತ್ತಿದ್ದು, ವಿಜಯೆಯೊಡನೆ ಆತನು ಓರಛಾದ ಹಾದಿಯನ್ನು ಹಿಡಿದು ಸಾಗಹತ್ತಿದರೂ ಅದು ಹಾಗೆಯೇ ಉಕ್ಕುತ್ತಲೇ ಇತ್ತು! ಆತನು ತನ್ನನ್ನು ಹಿಂಬಾಲಿಸಿ ಬರುತ್ತಿರುವ ವಿಜಯೆಯನ್ನು ಕುರಿತು–ಕುಮಾರೀ, ವಿಮಲದೇವನ ಪುರುಷವೇಷದ ಸಂಗತಿಯು ರಾಣಿಯವರಿಗೆ ಹೇಗೆ ಗೊತ್ತಾಯಿತು?

ವಿಜಯೆ–ವಿಮಲದೇವನ ಸಹವಾಸದಲ್ಲಿ ನಾನು ಬಹಳ ದಿವಸಗಳನ್ನು ಕಳೆದಿರುವೆನು. ಆಗ ಆತನ ಸೋಗು ನನಗೆ ಗೊತ್ತಾಗಿ, ಆ ಮಾತನ್ನು ನಾನೇ ಅವ್ವನಿಗೆ ಹೇಳಿರುತ್ತೇನೆ.

ಇತ್ತ ಸುಫಲಾದೇವಿಯು ತನ್ನ ಪತಿಯಾದ ಕಂಚುಕಿರಾಯನಿಗೆ ವಿಜಯಾ–ರಣದುಲ್ಲಾ ಖಾನರ ವಿವಾಹವು ತನಗೆ ಸಮ್ಮತವಾಗಿರುವದೆಂದು ಹೇಳಿದಳು. ಆಗ ಅರಸನಿಗಾದ ಆನಂದವನ್ನು ವರ್ಣಿಸಲಾಸಲ್ಲ. ಆತನು ಲಗ್ನದ ಸಿದ್ಧತೆಯಲ್ಲಿ ತೊಡಗಿದನು; ಆದರೆ ಲಗ್ನದ

ತಿಥಿಯ ಸುದ್ದಿಯು ಇನ್ನೂ ಸ್ವತಃ ವರನಿಗೇ ಗೊತ್ತಾಗಿದ್ದಿಲ್ಲ; ಖಾನನ ಹೆಂಡತಿಯಾಗ ಬೇಕಾಗಿರುವ ಸುಫಲಾದೇವಿಯ ದಾಸಿಯು ಬುರುಕೆಯಿಂದ ಸರ್ವಾಂಗವನ್ನು ಮುಚ್ಚಿಕೊಂಡು ಮನೆಯಲ್ಲಿ ಓಡಾಡಹತ್ತಿದಳು! ಪಾಪ! ಬಡ ಕಂಚುಕಿರಾಯನು!

## ಸತ್ವದಪ್ರಭಾವ

ಅನಂತವಿಶ್ವದಲ್ಲಿ ಭಗವಾನ್ ಸೂರ್ಯನಾರಾಯಣನು ಪ್ರಕಾಶಿಸುವಂತೆ, ಬುಂದೇಲ ಖಂಡದ ಅಸಂಖ್ಯ ಜನರಲ್ಲಿ ಪ್ರಾಣನಾಥ ಪ್ರಭುಗಳು ತಮ್ಮ ಅಲೌಕಿಕ ತೇಜದಿಂದ ಪ್ರಕಾಶಿಸು ತ್ತಿದ್ದರು. ರಣದುಲ್ಲಾಖಾನನು ಓರಛಾದ ಮುಲಾಖತ್ ದಿವಾಣಖಾನೆಯಲ್ಲಿ ಕುಳಿತು ಬುಂದೇಲಖಂಡದ ನಾಗರಿಕರಿಗೆ—''ಇಂದು ಮಧ್ಯಾಹ್ನದಲ್ಲಿ ಚತುರ್ಭುಜನ ಮಂದಿರವು ನೆಲಸಮವಾಗಿ, ನಾಳೆ ಬೆಳಗಾಗುತ್ತಲೇ ಪಟ್ಟಣದೊಳಗಿನ ಗುಡಿಗಳೆಲ್ಲ ನೆಲಸಮವಾಗುವವು. ಆ ಮೇಲೆ ಆ ಗುಡಿಗಳ ಅಸ್ತಿವಾರದ ಮೇಲೆ ಸುಂದರ ಮಸೀದೆಗಳನ್ನು ಕಟ್ಟುವ ಕೆಲಸವು ಆರಂಭವಾಗುವದು.'' ಎಂಬ ಅಪಮಾನಕಾರಕ ಅಪ್ಪಣೆಯನ್ನು ಕಳಿಸಿದ್ದನು. ಅದನ್ನು ಕೇಳಿದ ಕೂಡಲೇ ನಾಗರಿಕರಿಗೆ ಪರಮಾವಧಿ ದುಃಖವಾಯಿತು. ಅವರು ಸಂತಾಪದಿಂದ ಯವನರ ಜುಲುಮೆಯ ಅಧಿಕಾರವನ್ನು ಶಪಿಸಹತ್ತಿದರು; ಆದರೆ ಚತುರ್ಭುಜನ ಮಂದಿರವನ್ನು ಉಳಿಸಿಕೊಳ್ಳುವ ಉಪಾಯವು ಅವರಿಗೆ ತೋಚಲೊಲ್ಲದು. ಅವರಿಗೆ ಅಸಹ್ಯದುಃಖವಾಯಿತು! ಮುಖ್ಯರಾದವರು ಅತ್ಯಂತ ಪ್ರಯಾಸದಿಂದ ಹೀರಾದೇವಿಯನ್ನು ಕಂಡು, ರಣದುಲ್ಲಾಖಾನನು ನಡಿಸುವ ಅನರ್ಥವನ್ನು ಹೇಳಿ, ಚತುರ್ಭುಜ ಪರಮಾತ್ಮ ದೇವಾಲಯವನ್ನಷ್ಟು ಹೇಗಾದರೂ ಮಾಡಿ ಉಳಿಸಿಕೊಳ್ಳಬೇಕೆಂದು ಪ್ರಾರ್ಥಿಸಿದರು. ಅದಕ್ಕೆ ಹೀರಾದೇವಿಯು —''ಸದ್ಯಕ್ಕೆ ನಾನು ಲಗ್ನ ಸಮಾರಂಭದಲ್ಲಿ ತೊಡಗಿದ್ದೇನೆ; ಮೇಲಾಗಿ ದಿಲ್ಲೀಪತಿಯ ವಿಚಾರಕ್ಕೆ ವಿರುದ್ಧವಾಗಿ ಹೋಗುವದು ಅನ್ಯಾಯವು! ಅದರಿಂದ ನೀವು ಯಾವ ಉಸಾಬರಿಗೂ ಹೋಗಬೇಡಿರಿ. ರಣದುಲ್ಲಾಖಾನನು ಒಂದು ಗುಡಿಯನ್ನು ಕೆಡವಿದರೆ, ನಾವು ಐದು ಗುಡಿಗಳನ್ನು ಕಟ್ಟಿಸಿ ಕೊಡುವೆವು.'' ಎಂದು ಅಭಯವನ್ನಿತ್ತು, ನಾಗರಿಕರನ್ನು ಕಳಿಸಿಕೊಟ್ಟಳು. ಅದರಿಂದಂತು ಓರಛಾದ ನಾಗರಿಕರ ನಿರಾಶೆಗೆ ಮೇರೆಯಿಲ್ಲದಾಯಿತು. ತಮಗೆ ಸಹಾಯಮಾಡುವಂತಹ ಯೋಗ್ಯ ಮಾರ್ಗದರ್ಶಕನು ಅವರಿಗೆ ತೋರದಾದನು. ಸೂರ್ಯೋದಯದಿಂದಲೇ ಜನರು ಗುಂಪುಗುಂಪಾಗಿ ಚತುರ್ಭುಜ ಪರಮಾತ್ಮನ ಕಟ್ಟಕಡೆಯ ದರ್ಶನವನ್ನು ತಕ್ಕೊಳ್ಳುವದಕ್ಕಾಗಿ ಆತನ ಮಂದಿರದ ಕಡೆಗೆ ಸಾಗುತ್ತಲಿದ್ದರು. ದುಃಖದ ಧ್ವನಿಗಳೂ, ಸಂತಾಪದ ಶಾಪಧ್ವನಿಗಳೂ ಪಟ್ಟಣದ ತುಂಬ ಕೇಳಿಸುತ್ತಲಿದ್ದವು. ಮಧ್ಯಾಹ್ನವಾದರೂ ನಾಗರಿಕರಲ್ಲಿ ಒಂದು ಪಿಳ್ಳೆಯೂ ಅನ್ನ ನೀರುಗಳನ್ನು ಮುಟ್ಟಿದ್ದಿಲ್ಲ. ಅಷ್ಟರಲ್ಲಿ ಪ್ರಾಣನಾಥ ಪ್ರಭುಗಳು ಶ್ರೀ ಚತುರ್ಭುಜ ಪರಮಾತ್ಮನ ಮಂದಿರದಲ್ಲಿ ಬಂದಿರುವರೆಂಬದನ್ನು ಕೇಳಿದ ಬಳಿಕಂತು, ಜನರ ಗುಂಪುಗಳು

ತೆರಪಿಲ್ಲದೆ ಗುಡಿಯ ಕಡೆಗೆ ಸಾಗಹತ್ತಿದವು. ಓರಭಾದ ಪ್ರತಿ ಒಬ್ಬ ನಾಗರೀಕನು ಪ್ರಭುಗಳಿಂದ ಚತುರ್ಭುಜನ ಮೂರ್ತಿಯ ಸಂರಕ್ಷಣವಾಗುವದೆಂದು ತಿಳಿದುಕೊಳ್ಳಹತ್ತಿದನು.

ಪ್ರಾಣನಾಥ ಪ್ರಭುಗಳು ಉಚ್ಚವಾದ ಆಸನದ ಮೇಲೆ ನಿಂತುಕೊಂಡು, ಉನ್ನತಸ್ವರ ದಿಂದ ನಾಗರಿಕರನ್ನು ಕುರಿತು ನುಡಿಯತೊಡಗಿದರೇನಂದರೆ—''ಸಜ್ಜನರೇ, ಚಂಪತರಾಯನು ಮರಣಹೊಂದಿದ ಬಳಿಕ ಜನರ ಮನಸ್ಸಿನಲ್ಲಿ ಸ್ವಾತಂತ್ರ್ಯಪ್ರೇಮದ ಬೀಜವನ್ನು ಬಿತ್ತಬೇಕೆಂದು ಬುಂದೇಲಖಂಡದಲ್ಲೆಲ್ಲ ನಾನು ಪ್ರವಾಸಮಾಡುತ್ತಿರುವೆನು. ಈ ಕೆಲಸವು ಬಹು ದಿವಸಕ್ಕೆ ಮೆಲ್ಲ ಮೆಲ್ಲನೆ ಆಗಬಹುದೆಂದು ನಾನು ತಿಳಿದಿದ್ದೆನು; ಆದರೆ ಅನುಭವದಿಂದ ಸ್ವಾತಂತ್ರ್ಯಪ್ರಾಪ್ತಿಯು ಬಹುಬೇಗನೆ ಆಗುವದೆಂದು ನನಗೆ ತೋರಹತ್ತಿರುವದು! ಪ್ರತಿ ಒಬ್ಬನಿಗೆ ಸ್ವಾತಂತ್ರ್ಯದ ಪ್ರೀತಿಯು ಇರುತ್ತದೆಂಬ ಮಾತು ನನಗೆ ಗೊತ್ತಾಯಿತು; ಆದರೆ ಸ್ವಾತಂತ್ರ್ಯದ ಗುರುತು ಮಾತ್ರ ಬಹು ಸ್ವಲ್ಪ ಜನರಿಗಿರುವದು. ''ತಮ್ಮ ಧರ್ಮದ ಪರಿಪಾಲನವು ಉತ್ತಮ ರೀತಿಯಿಂದ ಆಗಬೇಕು, ತಮ್ಮ ತೀರ್ಥಕ್ಷೇತ್ರಗಳ, ಹಾಗು ತಮ್ಮ ಧಾರ್ಮಿಕ ತಿಳುವಳಿಕೆಗಳ ಪಾವಿತ್ರ್ಯವು ಸುರಕ್ಷಿತವಾಗಿರಬೇಕು, ತಮ್ಮ ಮೇಲೆ ಅನ್ಯಾಯದ ಕರಕಂದಾಯಗಳ ಭಾರವು ಹೇರಬಾರದು, ತಾವು ಕರ–ಕಂದಾಯಗಳ ರೂಪದಿಂದ ಕೊಡುವ ಹಣದ ಉಪಯೋಗವು ತಮ್ಮ ಹಿತಕ್ಕಾಗಿಯೇ ಆಗುತ್ತಿರಬೇಕು, ರಾಜ್ಯ ಕಾರಭಾರದಲ್ಲಿ ಸಹಾಯಮಾಡುವ ಹಾದಿಯು ತಮಗೆ ತೆರೆದಿರಬೇಕು, ತಮ್ಮ ಮೇಲೆ ಯಾರೂ ಒತ್ತಾಯಮಾಡಬಾರದು'' ಎಂಬಿವೇ ಮೊದಲಾದ ಸದಿಚ್ಛಗಳು ಇಡಿಯ ಬುಂದೇಲಖಂಡಕ್ಕೇ ಇರುತ್ತವೆ; ಆದರೆ ಇಂತಹ ಇಚ್ಛೆಗಳು ಸ್ವಾತಂತ್ರ್ಯವಿರದಿದ್ದರೆ ಪೂರ್ಣವಾಗವೆಂಬ ಮಾತು ಮಾತ್ರ ಬಹು ಸ್ವಲ್ಪ ಜನರಿಗೆ ಗೊತ್ತಿರುತ್ತದೆ. ಎಲ್ಲ ಜನರು ಸ್ವಾತಂತ್ರ್ಯದ ಫಲದ ಆಶೆ ಹಿಡಿಯುವರು; ಆದರೆ ಆ ಫಲಗಳು ಸ್ವಾತಂತ್ರ್ಯ ವೃಕ್ಷಕ್ಕೆ ಆಗುವವೆಂಬ ಮಾತು ಬಹು ಜನರಿಗೆ ಗೊತ್ತಿರುವದಿಲ್ಲ. ಪಾಪಿಗಳೂ, ಹೊಟ್ಟೆ ಕಿಚ್ಚಿನವರೂ, ಅಹಂಕಾರಿಗಳೂ ಆದ ಜನರು, ಈ ಸ್ವಾತಂತ್ರ್ಯದ ಸುರುಚಿರ ಫಲಗಳು ಪಾರತಂತ್ರ್ಯದ ವೃಕ್ಷಕ್ಕೆ ಬಿಡುವವೆಂದು ಹೇಳಿ, ಜನರನ್ನು ಮೋಸಗೊಳಿಸುತ್ತಿರುವರು. ಆದ್ದರಿಂದ ಸ್ವಾತಂತ್ರ್ಯದ ಫಲವನ್ನು ಇಚ್ಛಿಸುವ ತಿಳುವಳಿಕೆ ಇಲ್ಲದ ಜನರು, ಸ್ವಾತಂತ್ರ್ಯ ವೃಕ್ಷದ ಬೊಡ್ಡೆಗೇ ಕೊಡಲಿಯ ಪೆಟ್ಟು ಹಾಕತೊಡಗುವರು.

ಸಜ್ಜನರೇ, ನಾವು ಯವರನ ಕೈಕಾಲು ಬಿದ್ದರೆ, ನಾವು ಕೈಜೋಡಿಸಿ ಅವರಲ್ಲಿ ಭಿಕ್ಷೆ ಬೇಡಿದರೆ, ನಾವು ತೋರಿಸಬಾರದ ಕ್ಷುದ್ರತನವನ್ನು ಅವರ ಮುಂದೆ ತೋರಿಸಿದರೆ ಈಗ ಚತುರ್ಭುಜ ಪರಮಾತ್ಮನ ಗುಡಿಯ ಸಂರಕ್ಷಣವಾಗಬಹುದೋ? ಅದೇ ನೀವು ಚಂಪತರಾಯನ ಸ್ವಾತಂತ್ರ್ಯ ಪ್ರಾಪ್ತಿಯ ಕಾರ್ಯಕ್ಕೆ ಮನಃಪೂರ್ವಕ ಸಹಾಯಮಾಡಿ, ಸ್ವಾತಂತ್ರ್ಯಕ್ಕಾಗಿ ರಕ್ತಸುರಿಸಿ ಬುಂದೇಲಖಂಡವನ್ನು ಸ್ವತಂತ್ರವಾಗಮಾಡಿದ್ದರೆ, ರಣದುಲ್ಲಾ ಖಾನನಂತಹ ನೀಚರು ಬುಂದೇಲಖಂಡದಲ್ಲಿ ಕಾಲನ್ನಾದರೂ ಇಡುತ್ತಿದ್ದರೋ? ಏನು ಮಾಡಬೇಕು, ಬಹಳ ಹೊತ್ತಿನ ಮೇಲೆ ನೀವು ಎಚ್ಚರಾದಿರಿ, ಬೆಂಕಿಯು ಭುಗಿಭುಗಿಲೆಂದು ಉರಿಯುವವರೆಗೆ ಸುಮ್ಮನಿದ್ದು ಬಿಟ್ಟಿರಿ! ವೀರರೇ, ನಿಮ್ಮನ್ನು ಈಗ ಮುಚ್ಚಿಹಾಕಿರುವ

ಹೇಡಿತನಕ್ಕಾಗಿ ನಿಮಗೆ ನಾಚಿಕೆ ಬರುವದಿಲ್ಲವೆ? ಯಾವ ಪಟ್ಟಣದಲ್ಲಿ ಪ್ರತಾಪಶಾಲಿಯಾದ ರುದ್ರ ಪ್ರತಾಪನು ಸ್ವಾತಂತ್ರ್ಯದೇವಿಯ ಔಪಾಸನೆಯನ್ನು ಮಾಡಿದನೋ, ಅದೇ ಪಟ್ಟಣದಲ್ಲಿ ಅದೇ ರುದ್ರಪ್ರತಾಪನ ಅನುಯಾಯಿಗಳ ವಂಶಜರು ನೀವು, ಹೀಗೆ ಹತಾಶರಾಗಿ ಉಸುರು ಗಳೆಯುತ್ತ ನಿಂತುಕೊಳ್ಳುವ ಪ್ರಸಂಗವು ಬರಬೇಕೇ? ಇನ್ನೊಂದು ಕ್ಷಣದಲ್ಲಿ ಚತುರ್ಭುಜನ ಮಂದಿರದ ನಾಶವಾಗಿ ಚತುರ್ಭುಜನ ಮೂರ್ತಿಯು ಚೂರು ಚೂರು ಆಗಬೇಕಾಗಿರುವದು; ಇನ್ನೊಂದು ಕ್ಷಣದಲ್ಲಿ ಚತುರ್ಭುಜ ಪರಮಾತ್ಮನ ತಲೆಯ ಮೇಲೆ ಪುಷ್ಪಗಳು ಬಿರುವದರ ಬದಲು ಸುತ್ತಿಗೆಗಳ ಹೊಡತಗಳು, ಹಾರಿಯ ಹೊಯ್ತಗಳು, ಗುದ್ದಲಿಯ ಪೆಟ್ಟುಗಳು ಬೀಳುವವು; ಇದನ್ನು ಈಗ ಕಣ್ಣು ಮುಟ್ಟನೋಡಬೇಕಾಗಿರುವದು. ಇದಕ್ಕಿಂತ ಹೀಗೆ ನಿಂತನಿಂತ ಹಾಗಿಯೆ ನಾವು ಸತ್ತು ಹೋಗುವದು ಒಳ್ಳೆಯದಲ್ಲವೆ? ಹೀಗೆ ನುಡಿಯುತ್ತಿರುವಾಗ ಪ್ರಾಣನಾಥ ಪ್ರಭುಗಳ ಕಣ್ಣುಗಳಿಂದ ನೀರುಗಳು ಒಂದೇಸವನೆ ಹೋಗಹತ್ತಿದವು. ಅದನ್ನು ನೋಡುವ ಎಲ್ಲ ಬುಂದೇಲಿಗಳೂ ಕಣ್ಣೀರು ಸುರಿಸುತ್ತ ನಿಂತುಕೊಂಡಿದ್ದರು; ಆ ಮೇರೆಯಿಲ್ಲದ ಬುಂದೇಲಿಗಳ ಸಮುದಾಯದಲ್ಲಿ ಕೆಲವರು ಕ್ರೂರ ಕರ್ಮಿಗಳಿರಬಹುದು; ಕೆಲವರು ಕಪಟಿ ಗಳಿರಬಹುದು; ಕೆಲವರು ಅನೀತಿಯವರಿರಬಹುದು; ಕೆಲವರು ವಿಶ್ವಾಸಘಾತಕಿಗಳಿರಬಹುದು; ಕೆಲವರು ದೇಶದ್ರೋಹಿಗಳಿರಬಹುದು. ಒಟ್ಟಿಗೆ ಸದ್ವರ್ತನದವರಿದ್ದಲ್ಲಿ ದುರ್ವರ್ತನದವರು, ದಯಾಳುಗಳಿದ್ದಲ್ಲಿ ಕ್ರೂರರೂ, ಸಾಧುಗಳಿದ್ದಲ್ಲಿ ಢಾಂಬಿಕರು ಹೀಗೆ ಪರಸ್ಪರ ವಿರೋಧಭಾವದ ಜನರು ಯಾವಾಗಾದರೂ ಇರತಕ್ಕವರೇ! ಆದರೆ ಅಂಥವರೆಲ್ಲರ ಅಂತಃಕರುಣದಲ್ಲಿ ಈ ಧರ್ಮ ಪ್ರೇಮದ ಒಂದೇ ಒಂದು ಜ್ಯೋತಿಯು ಪ್ರಕಾಶಿಸತೊಡಗಿ, ಅವರೆಲ್ಲರು ಕಣ್ಣೀರು ಸುರಿಸ ಹತ್ತಿದ್ದನ್ನು ನೋಡಿ ಪ್ರಾಣನಾಥಪ್ರಭುಗಳು ಸದ್ಗದಿತವಾಣಿಯಿಂದ—"ಸಜ್ಜನರೇ, ಭರತ ಖಂಡದೊಳಗಿನ ಆರ್ಯರ ಮನೋವೃತ್ತಿಗಳು ಮೋಕ್ಷ–ಸುಖದ ಕಡೆಗೆ ಯಾವಾಗಲೂ ಸ್ವಾಭಾವಿಕವಾಗಿಯೇ ತಿರುಗಿರುವದರಿಂದ, ಅವರು ತಮ್ಮ ಆಚಾರ ವಿಚಾರಗಳನ್ನು, ಪ್ರೇಮ ದ್ವೇಷಗಳನ್ನು ಬದಿಗಿಟ್ಟು ಧರ್ಮರಕ್ಷಣಕ್ಕಾಗಿ ಒಂದೇ ಮನೋವೃತ್ತಿಯವರಾಗುತ್ತಿರುವದು ಸ್ವಾಭಾವಿಕವು; ಹಾಗಿಲ್ಲದಿದ್ದರೆ ಭಿನ್ನ ಭಿನ್ನ ಮನೋವೃತ್ತಿಗಳುಳ್ಳ ನಿಮ್ಮೆಲ್ಲರ ಕಣ್ಣುಗಳಲ್ಲಿ ನೀರುಗಳು ಯಾಕೆ ಬರುತ್ತಿದ್ದವು ಹೇಳಿರಿ? ನಾವು ಧರ್ಮಮೂಲರಾಗಿ ಐಹಿಕ ಸುಖವನ್ನು ಭೋಗಿಸತಕ್ಕವರು; ಧರ್ಮಮೂಲರಾಗಿ ಎಲ್ಲ ವ್ಯವಹಾರಗಳನ್ನು ನಡಿಸತಕ್ಕವರು; ಆದ್ದರಿಂದಲೇ ನಾವು ಧರ್ಮಮಯರು! ಅಂತಹ ನಮ್ಮನ್ನು ಯವನರು ಧರ್ಮಭ್ರಷ್ಟರಾಗಿಮಾಡುವ ಪ್ರಸಂಗವು ಬಂದಿರುವದಲ್ಲ! ಅಂದಬಳಿಕ ಧರ್ಮರಕ್ಷಣಕ್ಕಾಗಿ ದೇಶದ ಸ್ವಾತಂತ್ರ್ಯವನ್ನು ಸಂಪಾದಿಸಲಿಕ್ಕೆ ನೀವೆಲ್ಲರು ಒಮ್ಮನಸ್ಸಿನಿಂದ ಪ್ರಯತ್ನಮಾಡ ಬಾರದೇನು? ನೀವು ಹೀಗೆಯೇ ಪಾರತಂತ್ರ್ಯದ ಪಂಕದಲ್ಲಿ ಚಿರಕಾಲ ಕೊಳೆಯಹತ್ತಿ, ಕಡೆಗೆ ಪರಕೀಯರ ಘಾತಕತನದ ಕಲಿಸುವಿಕೆಯಿಂದ, ನಿಮ್ಮ ಧರ್ಮ ಗ್ರಂಥಗಳ ಹಾಗು ನಿಮ್ಮ ಗುರುಹಿರಿಯರ ಲಕ್ಷವಿಲ್ಲದೆ, ನಿಮ್ಮ ಧರ್ಮದ ಪದ್ಧತಿಯನ್ನು ನಿಮ್ಮ ಕೈಯಿಂದಲೇ ಮುರಿಯುವಷ್ಟು ನಾಸ್ತಿಕರು ನೀವಾಗ ಬೇಕಾದೀತು; ಆದ್ದರಿಂದ ಈಗಲೇ ಎಚ್ಚತ್ತು, ಧರ್ಮಮೂಲರಾಗಿ ದೇಶದ ಸ್ವಾತಂತ್ರ್ಯವನ್ನು ಸಂಪಾದಿಸುವದಕ್ಕಾಗಿ ಟೊಂಕಕಟ್ಟಿರಿ.

ಪ್ರಭುಗಳವರ ಈ ಮಾತುಗಳಿಂದ ಸ್ಫೂರ್ತಿಗೊಂಡ ಎಷ್ಟೋ ನಾಗರಿಕರು ಅತ್ಯಾತುರರಾಗಿ— "ಪ್ರಭೋ, ಬುಂದೇಲಖಂಡದ ಸ್ವಾತಂತ್ರ್ಯಕ್ಕಾಗಿ ಹೊಡೆದಾಡಲು ನಾವು ನಿಶ್ಚಯಮಾಡಿರುತ್ತೇವೆ; ಆದರೆ ಸದ್ಯಕ್ಕೆ ಚತುರ್ಭುಜ ಪರಮಾತ್ಮನ, ಹಾಗೂ ಆತನ ಮಂದಿರದ ಸಂರಕ್ಷಣವನ್ನು ಹೇಗೆ ಮಾಡಬೇಕು? ನಮ್ಮ ಪವಿತ್ರ ದೇವಸ್ಥಾನದ ನಾಶವಾಗ ದಂತಹದೊಂದು ಯುಕ್ತಿಯನ್ನು ನಮಗೆ ಹೇಳಿರಿ. ನಮ್ಮ ಪ್ರಾಣವನ್ನು ಲಕ್ಷಿಸದೆ ನೀವು ಹೇಳಿದ ಯುಕ್ತಿಯಿಂದ ಮಂದಿರವನ್ನು ರಕ್ಷಿಸುವೆವು" ಎಂದು ನುಡಿಯುತ್ತಿರಲು, ಒಬ್ಬ ತರುಣ ನಾಗರೀಕನು ಆವೇಶದಿಂದ – ಈಗೇ ಸ್ವಾತಂತ್ರ್ಯದ ಯುದ್ಧವು ಆರಂಭವಾಗಿ ಹೋಗಲಿ, ಚತುರ್ಭುಜ ಪರಮಾತ್ಮನ ಸಂರಕ್ಷಣವೇ ಸ್ವಾತಂತ್ರ್ಯ ಯುದ್ಧದ ಮಂಗಲಾಚರಣವಾಗಿ ಹೋಗಲಿ! ಅಂದರೆ ಬುಂದೇಲಖಂಡದ ಸ್ವಾತಂತ್ರ್ಯವು ಪ್ರಾಪ್ತವಾದದ್ದರ ಕಡೆಯ ಮಂಗಲವನ್ನು ಮಾಡುವ ಪ್ರಸಂಗವು ನಮಗೆ ಬೇಗನೆ ಬಂದೀತು ಎಂದು ನುಡಿದನು. ಆಗ ಪ್ರಾಣನಾಥ ಪ್ರಭುಗಳು ಗಾಂಭೀರ್ಯದಿಂದ—

ಪ್ರಭುಗಳು—ಹಿಂದುಮುಂದಿನ ವಿಚಾರವಿಲ್ಲದೆ ಹೀಗೆ ದುಡುಕುವದು ಸರಿಯಲ್ಲ. ಇಂದೇ ಯುದ್ಧವನ್ನು ಆರಂಭಿಸಿರೆಂದು ನಾನು ನಿಮಗೆ ಹೇಳುವದಿಲ್ಲ. ನಿಮ್ಮ ಮುಂದಾಳು ಇಲ್ಲದಿರುವಾಗ, ನಿಮ್ಮ ಯಾವ ಸಿದ್ಧತೆಯೂ ಆಗದಿರುವಾಗ, ನೀವು ಹೀಗೆ ನಿಶ್ಯಸ್ತ್ರರಾಗಿರುವಾಗ ಅವಿಚಾರದಿಂದ ಯುದ್ಧಕ್ಕೆ ಕೈ ಹಾಕಿದರೆ, ಮೊಗಲರ ಪ್ರಚಂಡ ಸೈನ್ಯಕ್ಕೆ ನೀವು ತುತ್ತಾಗುವದಲ್ಲದೆ, ಬುಂದೇಲಖಂಡವನ್ನೂ ಅನರ್ಥಕ್ಕೆ ಗುರಿಮಾಡಿದಂತಾದೀತು! ಮಹೋಬದ ಛತ್ರಸಾಲನು ನಿಮ್ಮ ಮುಂದಾಳುವಾಗಲಿಕ್ಕೆ ಸರ್ವಥೈವ ಯೋಗ್ಯನಾಗುವನು! ಆತನು ಸದ್ಯಕ್ಕೆ ಸ್ವದೇಶದಲ್ಲಿರುವದಿಲ್ಲ. ಆತನು ದಕ್ಷಿಣದೊಳಗಿನ ತನ್ನ ಪವಿತ್ರಕಾರ್ಯವನ್ನು ಮುಗಿಸಿಕೊಂಡು ಬೇಗನೆ ಸ್ವದೇಶಕ್ಕೆ ಬರುವನು. ಸಜ್ಜನರೇ, ಅಲ್ಲಿಯವರೆಗೆ ಎಂತಹ ಅಪಮಾನವನ್ನಾದರೂ, ಎಂತಹ ಹಾನಿಯನ್ನಾದರೂ ಸಹಿಸಿಕೊಂಡು ನೀವು ಸುಮ್ಮನೆ ಕುಳಿತುಕೊಳ್ಳಿರಿ.

ಛತ್ರಸಾಲನು ನಿಮ್ಮಮುಂದಾಳಾಗುವನೆಂದು ಪ್ರಭುಗಳು ಹೇಳಿದ್ದರಿಂದ ನಾಗರಿಕರಿಗೆ ಆನಂದವಾದಷ್ಟೇ, ನೀವು ಸುಮ್ಮನೆ ಕುಳಿತುಕೊಳ್ಳಿರೆಂದು ಹೇಳಿದ್ದರಿಂದ ಅವರಿಗೆ ದುಃಖವೂ ಆಯಿತು. ಅವರು ತಡೆಯಲಾರದೆ ಪ್ರಭುಗಳನ್ನು ಕುರಿತು—"ಪ್ರಭುಗಳೇ, ಸ್ವಾತಂತ್ರ್ಯದ ಮಾತುಹಾಗಿರಲಿ, ಸದ್ಯಕ್ಕಾಗುವ ಚತುರ್ಭುಜ ಪರಮಾತ್ಮನ ನಾಶದ ಗತಿಯೇನು?" ಎಂದು ಕೇಳಿದರು. ಅದಕ್ಕೆ ಪ್ರಭುಗಳು ಮುಗುಳುನಗೆ ನಗುತ್ತ—ಸಜ್ಜನರೇ, ಶ್ರೀ ಚತುರ್ಭುಜ ಪರಮಾತ್ಮನೇ ವಿಶ್ವದ ನಾಥನಾಗಿ ವಿಶ್ವವನ್ನು ರಕ್ಷಿಸುತ್ತಿರಲು, ಆತನನ್ನು ರಕ್ಷಿಸಲು ನಾವೆಷ್ಟರವರು? ಇನ್ನು ನೀವಾಗಿ ಮಾಡಿಕೊಂಡಿರುವ ನಿಮ್ಮ ಚತುರ್ಭುಜನು ನಿಮ್ಮ ಯೋಗ್ಯತೆಯಂತೆ, ಸಮರ್ಥನಾಗಲಿ, ಅಸಮರ್ಥನಾಗಲಿ, ಹೊಡೆಯುವವನಾಗಲಿ ಹೊಡೆಸಿ ಕೊಳ್ಳುವವನಾಗಲಿ, ಕಾಯುವವನಾಗಲಿ–ಸಾಯುವವನಾಗಲಿ ಆಗಬಹುದು. ನಿಮ್ಮ ಚತುರ್ಭುಜನ ಮೂರ್ತಿಯಲ್ಲಿ ಸಾನಿಧ್ಯವು ಉಂಟಾಗಲಿಕ್ಕೆ ಅರ್ಚಕರಾದ ನಿಮ್ಮ ತಪೋಬಲವು ನಿಮ್ಮ ಭಕ್ತಿಯು ಕಾರಣವಾಗಿರುವವು. ನೀವು ಹೇಡಿಗಳಾದರೆ ನಿಮ್ಮ ದೇವರೂ ಹೇಡಿಯೇ, ನೀವು ಶೂರರಾದರೆ ನಿಮ್ಮ ದೇವರೂ ಶೂರನೇ! ಆದರೂ ಸದ್ಯಕ್ಕೆ ನಿಮ್ಮ ನಿಜವಾದ ಭಕ್ತಿಯು

ಚತುರ್ಭುಜನಲ್ಲಿ ಇದ್ದದ್ದಾದರೆ, ಹಾಗು ನಿಮ್ಮ ಹೃದಯದಲ್ಲಿ ಸಾತಂತ್ರ್ಯ ಪ್ರೀತಿಯು ನಿಜವಾಗಿಯೇ ಹುಟ್ಟಿದ್ದಾಗಿದ್ದರೆ, ಮತ್ತು ಛತ್ರಸಾಲನ ಯೋಗದಿಂದ ಬುಂದೇಲಖಂಡಕ್ಕೆ ಸ್ವಾತಂತ್ರ್ಯ ಪ್ರಾಪ್ತಿಯಾಗುವದು ಸಂಭವವೇ ಆಗಿದ್ದರೆ ನಾನೂ ನೀವೂ ಹೀಗೆ ನೋಡುತ್ತ ನಿಂತನಿಂತಹಾಗೆಯೇ ನಿಮ್ಮ ಚತುರ್ಭುಜನು ತನ್ನ ಸಂರಕ್ಷಣವನ್ನು ತಾನು ಮಾಡಿಕೊಳ್ಳುವನು! ಆದ್ದರಿಂದ ನೀವು ಈಗ ಮಿಟ್ಟಿಮಿಸುಕದೆ ಸುಮ್ಮನೆ ನಿಂತುಕೊಳ್ಳತಕ್ಕದ್ದು.

ಪ್ರಿಯವಾಚಕರೇ, ಧರ್ಮಿಷ್ಟರಿಗೆ ಮಹಾಪುರುಷರು ಮಾಡಿದ ಆಜ್ಞೆಯು ಹೇಗೆ ವ್ಯರ್ಥವಾದೀತು? ಅಂತಹ ಜನ ಸಮೂಹವೆಂದರೇನು, ಪ್ರಭುಗಳ ಮಹಾಮಹಿಮೆಯನ್ನು ಸ್ಮರಿಸುತ್ತ ಸುಮ್ಮನೆ ನಿಂತುಬಿಟ್ಟಿತು! ಅಷ್ಟರಲ್ಲಿ ರಣದುಲ್ಲಾಖಾನನ ಆಧಿಪತ್ಯದಲ್ಲಿ ಯವನ ಸೇನೆಯು ಸೈತಾನರ ಹಿಂಡಿನಂತೆ ಗುಡಿಯ ಮೇಲೆ ಸಾಗಿಬಂದಿತು. ಒಬ್ಬ ಬುಂದೇಲಿಯು ತಮ್ಮನ್ನು ಪ್ರತಿಬಂಧಿಸಿದರೆ, ಅಷ್ಟೇ ನೆವಮಾಡಿ ಪಟ್ಟಣವನ್ನೇ ಸುಡಬೇಕೆಂದು ನಿಶ್ಚಯಿಸಿ ಅವರು ಬಂದಿದ್ದರು! ಆದರೆ ಮಹಾ ಸತ್ವಶಾಲಿಗಳಾದ ಪ್ರಾಣನಾಥ ಪ್ರಭುಗಳ ಸತ್ವದ ಅಭೇದ್ಯ ಕೋಟೆಯು ಓರಛಾ ಪಟ್ಟಣವನ್ನು ರಕ್ಷಿಸುತ್ತಿರುವಾಗ, ಆ ಸೈತಾನರ ದುಷ್ಟ ಆಲೋಚನೆಯು ಹೇಗೆ ಕೊನೆಗಾಣಬೇಕು? ಅವರು ಒಂದುಬಗೆಯ ನಿರಾಶೆಯಿಂದ ಗುಡಿಯನ್ನು ಹೊಕ್ಕರು. ಮೈಲಿಗೆಯಿಂದ ಪ್ರವೇಶಿಸಲಾಗದ ಗುಡಿಯಲ್ಲಿ ಯವನರು ಕಾಲಲ್ಲಿ ಜೋಡು ಹಾಕಿಕೊಂಡು ಹೋಗುವದನ್ನು ನೋಡಿ, ಆ ಬುಂದೇಲಿಗಳ ರಕ್ತವು ಕಾದು ಕುದಿಯಹತ್ತಿತು; ಮಹಾತ್ಮರಾದ ಧರ್ಮಮೂರ್ತಿ ಪ್ರಾಣನಾಥ ಪ್ರಭುಗಳ ಆಜ್ಞೆಯ ಪ್ರತಿಬಂಧವಿಲ್ಲದಿದ್ದರೆ, ಉಭಯರ ಅನರ್ಥಕ್ಕೂ ಅಂದಿನ ಪ್ರಸಂಗವು ಕಾರಣವಾಗದೆ ಹೋಗುತ್ತಿದ್ದಿಲ್ಲ. ಎಲ್ಲ ಬುಂದೇಲಿಗಳ ಮೋರೆ ಕಣ್ಣುಗಳು ಸಿಟ್ಟಿನಿಂದ ಕೆಂಪಗೆ ಕೆಂಡದಂತಾಗಿದ್ದವು. ಪ್ರಭುವಿನ ಶಾಂತಮೂರ್ತಿಯ ದರ್ಶನದಿಂದ ಅವು ಕಿಡಿಗಳನ್ನು ಸುರಿಸದಾಗಿದ್ದವು. ಅಷ್ಟರಲ್ಲಿ ರಣದುಲ್ಲಾಖಾನನು ಪ್ರಾಣನಾಥ ಪ್ರಭುಗಳ ಮುಂದೆ ಬಂದು ನಿಂತುಕೊಂಡು ಹರಕಮುರಕ ಹಿಂದುಸ್ಥಾನೀ ಭಾಷೆಯಿಂದ — ''ಏ ಗೋಸಾವ್ಯಾ! ಇಷ್ಟುಜನರನ್ನು ಸೇರಿಸಿಕೊಂಡು ನೀನು ಅವರಿಗೆ ಯಾವ ಉಪದೇಶ ಮಾಡುತ್ತಿ? ದಿಲ್ಲೀ ಪತಿಯಮೇಲೆ ತಿರುಗಿ ಬೀಳುವದಕ್ಕಾಗಿ ಪ್ರೋತ್ಸಾಹಿಸಲು ಇಷ್ಟು ಜನರನ್ನು ಕೂಡಿಸಿರುತ್ತೀ ಏನು? ದಿಲ್ಲಿಯ ರಾಜಸತ್ತೆಯ ವಿರುದ್ಧವಾಗಿ ಬಂಡಾಯ ಮಾಡಲು ಇವರನ್ನು ಉತ್ತೇಜನಗೊಳಿಸುತ್ತೀ ಏನು? ಸಿದ್ಧನಾಗು, ಸಾಯಲಿಕ್ಕೆ ಸಿದ್ಧನಾಗು. ಬಾದಶಹರ ಹಾಗು ಇಸ್ಲಾಮಿಮತದ ಅಪಮಾನಮಾಡುವವನೆಂದು ತಿಳಿದು, ನಿನ್ನ ಇಷ್ಟುಭಕ್ತ ಸಮೂಹದ ಮುಂದೆ ನಿನ್ನ ಶಿರಚ್ಛೇದವನ್ನು ಮಾಡುವೆನು, ಎಂದು ನುಡಿದು ರಣದುಲ್ಲಾಖಾನನು ತನ್ನ ಖಡ್ಗದ ತೀಕ್ಷ್ಣ ಧಾರೆಯ ಕಡೆಗೆ ನೋಡಹತ್ತಿದನು. ಆಗ ಪ್ರಭುಗಳು ಗಂಭೀರವಾಣಿಯಿಂದ—''ಯವನಾ, ಬುಂದೇಲಖಂಡದಲ್ಲಿ ಸ್ವಾತಂತ್ರ್ಯದ ಪ್ರಾಣ ಪ್ರತಿಷ್ಠಾಪನೆಯನ್ನು ಮಾಡಿದಹೊರತು ಈ ಪ್ರಾಣನಾಥನಿಗೆ ಸಾಯುವ ಇಚ್ಛೆಯಿಲ್ಲ. ಸರಿ ಹಿಂದಕ್ಕೆ, ಮದ್ಯಪಾನಾದಿ ಹಲವು ವ್ಯಸನಗಳ ಹೊಲಸಿನಲ್ಲಿ ಯಾವಾಗಲೂ ಹೊರಳುತ್ತಿರುವ ನಿಮ್ಮಂಥ ಅಮಂಗಲ ಪ್ರಾಣಿಗಳನ್ನು ನಾನು ಮುಟ್ಟುತ್ತಿರುವದಿಲ್ಲ! ಸರಿ, ಅತ್ತ ದೂರನಿಂತುಕೊಳ್ಳು!

# ಬಡಿದಭಕ್ತಿ

ಮಹಾತ್ಮರಮಹಾಮಹಿಮೆಯ ಅಧಿಕಾರಮರ್ಯಾದೆಯನ್ನು ಯಾರು ತರ್ಕಿಸುವರು? ಪ್ರಾಣನಾಥ ಪ್ರಭುಗಳ ಸತ್ವಮಯ ದರ್ಪೋಕ್ತಿಯಿಂದ ರಣದುಲ್ಲಾಖಾನನು ನಿಜವಾಗಿಯೇ ಎರಡುಹೆಜ್ಜೆ ಹಿಂದಕ್ಕೆ ಸರಿದುನಿಂತನು. ಪ್ರಭುಗಳ ಮೇಲೆ ಏರಿಹೋಗುವ ಧೈರ್ಯವು ಆತನಿಗಾಗಲೊಲ್ಲದು. ಯಾರೋ ಆತನನ್ನು ಹಿಂದಕ್ಕೆ ದೂಡಿದಹಾಗಾಗುತ್ತಿತ್ತು. ಪ್ರಭುಗಳವರ ತೇಜೋಮಂಡಲವನ್ನು ಭೇದಿಸಿ ಆತನು ಹೋಗದಾದನು. ಖಾನನ ತಿಳುವಳಿಕೆಯಂತೆ ಪ್ರಾಣನಾಥ ಪ್ರಭುವು ಒಬ್ಬ ಗೋಸಾವಿಯು; ನಿಶ್ಶಸ್ತ್ರನು; ಆತನಲ್ಲಿ ಸಿಟ್ಟುಕೋಪಗಳೇನು ಇಲ್ಲ; ಆತನು ಪ್ರಶಾಂತವಾದ ಮುಖಮುದ್ರೆಯುಳ್ಳವನು. ಆದರೂ ರಣದುಲ್ಲಾಖಾನನು ಪ್ರಭುವಿನ ಮೇಲೆ ಶಸ್ತ್ರವನ್ನು ಪ್ರಯೋಗಿಸಲು ಸಮರ್ಥನಾಗಲಿಲ್ಲ. ಆತನು ತನ್ನ ಒಬ್ಬ ದಂಡಾಳುವನ್ನು ಕುರಿತು—''ಎಲೋ ಕಾಶಿಮ, ಈ ಪುಂಡರ ದೇವರನ್ನು ಪುಡಿಪುಡಿ ಮಾಡುವದಕ್ಕಾಗಿ ಫಿಯಾದಾಖಾನನು ಸೈನ್ಯದೊಡನೆ ಬರುತ್ತಿರುವನು. ಬೇಗನೆ ನನ್ನ ಸಹಾಯಕ್ಕೆ ಬರಬೇಕಾಗಿ ನಾನು ಆಜ್ಞಾಪಿಸಿರುವೆನೆಂದು ಹೇಳು. ಬುಂದೇಲಖಂಡದೊಳಗಿನ ಜನರ ಮನಸ್ಸಿನಲ್ಲಿ ರಾಜದ್ರೋಹದ ಬೀಜವನ್ನು ಬಿತ್ತುತ್ತಿರುವ ಪ್ರಾಣನಾಥನೆಂಬ ಗೋಸಾವಿಯು ಸಿಕ್ಕಿರುವನೆಂದು ಹೇಳು. ಹೋಗು, ಬೇಗನೆ ಹೋಗು. ಏ ಗೋಸಾವ್ಯಾ, ನಿನ್ನ ಈ ತಲೆತಿರುಕ ಭಕ್ತರಿಗೆ ಇಲ್ಲಿಂದ ಹೊರಟು ಹೋಗೆಂದು ಹೇಳು. ಇಲ್ಲದಿದ್ದರೆ ನಿನ್ನ ಸಮಕ್ಷ ಇವರ ನಾಶಮಾಡುವ ಪ್ರಸಂಗವು ನನಗೆ ಬಂದೀತು.

ಪ್ರಭುಗಳು ಖಾನನಿಗೆ ಯಾವ ಉತ್ತರವನ್ನೂ ಕೊಡಲಿಲ್ಲ ಜನರೂ ಅವರ ಅಪ್ಪಣೆಯಂತೆ ಸುಮ್ಮನೆ ಅಪಮಾನವನ್ನು ಸಹಿಸುತ್ತ ನಿಂತಿದ್ದರು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಫಿಯಾದಾ ಖಾನನು ಸೈನ್ಯದೊಡನೆ ಅಲ್ಲಿಗೆ ಬಂದನು. ಆಗ ರಣದುಲ್ಲಾಖಾನನ ಸಿಟ್ಟು ತಡೆಯದೆ ಪ್ರಾಣನಾಥ ಪ್ರಭುಗಳನ್ನು ಕುರಿತು–ಏ ಪ್ರಾಣನಾಥಪ್ರಭು, ರಾಜನಿಷ್ಠ ಬುಂದೇಲಿಗಳ ಮನಸ್ಸನ್ನು ಕೆಡಿಸುತ್ತ ಅವರ ಮನಸ್ಸಿನಲ್ಲಿ ರಾಜದ್ರೋಹದ ಬೀಜವನ್ನು ಬಿತ್ತುತ್ತ ಇಸ್ಲಾಮಿಮತದ ಅಪಮಾನವನ್ನು ಮಾಡುತ್ತ ನೀನು ಬುಂದೇಲಖಂಡದಲ್ಲೆಲ್ಲ ಸಂಚರಿಸುತ್ತಿರುವೆ ಯೆಂದು ಕೇಳಿರುತ್ತೇವೆ. ನಿನ್ನ ಈ ರಾಜಕೀಯ ಸ್ವರೂಪದ ಅಪರಾಧಕ್ಕಾಗಿ ನಿನಗೆ ದೇಹಾಂತ ಶಾಸನ ಮಾಡಲು ನಾನು ನಿಶ್ಚಯಿಸಿರುತ್ತೇನೆ.

ಪ್ರಾಣನಾಥ—(ಶಾಂತರಾಗಿ) ನೀನು ಹೀಗೆಯೇ ನಿಶ್ಚಯಿಸುತ್ತ ಯಾಕೆ ಕಾಲಹರಣ ಮಾಡುತ್ತೀ? ನಾನು ನಿನಗೆ ಆಗಲೇ ಹೇಳಿಬಿಟ್ಟಿರುವೆನು. ಬುಂದೇಲಿಗಳ ಧರ್ಮದ ಮೇಲೆ ಆಘಾತ ಮಾಡುವಂಥ, ಬುಂದೇಲಿಗಳ ಸೌಖ್ಯ ಸದ್ಗುಣ–ಮನುಷ್ಯತ್ವಗಳನ್ನು ಮಣ್ಣುಗೂಡಿಸು ವಂಥ ಯವನ ಸತ್ತೆಯನ್ನು ಬುಂದೇಲಖಂಡದಲ್ಲಿ ನಿರ್ಮೂಲಮಾಡಿದ ಹೊರತು ದೇಹಬಿಡುವ ಇಚ್ಛೆಯು ನನಗೆ ಖಂಡಿತವಾಗಿ ಇಲ್ಲ.

ರಣದುಲ್ಲಾಖಾನ—ನಿನ್ನ ಇಚ್ಛೆಯನ್ನು, ನಿನ್ನಂಥ ಕ್ಷುದ್ರಜಂತುವಿನ ಇಚ್ಛೆಯನ್ನು ನಮ್ಮಂಥ ಸತ್ತಾಧಾರಿಗಳು ಅರೆನಿಮಿಷದಲ್ಲಿ ಹೇಗೆ ನಿಷ್ಫಲ ಮಾಡುವರೆಂಬದನ್ನು ನೋಡು. ಫಿಯಾದಾಖಾನ, ಏನು ನೋಡುತ್ತೀರಿ? ಹಾರಿಸಿರಿ ಹಾರಿಸಿರಿ ಈ ಗೋಸಾವ್ಯಾನ ಚಂಡನ್ನು.

ಹೀಗೆ ನುಡಿಯುತ್ತಿರುವದರೊಳಗೆ ಪ್ರಾಣನಾಥ ಪ್ರಭುಗಳು ಧ್ಯಾನಸ್ಥರಾದರು. ಅವರ ಧ್ಯಾನಸ್ಥವಾದ ದಿವ್ಯ ಮೂರ್ತಿಯ ತೇಜಃಪುಂಜ ಮುಖವನ್ನು ನೋಡಿ ಫಿಯಾದಾಖಾನನಿಗೂ ಅವರ ಮೇಲೆ ಶಸ್ತ್ರವೆತ್ತುವ ಧೈರ್ಯವಾಗಲೊಲ್ಲದು. ಅವನ ಅವಸ್ಥೆಯೂ ರಣದುಲ್ಲಾಖಾನನಂತೆಯೇ ಆಯಿತು. ಹೀಗೆ ಯಾಕಾಗುವದೆಂಬ ಕಾರಣವು ಇಬ್ಬರು ಖಾನರ ಮನಸ್ಸಿನಲ್ಲಿಯೂ ಬರಲೊಲ್ಲದು. ಆಗ ಫಿಯಾದಾಖಾನನು ತಾನು ಶಸ್ತ್ರವೆತ್ತಲಾರದೆ ತನ್ನ ಕೈಕೆಳಗಿನ ಹೈದರ ಖಾನನಿಗೆ ಪ್ರಭುವನ್ನು ತುಂಡರಿಸಲು ಆಜ್ಞಾಪಿಸಿದನು. ಹೀಗೆಯೇ ಮುಂದೆ ಹೈದರಖಾನನಿಂದ ರಣಮಸ್ತಖಾನನ ಕಡೆಗೆ, ರಣಮಸ್ತಖಾನನಿಂದ ಮಹಮ್ಮದಖಾನನ ಕಡೆಗೆ, ಬರಬರಬರುತ್ತ ಕೆಳಕೆಳಗಿನ ಅಧಿಕಾರಿಗಳ ಕಡೆಗೆ ಪ್ರಭುವಿನ ಸಂಹಾರದ ಕಾರ್ಯವು ಒಪ್ಪಿಸುತ್ತಾ ಹೋಯಿತು! ಈಗಂತು ಪ್ರಭುಗಳು ಕಣ್ಣುಮುಚ್ಚಿಕೊಂಡು ಧ್ಯಾನಸ್ಥರಾಗಿ ನಿಂತುಬಿಟ್ಟಿದ್ದರು. ಮಹಮ್ಮದ ಖಾನನು ತಾನು ಅಪ್ಪಣೆಕೊಡಬೇಕೆಂದರೆ, ತನ್ನ ಕೈಕೆಳಗೆ ಯಾರೂ ಇಲ್ಲದಿರುವಾಗ ವಿಚಾರ ಮಾಡತೊಡಗಿದನು. ಧ್ಯಾನಸ್ಥರಾಗಿ ನಿಂತುಬಿಟ್ಟಿರುವ ಪ್ರಾಣನಾಥ ಪ್ರಭುವಿನ ದಿವ್ಯಮೂರ್ತಿಯನ್ನು ಸಂಹರಿಸುವ ಧೈರ್ಯವು ಆತನಿಗೆ ಆಗದಿರಲು, ಆತನು ತನ್ನ ಮೇಲಿನ ಅಧಿಕಾರಿಯಾದ ರಣಮಸ್ತಖಾನನನ್ನು ಕುರಿತು—"ಖಾವಿಂದ ತಮ್ಮ ಸವಾರಿಯು ಪ್ರತ್ಯಕ್ಷವಾಗಿರುವಾಗ ಇಂಥ ಪ್ರಸಿದ್ಧ ಕಾಫಿರನ ತಲೆಯನ್ನು ನಾನು ಹಾರಿಸುವದೆಂದರೆ, ನಾನಾಗಿಯೇ ಖಾವಿಂದರ ಅಪಮಾನ ಮಾಡಿದಂತಾಗುವದು; ಆದ್ದರಿಂದ ಈ ಕಾಫಿರನ ಶಿರಚ್ಛೇದಮಾಡುವ ಮಾನವು ತಮಗೇ ಇರತಕ್ಕದ್ದು" ಎಂದು ಹೇಳಿ ಜಾರಿಕೊಂಡನು. ಹೀಗೆಯೇ ಅವರವರು ತಮ್ಮ ತಮ್ಮ ಮೇಲಿನ ಅಧಿಕಾರಗಳಿಗೆ ಮಾನವನ್ನು ಅರ್ಪಿಸುತ್ತ ಅರ್ಪಿಸುತ್ತ, ಕಡೆಗೆ ಪ್ರಭುಗಳನ್ನು ಸಂಹರಿಸುವ ಕೆಲಸವು ಮತ್ತೆ ರಣದುಲ್ಲಾಖಾನನ ಪಾಲಿಗೇ ಬಂದಿತು!

ರಣದುಲ್ಲಾಖಾನನು ಕ್ಷಣಮಾತ್ರ ಚಿಂತಿಸುತ್ತ ನಿಂತನು. ಧ್ಯಾನಸ್ಥರಾಗಿರುವ ಪ್ರಾಣನಾಥ ಪ್ರಭುಗಳ ಅತರ್ಕ್ಯ ತೇಜಸ್ಸಿನಿಂದ ಹತವಾಗಿರುವ ಆತನಿಗೆ, ಪ್ರಭುಗಳ ಮೇಲೆ ಖಡ್ಗವನ್ನು ಪ್ರಯೋಗಿಸಲಿಕ್ಕೆ ಒಮ್ಮೆಲೆ ಧೈರ್ಯವಾಗಲೊಲ್ಲದು. ತಾನು ಹಿಂದುಗಳ ಶಿರಚ್ಛೇದಮಾಡುವದರಲ್ಲಿಯೂ, ಅವರ ದೇವಸ್ಥಾನಗಳ ನಾಶಮಾಡುವುದರಲ್ಲಿಯೂ ಮಹಾ ನಿಪುಣನೆಂದು ಪ್ರಸಿದ್ಧಿಯನ್ನು ಹೊಂದಿರಲು, ಇಂದು ತನ್ನ ಮನಸ್ಸು ಪ್ರಾಣನಾಥನ ಪ್ರಾಣಹರಣಕ್ಕೆ ಹಿಂಜರಿಯುವುದನ್ನು ನೋಡಿ ಆತನಿಗೆ ಬಹಳ ನಾಚಿಕೆ ಬಂದಿತು. ಆತನು ತನ್ನ ಚಂಚಲ ಮನಸ್ಸನ್ನು ಸ್ಥಿರಮಾಡಿಕೊಳ್ಳಹತ್ತಿದನು. ಕೆಳದುಟಿಯನ್ನು ಕಸುವಿನಿಂದ ಕಡಕೊಳ್ಳಹತ್ತಿದನು; ಶಕ್ಯವಿದ್ದಮಟ್ಟಿಗೆ ತನ್ನ ಮುಖಮುದ್ರೆಯನ್ನು ಉಗ್ರವಾಗಿ ಮಾಡತೊಡಗಿದನು. ಆತನು ತನ್ನ ಶರೀರದೊಳಗಿನ ಸರ್ವಶಕ್ತಿಯನ್ನು ಒಟ್ಟುಗೂಡಿಸಿ, ಅಲ್ಲಾನನ್ನು ಸ್ಮರಿಸಿ ಪ್ರಾಣನಾಥ ಪ್ರಭುವನ್ನು ಸಂಹರಿಸುವುದಕ್ಕಾಗಿ ಆವೇಶದಿಂದ ಮುಂದುವರಿದನು. ಪ್ರಾಣನಾಥ

ಪ್ರಭುಗಳಂತು ಧ್ಯಾನಸ್ಥರಾಗಿ ಪರ್ವತದಂತೆ ಸ್ಥಿರವಾಗಿ ನಿಂತುಬಿಟ್ಟಿದ್ದರು. ಇಂತಹ ಪರಿಸ್ಥಿತಿಯಲ್ಲಿ ಏನುಮಾಡಬೇಕೆಂದು ಒರಳಾದ ನಾಗರಿಕರೆಲ್ಲರು ಸುಮ್ಮನೆ ನಿಂತುಬಿಟ್ಟಿದ್ದರು. ಪ್ರಾಣನಾಥ ಪ್ರಭುಗಳ ಮೇಲೆ ರಣದುಲ್ಲಾಖಾನನು ಖಡ್ಗವೆತ್ತಿ ಹಾಕುತ್ತಿರಲು, ಇಲ್ಲಿಯವರೆಗೆ ಒತ್ತಟ್ಟಿಗೆ ಸುಮ್ಮನೆ ನಿಂತಿದ್ದ ಒಬ್ಬ ಸುಂದರ ತರುಣಿಯು ಬಾಣದಂತೆ ಖಾನನ ಬಳಿಗೆ ಬಂದು ಅವನ ಕೈಯನ್ನು ಹಿಡಿದು–

ತುರಣಿ–ರಣದುಲ್ಲಾ! ಎಂತಹ ಅನ್ಯಾಯವನ್ನು ಮಾಡುತ್ತಿರುವೆಯಲ್ಲ! ಈ ಮಹಾತ್ಮನು ಯಾವ ತಪ್ಪು ಮಾಡಿರುವನೆಂದು ನೀನು ಈತನನ್ನು ಕೊಲ್ಲಲು ಉದ್ಯೋಗಿಸಿರುತ್ತೀ? ದಿಲ್ಲೀಪತಿಯ ಸಾಮ್ರಾಜ್ಯದಲ್ಲಿ ಇಂತಹ ಅನ್ಯಾಯಾಗಳಾಗಹತ್ತಿದರೆ, ಆಕಾಶದಲ್ಲಿ ಸಂಚರಿಸು ತ್ತಿರುವ ಚಂದ್ರಸೂರ್ಯರು ಈ ಪಾಪಮಯ ಸಾಮ್ರಾಜ್ಯದ ಮೇಲೆ ಪ್ರಕಾಶಿಸಲಾರರು! ಕೈಯನ್ನು ಹಿಂದಕ್ಕೆ ತೆಗೆದುಕೋ, ಸರಿಹಿಂದಕ್ಕೆ!

ತನ್ನ ಕೈಯನ್ನು ಪ್ರಾಣನಾಥ ಪ್ರಭುವೇ ಹಿಡಿದಿರುವನೆಂದು ತಿಳಿದು ರಣದುಲ್ಲಾಖಾನನು ಸಂತಾಪದಿಂದ–ಎಲೇ ಗೋಸಾವ್ಯಾ, ನಮ್ಮಂತಹ ಸತ್ತಾಧಾರಿಗಳು ಮಾಡುವ ಶಿಕ್ಷೆಯನ್ನು ಸುಮ್ಮನೆ ಅನುಭೋಗಿಸುವುದನ್ನು ಬಿಟ್ಟು ನಮ್ಮಕಾರ್ಯಕ್ಕೆ ವಿಘ್ನವನ್ನುಂಟುಮಾಡುವೆಯಾ? ಪ್ರಾಣಹರಣ ಮಾಡುವ ಬೇರೆ ಬೇರೆ ಪ್ರಕಾರಗಳಲ್ಲಿ ತೀರ ಸುಲಭವಾದ ರೀತಿಯಿಂದ ನಿನ್ನ ಪ್ರಾಣಹರಣ ಮಾಡಬೇಕೆಂದು ನಾವು ಇರುವಾಗ, ನೀನು ನಮ್ಮ ಉಪಕಾರ ಸ್ಮರಿಸುವುದನ್ನು ಬಿಟ್ಟು, ನಮ್ಮ ಕೈಹಿಡಿಯುತ್ತೀಯೇನು?

ತರುಣಿ–ರಣದುಲ್ಲಾ, ನಿನ್ನ ಕೈಯನ್ನು ಈ ಮಹಾತ್ಮನು ಹಿಡಿದಿರದೆ ನಾನು ಹಿಡಿದಿರುವೆನು. ಅಧಿಕಾರದ ಮದದಿಂದ ಮುಚ್ಚಿಹೋಗಿರುವ ನಿನ್ನ ಕಣ್ಣುಗಳನ್ನು ತೆರೆದು ನೆಟ್ಟಗೆ ನನ್ನನ್ನು ನೋಡು, ಅಂದರೆ ಎಲ್ಲವೂ ನಿನಗೆ ತಿಳಿಯುವದು. ಈ ಮಹಾತ್ಮನನ್ನು ಕೊಲ್ಲುವ ಕಾರಣವೇನು? ಈತನನ್ನು ಕೊಲ್ಲುವುದಕ್ಕಾಗಿ ದಿಲ್ಲೀಪತಿಯಿಂದ ನಿನಗೆ ಫರ್ಮಾನವು ಬಂದಿರುತ್ತದೇನು?

ತರುಣಿಯ ಈ ಮಾತುಗಳನ್ನು ಕೇಳಿ ಸಂತಾಪವು ಹೆಚ್ಚುತ್ತಿರಲು, ರಣದುಲ್ಲಾಖಾನನು ಆಕೆಯನ್ನು ಕುರಿತು–

ರಣದುಲ್ಲಾ–ಪ್ರಾಣನಾಥನನ್ನು ಮೇಲಗಟ್ಟಿ ಬರುವ ನಿರ್ಬಲ ಪೋರಿಯೇ, ವ್ಯರ್ಥವಾಗಿ ಯಾಕೆ ಹರಟುತ್ತೀ? ನೀನು ಯಾರ ಮುಂದೆ ನಿಂತಿರುತ್ತೀ? ಯಾರ ಕೆಲಸಕ್ಕೆ ಪ್ರತಿಬಂಧವನ್ನುಂಟು ಮಾಡುತ್ತೀ? ನೀನು ಯಾರ ಸಂಗಡ ಮಾತಾಡುತ್ತೀ ಎಂಬದರ ಎಚ್ಚರವು ನಿನಗಿರುವುದೋ? ಇಲ್ಲಿಂದ ತಟ್ಟನೆ ಹೊರಟು ಹೋಗು. ಇಲ್ಲವಾದರೆ ಈ ದಿಲ್ಲೀಪತಿಯ ಸರದಾರನು ನಾನು ನಿನ್ನನ್ನು ವಧಿಸದೆ ಬಿಡಲಿಕ್ಕಿಲ್ಲ.

ತರುಣಿ–(ನಗುತ್ತ) ನನ್ನನ್ನು ಕೊಲ್ಲುವ ಸಾಮರ್ಥ್ಯವು ನಿನ್ನಲ್ಲಿರುವದಿಲ್ಲ. ವ್ಯರ್ಥವಾಗಿ ಯಾಕೆ ಡೌಲುತೋರಿಸುತ್ತೀ? ನೆಟ್ಟಗೆ ಕಣ್ಣುತೆರೆದು ನೋಡು; ಅಂದರೆ ನನ್ನ ಪಾದಗಳನ್ನು ಹಿಡಿದುಕೊಳ್ಳುವ ಮನಸ್ಸು ನಿನಗೆ ಆಗುವದು.

ರಣದುಲ್ಲಾ—(ಆ ತರುಣಿಯ ಕಡೆಗೆ ನೋಡುತ್ತ) ಎಲೇ, ಈ ಹುಡುಗಿ ಹುಚ್ಚ ಹಿಡಿದಿರುವ ಹಾಗೆ ತೋರುತ್ತದೆ. ಏ ಹುಚ್ಚಹುಡಗೀ, ಬದುಕುವದೆಂದರೇನು, ಸಾಯುವು ದೆಂದರೇನು ನಿನಗೆ ತಿಳಿಯುತ್ತದೆಯೆ? ನೀನು ಬದುಕಬೇಕೆಂದಿದ್ದರೆ ಬೇಗನೆ ಇಲ್ಲಿಂದ ಹೊರಟುಹೋಗು

ತರುಣಿ—(ಶಾಂತಮನಸ್ಸಿನಿಂದ) ಇನ್ನೂ ನಿನಗೆ ಎಚ್ಚರಿಕೆಯಾಗಲೊಲ್ಲದೋ? ಇಷ್ಟು ಜನರಲ್ಲಿ ನಾನು ಯಾರೆಂಬದನ್ನು ತಿಳಿಸುವ ಪ್ರಸಂಗ ತರಬೇಡ.

ರಣದುಲ್ಲಾಖಾನ(ಗುರುತು ಹತ್ತದ್ದರಿಂದ) ಇನ್ನೂ ನೀನು ನಿನ್ನ ಹಟವನ್ನು ಬಿಡುವದಿಲ್ಲವೆ? ನೋಡು, ನಿನ್ನ ಮಹಾತ್ಮನ ಶಿರಃಕಮಲವು ಹಾರುವದನ್ನು ನೋಡು.

ಈ ಮೇರೆಗೆ ನುಡಿದು ರಣದುಲ್ಲಾಖಾನನು ಖಡ್ಗವೆತ್ತಿ ಪ್ರಭುಗಳನ್ನು ಹೊಡೆಯ ಹೋಗಲು, ಆಗ ಆ ತರುಣಿಯು ಶಾಂತರೀತಿಯಿಂದ–ಎಲೇ, ಸಮರ್ಕಂದದ ಬೀದಿಯಲ್ಲಿ ಬಿಕ್ಕೆಬೇಡುತ್ತಿದ್ದ ತಿರುಕನೇ, ಅಪ್ಪನು ನಿನ್ನನ್ನು ಈ ಯೋಗ್ಯತೆಗೆ ಏರಿಸಿದ ಉಪಕಾರವನ್ನು ತೀರಿಸುತ್ತೀ ಏನು? ದಿಲ್ಲಿಯ ಪತಿಯ ಪ್ರೀತಿಯ ಮಗಳು ನಿನ್ನನ್ನು ಆಜ್ಞಾಪಿಸುವಳು, ಒಂದು ಕ್ಷಣದೊಳಗೆ ನಿನ್ನ ಸೊಕ್ಕಿನ ಸೇನೆಯನ್ನು ಕಟ್ಟಿಕೊಂಡು ಈ ದೇವಮಂದಿರದಿಂದ ಹೊರಟು ಹೋಗು! ಕಾರಣವಿಲ್ಲದೆ ಪ್ರಾಣನಾಥ ಪ್ರಭುಗಳ ಸಂಹಾರವಾಗಬಾರದೆಂತಲೂ, ಓರಭಾದ ನಾಗರೀಕರ ಧರ್ಮಚ್ಯುಲನವಾಗಬಾರದೆಂತಲೂ ಈ ಬದ್ರುನ್ನಿಸೆಯ ಮನಃಪೂರ್ವಕವಾದ ಇಚ್ಛೆಯಿರುತ್ತದೆ, ನೋಡು, ಸೂಕ್ಷ್ಮದೃಷ್ಟಿಯಿಂದ ನೋಡು, ಇನ್ನೂ ಹತ್ತರಬಂದು ನೋಡು, ಅಂದರೆ ಈಕೆಯು ಸಾರ್ವಭೌಮ ಔರಂಗಜೇಬ ಬಾದಶಹನ ಪ್ರೀತಿಯ ಪುತ್ರಿ ಬದ್ರುನ್ನಿಸೆಯಿರುವಳೆಂಬದು ನಿನ್ನ ಲಕ್ಷದಲ್ಲಿ ಬರಬಹುದು!

ಈಗ ರಣದುಲ್ಲಾಖಾನನಿಗೆ ಗುರುತುಹತ್ತಿತು. ಆತನು ನಿಜವಾಗಿಯೇ ಶಹಾಜಾದಿಯ ಚರಣಗಳ ಮೇಲೆ ಮಸ್ತಕವಿಟ್ಟು, ಅತ್ಯಂತ ಆರ್ಜವದಿಂದ—

ರಣದುಲ್ಲಾ—ಶಹಾಜಾದೀ, ಈ ಸ್ಥಳದಲ್ಲಿ ಇಂತಹ ಹೊತ್ತಿನಲ್ಲಿ ಈ ವೇಷದಿಂದ ಹೀಗೆ ಅಕಸ್ಮಾತ್ ನೀವು ಬಂದೀರೆಂಬ ಕಲ್ಪನೆಯೂ ನನಗೆ ಬಾರದಿರುವದರಿಂದ, ನನ್ನಿಂದ ಹೀಗೆ ಅವಿಚಾರವಾಯಿತು. ನನ್ನನ್ನು ಕ್ಷಮಿಸಬೇಕು.

ಬದ್ರುನ್ನಿಸೆ– ಈ ಮಹಾತ್ಮರನ್ನು ನೀನು ವ್ಯರ್ಥವಾಗಿ ಅಪಮಾನಗೊಳಿಸಿದ್ದಕ್ಕಾಗಿ ನೀನು ಮೊದಲು ಇವರು ನಿಂತಿರುವ ಸ್ಥಳಕ್ಕೆ ನಮಸ್ಕಾರ ಮಾಡು; ಮತ್ತು ಚತುರ್ಭುಜನ ಮಂದಿರವನ್ನು ನಾಶಮಾಡುವದಿಲ್ಲೆಂದು ಆಣೆಮಾಡು; ಅಂದರೆ ನಿನ್ನ ಅವಿಚಾರದ ನಡೆತೆಗಾಗಿ ನಿನ್ನನ್ನು ಕ್ಷಮಿಸುವೆನು.

ರಣದುಲ್ಲಾಖಾನನು ಬದ್ರುನ್ನಿಸೆಯ ಅಪ್ಪಣೆಯನ್ನು ತಲೆಯಲ್ಲಾಂತು ಮನ್ನಿಸಿದನು, ಆತನು ರಾಜಕುಮಾರಿಗೆ ಕುರ್ನಿಸಾತಮಾಡಿ ತನ್ನ ಯಾವತ್ತು ಸೈನ್ಯದೊಡನೆ ಹೋಗ ತೊಡಗಿದನು. ಆಗ ಬದ್ರುನ್ನಿಸೆಯು—

"ರಣದುಲ್ಲಾಖಾನ, ಫಿಯಾದಾಖಾನ, ಉಳಿದ ಯವನ ವೀರರೇ, ನೀವು ದಿಲ್ಲೀಪತಿಗೆ ಅಂಕಿತರಾಗಿರುವಿರಿ. ದಿಲ್ಲೀಪತಿಯ ಕೀರ್ತಿಯು ಹೆಚ್ಚುವಂತೆ, ದಿಲ್ಲೀಪತಿಯು ಲೋಕಪ್ರಿಯ

ನಾಗುವನಂತೆ ನೀವು ಯಾವಾಗಲೂ ನಡೆಯುತ್ತ ಹೋಗಿರಿ. ನಾವು ಅಧಿಕಾರಿಗಳು ಸಾರ್ವಭೌಮರು ನಮ್ಮ ಜಾತಿಯವರು ಎಂದು ತಿಳಿದು ಅನ್ಯಾಯದಿಂದ ನಡೆಯುತ್ತ ಜನರನ್ನು ಬಲಾತ್ಕರಿಸುತ್ತ ನಿಮ್ಮ ಹಿತವನ್ನೇ ನೋಡಿಕೊಳ್ಳಹತ್ತಿದರೆ, ಬೇಗನೆ ನಿಮ್ಮ ಮೇಲೆ ಹಾಗು ನಿಮ್ಮ ಬಾದಶಹರ ಮೇಲೆ ಪ್ರಜೆಗಳು ಕ್ಷೋಭಿಸಬಹುದು. ಹಿಂದುಸ್ಥಾನದ ಜನರು ಶಾಂತರಾಗಿರುವವರೆಗೆ ಒಳ್ಳೇ ಸಹನಶೀಲರಾಗಿರುವರು. ಆದರೆ ತಮ್ಮ ಹಾಗು ತಮ್ಮ ಧರ್ಮದ ಛಲವಾಗ ಹತ್ತಿದಾಗ ಒಮ್ಮೆ ಅವರು ಕ್ಷೋಭಿಸಿ ಎಲ್ಲರೂ ಒಟ್ಟಾದರೆ, ದಿಲ್ಲಿಯ ಇಸ್ಲಾಮಿ ಸತ್ತೆಯನ್ನು ಹಾ ಹಾ ಅನ್ನುವದರೊಳಗಾಗಿ ಬುಡಮೇಲುಮಾಡದೆ ಬಿಡಲಿಕ್ಕಿಲ್ಲ; ಆದ್ದರಿಂದ ಸ್ವಲ್ಪ ವಿಚಾರದಿಂದ ನಡೆದುಕೊಳ್ಳಿರಿ. ಹೋಗಿರಿ, ರಾಜ್ಯಪ್ರೇಮದಿಂದ ಮೊದಲೇ ಕಲಂಕಿತವಾಗಿರುವ ನನ್ನ ತಂದೆಯ ಹೆಸರನ್ನು ಮತ್ತಿಷ್ಟು ಕಲಂಕಯುಕ್ತವಾಗುವಂತೆ ನೀವು ನಡೆದುಕೊಳ್ಳಬೇಡಿರಿ. ನೀವು ಅಧಿಕಾರವಿಲ್ಲದೆ ಯಾವ ಯಾವ ಬಲತ್ಕಾರವನ್ನು ಪ್ರಜೆಗಳ ಮೇಲೆ ಮಾಡುವಿರೋ, ಸ್ವೇಚ್ಛೆಯಿಂದ ನೀವು ಯಾವ ಯಾವ ಅನ್ಯಾಯವನ್ನು ಮಾಡುವಿರೋ, ನೀವು ಯಾವ ಯಾವ ಪಾಪಗಳನ್ನು ಸ್ವಚ್ಛಂದವಾಗಿ ಆಚರಿಸುವಿರೋ ಅವೆಲ್ಲವನ್ನು ಮಾಡುವವನೂ ಮಾಡಿಸುವವನೂ ದಿಲ್ಲೀಪತಿಯೇ ಇರುವನೆಂದು ಎಲ್ಲಕಡೆಗೂ ಡಂಗುರ ಹೊಡೆದು ಹೋಗುವುದು.

ರಣದುಲ್ಲಾಖಾನನೂ, ಫಿಯಾದಾಖಾನನೂ, ಬೇರೆ ಯವನ ವೀರರೂ ತಿರುಗಿ ಮಾತಾಡದೆ ಚತುರ್ಭುಜನ ಮಂದಿರದಿಂದ ಹೊರಟು ಹೋದರು. ಚತುರ್ಭುಜನ ಮಂದಿರದ ಸಂರಕ್ಷಣ ಹೀಗೆ ಅಕಲ್ಪಿತ ರೀತಿಯಿಂದ ಆದದ್ದಕ್ಕಾಗಿ ಜನರು ಪರಮಾಶ್ಚರ್ಯಪಟ್ಟರು; ಅವರಿಗೆ ಪರಮಾವಧಿ ಆನಂದವಾಯಿತು. ಆ ಆನಂದದ ಭರದಲ್ಲಿ ಅವರು ಔರಂಗಜೇಬ ಬಾದಶಹನ ಮಗಳ ಉಪಕಾರವನ್ನು ನೆನಸುತ್ತ ಆಕೆಯು ಪರಮ ಧನ್ಯಳೆಂದು ಕೊಂಡಾಡಿದರು. ಮಹಾನುಭಾವರಾದ ಪ್ರಾಣನಾಥ ಪ್ರಭುಗಳ ಭವಿಷ್ಯವು ಎಷ್ಟು ಸಲಕ್ಷಣವಾಗಿ ನಿಜವಾಯಿತಲ್ಲ! ಅವರ ಭವಿಷ್ಯದಂತೆ ಛತ್ರಸಾಲನ ಯೋಗದಿಂದ ಬುಂದೇಲ ಖಂಡಕ್ಕೆ ಯಾಕೆ ಸ್ವಾತಂತ್ರ್ಯವು ದೊರೆಯದೆ ಇದ್ದೀತು! ಪ್ರಾಣನಾಥ ಪ್ರಭುಗಳ ಯೋಗ್ಯತೆಯು ಸಾಮಾನ್ಯವಾದದ್ದಲ್ಲ. ಅಂತಹ ದುಷ್ಟ ಯವನನೆಂದರೇನು, ಪ್ರಭುಗಳ ಸ್ಪರ್ಶಮಾಡುವ ಧೈರ್ಯವು ಆತನಿಗಾಗಲಿಲ್ಲ! ಅಂತಹ ದೇವಾಂಶರು ಬುಂದೇಲ ಖಂಡದ ಸ್ವಾತಂತ್ರ್ಯಕ್ಕಾಗಿ ಟೊಂಕಕಟ್ಟಿರುವುದರಿಂದ, ಸಾವು ಸ್ವಾತಂತ್ರ್ಯವನ್ನು ಪಡೆಯುವುದೇ ನಿಶ್ಚಯವು. ಎಂಬಿವೇ ಮೊದಲಾದ ವಿಚಾರಗಳಿಂದ ಬುಂದೇಲಿಗಳು ಪ್ರಭುಗಳ ವಿಷಯದಲ್ಲಿ ಅತ್ಯಂತವಾದ ಶ್ರದ್ಧಾಭಕ್ತಿಗಳನ್ನು ತಾಳುತ್ತ ಅವರ ಅಪ್ಪಣೆಯಂತೆ ಛತ್ರಸಾಲನಿಗೆ ಸಹಾಯ ಮಾಡಲು ಚತುರ್ಭುಜ ಪರಮಾತ್ಮನ ಸಾಕ್ಷಿಯಿಂದ ಮನಸ್ಸಿನಲ್ಲಿ ನಿಶ್ಚಯಿಸಿದರು. ಈ ಕೆಲಸದಲ್ಲಿ ತಮ್ಮ ದೇಹಪಾತವಾದರೂ ರಣಭೂಮಿಯಿಂದ ಕಾಲುಕಿತ್ತದೆ ಯವನರೊಡನೆ ಕಾದಿ ಅವರು ನಮ್ಮ ದೇವಸ್ಥಾನಗಳ ನೆಲಸಮಮಾಡಿದ್ದರ ಸೇಡು ತೀರಿಸಿಕೊಳ್ಳದೆ ಬಿಡಲಿಕ್ಕಿಲ್ಲವೆಂದು ಪ್ರತಿಜ್ಞೆ ಮಾಡಹತ್ತಿದರು. ಅಂದಿನ ಉಳಿದ ದಿವಸವನ್ನು ಹಬ್ಬದಂತೆ ಮಹೋತ್ಸವದಿಂದ

ಕಳೆದು ಉಚ್ಚತರ ಭಕ್ತಿಭಾವದಿಂದ ಚತುರ್ಭುಜನ ಆರಾಧನೆಯನ್ನು ಮಾಡಿದರು; ಬಡಿದ ಹೊರತು ಭಕ್ತಿಯು ಹುಟ್ಟುವದಿಲ್ಲವೆಂಬ ಮಾತು ಸುಳ್ಳಲ್ಲ!

ಮಹಾಮುಪಿಮರಾದ ಪ್ರಾಣನಾಥ ಪ್ರಭುಗಳು ವಿಂಧ್ಯವಾಸಿನಿಯ ಧ್ಯಾನದಲ್ಲಿದ್ದರಿಂದ ಮಧ್ಯರಾತ್ರಿಯು ಯಾವಾಗ ಮೀರಿಹೋಯಿತೆಂಬದು ಅವರಿಗೆ ಗೊತ್ತೇ ಆಗಲಿಲ್ಲ! ಅವರು ಧ್ಯಾನವಿಸರ್ಜನಮಾಡಿ ಸುತ್ತುಮುತ್ತು ನೋಡುತ್ತಿರಲು, ಭಗವಾನ ಸೂರ್ಯನಾರಾಯಣನ ತೀಕ್ಷ್ಣವಾದ ಪ್ರಕಾಶವು ಇಲ್ಲದಾಗಿ, ಚಂದ್ರನ ಶೀತಕಿರಣಗಳು ಜಗತ್ತನ್ನು ವ್ಯಾಪಿಸಿರುವವೆಂಬದು ಅವರಿಗೆ ಗೊತ್ತಾಯಿತು. ಓರಭಾದ ನಾಗರೀಕರು ಹೊರಟುಹೋಗಿದ್ದರು. ಚತುರ್ಭುಜ ಪರಮಾತ್ಮನ ದೇವಾಲಯವು ಇದ್ದಕ್ಕಿದ್ದಹಾಗೆ ಇದ್ದಿತು. ಒಬ್ಬ ಸುಂದರ ತರುಣಿಯು ಕೈಜೋಡಿಸಿಕೊಂಡು ತಮ್ಮ ಬಳಿಯಲ್ಲಿ ನಿಂತುಕೊಂಡಿರುವದನ್ನು ಅವರು ನೋಡಿದರು. ಈಕೆಯೇನು ಪ್ರತ್ಯಕ್ಷವಿಂಧ್ಯವಾಸಿನಿಯೋ? ನನ್ನ ಧ್ಯಾನಕ್ಕೆ ಸಂತುಷ್ಟಳಾಗಿ ಆಕೆಯು ಪ್ರತ್ಯಕ್ಷವಾಗಿರಬಹುದೇನು? ಹಾಗಿದ್ದರೆ, ಹೀಗೆ ಕೈಜೋಡಿಸಿಕೊಂಡು ನಿಂತಿರುವ ಕಾರಣವೇನು? ದುಷ್ಟ ರಣದುಲ್ಲಾಖಾನನನ್ನೂ, ಮೊಗಲ ಸೈನ್ಯವನ್ನೂ, ಓಡಿಸಿ ಈಕೆಯೇ ಚುತುರ್ಭುಜನ ಸಂರಕ್ಷಣವನ್ನು ಮಾಡಿರಬಹುದೇನು, ಎಂದು ಯೋಚಿಸುತ್ತಿರಲು, ಬದ್ರುನ್ನಿಸೆಯು ಪ್ರಭುಗಳ ಚರಣಕ್ಕೆರಗಿ—''ಮಹಾತ್ಮನ್, ಔರಂಗಜೇಬ ಬಾದಶಹನ ಮಗಳಾದ ಬದ್ರುನ್ನಿಸೆಯು ನಮಸ್ಕರಿಸುತ್ತಿರುವಳು, ಆಶೀರ್ವದಿಸಬೇಕು,'' ಎಂದು ಪ್ರಾರ್ಥಿಸಿದಳು.

## ಬದ್ರುನ್ನಿಸೆಯ ಭಯ–ಭಕ್ತಿ

ಪ್ರಾಣನಾಥ ಪ್ರಭುಗಳು ಧ್ಯಾನಮಗ್ನರಾದದ್ದರಿಂದ ಅವರಿಗೆ ಬದ್ರುನ್ನಿಸೆಯು ಬಂದ ಸಂಗತಿಯು ಗೊತ್ತಾಗಿದ್ದಿಲ್ಲ. ಈ ಸಜ್ಜನಳೇ ಚತುರ್ಭುಜನ ಮಂದಿರವನ್ನು ಉಳಿಸಿರಬಹುದೆಂದು ತರ್ಕಿಸಿದರು. ಪ್ರತ್ಯಕ್ಷ ಯವನ ಪುತ್ರಿಯು! ಅದರಲ್ಲಿ ಔರಂಗಜೇಬನಂತಹ ಧರ್ಮಮೂಢ ಬಾದಶಹನ ಪುತ್ರಿಯು ಇಂತಹ ಸತ್ಕಾರ್ಯಮಾಡುವದು ಅವರಿಗೆ ಪರಮಾಶ್ಚರ್ಯಕರವಾಗಿ ತೋರಿತು. ಬದ್ರುನ್ನಿಸೆಯು ಇಷ್ಟುಭಕ್ತಿ–ವಿಶ್ವಾಸಗಳಿಂದ ತಮ್ಮೊಡನೆ ನಡೆದು ಕೊಳ್ಳುತ್ತಿರುವದರ ಗೂಢವೂ ಅವರಿಗೆ ತಿಳಿಯಲಿಲ್ಲ; ಆದರೆ ಅವರು ಅತ್ಯಂತ ವಾತ್ಸಲ್ಯದಿಂದ—''ಏಳವ್ವಾ, ರಾಜಪುತ್ರೀ, ಏಳು! ಶ್ರೀ ವಿಂಧ್ಯವಾಸಿನಿಯ ಅಪೂರ್ವ ಘಟನೆಯು ನನಗೆ ಏನು ತಿಳಿಯದಾಗಿದೆ; ಆದರೆ ಸುಶೀಲೇ, ನಿನ್ನಂತಹ ಯವನ ತರುಣಿಯು ನಮ್ಮಂಥ ಭಿಕ್ಷುಕರಿಗೆ ವಿನಯದಿಂದ ನಮಿಸುತ್ತಿರುವದನ್ನು ನೋಡಿದರೆ, ಕಲ್ಲಿದ್ದಲಿಯ ಕಣಿಗಳಲ್ಲಿ ರತ್ನಗಳು ದೊರುಕುತ್ತಿದ್ದದ್ದರ ನೆನಪು ಆಗುತ್ತದೆ! ಬಾದಶಹನ ಹೊಟ್ಟೆಯಲ್ಲಿ ನಿನ್ನಂತಹ ಸದ್ಭಾವದ ಸತ್ಪುತ್ರಿಯು ಹುಟ್ಟಿ ಬರುವದೆಂದರೆ, ಮುಳ್ಳುಗಿಡಗಳ ಅರಣ್ಯದಲ್ಲಿ

ಗುಲಾಬಿಯ ಹೂಗಳು ಸಿಗುವಂತೆಯೇ ಸರಿ! ನನಗೆ ನೀನು ಪ್ರತ್ಯಕ್ಷ ಜಗನ್ಮಾತೆ ವಿಂಧ್ಯವಾಸಿನಿಯಂತೆ ತೋರಿದೆ; ನೀನು ಕೈಜೋಡಿಸಿ ನಿಂತುಕೊಂಡಿರದಿದ್ದರೆ, ನನ್ನ ತಾಯಿಯೆ ನಿಂತಿರುವೆಯೆಂದು ನಾನು ನಿನ್ನ ಚರಣಗಳಿಗೆ ಎರಗುತ್ತಿದ್ದೆನು! ಹೇಳು, ನೀನು ಹೀಗೆ ಕೈಜೋಡಿಸಿಕೊಂಡು ನಿಂತು ಎಷ್ಟು ಹೊತ್ತಾಯಿತು!

ಬದ್ರುನ್ನಿಸೆ–ಪ್ರಭುಗಳು ಧ್ಯಾನಸ್ಥರಾದಾಗಿನಿಂದ!

ಪ್ರಭು—ಏನು? ಜನಾನಖಾನೆಯ ವಿಲಾಸದಲ್ಲಿ ಬೆಳೆದಿರುವ ಈ ಪುಷ್ಪವನ್ನು ಬಿಸಿಲು ಚಳಿಗಳಲ್ಲಿ ಹೀಗೆ ಅಖಂಡ ನಾಲ್ಕುಪ್ರಹರ ನಾನು ನಿಲ್ಲಿಸಿದನೆ? ಬಾಲೇ ಸುಕುಮಾರಿಯಾದ ಬಾಲೇ, ನಿನ್ನ ಕೋಮಲವಾದ ಚರಣಗಳು ನೋಯುತ್ತಿರಬಹುದು, ಕುಳಿತುಕೊಳ್ಳಮ್ಮಾ! ಇಂಥ ಕಠಿಣ ತಪಶ್ಚರ್ಯದ ಕಾರಣವೇನು ನನಗೆ ಹೇಳು.

ಬದ್ರುನ್ನಿಸೆ—(ಕೆಳಗೆ ಕುಳಿತುಕೊಳ್ಳುತ್ತ) ಪ್ರಭುಗಳೇ, ತಾವು ತ್ರಿಕಾಲಜ್ಞರು, ತಮ್ಮ ಮುಂದೆ ಹೊಸದಾಗಿ ಯಾವದನ್ನೂ ಹೇಳಲಾಗುವದಿಲ್ಲ; ಆದರೂ ಅಪ್ಪಣೆಯಾದದ್ದರಿಂದ ಹೇಳುವೆನು. ಬುಂದೇಲಖಂಡಕ್ಕೆ ಸ್ವಾತಂತ್ರ್ಯವು ಎಂದು ದೊರೆಯುವದೆಂಬದನ್ನು ತಮ್ಮ ಮುಖದಿಂದ ಕೇಳಬೇಕೆಂದು ನಾನು ಇಚ್ಛಿಸುವೆನು.

ಪ್ರಭು—ಅಮ್ಮಾ, ನಿಮ್ಮೆಲ್ಲರಂತೆಯೇ ನಾನೊಬ್ಬ ಸಾಮಾನ್ಯ ಮನುಷ್ಯನು. ನನಗೆ ತ್ರಿಕಾಲಜ್ಞಾನವು ಹೇಗಿರಬೇಕು? ಇರಲಿ, ಬುಂದೇಲಖಂಡದ ಜನರ ಮನಸ್ಸಿನ ಸ್ಥಿತಿಯನ್ನು ನಾನು ನೋಡಿರುವೆನು; ಅದರ ಮೇಲಿಂದ ನೋಡಿದರೆ, ಬುಂದೇಲಖಂಡವು ಸ್ವತಂತ್ರವಾಗುವ ಕಾಲವು ಸಮೀಪಿಸಿರುವದೆಂಬಂತೆ ನನಗೆ ತೋರುತ್ತದೆ! ಆದರೆ ಬದ್ರುನ್ನಿಸೇ, ಬುಂದೇಲಖಂಡದ ಸ್ವಾತಂತ್ರ್ಯದ ವಿಷಯವಾಗಿ ನೀನು ಇಷ್ಟು ಆತುರಳು ಯಾಕಾಗಿರುವೆ?

ಬದ್ರುನ್ನಿಸೆ—ನನ್ನ ಐಹಿಕ ಆಯುಷ್ಯದ ಸುಖ–ದುಃಖಗಳು ಕೇವಲ ಬುಂದೇಲಖಂಡದ ಸ್ವಾತಂತ್ರ್ಯವನ್ನು ಅವಲಂಬಿಸಿರುವವು; ಆದ್ದರಿಂದ ಪ್ರಭೋ, ನನ್ನ ಕಣ್ಣಮುಂದೆ ಬುಂದೇಲಖಂಡವು ಸ್ವತಂತ್ರವಾದೀತೇನು?

ಪ್ರಾಣನಾಥ ಪ್ರಭುಗಳು—ಬುಂದೇಲಖಂಡವು ಅತ್ಯಲ್ಪ ಕಾಲದಲ್ಲಿ, ಇನ್ನು ನಾಲ್ಕು ತಿಂಗಳೊಳಗೆ ಸ್ವಾತಂತ್ರ್ಯದ ಸವಿಯಾದ ಫಲವನ್ನು ಭೋಗಿಸತೊಡಗುವದು! ದಿಲ್ಲೀಪತಿಯು ಬಲಾಢ್ಯನಾಗಿರುವದರಿಂದ, ಆತನು ಬುಂದೇಲಖಂಡದ ಸ್ವಾತಂತ್ರ್ಯವನ್ನು ಕಸಿದುಕೊಳ್ಳಲು ಮನಃಪೂರ್ವಕವಾಗಿ ಯತ್ನಿಸಬಹುದು; ಆದರೆ ಒಮ್ಮೆ ಬುಂದೇಲಿಗಳಿಗೆ ಸ್ವಾತಂತ್ರ್ಯವು ಪ್ರಾಪ್ತವಾದರೆ, ಒಮ್ಮೆ ಅವರಿಗೆ ಆ ಸ್ವಾತಂತ್ರ್ಯದ ಸವಿಯು ಹತ್ತಿದರೆ ತಮ್ಮ ಜನ್ಮಸಿದ್ಧವಾದ ಆ ಹಕ್ಕನ್ನು ಅವರು ಎಂದೂ ಕಳೆದುಕೊಳ್ಳಲಾರರು. ಬುಂದೇಲಖಂಡದ ಜನರ ಮನಸ್ಸಿನ ಸ್ಥಿತಿಗಳು ಈಗ ಬದಲಾಗಿಹೋಗಿರುತ್ತವೆ. ಬುಂದೇಲಖಂಡದೊಳಗಿನ ಸರದಾರ ಪುತ್ರರ, ಹಾಗು ರಾಜಪುತ್ರರ ಮನಸ್ಸುಗಳು ದಳಪತರಾಯನ ಪಯತ್ನದಿಂದ ಪರಿಶುದ್ಧವಾಗಿಹೋಗಿ, ಬುಂದೇಲಖಂಡದ ಆ ತರುಣ ವೀರರು ಛತ್ರಸಾಲನಿಗೆ ಯಾವಾಗ ಸಹಾಯಮಾಡೇವೆಂದು ಹಾತೊರೆಯಹತ್ತಿದ್ದಾರೆ. ದಳಪತರಾಯನು ಇಷ್ಟುಹೊತ್ತಿಗೇ ಬರಬೇಕಾಗಿತ್ತು; ಆದರೆ ತಡೆದ ಕಾರಣವೇನೋ ತಿಳಿಯದು.

ಬದ್ರುನ್ನಿಸೆ—(ಆನಂದದಿಂದ) ಮಹಾರಾಜ, ಯುವರಾಜ ದಳಪತರಾಯರು ಪ್ರಭುಗಳ ದರ್ಶನಕ್ಕಾಗಿ ಇಲ್ಲಿಗೆ ಬರುತ್ತಿರುವದು ನನ್ನ ಮೇಲಿನ ಪ್ರಭುಗಳ ಕೃಪೆಯು ನಿದರ್ಶನವೇ ಸರಿ.

ಪ್ರಭು—ಹೌದು, ಇಂದು ಅವನು ನನ್ನನ್ನು ಕಾಣತಕ್ಕವನಿರುವನು; ಆದರೆ ಬದ್ರುನ್ನಿಸೇ, ನಿನಗೂ ದಳಪತರಾಯನಿಗೂ ಎಲ್ಲಿಯ ಗುರುತು?

ಬದ್ರುನ್ನಿಸೆ—(ಲಜ್ಜೆಯಮೂಲಕಮಾತು ಹೊರಡದಿರಲು ಕೆಲಹೊತ್ತು ಸುಮ್ಮನಿದ್ದು) ಪ್ರಭೋ, ಯುವರಾಜ ದಳಪತರಾಯರ ಗುರುತು ನನಗಿದ್ದಷ್ಟು ಈ ತ್ರಿಭುವನದಲ್ಲಿ ಮತ್ತಾರಿಗೂ ಇರಲಿಕ್ಕಿಲ್ಲ.

ಇದನ್ನು ಕೇಳಿ ಪ್ರಾಣನಾಥ ಪ್ರಭುಗಳಿಗೆ ಅತ್ಯಂತ ಆಶ್ಚರ್ಯವಾಯಿತು. ದಳಪತನೆಲ್ಲಿ ಬದ್ರುನ್ನಿಸೆಯಲ್ಲಿ? ಇವರಿಬ್ಬರ ಪರಿಚಯವು ಹೇಗಾಗಿರಬಹುದು, ಎಂದು ಯೋಚಿಸುತ್ತಿರಲು, ದಳಪತರಾಯನು ಬಂದು ಪ್ರಭುಗಳ ಚರಣಕ್ಕೆರಗಿದನು. ಆಗ ಪ್ರಭುಗಳು ಸ್ನೇಹಾಂಕಿತ ಕರಗಳಿಂದ ಯುವರಾಜ ದಳಪತರಾಯನನ್ನು ಎಬ್ಬಿಸುತ್ತ ಆತುರದಿಂದ—''ದಳಪತ, ಈ ನೂತನ ಸುಂದರಿಯ ಗುರುತು ನಿನಗಿರುವದೋ'' ಎಂದು ಕೇಳಿದರು. ದಳಪತರಾಯನು ಬದ್ರುನ್ನಿಸೆಯ ಕಡೆಗೆ ನೋಡುತ್ತಿರುವಾಗ ಅವರಿಬ್ಬರ ನೋಟಗಳು ತಾಕಲಾಡಲು, ಇಬ್ಬರ ಆನಂದಕ್ಕೆ ಮೇರೆ ಇಲ್ಲದಾಯಿತು. ಆನಂದದ ಭರವು ತಗ್ಗಿದಮೇಲೆ ದಳಪತರಾಯನು ಪ್ರಭುಗಳನ್ನು ಕುರಿತು–

ದಳಪತ—ನನಗೆ ಈ ಸುಂದರ ಶಹಾಜಾದಿಯ ಪರಿಚಯವಿದ್ದಷ್ಟು ಈ ತ್ರಿಭುವನದಲ್ಲಿ ಮತ್ತೊಬ್ಬರಿಗೆ ಇರಲಿಕ್ಕಿಲ್ಲ.

ಪ್ರಾಣನಾಥ—(ಇಬ್ಬರ ಮಾತಿನ ಮರ್ಮವರಿಯದೆ) ದಳಪತ, ಇಂತಹ ಸದ್ಗುಣ ಶಾಲಿನಿಯ ಗುರುತು ಇರುವದು ಮಹದ್ಭಾಗ್ಯವೇ ಸರಿ. ರಣದುಲ್ಲಾಖಾನನಿಂದ ಶ್ರೀ ಚತುರ್ಭುಜ ಪರಮಾತ್ಮನ ಮಂದಿರವು ನಾಶವಾಗದೆ ಇಂದು ಉಳಿಯಲಿಕ್ಕೆ ಈ ಶಹಾಜಾದಿಯೇ ಕಾರಣ ಳಾಗಿರಬಹುದಾಗಿ ತೋರುತ್ತದೆ; ಇಲ್ಲದಿದ್ದರೆ ಆ ದುಷ್ಟ ಯವನನು ಮೊದಲು ನನ್ನನ್ನು ಸಂಹರಿಸಿ, ಆಮೇಲೆ ಚತುರ್ಭುಜ ಪರಮಾತ್ಮನ ಮೂರ್ತಿಯನ್ನು ನಾಶಗೊಳಿಸುತ್ತಿದ್ದನು!

ಹೀಗೆ ನುಡಿಯುತ್ತಿರುವಾಗ ಒಬ್ಬ ಭಾವಿಕನಾದ ನಾಗರಿಕನು ಮುಂದಕ್ಕೆ ಬಂದು ಪ್ರಭುಗಳ ಚರಣಗಳಿಗೆ ವಂದಿಸಿದನು. ಆಗ ಪ್ರಭುಗಳು ಆತನನ್ನು ಎಬ್ಬಿಸುತ್ತಿರಲು, ಆತನು—''ಮಹಾತ್ಮರೇ, ತಾವು ಧ್ಯಾನಸ್ಥರಾಗಿರಲು, ಶಹಾಜಾದಿಯವರು ಒಬ್ಬರೇ ಕೈಜೋಡಿಸಿಕೊಂಡು ನಿಂತಿದ್ದರು. ಬಹು ಜನರು ಈ ಕೌತುಕವನ್ನು ನೋಡುತ್ತ ನಿಂತಿದ್ದರೂ, ರಾತ್ರಿಯಾದಾದಂತೆ ಒಬ್ಬೊಬ್ಬರೇ ಹೊರಟುಹೋದರು. ತಮ್ಮ ಸಮಾಧಿಯ ಸ್ಥಿತಿಯಲ್ಲಿ ಈ ತರುಣಿಯೊಬ್ಬಳನ್ನೇ ಬಿಟ್ಟು ಹೋಗುವಹಾಗೆ ನನಗೆ ಆಗಲಿಲ್ಲ; ಆದ್ದರಿಂದ ನಾನು, ಅದೋ ಆ ಧರ್ಮಶಾಲೆಯಲ್ಲಿ ಎಚ್ಚರದಿಂದ ಕುಳಿತುಕೊಂಡಿದ್ದೆನು. ಮಹಾತ್ಮನ್, ಈ ರಾಜಪುತ್ರಿಯಿಂದ ಈದಿನ ಆಗಿರುವ

ಕೆಲಸವು ಸಣ್ಣ ಪುಟ್ಟದ್ದಲ್ಲ ಎಂದು ಹೇಳಿ ಶ್ರೀ ಚತುರ್ಭುಜ ಪರಮಾತ್ಮನ ಸಂರಕ್ಷಣವಾದದ್ದನ್ನು ವರ್ಣಿಸಿದನು. ಅದನ್ನು ಕೇಳಿ ಪ್ರಭುಗಳು ಸಂತೋಷಪಟ್ಟು ಮತ್ತೆ ದಳಪತನನ್ನು ಕುರಿತು –

ಪ್ರಭುಗಳು —ದಳಪತ, ಕೇಳಿದೆಯಾ? ನಾನು ಧ್ಯಾನಸ್ಥನಾದದ್ದರಿಂದ ಈಮಾತು ನನಗೆ ಗೊತ್ತಿದ್ದಿಲ್ಲ. ಈ ಬದ್ರುನ್ನಿಸೆಯು ತನ್ನನ್ನು ದಿಲ್ಲೀಪತಿಯ ಮಗಳೆಂದು ಹೇಳಿಕೊಳ್ಳುವಳು; ಆದರೆ ಬುಂದೇಲಖಂಡದ ದೊಡ್ಡ ಮನೆತನದಲ್ಲಿ ಹುಟ್ಟಿದ ಬಾಲೆಯರು ನಾಚುವಂತೆ ಬುಂದೇಲಖಂಡದ ಕಲ್ಯಾಣಕ್ಕಾಗಿ ಈಕೆಯು ಆತುರಪಡುತ್ತಿರುವಳು. ಈಕೆಯ ಪವಿತ್ರ ಸದ್ಗುಣಗಳ ಕಡೆಗೆ ನೋಡಿದರೆ, ಈಕೆಯು ಸರ್ವಸಾಧಾರಣ ಬಾಲೆಯಾಗಿರದೆ, ಅಸಾಧಾರಣಳಾದ ದೇವಿಯಾಗಿರುವಳೆಂದು ಹೇಳಬೇಕಾಗುವದು! ದಳಪತ, ಬುಂದೇಲಖಂಡದ ಭಯಂಕರ ಶತ್ರುವಾಗಿರುವ ಔರಂಗಜೇಬನ ಮಗಳು ಈಕೆಯು, ಬುಂದೇಲಖಂಡದ ಸ್ವಾತ್ರಂತ್ಯಪ್ರಾಪ್ತಿಯ ಹಾದಿಯನ್ನು ಆತುರದಿಂದ ನೋಡುತ್ತಿರುವದು ಆಶ್ಚರ್ಯವಲ್ಲವೆ?

ದಳಪತ—ಭಗವನ್, ಈ ಯವನ ಕನ್ನೆಯು ಯಾವನೊಬ್ಬ ಬುಂದೇಲಿಯ ತರುಣನನ್ನು ಲಗ್ನವಾದರೆ, ಅಪರಾಧವಾಗಬಹುದೇನು?

ಪ್ರಭು—ದಳಪತ, ಈಗಿನ ಯವನ ತರುಣರು ನೈತಿಕ ದೃಷ್ಟಿಯಿಂದ ಅಧಃಪತನ ಹೊಂದಿರುವದನ್ನು ನೋಡಿದರೆ, ಈ ಪವಿತ್ರಮನಸ್ಸಿನ, ಹಾಗು ಮಂಗಲ ವಿಚಾರದ ನಿರತಿಶಯ ಕೋಮಲ ಹೃದಯದ ಬಾಲೆಗೆ ಯವನರಿಂದ ಹೊರತಾದ ತರುಣಪತಿಯೇ ಯೋಗ್ಯನಾಗಿ ತೋರುವನು.

ಬದ್ರುನ್ನಿಸೆ—(ಹರ್ಷನಿರ್ಭರಳಾಗಿ) ಪ್ರಭೋ, ನನ್ನ ಪ್ರೇಮವನ್ನು ಸ್ವೀಕರಿಸಿ, ನನ್ನನ್ನು ಚರಣದಾಸಿಯಾಗಿ ಮಾಡಿಕೊಳ್ಳಲು ಒಬ್ಬ ಬುಂದೇಲಿ ತರುಣನು ನನಗೆ ವಚನಕೊಟ್ಟು, ತನ್ನ ಆ ವಚನದಂತೆ ಆತನು ನನ್ನನ್ನು ಸ್ವೀಕರಿಸಿದರೆ, ನೀತಿದೃಷ್ಟಿಯಿಂದ ಅಪರಾಧವಾಗಬಹುದೇನು?

ಪ್ರಭು—(ಆವೇಶದಿಂದ) ಬದ್ರುನ್ನಿಸೇ, ನೀನು ಪಾವಿತ್ರ್ಯದ—ಮಾಂಗಲ್ಯದ–ನೀತಿಯ ಮೂರ್ತಿಯಾಗಿರುವದರಿಂದ, ನಿನ್ನ ಪಾಣಿಗ್ರಹಣ ಮಾಡಿದ ದೇವತೆಗಳ ಯೋಗ್ಯತೆಯೂ ಹೆಚ್ಚಬಹುದು; ಅಂದಬಳಿಕ ಮನುಷ್ಯನು ಪಾಡೇನು? ಆದರೆ ಯಾವ ಭಾಗ್ಯಶಾಲಿ ಬುಂದೇಲನು ನಿನ್ನ ಸ್ವರ್ಗಿಯ ಪ್ರೇಮಕ್ಕೆ ಪಾತ್ರನಾಗಿರುವನು?

ಪ್ರಭುಗಳು ಈ ಮಾತುಗಳನ್ನು ಕೇಳಿ ಬದ್ರುನ್ನಿಸೆಯು ನಾಚಿಕೆಯಿಂದ ದಳಪತರಾಯನ ಕಡೆಗೆ ನೋಡತೊಡಗಿದಳು. ಆಗ ಪ್ರಭುಗಳಿಗೆ ವಸ್ತುಸ್ಥಿತಿಯ ಜ್ಞಾನವಾಗಿ ಅವರ ಮನಸ್ಸು ವಿಚಾರಮಗ್ನವಾಯಿತು. ಪ್ರಭುಗಳಿಗೆ ಈ ಮಾತಿನ ವಿಚಾರಕ್ಕೆ ತಕ್ಕಷ್ಟು ಅವಕಾಶವು ದೊರೆಯಲೆಂದು ದಳಪತನು ಪ್ರಭುಗಳನ್ನು ಕುರಿತು –

ದಳಪತ—ಪ್ರಭೋ, ಛತ್ರಸಾಲನು ಬೇಗನೆ ಬುಂದೇಲಖಂಡಕ್ಕೆ ಬರುವನು. ರಾಜಾ ಜಯಸಿಂಗರ ಸೇನೆಯು ಛತ್ರಸಾಲನ ಪರಾಕ್ರಮದಿಂದ ಜಯಶಾಲಿಯಾಗಿ ದಿಲ್ಲಿಯಕಡೆಗೆ ತಿರುಗಿತು. ಮಹಾತ್ಮನಾದ ಶಿವಾಜಿಭೋಸಲೆಯನ್ನು ಕಾಣಹೋಗಿದ್ದ ಛತ್ರಸಾಲನು ಬೇಗನೆ ಬುಂದೇಲಖಂಡಕ್ಕೆ ಬರಬಹುದೆಂದು ರಾಜಾ ಜಯಸಿಂಗರು ನನ್ನ ಮುಂದೆ ಹೇಳಿದರು. ಛತ್ರಸಾಲನು ಬಂದಕೂಡಲೆ ಸ್ವಾತಂತ್ರ್ಯಪ್ರಾಪ್ತಿಗಾಗಿ ಯುದ್ಧವನ್ನು ಆರಂಭಿಸಬೇಕಷ್ಟೇ?

ದಳಪತರಾಯನ ಈ ಮಾತುಗಳನ್ನು ಕೇಳಿ ಪ್ರಾಣನಾಥ ಪ್ರಭುಗಳು ಆನಂದದಿಂದ ತೂಗಾಡಹತ್ತಿದರು. ಕೆಲಹೊತ್ತಿನಮೇಲೆ ಪ್ರಭುಗಳು ಪ್ರಾತಃಸ್ನಾನಕ್ಕಾಗಿ ಬಟವಾನದಿಗೆ ಹೋಗಲು, ಇತ್ತ ದಳಪತರಾಯನು ಬದ್ರುನ್ನಿಸೆಯನ್ನು ಕುರಿತು –

ದಳಪತ — (ಪ್ರೇಮಲವಾಣಿಯಿಂದ) ಶಹಾಜಾದಿ ಬದ್ರುನ್ನಿಸೇ, ದಿಲ್ಲಿಯ ಬಾದಶಾಹಿ ಜನಾನಖಾನೆಯೊಳಗಿನ ಸೌಖ್ಯವನ್ನೂ, ವಿಲಾಸವನ್ನೂ ಬಿಟ್ಟುಕೊಟ್ಟು ನೀನು ಬುಂದೇಲ ಖಂಡಕ್ಕೆ ಯಾವಾಗಬಂದೆ?

ಬದ್ರುನ್ನಿಸೆ—ಆ ದಿವಸ ಯಮುನಾತೀರದಲ್ಲಿ ನೀವು ನನ್ನ ಪ್ರೇಮವನ್ನು ಸ್ವೀಕರಿಸಿದಂದಿನಿಂದ ಜನಾನಖಾನೆಯೊಳಗಿನ ಸುಖಗಳೂ, ವಿಲಾಸಗಳೂ ನನಗೆ ಬೇಸರಾದವು. ಸುಖದ ನಿಧಾನವೇ ದೊರೆತ ಬಳಿಕ, ಬಾದಶಹನ ಜನಾನಖಾನೆಯೊಳಗಿನ ಕ್ಷುದ್ರ ಸುಖಗಳಲ್ಲಿ ನನ್ನ ಮನಸ್ಸು ಹೇಗೆ ರಮಿಸಬೇಕು? ನಾನು ತಿರುಗಿ ಜನಾನಖಾನೆಗೆ ಹೋದದ್ದು ಕೇವಲ ಸುಖ–ವಿಲಾಸಗಳನ್ನು ಭೋಗಿಸುವದಕ್ಕಾಗಿಯಲ್ಲ; ನನ್ನ ತಂದೆಯಾದ ಬಾದಶಹರ ಕೃಪಾಪ್ರಸಾದದಿಂದ ಬುಂದೇಲಖಂಡದ ಸ್ವಾತಂತ್ರ್ಯವು ಅನಾಯಾಸವಾಗಿಸಿಕ್ಕರೆ ನೋಡಬೇಕೆಂದು ಹೋದದ್ದು; ಆದರೆ, ಕಡೆಗೆ ನಿರಾಶೆಯ ಹೊರತು ಫಲವೇನು ದೊರೆಯದಾಗಲು, ಪೌರುಷದಿಂದಲ್ಲದೆ ಸ್ವಾತಂತ್ರ್ಯವು ದೊರೆಯದೆಂದು ತಿಳಿದು, ಪೌರುಷಸಂಪನ್ನರಾದ ತಮ್ಮನ್ನು ಹುಡುಕುತ್ತ ಬುಂದೇಲಖಂಡದಲ್ಲಿ ಸಂಚರಿಸಬೇಕಾಯಿತು!

ದಳಪತ—ಈ ಮಾತನ್ನು ನಾನು ಯಮುನಾ ತೀರದಲ್ಲಿ ನಿನಗೆ ಹೇಳಲಿಲ್ಲವೆಂಬಂತೆ ತೋರುತ್ತದೆ.

ಬದ್ರುನ್ನಿಸೆ—ನೀವು ಹೇಳಿರಿ, ಹೇಳಿರದಿರಲಿ, ನಾನು ಬಾದಶಹರನ್ನು ಒಂದು ಮಾತು ಕೇಳದೆ ಬಿಡುವಹಾಗಿದ್ದಿಲ್ಲ; ಯಾಕಂದರೆ ಅಪ್ಪನು ನನ್ನನ್ನು ಬಹಳವಾಗಿ ಪ್ರೀತಿಸುವನು!

ದಳಪತ—ಅಂತಹ ಪ್ರೀತಿಯು ನಿನ್ನ ಇಷ್ಟಾರ್ಥವನ್ನೇಕೆ ಪೂರ್ಣಮಾಡಲಿಲ್ಲ?

ಬದ್ರುನ್ನಿಸೆ—ಯುವರಾಜ, ಇನ್ನು ಆ ಮಾತನ್ನು ಕಟ್ಟಿಕೊಂಡು ಮಾಡುವದೇನು? ಅವ್ವನೂ, ನಾನೂ ಬಾದಶಹರಿಗೆ ಹೇಳಬಾರದ್ದನ್ನು ಹೇಳಿದೆವು, ಮಾತಾಡಬಾರದ್ದನ್ನು ಮಾತಾಡಿದೆವು. ಈ ಕಡೆಗೆ ಅಂತಹ ವಜ್ರಹೃದಯದ ನಮ್ಮ ತಂದೆಯೂ ತಾಯಿ–ಮಕ್ಕಳ ಪ್ರಯತ್ನದಿಂದ ಕರಗಿ ಬುಂದೇಲಖಂಡದ ಸ್ವಾತಂತ್ರ್ಯದಾನದ ಫರ್ಮಾನವನ್ನು ಬರೆದನು. ಇನ್ನು ಅದರಮೇಲೆ ಸಹಿಸಿಕ್ಕೆಗಳು ಆಗತಕ್ಕವುಗಳು. ಬಾದಶಹನು ಸಹಿಮಾಡಲು ಲೆಕ್ಕಣಿಕೆಯನ್ನೂ ಎದ್ದಿದನು. ಆದರೆ ಅಷ್ಟರಲ್ಲಿ ನಮ್ಮ ಸೋದರತ್ತೆಯಾದ ದುಷ್ಟ ರೋಷನಾರಳು ರಣದುಲ್ಲಾ ಖಾನ—ಕಂಚುಕಿರಾಯರೊಡನೆ ಅಲ್ಲಿಗೆಬಂದು, ಚಂಪತರಾಯನು ರಣದುಲ್ಲಾಖಾನನನ್ನು ಸೆರೆಯಲ್ಲಿರಿಸಿದ ಸುದ್ದಿಯನ್ನು ಹೇಳಲು, ಅಪ್ಪನು ಸಿಟ್ಟಿನಿಂದ ಎಚ್ಚರದಪ್ಪಿ ಸಂತಾಪದ ಭರದಲ್ಲಿ ಸ್ವಾತಂತ್ರ್ಯದ ಫರ್ಮಾನವನ್ನು ಹರಿದು ಚೂರು ಚೂರು ಮಾಡಿದನು! ಮುಂದೆ ಆತನು ಹಾಗೇ ದರ್ಬಾರಕ್ಕೆ ಹೋಗಲು, ನಾನು ಅದೇದಿನ ಜನಾನಖಾನೆಯನ್ನು ಬಿಟ್ಟು ಬುಂದೇಲ ಖಂಡಕ್ಕೆ ಬರುವದಕ್ಕಾಗಿ ಹೊರಟೆನು!

ದಳಪತ—(ಪ್ರೇಮಾರ್ದ್ರ ದೃಷ್ಟಿಯಿಂದ) ಪ್ರಿಯ ಬದ್ರುನ್ನಿಸೆ, ನಿನ್ನಲ್ಲಿ ಸದ್ಗುಣ—ಸೌಂದರ್ಯಗಳೆರಡೂ ಕೂಡಿರುವದು, ಬಂಗಾರಕ್ಕೆ ಸುಗಂಧ ಉಂಟಾಗುವ ಅಶಕ್ಯ ಸಂಗತಿಯನ್ನು ಶಕ್ಯವಾಗಿ ಮಾಡಿ ತೋರಿಸಿದಂತಾಗಿರುತ್ತದೆ! ನೀನು ಸ್ವಲ್ಪವೂ ಹತಾಶಳಾಗಬೇಡ. ಬುಂದೇಲಖಂಡವು ಸ್ವತಂತ್ರವಾಗುವ ಕಾಲವು ತೀರ ಸನಿಯಕ್ಕೆ ಬಂದಿದೆ. ಛತ್ರಸಾಲನು ಬಂದಕೂಡಲೆ ಪ್ರತಿ ಒಬ್ಬ ಬುಂದೇಲನು ಸ್ವಾತಂತ್ರ್ಯಕ್ಕಾಗಿ ಶಸ್ತ್ರವನ್ನು ಹಿರಿಯುವನು. ಸ್ವಲ್ಪ ಕಾಲದಲ್ಲಿಯೇ ಯವನ ಸೇನೆಯನ್ನು ಬುಂದೇಲಖಂಡದಿಂದ ಓಡಸುವೆವು!

ಬದ್ರುನ್ನಿಸೆ—(ಪ್ರೇಮದಿಂದ) ಆಮೇಲೆ?

ದಳಪತ— (ಅಷ್ಟೇ ಪ್ರೇಮದಿಂದ) ಆಮೇಲೆ ದಳಪತನು ಬದ್ರುನ್ನಿಸೆಯವನೇ ಆಗಿರುವನು!

## ಶಿವರಾಯನು

ಮಹಾರಾಷ್ಟ್ರದೊಳಗಿನ ಭೀಮಾನದಿಯ ತೀರದ್ದೊಂದು ಹಳ್ಳಿಯು. ಆ ಹಳ್ಳಿಯ ಗೌಡನು ನಿಂಬಾಜಿ ಎಂಬ ಹೆಸರಿನ ಮರಾಠನು. ಆತನು ತನ್ನಲ್ಲಿಗೆ ಅತಿಥಿಯಾಗಿ ಬಂದಿರುವ ಛತ್ರಸಾಲನೊಡನೆ ಶಿವರಾಯನ ದರ್ಶನಕ್ಕಾಗಿ ಹೊರಟ್ಟಿದ್ದನು. ಅವರು ಸ್ವಲ್ಪ ದೂರ ಹೋಗುವದರೊಳಗೆ ಒಬ್ಬ ಗಂಭೀರ ಪುರುಷನು ಒಂದು ಚಿಕ್ಕ ಮಗುವನ್ನು ಕರಕೊಂಡು ಅವರೆದುರಿಗೆ ಬಂದನು. ತಲೆಗೆ ಸುತ್ತಿದ್ದ ಪೇಟಾದಿಂದ ತೊಟ್ಟುಕೊಂಡಿದ್ದ ಚಣ್ಣದವರೆಗೆ ಆತನ ಎಲ್ಲವಸ್ತ್ರಗಳೂ ತೊಯ್ದು ಹೋಗಿದ್ದವು. ತೊಯ್ದ ವಸ್ತ್ರಗಳಲ್ಲಿ ಆತನ ಗರಡೀಮನೆಯಾಡಿದ ಮುರಿಯ ಮೈಕಟ್ಟು ಸ್ಪಷ್ಟವಾಗಿ ಕಾಣಿಸುತ್ತಿತ್ತು ಆತನು ಒಂದು ಕೈಯಲ್ಲಿ ಖಡ್ಗವನ್ನು ಹಿಡಿದಿದ್ದನು. ಒಂದು ಕೈಯಿಂದ ನಿಂಬಾಜಿಪಾಟೀಲನ ಮಗಳಾದ ''ಸುಭಿ'' ಎಂಬ ಎಂಟುವರ್ಷದ ಹುಡುಗಿಯ ಕೈಬೆರಳನ್ನು ಹಿಡಿದುಕೊಂಡಿದ್ದನು. ಆತನಿಗಿದ್ದ ಕಿರಿಗಡ್ಡಗಳಿಂದ ಆತನ ಗದ್ದವೆಲ್ಲ ಮುಚ್ಚಿ ಹೋದದ್ದರಿಂದ ಆತನ ಮೋರೆಯು ಬಹು ಗಂಭೀರವಾಗಿ ತೋರುತ್ತಿತ್ತು, ಆ ತೇಜಸ್ವಿಯನ್ನು ನೋಡಿದಕೂಡಲೆ ಆ ಹಳ್ಳಿಯ ಜನರು ಆನಂದದಿಂದ ಮೈಮರೆತರು. ಈ ಮಹಾತ್ಮನು ಅಕಸ್ಮಾತ್ ಹೇಗೆ ಬಂದನೆಂದು ಅವರು ಆಶ್ಚರ್ಯಪಟ್ಟರು. ಕೂಡಲೆ ಅವರು ಮುಖದಿಂದ ''ಶಿವರಾಯರಿಗೆ ಜಯವಾಗಲಿ'' ಎಂಬ ಜಯಧ್ವನಿಯು ಹೊರಬಿದ್ದಿತು.

ಹೀಗೆ ಶಿವರಾಯನ ಹೆಸರಿನಿಂದ ಜಯಧ್ವನಿಯಾದ ಕೂಡಲೆ ಛತ್ರಸಾಲನಿಗೆ ಪರಮಾನಂದವಾಗಿ, ಹರ್ಷಭರದಿಂದ ಆತನ ಮೈಮೇಲಿನ ಕೂದಲುಗಳು ನೆಟ್ಟಗಾದವು. ತಾನು ಇಷ್ಟು ಆಯಾಸಪಟ್ಟು ಬಂದದ್ದು ಸಾರ್ಥಕವಾಯಿತೆಂದು ಆತನು ಭಾವಿಸಿದನು. ಆ ಮಹಾಪುರುಷನ ದರ್ಶನದಿಂದ ಆತನ ಮಾರ್ಗಾಯಾಸವೆಲ್ಲ ದೂರವಾಯಿತು. ಆತನು

ಶಿವರಾಯನ ಬಳಿಗೆ ಹೋಗಿ, ವಿಮಲ ಭಕ್ತಿಭಾವದಿಂದ ಆತನ ಚರಣಕ್ಕೆರಗಿದನು. ಹೀಗೆ ಅಪರಿಚಿತ ವೇಷದವನೂ, ಅಪರಿಚಿತಭಾಷೆಯವನೂ, ಅಪರಿಚಿತ ಮುಖಮುದ್ರೆಯವನೂ ಆದ ಆ ತರುಣನು ತನ್ನ ಚರಣಗಳನ್ನು ಪ್ರೇಮಪುರಸ್ಸರವಾಗಿ ಹಿಡಿದುಕೊಳ್ಳಲು, ಈತನೇ ಛತ್ರಸಾಲನೆಂದು ಭಾವಿಸುವಾಗ, ಶಿವರಾಯನ ಕಂಠವು ಸದ್ಗದಿತವಾಯಿತು! ಆ ಮಹಾರಾಷ್ಟ್ರ ಭೂಪತಿಯು ಕಂಪಿತಸ್ವರದಿಂದ—''ಯುವರಾಜ ಛತ್ರಸಾಲ, ನೀನೂ ನಾನೂ ಭಾರತಮಾತೆಯ ಮಕ್ಕಳೇ ಇರುವೆವು. ಜಗದಂಬೆಯಾದ ಭವಾನಿಯ, ಹಾಗು ಭಾರತಮಾತೆಯ ಪ್ರೇಮವು ಎಲ್ಲ ಮಕ್ಕಳ ಮೇಲೆಯೂ ಸರಿಯಾಗಿಯೇ ಇರುವದು. ಅಂದ ಬಳಿಕ ನಾವಿಬ್ಬರೂ ಬಂಧುಗಳಾಗಿರಲು, ಇಷ್ಟು ನಮ್ರಭಾವದಿಂದ ನನ್ನ ಚರಣಗಳಿಗೆ ನೀನು ವಂದಿಸುವದೇಕೆ? ಏಳು, ಬಂಧುಪ್ರೇಮದಿಂದ ನನಗೆ ಆಲಿಂಗನವನ್ನು ಕೊಡು,'' ಎಂದು ಆತನನ್ನು ಎಬ್ಬಿಸಿ ಪ್ರೇಮಭರದಿಂದ ಆತನನ್ನು ಅಪ್ಪಿಕೊಂಡನು! ಛತ್ರಸಾಲನ ತಂದೆಯಾದ ಚಂಪತರಾಯನ ವೀರವೃತ್ತಿಯನ್ನೂ, ಸ್ವಾತಂತ್ರ್ಯಾಭಿಮಾನವನ್ನೂ ಶಿವರಾಯನು ಕೇಳಿ ಅರಿತಿದ್ದನು. ಅಂತಹ ಪುಣ್ಯವಂತ ಸ್ವಾಭಿಮಾನಿಯ ಸತ್ಪುತ್ರನು ತನ್ನ ಚರಣಕ್ಕೆರಗಿದ್ದರಿಂದ ಶಿವರಾಯನ ನೇತ್ರಗಳು ಅಶ್ರುಪೂರ್ಣವಾದವು. ಅತ್ತ ಛತ್ರಸಾಲನು ತನ್ನ ಕಣ್ಣೀರುಗಳನ್ನು ಒರಿಸಿಕೊಳ್ಳುತ್ತ—''ಎಲೈ ಸ್ವಾತಂತ್ರ್ಯದೀಕ್ಷಾಗುರುವೇ, ನಿನ್ನನ್ನು ಶಿವಾಂಶನೆಂತಲೂ, ನಿನ್ನೊಡನೆ ಭವಾನಿಯು ಮಾತಾಡುವಳೆಂತಲೂ ಲೋಕವಾರ್ತೆಯಿಂದ ನಾನು ಕೇಳಿರುವೆನು! ಆದರೆ ನನ್ನನ್ನು ನೋಡಿದ ಮಾತ್ರದಿಂದ, ನೀನು ''ಛತ್ರಸಾಲ'' ಎಂದು ಪಾಮರನಾದ ನನ್ನನ್ನು ಗುರುತಿಸಿ ಕರೆದುಬಿಟ್ಟೆಯಲ್ಲ! ಪ್ರಭೋ, ನಾನೆಲ್ಲಿಯವನು, ನೀನೆಲ್ಲಿಯವನು? ನನ್ನ ಗುರುತು ನಿನಗೆಲ್ಲಿ? ಅಂದಬಳಿಕ ಜನವಾರ್ತೆಯು ಲೇಶವೂ ಅಸತ್ಯವಾದದ್ದೆಂದು ನಾನು ಭಾವಿಸುವದಿಲ್ಲ; ನೀನು ಶಿವಾಂಶನಿರುವೆ, ಜಗದಂಬೆಯು ನಿನ್ನ ಸಂಗಡ ಮಾತಾಡುವದು ಸತ್ಯವೇ! ಸಮರ್ಥ ರಾಮದಾಸ ಶಿಷ್ಯನು ನೀನು ಇಷ್ಟು ಮಹಿಮಾಶಾಲಿಯು ಆಗದೆ ಹೇಗೆ ಇದ್ದೀ! ಈ ಕುಮಾರ ಛತ್ರಸಾಲನನ್ನು ಆಶೀರ್ವದಿಸಿ ಕೃತಾರ್ಥನಾಗಮಾಡು! ಮಹಾತ್ಮನ್, ನಿನ್ನನ್ನು ಕಾಣುವ ಇಚ್ಛೆಯಿಂದ ಬುಂದೇಲಖಂಡದಿಂದ ಹೊರಟು ಇಲ್ಲಿಗೆ ಬಂದೆನು. ಇಷ್ಟುದಿವಸದ ಪ್ರಾಯಾಸವು ಇಂದು ನನಗೆ ಫಲಿಸಿತು! ಬುಂದೇಲಖಂಡದ ಸ್ವಾತಂತ್ರ್ಯವನ್ನು ಸಂಪಾದಿಸು ವದಕ್ಕಾಗಿ ನನ್ನ ತಂದೆಯಾದ ಚಂಪತರಾಯನ ಅಂತ್ಯಕಾಲದ ಅಪ್ಪಣೆಯಂತೆ ನಾನು ನಿನ್ನ ಶಿಷ್ಯನಾಗಬೇಕಾಗಿರುವದು; ಆದ್ದರಿಂದ ಸನ್ಮಾನ್ಯ ಸದ್ಗುರೋ, ನನ್ನನ್ನು ನಿನ್ನ ಸಂಗಡ ಕರೆದುಕೊಂಡು ಹೋಗು; ನನ್ನ ಸೇವೆಯನ್ನು ಸ್ವೀಕರಿಸು; ನಿನ್ನ ಸ್ವಾತಂತ್ರ್ಯದ ಕಾರ್ಯಗಳನ್ನು ನನ್ನ ಕಣ್ಣಿಗೆ ಹಾಕು; ನಿನ್ನ ದಿನದ ನಡತೆಯನ್ನು ನನ್ನ ಹೃದಯದಲ್ಲಿ ಮೂಡಿಸು! ಸದ್ಗುರೋ, ಹೆಚ್ಚಿಗೆ ಏನು ಬೇಡಿಕೊಳ್ಳಲಿ? ನಿನ್ನ ಉಪದೇಶವನ್ನು ಗ್ರಹಿಸುವ ಪಾತ್ರತೆಯನ್ನು ಈ ದಾಸದಲ್ಲಿ ಉಂಟುಮಾಡಿ, ಕಡೆಗೆ ಗುರುಮಂತ್ರವನ್ನು ಉಪದೇಶಿಸಿ, ಬುಂದೇಲಖಂಡದ ಸ್ವಾತಂತ್ರ್ಯವನ್ನು ಈ ಛತ್ರಸಾಲನು ತಿರುಗಿ ಸಂಪಾದಿಸುವಂತೆ ಈತನನ್ನು ಆಶೀರ್ವದಿಸು.

ಛತ್ರಸಾಲನ ಸರಳ ಹೃದಯದ ಈ ಮಾತುಗಳನ್ನು ಕೇಳಿ ಶಿವರಾಯನ ಕಣ್ಣುಗಳೊಳ ಗಿಂದ ಪ್ರೇಮಾಶ್ರುಗಳು ಒಂದೇಸವನೆ ಸುರಿಯ ಹತ್ತಿದವು. ಆತನು ಸುಭಿಯ ಕೈಬೆರಳನ್ನು

ಬಿಟ್ಟು ಛತ್ರಸಾಲನ ಹೆಗಲ ಮೇಲೆ ಕೈಯನ್ನಿಟ್ಟು ಪ್ರೇಮನಿರ್ಭರ ಸ್ವರದಿಂದ—''ಜನ್ಮ ಭೂಮಿಯ ಸೇವೆಯನ್ನು ಇಷ್ಟು ಆಸಕ್ತಿಯಿಂದ ಮಾಡುವ ಭಾಗ್ಯಶಾಲಿಯಾದ ತರುಣನೇ, ಈ ಮಹಾರಾಷ್ಟ್ರದಲ್ಲಿ ನಾನು ನಿನ್ನ ಸ್ವಾಗತ ಮಾಡುವೆನು. ಸಮಾನ ಧರ್ಮದ ಮಿತ್ರನೊಬ್ಬನು ದೊರೆತದ್ದಕ್ಕಾಗಿ ನನಗೆ ಬಹಳ ಸಂತೋಷವಾಗಿರುತ್ತದೆ. ನಿಲ್ಲು, ಕ್ಷಣಮಾತ್ರ ಇಲ್ಲಿಯೇ ನಿಲ್ಲು. ಈದಿಟ್ಟ ಹುಡುಗೆಯನ್ನು ಗೌಡನಿಗೆ ಒಪ್ಪಿಸಿ ಇಲ್ಲಿಯ ಜನರಿಗೆ ಹೇಳಿ ಈಗ ತಿರುಗಿ ಬರುವೆನು. ಛತ್ರಸಾಲ, ನಿನ್ನ ಸಂಗಡ ಏಕಾಂತದಲ್ಲಿ ಯಾವಾಗ ಮಾತಾಡೇನೆನ್ನುವ ಹಾಗೆ ಆಗಿದೆ,'' ಎಂದುಹೇಳಿ, ಶಿವಾಜಿಯು ನಿಂಬಾಜಿಪಾಟೀಲನೊಡನೆ ಆತನ ಮನೆಗೆ ಹೋಗಿ, ಆತನನ್ನು ಕುರಿತು—'' ಪಾಟೀಲ, ಈಕೆಯು ನಿಮ್ಮ ಸುಭಿಯು! ಭೀಮೆಯಲ್ಲಿ ಅಕಸ್ಮಾತ್ ಬಿದ್ದು ಮುಣುಗುತ್ತಿರಲು ತೆಗೆದೆನು. ಹುಡುಗಿ ಬಲು ದಿಟ್ಟ! ಅಹಮ್ಮದನಗರದ ಚಾಂದಬೀಬಿಯಂತೆ ಈಕೆಯು ಕತ್ತಿಯನ್ನು ಝಳಪಿಸಲಿಕ್ಕೆ ಹಿಂದೆಮುಂದೆ ನೋಡುವಹಾಗಿಲ್ಲ! ಇಂತಹ ದಿಟ್ಟ ಹುಡಿಗೆಯ ತಂದೆಯು ನೀನು! ದಿಲೇರಖಾನ, ಜಯಸಿಂಗ ಎಂಬ ಇಬ್ಬರು ಬಾದಶಹನ ಸರದಾರರು ಪ್ರಬಲ ಸೈನ್ಯದೊಡನೆ ಮಹಾರಾಷ್ಟ್ರವನ್ನು ಮುತ್ತತಕ್ಕವರಿರುತ್ತಾರೆ. ಆಗ ನೀವು ತೀರ ಕಡಿಮೆಯೆಂದರೆ ನೂರುಜನ ಶೂರರೊಡನೆ ಭಗವಾ ಝೇಂಡಾ ನಿಶಾನೆಯ ನೆರಳಿಗೆ ಬರಲೇಬೇಕು!

ಲಿಂಬಾಜಿ—ಖಡ್ಗಧರಿಸಲು ಸಮರ್ಥರಾಗಿರುವ ನನ್ನ ಶೂರ ಮರಾಟರೆಲ್ಲ ಮಹಾರಾಜರು ಹೇಳಿದ ಕೆಲಸವನ್ನು ಮಾಡಲಿಕ್ಕೇ ಸಿದ್ಧರಾಗಿರುವರು. ಮಹಾರಾಜರ ಬಾಯಿಂದ ಹೊರಡುವ ಪ್ರತಿ ಒಂದು ಶಬ್ದವನ್ನು ಜಗನ್ಮಾತೆಯಾದ ಭವಾನಿಯು ಉಚ್ಚರಿಸುತ್ತಿರುವಳೆಂದು ನಮ್ಮೆಲ್ಲರ ನಂಬಿಗೆಯಾಗಿರುವದು. ಮನುಷ್ಯರ ಅಪ್ಪಣೆಯನ್ನು ಒಂದುವೇಳೆ ಮೀರಬಹುದು; ಆದರೆ ಶ್ರೀಭವಾನಿಯ ಅಪ್ಪಣೆಯನ್ನು ಮೀರುವಂತಹ ನೀಚರು ಇಡಿಯ ದೇಶದಲ್ಲಿ ಯಾವನಾದರೂ ಇರುವನೆಂಬ ಹಾಗೆ ನನಗೆ ತೋರುವದಿಲ್ಲ. ಮಹಾರಾಜ, ಒದ್ದೆಗಳನ್ನು ಬಿಟ್ಟು ಈ ಒಣ ವಸ್ತ್ರಗಳನ್ನು ಧರಿಸಬೇಕು!

ಪಾಟೀಲನ ಮಾತಿಗೆ ಸ್ವಲ್ಪವೂ ಹಿಂದೆಮುಂದೆ ನೋಡದೆ, ಶಿವರಾಯನು ಆತನು ಕೊಟ್ಟ ವಸ್ತ್ರಗಳನ್ನು ಸ್ವೀಕರಿಸಿದನು. ಅದನ್ನು ನೋಡಿ ಲಿಂಬಾಜಿ ಪಾಟೀಲನು ಆನಂದದಿಂದ–

ಲಿಂಬಾಜಿ—ಬಡವರ ಆಧಾರವು, ಅನಾಥರ ರಕ್ಷಕನು, ದುಷ್ಟರ ಯಮನು, ಗೋ–ಬ್ರಾಹ್ಮಣ ಪ್ರತಿಪಾಲಕನು ಎಂದು ಮಹಾರಾಜರ ಪ್ರಸಿದ್ಧಿ ಇರುವದು ಸುಮ್ಮನೆಯಲ್ಲ! ಮಹಾರಾಜರ ಪಾದಧೂಲಿಯು ನನ್ನ ಮನೆಯಲ್ಲಿ ಬಿದ್ದದ್ದು ನನ್ನ ಮಹದ್ಭಾಗ್ಯವೇ ಸರಿ! ಮಹಾರಾಜ, ತಮ್ಮ ಪಂಗ್ತಿಲಾಭವು ನನಗೆ ಆಗಬಹುದೋ? ತಮ್ಮ ಪಂಗ್ತಿಲಾಭವನ್ನು ಪಡೆಯುವಷ್ಟು ನಾನು ಭಾಗ್ಯಶಾಲಿಯು ಇರುವೆನೆಯೆ?

ಶಿವಾಜಿ—ಪಾಟೀಲ, ನಾನು ನಿಮ್ಮವನಿರುವೆನು, ಇಡಿಯ ಮಹಾರಾಷ್ಟ್ರದವನಿರುವೆನು! ಅಂದಬಳಿಕ ನಿಮ್ಮ ಮನಸ್ಸು ನೋಯುವಂತಹ ಕೆಲಸವು ನನ್ನಿಂದ ಹೇಗಾದೀತು? ನಾನು ನಾಲ್ಕಾರುತಾಸು ನಿಮ್ಮ ಈ ಬುಂದೇಲಖಂಡದ ತರುಣನೊಡನೆ ಒಂದು ಮಹತ್ವದ ಕೆಲಸಕ್ಕಾಗಿ

ಹೊರಗೆ ಹೋಗಿ ಬರಬೇಕಾಗಿದೆ. ಆರುತಾಸಿನೊಳಗಾಗಿಯೇ ನಾವು ಇಲ್ಲಿಗೆ ಬಂದು ನಿಮ್ಮ ಇಚ್ಛೆಯಂತೆ ಇಲ್ಲಿಯೇ ಸುಭಿಯ ಮನೆಯಲ್ಲಿ ಊಟಮಾಡೋಣ. ಸುಭಿ! ನಿನಗೆ ಅಡಿಗೆ ಮಾಡಲಿಕ್ಕೆ ಬರುತ್ತದಷ್ಟೆ?

ಸುಭಿ—''ನನಗೆ ಬರುವದಿಲ್ಲ! ನಾನೇಕೆ? ಅವ್ವನು ಇರುತ್ತಾಳಲ್ಲ ಅಡಿಗೆಮಾಡಲಿಕ್ಕೆ'' ಎಂದು ಹೇಳುತ್ತ ಅವ್ವನಬಳಿಗೆ ಓಡಿಹೋದಳು! ಆಗ ಶಿವಾಜಿಯು ಎಲ್ಲರ ರಾಮ ರಾಮನ್ನು ಅತ್ಯಾದರದಿಂದ ಸ್ವೀಕರಿಸುತ್ತ, ಛತ್ರ ಸಾಲನೊಡನೆ ಅಲ್ಲಿಂದ ಹೊರಡಲು ಸಿದ್ಧನಾಗಲು, ಲಿಂಬಾಜಿಯು—''ಮಹಾರಾಜ, ಈ ತರುಣನಾದ ಬುಂದೇಲನು ನಿನ್ನೆ ಸಂಜೆಗೆ ಇಲ್ಲಿಗೆ ಬಂದನು. ಆತನು ತನ್ನ ಸವಿಮಾತುಗಳಿಂದಲೂ, ಪವಿತ್ರವಾದ ಆಚರಣೆಯಿಂದಲೂ, ದೈವೀ ಭಕ್ತಿಯಿಂದಲೂ ನಮ್ಮವನಾಗಿಹೋಗಿರುತ್ತಾನೆ. ತಮ್ಮನ್ನು ಕಾಣಬೇಕೆಂಬ ಆತುರದಲ್ಲಿ ಆತನು ಇಡಿಯ ರಾತ್ರಿ ಕಣ್ಣಿಗೆಕಣ್ಣು ಹಚ್ಚಿರುವದಿಲ್ಲ, ನಾನು ಆತನನ್ನು ನಿಮ್ಮ ದರ್ಶನಕ್ಕಾಗಿ ಕರಕೊಂಡುಬರುತ್ತಿದ್ದೆನು; ಆದರೆ ಮಹಾರಾಜರ ಕೃಪಾ ಪ್ರಸಾದದಿಂದ ನನ್ನ ಸುಭಿಯು ಬದುಕಿದಳು; ಈ ತರುಣ ಬುಂದೇಲನಿಗೂ ಅಕಲ್ಪಿತವಾಗಿ ಮಹಾರಾಜರ ದರ್ಶನ ವಾದಂತಾಯಿತು!

ಪುನಃ ಶಿವಾಜಿಯ ಜಯಘೋಷವಾಯಿತು. ಆ ಜಯಧ್ವನಿಯು ಅಡಗುವದರೊಳಗಾಗಿಯೇ ಶಿವಾಜಿಯು ಛತ್ರಸಾಲನೊಡನೆ ಅಲ್ಲಿಂದ ಹೊರಟು ಹೋಗಿದ್ದನು. ಮಹಾರಾಜರು ಆ ತರುಣನೊಡನೆ ಒಮ್ಮೆಲೆ ನಿಂತನಿಂತಲ್ಲಿಯೇ ಅದೃಶ್ಯರಾದರೆಂದು ಅವರಲ್ಲಿಯೊಬ್ಬನು ಅಂದುಬಿಟ್ಟನು. ಭವಾನೀ ದೇವಿಯ ಸಹಾಯದಿಂದ ಮಹಾರಾಜರು ಬೇಕಾದದ್ದು ಮಾಡಬಲ್ಲರೆಂದು ಗಾಂಭೀರ್ಯದಿಂದ ತಮ್ಮೊಳಗೆ ಮಾತಾಡಿಕೊಳ್ಳುತ್ತ ಶಿವರಾಯನ ಚರಿತ್ರಗಳನ್ನು ಒಂದೊಂದಾಗಿ ಹೇಳಿಕೊಳ್ಳುತ್ತ ಆ ಎಲ್ಲ ಹಳ್ಳಿವಾಡದ ಜನರು ತಮ್ಮ ತಮ್ಮ ಮನೆಗೆ ಹೋದರು. ಇಂದು ಶಿವರಾಯನ ದರ್ಶನವು ತಮಗಾಯಿತೆಂಬ ಆನಂದವು ಅವರ ಹೊಟ್ಟೆಯಲ್ಲಿ ಹಿಡಿಸದಾಗಿತ್ತು

ಇತ್ತ ಮಹಾರಾಷ್ಟ್ರ ಸ್ವಾತಂತ್ರ್ಯ ಸೂರ್ಯನು ಛತ್ರಸಾಲನ ಸಂಗಡ ಮಾತಾಡುತ್ತ ಭೀಮಾನದಿಯ ಉಸುಬಿನೊಳಗಿಂದ ಸಾಗಿದ್ದನು. ಬಹುದೂರ ಹೋದಬಳಿಕ ಎತ್ತರವಾದ ದ್ದೊಂದು ಮರಡಿಯ ಕಡೆಗೆ ಆತನು ಹೊರಳಿದನು. ಆ ಮರಡಿಯ ಸುತ್ತುಮುತ್ತಲಿನ ಗಿಡಗಂಟೆಗಳನ್ನೂ, ಮುಳ್ಳು ಕಲ್ಲುಗಳನ್ನೂ ನೋಡಿದರೆ, ಇಲ್ಲಿ ಮನುಷ್ಯರು ಇರಬಹುದೆಂದು ಯಾರಿಗೂ ತೋರುವಹಾಗಿದ್ದಿಲ್ಲ; ಆದರೆ ಶಿವಾಜಿಯು ಒಂದು ದೊಡ್ಡ ಕಲ್ಲಹಾಸಿಗೆಯ ಬಳಿಗೆ ಹೋಗಿ ''ಏಸಾಜಿ'' ಎಂದು ಕರೆದ ಕೂಡಲೆ ''ಮಹಾರಾಜ'' ಎಂಬ ಶಬ್ದದೊಡನೆ ಆ ಶಿಲೆಯು ಎರಡು ಭಾಗವಾಗಿ ಒಳಗೆಹೋಗುವಷ್ಟು ಹಾದಿಯು ಸಿದ್ಧವಾಯಿತು. ಅದನ್ನು ನೋಡಿ ಛತ್ರಸಾಲನು ಆಶ್ಚರ್ಯಪಟ್ಟನು. ಆತನು ಒಂದು ಶಬ್ದವೂ ಮಾತಾಡದೆ ಶಿವಾಜಿಯ ಬೆನ್ನಹತ್ತಿ ಆ ಗುಹೆಯನ್ನು ಹೊಕ್ಕನು. ಅವರು ಕೆಲವು ಹೆಜ್ಜೆಗಳನ್ನು ಹೋಗುವದರೊಳಗೆ ಒಂದು ವಿಸ್ತಾರವಾದ ಸಭಾಮಂಟಪವು ಅವರ ಕಣ್ಣಿಗೆಬಿದ್ದಿತು. ಅಲ್ಲಿ ಚನ್ನಾಗಿ

ಗಾಳಿಯಾಡುತ್ತಿದ್ದು, ಬೆಳಕಿಗೂ ಕೊರತೆಯಿದ್ದಿಲ್ಲ. ಭೂಮಿಯ ಹೊಟ್ಟೆಯಲ್ಲಿ ಹುಗಿದಿಟ್ಟಿರುವ ಈ ಮಂದಿರವನ್ನು ನೋಡಿ ಛತ್ರಸಾಲನ ಆಶ್ಚರ್ಯವು ಹಲವುಪಟ್ಟು ಹೆಚ್ಚಾಯಿತು. ಛತ್ರಸಾಲನ ಈ ಆಶ್ಚರ್ಯದ ಕಾರಣವನ್ನು ಕಂಡುಹಿಡಿಯಲಿಕ್ಕೆ, ಶಬ್ದಮಾತ್ರದಿಂದ ಮಹಾರಾಷ್ಟ್ರವನ್ನು ಅಲ್ಲಾಡಿಸುವ ಶಿವರಾಯನಿಗೆ ಎಷ್ಟುಹೊತ್ತು ಬೇಕಾದೀತು? ಆತನು ಛತ್ರಸಾಲನನ್ನು ಕುರಿತು–

ಶಿವಾಜಿ—ತರುಣ ಮಿತ್ರಾ, ಈ ಭವ್ಯ ಸಭಾಮಂಟಪವನ್ನು ನೋಡಿ ನಿನಗೆ ಬಹಳ ಆಶ್ಚರ್ಯವಾಗಿರುವಂತೆ ತೋರುತ್ತದೆ; ಆದರೆ ಈ ಬಗೆಯ ಗುಪ್ತ ಸ್ಥಳಗಳೂ, ಗುಪ್ತ ಮಾರ್ಗಗಳೂ ನಮ್ಮ ಸ್ವಾತಂತ್ರ್ಯಪ್ರಾಪ್ತಿಯ ಕಾರ್ಯದಲ್ಲಿ ಎಷ್ಟು ಉಪಯುಕ್ತವಾಗುವ ವೆಂಬದನ್ನು ಕೇಳಿದರೆ, ನಿನಗೆ ಇದಕ್ಕಿಂತಲೂ ಹೆಚ್ಚು ಆಶ್ಚರ್ಯವಾಗಬಹುದು. ಮಹಾರಾಷ್ಟ್ರದೊಳಗಿನ ಸಾಧು–ಸಂತರು ಸಮತೆಯ ತತ್ವದಿಂದ ಎಲ್ಲ ಮಹಾರಾಷ್ಟ್ರರನ್ನು ಒಟ್ಟುಗೂಡಿಸಿದ್ದರೂ, ಸ್ವಾತಂತ್ರ್ಯಕ್ಕಾಗಿ ಹೊಡೆದಾಡಲಿಕ್ಕೆ ಬಹು ಸ್ವಲ್ಪ ಜನರು ಮಾತ್ರ ಸಿದ್ಧರಾಗಿದ್ದರು. ಶೂರರೂ, ಚತುರರೂ, ಮುತ್ಸದ್ದಿಗಳೂ ಆದ ಮಹಾರಾಷ್ಟ್ರರು ಬಹಮನಿ ಬಾದಶಹರ ಸೇವೆಯಲ್ಲಿ ಮಗ್ನರಾಗಿ ಹೋಗಿದ್ದರಿಂದ, ಮೊದಮೊದಲು ಸ್ವಾತಂತ್ರ್ಯಕ್ಕಾಗಿ ಯತ್ನಿಸಲು ಒಟ್ಟುಗೂಡಹತ್ತಿದವರಲ್ಲಿ ಬಹುಜನರು ರಾಜಕಾರಣವನ್ನು ಅರಿಯದವರಾಗಿದ್ದರು. ಮುಂದೆ ರಾಮದಾಸಸ್ವಾಮಿಗಳು ವೀರಕರ್ಮ ಮಾರ್ಗವನ್ನು ಉಪದೇಶಿಸಿ, ಅದರಿಂದ ಒಟ್ಟುಗೂಡಿದ ತರುಣರನ್ನು ಸ್ವಾತಂತ್ರ್ಯದ ನಿಶಾನೆಯ ನೆರಳಿಗೆ ಕರತಂದರು. ಆದ್ದರಿಂದ ಫಂಡರಪುರದ ಸಣ್ಣ ನಿಶಾನೆಯ ಬದಲು ಕೈಯಲ್ಲಿ ಶಸ್ತ್ರವೂ, ಯಾತ್ರೆಯ ಹಸಿಬಿಯ ಬದಲು ಹೆಗಲ ಮೇಲೆ ಮದ್ದುಗುಂಡಿನ ಚೀಲವೂ ಬಂದು, ಭಕ್ತಿಭಾವದ ವಿಠ್ಠಲನಾಮದ ಬದಲು ಮರಾಟರ ಮುಖದಲ್ಲಿ ಹರಹರ ಮಹಾದೇವ ಎಂಬ ವೀರನಾದವು ಹುಟ್ಟಿ ಮಹಾರಾಷ್ಟ್ರದಲ್ಲೆಲ್ಲ ಪಸರಿಸಹತ್ತಿತು! ಆದರೆ ಬಹುದಿವಸದ ಅನುಭವದಿಂದ ಕೈ ಕೂತಿದ್ದ ಮುಸಲ್ಮಾನರ ದೊಡ್ಡ ಸೈನ್ಯದ ಮುಂದೆ ಸಣ್ಣ ಸೈನ್ಯವುಳ್ಳ ನಾವು ಜಪ್ಪುಹಾಕಿ ಕಾದುವ ಕ್ರಮವನ್ನು ಆರಂಭಿಸಿದೆವು. ಛತ್ರಸಾಲ, ಯಾವ ಮಹತ್ವದ ಕಾರ್ಯವನ್ನಾದರೂ ನಾವು ಧರ್ಮದ ತಳಹದಿಯ ಮೇಲೆ ಆರಂಭಿಸಿದರೆ, ಕಾರ್ಯಕ್ಕೆ ಪರಿಶುದ್ಧತೆಯು ಪ್ರಾಪ್ತವಾಗಿ, ಅದರ ಬಳಿಕೆಯಿಂದ ಸುಖಶಾಂತಿಗಳು ಹೆಚ್ಚುವವು; ಬಲಿಷ್ಠ ವೈರಿಗಳೊಡನೆ ದುರ್ಬಲರು ತಾಗುತ್ತಾ ಬಾಗುತ್ತಾ ಅನುವುನೋಡಿ ಅವರನ್ನು ಬಗ್ಗುಬಡಿಯುತ್ತ ಹೋಗ ಬೇಕಾಗುವದು. ಇಲ್ಲದಿದ್ದರೆ ದುರ್ಬಲರ ನಾಶವಾಗದೆ ಇರುವದಿಲ್ಲ, ಡಂಗುರಹೊಡೆದು ಕಾದುವದು ಎರಡುಪಕ್ಷಗಳೂ ಸಮಬಲವಿದ್ದಾಗ, ಆದರೂ ಜಪ್ಪಿಸಿ ವೈರಿಗಳ ಮೇಲೆ ಬೀಳುವ ಮಾರ್ಗವನ್ನು ವನರಾಜನೆನಿಸುವ ಸಿಂಹವು ಅನುಸರಿಸುತ್ತಿರುವದನ್ನು ನಾವು ಮರೆಯಲಾಗದು! ನಮ್ಮ ಶೂರ ಮಾವಳರು ಸ್ವಲ್ಪ ಜನರಾದರೂ, ನಾವು ಸಮಯ ನೋಡಿ ಶತ್ರುಗಳ ಮೇಲೆ ಬಿದ್ದು ಅವರನ್ನು ನಾಶಗೊಳಿಸಿ, ಅಕಸ್ಮಾತ್ ಇಂಥ ಗುಪ್ತಸ್ಥಳಗಳ ಆಸರದಿಂದ ಒಮ್ಮೆಲೆ ಅಡಗಿಕೊಂಡು ಬಿಡುತ್ತಿದ್ದದ್ದರಿಂದ, ಮುಸಲ್ಮಾನರು ದಿಗಿಲುಬಿದ್ದು ಅಂಜಿಕೊಳ್ಳುತ್ತಿರಲು, ನಾವು ಜಯಶಾಲಿಗಳಾಗುತ್ತ ಬಲಿಷ್ಠರಾಗತೊಡಗಿದೆವು! ಹೊತ್ತಿನಲ್ಲಿ ಅಕಸ್ಮಾತ್ ಹೊರಬೀಳಲಿಕ್ಕೆ, ಅಕಸ್ಮಾತ್

ಗುಪ್ತವಾಗಲಿಕ್ಕೆ ಇಂತಹ ಗುಹೆಗಳೂ, ಗುಪ್ತ ಮಾರ್ಗಗಳೂ ಬಹಳವಾಗಿ ಉಪಯೋಗಿಸುವವು. ಇವುಗಳ ಸಹಾಯದಿಂದಲೇ ನಾವು ಇಂದು ಇಲ್ಲಿ ಇದ್ದವರು, ನಾಳೆ ಐವತ್ತು ಹರದಾರಿಗಳ ಮೇಲೆ ಕಾಣಸಿಕೊಳ್ಳುತ್ತಿದ್ದೆವು; ಆದ್ದರಿಂದ ವೈರಿಗಳಿಗೆ ನಮ್ಮ ನೆಲೆಯೇ ತಿಳಿಯುವದಿಲ್ಲ ಸ್ವಲ್ಪವೂ ನಮ್ಮ ಹಾನಿಯಾಗುತ್ತಿರುವದಿಲ್ಲ; ಛತ್ರಸಾಲ, ಇಂತಹ ಗುಪ್ತಸ್ಥಳಗಳ ಪ್ರಯೋಜನವು ನಿನಗೆ ಗೊತ್ತಾಯಿತಷ್ಟೆ? ರಾಜಸ್ಥಾನದೊಳಗಿನ ರಜಪೂತರೂ, ಬುಂದೇಲಖಂಡದೊಳಗಿನ ಬುಂದೇಲರೂ ಒಳ್ಳೇ ಶೂರರು, ರಣಧೀರರು; ಆದರೆ ಬಲಾಬಲವನ್ನರುಕೊಳ್ಳದೆ, ಹೊತ್ತುವೇಳೆಯ ವಿಚಾರಮಾಡದೆ, ಹಂಚಿಕೆಯನ್ನು ಉಪಯೋಗಿಸದೆ ಶತ್ರುಗಳ ಮೇಲೆ ಸರಳಮಾರ್ಗದಿಂದ ಸಾಗಿಹೋಗಿ ತಮ್ಮನಾಶವನ್ನು ಮಾಡಿಕೊಳ್ಳುವರು! ಜಪ್ಪಿಸಿ ಹೊಡೆಯುವ ಹಾದಿಯನ್ನು ಹಿಡಿದಹೊರತು ಪ್ರಬಲನಾದ ಶತ್ರುವು ಎಂದೂ ಹಣ್ಣಿಗೆ ಬರುವದಿಲ್ಲ.

ಛತ್ರಸಾಲನು ಏಕಾಗ್ರಚಿತ್ತದಿಂದ ಶಿವಾಜಿಯ ಈ ಮಾತುಗಳನ್ನು ಕೇಳುತ್ತಿದ್ದನು. ಆತನಿಗೆ ತಾನು ಏನೋ ಹೊಸದಾಗಿ ಕಲಿಯುತ್ತಿರುವೆನೆಂಬ ಹಾಗೆ ಆಗುತ್ತಲಿತ್ತು, ಆಗ ಶಿವಾಜಿಯು ಆತನ ಕೈಯನ್ನು ಹಿಡಿದುಕೊಂಡು–

ಶಿವಾಜಿ—ನಡೆ, ನಾವು ಆ ಆಸನದ ಮೇಲೆ ಕುಳಿತುಕೊಳ್ಳೋಣ. ಇಲ್ಲಿಯೇ ನಮ್ಮಿಬ್ಬರ ಮಾತುಕಥೆಗಳಾಗುವವೆಂದು ನಾನು ಮೊದಲೇ ತಿಳಿದಿದ್ದೆನು. ನಾನು ಲಿಂಬಾಜಿಪಾಟೀಲನ ಮನೆಗೆ ಸುಮ್ಮನೆ ಬಂದಿದ್ದಿಲ್ಲ. ಅಲ್ಲಿ ನಿನ್ನನ್ನು ನಾನು ಕಾಣುವೆನೆಂದು ಮೊದಲೇ ತಿಳಿದಿದ್ದೆನು.

ಛತ್ರಸಾಲ—ಮಹಾರಾಜ, ನಾನು ತಮ್ಮನ್ನು ಕಾಣಲಿಕ್ಕೆ ಬರುವೆನೆಂಬದು ತಮಗೆ ಹೇಗೆ ಗೊತ್ತಾಯಿತು? ನಾನು ಇದೇ ಊರಲ್ಲಿ ನಿಮ್ಮನ್ನು ಶೋಧಮಾಡುವೆನೆಂಬದನ್ನು ನೀವು ಹೇಗೆ ತಿಳಿದುಕೊಂಡಿರಿ? ನಮ್ಮಿಬ್ಬರ ಸಂಭಾಷಣವು ಇಲ್ಲಿಯೇ ಆಗುವದೆಂಬದಕ್ಕೆ ನಿಮಗೆ ಆಧಾರವೇನು ದೊರೆಯಿತು? ಸನ್ಯಾಸ್ಯರೇ, ನನ್ನನ್ನು ನೋಡಿದ ಕೂಡಲೆ ಮೊದಲೇಗುರುತು ಇದ್ದವರಂತೆ ತಟ್ಟನೆ ನನ್ನ ಹೆಸರು ಹೇಳಿಬಿಟ್ಟಿರಲ್ಲ! ಇವುಗಳ ಮರ್ಮವೇನು?

ಛತ್ರಸಾಲನ ಈ ಪ್ರಶ್ನೆಗಳಿಗೆ ಶಿವಾಜಿಯು ಉತ್ತರಕೊಡದೆ—"ಏಸಾಜೀ, ಒಂದು ಕ್ಷಣ ಇಲ್ಲಿಗೆ ಬಂದುಹೋಗು" ಎಂದು ಹೇಳಲು ಕೂಡಲೆ ಏಸಾಜಿಯು ಶಿವರಾಯನ ಮುಂದೆ ಬಂದು ನಿಂತುಕೊಂಡನು. ಆಗ ಶಿವಾಜಿಯು ಆತನ ಕಡೆಗೆ ಬೆರಳುಮಾಡಿ–

ಶಿವಾಜಿ—ಛತ್ರಸಾಲ, ಈತನನ್ನು ನೀನು ಎಲ್ಲಿಯಾದರು ನೋಡಿರುವೆಯಾ?

ಛತ್ರಸಾಲ—(ಏಸಾಜಿಯನ್ನು ನೋಡಿ) ಇಲ್ಲ, ಈತನನ್ನು ಈ ಮೊದಲು ಎಲ್ಲಿಯೂ ನೋಡಿಲ್ಲ, ಈತನನ್ನು ಇಂದೇಮೊದಲು ನೋಡಿದ್ದು.

ಶಿವಾಜಿ—(ನಗುತ್ತ) ತಮ್ಮ ರಾಜಧಾನಿಯನ್ನು ದಿಲ್ಲೀಪತಿಯು ಮುತ್ತುವವರೆಗೆ ರಾಜಸ್ಥಾನದೊಳಗಿನ ಅರಸರಿಗೆ ಶತ್ರುಗಳ ದಂಡಿನ ಚಲನವಲನದ ಸುದ್ದಿಯೇ ಇರುವದಿಲ್ಲ. ಅದರಂತೆ, ತಮ್ಮ ಪ್ರದೇಶವನ್ನು ಶತ್ರುಗಳು ಹಾಳುಗೆಡವಿದರೆಂಬದು, ಪ್ರತ್ಯಕ್ಷ ಅರಮನೆಯಲ್ಲಿ ಶತ್ರುಗಳು ಬರುವವರೆಗೆ ಬುಂದೇಲಖಂಡದ ಅರಸರಿಗೆ ಗೊತ್ತು ಸಹ ಇರುವದಿಲ್ಲ. ರಜಪೂತರಾಗಲಿ, ಬುಂದೇಲಿಗಳಾಗಲಿ ಶತ್ರುಗಳ ಕಡೆಯ ಸುದ್ದಿಯನ್ನು ತಿಳಿದುಕೊಳ್ಳಲಿಕ್ಕೆ ಏನೂ ಉಪಾಯ ಮಾಡದಿರುವದೇ ಇದಕ್ಕೆ ಕಾರಣವು. ಶತ್ರುಗಳ ಛಾವಣಿಯಲ್ಲಿ ಗುಪ್ತಚಾರರನ್ನು

ತಿರುಗಾಡಿಸಿ, ಶತ್ರುಗಳ ಕಡೆಯ ಎಲ್ಲ ಸುದ್ದಿಗಳನ್ನು ತಿಳಿದುಕೊಳ್ಳುವ ಕಲೆಯು ಅವರಿಗೆ ಗೊತ್ತಾದರೂ ಇರಲಿಕ್ಕಿಲ್ಲ, ಅಥವಾ ಹೀಗೆ ಸುದ್ದಿಗಳನ್ನು ತಿಳಿದುಕೊಳ್ಳುವದು ನಿಜವಾದ ಶೂರರ ಕೆಲಸವಲ್ಲೆಂಬ ಅವರ ಸೊಕ್ಕಿನ ವಿಚಾರದಿಂದ ಅವರು ಬೇಕೆಂತಲೇ ಆ ಹಾದಿಯನ್ನು ಹಿಡಿಯುತ್ತಿರಲಿಕ್ಕಿಲ್ಲ! ಛತ್ರಸಾಲ, ನನ್ನ ಹಲವು ಗುಪ್ತಚಾರರಲ್ಲಿ ಏಸಾಜಿಯು ಅತ್ಯಂತ ಚಾಣಾಕ್ಷನಾದ ಒಬ್ಬ ಗುಪ್ತಚಾರನಾಗಿರುವನು. ದೇವಗಡದ ಕಡೆಗೆ ಸುದ್ದಿಯನ್ನು ತಿಳಿದು ಕೊಂಡು ಬರುವದಕ್ಕಾಗಿ ಈತನ ಯೋಜನೆಯಾಗಿತ್ತು. ದೇವಗಡದ ಜಯ ಪ್ರಾಪ್ತಿಯಾದ ದಿವಸ ಜಯಸಿಂಗನೊಡನೆ ಆದ ನಿನ್ನ ಸಂಭಾಷಣವನ್ನೆಲ್ಲ ಏಸಾಜಿಯು ಕೇಳಿರುವನು. ನೀನು ನನ್ನ ಕಡೆಗೆ ಬರುವದಕ್ಕಾಗಿ ಹೊರಟಾಗಿನಿಂದ ಒಂದಿಲ್ಲೊಂದು ಸೋಗು ಹಾಕಿಕೊಂಡು ಏಸಾಜಿಯು ನಿನ್ನ ಸಂಗಡಲೇ ಬರುತ್ತಿದ್ದನು. ಮೊದಲು ಬುಡಬುಡಿಕೆಯವರ ಸೋಗಿನಿಂದ, ಆಮೇಲೆ ದುರಗಮುರಗೆಯವರ ಸೋಗಿನಿಂದ, ಆಮೇಲೆ ಪ್ರಶ್ನೆಹೇಳುವ ದೋಸಿಗರ ಸೋಗಿನಿಂದ ಈತನು ನಿನ್ನ ಸಂಗಡಿಗನಾಗಿದ್ದನು. ಕಡೆಗೆ ಶ್ರೇಷ್ಠವರ್ಗದ ಮರಾಠರ ಸೋಗಿನಿಂದ ನಿನ್ನನ್ನು ಈ ಲಿಂಬಾಜಿಪಾಟೀಲನ ಮನೆಗೆ ಕರತಂದಾತನು ಈ ಏಸಾಜಿಯೇ!

ಶಿವಾಜಿಯ ಈ ಮಾತಿನಿಂದ ಛತ್ರಸಾಲನಿಗೆ ಎಲ್ಲ ನಿಚ್ಚಳವಾಗಿ ಕಾಣಹತ್ತಿತು. ತಾನು ದೇವಗಡವನ್ನು ಬಿಟ್ಟಾಗಿನಿಂದ ಏಸಾಜಿಯ ಈ ಗಿಡ್ಡಮೂರ್ತಿಯು ತನ್ನ ಸಂಗಡಲೇ ಇರುತ್ತಿದ್ದದ್ದರ ನಂಬಿಗೆಯು ಆತನಿಗೆ ಆಯಿತು. ಇಳಿದುಕೊಂಡ ಸ್ಥಳದಲ್ಲಿ ತನ್ನ ಯೋಗಕ್ಷೇಮವು ಉತ್ತಮ ರೀತಿಯಿಂದ ಆಗುತ್ತಿರುವದರ ಮರ್ಮವು ಈಗ ಛತ್ರಸಾಲನಿಗೆ ಗೊತ್ತಾಯಿತು. ಆತನು ಶಿವರಾಯನ ಕಡೆಗೆ ಕೃತಜ್ಞತೆಯಿಂದ ನೋಡುತ್ತ–

ಛತ್ರಸಾಲ—ಮಹಾರಾಜ, ತಮ್ಮ ಕಾರ್ಯಕೌಶಲ್ಯವನ್ನು ನನ್ನಂತಹ ಪಾಮರನು ಏನು ತಿಳಿಯುವೆನು? ನಿನ್ನೆ ಸಂಜೆಗೆ ನನ್ನನ್ನು ಲಿಂಬಾಜಿಪಾಟೀಲನ ಮನೆಗೆ ಕರತಂದ ರಂಗರಾವ ಪಾಟೀಲನು ಈ ಏಸಾಜಿಯೇ ಎಂಬುದು ಈಗ ನನಗೆ ಗೊತ್ತಾಯಿತು! ನಾನು ಇಷ್ಟು ಗುಪ್ತರೀತಿಯಿಂದ ಪ್ರವಾಸ ಮಾಡುತ್ತಿದ್ದರೂ, ಗುಪ್ತಚಾರರ ಮುಖಾಂತರವಾಗಿ ಮಹಾರಾಜರು ನನ್ನ ಹೃದಯವನ್ನು ಅರಿತು, ನನ್ನ ಆದರ–ಸತ್ಕಾರಮಾಡಿಸಿ, ತಮ್ಮ ಚರಣಸನ್ನಿಧಿಗೆ ಬರಮಾಡಿಕೊಂಡದ್ದು ಮಹದುಪಕಾರವಲ್ಲವೆ?

ಶಿವರಾಯ—(ಗಾಂಭೀರ್ಯದಿಂದ) ಛತ್ರಸಾಲ, ನಾನು ಮಾಡತಕ್ಕ ಕೆಲಸವನ್ನು ಮಾಡಿರುವೆನು. ಅದರಲ್ಲಿ ಹೆಚ್ಚಿನದೇನಿದೆ? ಬುಂದೇಲಖಂಡದಂತಹ ದೂರದ ಪ್ರದೇಶದಿಂದ ಹಲವು ಸಂಕಟಗಳನ್ನು ಅನುಭವಿಸುತ್ತ ಕೇವಲ ಪರೋಪಕಾರಕ್ಕಾಗಿ ನನ್ನ ಕಡೆಗೆ ಬರುತ್ತಿರುವ ನಿನ್ನನ್ನು, ನಾನು ಆದರಿಸದಿದ್ದರೆ ದೇವರ ಮುಂದೆ ನಾನು ಅಪಾಧಿಯಾಗಲಿಕ್ಕಿಲ್ಲವೆ? ನಿನ್ನ ಶ್ರಮವನ್ನು ಕಡಿಮೆಮಾಡುವದಕ್ಕಾಗಿ ನಾನು ನೀನಿದ್ದಲ್ಲಿಗೇ ಬರಬೇಕಾಗಿತ್ತು; ಆದರೆ ನೀನು ದೇವಗಡವನ್ನು ಬಿಡುವ ಮುನ್ನಾದಿನ ಜಯಸಿಂಗನೊಡನೆ ನಿನ್ನ ಭಾಷಣವಾಗುವವರೆಗೆ ನಿನ್ನ ಉದ್ದೇಶವು ತಿಳಿಯಲಿಕ್ಕೆ ಮಾರ್ಗವಾಗದ್ದರಿಂದ, ನಾನು ಇಲ್ಲಿಯವರೆಗೆ ನಿನ್ನನ್ನು ಬರಗೊಡಬೇಕಾಯಿತು. ನೀನು ಬಹಳ ವೇಗದಿಂದ ಬರತೊಡಗಿದ್ದರಿಂದ ಇದೇ ಸ್ಥಳದಲ್ಲಿ ನಿನ್ನನ್ನು ಕಾಣುವದನ್ನು ನಾನು ಗೊತ್ತುಪಡಿಸಬೇಕಾಯಿತು!

# ಗೌರವದ ಉಪದೇಶ

ಈ ಮೇರೆಗೆ ನುಡಿದು ಶಿವರಾಯನು ಸ್ವಲ್ಪ ಹೊತ್ತು ಸುಮ್ಮನೆ ಕುಳಿತನು. ಛತ್ರಸಾಲನು ಆತನನ್ನು ನೋಡುತ್ತ ಶಿವರಾಯನು ಇನ್ನಾವ ಮಾತುಗಳನ್ನು ನನಗೆ ಹೇಳುವನೆಂಬದರ ಹಾದಿಯನ್ನು ಉತ್ಸುಕತೆಯಿಂದ ನೋಡಹತ್ತಿದನು. ಕೆಲಕಾಲ ಸ್ವಸ್ಥಚಿತ್ತದಿಂದ ಮನನಮಾಡಿದ ಬಳಿಕ ಆ ಮಹಾರಾಷ್ಟ್ರವೀರನು ಛತ್ರಸಾಲನನ್ನು ಕುರಿತು—

ಶಿವರಾಯ—ಛತ್ರಸಾಲ, ಬುಂದೇಲಖಂಡವನ್ನು ದಾಸ್ಯಮುಕ್ತಮಾಡುವದಕ್ಕಾಗಿ ಈವರೆಗೆ ಹಲವು ಪ್ರಯತ್ನಗಳಾಗಿರುವವೆಂದು ಕೇಳಿದ್ದೇನೆ; ಆದರೆ ಪ್ರತಿ ಒಂದು ಸಾರೆ ಅಂತಃಕಲಹದಿಂದ ಆ ಪ್ರಯತ್ನಗಳೆಲ್ಲ ನಿಷ್ಫಲವಾದವೆಂದು ಹೇಳುತ್ತಾರೆ, ಈ ಮಾತು ನಿಜವಷ್ಟೆ? ಬುಂದೇಲಖಂಡದೊಳಗಿನ ಅರಸರು ಯವನ ಸತ್ತೆಯನ್ನು ದೂರಮಾಡಿಕೊಳ್ಳಲಿಕ್ಕೆ ಒಮ್ಮನಸ್ಸಿನಿಂದ ಯತ್ನಿಸುವದಿಲ್ಲವೆಂಬ ಮಾತು ನಿಜವೇನು?

ಛತ್ರಸಾಲ—ನೀಜವು, ಮಹಾರಾಜರು ಕೇಳಿದ ಪ್ರತಿ ಒಂದು ಸಂಗತಿಯೂ ನಿಜವಾದದ್ದು, ನಾವು ಮಾಡಿದ ಪ್ರಯತ್ನಗಳೆಲ್ಲ ನಿಷ್ಫಲವಾಗಿ ನಿರಾಶೆಯು ಉತ್ಪನ್ನವಾಗಲು, ಯಾವ ಮಾರ್ಗದಿಂದ ಯತ್ನಿಸಬೇಕೆಂಬದನ್ನು ಕೇಳಿಕೊಳ್ಳುವದಕ್ಕಾಗಿಯೇ ಮಹಾರಾಜಸನ್ನಿಧಿಗೆ ನಾನು ಬಂದಿರುವೆನು. ನನ್ನ ತಂದೆಯಾದ ರಾಜಾಚಂಪತರಾಯರಿಗೆ, ದಿಲ್ಲೀಪತಿಯ ಅಧಿಕಾರ ವನ್ನು ನಷ್ಟಪಡಿಸಿ ಬುಂದೇಲಖಂಡದ ಸ್ವಾತಂತ್ರ್ಯವನ್ನು ಸಂಪಾದಿಸುವೆನೆಂಬ ನಂಬಿಗೆಯು ಸಂಪೂರ್ಣವಾಗಿ ಇದ್ದಿತು. ಅವರ ಕೂವತ್ತು ಹೆಚ್ಚು; ಧೈರ್ಯವು ಬಹಳ; ಅವರ ಕ್ಷಾತ್ರತೇಜವು ಅದ್ವಿತೀಯವಾದದ್ದು; ಆದರೆ ಬುಂದೇಲಿಗಳ ಪರಸ್ಪರರಲ್ಲಿಯ ಮಾತ್ಸರ್ಯದಿಂದಲೇ ಅವರು ತಮ್ಮ ರಾಜ್ಯದಿಂದ ಭ್ರಷ್ಟರಾಗಿ, ಕಡೆಗೆ ಜೀವಕ್ಕೆ ಎರವಾಗಬೇಕಾಯಿತು! ಕಡೆಕಡೆಗೆ ನಮ್ಮ ತಂದೆಯವರಿಗೆ ತಮ್ಮ ತಪ್ಪು ಗೊತ್ತಾಯಿತು! ಮಹಾರಾಜ, ನಿಮ್ಮ ಯೋಗ್ಯತೆಯು ನಮ್ಮ ಹಿರಿಯರಿಗೆ ಗೊತ್ತಿದ್ದಿಲ್ಲವೆಂತಲ್ಲ, ನಿಮ್ಮ ಸಹವಾಸದ ಯೋಗವು ಒದಗಿಬರಲಿಲ್ಲವೆಂಬ ಪಶ್ಚಾತ್ತಾಪವನ್ನು ಅವರು ಮರಣಕಾಲದಲ್ಲಿ ವ್ಯಕ್ತಮಾಡಿ ನಿಮ್ಮ ದರ್ಶನಮಾಡಿಕೊಳ್ಳಲು ನನ್ನನ್ನು ಆಜ್ಞಾಪಿಸಿದರು; ಅಂತೇ ನಾನು ತಮ್ಮ ಚರಣಸನ್ನಿಧಿಗೆ ಬಂದಿದ್ದೇನೆ.

ಶಿವಾಜಿ—ತರುಣರಾಜಾ, ಅಹಂಕಾರರಹಿತನಾಗಿ, ಭೂತದಯೆಯ ಪ್ರೇರಣೆಯಿಂದ ಸ್ವದೇಸಿಯರಲ್ಲಿ ಬಂಧುಭಾವವನ್ನು ವಹಿಸಿ, ದೇಶದ ಸ್ವಾತಂತ್ರ್ಯಕ್ಕಾಗಿ ನಿಸ್ವಾರ್ಥಬುದ್ಧಿಯಿಂದ ಯತ್ನಿಸುವ ಧರ್ಮಿಷ್ಠ ಪುಣ್ಯಪುರುಷನಿಗೆ ದೇವರು ತಕ್ಕಹಾದಿಯನ್ನು ತೋರಿಸಲಿಕ್ಕೆ ಸಿದ್ಧನಾಗಿರುವನೆಂದು ತಿಳಿದುಕೋ. ಆ ವಿಶ್ವಪತಿಯು ಪ್ರತ್ಯಕ್ಷ ನಮ್ಮ ಮುಂದೆ ಬಂದುನಿಂತು ನಮಗೆ ಹಾದಿಯನ್ನು ತೋರಿಸದಿದ್ದರೂ, ಒಂದೊಂದು ಮುಖದಿಂದ ಪ್ರಸಂಗಕ್ಕೆ ತಕ್ಕಹಾದಿ ಯನ್ನು ತೋರಿಸುತ್ತಿರುವನು! ಅಂದಬಳಿಕ ನನ್ನಂತಹ ಪಾಮರನು ಹೆಚ್ಚಿಗೆ ಏನು ಹೇಳಲಿ? ಸ್ವದೇಶವನ್ನು ಉದ್ಧರಿಸಲು ಯತ್ನಿಸುವ ನೀನು, ಅಹಂಕಾರವನ್ನು ಬಿಡು; ದೇಶದ ಹಿತವೇ ನಿನ್ನ ಹಿತವೆಂದು ತಿಳಿದುಕೋ; ಧರ್ಮನಿಷ್ಠೆಯನ್ನು ಬಿಡಬೇಡ; ಸೃಷ್ಟಿಯ ಎಲ್ಲ ವ್ಯವಹಾರಗಳು

ವಿಶ್ವಪಾಲಕನ ತಂತ್ರದಿಂದ ನಡೆದಿದ್ದು ಆತನ ದಾಸನಾಗಿ ಕರ್ತವ್ಯವನ್ನು ಮಾಡುವೆನೆಂದು ತಿಳಿದು ವಿಘ್ನಗಳಿಗೆ ಹೆದರದೆ ಒಂದೇಸವನೆ ತಪಸ್ವಿಯಂತೆ ದೇಶಸೇವೆಯಲ್ಲಿ ದೇಹವನ್ನು ಸವಿಸು!

ಛತ್ರಸಾಲ—ಮಹಾಪ್ರಭೋ, ಇದಕ್ಕೂ ಹೆಚ್ಚಿನ ಹಾದಿಯು ತೋರಿಸೋಣವು ನನಗೇನು ಬೇಕಾಗಿದೆ? ದೇವಿಯ ಭಕ್ತನಾದ ನೀನು ಸತ್ವಬಲದಿಂದ ದೇವಿಯನ್ನು ಪ್ರಸನ್ನೀಕರಿಸಿ ಕೊಂಡಿರುವದರಿಂದ, ನಿನ್ನ ಅಧಿಕಾರವು ಬಹು ದೊಡ್ಡದಿರುವದು! ನಿನ್ನ ಉಪದೇಶವನ್ನು ದೇವಿಯ ಉಪದೇಶವೆಂತಲೇ ನಾನು ಭಾವಿಸುವೆನು. ಸ್ವಾತಂತ್ರ್ಯದೀಕ್ಷಾಗುರುವೇ, ಅಖಿಲ ಭರತಖಂಡವು ಯವನರ ದರ್ಪದಿಂದ ಹಣ್ಣಾಗಿ ಹೋಗಿರುವಾಗ, ಅದಕ್ಕೆ ಸ್ವಾತಂತ್ರ್ಯ ರಸಾಯನವನ್ನು ಕೊಟ್ಟು, ತೇಜಸ್ವಿಯಾಗಮಾಡುವ ಹಾದಿಯನ್ನು ಮೊಟ್ಟಮೊದಲು ಕಂಡು ಹಿಡಿದವನು ನೀನೇ ಅಲ್ಲವೆ? ಭರತಖಂಡದಲ್ಲಿ ಸ್ವಾತಂತ್ರ್ಯದ ಬೀಜಾರೋಪಣವನ್ನು ನೀನೇ ಮಾಡಿದೆ. ಆದ್ದರಿಂದ ನನ್ನಂತಹ ಸ್ವಾತಂತ್ರ್ಯದೇವಿಯ ಪಾಮರನಾದ ಉಪಾಸಕನನ್ನು ನೀನು ಎಷ್ಟು ಬೋಧಿಸಿದರೂ ಸ್ವಲ್ಪವೆ! ನಿನ್ನ ಪ್ರತಿ ಒಂದು ಶಬ್ದವೂ ನನಗೆ ಬೋಧಪ್ರದವಾಗಿಯೇ ಇರುವದು!

ಛತ್ರಸಾಲನ ಈ ಮಾತುಗಳನ್ನು ಕೇಳಿ ಶಿವಾಜಿಯು ಕೆಲಹೊತ್ತು ಆಲೋಚಿಸಿ ಮತ್ತೆ ಛತ್ರಸಾಲನನ್ನು ಕುರಿತು—ಛತ್ರಸಾಲ, ಬುಂದೇಲಖಂಡದ ಪರಿಸ್ಥಿತಿಯೂ, ಮಹಾರಾಷ್ಟ್ರದ ಪರಿಸ್ಥಿತಿಯೂ ಒಂದೇ ಇರುವದಿಲ್ಲ. ಸ್ವಾತಂತ್ರ್ಯಪ್ರಾಪ್ತಿಗಾಗಿ ನಾನು ಮಹಾರಾಷ್ಟ್ರದಲ್ಲಿ ಯತ್ನಿಸಿದ ಹಾದಿಯಿಂದಲೇ ಬುಂದೇಲಖಂಡದಲ್ಲಿ ನೀನು ಯತ್ನಿಸಿದರೆ, ಯಶಸ್ಸು ದೊರಿತೀತೆನ್ನುವ ಹಾಗೆ ತೋರುವದಿಲ್ಲ. ದೇಶ-ಕಾಲ-ಪರಿಸ್ಥಿತಿಗಳಿಗನುಸರಿಸಿ ತಮ್ಮ ಸದಸದ್ವಿವೇಕ ಬುದ್ಧಿಗೆ ಯೋಗ್ಯತೋರಿದ ಹಾದಿಯನ್ನು ಹಿಡಿಯುವದು ಶ್ರೇಯಸ್ಕರ ವಾಗಿರುವದು. ಮಹಾರಾಷ್ಟ್ರವು ಸ್ವಾತಂತ್ರ್ಯವನ್ನು ಕಳೆದುಕೊಂಡು ಬಹಳ ದಿವಸವಾದದ್ದರಿಂದ, ಮರಾಟರ ಮನಸ್ಸನ್ನು ಸ್ವರಾಜ್ಯದ ಕಡೆಗೆ ಎಳೆದುಕೊಳ್ಳಲಿಕ್ಕೆ ಆಯಾಸವೂ, ವಿಳಂಬವೂ ಆಯಿತು. ಸಮರ್ಥ ಶ್ರೀರಾಮದಾಸರೂ, ಅವರ ಕರ್ತವ್ಯದಕ್ಷ ಶಿಷ್ಯರೂ ಎಷ್ಟೋ ವರ್ಷ ಗಳಿಂದ ಅಖಂಡ ಪ್ರಯತ್ನಮಾಡಿ, ಕೇವಲ ದೈವಾಧೀನವಾಗಿದ್ದ ಆಗಿನ ಮಹಾರಾಷ್ಟ್ರರ ಮನಸ್ಸನ್ನು ಕರ್ತವ್ಯೋನ್ಮುಖ ದೈವಾಧೀನವಾಗುವಂತೆ ಮಾಡಿ, ಆ ಕರ್ಮಹೀನ ಮರಾಟರನ್ನು ಸಾತ್ವಿಕ ಕರ್ಮವೀರರಾಗಮಾಡಿದರು! ಅದರಿಂದ ಮರಾಟರು ಬಲಿಷ್ಠರೂ, ಸ್ವಾವಲಂಬಿಗಳೂ ಆದರು. ಹೀಗೆ ಮಹಾರಾಷ್ಟ್ರದ ಸ್ವಾತಂತ್ರ್ಯದ ಅಸ್ತಿವಾರವನ್ನು ಹಾಕಲಿಕ್ಕೆ ಬಹಳ ದಿವಸಗಳು ಬೇಕಾದವು; ಆದರೆ ಬುಂದೇಲಖಂಡದ ಮಾತು ಹಾಗಿಲ್ಲ. ಬುಂದೇಲಖಂಡದ ಸ್ವಾತಂತ್ರ್ಯವು ನಷ್ಟವಾಗಿ ಇನ್ನೂ ಮೂರು ತಲೆ ಪೂರಾ ಆಗಿಲ್ಲ, ಸೇಲಿಮ ಬಾದಶಹನು ನಿಮ್ಮ ಬುಂದೇಲಿಗಳ ಸ್ವಾತಂತ್ರ್ಯಕ್ಕೆ ಕೈಹಾಕಿದರೂ, ಆತನ ಮೊಮ್ಮಗ ಔರಂಗಜೇಬನ ಕಾಲದವರೆಗೂ ನಿಮ್ಮ ಸ್ವಾತಂತ್ರ್ಯ ತೇಜವನ್ನು ಪೂರ್ಣ ನಷ್ಟಪಡಿಸುವದು ದಿಲ್ಲೀಬಾದಶಹರಿಂದ ಆಗಿರುವದಿಲ್ಲ! ಇನ್ನೂ ಬುಂದೇಲಖಂಡದಲ್ಲಿ ರಾಜಾ ಚಂಪತರಾಯ—ರಾಜಾ ಛತ್ರಸಾಲರಂಥ ಸ್ವಾತಂತ್ರ್ಯಪ್ರಿಯ ವೀರರು ಹುಟ್ಟುತ್ತಲೇ ಇರುವರು; ಆದ್ದರಿಂದ ಸ್ವಾತಂತ್ರ್ಯಕ್ಕಾಗಿ ಹೆಣಗಲು ತಕ್ಕ ಮನಸ್ಸಿನ

ರಚನೆಯನ್ನು ಮಾಡಲಿಕ್ಕೆ ಬುಂದೇಲಖಂಡದಲ್ಲಿ ಹೆಚ್ಚು ಆಯಾಸವಾಗುವಹಾಗಿಲ್ಲ, ವಿಲಂಬವೂ ಆಗುವಹಾಗಿಲ್ಲ. ಇದಲ್ಲದೆ ಬುಂದೇಲಖಂಡದ ಜನರು ಅಲ್ಲಲ್ಲಿಯ ಮಾಂಡಲಿಕ ರಾಜರಿಗೆ ಅಧೀನರಾಗಿರುವದರಿಂದ, ಬುಂದೇಲಖಂಡದ ಎಲ್ಲ ಮಾಂಡಲಿಕರಾಜರೂ, ಸರದಾರರೂ ಸ್ವರಾಜ್ಯ ಸಂಪಾದನಕ್ಕಾಗಿ ಒಮ್ಮನಸ್ಸಿನಿಂದ ಟೊಂಕಕಟ್ಟಿದರೆ, ಸಹಜವಾಗಿಯೇ ಬುಂದೇಲ ಖಂಡದಲ್ಲಿ ಐಕ್ಯವು ಉಂಟಾಗುವದು; ಆದ್ದರಿಂದ ಛತ್ರಸಾಲ, ನೀನು ಬುಂದೇಲಖಂಡಕ್ಕೆ ತಿರುಗಿ ಹೋದಕೂಡಲೆ ಅಂತಸ್ಥ ಕಲಹದ ಬೀಜವನ್ನು ಸ್ವಾರ್ಥತ್ಯಾಗದಿಂದ ಮೊದಲು ಹುರಿದುಬಿಡು. ಹೀಗೆ ಮಾಡುವಾಗ ನೀನು ಗರ್ವಿಷ್ಠರಾಜರಮುಂದೆ ನಮ್ರನಾಗು; ಜಾಣ ರಾಜರಿಗೆ ತಿಳಿಹೇಳು; ಅಜ್ಞಾನಿರಾಜರನ್ನು ಉಪದೇಶದಿಂದ ಹಾದಿಗೆ ಹಚ್ಚು; ಮೂರ್ಖ ರಾಜರನ್ನು ನಿಮ್ಮ ಮಾತೇ ಸರಿಯೆಂದು ಹೇಳಿ ಸಮಾಧಾನಪಡಿಸು; ಎಟ್ಟಿ ಅರಸರನ್ನು ಆಯಕಟ್ಟಿನ ಸ್ಥಳನೋಡಿ ಹಿಚಿಕಿ ಹಣ್ಣುಮಾಡು! ವ್ಯಕ್ತಿವಿಷಯಕ ಕಲಹಗಳು, ವ್ಯಕ್ತಿವಿಷಯದ ದ್ವೇಷಗಳು, ವ್ಯಕ್ತಿವಿಷಯಕ ಮಾತ್ಸರ್ಯಗಳು, ವ್ಯಕ್ತಿಗಳಷ್ಟು ಪ್ರಕೃತಿಗಳು ಎಂಬ ನಿಯಮದಂತೆ ಅವನ್ನು ಸಂಪೂರ್ಣ ನಷ್ಟಗೊಳಿಸುವದು ಯಾರಿಗೂ ಶಕ್ಯವಲ್ಲೆಂಬದನ್ನು ಸರ್ವಥಾ ಮರೆಯಬೇಡ; ಆದರೂ ಸ್ವಾತಂತ್ರ್ಯದ ಉದಾತ್ತ ಕಾರ್ಯಕ್ಕಾಗಿ ಸಹಾಯಮಾಡುವಾಗ ತಮ್ಮ ತಮ್ಮೊಳಗಿನ ಕಲಹ-ದ್ವೇಷ-ಮಾತ್ಸರ್ಯಗಳನ್ನು, ಮರೆತು ಬುಂದೇಲಿಗಳು ಒಟ್ಟುಗೂಡುವಂತೆ ಯತ್ನಿಸು. ಮೊದಲು ಪ್ರಮುಖನ ಸ್ವಾತಂತ್ರ್ಯದ ನಿಶಾನೆಯ ನೆರಳಿನಲ್ಲಿ ಎಲ್ಲ ಬುಂದೇಲಿಗಳು ಒಟ್ಟುಗೂಡುವಂತೆ ಮಾಡಿ, ಆಮೇಲೆ ಸ್ವಾತಂತ್ರ್ಯಕ್ಕಾಗಿ ಯತ್ನಿಸು.

ಛತ್ರಸಾಲ—(ಉತ್ಸಾಹದಿಂದ) ಸನ್ಮಾನೀಯ ಗುರೋ, ಸಮರ್ಥರಾಮದಾಸ ಸ್ವಾಮಿಗಳು ಮಹಾರಾಷ್ಟ್ರದೊಳಗಿನ ಜನರಿಗೆ ಸ್ವಾತಂತ್ರ್ಯದ ಗುರುತುಮಾಡಿಕೊಟ್ಟಂತೆ, ಬುಂದೇಲಖಂಡದಲ್ಲಿ ಪ್ರಾಣನಾಥ ಪ್ರಭುಗಳು ಬುಂದೇಲಿಗಳಿಗೆ ಸ್ವಾತಂತ್ರ್ಯದ ಪಾಠವನ್ನು ಕಲಿಸುತ್ತ ಬುಂದೇಲಖಂಡದ ತುಂಬ ಸಂಚರಿಸುತ್ತಿರುವರು. ಬುಂದೇಲಖಂಡದಲ್ಲಿ ಪ್ರಾಣನಾಥ ಪ್ರಭುಗಳ ಆಜ್ಞೆಯು ರಾಜಾಜ್ಞೆಗಳಿಗಿಂತಲೂ ಬಲಿಷ್ಠವಾಗಿ, ಸರ್ವರಿಗೂ ಮಾನ್ಯವಾಗಿರುವದು. ಅಲ್ಲದೆ ದಳಪತರಾಯನೆಂಬ ಒಬ್ಬ ತೇಜಸ್ವಿರಾಜಪುತ್ರನು ಅದೇ ಉದ್ದೇಶದಿಂದ ಬುಂದೇಲ ಖಂಡದಲ್ಲೆಲ್ಲ ಸಂಚರಿಸುತ್ತಿರುವನು; ಆದ್ದರಿಂದ ಬುಂದೇಲಖಂಡದ ಸ್ವಾತಂತ್ರ್ಯಪ್ರಾಪ್ತಿಯ ಕಾರ್ಯದ ಪೂರ್ವಸಿದ್ಧತೆಯು ಇಷ್ಟುಹೊತ್ತಿಗೆ ಪೂರ್ಣವಾಗಿರುವದೆಂದು ತಿಳಿಯಲಿಕ್ಕೆ ಬಾಧೆಯಿಲ್ಲ.

ಶಿವಾಜಿ—ಛತ್ರಸಾಲ, ಪ್ರಾಣನಾತಪ್ರಭುಗಳಂಥ ಮಹಾತ್ಮರ ಬೆಂಬಲವು ದೊರೆತಿರುವಾಗ, ನೀನೇಕೆ ಚಿಂತೆಮಾಡುವೆ? ಬ್ರಹ್ಮನಿಷ್ಠರು ಹೊಲ್ಲದ ಕೆಲಸಕ್ಕೆ ಕೈಹಾಕರು; ಅವರು ಹೈಹಾಕಿದ ಕೆಲಸವು ವ್ಯರ್ಥವಾಗದು; ಆದ್ದರಿಂದ ಎಲೈ ಪರಾಕ್ರಮಿಯಾದ ರಾಜನೇ, ಬುಂದೇಲಖಂಡದ ಪೂರ್ವಸಿದ್ಧತೆಯಾಗಿದ್ದರೆ, ಸ್ವಾತಂತ್ರ್ಯದ ಮುಂದಿನ ಕೆಲಸವನ್ನು ಮಾಡುವದಕ್ಕಾಗಿ, ನೀನು ಬೇಗನೆ ಬುಂದೇಲಖಂಡಕ್ಕೆ ಹೋಗಬೇಕಾಗುವದು. ಅಲ್ಲಿಗೆ ಹೋದಬಳಿಕ ನೀನು ನಿನ್ನ ಶತ್ರುಗಳನ್ನು ಸಂಹರಿಸಿ ಜಯಶೀಲನಾಗು. ನೀನು ನಿನ್ನ ದೇಶವನ್ನು ಪುನಃ ಸ್ವಾಧೀನಪಡಿಸಿಕೊಂಡು ರಾಜ್ಯವಾಳು. ಬಾದಶಹನ ಸೈನ್ಯವನ್ನು ದೆಸೆಗೆಡಿಸಿ ಓಡಿಸಿಬಿಡು.

ಆ ಕಪಟಿಗಳ ವಿಶ್ವಾಸವನ್ನು ಹಿಡಿಯದೆ, ತುರ್ಕ-ಮೊಗಲರ ಸ್ವಾಹಾಕಾರವನ್ನು ಮಾಡು. ನಿನ್ನ ಮೇಲೆ ಅವರು ಏರಿಬಂದಾಗೆಲ್ಲ ಶ್ರೀವಿಂಧ್ಯವಾಸಿನಿಯು ನಿನಗೆ ಸಹಾಯಮಾಡಿ, ಅವರನ್ನು ನಿರಾಶೆಗೊಳಿಸುವಳು. ಅವರು ನನ್ನೊಡನೆ ದ್ವೇಷ ಬೆಳಿಸಿದಾಗ ಶ್ರೀಭವಾನಿಯು ನನಗೆ ಸಹಾಯ ಮಾಡುವದಕ್ಕಾಗಿ ಬಂದಳು. ಆಕೆಯ ಕೃಪಾ ಪ್ರಸಾದದಿಂದ ನನಗೆ ಮುಸಲ್ಮಾನರು ಗಣ್ಯರಾಗಲಿಲ್ಲ. ನನ್ನಮೇಲೆ ಕಪಟಿಗಳಾದ ''ನಾನು ನಾನು'' ಅನ್ನುವ ಎಷ್ಟೋ ಮುಸಲ್ಮಾನ ವೀರರು ಏರಿಬಂದರು, ನನ್ನ ಕುತ್ತಿಗೆ ಕೊಯ್ಯಬೇಕೆಂದು ಅವರು ಯತ್ನಿಸಿದರು; ಆದರೆ ಅವರೆಲ್ಲರ ಸಂಹಾರವನ್ನೂ ಭವಾನಿಯು ನನ್ನ ಕೈಯಿಂದ ಮಾಡಿಸಿದಳು; ಆದ್ದರಿಂದ ನೀನು ಸ್ವಲ್ಪವೂ ಚಿಂತೆಮಾಡದೆ ನಿನ್ನ ದೇಶಕ್ಕೆ ಹೋಗು. ಸೈನ್ಯವನ್ನು ಕೂಡಿಸಿ, ಮುಸಲ್ಮಾನರನ್ನು ಓಡಿಸಿಬಿಡು. ಯಾವಾಗಲೂ ಹಿರಿದಕತ್ತಿಯು ಸಜ್ಜಾಗಿರಲಿ, ಅಂದರೆ ಪರಮೇಶ್ವರನ ಕೃಪೆಯಿಂದ ನಿನ್ನ ಸಂರಕ್ಷಣವಾಗುವದು. ಗೋ-ಬ್ರಾಹ್ಮಣರ ಪ್ರತಿಪಾಲನೆಯು, ವೇದಗಳ ರಕ್ಷಣವು, ಸಮರಾಂಗಣದಲ್ಲಿ ಶೌರ್ಯವನ್ನು ಪ್ರಕಟಿಸುವದು ಕ್ಷತ್ರಿಯರ ಮುಖ್ಯ ವ್ರತಗಳಾಗಿರುವವು! ಇದರಲ್ಲಿ ನಿನಗೆ ಮರಣವು ಪ್ರಾಪ್ತವಾದರೆ, ಸೂರ್ಯಮಂಡಲವನ್ನು ಭೇದಿಸಿ ಸ್ವರ್ಗದ್ವಾರವನ್ನು ಜಯಿಸಿ ಅಲ್ಲಿಯ ಅಪಾರ ಸುಖವನ್ನು ಅನುಬೋಗಿಸುವೆ. ರಣದಲ್ಲಿ ಜಯಪ್ರಾಪ್ತಿಯಾದರೆ, ಬುಂದೇಲಖಂಡಕ್ಕೆ ಸ್ವರಾಜ್ಯವೂ, ನಿನಗೆ ಅಕ್ಷಯ್ಯ ಕೀರ್ತಿಯೂ ಪ್ರಾಪ್ತವಾಗುವವು. ಯುದ್ಧ ಮಾಡುವಾಗ ದಿಲ್ಲೀಪತಿಯೊಡನೆ ಪ್ರಸಂಗವಿರುವದೆಂಬದನ್ನು ಲಕ್ಷದಲ್ಲಿಟ್ಟು, ಅಡಗಿ-ಹುದುಗಿ-ಜಪ್ಪಿಸಿ ಯುದ್ಧಮಾಡು. ಪ್ರಾಮಾಣಿಕರಾದ ತರುಣ ಬುಂದೇಲಿಗಳನ್ನು ಆರಿಸಿ, ಶತ್ರುಗಳ ಕಡೆಯ ಸುದ್ದಿಯನ್ನು ತಿಳಿದುಕೊಂಡು ಬರುವದಕ್ಕಾಗಿ ಕಳಿಸುವದನ್ನು ಮರೆಯಬೇಡ. ಅರಸರಿಗೆ ಈ ಗುಪ್ತಚಾರರು ಒಂದು ಮುಖವಾಗಿರುವರು. ಸ್ವಾತಂತ್ರ್ಯಪ್ರಾಪ್ತಿಯಾದ ಹೊರತು ಸುಖ-ಶಾಂತಿ-ಸದ್ಭಾವಗಳ ಉದಯವು ಜನತೆಯಲ್ಲಿ ಆಗುವದಿಲ್ಲವೆಂಬದನ್ನು ತಿಳಿದು, ಜನ್ಮಸಿದ್ಧಹಕ್ಕಾದ ಸ್ವರಾಜ್ಯವನ್ನು ಸಂಪಾದಿಸು. ಬುಂದೇಲಿಗಳು ನೀವು ಅತ್ಯಂತ ಶೂರರಿರುವಿರಿ. ನಿಮ್ಮಲ್ಲಿ ಒಮ್ಮೆ ಸ್ವರಾಜ್ಯದ ಬೀಜಾರೋಪರಣವಾದರೆ, ಕೃತಾಂತನಂತೆ ಪರಾಕ್ರಮದಿಂದ ಕಾದಿ, ಸ್ವರಾಜ್ಯವನ್ನು ಸಂಪಾದಿಸದೆ ಬಿಡುವದೇ ಇಲ್ಲವು ಛತ್ರಸಾಲಾ, ನಾವು ಆ ಜಗತ್ಪಾಲಕನ ಮಕ್ಕಳಿರುವೆವಲ್ಲವೆ? ನಾವು ಯಾವದೊಂದು ಅನ್ಯಾಯದ, ಅಥವಾ ಒತ್ತಾಯದ ಕೆಲಸ ಮಾಡುವದಕ್ಕಾಗಲಿ, ಸ್ವಾರ್ಥದ ಕ್ಷೇತ್ರವನ್ನು ಹೆಚ್ಚಿಸಿಕೊಳ್ಳುವದಕ್ಕಾಗಲಿ, ಎರಡನೆಯವರ ಹಕ್ಕುಗಳನ್ನು ಕಾಲಲ್ಲಿ ಹಾಕಿ ತುಳಿಯುವದಕ್ಕಾಗಲಿ, ನೆಲೆಯಿಲ್ಲದ ರಾಜ್ಯತೃಷ್ಣೆಯನ್ನು ತೃಪ್ತಿಮಾಡಿಕೊಳ್ಳಲಿಕ್ಕಾಗಲಿ, ಅನಿವಾರ್ಯವಾದ ಅಧಿಕಾರವನ್ನು ಸಂಪಾದಿಸುವದಕ್ಕಾಗಲಿ ನಾವು ಕೈಯಲ್ಲಿ ಶಸ್ತ್ರವನ್ನು ಹಿಡಿದಿರುವದಿಲ್ಲ. ಪರಮೇಶ್ವರನ ದರ್ಬಾರದೊಳಗಿನ ಸಮತೆ-ನ್ಯಾಯಗಳ ಸ್ಥಾಪನೆಯು ಅನ್ಯಮಾರ್ಗದಿಂದ ಆಗುವಹಾಗೆ ಇಲ್ಲದ್ದರಿಂದ, ನಿರುಪಾಯರಾಗಿ ಶಸ್ತ್ರವನ್ನು ಹಿಡಿಯಬೇಕಾಗಿದೆ. ನಾವು ಆ ದಯಾಳು ಪರಮಾತ್ಮನ ಸೇವಕರಿರುವೆವು. ನಮ್ಮಂತ ಸೇವಕರ ಕೆಲಸದಲ್ಲಿ ಕೀರ್ತಿಯನ್ನು ಕೊಡವದು ಆತನ ಕೈಯಲ್ಲಿರುತ್ತದೆ. ನಿಷ್ಕಾಮದಿಂದ ಕೆಲಸಮಾಡುವದು ನಮ್ಮ ಅಧಿಕಾರವು. ಯಶಸ್ಸನ್ನು ಪಡೆಯುವದು ನ್ಯಾಯಿಯಾದ

ಪರಮೇಶ್ವರನ ಇಚ್ಛೆಯನ್ನವಲಂಬಿಸಿರುತ್ತದೆ. ಏಕನಿಷ್ಠೆಯಿಂದ ನಾವು ಪರಹಿತಕ್ಕಾಗಿ ಹೆಣಗಿದರೆ, ಪರಮೇಶ್ವರನ ಕೃಪೆಯು ಯಾಕೆ ಆಗುವದಿಲ್ಲ?

ಛತ್ರಸಾಲ—(ಸದ್ಗದಿತ ಕಂಠದಿಂದ) ಮಹಾರಾಜ, ತಮ್ಮ ಉಪದೇಶದಿಂದ ನನ್ನಲ್ಲಿ ನವೀನವಾದದ್ದೊಂದು ತೇಜಸ್ಸು ಸಂಚಾರ ಮಾಡತೊಡಗಿರುವದು. ನನ್ನ ನಿರಾಶೆಹೊಂದಿದ ಮನಸ್ಸಿನಲ್ಲಿ ಆಶೆಯ ಅಂಕುರವು ಉತ್ಪನ್ನವಾಯಿತು. ನನ್ನ ಜನ್ಮಭೂಮಿಯಲ್ಲಿ ನಾನು ಯಾವಾಗ ಕಾಲಿಟ್ಟೇನು, ನನ್ನ ಜನ್ಮಭೂಮಿಯ ಮಾನರಕ್ಷಣವನ್ನು ಯಾವಾಗ ಮಾಡೇನು, ಎನ್ನುವ ಹಾಗೆ ನನಗೆ ಆಗಿದೆ. ಆದರೆ ಹಾಗೆ ಮಾಡುವ ಮೊದಲು ನಾನು ಒಮ್ಮೆ ದಿಲ್ಲಿಗೆ ಹೋಗಿ ಬರಬೇಕಾಗಿದೆ. ಮಹಾರಾಜ, ರಾಜಾ ಜಯಸಿಂಗರವರು ನನ್ನ ಮೇಲೆ ಅತ್ಯಂತ ಲೋಭ ಮಾಡುವರು ದೇವಗಡದ ಮುತ್ತಿಗೆಯಲ್ಲಿ ನಾನು ದಿಲ್ಲೀಪತಿಯ ಪಕ್ಷದಿಂದ ಕಾದಿದೆನು.

ಶಿವಾಜಿ—(ಆನಂದದಿಂದ ನೋಡುತ್ತ) ನೀನು ಬಹಳ ಒಳ್ಳೆಯ ಕೆಲಸಮಾಡಿದೆ! ದಿಲ್ಲೀಪತಿಯೊಡನೆ ನೀನು ಯುದ್ಧಮಾಡಬೇಕಾಗಿರುವದರಿಂದ, ಆತನ ಸೈನ್ಯದ ಒಳಗಿನ ಹುರುಳು ತಿಳಿಯುವದು ಅವಶ್ಯವಾಗಿರುವದು; ಆದ್ದರಿಂದ ನೀನು ಹಾಗೆ ಮಾಡಿದ್ದು ಉತ್ತಮ ಕೆಲಸವಾಯಿತು.

ಛತ್ರಸಾಲ—ನನ್ನ ಪರಾಕ್ರಮದಿಂದ ದಿಲ್ಲೀಪತಿಗೆ ಜಯವಾಯಿತೆಂದು ರಾಜಾ ಜಯಸಿಂಗರವರೂ, ಯಾವತ್ತು ಸೈನಿಕರೂ ತಿಳಿದಿರುವರು. ಸ್ವತಃ ಬಹದೂರಖಾನ ಕೋಕಾನ ತಿಳುವಳಿಕೆಯೂ ಹಾಗೆಯೇ ಆಗಿರುತ್ತದೆ; ಆದ್ದರಿಂದ ನಾನು ದಿಲ್ಲೀಪತಿಯನ್ನು ಕಾಣಿಸಿಕೊಂಡರೆ, ಬುಂದೇಲಖಂಡದ ಹಿತಕ್ಕಾಗಿ ಏನಾದರೂ ಯತ್ನಮಾಡೋಣವೆಂದು ರಾಜಾ ಜಯಸಿಂಗರವರು ಹೇಳಿರುವರು. ದಿಲ್ಲಿಗೆ ಬರಲೇಬೇಕೆಂದು ಅವರು ಅತ್ಯಾಗ್ರಹಮಾಡಿ ಹೇಳಿರುತ್ತಾರೆ; ಆದರೆ ಹಾಗೆ ಮಾಡುವದರಿಂದ ವ್ಯರ್ಥ ಕಾಲಹರಣವಾಗುವದೆಂದು ನನಗೆ ತೋರುತ್ತದೆ. ತಾವು ಅಪ್ಪಣೆಕೊಟ್ಟರೆ ನಾನು ದಿಲ್ಲಿಗೆಹೋಗದೆ, ಶಕ್ಯವಾದಷ್ಟು ಬೇಗನೆ ಬುಂದೇಲಖಂಡಕ್ಕೆ ಹೋಗಿ ಸ್ವಾತಂತ್ರ್ಯಪ್ರಾಪ್ತಿಯ ಯತ್ನವನ್ನು ನಡಿಸುವೆನು.

ಶಿವಾಜಿ—ದಿಲ್ಲಿಗೆಹೋಗುವದರಿಂದ ವ್ಯರ್ಥ ಕಾಲಹರಣವಾಗುವದೆಂಬ ನಿನ್ನಮಾತು ನನಗೆ ಮಾನ್ಯವಾಗಿರುತ್ತದೆ; ಆದರೆ ಯುದ್ಧವನ್ನು ಆರಂಭಿಸುವ ಮೊದಲು ದಿಲ್ಲಿಗೆಹೋಗಿ ಬರುವದು ನನಗೆ ನೆಟ್ಟಗೆ ಕಾಣುತ್ತದೆ. ಬಾದಶಹನು ನಿನ್ನನ್ನು ಲಕ್ಷಿಸುವದಿಲ್ಲವೆಂಬದಂತು ನಿಜವೆ; ಆತನು ನಿನ್ನನ್ನು ಕಣ್ಣೆತ್ತಿಸಹ ನೋಡುವದಿಲ್ಲ! ಆ ಧರ್ಮಮೂಢನಿಗೆ ಹಿಂದೂಜನರು ಅತ್ಯಂತ ತಿರಸ್ಕರಣೀಯರಾಗಿ ತೋರುತ್ತಿದ್ದು, ಅವರ ಯಾವಬಗೆಯ ಹಿತಮಾಡಲಿಕ್ಕೂ ಆತನ ಮನಸ್ಸು ಒಪ್ಪುವದಿಲ್ಲ; ಆತನು ನಿನ್ನನ್ನು ತಿರಸ್ಕರಿಸಿ ಅಪಮಾನಗೊಳಿಸಿದನೆಂದರೆ, ಇನ್ನು ಯುದ್ಧದ ಹೊರತು ಎರಡನೆಯ ಉಪಾಯವಿಲ್ಲೆಂಬ ಮಾತು ಬುಂದೇಲಖಂಡದ ಅರಸರಿಗೂ, ಪ್ರಜೆಗಳಿಗೂ ಗೊತ್ತಾಗುವದು. ಶಾಂತತೆಯ ಎಲ್ಲ ಉಪಾಯಗಳು ನಿಂತುಹೋದವೆಂದು ತಿಳಿದ ಹೊರತು ಅವರು ಯುದ್ಧಕ್ಕೆ ಸಿದ್ಧರಾಗಲಾರರು; ಇದಕ್ಕಾಗಿ ದಿಲ್ಲೀಪತಿಯಿಂದ ನಿರಾಶೆಯ ಉತ್ತರವನ್ನು ಹೇಳಿಸಿಕೊಳ್ಳುವದು ಅವಶ್ಯವಾಗಿರುವದು; ಆದ್ದರಿಂದ ಈಗ ನೀನು ರಾಜಾ

ಜಯಸಿಂಗನು ಹೇಳಿದಂತೆ ದಿಲ್ಲಿಗೆ ಹೋಗು. ಈ ಪ್ರಾಂತದಲ್ಲಿ ಇದ್ದು ನನ್ನ ಸ್ವಾತಂತ್ರ್ಯದ ಕಾರ್ಯವನ್ನು ಕಣ್ಣುಮುಟ್ಟ ನೋಡಬೇಕೆಂಬ ಇಚ್ಛೆಯನ್ನು ನೀನು ಪ್ರಕಟಮಾಡಿದೆ; ಆದರೆ ನನ್ನ ಪ್ರಯತ್ನದ ಅವಲೋಕನವು ನಿನ್ನ ಬುಂದೇಲಖಂಡದ ಪರಿಸ್ಥಿತಿಗೆ ಉಪಯೋಗವಾಗಲಾರದು; ಆದ್ದರಿಂದ ರಾಜಾ, ನೀನು ಇಲ್ಲಿ ಇರಬೇಡ. ನೀನು ಈ ಪ್ರಾಂತದಲ್ಲಿ ನನಗೆ ಸಹಾಯ ಮಾಡಿದರೂ, ಅಥವಾ ನಾವಿಬ್ಬರೂ ಕೂಡಿ ಶತ್ರುಗಳ ಮೇಲೆ ಏರಿಹೋಗಿ ಜಯವನ್ನು ಸಂಪಾದಿಸಿದರೂ ಯಶಸ್ಸಿನ ಸ್ವಾಮಿಯು ನಾನು ಆಗುವೆನು. ಆದ್ದರಿಂದ ಬುಂದೇಲಖಂಡದ ಹಿತಕ್ಕೆ ಅಷ್ಟು ಪ್ರಯೋಜನವಾಗಲಾರದು; ಆದ್ದರಿಂದ ನೀನು ಸ್ವದೇಶಕ್ಕೆ ಹೋಗಿ ಯುದ್ಧಮಾಡು. ನಿನ್ನ ಶೌರ್ಯವೂ, ನಿನ್ನ ಕೀರ್ತಿಯೂ ಚಂದ್ರಸೂರ್ಯರಿರುವವರೆಗೆ ಸ್ಥಿರವಾಗಿ ಇರುವವು!

ಶಿವರಾಯನ ಈ ಅಂತಃಕರಣಪೂರ್ವಕವಾದ ಆಶೀರ್ವಚನದಿಂದ ಛತ್ರಸಾಲನ ಹೃದಯವು ವೀರ್ಯೋತ್ಸಾಹದಿಂದ ಉಕ್ಕಿಬಂದು, ಆತನ ನೇತ್ರಗಳಿಂದ ಆನಂದಾಶ್ರುಗಳು ಉದುರಹತ್ತಿದವು. ಆತನು ಶಿವರಾಯನ ಚರಣಗಳಿಗೆ ಭಕ್ತಿಯಿಂದ ನಮಸ್ಕರಿಸಿದನು. ಶಿವರಾಯನು ಆತನನ್ನು ಹಿಡಿದೆತ್ತಿ ಆಲಿಂಗಿಸಿದನು. ಆಗಿನ ಮಂಗಳಪ್ರಸಂಗವು ಭರತಖಂಡದ ಸ್ವಾತಂತ್ರ್ಯದ ಇತಿಹಾಸದಲ್ಲಿ ಬರೆದಿಡತಕ್ಕಂತಹದೇ ಸರಿ! ಶಿವರಾಯನ ಅಪ್ಪಣೆಯಿಂದ ಛತ್ರಸಾಲನು ಸ್ವದೇಶಕ್ಕೆ ಹೊರಟನು. ಶಿವರಾಯನು ಪ್ರೇಮದ ಕುರುಹೆಂದು ಛತ್ರಸಾಲನಿಗೆ ಅರ್ಪಿಸಿದ ಖಡ್ಗವು, ಗುಪ್ತರೀತಿಯಿಂದ ಪ್ರತ್ಯಕ್ಷ ಶಿವರಾಯನೇ ತನ್ನ ಬಳಿಯಲ್ಲಿ ಇರುತ್ತಿರುವಂತೆ ಛತ್ರಸಾಲನಿಗೆ ಭಾಸವಾಗತೊಡಗಿತು.

## ಸಾಮ್ರಾಜ್ಯದ ಮದ

ದೇವಗಡದ ಘನಘೋರವಾದ ಯುದ್ಧದಲ್ಲಿ ಔರಂಗಜೇಬ ಬಾದಶಹನಿಗೆ ಜಯವಾದದ್ದರಿಂದ, ದಕ್ಷಿಣವನ್ನು ಗೆಲ್ಲಬೇಕೆಂಬ ಆ ಬಾದಶಹನ ಮಹತ್ವಾಕಾಂಕ್ಷೆಯ ಪೂರ್ತಿಯ ಪ್ರಾರಂಭವಂತು ಉತ್ತಮರೀತಿಯಿಂದ ಆಯಿತೆಂದು, ದಿಲ್ಲಿಯ ಸಾಮ್ರಾಜ್ಯಭಕ್ತರು ಅಭಿಪ್ರಾಯಪಟ್ಟರು. ದಿಲ್ಲಿಯ ಪ್ರಜೆಗಳು ಅಂದಿನದಿವಸ ದೊಡ್ಡ ಹಬ್ಬದಂತೆ ಮಹೋತ್ಸವವನ್ನು ಮಾಡಿದರು. ದಿಲ್ಲಿಯ ಸಾರ್ವಜನಿಕ ಮಸೀದಿಗಳಲ್ಲಿ ಅಲ್ಲಾನ ಪ್ರಾರ್ಥನೆ ಮಾಡಬೇಕೆಂತಲೂ, ನಗರಪ್ರವೇಶಮಾಡುವ ರಾಜಾ ಜಯಸಿಂಗನ, ಹಾಗು ಬಹದೂರಖಾನ ಕೋಕಾನ ಅಧಿಪತ್ಯದೊಳಗಿನ ವಿಜಯಿಸಾಮ್ರಾಜ್ಯ ಸೇನೆಯ ಸ್ವಾಗತವನ್ನು ಅತ್ಯಂತ ಆದರದಿಂದ ಮಾಡಬೇಕೆಂತಲೂ ಬಾದಶಹನ ಅಪ್ಪಣೆಯಾಗಿತ್ತು. ಹೊತ್ತು ಮುಣುಗುವ ವೇಳೆಯಲ್ಲಿ ನಮಾಜು ತೀರಿದಬಳಿಕ ತೋಫುಗಳು ಗರ್ಜಿಸುತ್ತಿರಲು, ದೀಪಗಳ ಉಜ್ವಲ ಪ್ರಕಾಶದಲ್ಲಿ, ಹಾಗು ನಾಗರಿಕರ ಆನಂದೋದ್ಗಾರಗಳಲ್ಲಿ ಜಯಶಾಲಿಗಳಾದ ವೀರರ ಸತ್ಕಾರವಾಗಬೇಕಾಗಿತ್ತು.

ಉತ್ಸವಪ್ರಿಯರಾದ ನಾಗರಿಕರು ಬಹು ಬೆಲೆಯುಳ್ಳ ವಸ್ತ್ರಾಭರಣಗಳಿಂದ ಅಲಂಕೃತರಾಗಿ, ಚಾಂದಣಿಚೌಕಿನ ವಿಸ್ತಾರವಾದ ಪಟಾಂಗಣವನ್ನು ವ್ಯಾಪಿಸತೊಡಗಿದ್ದರು. ಖುದ್ದ ಬಾದಶಹನ ಸವಾರಿಯೂ ಮುಖ್ಯಮುಖ್ಯ ವೀರರನ್ನು ಸತ್ಕರಿಸುವದಕ್ಕಾಗಿ ಅಲ್ಲಿಗೆ ಬರುವದಾಗಿತ್ತು ಅಲಮಗೀರ ಬಾದಶಹನ ಜಯಜಯಕಾರ ಧ್ವನಿಯಿಂದ ಹತ್ತು ದಿಕ್ಕುಗಳು ತುಂಬಿ ಹೋಗುತ್ತಲಿದ್ದವು.

ಹೊತ್ತುಮುಣುಗಿ ತಾಸು ರಾತ್ರಿಯಾಗಿರಬಹುದು. ಆನೆಯ ಅಂಬಾರಿಯಲ್ಲಿ ಕುಳಿತು ಚಾಂದಣೀಚೌಕಿನ ಮಾರ್ಗವನ್ನು ಹಿಡಿದು ಸಾಗಿದ್ದ ಔರಂಗಜೇಬ ಬಾದಶಹನ ಮುಖವು, ವಿಜಯದ ಮೂಲಕ ಸುಪ್ರಸನ್ನವಾಗಿರಬಹುದೆಂದು ನಾಗರಿಕರು ತಿಳಿದುಕೊಂಡಿದ್ದರು; ಆದರೆ ಒಂದಾನೊಂದು ಭಯಂಕರ ಪಾಪಕರ್ಮವನ್ನು ಮಾಡತೊಡಗಿರುವ ಕಲಾಹೀನನ ಮುಖದಲ್ಲಿ ತೋರುವಂತೆ, ಬಾದಶಹನ ತೇಜೋಹೀನವಾದ ಮುಖದಲ್ಲಿ ಲಜ್ಜೆಯ ಹಾಗು ಆತ್ಮನಿಂದೆಯ ಚಿನ್ಹಗಳು ತೋರುತ್ತಲಿದ್ದವು. ಅದನ್ನು ನೋಡಿ ಜನರ ಮುಖದಿಂದ ಆಶ್ಚರ್ಯದ ಉದ್ಗಾರಗಳು ಹೊರಡಹತ್ತಿದವು. ಆದರೂ ತೋಫುಗಳು ಗರ್ಜಿಸುವಂತೆ ಗರ್ಜಿಸತೊಡಗಿದವು. ರಣವಾದ್ಯಗಳು ಕರ್ಕಶಧ್ವನಿ ಮಾಡತೊಡಗಿದವು. ಸ್ವಾಗತಕ್ಕಾಗಿಯೇ ಬುದ್ಧಿಪೂರ್ವಕ ಶೃಂಗರಿಸಿದ ಸ್ಥಾನದಲ್ಲಿ ಬಾದಶಹನು ಉಚ್ಚಾಸನದ ಮೇಲೆ ಕುಳಿತುಕೊಂಡನು. ಯಾವತ್ತು ಸರದಾರರೂ, ಮಾನಕರಿಗಳೂ ತಮ್ಮ ತಮ್ಮ ಆಸನಗಳಿಂದ ಎದ್ದು ಬಾದಶಹನ ಜಯಜಯಕಾರವನ್ನು ಮಾಡಿದರು. ಅತ್ತ ವಿಜಯೀವೀರರ ಸಮೂಹವು ನಗರವನ್ನು ಪ್ರವೇಶಿಸತೊಡಗಿತು.

ಬಹದೂರಖಾನ ಕೋಕಾನು ತನ್ನ ಆರಿಸಿದ ವೀರರೊಡನೆ ಒಳ್ಳೆಡೌಲಿನಿಂದ ದಿಲ್ಲಿಯ ರಾಜಬೀದಿಯನ್ನು ತುಳಿಯುತ್ತಲಿದ್ದನು; ಆದರೆ ಅವನಕಡೆಗೆ ನಾಗರಿಕರ ಮನಸ್ಸು ಹರಿಯಲಿಲ್ಲ. ರಾಜಾ ಜಯಸಿಂಗನು ಒಮ್ಮೆ ವಿಜಯಶ್ರೀಯ ಮುಗುಳುನಗೆ ನಗುತ್ತ ಒಮ್ಮೆ ತನ್ನೊಡನೆ ಸಾಗಿಬರುತ್ತಿರುವ ತರುಣ ವೀರನೊಡನೆ ಮಾತಾಡುತ್ತ ಚಾಂದಣೀಚೌಕವನ್ನು ಸಮೀಪಿಸುತ್ತ ಲಿದ್ದನು; ಆದರೆ ಆತನಕಡೆಗೂ ಜನರಮನಸ್ಸು ಹರಿಯಲಿಲ್ಲ; ಎಲ್ಲ ನಾಗರಿಕರ ಮನಸ್ಸುಗಳು ದೇವಗಡದ ವಿಜಯಕ್ಕೆ ಕಾರಣನಾದ ತರುಣ ಬುಂದೇಲಿವೀರನು ಯಾರೆಂಬದನ್ನು ತಿಳಿದು ಕೊಳ್ಳುವದಕ್ಕಾಗಿ ಆತುರವಾಗಿದ್ದವು. ಆ ವೀರನು ರಾಜಾ ಜಯಸಿಂಗನ ಬಳಿಯಲ್ಲಿ ಅಶ್ವಾರೂಢನಾಗಿ ಬರುತ್ತಿರುವ ಪ್ರಸನ್ನವದನದ ತರುಣನೇ ಎಂದು ಜನರು ಗುಜು ಗುಟ್ಟಲು, ಎಲ್ಲರ ದೃಷ್ಟಿಗಳು ಆ ತರುಣನಲ್ಲಿ ನಟ್ಟುಹೋದವು. ಈತನೇ ಆ ಛತ್ರಸಾಲನು, ಎಂದು ಎಲ್ಲರೂ ಬೆರಳುಮಾಡಿ ಆ ತರುಣನನ್ನೇ ತೋರಿಸಹತ್ತಿದರು. ಎಲ್ಲರು ಆ ವೀರರನ್ನು ಶ್ಲಾಘಿಸತೊಡಗಿದರು. ಒಬ್ಬರು ಆ ವೀರನ ಮೋಹಕರೂಪವನ್ನು ವರ್ಣಿಸಿದರೆ, ಇನ್ನೊಬ್ಬರು ಆ ವೀರನಮುಖದಲ್ಲಿ ಒಪ್ಪುವಕ್ಷಾತ್ರತೇಜವನ್ನು ವರ್ಣಿಸುತ್ತಲಿದ್ದರು. ಹೀಗೆ ದಿಲ್ಲಿಯ ಎಲ್ಲ ನಾಗರಿಕರ ನೋಟಕ್ಕೂ, ವರ್ಣನಕ್ಕೂ ಛತ್ರಸಾಲನೇ, ಕಾರಣವಾಗಿರಲು, ನಾಗರಿಕರ ಮತದಂತೆ ಆತನೇ ವಿಜಯೀ ಬಾದಶಾಹೀ ಸೇನೆಯ ಅಗ್ರಗಣ್ಯನಾಗಿ ಸಮಾರಂಭದ ಸ್ಥಳವನ್ನು ಹೊಕ್ಕನು. ಆ ಬಾದಶಹನು ಬಹದೂರಖಾನಕೋಕಾನನ್ನು ತನ್ನ ಹತ್ತಿರದ ಆಸನದಲ್ಲಿ

ಕುಳ್ಳಿರಿಸಿಕೊಂಡನು; ರಾಜಾ ಜಯಸಿಂಗನೂ ಬಾದಶಹನ ಬಳಿಯಲ್ಲಿದ್ದ ಆಸನದ ಹತ್ತಿರ ನಿಂತುಕೊಂಡನು; ಆದರೆ ಎಲ್ಲರಲಕ್ಷವು ಒಂದು ಮಗ್ಗಲಲ್ಲಿ ನಿಂತುಕೊಂಡಿರುವ ಛತ್ರಸಾಲನನ್ನು ಬಿಟ್ಟು ಬೇರೆ ಕಡೆಗೆ ಹೋಗಲೊಲ್ಲದು! ಬಾದಶಹನು ಈ ತರುಣ ರಜಪೂತವೀರನನ್ನು ಬಹಳವಾಗಿ ಸತ್ಕರಿಸ ಬಹುದೆಂದು ಎಲ್ಲರೂ ತಿಳಿದಿದ್ದರು. ಈ ವಿಜಯಿಶಾಲಿಯಾದ ವೀರನನ್ನೇ ಬಾದಶಹನು ತನ್ನ ಬಳಿಯಲ್ಲಿರುವ ಆಸನದ ಮೇಲೆ ಕುಳ್ಳಿರಿಸಿಕೊಳ್ಳುವನೆಂದು ಎಲ್ಲರೂ ನಂಬಿದ್ದರು. ಆದರೆ ಎಲ್ಲರ ಚಿತ್ತಗಳನ್ನು ಆಕರ್ಷಿಸಿಕೊಂಡಿರುವ ಆ ವೀರನು ನಿಂತುಕೊಂಡಿರುವ ನಿಟ್ಟಿನ ಕಡೆಗೂ ನೋಡುವದಕ್ಕೂ ಬಾದಶಹನು ಬುದ್ಧಿಪೂರ್ವಕವಾಗಿ ತಪ್ಪಿಸಿಕೊಳ್ಳುತ್ತಿರುವದನ್ನೂ ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ಬಾದಶಹನು ಮರೆತಿರಬಹುದು, ತಾನು ಬುದ್ಧಿಪೂರ್ವಕ ಪತ್ರ ಬರೆದು ಕಳಿಸಿರಲು ಹೀಗೆ ಬುದ್ಧಿಪೂರ್ವಕ ದುರ್ಲಕ್ಷ್ಯಮಾಡಲಿಕ್ಕಿಲ್ಲ ಎಂದು ಯೋಚಿಸಿ ರಾಜಾ ಜಯಸಿಂಗನು ಬಾದಶಹನಿಗೆ ನೆನಪು ಕೊಡವದಕ್ಕಾಗಿ ''ಖಾವಿಂದ'' ಎಂದು ನುಡಿಯುತ್ತಿರಲು, ಕಪಟಿಯಾದ ಔರಂಗಜೇಬ ಬಾದಶಹನು ಗಾಂಭೀರ್ಯದಿಂದ ಜಯಸಿಂಗನನ್ನು ಕುರಿತು–

''ಜಯಸಿಂಗಜೀ, ನೀವು ಏನು ಮಾತಾಡುತ್ತಿರುವಿರೆಂಬದು ನನ್ನ ಲಕ್ಷದಲ್ಲಿ ಬಂದಿರುವದು. ಚಂಪತರಾಯನ ಮಗನಾದ ಛತ್ರಸಾಲನು ದೇವಗಡದ ಯುದ್ಧದಲ್ಲಿ ಅತಿಶಯವಾದ ಪರಾಕ್ರಮವನ್ನು ತೋರಿಸಿದನೆಂತಲೂ, ಬಹಳವೇನು, ದೇವಗಡದ ವಿಜಯಕ್ಕೆ ಅವನ ಶೌರ್ಯವೇ ಕಾರಣವಾಗಿರುವದೆಂತಲೂ ಹೇಳಿ, ನಾನು ಛತ್ರಸಾಲನ ಆತಿಥ್ಯ ಮಾಡಿ, ಆತನ ಸಾಮ್ರಾಜ್ಯಸೇವೆಗಾಗಿ ಯೋಗ್ಯ ಪ್ರತಿಫಲ ಕೊಡಬೇಕೆಂದು ನೀವು ನನಗೆ ಹೇಳುವವರಿರುವಿರಿ; ಆದರೆ ನಾವು ಬಹಳ ಅಸಮಾಧಾನದಿಂದ ನಿಮಗೆ ತಿಳಿಸುವೆವೇನೆಂದರೆ, ಛತ್ರಸಾಲನನ್ನು ಒಮ್ಮೆಲೆ ತೋಫಿನಬಾಯಿಗೆ ಕೊಡಿಸದಿರುವ, ಆನೆಯಕಾಲಿಗೆ ಕಟ್ಟಿಸಿ ಎಳಿಸದಿರುವ, ಪರಿಪರಿಯಿಂದ ಪೀಡಿಸಿ ಕೊಲ್ಲಿಸದಿರುವ ಒಂದು ಮಹದುಪಕಾರವನ್ನು ಆತನ ಮೇಲೆ ಮಾಡುತ್ತಿರುವೆವೆಂದು ನೀವು ತಿಳಿದುಕೊಳ್ಳಿರಿ. ಛತ್ರಸಾಲನು ಮಾಡಿರುವ ದಿಲ್ಲಿಯ ದರ್ಬಾರದ ಅಪಮಾನವನ್ನೂ, ಛತ್ರಸಾಲನು ಮಾಡಿರುವ ಇಸ್ಲಾಮಿ ಸತ್ತೆಯ ತಿರಸ್ಕಾರವನ್ನೂ, ಛತ್ರಸಾಲನು ಮಾಡಿರುವ ಧಾರ್ಮಿಕ ಹೇತುಗಳ ವಿಡಂಬನೆಯನ್ನೂ ಮನಸ್ಸಿನಲ್ಲಿ ತಂದರೆ, ಆ ದ್ರೋಹಿಗೆ ದೇಹಾಂತ ಶಾಸನದ ಹೊರತು ಬೇರೆ ಶಿಕ್ಷೆ ಕೊಡುವದು ಅನ್ಯಾಯವಾಗಬಹುದು; ಆದರೂ ಛತ್ರಸಾಲನು ಒಮ್ಮೆ ದಿಲ್ಲೀಪತಿಯ ಪ್ರಾಣವನ್ನು ಉಳಿಸಿರುವದರಿಂದ, ಇಂದು ಆತನು ದಿಲ್ಲೀಪತಿಯ ಮುಂದೆ ಜೀವದಿಂದ ನಿಂತಿರುವನು. ನಮ್ಮ ದರ್ಬಾರದಿಂದ ಛತ್ರಸಾಲನಿಗೆ ಯಾವ ಫಲವೂ ದೊರೆಯಲಾರದು. ಚಂಪತರಾಯನಿಗೆ ಕೊಟ್ಟಿರುವ ಅಮೀರಿಯನ್ನೂ, ಮನಸಬನ್ನೂ ಆತನ ರಾಜ್ಯದಸಂಗಡ ಜಪ್ತಮಾಡಿರುತ್ತೇವೆ. ಅದನ್ನಾಗಲಿ, ಬೇರೆ ಯಾವ ಅಧಿಕಾರವನ್ನಾಗಲಿ ಛತ್ರಸಾಲನಿಗೆ ಕೊಡಲಿಕ್ಕೆ ನಾವು ಇಚ್ಛಿಸುವದಿಲ್ಲ. ಇಂತಹ ಸಾಮ್ರಾಜ್ಯ ದ್ವೇಷಿಗಳಿಂದ ಸೇವೆಯನ್ನು ಗ್ರಹಿಸಲಿಕ್ಕೆ ಔರಂಗಜೇಬನು ಒಪ್ಪಿಕೊಳ್ಳುವದಿಲ್ಲ. ಜಯಸಿಂಗಜೀ, ವ್ಯರ್ಥವಾಗಿ ಮಾತಾಡಬೇಡಿರಿ, ವ್ಯರ್ಥಪ್ರಯತ್ನಮಾಡಬೇಡಿರಿ, ಬಂಡಾಯಗಾರನ ಮಗನ

ಪಕ್ಷವನ್ನು ವ್ಯರ್ಥವಾಗಿ ಕಟ್ಟಬೇಡಿರಿ. ನಿಮಗೆ ಆ ಕೆಲಸದಲ್ಲಿ ಯಶಸ್ಸು ದೊರೆಯಲಿಕ್ಕಿಲ್ಲ. ಜಯಸಿಂಗಜೀ, ನೀವು– ಬಹದೂರಖಾನಕೋಕಾನೂ ದೇವಗಡದಲ್ಲಿ ತೋರಿಸಿದ ಪರಾಕ್ರಮಕ್ಕಾಗಿಯೂ, ಸಂಪಾದಿಸಿದ ವಿಜಯಕ್ಕಾಗಿಯೂ ನಮಗೆ ಬಹಳ ಸಂತೋಷವಾಗಿರುತ್ತದೆ. ನಿಮ್ಮ ಶೌರ್ಯ– ಚಾತುರ್ಯಗಳನ್ನು ಎಷ್ಟು ಹೊಗಳಿದರೂ ಸ್ವಲ್ಪವೇ ಇರುವದು. ನೀವು ನಿಜವಾದ ಸಾಮ್ರಾಜ್ಯ ಭಕ್ತರಿರುವಿರಿ ! ನೀವು ಅತುಲ ಪರಾಕ್ರಮದಿಂದ ದೇವಗಡವನ್ನು ಸ್ವಾಧೀನಪಡಿಸಿಕೊಂಡು, ನಾವು ದಕ್ಷಿಣದ ಮೇಲೆ ವಿಜಯಯಾತ್ರೆಗೆ ಹೊರಡಬೇಕೆಂದು ನಮ್ಮನ್ನು ಜಾಗ್ರತಗೊಳಿಸಿರುವಿರಿ. ನಿಮ್ಮ ಈ ಸಾಮ್ರಾಜ್ಯ ಸೇವೆಯಿಂದ ನಾವು ಸಂತುಷ್ಟರಾಗಿ, ನಿಮಗೆ ಯೋಗ್ಯ ಪ್ರತಿಫಲ ಕೊಡುವದನ್ನು ಗೊತ್ತು ಪಡಿಸಿರುತ್ತೇವೆ. ಇನ್ನು ಯಾರಯಾರಿಗೆ ಏನೇನು ಕೊಡತಕ್ಕದೆಂಬದರ ಯಾದಿಯನ್ನು ಈಗ ವಜೀರರು ಓದಿ ತೋರಿಸುವರು. ಖುದಾನು ನಿಮ್ಮ ಕಲ್ಯಾಣಮಾಡಲಿ!

ಹೀಗೆಂದು ಔರಂಗಜೇಬನು ತನ್ನ ಮಾತು ಮುಗಿಸಿದನು. ತನ್ನ ಆಸನದ ಮೇಲೆ ಕುಳಿತುಕೊಳ್ಳುತ್ತಿರುವಾಗ ಆತನ ದೃಷ್ಟಿಯು ತಪ್ಪಿ ಛತ್ರಸಾಲನ ಕಡೆಗೆ ಹೋಯಿತು. ಆಗ ಛತ್ರಸಾಲನ ಸಂತಪ್ತ ಮುದ್ರೆಯೂ, ತಿರಸ್ಕಾರದ ದೃಷ್ಟಿಯೂ ಆತನನ್ನು ಎದುರಿಸಿದವು. ಅದರಿಂದ ಬಾದಶಹನು ನಾಚಿ ತಲೆತಗ್ಗಿಸಿದನು; ಅಂಜಿಕೆಯಿಂದ ಗಡಬಡಿಸಿದನು; ಕ್ರೋಧದಿಂದ ಸಂತಪ್ತನಾದನು; ಆದರೂ ತನ್ನ ಮನಸ್ಸಿನ ಈ ಗಲಿಬಿಲಿಯನ್ನು ಸ್ವಲ್ಪ ತೋರಗೊಡದೆ, ನಿಮಿಷಾರ್ಧದಲ್ಲಿ ಗಂಬೀರಮುದ್ರೆಯನ್ನು ತಾಳಿದನು. ಬಾದಶಹನ ಅಪ್ಪಣೆಯಂತೆ ದಿವಾಣ ಬಹದ್ದೂರನು ಇನಾಮುಗಳ ಯಾದಿಯನ್ನು ಓದತೊಡಗಿದನು. ಮೊದಲು ಬಹದೂರಖಾನ ಕೋಕಾನ ಹೆಸರು ಹೇಳಿ ಆತನಿಗೆ ನಬಾಬನ ಮನಸಬು ಕೊಟ್ಟಿರುವದು ಪ್ರಸಿದ್ಧವಾಯಿತು. ಬಳಿಕ ಎಷ್ಟೋ ಯವನ ವೀರರ ಹೆಸರುಗಳನ್ನು ಓದಿ, ಅವರಿಗೆ ಪ್ರತ್ಯಕ್ಷ ಸಣ್ಣ ದೊಡ್ಡ ಉಚಿತಗಳ ಕೊಟ್ಟಿರುವದನ್ನು ಹೇಳಿ, ಆಮೇಲೆ ರಾಜಾ ಜಯಸಿಂಗನಿಗೂ, ನಾಲ್ಕಾರು ಜನ ರಜಪೂತ ವೀರರಿಗೂ ಶುಷ್ಕವಾದ ಪದವಿಗಳನ್ನು ಕೊಟ್ಟಿರುವದು ಪ್ರಸಿದ್ಧವಾಯಿತು. ರಾಜಾ ಜಯಸಿಂಗನಿಗೆ ಈ ಪಕ್ಷಪಾತವು ಸಹನವಾಗಲಿಲ್ಲ. ತಾನು ಆಗ್ರಹದಿಂದ ಛತ್ರಸಾಲನನ್ನು ಕರೆದುಕೊಂಡು ಬಂದದ್ದು, ಬಾದಶಹನು ತನ್ನ ಮಾತನ್ನು ಎಷ್ಟೂ ಲಕ್ಷಿಸದೆ ಹೀಗೆ ನೆರೆದ ದರ್ಬಾರದಲ್ಲಿ ಛತ್ರಸಾಲನ ಅಪಮಾನಮಾಡಿದ್ದು ತನ್ನ ಅಪಮಾನವೆಂದು ಆತನು ತಿಳಿದನು. ಎಡಬಲದ ಸರದಾರರು ಬೇಡ ಬೇಡೆಂದು ಕಣ್ಣು ಸನ್ನೆಮಾಡಿ ತಿಳಿಸುತ್ತಿರಲು, ಜಯಸಿಂಗನು ಆವೇಶದಿಂದ—''ಜಹಾಪಹ್ಞಾ, ಹೀಗೆ ಮಾಡುತ್ತಿರುವದು ಬಹಳ ಅನ್ಯಾಯವು! ತನ್ನ ಜೀವದಹಂಗು ಇಲ್ಲದೆ, ಹಿಂದೆಮಾಡಲಿಲ್ಲ– ಮುಂದೆ ಮಾಡುವದಿಲ್ಲ ಎಂಬಂತೆ ರಣಸಾಹಸಮಾಡಿ ತನ್ನ ಒಬ್ಬನ ಪರಾಕ್ರಮದ ಕಸುವಿನಿಂದಲೇ ದೇವಗಡ ಕೋಟೆಯ ಮೇಲೆ ದಿಲ್ಲೀಪತಿಯ ನಿಶಾನೆಯನ್ನು ಏರಿಸಿದ ವೀರನು ಒಂದು ಕಡೆಗೆ ನಿಂತುಕೊಳ್ಳಬೇಕು, ದೇವಗಡದಲ್ಲಿರುವಾಗ ಮದ್ಯಪಾನದ ಅಮಲಿನಲ್ಲಿ ಹೊರಳಾಡುವದಕ್ಕಿಂತ ಹಾಗು ವಾರಾಂಗನೆಯರ ಸಹವಾಸದಲ್ಲಿ ಕಾಲಕಳೆಯುವದಕ್ಕಿಂತ ಹೆಚ್ಚಿನ

ಕೆಲಸವನ್ನು ಮಾಡದಿರುವವನ ಗೌರವವನ್ನು ನಬಾಬೀ ಮನಸುಬುಕೊಟ್ಟು ಮಾಡಬೇಕು; ಇದು ಸರ್ವಥಾ ಯೋಗ್ಯವಲ್ಲ, ಕೇಳಿರಿ, ಬಹದೂರಖಾನ ಕೋಕಾನನ್ನೇ ಕೇಳಿರಿ! ತನ್ನ ಹೆಸರಿನ ಬಹದೂರಿಗಿಂತ ಹೆಚ್ಚಿನ ಬಹದ್ದೂರಿಯನ್ನು ಆತನು ದೇವಗಡದಲ್ಲಿರುವಾಗ ಏನು ಮಾಡಿದನು? ಬಹದೂರಖಾನನ ಸೈನ್ಯವು ಇಷ್ಟು ದೊಡ್ಡದಿದ್ದು, ದೇವಗಡವು ಸ್ವಾಧೀನವಾಗಬಾರದು, ನಾನು ಅಲ್ಪ ಸೈನ್ಯದೊಡನೆ ಹೋದಕೂಡಲೆ ಅಲ್ಪ ಪ್ರಯತ್ನದಿಂದ ಅದರ ಮೇಲೆ ಬಾದಶಾಹಿಯ ನಿಶಾನೆಯು ಏರಬೇಕು ಇದರಿಂದ ಏನು ಧ್ವನಿತವಾಗುವದು? ಬಹದೂರಖಾನನಿಗೆ ನಬಾಬಿಯನ್ನು ಕೊಡಿರಿ, ಅಥವ ಆತನ ಗೌರವವನ್ನು ಇದಕ್ಕೂ ಹೆಚ್ಚಿಗೆ ಮಾಡಿರಿ. ಅದಕ್ಕಾಗಿ ನನ್ನ ಆಕ್ಷೇಪವಿಲ್ಲ; ಆದರೆ ಛತ್ರಸಾಲನು ಸಾಮ್ರಾಜ್ಯಸೇವೆಯನ್ನು ಇಷ್ಟು ಉತ್ತಮ ರೀತಿಯಿಂದ ಮಾಡಿದ್ದು ಆತನನ್ನು ಹೀಗೆ ಏಕೆ ಅಪಮಾನಗೊಳಿಸುವಿರಿ? ಛತ್ರಸಾಲನಿಗೆ ನಾನು—"ನಿನ್ನ ಹೋದ ರಾಜ್ಯವನ್ನೂ, ಹೋದ ವೈಭವವನ್ನೂ, ಅಷ್ಟೇ ಅಲ್ಲ ಬುಂದೇಲಖಂಡದ ಸ್ವಾತಂತ್ರ್ಯವನ್ನೂ ಕೊಡಿಸುವೆನೆಂದು" ಹೇಳಿ ಒತ್ತಾಯದಿಂದ ಕರತಂದಿದ್ದೇನೆ. ಹೀಗಿರಲು, ಆತನ ಅಪಮಾನವು ಇಷ್ಟರಮಟ್ಟಿಗೆ ಆಗಬೇಕೆ? ಛತ್ರಸಾಲನು ನಿಮ್ಮ ಮತದಂತೆ ಸಾಮ್ರಾಜ್ಯ ದ್ರೋಹಿಯಿರಬಹುದು! ಆದರೆ ಏಕನಿಷ್ಠ ಸಾಮ್ರಾಜ್ಯಭಕ್ತನೆಂದು ನೀವು ನನ್ನನ್ನು ಕರೆಯುತ್ತಿರುವಾಗ, ಈಗ ನನ್ನ ಮರ್ಯಾದೆಯನ್ನು ನೀವು ಏನು ಉಳಿಸಿದಹಾಗಾಯಿತು? ಸಾರ್ವಭೌಮ ಬಾದಶಹಾ! ಈ ವೃದ್ಧ ಜಯಸಿಂಗನು ವಿನಯದಿಂದ ಹೇಳಿಕೊಳ್ಳುವದೇನಂದರೆ, ದೇವಗಡದ ವಿಜಯದ ಸಂಪೂರ್ಣಶ್ರೇಯಸ್ಸು ಛತ್ರಸಾಲನ ಉಡಿಯಲ್ಲಿ ಬೀಳುವವರೆಗೆ ನನಗಾಗಲಿ, ಛತ್ರಸಾಲನ ಪರಾಕ್ರಮದಿಂದ ಡೌಲುಮಾಡುವವರಿಗಾಗಲಿ ಬಾದಶಹರ ದೇವಣಿಗೆಯನ್ನು ಸ್ವೀಕರಿಸಲಿಕ್ಕೆ ಬರಲಾರದು!

ಜಯಸಿಂಗನ ಈ ಭಾಷಣವನ್ನು ಕೇಳಿ ಬಾದಶಹನು ಕ್ರೋಧದಿಂದ ಗರ್ಜಿಸಿ—"ಜಯಸಿಂಗಜೀ, ನಿಮಗೆ ಮುದಿಹುಚ್ಚು ಹಿಡಿದಹಾಗೆ ತೋರುತ್ತದೆ! ಇಲ್ಲದಿದ್ದರೆ ನಮ್ಮ ಸಂಬಂಧದ ಅಪಮಾನದ ಶಬ್ದಗಳು ನಿಮ್ಮ ಬಾಯಿಂದ ಹೊರಡುತ್ತಿದ್ದಿಲ್ಲ, ರಾಜಾ ಜಯಸಿಂಗರು ಅಚ್ಚ ಸಾಮ್ರಾಜ್ಯಭಕ್ತರಿರುವರೆಂದು ನಾವು ಇನ್ನೂ ತಿಳಿದಿರುವೆವು. ಸಾಮ್ರಾಜ್ಯದ ವಿರುದ್ಧವಾಗಿ ಒಂದು ಶಬ್ದವನ್ನು ಉಚ್ಚರಿಸಿದರೂ, ಬೇರೆ ಹಿಂದುಗಳಂತೆ ನೀವೂ ಕಾಫಿರರಿರುವಿರೆಂದು ತಿಳಿಯಲಾಗುವದು. ನಡೆಯಿರಿ, ಬಹದೂರಖಾನ, ಬೇರೆ ಇಸ್ಲಾಮಿ ವೀರರೇ, ಮೋತಿಮಸೀದಿಗೆ ನಡೆಯಿರಿ, ಇನ್ನೊಮ್ಮೆ ಅಲ್ಲಾನನ್ನು ಪ್ರಾರ್ಥಿಸೋಣ", ಎಂದು ನುಡಿದು, ಬಾದಶಹನು ಆಸನದಿಂದ ಏಳತೊಡಗಿದನು. ಆದರೂ ರಾಜಾ ಜಯಸಿಂಗನು ಛತ್ರಸಾಲನ ಸಂತಪ್ತ ಮುದ್ರೆಯ ಕಡೆಗೆ ನೋಡುತ್ತ ಆತನನ್ನು ಮೇಲುಗಟ್ಟುವದಕ್ಕಾಗಿ ಮತ್ತೆ ಮಾತಾಡಬೇಕೆನ್ನುತ್ತಿದ್ದನು. ಜಯಸಿಂಗನು ವ್ಯರ್ಥವಾಗಿ ಬಾದಶಹನ ಕ್ಷೋಭವನ್ನು ಸಂಪಾದಿಸಿಕೊಳ್ಳುವನೆಂದು ಎಲ್ಲರಿಗೂ ತೋರಿತು. ಜಯಸಿಂಗನನ್ನು ಹೇಗೆ ಸುಮ್ಮನಿಸಬೇಕೆಂದು ಬಾದಶಹನು ಯೋಚಿಸತೊಡಗಿನು. ರಾಜಾ ಜಯಸಿಂಗನ ತುಟಿಗಳು ಛತ್ರಸಾಲನನ್ನು ಮೇಲುಗಟ್ಟಿ ಮಾತಾಡುವದಕ್ಕಾಗಿಯೂ, ಬಾದಶಹನ ತುಟಿಗಳು ಜಯಸಿಂಗನಿಗೆ ಶಿಕ್ಷೆಯನ್ನು

ವಿಧಿಸುವದಕ್ಕಾಗಿಯೂ ಅಲ್ಲಾಡುತ್ತಿರಲು, ಅಷ್ಟರಲ್ಲಿ ರಾಜಾ ಜಯಸಿಂಗನ ಮೇಲೆ ಬಂದ ಪ್ರಸಂಗವನ್ನು ಅರಿತು ಛತ್ರಸಾಲನು ಮುಂದಕ್ಕೆ ಬಂದು ಆತನನ್ನು ಕೆಳಗೆ ಕುಳ್ಳಿರಿಸಿ ವಿನಯದಿಂದ—''ಕಾಕಾಜೀ, ವಿಷದ ಪರೀಕ್ಷೆಯನ್ನು ಹೆಚ್ಚು ಮಾಡುವದರಲ್ಲಿ ಅರ್ಥವಿಲ್ಲ; ಇದ್ದಲಿಯನ್ನು ಹೆಚ್ಚಿಗೆ ತೊಳೆಯುವದರಲ್ಲಿ ಅರ್ಥವಿಲ್ಲ! ನನಗೆ ಇನ್ನು ಸ್ವದೇಶಕ್ಕೆ ಹೋಗುವದಕ್ಕಾಗಿ ಅಪ್ಪಣೆಕೊಡಿರಿ. ನನ್ನಮನಸ್ಸು ನನ್ನ ಜನರ ಕಡೆಗೆ ಎಳೆಯುತ್ತಿರುವದು! ನಿಮ್ಮನ್ನು ಸಂತುಷ್ಟರಾಗಿ ಮಾಡುವದಕ್ಕಾಗಿಯೂ, ನಿಮ್ಮ ಅಪ್ಪಣೆಯನ್ನು ಪಾಲಿಸುವದಕ್ಕಾಗಿಯೂ ನನ್ನ ಮನಸ್ಸಿಲ್ಲದಿದ್ದರೂ ಇಲ್ಲಿಗೆ ಬಂದೆನು. ಇನ್ನು ಹೋಗಿಬರುತ್ತೇನೆ.'' ಎಂದು ಹೇಳಿ ರಾಜಾ ಜಯಸಿಂಗನನ್ನು ವಂದಿಸಿ ಛತ್ರಸಾಲನು ಹೊರಡಲು ಸಿದ್ಧನಾದನು. ಆಗ ಖುದ್ದ ಬಾದಶಹನ, ಹಾಗು ಬೇರೆಯವರ ಲಕ್ಷವು ತನ್ನಕಡೆಗೆ ಇರುವದನ್ನು ನೋಡಿ ಛತ್ರಸಾಲನು ಔರಂಗಜೇಬಬಾದಶಹನ ಕಡೆಗೆ ತಿರುಗಿ ಶಾಂತರೀತಿಯಿಂದ ನುಡಿದನೇನಂದರೆ –

ಬಾದಶಹಾ! ನಿನ್ನಿಂದ ಯಾವದೊಂದು ಹಕ್ಕನ್ನು ಸಂಪಾದಿಸುವದಕ್ಕಾಗಿಯಾಗಲಿ, ನಿನ್ನಿಂದ ಯಾವದಾದರೊಂದು ದೇಣಿಗೆಯನ್ನು ದೊರಕಿಸುವದಕ್ಕಾಗಿಯಾಗಲಿ, ನನ್ನ ತಂದೆಯ ಅಮೀರಿಯನ್ನು, ಅಥವಾ ರಾಜ್ಯವನ್ನು ನಿನ್ನಲ್ಲಿ ಭಿಕ್ಷೆ ಬೇಡುವದಕ್ಕಾಗಿಯಾಗಲಿ ಛತ್ರಸಾಲನು ನಿನ್ನ ದರ್ಬಾರಕ್ಕೆ ಬಂದಿರುವದಿಲ್ಲ. ಜಯಸಿಂಗರಾಜರು ನನ್ನ ತಂದೆಯ ಮಿತ್ರರಾಗಿದ್ದು, ನನ್ನ ಮೇಲೆ ಅವರ ವಿಶೇಷವಾದ ಪ್ರೇಮುವಿರುವದು. ಅಂಥವರ ಇಚ್ಛೆಯನ್ನು ಮುರಿಯಲಾರದೆ ನಾನು ಇಲ್ಲಿಗೆ ಬಂದಿರುವೆನು. ನನ್ನಂಥ ಸಾಮ್ರಾಜ್ಯದ್ವೇಷಿಯಿಂದ ಸೇವೆಯನ್ನು ಸ್ವೀಕರಿಸಲಿಕ್ಕೆ ನೀನು ಇಚ್ಛಿಸದಿರುವದು ನ್ಯಾಯವಾಗಿರುವಂತೆ, ನಿನ್ನಂತಹ ಪರಸ್ವಾತಂತ್ರ್ಯಹಾರಕ ದ್ರೋಹಿಯ ಸೇವೆಯನ್ನು ಮಾಡಲಿಚ್ಛಿಸದಿರುವದು ನನ್ನಂಥ ಸ್ವಾತಂತ್ರ್ಯಪ್ರಿಯನಿಗೂ ನ್ಯಾಯವಾಗಿರುವದು. ನಾನು ದೇವಗಡದಲ್ಲಿ ಪರಾಕ್ರಮವನ್ನು ಪ್ರಕಟಮಾಡಿದ್ದು ನಿನ್ನ ಸಾಮ್ರಾಜ್ಯದ ಸೇವೆಯೆಂದಲ್ಲ; ನಿನ್ನ ಪ್ರಸನ್ನತೆಯಿಂದ ಏನಾದರೂ ಗಳಿಸಬೇಕೆಂದೂ ಅಲ್ಲ! ನಿನ್ನಲ್ಲಿ, ಹಾಗು ನಿನ್ನ ಸೈನ್ಯದಲ್ಲಿ ನಿಜವಾದ ತಿರುಳು ಎಷ್ಟಿರುವದೆಂಬದನ್ನು ಕಣ್ಣು ಮುಟ್ಟ ನೋಡುವದಕ್ಕಾಗಿ ನಾನು ದೇವಗಡದಲ್ಲಿ ಪರಾಕ್ರಮವನ್ನು ತೋರಿಸಿದ್ದು! ನಿನ್ನ ಪ್ರಚಂಡ ಸೈನ್ಯದಲ್ಲಿ ಆಡಂಬರಕ್ಕಿಂತ ನಿಜವಾದ ತಿರುಳು ಬಹಳ ಸ್ವಲ್ಪ ಇರುವದೆಂಬಮಾತು ದೇವಗಡದ ಯುದ್ಧದಲ್ಲಿ ನನಗೆ ಅನುಭವದಿಂದ ಗೊತ್ತಾಗಿದೆ. ಕುಟಿಲ ಧರ್ಮಮೂಢನಾಗಿರುವ ನಿನ್ನಲ್ಲಿ ಮಾತ್ಸರ್ಯ, ದುರಭಿಮಾನ, ಸಂತಾಪ, ಕ್ರೌರ್ಯ ಮುಂತಾದ ದುರ್ಗುಣಗಳ ಭಂಡಾರವಲ್ಲದೆ, ಬೇರೆ ಸದ್ಗುಣಗಳ ಗಂಧವಾಗಲಿ, ನಿಜವಾದ ಮುತ್ಸದ್ದಿತನವಾಗಲಿ ಇರುವದಿಲ್ಲವೆಂಬ ಮಾತು ಈಗ ಎಲ್ಲ ದರ್ಬಾರದವರ ಸಾಕ್ಷಿಯಿಂದ ಗೊತ್ತಾಗಿಹೋಯಿತು. ಬಾದಶಹಾ! ನಮ್ಮಂಥ ಸ್ವಾತಂತ್ರ್ಯಪ್ರಿಯ ಶೂರ ಬುಂದೇಲಿಗಳನ್ನು ಸಂಭಾವಿಸುವಷ್ಟು ಮನೋಬಲವೂ, ಔದಾರ್ಯವೂ ನಿನ್ನಲ್ಲಿ ಇಲ್ಲವೇ ಇಲ್ಲ! ಆದರೆ ನೆನಪಿನಲ್ಲಿಡು, ಛತ್ರಸಾಲನು ಕೆಚ್ಚೆದೆಯ ಸ್ವಾಂತ್ರ್ಯಪ್ರಿಯ ವೀರನಾದ ಚಂಪತರಾಯನ ಮಗನಾಗಿರುವನೆಂಬದನ್ನು ಚೆನ್ನಾಗಿ ನೆನಪಿನಲ್ಲಿಡು! ಕಟುತರ ಕರ್ತವ್ಯವೆಂದು ನಾನು ದೇವಗಡದಲ್ಲಿ ಖಡ್ಗವನ್ನು ಝಳಪಿಸಿದ್ದು ನಿನ್ನ ನೆನಪಿನಲ್ಲಿ ಇದ್ದೇ

ಇರುವದು. ಇನ್ನು ಮೇಲೆ ಪವಿತ್ರಕರ್ತವ್ಯವೆಂದು ಬುಂದೇಲಿಗಳ ತೀಕ್ಷ್ಣ ಖಡ್ಗಗಳು ವಿದ್ಯುಲ್ಲತೆಯಂತೆ ಝಳಪಿಸುತ್ತಿರುವದನ್ನು ಕಣ್ಣುಮುಟ್ಟ ನೀನು ನೋಡುವೆಯಂತೆ! ಬಾದಶಹಾ! ಬುಂದೇಲ ಖಂಡದೊಳಗಿನ ಪ್ರತಿ ಒಬ್ಬ ಬುಂದೇಲನು ಛತ್ರಸಾಲನಿರುವನೆಂಬದನ್ನು ಲಕ್ಷದಲ್ಲಿಡು! ಕಾಕಾಜಿ, ಬರುವೆನಿನ್ನು! ವಿಂಧ್ಯವಾಸಿನಿಯ ಬರುವ ಉತ್ಸವಕ್ಕೆ ದಯಮಾಡಿಸುವ ಕೃಪೆಮಾಡಿದರೆ, ನನಗೆ ಬಹಳ ಆನಂದವಾಗುವದು! ಛತ್ರಸಾಲನ ಚಿಂತೆಯು ಶ್ರೀವಿಂಧ್ಯ ವಾಸಿನಿಗೆ ಇರುವದು. ನೀವು ನನ್ನಸಲುವಾಗಿ ಸ್ವಲ್ಪವೂ ಚಿಂತೆಮಾಡಬೇಡಿರಿ!

ಹೀಗೆ ನುಡಿದು ಛತ್ರಸಾಲನು ವಿದ್ಯುದ್ವೇಗದಿಂದ ಅಲ್ಲಿಂದ ಹೊರಟು ಹೋದನು. ಆತನ ಪರಾಕ್ರಮದ ಸುದ್ದಿಯನ್ನು ಕೇಳಿ ಆಶ್ಚರ್ಯಮಗ್ನರಾಗಿದ್ದ ದಿಲ್ಲಿಯ ನಾಗರಿಕರು, ಆತನ ಆವೇಶಪೂರ್ಣ ಭಾಷಣವನ್ನೂ ಕೇಳಿ, ಕ್ಷಣದಲ್ಲಿ ಅದೃಶ್ಯನಾದ ಬಗೆಯನ್ನರಿತು ಬೆರಗಾಗಿ ನಿಂತುಬಿಟ್ಟರು. ಬಾದಶಹನು ಸಿಟ್ಟಿನಿಂದ ಹುಚ್ಚಾಗಿ ಹೋದುದರಿಂದ, ರತ್ನಖಚಿತವಾದ ಮಯೂರಾಸನದ ವಿವಿಧ ರತ್ನಗಳ ಬೆಳಕಿನಲ್ಲಿ ದಗದಗನೆ ಉರಿಯುತ್ತಾ ಕುಳಿತುಕೊಂಡಿದ್ದನು. ಆತನು ಆಗ ಛತ್ರಸಾಲನಿಗೆ ಯಾವ ಕ್ರೂರ ಶಿಕ್ಷೆಯನ್ನು ವಿಧಿಸಬೇಕೆಂದು ನಿಶ್ಚಯಿಸುವಷ್ಟು ಸ್ಥಿರಮನಸ್ಸಿನವನು ಆಗಿದ್ದಿಲ್ಲ, ಆ ದುರಭಿಮಾನಿಯಾದ ಬಾದಶಹನ ಉನ್ಮತ್ತವಾದ ಮನಸ್ಸಿಗೆ, ರಾಜಾ ಜಯಸಿಂಗನೊಂದು, ಕುಮಾರ ಛತ್ರಸಾಲನೊಂದು ಹೀಗೆ ಎರಡು ಬರೆಗಳನ್ನು ಕೊಟ್ಟ ಹಾಗಾಯಿತು! ಸಂತಾಪದ ಭರದಲ್ಲಿ ಬಾದಶಹನು ಒಂದೂ ಮಾತಾಡಲೊಲ್ಲನು, ಸಿಂಹಾಸನ ವನ್ನು ಬಿಟ್ಟು ಏಳಲೂ ಒಲ್ಲನು! ಹೀಗೆ ಕೆಲಹೊತ್ತು ಕ್ರಮಿಸಿದ ಮೇಲೆ ಧರ್ಮಾಂಧ ಬಾದಶಹನು ತನ್ನೊಳಗೆ ಮಾತಾಡಿಕೊಳ್ಳುವಂತೆ—''ಹೇಗಿದ್ದರೂ ಕಾಫಿರರ ರೀತಿಯು ಹೀಗೆಯೆ! ಸರ್ವಶಕ್ತಿಯನ್ನು ಒಟ್ಟುಗೂಡಿಸಿ ಇವರ ರಕ್ತಹಿಂಡುವದೇ ಇದಕ್ಕೆ ಉಪಾಯವು'' ಎಂದು ನುಡಿದು, ತಟ್ಟನೆ ಸಿಂಹಾಸನದಿಂದೆದ್ದು ಮೋತೀಮಸೀದೆಯ ಕಡೆಗೆ ಸಾಗಿದನು.

## ಸಂಶಯ ನಿವೃತ್ತಿ

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ, ದೇವಗಡದ ಜಯದಿಂದ ಬೇರೆ ಬೇರೆ ಸರದಾರರು ಬೇರ ಬೇರೆ ಉಚಿತಗಳನ್ನು ಹೊಂದಿದರಷ್ಟೆ? ಅದರಂತೆ ಬಾದಶಹನ ಜನಾನಖಾನೆಯೊಳಗಿನ ಬಾದಶಹನ ರಾಣಿಯರೂ, ಬಂಗಾರದವರೂ ಅಕಸ್ಮಾತ್ ಇದು ವಿಜಯೋತ್ಸವದಿಂದ ಬಾದಶಹನು ತಮ್ಮಲ್ಲಿಗೆ ಬಂದರೆ, ತಾವು ಏನು ಬೇಡಿಕೊಳ್ಳಬೇಕೆಂದು ಎಣಿಕೆ ಹಾಕುತ್ತಲಿದ್ದರು. ಬಾದಶಹನ ಮನಸ್ಸನ್ನು ರಮಿಸುವದಕ್ಕಾಗಿ ಎಷ್ಟು ಶೃಂಗಾರವಾದರೂ ಅವರ ಮನಸ್ಸಿಗೆ ತೃಪ್ತಿಯೇ ಆಗಲೊಲ್ಲದು. ಆದರೆ ತನ್ನಲ್ಲಿಗೆ ಬಾದಶಹನು ಬರುವ ಸಂಭವವಿರುವವೆಂಬ ಮಾತು ಪಟ್ಟದ ರಾಣಿಯಾದ ಅಯೇಷೆಗೆ ಗೊತ್ತಿದ್ದರೂ, ಶೃಂಗಾರ-ವಿಲಾಸಗಳ ವಿಚಾರವು ಆಕೆಯನ್ನು ಸೋಂಕದೆ, ಆಕೆಯು ಸ್ವಸ್ಥವಾಗಿ ಕುಳಿತುಬಿಟ್ಟಿದ್ದಳು. ಶುದ್ಧಪ್ರೇಮದ ಪ್ರವಾಹವನ್ನು ಪತಿಯ

ಮುಂದೆ ಹರಿಸಲು ಸಮರ್ಥರಾದ ಪತಿವ್ರತೆಯರು, ಪತಿಯನ್ನು ಶೃಂಗಾರಾದಿಗಳಿಂದ ಮೋಹಿಸುವ ಗೊಡವಿಗೆ ಯಾಕೆ ಹೋಗುವರು?

ಈ ದಿವಸ ಯಾಕೋ ಆಯೇಷಾ ರಾಣಿಯ ಮನಸ್ಸಿನ ವಿಚಾರವೇ ಬೇರೆಯಾಗಿತ್ತು, ಆಕೆಗೆ ಹದಿನಾರು ವರ್ಷಗಳ ಹಿಂದಿನಮಾತು ನೆನಪಾಗಿ, ತಾನು ಆಗ ಬಾದಶಹನಿಗೆ ಪ್ರೇಮವನ್ನು ಒಪ್ಪಿಸುವಾಗ ಹೇಗೆ ಮೋಸಹೋದೆನೆಂಬುದನ್ನು ನೆನಿಸಿ ಆಕೆಯು ಪಶ್ಚಾತ್ತಾಪ ಪಡತೊಡಗಿದಳು. ಆಗ ತನ್ನ ಅಣ್ಣನಾದ ಸಭಾಕರಣನು ಚಂಪತರಾಯನಿಂದ ಕೂಡಿ ಬುಂದೇಲದ ಸ್ವಾತಂತ್ರ್ಯದ ಸಲುವಾಗಿ ಯವನರೊಡನೆ ಕಾದುತ್ತಿರುವದು ಆಕೆಗೆ ನೆನಪಾಯಿತು. ಈಗ ತನ್ನ ಆ ಅಣ್ಣನು ದೇಶದ ಸ್ವಾತಂತ್ರ್ಯದ ಯತ್ನದಲ್ಲಿ ಎಷ್ಟು ತೊಡಗಿಹೋಗಿರಬಹುದಲ್ಲ, ಆತನು ಸ್ವದೇಶ-ಪ್ರೀತಿಯ ತೇಜಸ್ಸಿನಿಂದ ಎಷ್ಟು ಪ್ರಕಾಶಿಸುತ್ತಿರಬಹುದಲ್ಲ, ಎಂಬ ವಿಚಾರವು ಆಕೆಯ ಮನಸ್ಸಿನಲ್ಲಿ ಉತ್ಪನ್ನವಾಗಿ, ತಾನು ಮಾತ್ರ ಸಾಗರದ ಅರಸುಮನೆತನಕ್ಕೆ ಕಲಂಕ ಉತ್ಪನ್ನವಾಗುವಂತೆ ಯವನರ ಜನಾನಖಾನೆಯನ್ನು ಸೇರಿದೆನು, ಎಂಬ ಪಶ್ಚಾತ್ತಾಪದಿಂದ ಆಕೆಯು ತಳಮಳಿಸಹತ್ತಿದಳು. ಅಷ್ಟರಲ್ಲಿ ಯಾರದೋ ಕಾಲಸಪ್ಪಳವಾಗಲು, ಬಾದಶಹನೇ ಬಂದನೆಂದು ತಿಳಿದು ಆಕೆಯು ಅತ್ತ ನೋಡುತ್ತಾಳೆ, ಎದುರಿಗೆ ತೇಜೋಹೀನನಾಗಿದ್ದ ಸಭಾಕರಣನ ಕರಿಯಮೋರೆಯ ಮೂರ್ತಿಯು!

ಅಣ್ಣನ ಈ ವಿಕೃತರೂಪವನ್ನು ನೋಡಿ ಆಯೇಷೆಯು ಆಶ್ಚರ್ಯಪಟ್ಟದ್ದಲ್ಲದೆ, ಅಂತಹ ರಾತ್ರಿಯ ಕಾಲದಲ್ಲಿ ಅಕಸ್ಮಾತ್ ಆ ರೂಪವು ಎದುರಿಗೆ ಬಂದದ್ದರಿಂದ ಸ್ವಲ್ಪ ಹೆದರಿಯೂ ಹೆದರಿದಳು! ಆಕೆಯು ಎವೆಗೆ ಎವೆಹಾಕದೆ ಸಭಾಕರಣನನ್ನು ನೋಡತೊಡಗಿದಳು. ಇತ್ತ ಸಭಾಕರಣನೂ ಹಾಗೆಯೇ ಆಯೇಷೆಯನ್ನು ನೋಡತೊಡಗಿದ್ದನು. ಹೀಗೆ ಇಬ್ಬರೂ ಅಣ್ಣ-ತಂಗಿಯರು ಒಬ್ಬರನ್ನೊಬ್ಬರು ಸ್ತಬ್ಧರಾಗಿ ನೋಡುತ್ತಿರಲು, ಬಾದಶಹನು ಬರುವ ಹೊತ್ತಿನಲ್ಲಿ ತನ್ನ ಈ ಶೂರ ಬಂಧುವು ಇಲ್ಲಿಗೆ ಹೇಗೆ ಬಂದಿರಬಹುದೆಂಬ ಆಶ್ಚರ್ಯದಿಂದ ಆಕೆಯು ಅಣ್ಣನನ್ನು ಮಾತಾಡಿಸಬೇಕೆನ್ನುತ್ತಿರಲು, ಸಭಾಕರಣನು ತಂಗಿಯನ್ನು ಕುರಿತು ಗಾಂಭೀರ್ಯದಿಂದ-

ಸಭಾಕರಣ—ಲಲಿತೇ, ಅವನೇ ನಾನು. ಹೀಗೆ ಹುಚ್ಚಿಯಹಾಗೆ ಏನು ನೋಡುತ್ತೀ? ಸಾಗರದ ಅರಮನೆಯೊಳಗಿನ ಲಲಿತೆಯ ಸುಕುಮಾರ ಸುಂದರ ರೂಪ-ಲಾವಣ್ಯಗಳನ್ನೂ, ಆಕೆಯ ಸದ್ಗುಣ ಸಮುಚ್ಚಯವನ್ನೂ ನೋಡಿ ಆನಂದಪಡುವವನೂ, ಲಲಿತೆಯ ಭಗಿನೀ ಪ್ರೇಮದಿಂದ ಸ್ವರ್ಗಸೌಖ್ಯವು ಪ್ರಾಪ್ತವಾದಂತೆ ಸಂತೋಷಪಡುವವನೂ, ಲಲಿತೆಯು ಬಟವಾ ನದಿಯಲ್ಲಿ ಮುಳುಗಿದಳೆಂಬ ತಿಳುವಳಿಕೆಯಿಂದ ಬಹಳವಾಗಿ ದುಃಖಿಸುವವನೂ, ಕಡೆಗೆ ಇಂತಹ ನೀಚ ಪರಿಸ್ಥಿತಿಯಲ್ಲಿ ಲಲಿತೆಯ ದರ್ಶನವನ್ನು ಅಕಸ್ಮಾತ್ತಾಗಿ ಮಾಡಿಕೊಂಡು ವ್ಯಥೆಪಡುತ್ತಿರುವ ನಿನ್ನ ಅಣ್ಣನಾದ ಸಭಾಕರಣನೂ ನಾನೇ! ನಾನು ನಿನ್ನ ಪ್ರೇಮಲ ಬಂಧುವಿರುವೆನೆಂಬ ಗುರುತು ನಿನಗೆ ಹತ್ತಲೊಲ್ಲದೋ?

ಲಲಿತೆ—(ಉದ್ವೇಗದಿಂದ) ಗುರುತುಹತ್ತಿತು! ಸಭಾಕರಣ, ನಿಮ್ಮ ಗುರುತು ಹತ್ತಿತು; ಆದರೆ ನಿಮ್ಮ ಅವಸ್ಥೆಯು ಹೀಗೆ ಏಕಾಯಿತು? ನಿಮ್ಮ ಆ ಉತ್ಸಾಹ, ನಿಮ್ಮ ಆ ಅವೇಶ, ನಿಮ್ಮ

ಆ ತೇಜಸ್ಸು ಎಲ್ಲಿ ಅಡಗಿದವು? ಹದಿನಾರು ವರ್ಷದ ಹಿಂದಿನ ಸಭಾಕರಣ ಈಗಿನ ಸಭಾಕರಣ ಇವರಲ್ಲಿ ಇಷ್ಟು ಹೆಚ್ಚುಕಡಿಮೆಯು ಯಾತರಿಂದಾಯಿತು?

ಸಭಾಕರಣ—ಲಲಿತೇ, ಹದಿನಾರು ವರ್ಷದ ಹಿಂದಿನ ಸಭಾಕರಣನು ಬೇರೆ, ಆಮೇಲಿನ ಸಭಾಕರಣನು ಬೇರೆ! ಲಲಿತೆಯು ಬುಂದೇಲಖಂಡದಲ್ಲಿ ಇಲ್ಲದ ಹಾಗಾದಕೂಡಲೆ ಮೊದಲಿನ ಸಭಾಕರಣನು ಇಲ್ಲದಂತಾದನು. ಆತನ ಸ್ಥಳದಲ್ಲಿ ಅಸುರೀವಿಚಾರದ, ಅಮಾನುಷೀಧ್ಯೇಯದ ರಾಕ್ಷಸೀಕೃತಿಯ ಈಗಿನ ದುಷ್ಟ ಸಭಾಕರಣನು ಬುಂದೇಲಖಂಡದಲ್ಲೆಲ್ಲ ಪಿಶಾಚದಂತೆ ಜನರನ್ನು ಪೀಡಿಸುತ್ತ ತಿರುಗುತ್ತಿರುವನು. ಈತನು ಸಭಾಕರಣನಲ್ಲ, ಸಭಾಕರಣನ ದುಷ್ಟ ಪಿಶಾಚವು!

ಲಲಿತೆ—(ದುಃಖದಿಂದ) ಅಂದರೆ, ಸ್ವಾತಂತ್ರ್ಯದ ಪವಿತ್ರಕಾರ್ಯದಿಂದ ಸಭಾಕರಣನು ಹಿಂತಿರುಗಿದನೇನು? ಸ್ವದೇಶಭಕ್ತಿಯ ಕರ್ತವ್ಯವನ್ನು ಸಭಾಕರಣನು ಬಿಟ್ಟುಬಿಟ್ಟನೇನು? ವಿಂಧ್ಯವಾಸಿನಿಯ ಪ್ರೇಮಕ್ಕೂ, ಚಂಪತರಾಯನ ಸ್ನೇಹಕ್ಕೂ, ಪ್ರಾಣನಾಥ ಪ್ರಭುಗಳ ಆಶೀರ್ವಾದಕ್ಕೂ ಸಭಾಕರಣನು ಎರವಾದನೇನು?

ಸಭಾಕರಣ—ಸಭಾಕರಣನು ಇದಕ್ಕೂ ಹೆಚ್ಚು ಅಧಃಪತನವನ್ನು ಹೊಂದಿರುವನು. ಅವನು ವಿಂಧ್ಯವಾಸಿನಿಯ ಪ್ರೇಮಕ್ಕಷ್ಟೇ ಎರವಾಗದೆ, ಆ ಲೋಕಮಾತೆಯ ದ್ರೋಹಕ್ಕೂ ಪಾತ್ರನಾಗಿರುವನು. ಚಂಪತರಾಯನ ಸ್ನೇಹಕ್ಕಷ್ಟೇ ಆತನು ಎರವಾಗದೆ, ಆ ಸ್ವಾತಂತ್ರ್ಯ ರವಿಯನ್ನು ನುಂಗಿಬಿಟ್ಟ ರಾಹುವೂ ಆಗಿರುವನು. ರಾಹುವು ಚಂಪತರಾಯನನ್ನು ನುಂಗಿ ಬಿಟ್ಟನು. ರಾಜಾ ಚಂಪತರಾಯನಿಗೂ, ಆತನ ಧ್ಯೇಯಕ್ಕೂ ಖಗ್ರಾಸಗ್ರಹಣವು ಹಿಡಿಯಿತು. ಸಭಾಕರಣನು ಪ್ರಾಣನಾಥಪ್ರಭುಗಳ ಆಶೀರ್ವಾದಕ್ಕಷ್ಟೇ ಎರವಾಗದೆ, ಅವರ ನಿಗ್ರಹಕ್ಕೂ, ಬುಂದೇಲಖಂಡದ ಶಾಪಸಹಸ್ರಗಳಿಗೂ ಗುರಿಯಾಗಿರುವನು.

ಲಲಿತೆ — (ಆಶ್ಚರ್ಯದಿಂದ) ನೆಟ್ಟಗೆ ಹೇಳಿರಿ! ಇನ್ನಿಷ್ಟು ಸ್ಪಷ್ಟವಾಗಿ ಮಾತಾಡಿರಿ! ರಾಜಾ ಚಂಪತರಾಯನು ನೆಟ್ಟಗಿರುವನಷ್ಟೆ?

ಸಭಾಕರಣ—(ತೀಕ್ಷ್ಣದೃಷ್ಟಿಯಿಂದ ಲಲಿತೆಯ ಮೋರೆ ನೋಡುತ್ತ) ರಾಜಾ ಚಂಪತ ರಾಯನು ಸತ್ತು ಬಹಳದಿವಸಗಳಾದವು. ಚಂಪತರಾಯನ ಉದ್ದೇಶವು ಕೊನೆಗಾಣದೆ ಹೋಯಿತು. ಆತನ ರಾಜ್ಯವು ದಿಲ್ಲೀ ಸಾಮ್ರಾಜ್ಯಕ್ಕೆ ಸೇರಿತು. ಆತನ ಮಗ ಛತ್ರಸಾಲನು ಪರದೇಶೀಯಾದನು. ರಾಣೀ ಸರಲಾದೇವಿಯು ಅನಾಥಳಾದಳು!

ಲಲಿತೆ—(ಕಣ್ಣೀರು ಸುರಿಸುತ್ತ) ಹಾಯ! ದೈವದ ಎಂತಹ ವಿಚಿತ್ರ ಗತಿಯಿದು!

ಸಭಾಕರಣ—(ಸಂಶಯದಮುದ್ರೆಯಿಂದ ತಂಗಿಯನ್ನು ನೋಡುತ್ತ) ಲಲಿತೇ, ಚಂಪತರಾಯನ ದುರವಸ್ಥೆಯಿಂದ ಇಷ್ಟು ದುಃಖಿಸಲಿಕ್ಕೆ ಚಂಪತರಾಯನು ನಿನಗೆ ಯಾರು? ಆತನ ಮರಣದಿಂದ ನಿನಗೇಕೆ ಇಷ್ಟು ದುಃಖವಾಗಬೇಕು?

ಲಲಿತೆ—(ಆಶ್ಚರ್ಯದಿಂದ ಅಣ್ಣನನ್ನು ನೋಡುತ್ತ) ಚಂಪತರಾಯನು ನನಗೆ ಯಾರೆಂದು ಕೇಳುವಿರಾ? ಚಂಪತರಾಯನು ನನಗೆ ಏನಾಗಬೇಕೆಂದು ಕೇಳುವಿರಾ? ಚಂಪತರಾಯನು ನನಗೆ ಏನಾಗಬೇಕೆಂಬದು ಸಭಾಕರಣನಿಗೆ ಗೊತ್ತಿಲ್ಲವೆ?

ಸಭಾಕರಣ—ಚಂಪತರಾಯನ ಹಾಗು, ಲಲಿತೆಯ ಸಂಬಂಧವು ನನಗೆ ಗೊತ್ತಿಲ್ಲ.

ಲಲಿತೆ—ಸಂಬಂಧವು ಗೊತ್ತಿಲ್ಲವೆ? ಓರಛಾದ ರಾಣಿಯಾದ ಹೀರಾದೇವಿಗೆ ನನ್ನ, ಹಾಗು ಚಂಪತರಾಯನ ಸಂಬಂಧವು ಗೊತ್ತಿರುತ್ತದೆ.

ಈ ಮಾತನ್ನು ಕೇಳಿದ ಕೂಡಲೆ ಸಭಾಕರಣನ ಎದೆಯು ಹಾರಿ, ಆತನ ಅಂತಃಕರಣವು ಅತ್ಯಂತ ವ್ಯಥಿತವಾಯಿತು. ಆತನು ಮತ್ತೆ ಲಲಿತೆಯನ್ನು ಕರಿತು –

ಸಭಾಕರಣ—ಹೀರಾದೇವಿಗೆ ಲಲಿತೆಯ, ಹಾಗು ಚಂಪತರಾಯನ ಸಂಬಂಧವು ಪೂರ್ಣವಾಗಿ ಗೊತ್ತಿರುವದೆಯೆ?

ಲಲಿತೆ — (ನಿರ್ಧಾರದಿಂದ) ಹೌದು, ಗೊತ್ತಿದೆ!

ಸಭಾಕರಣ—ಹೀರಾದೇವಿಯ ಮಾತನ್ನು ಸಭಾಕರಣನು ನಂಬಬೇಕೆ?

ಲಲಿತೆ—ನಿರ್ಬಾಧವಾಗಿ ನಂಬಬೇಕು.

ಸಭಾಕರಣ—(ಕಂಪಿತ ಸ್ವರದಿಂದ) ಚಂಪತರಾಯನು ಲಲಿತೆಯ ಕೌಮಾರ್ಯ ಹರಣ ಮಾಡಿದನೆಂದು ಹೀರಾದೇವಿಯು ಹೇಳಿದಳು! ಲಲಿತೇ, ಬುಂದೇಲಖಂಡವನ್ನು ಬಿಡಲಿಕ್ಕೆ ನಿನಗೆ ಇದೇ ಕಾರಣವಾಯಿತೇನು?

ಲಲಿತೆ—(ಆವೇಶದಿಂದ) ಅಣ್ಣತಂಗಿಯರ ಪ್ರೇಮದಲ್ಲಿ ಹೀಗೆ ವ್ಯತ್ಯಾಸವೆಣಿಸುವ ನೀಚರಿಗೆ ಧಿಕ್ಕಾರವು! ಅಣ್ಣಾ, ನೀನೂ ಅಂತಹ ಅಮಂಗಲಮಾತನ್ನು ನಂಬಿದೆಯಾ? ಜಗತ್ತಿನೊಳಗಿನ ಪವಿತ್ರ ಪ್ರೇಮದ ಅಂಶವು ಹಾಳಾಗಿಹೋಯಿತೇ? ಚಂಪತರಾಯನು ನನ್ನ ಅಣ್ಣನಿದ್ದನು. ಚಂಪತರಾಯನೂ ಲಲಿತೆಯೂ ಅಣ್ಣತಂಗಿಯರಾಗಿ ನಡೆದುಕೊಳ್ಳುತ್ತಿದ್ದರು!

ಲಲಿತೆಯ ಈ ಮಾತುಗಳನ್ನು ಕೇಳಿ ಸಭಾಕರಣನು ಒಂದು ದೀರ್ಘ ಶ್ವಾಸವನ್ನು ಬಿಟ್ಟು, ನಾನು ಬದುಕಿದೆನೆಂದು ಆನಂದಪಟ್ಟನು. ಆತನ ಬಾಡಿದ ಮೋರೆಯು ಪ್ರಸನ್ನವಾಗ ತೊಡಗಿತು. ಆತನ ನಿಸ್ತೇಜ ಮುಖವು ಬಾಲರವಿಯಂತೆ ಬರಬರುತ್ತ ತೇಜೋಮಯ ವಾಗತೊಡಗಿತು. ಆತನ ಮುಖಲಕ್ಷಣದ ರೂಪಾಂತರಕ್ಕಾಗಿ ಆಶ್ಚರ್ಯಮೂಢಳಾಗಿರುವ ಲಲಿತೆಯ ಕೈಹಿಡಿದು ಸಭಾಕರಣನು–

ಸಭಾಕರಣ — ಲಲಿತೇ, ನೀನು ನನ್ನ ಸಂಗಡ ಬುಂದೇಲಖಂಡಕ್ಕೆ ಈಗಲೇ ಹೊರಡು. ಇನ್ನು ನಾನು ದೇಶದ್ರೋಹಿ ಸಭಾಕರಣನು ಹೋಗಿ ದೇಶಭಕ್ತ ಸಭಾಕರಣನು ಆಗಬೇಕಾಗಿರುವದು. ಈ ನವೀನ ಸಭಾಕರಣತ್ವದ ದೀಕ್ಷೆಯನ್ನು ಬುಂದೇಲಖಂಡದಲ್ಲಿ ಹೀರಾದೇವಿಯ ಹಾಗು ಬುಂದೇಲಿವೀರರ ಸಮಕ್ಷ ನೀನು ನನಗೆ ಕೊಡಬೇಕು. ಚಂಪತ ರಾಯನ, ಹಾಗು ಲಲಿತೆಯ ಸರಳಭಾವದ ಬುಂಧುಭಗಿನಿಯ ಸಂಬಂಧವನ್ನು ಮರೆತು, ಕುಭಾವದಿಂದ ಬುಂದೇಲಖಂಡದ ನಾಶಕ್ಕೆ ಕಾರಣನಾಗಿರುವ ಈ ಮಲಿನ ಸಭಾಕರಣನನ್ನು ನೀನು ಕೈಮುಟ್ಟಿ ಪರಿಶುದ್ಧ ಮಾಡಬೇಕಾಗಿರುವದು. ಲಲಿತೇ, ಹೀರಾದೇವಿಯ ನೀಚ ತಂತ್ರದಿಂದ ಸಭಾಕರಣನಿಗೆ ಬಡಿದುಕೊಂಡಿದ್ದ ಪ್ರತಿಜ್ಞಾ ರೂಪವಾದ ಪಿಶಾಚವು ಬಿಟ್ಟು ಹೋಗಲಿಕ್ಕೆ ನೀನೇ ಮಾಂತ್ರಿಕಳಾಗಿರುವದರಿಂದ, ನೀನು ಈಗ ಬುಂದೇಲಖಂಡಕ್ಕೆ

ಬರಲೇಬೇಕು; ಆದರೆ ಇವನಾರು? ನಿನ್ನ ನಿವಾಸಸ್ಥಾನದಕಡೆಗೆ ಯಾವನು ಬರುತ್ತಿರುವನು? ಇವನು ಬಾದಶಹನು; ಲಲಿತೆಯನ್ನು ಬುಂದೇಲಖಂಡಿದಿಂದ ಓಡಿಸಿಕೊಂಡು ಬಂದಿರುವ ಬಾದಶಹನು; ಲಲಿತೆಯ ಜನ್ಮವನ್ನು ಮಣ್ಣುಗೂಡಡಿಸಿದ ಬಾದಶಹನು! ಸಾಗರದ ರಾಜಮನೆತನಕ್ಕೆ ಕಲಂಕವನ್ನುಂಟುಮಾಡಿದ ಬಾದಶಹನು! ಬಾದಶಹಾ, ಲಲಿತೆಯ ಸುಖವನ್ನು ನೀನು ಮಣ್ಣುಗೂಡಿಸಿದೆಯಲ್ಲವೆ? ಈ ಜನಾನಖಾನೆಯಲ್ಲಿ ಲಲಿತೆಯನ್ನು ನೀನೇ ಒತ್ತಾಯ ದಿಂದ ಎಳೆದುತಂದೆಯಲ್ಲವೆ? ಲಲಿತೆಯ ಪಾವಿತ್ರ್ಯವನ್ನು ನೀನೇ ನಿನ್ನ ವಿಷಯಾಸಕ್ತಿಗೆ ಬಲಿಯಾಗಿ ನಷ್ಟಪಡಿಸಿದೆಯಲ್ಲವೆ?

ಬಾದಶಹಾ — (ಆಶ್ಚರ್ಯದಿಂದ) ಯಾರು ? ಸಭಾಕರಣ, ನೀನು ಇಲ್ಲಿ ಈ ಜನಾನ ಖಾನೆಯಲ್ಲಿ ಹೇಗೆಬಂದೆ! ಇಷ್ಟು ವರ್ಷಗಳಾದ ಮೇಲೆ ಲಲಿತೆಯು ಇಲ್ಲಿ ಇರುವಳೆಂಬದು ನಿನಗೆ ಹೇಗೆ ಗೊತ್ತಾಯಿತು? ಎಲ! ಇವನಂತು ಖಡ್ಗಕ್ಕೆ ಕೈಹಾಕಿದನು! ಶೂರ ಬುಂದೇಲನೇ, ವಿಚಾರ ಮಾಡು–ವಿಚಾರಮಾಡು! ನಾನು ಅಧಿಕಾರದ ಬಲದಿಂದ ಲಲಿತೆಯನ್ನು ಜನಾನಖಾನೆಯಲ್ಲಿ ಎಳೆದು ತಂದೆನೆಂದು ನಿನಗೆ ಯಾರು ಹೇಳಿದರು? ಆಯೇಷಾ ಪ್ಯಾರಿ! ನಿನ್ನ ಕ್ರುದ್ಧನಾದ ಅಣ್ಣನನ್ನು ಶಾಂತಗೊಳಿಸು! ಯಾ ಅಲ್ಲಾ! ಈ ಸಂತಪ್ತ ಬುಂದಲೇನು ನನ್ನ ಶಿರಚ್ಛೇದಮಾಡದೆ ಬಿಡನು! ಯಾ ಅಲ್ಲಾ!

ಸಭಾಕರಣ—(ಕತ್ತಿಯನ್ನು ಝಳಪಿಸುತ್ತತ್ವೇಷದಿಂದ) ಸಾಯಲಿಕ್ಕೆ ಸಿದ್ಧನಾಗು, ವಿಷಯಾಸಕ್ತನಾದ ಬಾದಶಹನೇ, ಸಾಯಲಿಕ್ಕೆ ಸಿದ್ಧನಾಗು!

ಲಲಿತೆ —(ಸಭಾಕರಣನ ಕೈಹಿಡಿದು) ಏನು ಅವಿಚಾರವಿದು! ನೀವು ಶಸ್ತ್ರಾಘಾತವನ್ನು ಯಾರಮೇಲೆ ಮಾಡುವಿರಿ? ಸಭಾಕರಣ, ನೀವು ಯಾರ ಪ್ರಾಣಹರಣ ಮಾಡುವಿರಿ?

ಲಲಿತೆಯ ಈಮಾತನ್ನು ಕೇಳಿ ಸಿಟ್ಟಿನಿಂದ ಕೆಂಪಾಗಿರುವ ಕಣ್ಣುಗಳಿಂದ ಔರಂಗಜೇಬ ಬಾದಶಹನನ್ನು ನೋಡುತ್ತ ಸಂತಾಪದಿಂದ ಅವಡುಕಚ್ಚುತ್ತಾ

ಸಭಾಕರಣ — ಈ ದುರಾತ್ಮನ ಜೀವವನ್ನು ತಕ್ಕೊಳ್ಳುವೆನು!

ಲಲಿತೆ — ಅವರು ನಿಮ್ಮ ಅನ್ಯಾಯವನ್ನೇನು ಮಾಡಿದರು?

ಸಭಾಕರಣ—(ಲಲಿತೆಯನ್ನು ಆಶ್ಚರ್ಯದಿಂದ ನೋಡುತ್ತ) ಲಲಿತೇ, ಈ ಪ್ರಶ್ನೆ ಮಾಡಲಿಕ್ಕೆ ನಿನ್ನ ನಾಲಿಗೆಯು ಹೇಗೆ ಏಳುತ್ತದೆ? ಒಬ್ಬ ವಿಧರ್ಮಿ ಯವನನು ನಿನ್ನ ಪಾವಿತ್ರ್ಯ ವನ್ನೂ, ಕೌಮಾರ್ಯವನ್ನೂ, ಸಚ್ಛೀಲವನ್ನೂ ಮಣ್ಣುಗೂಡಿಸಿದ್ದನ್ನು, ಈ ಜನಾನಖಾನೆಯ ನರಕತುಲ್ಯ ಸುಖದಲ್ಲಿ ಮಗ್ನಳಾಗಿ ನೀನು ಮರೆತುಬಿಟ್ಟೆಯಾ? ಸಾಗರದ ತೇಜಸ್ವೀ ಕುಲದಲ್ಲಿ ಹುಟ್ಟಿರುವ ನೀನು, ಇಂದು ಅಮರ್ಯಾದ ವ್ಯಭಿಚಾರಖಾನೆಯಲ್ಲಿ ಬಿದ್ದಿರುವೆ! ಇದರವಿಚಾರವು ನಿನ್ನ ಮನಸ್ಸಿಗೆ ತಗಲುವದಿಲ್ಲವೆ? ಲಲಿತೇ, ಈ ಅಮಂಗಲಸ್ಥಿತಿಯ ಕಡೆಗೆ ನಿನ್ನನ್ನು ಎಳೆದು ಕೊಂಡು ಬಂದಿರುವ ದುರಾತ್ಮನ ವಿಷಯವಾಗಿ ನಿನಗೆ ಸಂತಾಪವಾಗುವದಿಲ್ಲವೆ? ನಿನಗೆ ಅಭ್ಯಾಸದಿಂದ ಇದೇ ಸ್ಥಿತಿಯು ಸುಖಕರವಾಗಿ ತೋರುತ್ತಿರಬಹುದಾಗಿದ್ದರೂ, ನನ್ನ ಹಾಗು ನನ್ನ ಪವಿತ್ರ ಮನೆತನದ ಅಪಮಾನಮಾಡಿದ ಅಪರಾಧಕ್ಕಾಗಿ ಈ ದುಷ್ಟ ಬಾದಶಹನನ್ನು

ಜಗತ್ತಿನಿಂದ ಹೊರಡಿಸಬೇಕಾಗಿರುವದು! ಬಾದಶಹಾ! ಉಚ್ಚರಿಸು ಅಲ್ಲಾನ ನಾಮವನ್ನು! ಈ ಸಭಾಕರಣನ ಖಡ್ಗವು ನಿನ್ನ ಹೃದಯದ ನೆಲೆಯನ್ನು ನೋಡದೆ ಬಿಡುವದಿಲ್ಲ!

ಬಾದಶಹ—ಯಾಅಲ್ಲಾ! ನಾನು ಇಂತಹ ಅಮರ್ಯಾದಿತ ಸಾಮ್ರಾಜ್ಯದ ಅಧಿಪತಿಯಾಗಿದ್ದು ನನ್ನನ್ನು ಇಂಥ ಕಠಿಣ ಪ್ರಸಂಗದಿಂದ ಪಾರಮಾಡಲಿಕ್ಕೆ ಯಾರೂ ಇರಬಾರದೇನು? ಯಾಅಲ್ಲಾ!

ಲಲಿತೆ—(ಶಾಂತರೀತಿಯಿಂದ ) ಸಭಾಕರಣ, ಶಹಾನಶಹಾ ನನ್ನ ಆರಾಧ್ಯ ದೈವತವಾಗಿರುವರು. ಎರಡನೆಯವರ ಹೆಂಡಿರುಮಕ್ಕಳನ್ನು ಒತ್ತಾಯದಿಂದ ಜನಾನಖಾನೆಯಲ್ಲಿ ಎಳೆದುತರುವ ಕಾಲವು ಮುಗಿದುಹೋಗಿದ್ದು, ಬಾದಶಹರಿಗೆ ಇಂತಹ ಘೋರ ವಿಷಯಾಸಕ್ತಿಯು ಅತ್ಯಂತ ತಿರಸ್ಕರಣೀಯವಾಗಿರುವದು! ಈ ಲಲಿತೆಯು ತಾನಾಗಿಯೇ ಪ್ರೀತಿಯಿಂದ ದಿಲ್ಲೀಪತಿಯ ಹೆಂಡತಿಯಾಗಿರುವಳು. ಲಲಿತೆಯ ನಡತೆಯು ಮೊದಲಿನಂತೆ ಪವಿತ್ರವಾಗಿರುವದು. ನಿನ್ನ ಮನಸ್ಸಿನಲ್ಲಿ ಉಂಟಾಗಿರುವ ಸಂಶಯವನ್ನು ದೂರಮಾಡಲಿಕ್ಕೆ ನಾನು ಓರಛಾಕ್ಕೆ ಬರಬೇಕಾಗುವದು.

ಸಭಾಕರಣ—(ಸ್ವಲ್ಪ ಶಾಂತನಾಗಿ) ಅಂದರೆ, ಓರಛಾದ ರಾಣಿಗೆ ಆದರ ಸಂಬಂಧವೇನಾದರೂ ಇರುವದೇನು?

ಲಲಿತೆ—ಇರುವದು ಶಹಾನಶಹಾರವರ ನಿರಪರಾಧಿತ್ವವೂ, ನನ್ನ ಪವಿತ್ರತೆಯೂ ಹೀರಾದೇವಿಯ ಮುಖದಿಂದಲೇ ಸಿದ್ಧವಾಗಬೇಕಾಗಿದೆ!

ಸಭಾಕರಣ—(ಶಾಂತನಾಗಿ) ಒಳ್ಳೇದು, ಬಾದಶಹಾ, ಖಡ್ಗವನ್ನು ಒರೆಗಾಣಿಸುವೆನು. ನಾನು ನನ್ನ ಈ ಪ್ರೀತಿಯ ತಂಗಿಯನ್ನು ಬುಂದೇಲಖಂಡಕ್ಕೆ ಕೆರೆದೊಯ್ಯುವೆನು.

ಬಾದಶಹಾ—(ಬದುಕಿದೆನೆಂಬಸಮಾದಾನದಿಂದ) ಆಯೇಷಾಪ್ಯಾರೀ! ನೀನು ತಿರುಗಿ ಯಾವಾಗ ಬರುವವಳು? ಬದ್ರುನ್ನಿಸೆಯು ಹೋದಂತೆ ನೀನೂ ನನ್ನನ್ನು ಬಿಟ್ಟು ಹೋಗಿ ಬಿಡುವೆಯೇನು?

ಸಭಾಕರಣ—(ಆಯೇಷೆಯು ಉತ್ತರಕೊಡುವದರೊಳಗೆ) ಬಾದಶಹಾ! ಚಿಂತೆ ಮಾಡಬೇಡ. ನಿನ್ನ ಮಗಳಾದ ಬದ್ರುನ್ನಿಸೆಯು ಬುಂದೇಖಂಡದಲ್ಲಿ ಸುಖರೂಪವಾಗಿ ಇರುವಳು. ತನ್ನ ತಾಯಿಗೆ ಕೊಡುವದಕ್ಕಾಗಿ, ಇಗೋ ಈ ಉಂಗುರವನ್ನು ಕೊಟ್ಟಿರುವಳು ನೋಡು. ಎಂದು ಸಭಾಕರಣನು ಒಂದು ಉಂಗುರವನ್ನು ಬಾದಶಹನ ಕೈಯಲ್ಲಿ ಕೊಟ್ಟನು. ಬಾದಶಹನು ಆತುರದಿಂದ ಅದನ್ನು ತಕ್ಕೊಂಡು ನೋಡುತ್ತಿರುವಾಗ, ದೇವಗಡದ ವಿಜಯದಿಂದ ಆದ ಆನಂದಕ್ಕಿಂತ ಹೆಚ್ಚಿನ ಆನಂದವು ಆತನಿಗಾಯಿತು! ಆಯೇಷಾರಾಣಿಯು ಬಾದಶಹನ ಸಮ್ಮತಿಯಿಂದ ಅಣ್ಣನೊಡನೆ ಓರಛಾಕ್ಕೆ ಹೋಗುವದಕ್ಕಾಗಿ ಹೊರಟಳು!

# ಪ್ರತಿಜ್ಞೆಯ ಪರಿತ್ಯಾಗ

ಛತ್ರಸಾಲನು ದೇವಗಡದ ಯುದ್ಧದಲ್ಲಿ ಜಯ ಹೊಂದಿದ್ದನ್ನೂ, ಆತನು ದಿಲ್ಲಿಯಿಂದ ಬುಂದೇಲಖಂಡಕ್ಕೆ ಬಂದು ಸೈನ್ಯವನ್ನು ಕೂಡಿಸಹತ್ತಿದ್ದನ್ನೂ ಕೇಳಿ ಓರಛಾದ ರಾಣಿಯಾದ ಹೀರಾದೇವಿಯು, ಅಸಮಾದಾನಪಟ್ಟಳು. ಚಂಪತರಾಯನ ಮನೆತನವನ್ನು ನಿರ್ಮೂಲ ಮಾಡಬೇಕೆಂದು ನಿಶ್ಚಯಿಸಿದ ಆಕೆಗೆ, ಛತ್ರಸಾಲನ ಈ ಉತ್ಕರ್ಷವನ್ನು ಕೇಳಿ ದುಃಖವಾಯಿತು; ಆದರೂ ಆ ಹೊಟ್ಟೆಕಿಚ್ಚಿನ ದುಷ್ಟ ರಾಣಿಯು ಛತ್ರಸಾಲನ ನಾಶದ ವಿಷಯದಲ್ಲಿ ಉದಾಸೀನಮಾಡಲಿಲ್ಲ; ಎದೆಗುಂದಲಿಲ್ಲ, ವಿಮಲದೇವನ ಲಗ್ನದ ಕೆಲಸವು ತೀರಿದ ಕೂಡಲೆ ಮುಲಾಖತ್ ದಿವಾಣಖಾನೆಯಲ್ಲಿ ತನ್ನ ಪಕ್ಷದ ಅರಸರ ದರ್ಬಾರು ನೆರಿಸಿ, ಛತ್ರಸಾಲನನ್ನು ಬುಂದೇಲಖಂಡದಿಂದ ಹೊಡೆದು ಓಡಿಸಬೇಕೆಂದು ನಿಶ್ಚಯಿಸಿದಳು.

ಹೀರಾದೇವಿಯು ಕರೆಕಳುಹಿದಂತೆ ಬುಂದೇಲಖಂಡದ ಅರಸರು ಮುಲಾಖತ್ ದಿವಾಣಖಾನೆಯಲ್ಲಿ ಕೂಡಿದರು. ಆದರೆ ಈ ಮೊದಲೆ ಕೂಡಿದಂತೆ ಅವರು ಚಂಪತರಾಯನ ಮೇಲಿನ ಸಿಟ್ಟಿನಿಂದ ಆತನ ವಂಶದ ನಾಶಮಾಡಬೇಕೆಂಬ ಈರ್ಷೆಯಿಂದ ಕೂಡಿದ್ದಿಲ್ಲ. ಪ್ರಾಣನಾತ ಪ್ರಭುಗಳ ಉಪದೇಶದಿಂದ ಎಚ್ಚತ್ತು ತಮ್ಮ ತಪ್ಪನ್ನು ತಿಳಿದುಕೊಂಡು ಹೀರಾದೇವಿಯ ಪಕ್ಷವನ್ನು ಬಿಟ್ಟು ಛತ್ರಸಾಲನ ಪಕ್ಷವನ್ನು ಸ್ವೀಕರಿಸಿ ಸ್ವಾತಂತ್ರ್ಯ ಸಂಪಾದಿಸುವ ತಮ್ಮ ಸಂಕಲ್ಪವನ್ನು ಹೀರಾದೇವಿಗೆ ತಿಳಿಸುವದಕ್ಕಾಗಿ ಕೂಡಿದ್ದರು. ಹೀಗಿರುವಾಗ ಹೀರಾದೇವಿಯು ದರ್ಬಾರಕ್ಕೆ ಆಢ್ಯತೆಯಿಂದ ಬಂದಳು. ಇಂದಿನ ದರ್ಬಾರದ ಅಗ್ರಾಸನವನ್ನು ಫಿಯಾದಾಖಾನನು ಸ್ವೀಕರಿಸಿದ್ದನು. ಆಗ ಹೀರಾದೇವಿಯು ದರ್ಬಾರದ ಜನರನ್ನು ಕುರಿತು –

ಹೀರಾದೇವಿ—ಪರಮ ದಯಾಳುವಾದ ದಿಲ್ಲೀಪತಿಯು ಅತ್ಯಂತ ಉದಾರ ಮನಸ್ಸಿನಿಂದ ಬುಂದೇಲಖಂಡದೊಳಗಿನ ಸಾಮ್ರಾಜ್ಯದ್ರೋಹವನ್ನು ಬೇರುಸಹಿತವಾಗಿ ಕಿತ್ತು ಒಗೆದು, ಅಲ್ಲಿ ಶಾಂತತೆಯನ್ನು ನೆಲೆಗೊಳಿಸಿದ್ದು ನಮ್ಮ ಮೇಲಿನ ದೊಡ್ಡ ಉಪಕಾರವೇ ಸರಿ. ಸಾಮ್ರಾಜ್ಯ ಸತ್ತೆಯ ತಂಪಾದ ನೆರಳಲ್ಲಿ ಶಾಂತಿಯಿಂದ ಕಾಲಕಳೆಯುತ್ತಿರುವ ನಮ್ಮ ಹಿತಕ್ಕಾಗಿ, ಫಿಯಾದಾಖಾನರಂತಹ ನರರತ್ನವನ್ನು ಸುಬೇದಾರರಾಗಿ ನಿಯಮಿಸಿ, ದಿಲ್ಲೀಪತಿಯು ತನ್ನ ಸಾಮ್ರಾಜ್ಯನಿಷ್ಠ ಪ್ರಜೆಗಳ ಹಿತದ ಅಭಿವೃದ್ಧಿಗಾಗಿ ಒಂದೇ ಸಮನೆ ಯತ್ನಿಸುತ್ತಿರುವನು.

ಈ ಮೇರೆಗೆ ಹೀರಾದೇವಿಯು ಸಾರ್ವಭೌಮನ ಸ್ತುತಿಯ ಗಾಯನ ಮಾಡುತ್ತಿರಲು, ಮಧ್ಯದಲ್ಲಿಯೇ ಕಲಿಂಜರಾಧಿಪತಿಯು ಹೀರಾದೇವಿಗೆ ಉತ್ತರಕೊಡುವದಕ್ಕಾಗಿ ಎದ್ದುನಿಂತನು. ಬುಂದೇಲಖಂಡದ ಯಾವತ್ತು ಅರಸರ ಪಕ್ಷದಿಂದ ಆ ರಾಜನು ಬುಂದೇಲಖಂಡದ ನಿಶ್ಚಯವನ್ನು ಹೀರಾದೇವಿಗೆ ತಿಳಿಸುವದಕ್ಕಾಗಿ ಎದ್ದು ನಿಂತಿದ್ದನು. ಬದ್ರುನ್ನಿಸೆಯ ಅಪ್ಪಣೆಯಂತೆ ಚತುರ್ಭುಜನ ದೇವಾಲಯದ ಸಂರಕ್ಷಣವಾದ ಬಳಿಕ, ರಣುದಲ್ಲಾಖಾನನು ಆ ಸಂಗತಿಯನ್ನು ದಿಲ್ಲಿಯ ಬಾದಶಹನಿಗೆ ತಿಳಿಸಿ, ಪುನಃ ಚತುರ್ಭುಜನ ದೇವಾಲಯವನ್ನು ನಾಶಮಾಡುವದಕ್ಕಾಗಿ ಬಾದಶಹನ ಅಜ್ಞಾಪತ್ರವನ್ನು ತರಿಸಿಕೊಂಡಿದ್ದನು. ಆ ಅಜ್ಞಾಪತ್ರದಂತೆ ಫಿಯಾದಾ

ಖಾನನು ಚತುರ್ಭುಜನ ಮಂದಿರವನ್ನು ನಾಶಮಾಡುವದಕ್ಕಾಗಿ ತನ್ನ ಸೈನ್ಯವನ್ನು ಕಳಿಸಿ, ತಾನು ದರ್ಬಾರಕ್ಕೆ ಬಂದಿದ್ದನು. ಆ ಯವನ ಸೈನ್ಯವನ್ನು ಎದುರಿಸುವದಕ್ಕಾಗಿ ಓರಛಾದ ನೂತನ ರಾಜನಾದ ವಿಮಲದೇವನು, ಹೀರಾದೇವಿಯು ಇತ್ತ ದರ್ಬಾರಕ್ಕೆ ಬಂದಕೂಡಲೆ ಅತ್ತ ತನ್ನ ಸೇನಾಪತಿಯಾದ ಚಾಮುಂಡರಾಯನನ್ನು ಕೂಡಿಕೊಂಡು ಸೈನ್ಯದೊಡನೆ ಹೊರಟು ಹೋಗಿದ್ದನು. ಇಲ್ಲಿ ದರ್ಬಾರದ ಕಾರ್ಯವು ನಡೆದಿರುವಾಗ ಅತ್ತ ಚತುರ್ಭುಜನ ಮಂದಿರದ ಬಳಿಯಲ್ಲಿ ಮುಸಲ್ಮಾನ ಸೈನ್ಯಕ್ಕೂ, ರಜಪೂತ ಸೈನ್ಯಕ್ಕೂ ಯುದ್ಧವು ನಡೆದಿತ್ತು, ದಳಪತರಾಯನೂ ವಿಮಲದೇವನಿಗೆ ಸಹಾಯಕನಾಗಿ ಯುದ್ಧಮಾಡುತ್ತಿದ್ದನು. ಓರಛಾದ ನಾಗರಿಕರೂ ಶಸ್ತ್ರಗಳನ್ನು ಧರಿಸಿ ವಿಮಲದೇವನ ಸೈನ್ಯವನ್ನು ಕೂಡಿದ್ದರು. ಈ ಸಂಗತಿಯನ್ನು ಹೀರಾದೇವಿಯು ಅರಿತಿರಲಿಲ್ಲ. ದರ್ಬಾರದೊಳಗಿನ ಅರಸರಿಗೂ ಇದು ಅಷ್ಟು ಸ್ಪಷ್ಟವಾಗಿ ಗೊತ್ತಿದ್ದಿಲ್ಲವೆಂದು ಹೇಳಬಹುದು. ಹೀಗಿರುವಾಗ ಮೇಲೆ ಹೇಳಿದಂತೆ ಕಲಿಂಜರರಾಜನು ಹೀರಾದೇವಿಯನ್ನು ಕುರಿತು–

ಕಲಿಂಜರರಾಜ—ರಾಣೀ, ಹೀರಾದೇವಿ, ಇಲ್ಲಿ ನೆರೆದಿರುವ ಸನ್ಮಾನನೀಯರಾದ ಅರಸರಿಗೂ, ಸರದಾರರಿಗೂ ಕಣ್ಣುಗಳಿರುವದಿಲ್ಲವೆಂದು ನೀನು ತಿಳಿದಿರುವೆಯೇನು? ಅಥವಾ ಅವರ ತಿಳುವಳಿಕೆಯು ತೀರ ನಷ್ಟವಾಗಿ ಹೋಗಿರುವದೆಂದು ತಿಳಿದಿರುವಿಯೋ? ಬುಂದೇಲ ಖಂಡದ ಸುಬೇದಾರನಾದ ಫಿಯಾದಾಖಾನನು ಬುಂದೇಲಖಂಡಕ್ಕೆ ಯಾವ ಹಿತವನ್ನು ಮಾಡಿರುವನು? ಮಹೋಬದ ಚಂಪತರಾಯನು ರಣದಲ್ಲಿ ಮಡಿದು, ದಿಲ್ಲೀಪತಿಯ ಅಧಿಕಾರವು ಇಲ್ಲಿ ಸ್ಥಾಪಿತವಾದ ಮೇಲೆ, ಜಿಜಿಯಾದಂಥ ಅನ್ಯಾಯದ ಕರದ ಭಾರವು ನಮ್ಮ ತಲೆಯ ಮೇಲೆ ಕೂತಿತು; ಪ್ರಾಣಕ್ಕಿಂತಲೂ ಪ್ರಿಯವಾಗಿರುವ ದೇವಸ್ಥಾನದ ನಾಶಮಾಡುವ ಕೆಲಸವು ಒತ್ತರದಿಂದ ನಡೆದಿತು. ಚತುರ್ಭುಜನ ದೇವಸ್ಥಾನವನ್ನು ನಾಶಮಾಡುವದಕ್ಕಾಗಿ ಇಂದೇ ಫಿಯಾದಾಖಾನನ ಸೈನ್ಯವು ಹೋಗಿರುವ ಸಂಶಯವೂ ನಮಗೆ ಬಂದಿದೆ. ಆಗಾಗ್ಗೆ ನಮ್ಮ ಪವಿತ್ರ ಧರ್ಮದ ಅಪಮಾನವನ್ನು ಮುಸಲ್ಮಾನರು ಮಾಡುತ್ತಿರುವದು ಅನುಭವದ ಮಾತಾಗಿದೆ. ಇಂತಹ ಸ್ಥಿತಿಯಲ್ಲಿ ಬಾದಶಹನು ನಮ್ಮ ಹಿತವನ್ನು ಮಾಡುತ್ತಿರುವನೆಂದು ನೀನು ಹೇಳುವದು ಆಶ್ಚರ್ಯದ ಸಂಗತಿಯೇ ಸರಿ. ಹೀರಾದೇವಿ, ನಾವೆಲ್ಲರೂ ನಮ್ಮ ಮನಸ್ಸಿನ ನಿಶ್ಚಯವನ್ನು ನಿನಗೆ ತಿಳಿಸುವದಕ್ಕಾಗಿಯೇ ಇಲ್ಲಿಗೆ ಬಂದಿದ್ದೇವೆ. ಮಹೋಬದ ಛತ್ರಸಾಲನು ಬುಂದೇಲ ಖಂಡಕ್ಕೆ ಬಂದಕೂಡಲೆ ಆತನ ಆಧಿಪತ್ಯದ ಕೆಳಗೆ ನಾವೆಲ್ಲರೂ ಬಾದಶಹನ ವಿರುದ್ಧವಾಗಿ ಶಸ್ತ್ರವನ್ನು ಎತ್ತುವ ನಿಶ್ಚಯಮಾಡಿದ್ದೇವೆ. ನೀನಾದರೂ ನಮ್ಮ ಕಾರ್ಯಕ್ಕೆ ಸಹಾಯ ಮಾಡತಕ್ಕದ್ದು; ಇಲ್ಲದಿದ್ದರೆ ನೀನೂ ಬಾದಶಹನಂತೆಯೇ ಬುಂದೇಲಖಂಡದ ಶತ್ರುವೆಂದು ತಿಳಿದು, ನಾವು ನಿನ್ನ ಸಂಗಡ ನಡೆದುಕೊಳ್ಳಬೇಕಾಗುವದು; ಆದ್ದರಿಂದ ಪೂರ್ಣ ವಿಚಾರ ಮಾಡಿ ಬಾದಶಹನ ಪಕ್ಷವನ್ನು ಬಿಟ್ಟು ಬುಂದೇಲಖಂಡದ ಸ್ವಾತಂತ್ರ್ಯದ ರಕ್ಷಣಕ್ಕಾಗಿ ನಮ್ಮ ಸಂಗಡ ಸಿದ್ಧಳಾಗು.

ಈ ಮೇರೆಗೆ ನುಡಿದ ಕಲಿಂಜರರಾಜನ ಮಾತುಗಳನ್ನು ಕೇಳಿ ಹೀರಾದೇವಿಯು ಸಂತಪ್ತಳಾದಳು. ಆಕೆಯು ಎದ್ದುನಿಂತು ಮಾತಾಡಬೇಕೆನ್ನುತ್ತಿರಲು, ಛತ್ರಸಾಲನು ಧೀರ

ಗಂಬೀರ ಗತಿಯಿಂದ ದರ್ಬಾರವನ್ನು ಪ್ರವೇಶಿಸಿದನು. ಆತನನ್ನು ಅಕಸ್ಮಾತ್ತಾಗಿ ನೋಡಿದ ಕೂಡಲೆ ಇಡಿಯ ದರ್ಬಾರವೇ ಆತನ ಜಯಘೋಷವಮಾಡಿತು. ಅದನ್ನು ನೋಡಿ ಹೀರಾದೇವಿಯು ಸಂತಾಪದಿಂದ ವೈವರ್ಣಗೊಂಡಳು; ಆಕೆಯು ಫಿಯಾದಾಖಾನನ ಹತ್ತಿರ ಬಂದಿರುವ ಛತ್ರಸಾಲನನ್ನು ಕುರಿತು—" ಏ ರಾಜದ್ರೋಹಿಯ ಪೋರನೇ, ನಿನ್ನಂತಹ ತಲೆತಿರುಕ ಉದ್ಧಟನು ಸಾವ್ರಾಜ್ಯನಿಷ್ಠರ ಸಭೆಗೆ ಬರುವದು ಬಾದಶಹರ ಕೋಪಕ್ಕೆ ಕಾರಣವಾಗುವದು. ಇಲ್ಲಿ ನೀನು ಒಂದು ಕ್ಷಣವೂ ನಿಂತುಕೊಳ್ಳದೆ ಹೊರಟುಹೋಗು. ಇಲ್ಲದಿದ್ದರೆ ಸುಬೇದಾರ ಫಿಯಾದಾಖಾನರ ಕೋಪಕ್ಕೂ ನನ್ನ ಶಾಸನಕ್ಕೂ ನೀನು ಗುರಿಯಾಗ ಬೇಕಾದೀತು.

ಛತ್ರಸಾಲ — (ಸಮಾಧಾನದಿಂದ) ಕಕ್ಕೀ, ಈ ನಿನ್ನ ಮಗನ ಮೇಲೆ ಇಷ್ಟೇಕೆ ಸಿಟ್ಟು? ನಾನು ಇಲ್ಲಿಂದ ಹೊರಟುಹೋಗಲಿಕ್ಕೆ ಬಂದಿರುವದಿಲ್ಲ. ನನ್ನ ಮೇಲಿರುವ ಈ ಸನ್ಮಾನನೀಯ ಬಂಧುಗಳ ಸಿಟ್ಟನ್ನು ಇಳಿಸಿ, ಅವರ ಪ್ರೇಮವನ್ನು ಸಂಪಾದಿಸಿ ಅವರೊಡನೆ ಬುಂದೇಲಖಂಡದ ಸ್ವಾತಂತ್ರ್ಯವನ್ನು ಸಂಪಾದಿಸಬೇಕೆಂದು ಇಲ್ಲಿಗೆ ಬಂದಿದ್ದೇನೆ.

ಹೀರಾದೇವಿ—ಛತ್ರಸಾಲಾ, ನಿನ್ನ ಹಲವು ಅಪರಾಧಗಳ ಪಟ್ಟಿಯನ್ನು ಓದುವದಕ್ಕಾಗಿ ಇಂದಿನ ದರ್ಬಾರವನ್ನು ನಾನು ನೆರೆಸಿರುವದಿಲ್ಲ. ಸಾಮ್ರಾಜ್ಯ ನಿಷ್ಠೆಯನ್ನು ವ್ಯಕ್ತಪಡಿಸುವದಕ್ಕಾಗಿ ದರ್ಬಾರವನ್ನು ನೆರೆಸಿರುತ್ತೇನೆ. ದರ್ಬಾರದ ಕೆಲಸವು ಮುಗಿದ ಬಳಿಕ, ನಿನ್ನ ಅಪರಾಧಗಳ ವಿಚಾರಮಾಡಿ, ನಿನಗೆ ಯೋಗ್ಯವಾದ ಶಾಸನಮಾಡಲಿಕ್ಕೆ ಸುಬೇದಾರ ಫಿಯಾದಾಖಾನರು ಸಮರ್ಥರಿದ್ದಾರೆ.

ಫಿಯಾದಾಖಾನ—(ಅಂಜುತ್ತಂಜುತ್ತಮೋರೆತಗ್ಗಿಸಿ) ಭೇಷಕ್ !

ಛತ್ರಸಾಲ—ಫಿಯಾದಾಖಾನ ಬುಂದೇಲಖಂಡದೊಳಗಿನ ನಿಮ್ಮ ಮೊಗಲರ ಅಧಿಕಾರವು ನಷ್ಟವಾಯಿತೆಂದು ತಿಳಿ. ನೀನು ಚತುರ್ಭುಜನ ಮಂದಿರವನ್ನು ನಾಶ ಮಾಡುವದಕ್ಕಾಗಿ ಕಳಿಸಿದ ಯವನಸೇನೆಯನ್ನು ವಿಮಲದೇವನೂ, ಚಾಮುಂಡರಾಯನು, ದಳಪತರಾಯನೂ ಗೊತ್ತಿಗೆ ಹಚ್ಚುತ್ತಲಿದ್ದಾರೆ. ನಿನ್ನನ್ನು ಸೆರೆಹಿಡಿಯಲಿಕ್ಕೆ ನಾನು ಬಂದಿದ್ದೇನೆ. ಇಳಿ, ಸಿಂಹಾಸನದಿಂದ ತಟ್ಟನೆ ಇಳಿದು ಜೀವವನ್ನು ಉಳಿಸಿಕೋ! ಒಂದು ಶಬ್ದವನ್ನು ತಿರುಗಿ ಉಚ್ಚರಿಸಿದರೆ, ನನ್ನ ಖಡ್ಗವು ನಿನ್ನ ಹೃದಯದ ರಕ್ತವನ್ನು ಕುಡಿಯದೆ ಬಿಡುವದಿಲ್ಲ!

ಕಲಿಂಜರರಾಜನ ಮಾತಿನಿಂದ ಚಿಂತಾಮಗ್ನನಾಗಿದ್ದ ಫಿಯಾದಾಖಾನನು, ಛತ್ರಸಾಲನು ಅಕಸ್ಮಾತ್ತಾಗಿ ಬಂದದ್ದರಿಂದ ಅಂಜಿಹೋಗಿದ್ದನು. ಆತನು ಪಿಟ್ಟೆಂದು ಮಾತಾಡದೆ ಪ್ರಾಣವನ್ನು ಉಳಿಸಿಕೊಳ್ಳುವದಕ್ಕಾಗಿ ಸಿಂಹಾಸನದಿಂದ ಕೆಳಗಿಳಿಯುತ್ತಿರಲು, ಹೀರಾದೇವಿಯು ಕರ್ಕಶ ಸ್ವರದಿಂದ–

ಹೀರಾದೇವಿ–ಸುಬೇದಾರಸಾಹೇಬ! ಈ ಎಟ್ಟಿಹುಡುಗನ ಗದ್ದರಿಕೆಗೆ ನೀವು ಇಷ್ಟು ಅಂಜಲಾಗದು! ಅವನು ಹೇಳುವದೆಲ್ಲ ಸುಳ್ಳು. ವಿಮಲದೇವನು ನನಗೆ ವಿರುದ್ಧವಾಗಿ ನಡೆಯನು. ನಾಗರಿಕರು ನನ್ನ ಮೇಲೆ ತಿರುಗಿಬೀಳಲಾರರು. ನೀವು ಸ್ವಸ್ಥವಾಗಿ ಆಸನದಮೇಲೆ ಕುಳಿತುಕೊಳ್ಳಿರಿ.

ಛತ್ರಸಾಲ—(ಮೊದಲಿನಂತೆಯೇ ಶಾಂತಸ್ವರದಿಂದ) ಫಿಯಾದಾಖಾನ ವಿಷಪರೀಕ್ಷೆಯನ್ನು ಮಾಡಬೇಡ. ಒಂದುಕ್ಷಣವೂ ತಡೆಯದೆ ನನ್ನ ಅಧೀನನಾಗು. ಇನ್ನು ಮೇಲೆ ಛತ್ರಸಾಲನು ನಿನ್ನೊಡನೆ ಮಾತಾಡುವದು ಈ ಖಡ್ಗದ ಮುಖಾಂತರವೆಂಬದನ್ನು ಗಟ್ಟಿಮುಟ್ಟಿಯಾಗಿ ತಿಳಿದುಕೋ!

ಮಹಾ ತೇಜಸ್ವಿಯಾದ ಛತ್ರಸಾಲನ ಈ ದರ್ಪೋಕ್ತಿಯನ್ನು ಕೇಳಿ ಫಿಯಾದಾಖಾನನು ತಟ್ಟನೆ ಸಿಂಹಾಸನದಿಂದ ಇಳಿದು, ಛತ್ರಸಾಲನ ಬಳಿಯಲ್ಲಿ ತಲೆಬಾಗಿನಿಂತು, ಅತ್ಯಂತ ವಿನಯದಿಂದ—''ನಾನು ನಿಮ್ಮ ಅಪ್ಪಣೆಯ ಗುಲಾಮನಾಗಿದ್ದೇನೆ. ನನ್ನ ಹೆಂಡಿರುಮಕ್ಕಳ ಕಡೆಗೆ ನನ್ನನ್ನು ಜೀವದಿಂದ ಕಳಿಸುವ ಮೆಹರ್ಬಾನಿಗೆ ಮಾಡಿರಿ''

ಛತ್ರಸಾಲ—ಖಾನ, ನಿನ್ನನ್ನು ಕ್ಷಮಿಸಿದ್ದೇನೆ. ಪ್ರಾಣರಕ್ಷಣದ ವಿಷಯವಾಗಿ ನಿಶ್ಚಿಂತನಾಗಿರು.''

ಈ ಮೇರೆಗೆ ಅಭಯವಿತ್ತು ಬುಂದೇಲಖಂಡದ ಯಾವತ್ತು ಅರಸರನ್ನೂ, ಸರದಾರರನ್ನೂ ಕುರಿತು ವಿನಯದಿಂದ ನುಡಿದನೇನಂದರೆ—''ಬಂಧುಗಳೇ, ನಾನು ನಿಮ್ಮೊಡನೆ ಬಹಳಹೊತ್ತು ಮಾತಾಡಲಿಕ್ಕೆ ಈಗ ಹೊತ್ತು ಇಲ್ಲ. ನಿಮ್ಮೆಲ್ಲರ ಸಹಾಯದಿಂದ ಬುಂದೇಲಖಂಡದ ಸ್ವಾತಂತ್ರ್ಯವನ್ನು ಸಂಪಾದಿಸಬೇಕೆಂದು ಬಂದಿದ್ದೇನೆ. ನನ್ನಿಂದ ಹಾಗು ನಮ್ಮ ಹಿರಿಯರಿಂದ ನಿಮ್ಮ ಮನಸ್ಸು ನೋಯುವಂತಹ ಕೆಲಸವೇನಾದರೂ ಆಗಿದ್ದರೆ, ಆದನ್ನೆಲ್ಲ ಕ್ಷಮಿಸಿ, ನನ್ನನ್ನು ಉಡಿಯಲ್ಲಿ ಹಾಕಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ. ನನ್ನನ್ನು ಕ್ಷಮಿಸುವ ಇಚ್ಛೆಯು ನಿಮಗಿಲ್ಲದಿದ್ದರೆ, ಇಗೋ, ಸ್ವಾತಂತ್ರ್ಯಘಾತಕ ಮೊಗಲರ ಶಾಸನಕ್ಕಾಗಿ ಎತ್ತಿರುವ ಈ ನನ್ನ ಖಡ್ಗವನ್ನು ಮುಂದೆಮಾಡಿದ್ದೇನೆ, ನಿಮ್ಮಲ್ಲಿ ಯಾರಾದರೂ ಮುಂದಾಗಿ ನನ್ನ ಶಿರಸ್ಸನ್ನು ಮೇಲೆ ತುಂಡರಿಸಿ, ಅದೇ ಕೈಯಿಂದ ದೇಶದ ಸ್ವಾತಂತ್ರ್ಯಪ್ರಾಪ್ತಿಗಾಗಿ ಮೊಗಲರ ಮೇಲೆ ದುಮುಕಿರಿ'' ಎಂದು ನುಡಿಯುತ್ತಿರಲು, ಎಲ್ಲ ಅರಸರೂ, ಸರದಾರರೂ ಪಶ್ಚಾತ್ತಾಪದಿಂದ ಛತ್ರಸಾಲನನ್ನು ಕುರಿತು —''ನರವೀರನೇ, ನೀನೂ ಅಪರಾಧಿಯಲ್ಲ, ನಿಮ್ಮ ತಂದೆಯವರೂ ಅಪರಾಧಿಗಳಲ್ಲ, ಸರ್ವಾಪರಾಧವು ನಮ್ಮದಿರುತ್ತದೆ; ಆದ್ದರಿಂದ ನೀನೇ ನಮ್ಮನ್ನು ಕ್ಷಮಿಸು. ನಿನ್ನ ಪವಿತ್ರ ಕಾರ್ಯಕ್ಕೆ ಸಹಾಯ ಮಾಡುವದಕ್ಕಾಗಿ ನಾವು ಯಾವಾಗೋ ಸಿದ್ಧರಾಗಿರುತ್ತೇವೆ.''

ಹೀಗೆ ಛತ್ರಸಾಲನೂ, ದರ್ಬಾರದಜನರೂ ಪಶ್ಚಾತ್ತಾಪದಿಂದ ತಮ್ಮ ಹೃದಯಗಳನ್ನು ಶುದ್ಧಮಾಡಿಕೊಳ್ಳುತ್ತ ಮೈ ಮರೆತಿರಲು, ಅತ್ತ ಹೀರಾದೇವಿಯು ರೊಚ್ಚಿಗೆದ್ದು ತನ್ನ ಖಡ್ಗದಿಂದ ಛತ್ರಸಾಲನ ಶಿರಸ್ಸನ್ನು ತುಂಡರಿಸುವದಕ್ಕಾಗಿ ದುಮುಕಿದಳು. ಆಗ ಎಲ್ಲ ದರ್ಬಾರದವರು ಹಾ ಹಾ ಕಾರ ಮಾಡುತ್ತಿರಲು, ಆಕೆಯ ಖಡ್ಗವೆತ್ತಿದ ಕೈಯನ್ನು ಯಾರೋ ಗಟ್ಟಿಯಾಗಿ ಹಿಡಿದು ಬಿಟ್ಟಿದ್ದರು. ಹೀರಾದೇವಿಯು ಅವಡುಗಚ್ಚಿ ಹಿಂದಿರುಗಿ ನೋಡಲು, ಸಭಾಕರಣನ ಉಗ್ರವಾದ ಮೂರ್ತಿಯು! ಆಗ ಹೀರಾದೇವಿಯ ಸ್ಥಿತಿಯು ಹಾವಿಗೆ ಗರುಡನ ಗೆರೆ ತೋರಿಸಿದಂತಾಯಿತು! ಆಗ ಸಭಾಕರಣನು ಹೀರಾದೇವಿಯನ್ನು ಕುರಿತು ಘುಡಿಘುಡಿಸುತ್ತ — ''ಪಾತಕಿಯಾದ ಸ್ತ್ರೀಯೇ, ನಿನ್ನ ಅಪವಿತ್ರ ಹಸ್ತವನ್ನು ಮುಟ್ಟುವ ನಾನು ದುರ್ಭಾಗ್ಯನೇ ಸರಿ;

ಆದರೆ ಬುಂದೇಲಖಂಡದ ಈ ಅಮೂಲ್ಯ ರತ್ನವನ್ನು ಉಳಿಸಿಕೊಳ್ಳುವದಕ್ಕಾಗಿ ನಾನು ನಿನ್ನ ಕೈಯನ್ನು ಹಿಡಿಯಬೇಕಾಯಿತು! ಒರೆಗಾಣಿಸು,

ನಿನ್ನ ಖಡ್ಗವನ್ನು ಒರೆಗಾಣಿಸಿ, ನನ್ನ ಬಳಿಯಲ್ಲಿ ನಿಂತಿರುವ ಈ ಸ್ತ್ರೀಯು ಯಾರೆಂಬದನ್ನು ಕಣ್ದೆರೆದು ನೋಡಿ ನನಗೆ ಹೇಳು!

ಹೀರಾದೇವಿ —(ಧೈರ್ಯದಿಂದ) ಸಭಾಕರಣ, ಈ ಜನ್ಮದಲ್ಲಿ ನಾನು ಈ ಸ್ತ್ರೀಯನ್ನು ನೋಡಿದ್ದು ಇದೇಮೊದಲು.

ಸಭಾಕರಣ—(ಮತ್ತೆ ಗರ್ಜಿಸಿ) ನೀನು ಹೀಗೆ ಉತ್ತರಕೊಡುವೆಯೆಂದು ನಾನು ಮೊದಲೇ ತರ್ಕಿಸಿದ್ದೆನು. ಇನ್ನು ನಿನ್ನ ನೀಚತನವನ್ನು ಸಾಕುಮಾಡು. ಇನ್ನೊಮ್ಮೆ ಸುಳ್ಳು ಆಡಿದೆಯೆಂದರೆ, ನಿನ್ನ ಕಪಾಳಮೋಕ್ಷವಾಯಿತೆಂದು ತಿಳಿದುಕೋ!

ಸಭಾಕರಣ ಈ ಚಮತ್ಕಾರದ ನಡತೆಯನ್ನು ನೋಡಿ ಸಭಿಕರು ಆಶ್ಚರ್ಯಪಡತೊಡಗಿದರು. ಎಲ್ಲರ ಕಣ್ಣುಗಳು ಸಭಾಕರಣನಲ್ಲಿ, ಹೀರಾದೇವಿಯಲ್ಲಿ ನಟ್ಟುಹೋಗಿದ್ದವು. ಹೀರಾದೇವಿಯು ಬೇಗನೆ ಮಾತಾಡದಿರುವದನ್ನು ನೋಡಿ ಸಭಾಕರಣನು ಅಧಿಕಾರಯುಕ್ತವಾಣಿಯಿಂದ –

ಸಭಾಕರಣ—ಹೀರಾದೇವೀ! ಸುಮ್ಮನಿರಬೇಡ. ಈ ಸ್ತ್ರೀಯಗುರುತು ನಿನಗಿರುವದೋ ಇಲ್ಲವೋ ಬೇಗನೆ ಹೇಳು.

ಹೀರಾದೇವಿ—ಇರುವದು.

ಸಭಾಕರಣ—ಈಕೆಯ ಹೆಸರೇನು?

ಹೀರಾದೇವಿ—ಲಲಿತಾ.

ಸಭಾಕರಣ—ಈಕೆಯು ನನಗೇನಾಗಬೇಕು?

ಹೀರಾದೇವಿ—ಲಲಿತೆಯು ಸಭಾಕರಣನ ತಂಗಿಯು!

ಸಭಾಕರಣ—ಹದಿನಾರುವರ್ಷದ ಹಿಂದೆ ಈಕೆಯು ಬಟವಾನದಿಯಲ್ಲಿ ಮುಳುಗಿದಳೆಂದು ನೀನು ಹೇಳಿದೆಯೋ ಇಲ್ಲವೋ?

ಹೀರಾದೇವಿ — ಹೇಳಿದ್ದೆನು; ಹಾಗೆಹೇಳೆಂದು ಲಲಿತೆಯೇ ಹೇಳಿದ್ದಳು.

ಸಭಾಕರಣ—ಆಕೆಯು ಹಾಗೆ ಯಾಕೆ ಹೇಳಿದಳು?

ಹೀರಾದೇವಿ—ಕೆಲವೊಂದು ಕಾರಣದಿಂದ ಲಲಿತೆಯು ಬುಂದೇಲಖಂಡವನ್ನು ಬಿಟ್ಟು ಹೋಗಬೇಕಾಯಿತು. ಹೀಗೆ ಅಕಸ್ಮಾತ್ ತಾನು ಇಲ್ಲದಂತಾದರೆ, ಜನರು ತನ್ನ ವಿಷಯವಾಗಿ ಇಲ್ಲದ ಕುತರ್ಕಮಾಡಿ, ಅದರಿಂದ ತನ್ನ ಮನೆತನಕ್ಕೆ ಕಲಂಕ ಉಂಟಾದೀತೆಂದು ನನಗೆ ಹಾಗೆ ಹೇಳಬೇಕೆಂದು ಹೇಳಿದಳು; ಮತ್ತು ತನ್ನ ಸೀರೆಯನ್ನೂ, ಅಲಂಕಾರಗಳನ್ನೂ, ತಾನೇ ಕೊಟ್ಟಳು.

ಸಭಾಕರಣ—ಲಲಿತೆಯ ಹೆಣವೆಂದು ನೀನು ನನಗೆ ತೋರಿಸಿದ ಹೆಣವು ಯಾರದು?

ಹೀರಾದೇವಿ—ನನ್ನ ದಾಸಿಯದು.

ಸಭಾಕರಣ—ಲಲಿತೆಯು ಬುಂದೇಲಖಂಡದಿಂದ ಯಾಕೆ ಹೊರಟು ಹೋದಳು?

ಹೀರಾದೇವಿ—ಶಹಾಜಾದಾ ಔರಂಗಜೇಬನ ಮೇಲೆ ಈಕೆಯ ಪ್ರೀತಿಯು ಕುಳಿತದ್ದರಿಂದ ಹೊರಟುಹೋದಳು.

ಹೀರಾದೇವಿಯ ಈ ಮಾತುಗಳನ್ನು ಕೇಳಿದಕೂಡಲೆ ಲಲತೆಯು ಮುಂದಕ್ಕೆ ಬಂದು ಆವೇಶದಿಂದ—''ಹೀರಾದೇವೀ, ಸುಳ್ಳುಹೇಳಬೇಡ. ನನ್ನ ಪ್ರೇಮವು ಕುಳಿತಿರುವ ತರುಣನು ಓರಛಾದ ದರ್ಬಾರದ ಬುಂದೇಲಿ ಸರದಾರನೆಂದು ನೀನು ಹೇಳಲಿಲ್ಲವೆ? ಶಹಾಜಾದಾ ಔರಂಗಜೇಬನ ಸುದ್ದಿಯು ಕೂಡ ನನಗೆ ಗೊತ್ತು ಇದ್ದಿಲ್ಲ. ಈತನು ಕುಲೀನನಾದ ಬುಂದೇಲಿ ಸರದಾರನಿರುವೆನೆಂತಲೂ, ನಿನ್ನ ಪಾಣಿಗ್ರಹಣಕ್ಕೆ ಎಲ್ಲ ಬಗೆಯಿಂದ ಯೋಗ್ಯನಾಗಿರುವ ನೆಂತಲೂ ನೀನೇ ಹೇಳಲಿಲ್ಲವೆ? ನಿನ್ನ ಈ ಮೋಸದ ಮಾತನ್ನು ನಂಬಿಯೇ ನಾನು ಆತನಲ್ಲಿ ಅನುರಕ್ತಳಾದೆನಲ್ಲವೆ?

ಲಲಿತೆಯ ಈ ಪ್ರಶ್ನೆಗಳಿಗೆ ಉತ್ತರಕೊಡುವದಕ್ಕೆ ಹೀರಾದೇವಿಯು ಹಿಂದೆಮುಂದೆ ನೋಡುತ್ತಿರಲು, ಸಭಾಕರಣನು ಸಿಟ್ಟಿನಿಂದ —''ಹೀರಾದೇವಿ, ಮುಚ್ಚುಮರೆ ನಡೆಯಲಿಕ್ಕಿಲ್ಲ. ಸ್ಪಷ್ಟವಾಗಿ ಉತ್ತರವನ್ನು ಕೊಡು. ಲಲಿತೆಯ ಪರಿಶುದ್ಧತೆಯೂ, ನಿನ್ನ ನೀಚತನವೂ ನನಗೆ ಗೊತ್ತಾಗಬೇಕಾಗಿದೆ. ನಿನ್ನ ಮೋಸದ ಉತ್ತೇಜನದಿಂದಲೇ ಲಲಿತೆಯು ಔರಂಗಜೇಬನ ಹೆಂಡತಿಯಾದದ್ದು ನಿಜವೋ ಸುಳ್ಳೋ?

ಹೀರಾದೇವಿ—(ಭಯದಿಂದ) ಹೌದು! ಲಲಿತೆಯು ಔರಂಗಜೇಬನಿಗೆ ಪೂರ್ಣವಾಗಿ ತನ್ನ ಪ್ರೇಮವನ್ನು ಅರ್ಪಿಸುವವರೆಗೆ, ತ್ರಿಕರಣಪೂರ್ವಕವಾಗಿ ಆತನ ಹೆಂಡತಿಯಾಗುವವರೆಗೆ ನಾನು ಔರಂಗಜೇಬನ ಗುರುತನ್ನು ಆಕೆಗೆ ಹತ್ತಗೊಡಲಿಲ್ಲ! ಆತನು ರಜಪೂತ ಸರದಾರನೆಂತಲೇ ಹೇಳಿದೆನು ಇನ್ನು ಸುಳ್ಳುಹೇಳಿ ಆಗುವದೇನು?

ಹೀರಾದೇವಿಯ ಈ ಮಾತುಗಳನ್ನು ಕೇಳಿ ಸಭಾಕರಣನು ಕ್ಷಣ ಮಾತ್ರ ಸ್ತಬ್ಧನಾದನು. ಆತನ ಮುಖವು ನೂತನ ಕಳೆಯಿಂದ ಪ್ರಕಾಶಿತವಾಯಿತು. ಆತನು ವಾತ್ಸಲ್ಯದಿಂದ ಲಲಿತೆಯ ಹೆಗಲ ಮೇಲೆ ಕೈಯಿಟ್ಟು—''ಲಲಿತೇ, ಸತೀಧರ್ಮಕ್ಕೆ ಯೋಗ್ಯವಾದದ್ದನ್ನೇ ನೀನು ಮಾಡಿದೆ! ಔರಂಗಜೇಬನ ಹೆಂಡತಿಯಾದದ್ದಕ್ಕಾಗಿ ನನಗೆ ಸಿಟ್ಟು ಇಲ್ಲ, ಸಭಾಕರಣನ ತಂಗಿಯೆನಿಸಿ ಕೊಳ್ಳಲಿಕ್ಕೆ ಲಲಿತೆಯು ಇನ್ನೂ ಪಾತ್ರಳಿರುವಳು. ಹೀರಾದೇವೀ, ಇನ್ನೊಂದು ಪ್ರಶ್ನದ ಉತ್ತರವನ್ನು ಕೊಡು. ಚಂಪತರಾಯನು ಲಲಿತೆಯ ಕೌಮಾರ್ಯವನ್ನು ಭ್ರಷ್ಟಮಾಡಿದನೆಂದು ನೀನು ಹೇಳಿದ್ದು ನಿಜವೋ ಸುಳ್ಳೋ?

ಹೀರಾದೇವಿ—(ನಿರ್ಭಯದಿಂದ) ಸುಳ್ಳು. ನಿಮ್ಮನ್ನು ನನ್ನ ಪಕ್ಷಕ್ಕೆ ಎಳೆದುಕೊಳ್ಳ ಬೇಕೆಂದು ನಾನು ಹಾಗೆ ಹೇಳಿದೆನು.

ಹೀರಾದೇವಿಯ ಈ ಉತ್ತರವನ್ನು ಕೇಳಿ ಸಭಾಕರಣನು ಸಭಿಕರನ್ನು ಕುರಿತು— ''ಬುಂದೇಲಖಂಡದ ಯಾವತ್ತು ಅರಸರೇ, ಸರದಾರರೇ, ನನ್ನ ಪ್ರತಿಜ್ಞೆಯ ಕಾರಣವು ಸುಳ್ಳು ಇರುವದೆಂದು ನಿಮ್ಮ ಸಮಕ್ಷಮ ಹೀರಾದೇವಿಯು ಹೇಳುವದರಿಂದ, ನಾನು ಮಾಡಿದ ಪ್ರತಿಜ್ಞೆ ಗಾಗಿ ಪಶ್ಚಾತ್ತಾಪಪಟ್ಟು, ಆ ಘೋರ ಪ್ರತಿಜ್ಞೆಯ ಮೂಲಕ ನನ್ನಿಂದಾದ ಸ್ವದೇಶದ ಹಾನಿಗಾಗಿ ದುಃಖ ಪಡುತ್ತೇನೆ. ಮತ್ತು ನಿಮ್ಮೆಲ್ಲರ ಸಮಕ್ಷಮ ಈಗ ಪ್ರತಿಜ್ಞೆಯಿಂದ ಮುಕ್ತನಾಗಿ, ಸ್ವಾತಂತ್ರ್ಯಕ್ಕಾಗಿ ಶಸ್ತ್ರಹಿಡಿಯಬೇಕೆಂದು ನಿಶ್ಚಯಿಸಿರುತ್ತೇನೆ. ಇದು ನಿಮಗೆ ಸಮ್ಮತವೋ

ಅಸಮ್ಮತವೋ?'' ಎಂದು ಕೇಳಲು, ಎಲ್ಲ ಸಭೆಯು ಒಂದೇ ಧ್ವನಿಯಿಂದ—''ಸಮ್ಮತವು, ಪರಮ ಸಮ್ಮತವು!'' ಎಂದು ಉತ್ತರ ಕೊಟ್ಟಿತು! ಅದನ್ನು ಕೇಳಿ ಸಭಾಕರಣನು – ಹಾಗಾದರೆ ಇನ್ನು ವ್ಯರ್ಥ ಮಾತುಗಳೇಕೆ? ಏಳಿರಿ. ವಿಮಲದೇವನೂ, ಚಾಮುಂಡರಾಯನೂ, ದಳಪತ ರಾಯನೂ ಯವನರೊಡನೆ ಕಾದುತ್ತಿರಲು, ನಾವು ಹೀಗೆ ಸುಮ್ಮನೆ ಮಾತಾಡುತ್ತ ಕುಳಿತು ಕೊಳ್ಳುವದು ಯೋಗ್ಯವಲ್ಲ. ಕುಮಾರ ಛತ್ರಸಾಲ! ನೀನು ಬುಂದೇಲಖಂಡದ ವೀರ ಮೂರ್ತಿಯು, ಸದ್ಗುಣದ ಖಣಿಯು, ಶಾಂತಿಯ ನಿಧಿಯು, ನಮ್ಮ ಪೂರ್ವಪುಣ್ಯದಿಂದ ದೊರೆತ ದೈವೀ ಸಂಪತ್ತು! ನಡೆ, ಮುಂದಾಗು. ನಮ್ಮಂತಹ ದೇಶದ್ರೋಹಿಗಳನ್ನು ನಿನ್ನ ಕ್ಷಾತ್ರ ತೇಜದಿಂದ ಬೆಳಗಿಸಿ ನಮ್ಮನ್ನು ಪುನೀತರಾಗಮಾಡು'' ಎಂದು ನುಡಿಯುತ್ತಿರಲು ಎಲ್ಲರ ಶಸ್ತ್ರಗಳು ಒರೆಗಳಿಂದ ಹೊರಬೀಳುತ್ತಿರುವಾಗ, ಎಲ್ಲರೂ ಶ್ರೀ ಚತುರ್ಭುಜನ ಮಂದಿರದ ಕಡೆಗೆ ಸಾಗಿದರು!

## ಸ್ವಾತಂತ್ರ್ಯಪ್ರಾಪ್ತಿ!

ಓರಛಾದ ಯುದ್ಧದಲ್ಲಿ ಛತ್ರಸಾಲನು ಜಯಶಾಲಿಯಾದನು. ಓರಛಾದ ಅರಮನೆಯ ಮೇಲೆಯೂ, ಮಹಾದ್ವಾರದ ಮೇಲೆಯೂ ಸ್ವಾತಂತ್ರ್ಯದ ನಿಶಾನೆಯು ಮೆರೆಯಹತ್ತಿತು. ಚತುರ್ಭುಜ ಪರಮಾತ್ಮನ ಮಂದಿರದ ಸಂರಕ್ಷಣಮಾಡಿ, ಬುಂದೇಲಖಂಡಕ್ಕೆ ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟದ್ದರಿಂದ, ಬುಂದೇಲಖಂಡದವರಿಗೆ ಛತ್ರಸಾಲನು ಅವತಾರೀ ಪುರುಷನಾಗಿ ತೋರಹತ್ತಿದನು. ಆತನ ಅಪ್ಪಣೆಯನ್ನು ಬುಂದೇಲಖಂಡವು ತಲೆಯಲ್ಲಿ ಹೊತ್ತು ಮನ್ನಿಸಹತ್ತಿತು. ಸ್ವಾತಂತ್ರ್ಯಕ್ಕಾಗಿ ತ್ರಿಕರಣಪೂರ್ವಕ ಯತ್ನಿಸುವದಕ್ಕಾಗಿ ಬುಂದೇಲಖಂಡವು ಟೊಂಕಕಟ್ಟಿತು. ಸುಬೇದಾರರ ಫಿಯಾದಾಖಾನನು ಹುಲ್ಲುಕಡ್ಡಿ ಕಚ್ಚಿ ಜೀವದಾನವನ್ನು ಬೇಡಿಕೊಂಡನೆಂಬ ಸುದ್ದಿಯು ಅಲ್ಲಲ್ಲಿ ಬುಂದೇಲಖಂಡದೊಳಗೆ ಪಸರಿಸಿದ್ದ ಮುಸಲ್ಮಾನರಿಗೆ ಗೊತ್ತಾಗಲು, ತಾವು ಇನ್ನು ದಿಲ್ಲಿಯ ಹಾದಿಯನ್ನು ಹಿಡಿಯದಿದ್ದರೆ ಗತಿಗಾಣೆವೆಂದು ತಿಳಿದು ಅವರು ಗುಳೆಕಟ್ಟಿದರು! ಛತ್ರಸಾಲನು ಸ್ವಾತಂತ್ರ್ಯವನ್ನು ಸಂಪಾದಿಸುವದಕ್ಕಾಗಿ ಓರಛಾದಲ್ಲಿ ಯತ್ನಿಸುತ್ತಿರುವನೆಂಬ ಸುದ್ದಿಯು ಬುಂದೇಲಖಂಡದಲ್ಲೆಲ್ಲ ಹಬ್ಬಲು, ಸ್ವಾತಂತ್ರ್ಯಕ್ಕಾಗಿ ಶಸ್ತ್ರಗಳನ್ನು ಝುಳಪಿಸಲು ಬುಂದೇಲಖಂಡದ ತರುಣರೆಲ್ಲ ಗುಂಪುಗುಂಪಾಗಿ ಓರಛಾದ ಕಡೆಗೆ ಸಾಗಿಬರತೊಡಗಿದರು. ಶುಕ್ಲ ಪಕ್ಷದ ಚಂದ್ರನಂತೆ ಛತ್ರಸಾಲನ ಸಾಮರ್ಥ್ಯವು ದಿನದಿನಕ್ಕೆ ಹೆಚ್ಚಹತ್ತಿತು!

ಚತುರ್ಭುಜ ಪರಮಾತ್ಮನ ಮಂದಿರವನ್ನು ಸಂರಕ್ಷಿಸುವದಕ್ಕಾಗಿ ಹೂಡಿದ ಯುದ್ಧದಲ್ಲಿ ಸಭಾಕರಣನೂ, ದಳಪತನೂ ತೋರಿಸಿದ ಪರಾಕ್ರಮವು, ಆಕಾಶದಿಂದ ದೇವತೆಗಳು ಹೂಮಳೆ ಸುರಿಸುವಂತಹದಾಗಿತ್ತು. ಆಜನ್ಮ ಪುರುಷವೇಷವನ್ನು ಧರಿಸಿದ್ದ ವಿಮಲದೇವನು ಅಂದಿನ ಯುದ್ಧದಲ್ಲಿ ತೋರಿಸಿದ ಪರಾಕ್ರಮವು ಆಶ್ಚರ್ಯಪಡತಕ್ಕಂತಹದೇ ಇದ್ದಿತು. ಅದನ್ನು ನೋಡಿ ಸಭಾಕರಣನು ಅಭಿಮಾನಪಟ್ಟನು. ಪ್ರಾಣನಾಥ ಪ್ರಭುಗಳಿಗೂ, ಛತ್ರಸಾಲನಿಗೂ ತಮ್ಮ

ಕಲ್ಪನೆಗಿಂತ ಹೆಚ್ಚು ಯಶಸ್ಸು ದೊರೆತದ್ದರಿಂದ ಬಹಳ ಸಮಾಧಾನವಾಗಿತ್ತು, ಬುಂದೇಲಿಗಳ ಸ್ವಾಭಾವಿಕವಾದ ಉದಾರ ಮನೋವೃತ್ತಿಗಳು ಪೂರ್ಣ ಜಾಗ್ರತವಾದವು. ಬರಬರುತ್ತಾ ಛತ್ರಸಾಲನ ಸಾಮರ್ಥ್ಯವು ಹೆಚ್ಚುತ್ತ ಹೋಗಿ, ಆತನಿಗೆ ಓರಛಾದಲ್ಲಿರುವದು ಅಶಕ್ಯವಾಗ ತೊಡಗಿತು. ಓರಛಾದ ಕೋಟೆಯು ಯುದ್ಧಕ್ಕೆ ಅಷ್ಟು ಅನುಕೂಲವಾದದ್ದಿದ್ದಿಲ್ಲ, ಆದ್ದರಿಂದ ಛತ್ರಸಾಲನು ಪ್ರಾಣನಾಥ ಪ್ರಭುಗಳ, ಹಾಗೂ ಸಭಾಕರಣನ ವಿಚಾರದಿಂದ ಬೇಗನೆ ಗಡಕೋಟದ ಕೋಟೆಯನ್ನು ಯಾವತ್ತು ಸೈನ್ಯದ ಚಲನವಲನದ ಕೇಂದ್ರಸ್ಥಾನವನ್ನಾಗಿ ಮಾಡಿದನು. ಚಾವುಂಡರಾಯನು ಓರಛಾವನ್ನು ರಕ್ಷಿಸಹತ್ತಿದನು. ಹೀರಾದೇವಿಯು ಮುಲಾಖತ ದಿವಾಣ ಖಾನೆಯಿಂದ ಎತ್ತಕಡೆಗೆ ಹೊರಟು ಹೋದಳೆಂಬದು ಯಾರಿಗೂ ಗೊತ್ತಾಗಲಿಲ್ಲ, ಅರ್ಧಗಂಡಸಿನ ವೇಷದ ಒಬ್ಬ ಹುಚ್ಚಹೆಂಗಸು ದಿಲ್ಲಿಯ ಹಾದಿಹಿಡಿದು ಹೋಗುತ್ತಿದ್ದಳೆಂದು ಜನರು ಹೇಳಿದರು; ಆದರೆ ಆಕೆಯು ಹೀರಾದೇವಿಯೇ ಎಂಬ ನಂಬಿಗೆ ಯಾಗಲಿಲ್ಲ.

ಛತ್ರಸಾಲನು ಗಡಕೋಟವೆಂಬ ಕೋಟೆಯನ್ನು ತನ್ನ ಸೈನ್ಯದಮುಖ್ಯ ಠಾಣೆಯನ್ನು ಮಾಡಿ ಸ್ವಲ್ಪ ಸೈನ್ಯದೊಡನೆ ಧಾರೀರಕ್ಕೆ ಹೊರಟನು. ಆಗ ಸಭಾಕರಣನೂ, ದಳಪತರಾಯನೂ ಸಾಗರಸಂಸ್ಥಾನಕ್ಕೆ ಬರಬೇಕೆಂದು ಛತ್ರಸಾಲನಿಗೆ ಹೇಳಿದರು; ಆದರೆ ಮೊದಲು ಸುಫಲಾ ದೇವಿಯನ್ನು ಕಾಣುವದು ಅವಶ್ಯವೆಂದು ಪ್ರಾಣನಾಥ ಪ್ರಭುಗಳು ಹೇಳಿದ್ದರಿಂದ, ಧಾರೀರಕ್ಕೆ ಹೋಗಬೇಕಾಯಿತು. ಪ್ರಾಣನಾಥ ಪ್ರಭುಗಳ ಇಚ್ಛೆಯಂತೆ ಛತ್ರಸಾಲನು ಹೆಚ್ಚು ಸೈನ್ಯವನ್ನು ಸಂಗಡ ತೆಗೆದುಕೊಂಡು, ಸಕಲಸನ್ನಾಹದೊಡನೆ ಧಾರೀರದ ಕಡೆಗೆ ಸಾಗಿದನು. ಧಾರೀರವು ಇನ್ನು ಒಂದು ದಿವಸದ ಹಾದಿಯಲ್ಲಿರುವಾಗ, ಆ ರಾಜಧಾನಿಯಲ್ಲಿ ಕಂಚುಕಿರಾಯನ ಸ್ಥಿತಿಯು ಬಹಳ ಶೋಚನೀಯವಾಗಿತ್ತು, ರಣದುಲ್ಲಾಖಾನನೊಡನೆ ಲಗ್ನವಾದ ತರುಣೆಯು ವಿಜಯೆಯ ದಾಸಿಯಾಗಿದ್ದು, ನಿಜವಾದ ವಿಜಯೆಯ ವಿವಾಹವು ಓರಛಾದ ವಿಮಲ ದೇವನೊಡನೆ ಈ ಮೊದಲೆ ಆಗಿಹೋಗಿರುವದೆಂಬ ಸುದ್ದಿಯು ರಣದುಲ್ಲಾಖಾನನಿಗೆ ಗೊತ್ತಾದದ್ದರಿಂದ, ಆತನು ಕಂಚುಕಿರಾಯನ ಮೇಲೆ ಸಿಟ್ಟು ಬೆಂಕಿಯಾಗಿದ್ದನು. ಖಾನನಿಗೆ ವಿಜಯೆಯ ಅಷ್ಟು ಅವಶ್ಯಕತೆಯು ಇದ್ದಿಲ್ಲ, ಧಾರೀರದ ರಾಜ್ಯದ ಆಶೆಯಿಂದ ಆತನು ವಿಜಯೆಯನ್ನು ಲಗ್ನವಾಗಲು ಇಚ್ಛಿಸುತ್ತಿದ್ದನು; ಆದ್ದರಿಂದ ಆತನು ಕಂಚುಕಿರಾಯನಿಗೆ—''ನೀನು ದಾಸಿಯೊಡದೆ ನನ್ನ ಲಗ್ನಮಾಡಿ ನನ್ನ ಅಪಮಾನ ಮಾಡಿರುತ್ತೀ; ಆದ್ದರಿಂದ ಈ ತಪ್ಪಿಗಾಗಿ ನನಗೆ ಧಾರೀರದ ರಾಜ್ಯವನ್ನು ಒಪ್ಪಿಸು, ಇಲ್ಲದಿದ್ದರೆ ನಿನ್ನ ಪ್ರಾಣಹರಣ ಮಾಡುವೆನು'' ಎಂದು ಹೇಳಿ ಕಳಿಸಿದನು. ಇದರಿಂದ ಹೇಡಿಯಾದ ವೃದ್ಧ ಕಂಚುಕಿರಾಯನು ಅಂಜಿ ಅಳಹತ್ತಿದನು. ಆತನಿಗೆ ತನ್ನ ಪ್ರಾಣಕ್ಕಿಂತಲೂ ರಾಜ್ಯವು ಪ್ರೀಯವಾಗಿತ್ತು; ರಾಜ್ಯಕ್ಕಿಂತಲೂ ಪ್ರಾಣವು ಪ್ರೀಯವಾಗಿತ್ತು, ಈ ಸಂಕಟದಲ್ಲಿ ಆತನು ದುಃಖಿಸುತ್ತ—''ಈ ಪ್ರಸಂಗದಲ್ಲಿ ನನ್ನನ್ನು ಯಾರು ರಕ್ಷಿಸುವರು'' ಎಂದು ಗೋಳಾಡುತ್ತಿರಲು, ಸುಫಲಾದೇವಿಯು ಅಲ್ಲಿಗೆ ಬಂದು, ''ಚಂಪತರಾಯನ ಮಗನಾದ ಸ್ವಾತಂತ್ರ್ಯಪ್ರಿಯ ಕುಮಾರ ಛತ್ರಸಾಲನೇ

ನಿಮ್ಮನ್ನು ರಕ್ಷಿಸುವನು'' ಎಂದು ನುಡಿಯುತ್ತಿರುವಾಗ, ಕಂಚುಕಿರಾಯನು ಮುಖವೆತ್ತಿ ನೋಡಲು, ಛತ್ರಸಾಲನು ಎದುರಿಗೆ ನಿಂತುಕೊಂಡಿದ್ದನು. ಈ ಪ್ರಸಂಗದಲ್ಲಿ ನಾನು ಛತ್ರಸಾಲನಿಗೆ ಶರಣುಹೋಗದೆ ಗತಿಗಾಣೆನೆಂದು ತಿಳಿದು, ಕಂಚುಕಿರಾಯನು ಛತ್ರಸಾಲನ ಚರಣಗಳಿಗೆ ನಮಸ್ಕರಿಸಹೋದನು. ಆಗ ಪ್ರಾಣನಾಥ ಪ್ರಭುಗಳು —''ರಾಜಾ, ನಿನ್ನ ಅಳಿಯನಿಗೇ ನೀನು ನಮಸ್ಕಾರಮಾಡುವದು ಧರ್ಮವಲ್ಲ'' ಎಂದು ಹೇಳಿದರು. ಕಂಚುಕಿರಾಯನು ಛತ್ರಸಾಲನನ್ನು ತನ್ನ ಬಳಿಯಲ್ಲಿ ಸಿಂಹಾಸನದ ಮೇಲೆ ಕುಳ್ಳಿರಿಸಿಕೊಂಡನು. ಪ್ರಾಣನಾಥ ಪ್ರಭುಗಳು ಉಚ್ಚಾಸನದಲ್ಲಿ ಕುಳಿತುಕೊಂಡರು. ಪ್ರಧಾನ ಸಜ್ಜನರಾಯನು ಅಕಸ್ಮಾತ್ತಾಗಿ ದರ್ಬಾರಕ್ಕೆ ಬಂದನು. ಆತನ ಅಪ್ಪಣೆಯಂತೆ ದರ್ಬಾರದ ಎಲ್ಲ ಕಾರ್ಯಗಳು ನಡೆಯುತ್ತಲಿದ್ದವು. ನಾಲ್ಕುಜನ ಗೋಷೆಯ ಸ್ತ್ರೀಯರು ಸುಫಲಾದೇವಿಯೊಡನೆ ಪರದೆಯ ಹಿಂದೆ ಕುಳಿತುಕೊಂಡಿದ್ದರು.

ರಣದುಲ್ಲಾಖಾನನನ್ನು ಇಬ್ಬರು ಸಶಸ್ತ್ರ ಸೈನಿಕರ ವಶಕ್ಕೆ ಒಪ್ಪಿಸಿ, ಸಜ್ಜನರಾಯನು ಪ್ರಾಣನಾಥ ಪ್ರಭುಗಳನ್ನು ಕುರಿತು ನುಡಿದನೇನಂದರೆ–ಪ್ರಭೋ, ಹೋದವರ್ಷ ವಿಂಧ್ಯವಾಸಿನಿಯ ಮಹೋತ್ಸವದಲ್ಲಿ ವಿಜಯೆಯೂ, ವಿಮಲದೇವನೂ ಮಾಡಿದ ಮಾಲೆಯನ್ನು ಅವರು ವಿಂಧ್ಯವಾಸಿನಿಯ ಕೊರಳಿಗೆ ಹಾಕುತ್ತಿರುವಾಗ, ಅದು ಛತ್ರಸಾಲನ ಕೊರಳಿಗೆ ಬಿದ್ದಿತಷ್ಟೆ? ದೇವಿಯ ಈ ಸಂಕೇತದಂತೆ ಶಕ್ಯವಿದ್ದಮಟ್ಟಿಗೆ ನಡೆಯಬೇಕೆಂದು ತಿಳಿದು ರಾಣೀ ಸುಫಲಾದೇವಿಯವರು ವಿಜಯೆಯನ್ನು ಛತ್ರಸಾಲನಿಗೆ ಲಗ್ನಮಾಡಬೇಕೆಂದು, ಮಾತಾ ಸರಲಾದೇವಿಯವರೊಡನೆ ಆಲೋಚಿಸಿ ನಿಶ್ಚಯಿಸಿರುತ್ತಾರೆ. ಅದಕ್ಕಾಗಿ ತಮ್ಮ ಒಪ್ಪಿಗೆ ಕೇಳಬೇಕೆಂದು ರಾಣಿಯವರು ನನ್ನನ್ನು ಆಜ್ಞಾಪಿಸಿರುವರು. ವಿವಾಹ ಸಮಾರಂಭವು ಬೇಗನೆ ಪೂರ್ಣವಾಗಬೇಕೆಂದು ಅವರು ಇಚ್ಛಿಸುತ್ತಿರುವರು.

ಪ್ರಭುಗಳು—ರಾಜಾ ಕಂಚುಕಿರಾಯ, ಸುಫಲಾದೇವಿಯ ವಿನಂತಿಯು ನಿನಗೆ ಮಾನ್ಯವಿದೆಯೆ? ಛತ್ರಸಾಲನು ನಿನ್ನ ಅಳಿಯನಾಗಬೇಕೆಂಬ ಇಚ್ಛೆಯು ನಿನಗಿರುವದೆಯೋ?

ಕಂಚುಕಿರಾಯ—ಪ್ರಭೋ, ನಾನು ಈ ವಿನಂತಿಯನ್ನು ಸಂತೋಷದಿಂದ ಮನ್ನಿಸುತ್ತಿದ್ದೇನು; ಆದರೆ ವಿಜಯೆಯ ವಿವಾಹವು ವಿಮಲದೇವನೊಡನೆ ಈ ಮೊದಲೆ ಆಗಿಹೋಗಿರುವದಲ್ಲ! ಅದಕ್ಕೆ ಉಪಾಯವೇನಿರುವದು? ತಿರುಗಿ ಲಗ್ನವಾಗುವದು ಅಶಕ್ಯವು,–

ಪ್ರಭು—ಹಾಗೆ ತಿಳಿಯಬೇಡ. ವಿಮಲದೇವನೊಡನೆ ಆದ ವಿಜಯೆಯ ಲಗ್ನವು ಕೇವಲ ವ್ಯರ್ಥವಾದದ್ದು. ವಿಮಲದೇವನು ಪುರುಷನಾಗಿರದೆ, ವಿಜಯೆಯಂತೆಯೇ ಆತನೊಬ್ಬ ಸ್ತ್ರೀಯಾಗಿರುವನು; ಅಂದಬಳಿಕ ಇಬ್ಬರು ಸ್ತ್ರೀಯರ ವಿವಾಹವು ಹೇಗೆ ಶಕ್ಯವಾಗುವದು?

ಕಂಚುಕಿರಾಯ—(ಆನಂದದಿಂದ) ನಾನು ಪ್ರಭುಗಳ ಇಚ್ಛೆಗೆ ಹೊರತಾದವನಲ್ಲ, ಪ್ರಭುಗಳ ಮನಸ್ಸಿಗೆ ಬಂದಂತೆ ಮಾಡಬಹುದು. ನನ್ನ ಪ್ರಾಣವೂ ರಾಜ್ಯವೂ ರಣದುಲ್ಲಾಖಾನನ ದವಡೆಯೊಳಗಿಂದ ಪಾರಾದರೆ ಸಾಕು!

ಪ್ರಭು—ಅದರ ವ್ಯವಸ್ಥೆಯು ಸಂಪೂರ್ಣವಾಗಿ ಆಗಿಹೋಗಿದೆ. ಅದರ ಚಿಂತೆಯು ನಿನಗೆ ಬೇಡ.

ಈ ಮೇರೆಗೆ ನುಡಿದು ಪ್ರಭುಗಳು ವಿಜಯೆಯನ್ನು ಕರೆದರು. ಆಗ ವಿಜಯೆಯು ತಾನೊಬ್ಬಳೇ ಬಾರದೆ ಮತ್ತೊಬ್ಬ ಸುಂದರ ತುರಣೆಯನ್ನು ಸಂಗಡ ಕರೆದುಕೊಂಡುಬಂದಳು. ಎಲ್ಲರು ವಿಜಯೆಯನ್ನು ಗುರುತಿಸಿದರು; ಆದರೆ ಆಕೆಯ ಸಂಗಡ ಬಂದಿದ್ದ ಇನ್ನೊಬ್ಬ ತರುಣಿಯ ಗುರುತು ಸಭಾಕರಣ, ದಳಪತರಾಯ, ಛತ್ರಸಾಲ ಈ ಮೂವರ ಹೊರತು ಬೇರೆ ಯಾವ ಗಂಡಸರಿಗೂ ಹತ್ತಲಿಲ್ಲ. ಅದನ್ನು ನೋಡಿ ಪ್ರಭುಗಳು ವಿಜಯೆಯನ್ನು ಕುರಿತು –

ಪ್ರಭು—ವಿಜಯೇ, ನಾನು ನಿನ್ನೊಬ್ಬಳನ್ನು ಕರೆದಿರಲು, ಸಂಗಡ ಈ ಬಾಲೆಯನ್ನೇಕೆ ಕರೆದುಕೊಂಡು ಬಂದೆ?

ವಿಜಯೆ—ದೇವೀ ವಿಂಧ್ಯವಾಸಿನಿಯು ನಮ್ಮಿಬ್ಬರ ಮೇಲೆಯೂ ಅನುಗ್ರಹ ಮಾಡಿರುತ್ತಾಳೆ; ಆದ್ದರಿಂದ ಆ ಅನುಗ್ರಹದ ಲಾಭವು ನಮ್ಮಿಬ್ಬರಿಗಾಗಿ ದೊರೆಯಬೇಕೆಂದು ಇಚ್ಛಿಸುತ್ತೇನೆ.

ಪ್ರಭು—ಅಂದರೆ? ಇದೇ ಬಾಲೇಯೇ ವಿಮಲದೇವನೆಂಬ ಹೆಸರಿನಿಂದ ಗಂಡಸಾಗಿ ವ್ಯವಹರಿಸುತ್ತಿದ್ದಳೇನು?

ವಿಜಯೆ—ಹೌದು.

ಪ್ರಭು—ಪಹಾರಸಿಂಗನ ಮಗಳಿಗೂ, ಛತ್ರಸಾಲನಿಗೂ ಲಗ್ನವು ಹೇಗಾಗಬೇಕು? ವಿಮಲೆಯು ಛತ್ರಸಾಲನಿಗೆ ಕಕ್ಕನ ಮಗಳಾಗಬೇಕಾಯಿತಲ್ಲವೆ?

ಸಭಾಕರಣ—(ಅವಸರದಿಂದ ಎದ್ದುನಿಂತು) ಈ ವಿಮಲೆಯು ಪಹಾರಸಿಂಗನ ಮಗಳಲ್ಲ, ನನ್ನ ಮಗಳು.

ಸಭಾಕರಣ ಈ ಮಾತುಗಳನ್ನು ಕೇಳಿ ಎಲ್ಲರೂ ಆಶ್ಚರ್ಯಪಟ್ಟರು. ಆಗ ಸಭಾಕರಣನು – ಹೀರಾದೇವಿಯು ತನ್ನ ಹೊಟ್ಟೆಯಲ್ಲಿ ಮಕ್ಕಳಿಲ್ಲದ್ದರಿಂದ ತಮ್ಮಪಶ್ಚಾತ್ ತಮ್ಮ ಸಿಂಹಾಸನವು ಛತ್ರಸಾಲನಿಗೆ ಅಥವಾ ಮಹೋಬದ ಅರಸುಮನೆತನದವರಿಗೆ ಆಗುವದೆಂಬ ಹೊಟ್ಟೆ ಕಿಚ್ಚಿನಿಂದ ನಾಲ್ಕುಜನ ಬಸಿರು ಹೆಂಗಸರನ್ನು ಅರಮನೆಯಲ್ಲಿ ಗುಪ್ತವಾಗಿ ಇರಿಸಿಕೊಂಡು, ತಾನು ಗರ್ಭಿಣಿಯಿರುವೆನೆಂದು ಸುದ್ದಿಯನ್ನು ಹುಟ್ಟಿಸಿದಳು. ಆ ನಾಲ್ವರಲ್ಲಿ ನನ್ನ ಹೆಂಡತಿಯು ಒಬ್ಬಳಿದ್ದಳು. ಮೂವರು ಹೆಂಗಸರೂ ಹೆಣ್ಣುಹಡೆಯಲು, ಹೀರಾದೇವಿಯು ನಿರಾಶೆಪಟ್ಟು ನನ್ನ ಹೆಂಡತಿಯಾದರೂ ಗಂಡುಹಡೆಯುವಳೇನೋ ಎಂಬ ಹಾದಿಯನ್ನು ನೋಡಹತ್ತಿದಳು. ಕಡೆಗೆ ದುರ್ದೈವದಿಂದ ಆಕೆಯೂ ಹೆಣ್ಣೇಹಡೆದಳು! ಆ ಹುಡುಗೆಯೇ ಈ ವಿಮಲೆಯು! ಇಷ್ಟರಿಂದ ಹೀರಾದೇವಿಯು ಹತಾಶಳಾಗದೆ, ವಿಮಲೆಯನ್ನೇ ವಿಮಲದೇವನೆಂದು ತಿಳಿದು ಗಂಡುವೇಷದಲ್ಲಿ ಇರಿಸಿ ಈವರೆಗೆ ವ್ಯವಹರಿಸುತ್ತ ಬಂದಿರುವಳು. ಆದ್ದರಿಂದ ವಿಮಲೆಯೊಡನೆ ಛತ್ರಸಾಲನ ಲಗ್ನವಾಗಲಿಕ್ಕೆ ಬಾಧೆಯಿಲ್ಲ; ಅದಕ್ಕೆ ನನ್ನ ಸಮ್ಮತಿಯೂ ಪೂರ್ಣವಾಗಿ ಇರುತ್ತದೆ.

ಈ ಸಂಗತಿಯನ್ನು ಕೇಳಿ ಎಲ್ಲರಿಗೂ ಆನಂದವಾಯಿತು. ವಿಂಧ್ಯವಾಸಿನಿಯ ಭವಿಷ್ಯವು ಸಂಪೂರ್ಣ ನಿಜವಾದದ್ದನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ಪ್ರಭುಗಳು ವಿಜಯಾ– ವಿಮಲೆಯರ ಹಸ್ತಗಳನ್ನು ಛತ್ರಸಾಲನ ಹಸ್ತದಲ್ಲಿರಿಸಿದರು. ವಿಂಧ್ಯವಾಸಿನಿಯ ಜಯಘೋಷ

ವಾಗಿ ಎಲ್ಲರೂ ವಧುವರರ ಅಭೀಷ್ಟವನ್ನು ಚಿಂತಿಸಿದರು. ಇನ್ನು ಬದ್ರುನ್ನಿಸಾ–ದಳಪತರಾಯರ ಲಗ್ನದ ಕೆಲಸವೊಂದು ಉಳಿದಿತ್ತು ಆ ವಿಷಯವಾಗಿ ಏನು ಮಾಡಬೇಕೆಂಬ ಬಗ್ಗೆ ಪ್ರಾಣನಾಥ ಪ್ರಭುಗಳ ನಿಶ್ಚಯವು ಇನ್ನೂ ಆಗಿದ್ದಿಲ್ಲ! ಅಷ್ಟರಲ್ಲಿ ಲಲಿತೆಯು ಮುಂದಕ್ಕೆ ಬಂದು ಪ್ರಭುಗಳನ್ನು ವಂದಿಸಿದಳು. ಪ್ರಭುಗಳು ಏನೋ ಮಾತಾಡಬೇಕೆನ್ನುತ್ತಿರಲು, ಲಲಿತೆಯು –

ಲಲಿತೆ — ಪ್ರಭುಗಳೇ, ತಮ್ಮ ಉದಾರ ಹೃದಯವನ್ನು ವರ್ಣಿಸುವದು ನನಗೆ ಶಕ್ಯವಲ್ಲ! ನನಗೂ, ನನ್ನ ಮಗಳಿಗೂ ತಮ್ಮ ಚರಣವನ್ನು ಸೇವಿಸಲಿಕ್ಕೆ ಬರುತ್ತಿರುವದೊಂದು ಮಹದ್ಭಾಗ್ಯವೇ ಸರಿ. ಯುವರಾಜ ದಳಪತರಾಯನೂ, ಬದ್ರುನ್ನಿಸೆಯೂ ಪರಸ್ಪರರನ್ನು ಬಹಳವಾಗಿ ಪ್ರೀತಿಸುತ್ತಿರುವರು. ದಳಪತರಾಯನು ಬದ್ರುನ್ನಿಸೆಯೊಡನೆ ಲಗ್ನವಾಗಲಿಕ್ಕೆ ಸಿದ್ಧನಾಗಿರುವನು. ಆದರೆ ಆತನ ಚರಣಸೇವೆಯನ್ನು ಮಾಡುವದರಲ್ಲಿಯೇ ಬದ್ರುನ್ನಿಸೆಯು ಕೃತಕೃತ್ಯಳೆಂದು ಭಾವಿಸುವಳು. ಆಕೆಯೊಡನೆ ದಳಪತರಾಯನ ಲಗ್ನವಾದರೆ ಸಾಗರದ ಮನೆತನವು ಲೌಕಿಕದೃಷ್ಟಿಯಿಂದ ಕಲಂಕಿತವಾಗುವದು. ಆದ್ದರಿಂದ ನನ್ನ ಮಗಳು ದಳಪತ ರಾಯನ ಚರಣಸೇವೆಯಿಂದಲೇ ಸಂತುಷ್ಟಳಾಗಿರುವಳು.

ದಳಪತರಾಯ — (ಆವೇಶದಿಂದ) ಹೀಗಿದ್ದರೆ, ನಾನು ಬದ್ರುನ್ನಿಸೆಯ ಹೊರತು ಬೇರೆ ಸ್ತ್ರೀಯರೊಡನೆ ಲೌಕಿಕ ದೃಷ್ಟಿಯಿಂದ ವಿವಾಹ ಬದ್ಧನಾಗಲಾರೆನು. ಬದ್ರುನ್ನಿಸೆಯೇ ನನ್ನ ಹೆಂಡತಿಯು.

ಬುಂದೇಲಖಂಡದಲ್ಲಿ ಎಂದು ಒಕ್ಕಟ್ಟು ಉಂಟಾಯಿತೋ, ಸಭಾಕರಣನಂಥ ವೀರರು ಎಂದು ಸ್ವದೇಶದ ಸ್ವಾತಂತ್ರ್ಯಕ್ಕಾಗಿ ಟೊಂಕಕಟ್ಟಿನಿಂತರೋ ಅಂದೇ ಬುಂದೇಲಖಂಡವು ಸ್ವತಂತ್ರವಾಯಿತು. ರಣದುಲ್ಲಾಖಾನನನ್ನು ಛತ್ರಸಾಲನು ಉದಾರಮನಸ್ಸಿನಿಂದ ಬಿಟ್ಟು ಬಿಟ್ಟನು. ಅದರ ಉಪಕಾರವನ್ನು ತೀರಿಸುವದಕ್ಕಾಗಿ ರಣದುಲ್ಲಾಖಾನನು ಛತ್ರಸಾಲನ ಲಗ್ನವು ''ಮಿರಹಾ'' ಎಂಬ ಊರಲ್ಲಿ ಸಮಾರಂಭದಿಂದ ಆಗುತ್ತಿರುವಾಗ, ದೊಡ್ಡ ಸೈನ್ಯದೊಡನೆ ಸಾಗಿಬಂದನು. ಮದುಮಗನಾಗಿದ್ದ ಛತ್ರಸಾಲನು ಹಾಗೆಯೇ ಯುದ್ಧಕ್ಕೆ ಬಂದು ರಣದುಲ್ಲಾ ಖಾನನನ್ನು ಪೂರ್ಣವಾಗಿ ಸೋಲಿಸಿದನು. ಆ ಯುದ್ಧದಲ್ಲಿ ಹೀರಾದೇವಿಯು ಮರಣ ಹೊಂದಿದಳು. ಮುಂದೆ ಔರಂಗಜೇಬ ಬಾದಶಹನು ಎಷ್ಟು ನೆಗೆದಾಡಿದರೂ ಆತನ ಆಟವೇನೂ ನಡೆಯಲಿಲ್ಲ, ಆತನು ಒಂದು ಒಡಂಬಡಿಕೆಯ ಕರಾರಿನಿಂದ ಬುಂದೇಲ ಖಂಡದ ಸ್ವಾತಂತ್ರ್ಯವನ್ನು ಒಪ್ಪಿಕೊಳ್ಳಬೇಕಾಯಿತು. ಬಳಿಕ ಛತ್ರಸಾಲನು ವಿಮಲಾ–ವಿಜಯೆಯರೊಡನೆ ಆನಂದದಿಂದ ಮಹೋಬದ ರಾಜಧಾನಿಯನ್ನು ಪ್ರವೇಶಿಸಿದನು! ಬದ್ರುನ್ನಿಸೆಯು ದಳಪತರಾಯನನ್ನು ಸೇವಿಸುತ್ತ ಸಾಗರರಾಜ್ಯದಲ್ಲಿ ಉಳಿದಳು!

**ಸಮಾಪ್ತ**

# ಪ್ರಸ್ತಾವನೆ

ಬೆಂಗಳೂರಿನಲ್ಲಿ ಬರೆದು ಮುಗಿಸಿ ಮುದ್ರಿಸಿದ ಪುಸ್ತಕಗಳಲ್ಲಿ ಈ ಚಿಕ್ಕ ಕಾದಂಬರಿಯು ಎರಡನೆಯದು. ಇದು ಮೊಗಲ ಬಾದಶಹರ ಹುಳಹತ್ತ ತೊಡಗಿರುವ ಘನತೆಯನ್ನೂ, ರಜಪೂತರ ಸವೆದು ಸಣ್ಣಾಗುತ್ತಿರುವ ಕ್ಷಾತ್ರ ತೇಜಸ್ಸನ್ನೂ ವ್ಯಕ್ತಪಡಿಸುವುದು. ಒಂದೇ ಪ್ರಸಂಗವನ್ನು ಕುರಿತು ಬೇರೆ ಬೇರೆ ಕಾದಂಬರಿಕಾರರು ಬೇರೆ ಬೇರೆ ಪ್ರಸಂಗಗಳನ್ನು ಮೂಲಧಾನವಾಗಿಟ್ಟುಕೊಂಡು ತೀರ ಹೊಸವಾಗಿರುವಂತೆ ಕಾದಂಬರಿಗಳನ್ನು ಹೇಗೆ ಬರೆಯುತ್ತಾರೆಂಬುದನ್ನು ತೋರಿಸುವುದ ಕ್ಕಾಗಿಯೇ ಈ ಕಾದಂಬರಿಯನ್ನು ಬರೆಯಲಾಗಿದೆ. ನಾನು ಈ ಮೊದಲೇ ಬರೆದಿರುವ 'ಕ್ಷಾತ್ರತೇಜ'ವೆಂಬ ಸುರಸ ಕಾದಂಬರಿಯೂ, ಇದೂ ರೂಪನಗರದ ಒಂದೇ ಪ್ರಸಂಗವನ್ನು ಕುರಿತು ಬರೆದವಾಗಿದ್ದರೂ, ಅವು ಒಂದಕ್ಕೊಂದು ಸಂಬಂಧವಿಲ್ಲದವಾಗಿ, ತೀರ ಹೊಸ ಕಾದಂಬರಿಗಳಂತೆ ವಾಚಕರ ಚಿತ್ತವನ್ನು ಆಕರ್ಷಿಸುತ್ತ ಉದಾತ್ತ ನೀತಿತತ್ತ್ವಗಳನ್ನು ಪ್ರಕಾಶಗೊಳಿಸುತ್ತಿರುವುವು!

ಹಸಿದು ಕಂಗಾಲಾದ ಸಿಂಹವು ಅರಣ್ಯದಲ್ಲಾದರೂ ಮೃಗದ ಮಾಂಸವನ್ನಲ್ಲದೆ ಹುಲ್ಲನ್ನು ತಿನ್ನುವುದಿಲ್ಲವೆಂಬಂತೆ, ಮಹಾರಾಣಾ ರಾಜಸಿಂಹನು ಔರಂಗಜೇಬನಂತಹ ಬಲಾಢ್ಯ ಶತ್ರುವಿನ ಶಕ್ತಿಸರ್ವಸ್ವದ ಅಬ್ಬರದಲ್ಲಿಯಾದರೂ ತನ್ನ ಕೆಚ್ಚುಗಟ್ಟಿದ ಕ್ಷಾತ್ರವೃತ್ತಿಯನ್ನಲ್ಲದೆ ಹೇಡಿತನವನ್ನು ಮುಂದೆ ಮಾಡಿರುವುದಿಲ್ಲ! ಆ ಕ್ಷತ್ರಿಯೋತ್ತಮನ ಧೈರ್ಯ, ನಿಸ್ಪೃಹವೃತ್ತಿ, ನ್ಯಾಯನಿಷ್ಠುರತೆ, ದಯಾಲುತ್ವ, ಉದಾರಚರಿತ, ಪರಿಶುದ್ಧಾಚರಣೆ ಇವು ಈ ಕಾದಂಬರಿಯಲ್ಲಿ ಸ್ಪಷ್ಟವಾಗಿ ಕಾಣುತ್ತಿರುವುವು. ಸತ್ಸಮಾಗಮದಿಂದ ಮನುಷ್ಯನ ಮನಸ್ಸು ತಿರುಗಿ ಹೇಗೆ ದಾರಿಗೆ ಹತ್ತುವು ದೆಂಬುದು–ಮಾಣಿಕ ಲಾಲ, ಜಿಬುನ್ನಿಸೆ, ಉದೇಪುರೀ ಬೇಗಂ, ಮುಬಾರಕ ಇವರ ಚರಿತ್ರದಿಂದ ಚೆನ್ನಾಗಿ ಗೊತ್ತಾಗುವುದು; ಅದರಂತೆಯೇ ದುಷ್ಟಸಹವಾಸವಾಗಿದ್ದಾಗ ಅವೇ ಪಾತ್ರಗಳು ಹೇಗೆ ಅಡ್ಡದಾರಿಯನ್ನು ಹಿಡಿದಿದ್ದವೆಂಬುದೂ ಗೊತ್ತಾಗುವುದು. ಒಟ್ಟಿಗೆ, ಸಹವಾಸದ ಯೋಗ್ಯತೆಯು ಬಹಳ ದೊಡ್ಡದಿದ್ದು, ಪ್ರತಿಯೊಬ್ಬನು ಚಿಕ್ಕಂದಿನಿಂದಲೂ ದುಷ್ಟಸಹವಾಸದ ನೆರಳಿಗೆ ಹೋಗದಂತೆ ಎಚ್ಚರಪಡುವುದು ಅವಶ್ಯವಾಗಿರುವುದೆಂದು ಈ ಕಾದಂಬರಿಯು ಚೆನ್ನಾಗಿ ಬೋಧಿಸುತ್ತಿರುವುದು.

ಸದ್ಗುರುವು ಎಲ್ಲರಿಗೂ ಆನಂದವನ್ನೀಯಲಿ.

ಬೆಂಗಳೂರು, ಬಸವನಗುಡಿ
ತಾ. ೧–೨–೧೯೨೮

ಕನ್ನಡಿಗರ ಸೇವಕ,
ವೆ. ತಿ. ಕುಲಕರಣಿ, ಗಳಗನಾಥ

# ಸ್ವಾಭಿಮಾನದ ಒಗರು!

ರೂಪನಗರದ ರಾಜ್ಯವು ಚಿಕ್ಕದು; ಅದರ ರಾಜಧಾನಿಯೂ ಚಿಕ್ಕದೇ; ಆದರೆ ರಾಜಸ್ಥಾನದೊಳಗಿನ ಆ ಗುಡ್ಡಗಾಡ ಸಣ್ಣ ರಾಜ್ಯವನ್ನು ವಿಕ್ರಮಸಿಂಹನೆಂಬ ಒಬ್ಬ ಗಟ್ಟಿಗನಾದ ಅರಸನು ಸ್ವತಂತ್ರದಿಂದ ಆಳುತ್ತಿದ್ದನು. ಔರಂಗಜೇಬನಂತಹ ದುಷ್ಟ ಸಾರ್ವಭೌಮನ ಕೆಟ್ಟ ಕಣ್ಣು ಆ ರಾಜ್ಯದ ಮೇಲೆ ಬಿದ್ದು, ಅದರ ಸ್ವಾತಂತ್ರ್ಯವು ಪೂರಾ ನಷ್ಟವಾಗದೆಯಿದ್ದದ್ದೊಂದು ಸೋಜಿಗದ ಸಂಗತಿಯೇ ಸರಿ! ಜೋಧಪುರ, ಜಯಪುರಗಳಂತಹ ದೊಡ್ಡ ದೊಡ್ಡ ರಜಪೂತ ರಾಜ್ಯದ ರಾಜಕುಮಾರಿಯರೂ ಔರಂಗಜೇಬನ ರಾಣೀವಾಸದಲ್ಲಿ 'ಜೋಧಪುರೀ ಬೇಗಂ', 'ಜಯಪುರೀ ಬೇಗಂ' ಎಂಬ ಹೆಸರುಗಳಿಂದ, ಬಾದಶಾಹೀ ವಿಲಾಸದ ಅಪರೂಪದ ವಸ್ತುಗಳಾಗಿ ವ್ಯವಹರಿಸುತ್ತಿದ್ದರು; ಆದರಂತೆ ರಜಪೂತರ ಬೇರೆ ಚಿಕ್ಕಪುಟ್ಟ ಅರಸರೂ ತಮ್ಮ ತಮ್ಮ ಸುಂದರ ಕುಮಾರಿಯರನ್ನು ಮೇಲುಬಿದ್ದು ಬಾದಶಹನ ಪಾದಗಳಿಗೆ ಎರೆದು ತಮ್ಮ ಅಧಿಕಾರವನ್ನೂ, ರಾಜ್ಯವನ್ನೂ, ವೈಭವವನ್ನೂ ಹೆಚ್ಚಿಸಿಕೊಳ್ಳಲಿಕ್ಕೆ ಹಿಂದೆಮುಂದೆ ನೋಡುತ್ತಿರಲಿಲ್ಲ. ತಮ್ಮ ಹೊಟ್ಟೆಯಲ್ಲಿ ಚೆಲುವೆಯರಾದ ಹೆಣ್ಣುಮಕ್ಕಳು ಹುಟ್ಟುವುದೊಂದು ತಮ್ಮ ಉತ್ಕರ್ಷದ ಗುರಿತಪ್ಪದ ಬಲವಾದ ಸಾಧನವೆಂದು ಅವರು ತಿಳಿದುಕೊಳ್ಳುತ್ತಿದ್ದರು. ಕ್ಷತ್ರಿಯ ಕುಲತಿಲಕನಾದ ಮಹಾರಾಜಾ ಪ್ರತಾಪಸಿಂಹನ ಪವಿತ್ರ ಮನೆತನವೊಂದನ್ನು ಬಿಟ್ಟರೆ, ಉಳಿದ ಅರಸುಮನೆತನಗಳೆಲ್ಲ ಈ ಹೆಣ್ಣುಮಕ್ಕಳ ಹಿಗ್ಗಿನ ಅಪವಾದಕ್ಕೆ ಗುರಿಯಾಗದೆ ಹೋಗಿದ್ದಿಲ್ಲವೆಂದು ಸಾಧಾರಣವಾಗಿ ಹೇಳಬಹುದು!

ಹೀಗೆ ಭರತಭೂಮಿಯ ಕ್ಷಾತ್ರತೇಜಸ್ಸಿನ ಕೇಂದ್ರವೆನಿಸುವ ರಾಜಸ್ಥಾನದಲ್ಲಿ ಸೂರ್ಯ–ಚಂದ್ರವಂಶದ ಅರಸರು ಹೆಣ್ಣು ಹಡೆಯುವುದಕ್ಕೆ ಹಿರಿ ಹಿರಿ ಹಿಗ್ಗುತ್ತಿರುವಾಗ, ನಮ್ಮ ವಿಕ್ರಮಸಿಂಹನಿಗೆ ಚಂಚಲಕುಮಾರಿಯಂತಹ ಕನ್ಯಾರತ್ನವು ಜನಿಸಿದ್ದರೂ, ಆತನು ಬಾದಶಹನ ಸನಿಯಕ್ಕೆ ಸುಳಿಯದಿರುವ ಕಾರಣವೇನಿರಬಹುದು? ಚಂಚಲಕುಮಾರಿಯು ಅಂತಿಂತಹ ರತ್ನವಲ್ಲ, ಕೋಹಿನೂರ ರತ್ನವು! ಇಂತಹ ರತ್ನವನ್ನು ಪಡೆಯುವ ಯೋಗ್ಯ ಅಧಿಕಾರಿಯು ರಾಜಸ್ಥಾನದಲ್ಲಿ ಯಾರು ಇರುವರೆಂದು ವಿಕ್ರಮಸಿಂಹನು ಹುಡುಕುತ್ತಲಿದ್ದನಲ್ಲದೆ, ಆ ರತ್ನವನ್ನು ಬಾದಶಹನ ಚರಣಕ್ಕೆ ಅರ್ಪಿಸಿ ತನ್ನ ಹೆಚ್ಚಳ ಪಡೆಯಬೇಕೆಂದು ಆತನು ಎಂದೂ ಇಚ್ಛಿಸಲಿಲ್ಲ. ಅಕಸ್ಮಾತ್ ಬಾದಶಹನ ಕಿವಿಗೆ ತನ್ನ ಮಗಳ ಸೌಂದರ್ಯದ ಸುದ್ದಿಯು ಬಿದ್ದರೆ, ತನಗೆ ಸಂಕಟ ಒದಗೀತೆಂದು ತಿಳಿದು ತನ್ನ ಮಗಳನ್ನು ಯಾವನಾದರೂ ಕುಲೀನ ರಜಪೂತ

ರಾಜಕುಮಾರನಿಗೆ ಕೊಟ್ಟು ಮದುವೆ ಮಾಡಿಬಿಡಬೇಕೆಂದು ಆತನು ಆತರಪಡುತ್ತಿದ್ದನು; ಆದರೆ ಈವರೆಗೂ ಚಂಚಲಕುಮಾರಿಗೆ ತಕ್ಕ ವರನು ಆತನಿಗೆ ದೊರೆತಿದ್ದಿಲ್ಲ.

ವಿಕ್ರಮಸಿಂಹನು ಸ್ವಾತಂತ್ರ್ಯಪ್ರಿಯನಿದ್ದನು. ಆತನು ಉಳಿದ ರಜಪೂತ ಅರಸರಂತೆ ಬಾದಶಹನ ಒಲುಮೆಯನ್ನು ಸಂಪಾದಿಸಲಿಕ್ಕೆ ಎಂದೂ ಹೋದವನಲ್ಲವೆಂದೂ ಈ ಮೊದಲೇ ಹೇಳಿದೆ; ಆದರೆ ಮಹಾರಾಣಾ ಪ್ರತಾಪಸಿಂಹನಂತೆ ಅಥವಾ ಆ ನರವೀರನ ವಂಶಜನಾದ ಮಹಾರಾಣಾ ರಾಜಸಿಂಹನಂತೆ ದಿಲ್ಲೀ ಬಾದಶಹನನ್ನು ಎದುರಿಸಿ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಸಿದ್ಧನಾಗಿದ್ದಿಲ್ಲ. ಆತನು ಮನಸ್ಸಿನಲ್ಲಿ ಬಾದಶಾಹಿಯನ್ನು ಎಷ್ಟು ತಿರಸ್ಕರಿಸುತ್ತಿದ್ದರೂ, ಹೊರಗೆ ಯಾವ ಬಗೆಯ ವಿರೋಧವನ್ನೂ ತೋರಿಸದೆ, ನುಗ್ಗಿದ್ದರೆ ತಗ್ಗುತ್ತ ನುಗ್ಗದಿದ್ದರೆ ನಿಲ್ಲುತ್ತ ತನ್ನ ಚಿಕ್ಕ ರಾಜ್ಯದಲ್ಲಿ ಪ್ರಜೆಗಳಿಗೆ ಹಿತವಾಗುವಂತೆ ರಾಜ್ಯವಾಳುತ್ತ ಕಾಲಹರಣ ಮಾಡುತ್ತಿದ್ದನು. ಆತನ ಹೊಟ್ಟೆಯಲ್ಲಿ ಗಂಡುಮಕ್ಕಳಿದ್ದಿಲ್ಲ; ಚಂಚಲ ಕುಮಾರಿಯೊಬ್ಬಳೇ ಮಗಳಾದದ್ದರಿಂದ, ಆ ಸಾಳುಂಕೆ ವಂಶದ ರಜಪೂತ ವೃದ್ಧ ವೀರನು ಮಗಳನ್ನು ಕಂಡರೆ ಬಿದ್ದು ಸಾಯುತ್ತಲಿದ್ದನು. ಚಂಚಲ ಕುಮಾರಿಯ ಸಲಿಗೆಯಾದರೂ ತಂದೆಯಲ್ಲಿ ಬಹಳ! ಪಾಪ! ತಾಯಿ ಸತ್ತ ಮಗಳು, ತಂದೆಯಲ್ಲಿ ಸಲಿಗೆ ಮಾಡದೆ ಮತ್ತೆ ಯಾರಲ್ಲಿ ಸಲಿಗೆ ಮಾಡಬೇಕು? ಚಂಚಲಕುಮಾರಿಯ ಜೀವನಾಧಾರವು ವಿಕ್ರಮಸಿಂಹನು, ವಿಕ್ರಮಸಿಂಹನ ಜೀವನಾಧಾರವು ಚಂಚಲಕುಮಾರಿಯು ಆಗಿ, ತಂದೆ-ಮಕ್ಕಳು ಪರಸ್ಪರ ಒಂದು ಕ್ಷಣ ಅಗಲಿದರೂ ಚಡಪಡಿಸುತ್ತಿದ್ದರು! ಈ ಚಡಪಡಿಕೆ ಯಿಂದಲೇ ಮಗಳ ಲಗ್ನವನ್ನು ಈವರೆಗೆ ವಿಕ್ರಮಸಿಂಹನು ತಡೆದಿದ್ದನು; ಆದರೆ ಈ ತಡೆಯೋಣವೇ ಮುಂದೆ ಅನರ್ಥಕ್ಕೆ ಕಾರಣವಾದೀತೆಂಬುದು ಆ ಮೋಹಗ್ರಸ್ತನಿಗೆ ಹೇಗೆ ಗೊತ್ತಾಗಬೇಕು?

ಒಂದು ದಿನ ವಿಕ್ರಮಸಿಂಹನು ಮಗಳೊಡನೆ ಮಾತನಾಡುತ್ತ ಕುಳಿತಿರುವಾಗ ಬಾಗಿಲ ಕಾಯುವವನು ಬಂದು ನಮಿಸಿ— "ಮಹಾರಾಜ, ದಿಲ್ಲಿಯಿಂದ ಒಬ್ಬ ರಾವುತನು ಬಾದಶಹನ ಪತ್ರವನ್ನು ತಂದಿರುವನು" ಎಂದು ಹೇಳಿದನು. ಅದನ್ನು ಕೇಳಿ ವಿಕ್ರಮಸಿಂಹನ ಎದೆಯು ನಡುಗಿತು. ಆತನು ಮಗಳ ಮೋರೆಯನ್ನು ಕಕ್ಕುಲತೆಯಿಂದ ನೋಡಿ, ನನ್ನ ಈ ಕೂಸಿನ ವಿಷಯದ ಪತ್ರವಿರಲಿಕ್ಕಿಲ್ಲವಷ್ಟೇ? ಎಂದು ಚಿಂತಿಸಿದನು. ಬಾದಶಹನ ರಾವುತನು ಅಪ್ಪಣೆಯಂತೆ ಒಳಗೆ ಬಂದು ರಾಜನಿಗೆ ಮುಜುರೆ ಮಾಡಿ ಬಾದಶಹನ ಪತ್ರವನ್ನು ಮುಂದಿಟ್ಟನು. ವಿಕ್ರಮಸಿಂಹನು ಆ ರಾವುತನ ಯೋಗಕ್ಷೇಮದ ವಿಷಯವಾಗಿ ಸೇವಕರನ್ನು ಆಜ್ಞಾಪಿಸಲು, ಸೇವಕರು ಆತನನ್ನು ಕರೆದೊಯ್ದು ಉಪಚರಿಸತೊಡಗಿದರು. ಇತ್ತ ವಿಕ್ರಮಸಿಂಹನು ಬಾದಶಹನ ಪತ್ರವನ್ನು ತಿರುತಿರುವಿ ನೋಡುತ್ತ ಮನಸ್ಸಿನಲ್ಲಿ—"ಇದರೊಳಗೆ ಏನಿರಬಹುದು? ನನಗೆ ಪತ್ರ ಬರೆಯುವ ಪ್ರಸಂಗವು ಬಾದಶಹನಿಗೆ ಏಕೆ ಬಂದಿರಬಹುದು? ಒಡೆದು ನೋಡಿಬಿಡಲಾ? ಚಂಚಲಕುಮಾರಿಯ ಮುಂದೆಯೇ ಒಡೆದುಬಿಡಲೇನು?" ಎಂದು ಯೋಚಿಸತೊಡಗಿದನು. ತಂದೆಯು ಹೀಗೆ ಯೋಚಿಸುತ್ತಿರುವುದನ್ನು ನೋಡಿ ಚಂಚಲಕುಮಾರಿಯು ಆತುರದಿಂದ ಆತನನ್ನು ಕುರಿತು—

ಚಂಚಲಕುಮಾರಿ—''ಪಿತಾಜೀ, ಇಷ್ಟೇಕೆ ಆಲೋಚನೆ? ಆ ದುಷ್ಟ ಔರಂಗಜೇಬನ ಪತ್ರವನ್ನು ಇಷ್ಟು ಆದರಿಸುವುದೇಕೆ? ಅದಕ್ಕೆ ಇಷ್ಟು ಮನ್ನಣೆಯೇಕೆ? ಅದನ್ನು ಹರಿದೊಗೆಯಿರಿ ಎಡಗೈಯಿಂದ!''

ವಿಕ್ರಮಸಿಂಹ—(ಕೌತುಕದಿಂದ) ''ಅವ್ವಾ, ಚಂಚಲೆ, ಗಂಡಾಗಬಾರದಿತ್ತೆ? ಸಾಳುಂಕಿಯ ಮನೆತನವಾದರೂ ಬೆಳಕಿಗೆ ಬರುತ್ತಿತ್ತು! ಏನು ಮಾಡಿದರೂ ನೀನು ಹೆಂಗಸು! ಇದರಲ್ಲಿ ನಿನ್ನ ಅನಿಷ್ಟವೆಲ್ಲಿರುವುದೋ ಎಂದು ಪತ್ರವನ್ನು ಒಡೆಯಲಿಕ್ಕೆ ನನಗೆ ಅಂಜಿಕೆ ಬರುತ್ತದೆ.

ಚಂಚಲಕುಮಾರಿ—(ಸಲಿಗೆಯಿಂದ) ''ನನ್ನ ಸಲುವಾಗಿ ಏಕೆ ಅಂಜುವುದು? ಆ ಲೋಕಕಂಟಕ ಬಾದಶಹನು ನನ್ನನ್ನೇನು ಮಾಡುವನು? ಇಗೋ, ನೀವು ಅಂಜುತ್ತಿದ್ದರೆ ನಾನು ಪತ್ರ ಒಡೆಯುತ್ತೇನೆ ನೋಡಿರಿ.''

ಈ ಮೇರೆಗೆ ನುಡಿದು ಚಂಚಲಕುಮಾರಿಯು ತಂದೆಯ ಕೈಯೊಳಗೆ ಪತ್ರವನ್ನು ತೆಗೆದುಕೊಂಡು ಒಡೆದು ಓದತೊಡಗಿದಳು. ವಿಕ್ರಮಸಿಂಹನು ಕೌತುಕದಿಂದ ಮಗಳ ಮೋರೆಯನ್ನು ನೋಡತೊಡಗಿದನು. ಪತ್ರವು ತೀರ ಸಣ್ಣದಿತ್ತು ಅದನ್ನು ಓದಲಿಕ್ಕೆ ಒಂದು ಕ್ಷಣ ಕೂಡ ಬೇಕಾಗಲಿಲ್ಲ, ಅಷ್ಟರಲ್ಲಿ ಚಂಚಲೆಯ ಮೋರೆಯು ಕೆಂಪಾಯಿತು; ಕಣ್ಣುಗಳು ಕಿಡಿ ಸುರಿಸಹತ್ತಿದವು; ಕೆಳದುಟಿಯು ನಡುಗಹತ್ತಿತು! ಆಕೆಯು ಸಂತಾಪದಿಂದ ತಂದೆಗೆ—

ಚಂಚಲಕುಮಾರಿ—''ನೋಡಿದಿರೇನು ಈ ದುಷ್ಟನ ನಡತೆಯನ್ನು! ಇಷ್ಟು ಜನ ರಜಪೂತ ರಾಣಿಯರಿದ್ದರೂ ಈತನಿಗೆ ಸಾಲದಾಗಿದೆ! ಬಾದಶಹಾ, ಚಂಚಲೆಯು ನಿನ್ನ ರಾಣಿಯಾಗಬೇಕೆ? ಪಿತಾಜೀ, ತುಳಿಯಲಾ ಈ ಪತ್ರವನ್ನು! ಹಿಂದಕ್ಕೆ ನಾನು ಈ ದುಷ್ಟನ ಚಿತ್ರವನ್ನು ಹೀಗೆಯೇ ತುಳಿದಿದ್ದೆನು.''

ಹೀಗೆ ನಡಿಯುತ್ತ ಚಂಚಲೆಯು ಸಂತಾಪದಿಂದ ನಿಜವಾಗಿಯೇ ಪತ್ರವನ್ನು ತುಳಿಯುತ್ತಿರಲು, ಆಕೆಯ ಪೈಜಣಗಳು ಜಣಗುಟ್ಟಿದವು. ಅಂತಹ ಧೀರ ವಿಕ್ರಮಸಿಂಹನೂ ಮಗಳ ಈ ಸಾಹಸಕ್ಕಾಗಿ ಬೆದರಿದನು. ಈಕೆಯು ಹಿಂದಕ್ಕೆ ಚಿತ್ರವನ್ನು ಒದೆದ ಸುದ್ದಿಯು ಗುಪ್ತಚಾರರ ಮುಖದಿಂದ ಬಾದಶಹನಿಗೆ ಹತ್ತಿದ್ದರಿಂದಲೇ ಈಗಿನ ಈ ಅನಿಷ್ಟವು ನನ್ನ ಪಾಲಿಗೆ ಬಂದಿರಬಹುದೆಂದು ಆತನು ತರ್ಕಿಸಿದನು. ಬಾದಶಹನ ರಾವುತನ ಎದುರಿನಲ್ಲಿ ಈ ಅನರ್ಥವು ಒದಗಿದಿದ್ದದ್ದೊಂದು ಸುದೈವವೆಂತಲೇ ಆತನು ತಿಳಿದನು. ವಿಕ್ರಮಸಿಂಹನು ಸ್ವಲ್ಪ ಸಿಟ್ಟಿನಿಂದ ಮಗಳನ್ನು ಕುರಿತು—

ವಿಕ್ರಮಸಿಂಹ—''ನೀನು ಎಂತಹ ತಾಮಸಿಯೇ ಚಂಚಲೆ? ಬಾದಶಹನಿಗೆ ಈ ಸುದ್ದಿ ತಿಳಿದರೆ ನಮ್ಮ ಗತಿಯೇನು? ಬಲಿಷ್ಠ ಬಾದಶಹನ ಮುಂದೆ ನಾವು ಒಂದು ನೊರಜು! ಆತನು ನಮ್ಮನ್ನು ಕೈಹೊಡೆದು ತಿಕ್ಕಿಬಿಟ್ಟಾನು! ಬಡವರ ಸಿಟ್ಟು ದವಡೆಗೆ ಮೂಲವಲ್ಲವೆ? ಶಾಂತಳಾಗು. ಇತ್ತ ತಾ ಪತ್ರವನ್ನು. ಹೆಂಗಸರು ಹೀಗೆ ತಾಮಸ ವೃತ್ತಿಗೆ ಹೋಗಬಾರದಮ್ಮಾ!''

ಅಭಿಮಾನಿಯಾದ ಚಂಚಲೆಗೆ ಇಷ್ಟೇ ಸಾಕಾಯಿತು. ಆಕೆಯು ಅತ್ಯಂತ ಪಿತೃಭಕ್ತಳು. ತಂದೆಯ ಮನಸ್ಸು ನೋಯಿಸುವಂತಹ ಕೆಲಸವನ್ನು ಆಕೆಯು ಸರ್ವಥಾ ಮಾಡತಕ್ಕವಳಲ್ಲ; ಕ್ಷಾತ್ರದೇಜದ ಆ ಕುಮಾರಿಗೆ ಪತ್ರ ಓದಿ ಆದ ಅಪಮಾನವು ತಡೆಯದಾಗಲು, ಪತ್ರವನ್ನು ತುಳಿದುಬಿಟ್ಟಳು. ಅನ್ಯಾಯವು ತಡೆಯದ ಸರಳ ಹೃದಯದ ತೇಜಸ್ವಿಗಳ ರೀತಿಯು ಹೀಗೆಯೇ ಸರಿ, ಆದರೆ ನನ್ನ ಕೆಲಸದಿಂದ ತಂದೆಯು ನೊಂದುಕೊಂಡನಲ್ಲ-ಸಿಟ್ಟಾದನಲ್ಲ, ಎಂಬ ಕನಿಕರದಿಂದ ಆಕೆಯ ಕಣ್ಣುಗಳೊಳಗಿಂದ ನೀರುಗಳು ಬಳಬಳ ಸುರಿಯಹತ್ತಿದವು. ಆಕೆಯು ತಂದೆಯನ್ನು ದೈನ್ಯದಿಂದ ನೋಡಲು, ವಿಕ್ರಮಸಿಂಹನ ಹೃದಯವು ಕರಗಿತು. ಆತನೂ ಕಣ್ಣೀರು ಸುರಿಸಹತ್ತಿದನು. ಆತನು ಮನಸ್ಸಿನಲ್ಲಿ—'ಪಾಪ! ತಾಯಿಯಿಲ್ಲದ ಪರದೇಶಿ! ಇನ್ನಾರ ಮುಂದೆ ಸಿಟ್ಟು ಮಾಡೀತು?' ಎಂದು ನುಡಿದು, ಮಗಳನ್ನು ತಬ್ಬಿಕೊಂಡು ಆಕೆಯ ಕಣ್ಣು ಒರಿಸುತ್ತ ಗದ್ದ-ತುಟಿಗಳನ್ನು ಹಿಡಿದು ರಮಿಸುತ್ತ—"ಇಲ್ಲವಮ್ಮಾ ಚಂಚಲೇ, ಇನ್ನು ನಿನಗೆ ಹೀಗೆ ಸಿಟ್ಟುಮಾಡುವುದಿಲ್ಲ, ಅಳಬೇಡ. ನೀನು ಹೀಗೆ ನಿಮ್ಮ ಪಿತಾಜಿಯನ್ನು ಅಳಿಸಬೇಕೇನು?" ಎಂದು ಕೇಳಿದ ಕೂಡಲೆ ಚಂಚಲೆಯು ಕಣ್ಣು ಒರಿಸಿಕೊಳ್ಳುತ್ತ—"ಇಲ್ಲ ಪಿತಾಜೀ, ನಾನು ನಿಮ್ಮನ್ನು ಎಂದಾದರೂ ಅಳಿಸುವೆನೇ? ಸಿಟ್ಟು ಬಂದು ಪತ್ರ ತುಳಿದೆನು. ಬೇಕಾದರೆ ನೀವು ಓದಿರಿ ಪತ್ರವನ್ನು? ನಿಮಗೆ ಸಿಟ್ಟು ಬರುತ್ತದೆಯೋ ಇಲ್ಲವೋ ನೋಡೋಣ!" ಎಂದು ಹೇಳಿದಳು. ಅಷ್ಟರಲ್ಲಿ ಆಕೆಯ ಸಂತಾಪವು ಹೇಳಹೆಸರಿಲ್ಲದೆ ಹೋಗಿತ್ತು, ಆಕೆಯು ನಗೆಮೊಗದಿಂದ ತಂದೆಯನ್ನು ನೋಡಹತ್ತಿದಳು.

ಹೀಗೆ ತನ್ನ ಮಗಳು ತನ್ನ ಸಮಾಧಾನಕ್ಕಾಗಿ ಕ್ಷಣದಲ್ಲಿ ನಗತೊಡಗಿದ್ದನ್ನು ನೋಡಿ ವಿಕ್ರಮಸಿಂಹನು ಕನಿಕರಪಟ್ಟು ಮನಸ್ಸಿನಲ್ಲಿ ಮರುಗಿದನು; ಹದಿನೇಳು ಹದಿನೆಂಟು ವರ್ಷದವಳಾಗಿದ್ದರೂ ತನ್ನೊಡನೆ ಕೂಸಿನಂತೆ ನಡೆದುಕೊಳ್ಳುತ್ತಿರುವ ಸರಳ ಹೃದಯದ ಚಂಚಲೆಯನ್ನು ವಾತ್ಸಲ್ಯದಿಂದ ಹತ್ತಿರ ಕುಳ್ಳಿರಿಸಿಕೊಂಡು ಆತನು ಪತ್ರವನ್ನು ಓದತೊಡಗಿದನು. ಆಗ ಚಂಚಲೆಯ ದೃಷ್ಟಿಗಳು ಪಿತಾಜಿಯ ಮೋರೆಯನ್ನು ಬಿಟ್ಟು ಕದಲದಾದವು. ವಿಕ್ರಮಸಿಂಹನು ಪತ್ರವನ್ನು ಮನಸ್ಸಿನಲ್ಲಿಯೇ ಒಂದು ಸಾರೆ ಓದಿದನು. ಮೊದಲು ಆತನ ಮುಖವು ಗಂಭೀರವಾಯಿತು. ಆಮೇಲೆ ಸಿಟ್ಟಿನಿಂದ ಕೆಂಪಾಯಿತು. ವಿಕ್ರಮಸಿಂಹನು ಹೆಸರಿಗೆ ತಕ್ಕಂತೆ ಮಹಾ ಶೂರನಾಗಿದ್ದನು; ಆದರೆ ಔರಂಗಜೇಬನ ಕುಟಿಲತನದ ಪತ್ರದ ಮರ್ಮವನ್ನು ತಿಳಿದುಕೊಳ್ಳುವಷ್ಟು ತೀಕ್ಷ್ಣಬುದ್ಧಿಯವನಿದ್ದಿಲ್ಲ. ಮೊದಲು ಬಾದಶಹನ ಸವಿನುಡಿಯ ಪತ್ರದ ಕಠೋರತನವು ಆತನ ಮನಸ್ಸಿಗೆ ಕೂಡಲೆ ಹೊಳೆಯಲಿಲ್ಲ, ತೀಕ್ಷ್ಣಬುದ್ಧಿಯ ಚಂಚಲೆಗೆ ಮಾತ್ರ ಅದು ತಟ್ಟನೆ ಹೊಳೆಯಿತು. ಜಯಸಿಂಹ, ಯಶವಂತ ಸಿಂಹ ಮೊದಲಾದ ದೊಡ್ಡ ದೊಡ್ಡ ರಜಪೂತ ಸೇನಾಪತಿಗಳೂ, ಅಜಮಶಹ ಮೊದಲಾದ ರಾಜಕುಮಾರರೂ ಔರಂಗಜೇಬನ ಕುಟಿಲತನಕ್ಕೆ ಬಹಳವಾಗಿ ಅಂಜುತ್ತಿದ್ದರು; ಅದರಂತೆ ವಿಕ್ರಮಸಿಂಹನೂ ಬಾದಶಹನ ಕುಟಿಲತನದ ಪತ್ರಕ್ಕಾಗಿ ಈಗ ಅಂಜಿದನು; ತನ್ನ ಸ್ವಧರ್ಮಾಭಿಮಾನದ, ಹಾಗು ಸ್ವಾತಂತ್ರ್ಯಪ್ರೀತಿಯ ಯೋಗದಿಂದ ಮೊದಲು ಬಾದಶಹನ

ಮೇಲೆ ಆತನಿಗೆ ಸಿಟ್ಟುಬಂದಿತು; ಆದರೆ ತನ್ನ ಸಿಟ್ಟು ಬಾದಶಹನ ಮುಂದೆ ಸರ್ವಥಾ ನಡೆಯಲಾರದೆಂತಲೂ, ಬಾದಶಹನ ಪತ್ರದಂತೆ ತಾನು ನಡೆಯದಿದ್ದರೆ ಆ ದುಷ್ಟನು ತನ್ನ ರಾಜ್ಯವನ್ನು ಕ್ಷಣದಲ್ಲಿ ಮಣ್ಣುಗೂಡಿಸದೆ ಬಿಡನೆಂತಲೂ ತಿಳಿದು ಆತನು ಚಿಂತಿಸತೊಡಗಿದನು.

## ಔರಂಗಜೇಬನ ದುಷ್ಟತನ

ಹೀಗೆ ಚಿಂತಿಸುತ್ತ ಕುಳಿತಿರುವ ತನ್ನ ತಂದೆಯ ಮುಖವನ್ನು ಚಂಚಲಕುಮಾರಿಯು ಸುಮ್ಮನೆ ನೋಡುತ್ತ ಕುಳಿತಿದ್ದಳು. ಕೆಲಹೊತ್ತಿನ ಮೇಲೆ ವಿಕ್ರಮಸಿಂಹನು ಮಗಳನ್ನು ಕುರಿತ— ''ವತ್ಸೇ, ಪತ್ರವನ್ನು ನೀನು ತುಳಿದದ್ದು ನಿನ್ನ ತೀಕ್ಷ್ಣಬುದ್ಧಿಯ ಸ್ವಾಭಿಮಾನದ ಪವಿತ್ರತೆಗೆ ಬಹಳವಾಗಿ ಒಪ್ಪುವುದು; ಆದರೆ ಪತ್ರವನ್ನು ತುಳಿದ ಮಾತ್ರದಿಂದ ಬಂದ ಕಷ್ಟವು ದೂರವಾಗಲಿಲ್ಲ! ಬಾದಶಹನ ಪತ್ರಕ್ಕೆ ವಿರೋಧವಾಗಿ ನಡೆದರೆ ಪರಿಣಾಮವಾಗದು. ಬಲಾತ್ಕಾರದಿಂದಾದರೂ ಬಾದಶಹನು ತನ್ನ ಇಚ್ಛೆಯನ್ನು ಪೂರ್ಣ ಮಾಡಿಕೊಳ್ಳುವನು'' ಎಂದನು. ಕುಮಾರಿಯು—''ಎಲ್ಲಿ ಪಿತಾಜೀ, ಪತ್ರವನ್ನು ಇನ್ನೊಮ್ಮೆ ಓದಿರಿ ನೋಡೋಣ'' ಎನ್ನಲು, ವಿಕ್ರಮಸಿಂಹನು ಬಾದಶಹನ ಪತ್ರವನ್ನು ಓದತೊಡಗಿದನು. ಅದರಲ್ಲಿ ಬಾದಶಹನು ಬರೆದದ್ದೇನೆಂದರೆ—''ರೂಪನಗರದ ರಾಜಕುಮಾರಿಯ ಸೌಂದರ್ಯದ ವರ್ಣನೆಯನ್ನು ಕೇಳಿ ನಾವು ಬೆರಗಾಗಿರುವೆವು; ಆದ್ದರಿಂದ ನಿಮ್ಮ ರಾಜ್ಯ ವ್ಯವಸ್ಥೆಗೆ ಮೆಚ್ಚಿದ್ದ ನಾವು ನಿಮ್ಮ ಅಭಿನಂದನಕ್ಕಾಗಿ ಚಂಚಲಕುಮಾರಿಯ ಪಾಣಿಗ್ರಹಣ ಮಾಡಲಿಕ್ಕೆ ಅತ್ಯಂತ ಉತ್ಸುಕರಾಗಿರುತ್ತೇವೆ. ರಾಜರ ಇಚ್ಛೆಯಿದ್ದರೆ ತಾವಾಗಿ ಬಂದು ಮಗಳನ್ನು ಒಪ್ಪಿಸಿ ಹೋಗಬಹುದು. ಇಲ್ಲದಿದ್ದರೆ ನಾವೇ ಬಹುಮಾನದಿಂದ ದೊಡ್ಡ ಸೈನ್ಯವನ್ನು ಕಳಿಸಿ, ರಾಜಕುಮಾರಿಯನ್ನು ಬೇಗನೆ ಬರಮಾಡಿ ಕೊಳ್ಳುವೆವು!''

ಹೀಗೆ ಪತ್ರವನ್ನು ಓದಿ ಮುಗಿಸಿ ವಿಕ್ರಮಸಿಂಹನು ಮಗಳ ಮೋರೆಯನ್ನು ನೋಡತೊಡಗಿದನು. ಆಗ ಚಂಚಲಕುಮಾರಿಯು ತಟ್ಟನೆ ತಂದೆಯನ್ನು ಕುರಿತು—

ಚಂಚಲಕುಮಾರಿ—''ಪಿತಾಜೀ, ಇದಕ್ಕೇಕೆ ಇಷ್ಟು ಚಿಂತೆ? ರಜಪೂತರೇನು ಬಳೆ ಇಟ್ಟಿರುವರೇನು?''

ವಿಕ್ರಮಸಿಂಹ—''ನಾವು ಬಳೆಯಿಟ್ಟಿರುವೆವೆಂತಲೇ ಬಾದಶಹನು ಹೀಗೆ ಪತ್ರವನ್ನು ಬರೆದಿರುವನು. ಚಂಚಲೇ, ಅಕಬರ ಬಾದಶಹನ ಕಾಲದ ರಜಪೂತರ ಸ್ವಾಭಿಮಾನವು ಈಗೆಲ್ಲಿ ಉಳಿದಿದೆ? ಆಗಿನ ರಜಪೂತರು ಮೊಗಲರಿಗೆ ತಮ್ಮ ಹೊಟ್ಟೆಯ ಕರಳನ್ನು ಕೊಟ್ಟು ತಮ್ಮ ಪವಿತ್ರ ಕ್ಷತ್ರಿಯ ಕುಲವನ್ನು ಕೆಡಿಸಿಕೊಳ್ಳಲಿಕ್ಕೆ ಸರ್ವಥಾ ಒಪ್ಪಿಕೊಳ್ಳಲಿಲ್ಲ, ಅದಕ್ಕಾಗಿ ಆ ಧೂರ್ತ ಬಾದಶಹನು ಎಷ್ಟೆಷ್ಟೋ ಪ್ರಯತ್ನ ಮಾಡಬೇಕಾಯಿತು; ಆದರೆ ಈಗ ರಜಪೂತರ ಆ ಒಗರು ಉಳಿದಿರುವುದೇ? ಬಾದಶಹನು ತಮ್ಮ ಮಕ್ಕಳನ್ನು ಕೇಳಿದರೆ ಸಾಕೆಂದು ಅದೇ ರಜಪೂತರು

ಈಗ ಹಾದಿಯನ್ನು ನೋಡುತ್ತಿರುವರು; ಆದ್ದರಿಂದ ವತ್ಸೇ, ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯಲ್ಲಿ ಇಲ್ಲದಿರುವಾಗ ಏನು ಮಾಡಬೇಕು ಹೇಳು?''

ಚಂಚಲಕುಮಾರಿ—(ಅತ್ಯಂತ ಅಭಿಮಾನದಿಂದ) ''ಪಿತಾಜೀ, ಉದೇಪುರದ ಪೂಜ್ಯ ಮಹಾರಾಣಾನ ಮನೆತನವು ಈ ಕಲಂಕಕ್ಕೆ ಈವರೆಗೂ ಗುರಿಯಾಗಿರುವುದಿಲ್ಲ. ಇಡಿಯ ರಜಪೂತಸ್ಥಾನಕ್ಕೆ ಪೂಜ್ಯರಾಗಿರುವ ಮಹಾರಾಣಾ ಪ್ರತಾಪಸಿಂಹರವರು ಈ ಕಲಂಕಕ್ಕೆ ಒಳಗಾಗ ಬಾರದೆಂತಲೇ ಅಕಬರ ಬಾದಶಹನ ಕೂಡ ಹೊಡೆದಾಡಲಿಲ್ಲವೆ? ಪ್ರೀತಿಯ ಚಿತ್ತೂರು ಹೋದರೂ, ತಾವು ದೇಶಭ್ರಷ್ಟರಾಗಿ ಅಡವಿಯನ್ನು ಸೇರಿದರೂ ಬಾದಶಹನ ಮನೆತನಕ್ಕೆ ಅವರು ಹೆಣ್ಣು ಕೊಡಲಿಲ್ಲ. ಬಾದಶಹನಿಗೆ ತಲೆಬಾಗಿಸಲಿಲ್ಲ! ಈಗಿರುವ ಮಹಾರಾಣಾ ರಾಜಸಿಂಹರವರಾದರೂ ಬಾದಶಹನ ಸಂಬಂಧ ಮಾಡಿ ಎಲ್ಲಿ ಬಳೆಯಿಟ್ಟು ಕೊಂಡಿರುವರು? ಪೂಜ್ಯ ಪಿತಾಜೀ, ಇಂತಹ ಕಲಂಕವು ನಮ್ಮ ಮನೆತನಕ್ಕಾದರೂ ಈವರೆಗೆ ಹತ್ತಿರುವು ದಿಲ್ಲವಲ್ಲವೆ?''

ವಿಕ್ರಮಸಿಂಹ—''ಹತ್ತಿರುವುದಿಲ್ಲ; ಅಂತಹ ಪ್ರಸಂಗವನ್ನು ದೇವರು ಈವರೆಗೆ ನಮ್ಮ ಮನೆತನಕ್ಕೆ ತಂದಿದ್ದಿಲ್ಲ. ಈಗ ತಂದಿರುವನು!''

ಚಂಚಲಕುಮಾರಿ—''ಅದಕ್ಕೆ ಅಂಜುವುದೇಕೆ? ಉದೇಪುರದ ಮಹಾರಾಣಾ ರಾಜಸಿಂಹರಿಗೆ ಬೇಡಿಕೊಂಡು ಅವರೊಡನೆ ಬಾದಶಹನಿಗೆ ಎದುರಾಗಿ ಕಾದಿದರಾಯಿತು! ಕಡೆಗೆ ಜೋಹಾರವಂತೂ ರಜಪೂತ ಸ್ತ್ರೀಯರಿಗೆ ಸಿದ್ಧವಾಗಿಯೇ ಇದೆ! ಅಂತಹ ಪ್ರಸಂಗ ಬಂದರೆ ನಿಮ್ಮ ಚಂಚಲೆಯು ಅಗ್ನಿ ನಾರಾಯಣನಿಗೆ ಆಹುತಿಯಾಗಲಿಕ್ಕೆ ಹಿಂದೆಮುಂದೆ ನೋಡಬಹುದೇನು?

ವಿಕ್ರಮಸಿಂಹ—(ಕಣ್ಣೀರು ತಂದು ಗದ್ಗದಕಂಠನಾಗಿ) ''ಬೇಟಾ, ನೀನು ಅಂತಹ ಸತ್ವಶಾಲಿಯೇ ಇರುವೆ. ನಿನ್ನಂತಹ ಕ್ಷಾತ್ರವೃತ್ತಿಯ ಪವಿತ್ರ ಕುಮಾರಿಕೆಯು ನನ್ನ ಹೊಟ್ಟೆಯಲ್ಲಿ ಹುಟ್ಟಿಬಂದದ್ದರಿಂದ ನಾನೇ ಏಕೆ, ನನ್ನ ಕುಲವೂ ಪವಿತ್ರವಾಗಿರುವುದು; ಆದರೆ ವತ್ಸೇ, ಜೋಹಾರ ಮಾಡುವ ಉಜ್ವಲ ಕಾಲವು ಈಗ ಹೋಗಿ, ಕ್ಷತ್ರಿಯ ಕುಮಾರಿಯರು ತಾವಾಗಿ ಹೋಗಿ ಬಾದಶಹನ ಕೈಹಿಡಿಯುವ ನೀಚ ಕಾಲವು ಬಂದೊದಗಿದೆ. ನಿನ್ನಂತಹ ತೇಜಸ್ವಿನಿಯರಾದ ರಾಜಕುಮಾರಿಯರು ಬಾದಶಹನ ಜನಾನಖಾನೆಯನ್ನು ಹೋಗಲಿಕ್ಕೆ ಒಪ್ಪಿಕೊಳ್ಳದಿದ್ದರೂ, ಅವರ ತಂದೆಗಳೆನಿಸುವ ಷಂಢ ಕ್ಷತ್ರಿಯರು ನಾವು, ಜುಲುಮೆಯಿಂದ ಬಾದಶಹನ ಜನಾನಖಾನೆಯ ನರಕದಲ್ಲಿ ಅವರನ್ನು ದೂಡುತ್ತಿರುವೆವು! ಇದಕ್ಕೆ ನಮ್ಮ ಹೇಡಿತನವೂ, ನೀಚಸ್ವಾರ್ಥವೂ ಕಾರಣವಲ್ಲದೆ ಮತ್ತೇನು? ಹೋಯಿತು, ಭರತಭೂಮಿ ಯಲ್ಲಿಯ ಕ್ಷಾತ್ರತೇಜವು ಹಾಳಾಗಿ ಹೋಯಿತು!''

ಚಂಚಲಕುಮಾರಿ—''ಪಿತಾಜೀ, ಮಹಾರಾಣಾ ರಾಜಸಿಂಹರವರನ್ನು ಮರೆತು ಬಿಡುವಿರಲ್ಲ. ಅವರಿಗೆ ಶರಣುಹೋದರೆ ಅವರು ಎಲ್ಲ ಕ್ಷತ್ರಿಯರನ್ನು ಕೂಡಿಸಿ ನಮ್ಮನ್ನು ರಕ್ಷಿಸಲಿಕ್ಕಿಲ್ಲವೆ!''

ವಿಕ್ರಮಸಿಂಹ—''ತಂಗೀ, ಆ ಕ್ಷತ್ರಿಯ ವೀರಪುಂಗವನನ್ನು ನಾನು ಹೇಗೆ ಮರತೇನು ಹೇಳು? ಆ ಪುಣ್ಯಪ್ರತಾಪಿಯು ಈವರೆಗೂ ಇಡಿಯ ರಜಪೂತಸ್ಥಾನದ ಮಾನವನ್ನೇ ಕಾದಿರುವನು; ಪ್ರಸಂಗ ಬಂದರೆ ಆ ಪುಣ್ಯ ಪುರುಷನ ಕಡೆಗೆ ಬೆರಳು ಮಾಡದಿದ್ದರೆ ಯಾವ ರಜಪೂತನಿಗೂ ಗತಿಯಿಲ್ಲ; ಆದರೆ ನಿನ್ನ ಒಬ್ಬಳ ಸಲುವಾಗಿ ಮಹಾಬಲಿಷ್ಠನಾದ ಔರಂಗಜೇಬನಂತಹ ಕಲಿಪುರುಷನ ಕ್ಷೋಭಕ್ಕೆ ತಾನಾಗಿ ರಾಣಾ–ರಾಜಸಿಂಹನು ಏಕೆ ಗುರಿಯಾದಾನು?''

ಚಂಚಲೆ—''ನಮ್ಮಂತಹ ರಾಜಕುಮಾರಿಯರ ಮಾನ ಕಾಯುವುದು ಕ್ಷತ್ರಿಯರೆನಿಸಿ ಕೊಳ್ಳುವವರ ಕರ್ತವ್ಯವಲ್ಲವೇನು?''

ವಿಕ್ರಮಸಿಂಹ—''ಹೌದು, ಅದು ಕ್ಷತ್ರಿಯರ ಕರ್ತವ್ಯವು. ಆ ಪವಿತ್ರ ಕರ್ತವ್ಯವನ್ನು ಮಹಾರಾಣಾ ಪ್ರತಾಪಸಿಂಹನೂ ಮರೆತಿದ್ದಿಲ್ಲ; ಈಗಿನ ಮಹಾರಾಣಾ ರಾಜಸಿಂಹನೂ ಮರೆತಿರುವುದಿಲ್ಲ; ಆದರೆ ಅದರಿಂದ ಈಗ ಏನು ಪ್ರಯೋಜನವಾಗುವುದು ಹೇಳು? ಹಿಂದಕ್ಕೆ ಮಾನಸಿಂಹನಂತಹ ವೀರಾಗ್ರಣಿಗಳು ಪ್ರತಾಪಸಿಂಹನ ದ್ವೇಷಮಾಡಿ ಆ ವೀರಪುಂಗವನನ್ನು ಅಡವಿಗಟ್ಟಿಸಿದರು. ಈಗಂತು ಕ್ಷತ್ರಿಯರಿಗೆ ಹೋಳಿಹುಣ್ಣಿಮೆ ಬಂದುಹೋಗಿದೆ, ಅಂದಬಳಿಕ ರಾಜಸಿಂಹನ ಬೆನ್ನು ಯಾವ ಕ್ಷತ್ರಿಯನು ಕಟ್ಟುವನು? ನಾನಾದರೂ ಇಂತಹ ಸಂಕಟಕ್ಕೆ ರಾಜಸಿಂಹನನ್ನು ಹೇಗೆ ಗುರಿಮಾಡಲಿ? ಹಾಗೆ ರಾಣಾನ ಸತ್ವ ಪರೀಕ್ಷೆ ಮಾಡುವುದು ನಮ್ಮ ಧರ್ಮವೆ?''

ಚಂಚಲಕುಮಾರಿ—''ಅವರ ಸತ್ವಪರೀಕ್ಷೆಯನ್ನು ನಾನು ಮಾಡಿದರೆ?''

ವಿಕ್ರಮಸಿಂಹ—''ವತ್ಸೇ, ಸರಳ ಹೃದಯದ ನಿನಗೆ ಕೈಲಾಗದ ಈ ಕ್ಷತ್ರಿಯನು ನಾನು ಏನೆಂದು ಉತ್ತರ ಕೊಡಲಿ? ನನ್ನಂತಹ ದುರ್ಬಲ ಕ್ಷತ್ರಿಯನ ಹೊಟ್ಟೆಯಲ್ಲಿ ಹುಟ್ಟಿದ್ದರಿಂದಲೇ ನೀನು ಈಗ ಪರಾವಲಂಬಿಯಾಗಬೇಕಾಯಿತು! ನಾನು ಅಧಮನು, ಅತ್ಯಂತ ಅಧಮನು! ನನ್ನ ಮೋಹದ ಕುಮಾರಿಯು ನೀನು, ಚಿತ್ತೂರ ಪೂಜ್ಯ ಪದ್ಮಿನೀ ರಾಣಿಯಂತೆ ಜೋಹಾರಕ್ಕೆ ಸಿದ್ಧಳಾಗಿದ್ದರೂ, ರಾಣಾ ಭೀಮದೇವನಂತೆ ರಣಭೂಮಿಯಲ್ಲಿ ದೇಹವಿಟ್ಟು ವೀರಸ್ವರ್ಗವನ್ನು ಪಡೆಯುವ ಧೈರ್ಯವು ನನಗೆ ಆಗಲೊಲ್ಲದಲ್ಲ! ತಂಗೀ, ಎಂಥ ನೀಚ ಸ್ವಾರ್ಥಿಯಮ್ಮಾ ನಾನು! ನನ್ನ ಒಂದೇ ಒಂದು ಆಧಾರದ ತಂತುವಾಗಿರುವ ನೀನು ತಟ್ಟನೆ ಸ್ವಾರ್ಥತ್ಯಾಗ ಮಾಡಿ ಜೋಹಾರಕ್ಕೆ ಸಿದ್ಧಳಾಗಿರುವಾಗ, ಮುದುಕನಾಗಿದ್ದ ನನಗೆ ಬಾದಶಹನ ವಿರುದ್ಧವಾಗಿ ಶಸ್ತ್ರ ಹಿಡಿಯುವ ಧೈರ್ಯವಾಗಲೊಲ್ಲದು! ಅಂದಬಳಿಕ ನಿನ್ನ ಪ್ರಶ್ನೆಗೆ ಉತ್ತರ ಕೊಡುವ ಯೋಗ್ಯತೆಯು ನನ್ನಲ್ಲಿ ಹೇಗೆ ಇದ್ದೀತು ಹೇಳು?''

ಈ ಮೇರೆಗೆ ಸಂಭಾಷಣವು ನಡೆದಿರುವಾಗ ದಿಲ್ಲಿಯ ರಾವುತನು ಅಲ್ಲಿಗೆ ಬಂದು—''ಒಂದು ಕ್ಷಣವೂ ತಡಮಾಡದೆ ಉತ್ತರ ಕೊಡಬೇಕೆ''ಂಬ ಬಾದಶಹನ ಕಟ್ಟಪ್ಪಣೆಯನ್ನು ಬಾಯಿಬಿಟ್ಟು ವಿಕ್ರಮಸಿಂಹನಿಗೆ ಹೇಳಿದನು. ದೊಡ್ಡವರ ಮನೆಯ ನಾಯಿಗಳು ಬಡ ಬಿಕ್ಷುಕರಿಗೆ ಏಕೆ ಅಂಜುವವು? ರಾವುತನ ಈ ಉದ್ಧಟತನದ ಮಾತುಗಳನ್ನು ಕೇಳುವುದು

ಚಂಚಲ ಕುಮಾರಿಯಿಂದ ಆಗದ್ದರಿಂದ, ಆಕೆಯು ತಟ್ಟನೆ ಎದ್ದು ಹೋಗಿಬಿಟ್ಟಳು. ಇತ್ತ ವಿಕ್ರಮಸಿಂಹನು ಎರಡನೆಯ ಗತಿಗಾಣದೆ, ''ತನ್ನ ಮಗಳನ್ನು ಬಹುಮಾನದಿಂದ ಕರೆದುಕೊಂಡು ಹೋಗಬಹುದೆಂ''ದು ಬಾದಶಹನಿಗೆ ಪತ್ರಮುಖದಿಂದ ತಿಳಿಸಿದನು.

ವಿಕ್ರಮಸಿಂಹನ ಈ ಉತ್ತರದ ಸುದ್ದಿಯು ದಿಲ್ಲಿಯಲ್ಲಿ, ಮುಖ್ಯವಾಗಿ ಬಾದಶಹನ ರಾಣೀವಾಸದಲ್ಲಿ ಬಹು ಬೇಗನೆ ಹಬ್ಬಿತು. ಇದನ್ನು ಕೇಳಿ ಕೆಲವು ಬೇಗಂರು—''ವಿಕ್ರಮ ಸಿಂಹನ ಸೊಕ್ಕು ಇಳಿಯಿತೆಂ''ದು ಸಂತೋಷಪಟ್ಟರು; ಕೆಲವು ಬೇಗಮರು—''ಪಾಪ! ಒಬ್ಬ ಸ್ವಾತಂತ್ರ್ಯಪ್ರೀತಿಯ ರಾಜನ ಮಗಳು ಈ ನರಕವಾಸದ ಕಷ್ಟಕ್ಕೆ ಗುರಿಯಾಗುವಳೆಂ''ದು ಮರುಗಿದರು. ಹೀಗೆ ಮರುಗುವ ಬೇಗಂರಲ್ಲಿ ಜೋಧಪುರೀ ಬೇಗಮಳು ಒಬ್ಬಳಾಗಿದ್ದಳು. ಆಕೆಯು ಮಾರವಾಡದ ರಜಪೂತ ಅರಸನ ಮಗಳು. ಭಾರತೇಶ್ವರನ ಹೆಂಡತಿಯಾಗಿದ್ದರೂ ಆಕೆಗೆ ಸುಖವಿದ್ದಿಲ್ಲ, ಆಕೆಯು ತನ್ನ ಹಿಂದುತ್ವವನ್ನು ಹಿಂದುಗಳ ದ್ವೇಷಿಯಾದ ಔರಂಗಜೇಬ ಬಾದಶಹನ ಅಂತರ್ಗೃಹದಲ್ಲಿಯೂ ಕಾಯ್ದುಕೊಂಡಿದ್ದಳು! ಆಕೆಯ ದಾಸಿಯರೆಲ್ಲರೂ ಹಿಂದುಗಳೇ ಆಗಿದ್ದರು; ಆಕೆಯ ಅಡಿಗೆ, ನೀರಿನವರೂ ಹಿಂದುಗಳೇ ಆಗಿದ್ದರು; ಕಾಶಿಯ ಶ್ರೀ ವಿಶ್ವೇಶ್ವರ ದೇವಾಲಯವನ್ನು ಕೈಮುಟ್ಟಿ ನಾಶಮಾಡಿದ ಔರಂಗಜೇಬನ ಮಹಾಲಿನಲ್ಲಿ ಜೋಧಪುರೀ ಬೇಗಂಳು ತನ್ನ ಇಷ್ಟದೇವತೆಯ ಗುಡಿಯನ್ನು ಕಟ್ಟಿಸಿದ್ದಳು! ಇಂತಹ ಧರ್ಮಾಭಿಮಾನಿಯು ಚಂಚಲ ಕುಮಾರಿಯ ಸಲುವಾಗಿ ಮರುಗಿದ್ದರಲ್ಲಿ ಆಶ್ಚರ್ಯವಿಲ್ಲ. ಮೇಲೆ ಚಂಚಲ ಕುಮಾರಿಯು ಆಕೆಯ ಆಪ್ತಳು. ಹೀಗೆ ಜೋಧಪುರಿಯು ನೊಂದು ಕೊಂಡಿರುವಾಗ, ಔರಂಗಜೇಬ ಬಾದಶಹನು ಒಂದು ದಿನ ಆಕೆಯ ಅಂತರ್ಗೃಹಕ್ಕೆ ಬಂದನು. ಆಗ ಮಾತಿಗೆ ಮಾತು ಹೊರಟು ಬೇಗಮಳು ಬಾದಶಹನನ್ನು ಕುರಿತು—''ಜಹಾಪನಾಹ, ಅಪ್ಪಣೆಯಾದ ಮಾತ್ರದಿಂದ ಮಹಾ ಮಹಾರಾಜರೂ ದಾಸಾನು ದಾಸರಾಗಿ ಈ ಚರಣಗಳಿಗೆರಗುತ್ತಿರಲು, ಖಾವಿಂದರ ಕ್ರೋಧಕ್ಕೆ ಚಂಚಲ ಕುಮಾರಿಯಂತಹ ಒಬ್ಬ ಕ್ಷುದ್ರ ಸಂಸ್ಥಾನಿಕನ ಮಗಳು ಬಲಿಯಾಗುವುದೆಂದರೇನು? ಅಲಮಗೀರರ ಮಹಾ ಸಾಮರ್ಥ್ಯಕ್ಕೆ ಇದು ಒಪ್ಪಬಹುದು?'' ಎಂದು ಕೇಳಲು, ಬಾದಶಹನು ನಕ್ಕನು. ಆದರೆ ಯಾವ ಮಾತೂ ಆಡಲಿಲ್ಲ. ಆ ಸಂಬಂಧದ ಹೆಚ್ಚಿನ ಸಂಗತಿಯನ್ನು ಬೇಗಮಗೆ ಹೇಳಲಿಲ್ಲ. ಇದರಿಂದ ಅಭಿಮಾನಿಯಾದ ಆ ಕ್ಷತ್ರಿಯಳಿಗೆ ಒಂದು ಬಗೆಯ ಅಪಮಾನವಾದಂತಾ ಯಿತು. ಆಕೆಯು ಮನಸ್ಸಿನಲ್ಲಿ—''ಭಗವಂತಾ, ನನಗೆ ಮರಣವು ಯಾಕೆ ಬರಬಾರದು? ಹೀಗೆ ಮಾನಗೇಡಿಯಾಗಿ ನಾನು ಎಷ್ಟು ದಿವಸ ಬಾಳಬೇಕು? ನನ್ನ ಮನಸ್ಸಿಲ್ಲದಿದ್ದರೂ ಬಾದಶಹರ ಪತ್ನಿಯಾದ ನನಗೆ ಈಗ ಪತ್ನಿತ್ವವನ್ನು ಕಾಯ್ದುಕೊಳ್ಳುತ್ತಿರುವಾಗ ಎಷ್ಟು ಕಷ್ಟವಾಗುತ್ತದಲ್ಲ! ಕ್ಷತ್ರಿಯ ರಾಜಕುಮಾರಿಯರ ಈ ನರಕಪ್ರವೇಶವು ಎಂದು ದೂರವಾದೀತು? ನನ್ನ ಪ್ರೀತಿಯ ಚಂಚಲೆಯ ಗತಿಯೇನು?''

ಈ ಮೇರೆಗೆ ಅಂದುಕೊಂಡು ಜೋಧಪುರಿಯು ತನ್ನೊಳಗೆ ಆಲೋಚಿಸ ಹತ್ತಿದಳು. ತನ್ನ ಆಪ್ತಳಾದ ಚಂಚಲಕುಮಾರಿಗೆ ಸಹಾಯ ಮಾಡಿದ ಹೊರತು ಆಕೆಗೆ ಸಮಾಧಾನವಾಗ ಲೊಲ್ಲದು. ಆಕೆಯು ತನ್ನ ನಂಬಿಕೆಯ 'ದೇವಿ' ಎಂಬ ಹೆಸರಿನ ಒಬ್ಬ ವೃದ್ಧ ದಾಸಿಯನ್ನು

ಕರೆದು—"ದೇವೀ, ನೀನು ಬಹು ತ್ವರೆಯಾಗಿ ಒಂದು ಕೆಲಸವನ್ನು ಮಾಡಬೇಕು. ನಮ್ಮ ಚಂಚಲಕುಮಾರಿಗೆ ಒದಗ ಬಹುದಾಗಿರುವ ಕಷ್ಟವನ್ನು ನಾನು ನೆನೆಸಲಾರೆನು. ನೀನು ಈಗಲೇ ರೂಪನಗರಕ್ಕೆ ಹೋಗು. ನಾನು ಕೊಡುತ್ತಿರುವ ಈ ನನ್ನ ಹಸ್ತದ ಮುದ್ರೆಯನ್ನು ಚಂಚಲಕುಮಾರಿಗೆ ತೋರಿಸಿದರೆ, ನಿನ್ನ ಮಾತಿನ ಮೇಲೆ ಆಕೆಯ ನಂಬಿಗೆಯು ಕೂಡುವುದು. ಆಮೇಲೆ ಆಕೆಯ ಮುಂದೆ ನಾನು ಹೇಳಿದೆನೆಂದು ಹೀಗೆ ಹೇಳು—"ನೀನು ರಜಪೂತ ಕನ್ಯೆಯಿರುತ್ತೀ. ಬಾದಶಹನ ಜನಾನ ಖಾನೆಯನ್ನು ಸೇರಿ ನನ್ನಂತೆ ಕಷ್ಟಕ್ಕೆ ಗುರಿಯಾಗಬೇಡ. ನಾನು ದಿನಾಲು ಮೃತ್ಯುವಿನ ಹಾದಿಯನ್ನು ನೋಡುತ್ತಿರುವೆನು! ನೀನು ಬಾದಶಹನ ಚಿತ್ರವನ್ನು ಕಾಲಿನಿಂದ ತುಳಿದು ತಿಕ್ಕಿದ್ದು ಬಾದಶಹನಿಗೆ ಗುಪ್ತಚಾರಳ ಮುಖಾಂತರ ಗೊತ್ತಾಗಿದೆ. ಚಿತ್ರ ಮಾರಲಿಕ್ಕೆ ಬಂದವಳು ಬಾದಶಹನ ಗುಪ್ತಚಾರಳು. ರಜಪೂತ ಸುಂದರಿಯರ ಗೊತ್ತು ಹಚ್ಚಿ ಬಾದಶಹನಿಗೆ ತಿಳಿಸುವುದು ಆಕೆಯ ಕೆಲಸವು. ಬಾದಶಹರು ನಿನ್ನ ಮೇಲೆ ಸಿಟ್ಟಾಗಿ, ನಿನ್ನನ್ನು ಉದೇಪುರೀ ಬೇಗಮಳ ಗುಡುಗುಡಿಯನ್ನು ತುಂಬಹಚ್ಚುವೆವೆಂದು ಪ್ರತಿಜ್ಞೆ ಮಾಡಿರುತ್ತಾರೆ. ಪ್ರಸಂಗಬಂದರೆ ನೀನು ವಿಷಕುಡಿದು ಸಾಯಿ; ಆದರೆ ಇಂತಹ ಅಪಮಾನ ಹೊಂದುವುದಕ್ಕಾಗಿ ಇಲ್ಲಿ ಬರಬೇಡ. ನಿನಗೆ ಬದುಕುವ ಇಚ್ಛೆಯಿದ್ದರೆ, ಉದೇಪುರದ ಮಹಾರಾಣಾ ಜಯಸಿಂಹನ ಮೊರೆಬೀಳು. ಮೊರೆಹೊಕ್ಕ ಅಬಲೆಯರ ರಕ್ಷಣೆ ಮಾಡುವುದು ಆ ಕ್ಷತ್ರಿಯೋತ್ತಮನ ಕರ್ತವ್ಯವು. ತನ್ನ ಆ ಕರ್ತವ್ಯವನ್ನು ಆ ಪರಾಕ್ರಮಿ ರಾಣಾನು ಕೊನೆಗಾಣಿಸದೆ ಇರನು."

ಬೇಗಮಳ ಈ ಮಾತುಗಳನ್ನು ಕೇಳಿ ಆ ಸ್ವಾಮಿಭಕ್ತಳು ತಟ್ಟನೆ ರೂಪನಗರಕ್ಕೆ ಹೊರಟುಬಿಟ್ಟಳು.

## ಬಾದಶಹನ ಜನಾನಖಾನೆ

ದಿಲ್ಲಿಯು ಮೊಗಲ ಬಾದಶಹರ ಪ್ರಸಿದ್ಧ ರಾಜಧಾನಿಯು. ಆ ರಾಜಧಾನಿಯ ಸಾರಾಂಶವು ಅದರ ಕೋಟೆಯಲ್ಲಿ, ಕೋಟೆಯ ಸಾರಾಂಶವು ಅದರೊಳಗಿನ ಅರಮನೆಯಲ್ಲಿ ಅರಮನೆಯ ಸಾರಾಂಶವು ಅದರೊಳಗಿನ ರಂಗಮಹಾಲಿನಲ್ಲಿ ಇರುವುದೆಂದು ಹೇಳಬಹುದು. ರಂಗಮಹಾಲಿನ ಸ್ಥಳವು ಅಷ್ಟು ವಿಸ್ತಾರವಾದದ್ದಲ್ಲ, ಜನಸಮೂಹವು ನೆರೆಯತಕ್ಕಂತಹದೂ ಅಲ್ಲ, ಅದು ಅಚ್ಚುಕಟ್ಟಿನ ಏಕಾಂತದ ಸ್ಥಾನವಾಗಿತ್ತು; ಆದರೆ ಅದರಲ್ಲಿರುವಷ್ಟು ಸೌಂದರ್ಯವೂ, ಅರ್ಥವೂ ಬೇರೆ ಎಲ್ಲಿಯೂ ಕಂಡುಬರುತ್ತಿದ್ದಿಲ್ಲ. ಅದು ಕುಬೇರನ ಹಾಗು ಕುಸುಮಾಯುಧನ ಮುಖ್ಯ ಸಂಚಾರದ ಸ್ಥಳವಾಗಿತ್ತು, ಅಲ್ಲಿ ಹೋಗಲಿಕ್ಕೆ ಸೂರ್ಯ-ಚಂದ್ರರೂ ಅಸಮರ್ಥರಾಗಿರುವಾಗ, ಉಳಿದವರ ಪಾಡೇನು? ಅಪ್ಪಣೆಯ ಹೊರತು ಅಲ್ಲಿ ಗಾಳಿಯೂ ಸುಳಿದಾಡುವ ಹಾಗಿದ್ದಿಲ್ಲ! ಯಮುನ ಪ್ರವೇಶವು ಅಲ್ಲಿ ಅಪರೂಪವಾಗಿ ಆಗುತ್ತಿತ್ತು;

ಆದರೆ ಕದ್ದು-ಮುಚ್ಚಿ, ಸ್ವರ್ಗ ಲೋಕದೊಳಗಿನ ಮೇನಕಾ, ಉರ್ವಶಿ, ತಿಲೋತ್ತಮೆ ಮೊದಲಾದ ಅಪ್ಸರೆಯರೂ ಆ ಶೃಂಗಾರಭವನವನ್ನು ನೋಡಿ ಬೆರಗಾಗಬಹುದಾಗಿತ್ತು. ಹೀಗೆ ಬಾದಶಹನ ರಂಗಮಹಾಲು ತ್ರಿಭುವನದಲ್ಲಿ ದುರ್ಲಭವಾಗಿದ್ದರೂ, ಅದು ಎಂತಹ ಪಾಪದ ಆಗರವಾಗಿತ್ತೆಂಬುದನ್ನು ವರ್ಣಿಸುವುದು ಅಶಕ್ಯವು.

ಈ ರಂಗಮಹಾಲಿನಲ್ಲಿಯೂ 'ಸಿಸವಿ ಮಹಾಲು' ಎಂಬುದು ಇತಿಹಾಸದಲ್ಲಿ ಪ್ರಸಿದ್ಧವಾಗಿರುವುದು. ಸಿಸವಿಯ ಅಚ್ಚ ಕರಿಯ ಕಟ್ಟಿಗೆಯ ಉಪಯೋಗವನ್ನು ಬಹು ಚಾತುರ್ಯದಿಂದ ಮಾಡಿ, ಬಂಗಾರ-ಮುತ್ತು-ರತ್ನಗಳ ಯೋಗದಿಂದ ಆ ಮಹಾಲಿನ ಸೌಂದರ್ಯವನ್ನು ಹೆಚ್ಚಿಸಿರುವುದರಿಂದ ಇದಕ್ಕೆ 'ಸಿಸವಿಯ ಮಹಾಲು' ಎಂಬ ಹೆಸರು ಬಂದಿರುವುದು. ಮಂದಿರದ ಸುಂದರವಾದ ನೆಲಗಟ್ಟಿನ ಮೇಲೆಲ್ಲ ಬಹು ಬೆಲೆಯುಳ್ಳ ರತ್ನಕೆಚ್ಚಿದ ಮೆತ್ತನ್ನ ರತ್ನಗಂಬಳಿಯನ್ನು ಹಾಸಿದ್ದರು. ಅದರ ಮೇಲೆ ಆನೆಯ ಹಲ್ಲಿನ ಸುಂದರವಾದ ಚಪ್ಪರಪಲ್ಲಂಗವು ಸರ್ವಾಲಂಕಾರಗಳಿಂದ ಶೋಭಿಸುತ್ತಿತ್ತು. ಪಲ್ಲಂಗದ ಸುತ್ತು ಮುತ್ತು ಶೃಂಗರಿಸಿದ ಸಣ್ಣ ಸಣ್ಣ ಚೌರಂಗಗಳಿದ್ದವು. ಅವುಗಳ ಮೇಲೆ ವಿವಿಧ ಫಲ-ಪುಷ್ಪಗಳು, ಸುಗಂಧ ದ್ರವ್ಯಗಳು, ತಾಂಬೂಲ ದ್ರವ್ಯಗಳು, ಉತ್ತಮೋತ್ತಮ ಖಾದ್ಯಗಳು ಇಡಲ್ಪಟ್ಟಿದ್ದವು. ಪಲ್ಲಂಗವು ಸುಂದರವಾದ ಬಹು ಬೆಲೆಯುಳ್ಳ ಚಾದರದಿಂದಲೂ, ಮಖಮಲಿನ ಅಪರೂಪದ ಗಾದಿ-ಗಿರದೆಗಳಿಂದಲೂ ಅಲಂಕೃತವಾಗಿತ್ತೆಂದು ಹೇಳಲವಶ್ಯಕವಿಲ್ಲ.

ಇಂತಹ ಸುಂದರವಾದ ಮಂದಿರದಲ್ಲಿ ಔರಂಗಜೇಬನ ಮಗಳಾದ ಜಿಬುನ್ನಿಸೆಯು ವಾಸಿಸುತ್ತಿದ್ದಳು. ಔರಂಗಜೇಬನ ಮೂವರು ಹೆಣ್ಣುಮಕ್ಕಳಲ್ಲಿ ಜಿಬುನಿನ್ನಸೆಯು ಅತ್ಯಂತ ರಾಜಕಾರಣಕುಶಲಳಾಗಿದ್ದಳು. ತಂದೆಯ ರಾಜಕಾರಬಾರದಲ್ಲಿ ಆಕೆಯ ಅಂಗವು ವಿಶೇಷವಾಗಿ ಇರುತ್ತಿತ್ತು. ಈ ಮೂವರು ಮಕ್ಕಳಲ್ಲಿ ಒಬ್ಬಳ ಲಗ್ನವನ್ನು ಮಾತ್ರ ಬಾದಶಹನು ತನ್ನ ಕಕ್ಕನ ಮಗನೊಡನೆ ಮಾಡಿದ್ದನು. ಬಾದಶಹನ ಇನ್ನು ಇಬ್ಬರು ಹೆಣ್ಣುಮಕ್ಕಳು ಅವಿವಾಹಿತರೇ ಆಗಿದ್ದರು. ಶಹಾಜಾದೆಯರು ಶಹಾಜಾದರನ್ನಲ್ಲದೆ ಬೇರೆ ಸಾಮಾನ್ಯರೊಡನೆ ಲಗ್ನವಾಗುವುದು ವಿಶೇಷವಾಗಿ ಔರಂಗಜೇಬ ಬಾದಶಹನಿಗೆ ಸೇರುತ್ತಿದ್ದಿಲ್ಲ. ಔರಂಗಜೇಬನ ಇಬ್ಬರು ತಂಗಿಯರೂ ಆಜನ್ಮ ಅವಿವಾಹಿತರಾಗಿಯೇ ಇದ್ದರು. ಅವರಲ್ಲಿ ಶೂಜಹಾನ್ ಆರಾ ಎಂಬುವಳು ತನ್ನ ತಂದೆಯಾದ ಶಹಾಜಾನ ಬಾದಶಹನ ಮುಖ್ಯ ಆಲೋಚಕಳಾಗಿದ್ದಳು. ಆಕೆಯ ಆಲೋಚನೆಯಂತೆ ರಾಜ್ಯಕಾರಭಾರ ಮಾಡಿಯೇ ಶಹಾಜಹಾನನು ಅಷ್ಟು ಪ್ರಸಿದ್ಧಿಗೆ ಬಂದಿದ್ದನು. ಇನ್ನೊಬ್ಬ ರೋಷನ್ ಆರಾ ಎಂಬವಳು ರಾಜಕಾರಣಕುಶಲಳಾಗಿದ್ದಳು. ಈ ಅಕ್ಕ ತಂಗಿಯರಲ್ಲಿ ಪರಸ್ಪರ ದ್ವೇಷವಿದ್ದದ್ದರಿಂದ, ರೋಷನ್ ಆರಾ ಬೇಗಮಳು ತನ್ನ ಅಣ್ಣನಾದ ಔರಂಗಜೇಬನ ಪಕ್ಷವನ್ನು ವಹಿಸಿ, ತಂದೆಯನ್ನು ಸೆರೆಯಲ್ಲಿಡಿಸಿ ಅಣ್ಣನಿಗೆ ರಾಜ್ಯವನ್ನು ಒದಗಿಸಿಕೊಟ್ಟಿದ್ದಳು. ಹೀಗೆ ದಿಲ್ಲಿಯ ಬಾದಶಹರ ಹೆಣ್ಣುಮಕ್ಕಳು ರಾಜಕಾರಣಪಟು ಗಳಾಗಿದ್ದರೂ, ಅವರ ಅನೀತಿಯ ವಿಷಯವಾಗಿ ಇತಿಹಾಸಕಾರರು ಉಲ್ಲೇಖಿಸಿರುವುದನ್ನು ನೋಡಿದರೆ, ಅಸಮಾಧಾನವಾಗದೆ ಇರುವುದಿಲ್ಲ.

ಜಿಬುನ್ನಿಸಾ ಬೇಗಮಳು ತಂದೆಯ ಕಿವಿ ಊದಿ ತನ್ನ ಸೋದರತ್ತೆಯಾದ ರೋಷನ್ ಆರಾ ಬೇಗಮಳನ್ನು ಕೊಲ್ಲಿಸಿದ್ದರಿಂದ, ಜಿಬುನ್ನಿಸೆಯ ಕೈಹಿಡಿಯುವವರು ಈಗ ಯಾರೂ ಇದ್ದಿಲ್ಲ. ಜಿಬುನ್ನಿಸೆಯು ಮನಸ್ಸಿಗೆ ಬಂದಂತೆ ನಡೆಯುವವಳು. ಪಾಪ–ಪುಣ್ಯಗಳ ವಿಚಾರವು ಸರ್ವಥಾ ಆಕೆಯನ್ನು ಸೋಂಕುತ್ತಿದ್ದಿಲ್ಲ. ಬಾದಶಾಹಿಯ ವಿಪುಲ ಐಶ್ವರ್ಯ, ಅಮರ್ಯಾದಿತ ಅಧಿಕಾರ, ಲಗ್ನದ ತೊಂದರೆಯ ಅಭಾವ! ಅಂದಬಳಿಕ ಆಕೆಯ ಸ್ವಚ್ಛಂದವೃತ್ತಿಗೆ ಇದಕ್ಕೂ ಹೆಚ್ಚಿನದೇನು ಬೇಕು? ಒಂದು ದಿನ ಜಿಬುನ್ನಿಸಾ ಬೇಗಮಳು ಮದ್ಯದ ಪಾತ್ರೆಯನ್ನು ಹಿಡಿದುಕೊಂಡು ತನ್ನ ಸಿಸವೆಯ ಮಹಾಲಿನ ಕಿಡಿಕೆಯ ಬಳಿಯಲ್ಲಿ ನಿಂತುಕೊಂಡು ಯಮುನಾನದಿಯ ಪ್ರವಾಹವನ್ನು ನೋಡುತ್ತಿದ್ದಳು. ಆಗ ಮುಬಾರಕನೆಂಬ ಶೂರನಾದ ಸರದಾರನು ಆಕೆಯ ಸಿಸವೆಯ ಮಹಾಲನ್ನು ಪ್ರವೇಶಿಸಿದನು. ಬಾದಶಹನ ರಂಗಮಹಾಲಿನಲ್ಲಿ ಪ್ರವೇಶಿಸಲು ಯಾರೂ ಸಮರ್ಥರಾಗಿರದಿದ್ದರೂ, ಜಿಬುನ್ನಿಸೆಯ ಪರವಾನಿಗೆಯಿಂದ ಎರಡು ಬಗೆಯ ಜನರು ಬೇಕಾದಾಗ ಸಿಸವೆಯ ಮಹಾಲನ್ನು ಪ್ರವೇಶಿಸಬಹುದಾಗಿತ್ತು. ರಾಜ್ಯದಲ್ಲಿ ನಡೆದ ಗುಪ್ತ ಸುದ್ದಿಗಳನ್ನು ಹೇಳಿ ಹಣ ಸಂಪಾದಿಸುವ ಗುಪ್ತಚಾರರು ಒಂದನೆಯ ಬಗೆಯವರು; ಅವರು ಹೆಂಗಸರೂ ಇರಬಹುದು, ಗಂಡಸರೂ ಇರಬಹುದು. ಇನ್ನು ಜಿಬುನ್ನಿಸೆಯ ಕೃಪೆಗೆ ಪಾತ್ರರಾದವರು ಎರಡನೆಯ ಬಗೆಯವರು. ಈಗ ಮಂದಿರವನ್ನು ಪ್ರವೇಶಿಸಿದ್ದ ಮುಬಾರಕನು ಈಗ ಎರಡನೆಯ ಬಗೆಯವರಲ್ಲಿ ಒಬ್ಬನಾಗಿದ್ದನು. ಆತನು ಜಿಬುನ್ನಿಸೆಗೆ ಸಲಾಮು ಮಾಡಲು, ಜಿಬುನ್ನಿಸೆಯು ಕೊಟ್ಟ ಮದ್ಯ–ತಾಂಬೂಲಾದಿಗಳಿಂದ ಆತನು ಸಂತುಷ್ಟನಾದನು. ಆಗ ಜಿಬುನ್ನಿಸೆಯು ಮುಬಾರಕನನ್ನು ಕುರಿತು—

ಜಿಬುನ್ನಿಸೆ—''ಮುಬಾರಕ, ಕರೆಸದೆ ಏಕೆ ಬಂದೆ?''

ಮುಬಾರಕ—''ಕ್ಷಮಿಸಬೇಕು, ಒಮ್ಮೊಮ್ಮೆ ಕರೆಸದೆಯೂ ಬರುವ ಪ್ರಸಂಗ ಬರುತ್ತದೆ.''

ಜಿಬುನ್ನಿಸೆ—''ಈಗ ಅಂತಹ ಪ್ರಸಂಗವೇನು?''

ಮುಬಾರಕ—''ಸ್ವಲ್ಪ ದಿನಗಳಲ್ಲಿ ನಾನು ಪರದೇಶಕ್ಕೆ ಹೋಗಬೇಕಾಗಿದೆ.''

ಜಿಬುನ್ನಿಸೆ—''ಪರದೇಶಕ್ಕೆ ಹೋಗುವೆಯಾ? ಈ ವರೆಗೆ ಇದನ್ನು ನನ್ನ ಮುಂದೆ ಯಾಕೆ ಹೇಳಲಿಲ್ಲ?''

ಮುಬಾರಕ—ಇಂದೇ ಈ ಮಾತು ಗೊತ್ತಾಯಿತು.''

ಜಿಬುನ್ನಿಸೆ—''ಯಾವ ದೇಶಕ್ಕೆ ಹೋಗುವೆ?''

ಮುಬಾರಕ—''ರಜಪೂತಸ್ಥಾನದಲ್ಲಿ ರೂಪನಗರವೆಂಬುದೊಂದು ಸಣ್ಣ ಸಂಸ್ಥಾನವಿರುತ್ತದೆ. ಅಲ್ಲಿಯ ಅರಸನ ಮಗಳನ್ನು ಲಗ್ನವಾಗಬೇಕೆಂದು ಬಾದಶಹರು ಇಚ್ಛಿಸುತ್ತಿರುವರು; ಆದ್ದರಿಂದ ರಾಜಕನ್ಯೆಯನ್ನು ಕರೆತರುವುದಕ್ಕಾಗಿ ಸೈನ್ಯದೊಡನೆ ನಾಳೆ ಹೊರಡುವೆನು.''

ಜಿಬುನ್ನಸೆ—''ಬಹಳ ನೆಟ್ಟಗಾಯಿತು. ನೀನು ಅಲ್ಲಿಗೆ ಹೋಗುತ್ತಿರುವುದು ನನಗೆ ಅನುಕೂಲವು. ರಾಜಕನ್ಯೆಯ ತಂದೆಯು ನಿನ್ನ ಸಂಗಡ ಆಕೆಯನ್ನು ಕಳಿಸಿದರಂತೂ ಸರಿಯೆ. ಕಳಿಸದಿದ್ದರೆ ಒತ್ತಾಯದಿಂದ ಆಕೆಯನ್ನು ಕರೆದುಕೊಂಡು ಬಾ.''

ಮುಬಾರಕ—''ಹಾಗೆ ಮಾಡಬೇಕೆಂದು ಬಾದಶಹರ ಅಪ್ಪಣೆಯಾಗಿರುವುದಿಲ್ಲ.''

ಜಿಬುನ್ನಿಸೆ—''ನಾನೇ ಬಾದಶಹನೆಂದು ತಿಳಿ! ಬಾದಶಹನ ಇಚ್ಛೆಯು ಹಾಗಿಲ್ಲದಿದ್ದರೆ ಆತನು ನಿನ್ನ ಸಂಗಡ ಸೈನ್ಯವನ್ನೇಕೆ ಕಳಿಸುತ್ತಿದ್ದನು?''

ಮುಬಾರಕ—''ಮಾರ್ಗದಲ್ಲಿಯ ಸಂಕಟಗಳನ್ನು ದೂರಮಾಡಿಕೊಳ್ಳಲಿಕ್ಕೆ!''

ಜಿಬುನ್ನಿಸೆ—''ಬಾದಶಹನ ಸೈನ್ಯವು ಕೆಲಸಮಾಡದೆ ಹಾಗೆಯೇ ಕೈ ಅಲ್ಲಾಡಿಸುತ್ತ ಬರುವ ಸಂಭವವಾದರೂ ಇರುವುದೆಯೇ? ಮುಬಾರಕ, ಸಾಧಿಸಿದ ಉಪಾಯದಿಂದ ರಾಜಕುಮಾರಿಯನ್ನು ಎಳೆದುಕೊಂಡೇ ಬಾ! ಬಾದಶಹನು ಸಿಟ್ಟಾದರೆ ನಾನು ಇದ್ದೇನಲ್ಲ!''

ಮುಬಾರಕ—''ತಮ್ಮ ಅಪ್ಪಣೆಯು ಮಾನ್ಯವು! ಆದರೆ ತಾವು ಈ ಕೆಲಸದಲ್ಲಿ ಇಷ್ಟು ಮನಸ್ಸು ಹಾಕುವ ಕಾರಣವೇನು?''

ಜಿಬುನ್ನಿಸೆ—''ನಾನು ಉದೇಪುರೀ ಬೇಗಮಳ ಸೊಕ್ಕು ಇಳಿಸಬೇಕಾಗಿದೆ. ಎಲ್ಲ ಬೇಗಮರಲ್ಲಿ ತಾನು ಬಲು ಚೆಲುವೆಯೆಂಬ ಸೊಕ್ಕು ಆಕೆಗೆ ಬಹಳ ಇರುತ್ತದೆ. ರೂಪನಗರದ ಚಂಚಲಕುಮಾರಿಯು ಬಲು ಚೆಲುವೆಯೆಂದು ನನ್ನ ಗುಪ್ತಚಾರರು ನನಗೆ ಹೇಳಿದ್ದಾಳೆ. ಅಂತಹ ಸುಂದರಿಯಲ್ಲಿ ಬಾದಶಹನು ಆಸ್ಕತನಾಗುವುದು ಸ್ವಾಭಾವಿಕವು. ನಾನೇ ಹೇಳಿ ಆಕೆಯನ್ನು ಕರೆತಂದೆನೆಂದು ಬಾದಶಹನಿಗೆ ಗೊತ್ತಾದರೆ, ಬಾದಶಹನು ನನ್ನನ್ನು ಹೆಚ್ಚು ಪ್ರೀತಿಸುವನು. ಅಂದಬಳಿಕ ಉದೇಪುರಿಯ ಸೊಕ್ಕು ತಾನೇ ಇಳಿದು ನನ್ನ ಸಂಗಡ ಆಕೆಯು ಎಟ್ಟಿತನ ಮಾಡುವುದನ್ನು ಬಿಟ್ಟು ಬಿಡುವಳು.''

ಮುಬಾರಕ—''ತಮ್ಮ ಅಪ್ಪಣೆಯಂತೆ ಮಾಡುವೆನು.''

ಈ ಮೇರೆಗೆ ನುಡಿದು ಮುಬಾರಕನು ರಂಗಮಹಾಲಿನಿಂದ ಹೊರಟನು. ಹೋಗ ಹೋಗುತ್ತಾ ಬಾದಶಹನ ವಿಷಯವಾಗಿ ಆತನ ಮನಸ್ಸಿನಲ್ಲಿ ಹಲವು ವಿಚಾರಗಳು ಉತ್ಪನ್ನವಾದವು. ಔರಂಗಜೇಬನ ಕ್ರೂರತನದ ದರ್ಪಕ್ಕಾಗಿ ಆತನಿಗೆ ಎಲ್ಲರೂ ಅಂಜಿ ನಡೆಯುತ್ತಿದ್ದರು. ಆತನ ಗುಣಾವಗುಣಗಳನ್ನು ಅರಿಯದವರು ಯಾರೂ ಇದ್ದಿಲ್ಲ. ಔರಂಗಜೇಬನಿಗಿದ್ದಂತಹ ಅಲೌಕಿಕ ವೈಭವವು ಆಗಿನ ಕಾಲದ ಪೃಥ್ವಿಯೊಳಗಿನ ಯಾವ ಬಾದಶಹನಿಗೂ ಇದ್ದಿಲ್ಲವೆಂದು ಇತಿಹಾಸವು ಒಪ್ಪಿಕೊಳ್ಳುತ್ತಿರುವುದು. ಔರಂಗಜೇಬನು ಒಳ್ಳೆಯ ಬುದ್ಧಿಶಾಲಿಯು, ಧರ್ಮಿಷ್ಠನು, ಕರ್ಮಠನು, ಉದ್ಯೋಗಿಯು, ಎಲ್ಲ ಕಪಟ ಗುಣಗಳಿಂದ ಶೋಭಿಸುವವನು ಎಂಬ ಮಾತನ್ನು ಯಾರೂ ಅಲ್ಲಗಳೆಯುವುದಿಲ್ಲ. ಇಷ್ಟು ಗುಣಗಳುಳ್ಳವ ನಿದ್ದರೂ ಆತನು ಅತ್ಯಂತ ಪಾಪಿಯಾದುದರಿಂದ ಆತನಿರುವಾಗಲೇ ಮೊಗಲರಾಜ್ಯದ ಕೀಲಗಳು ಸಡಿಲಿಹೋಗಿ ರಾಜ್ಯವು ಲಿಕಿ–ಲಿಕಿಯಾಯಿತು. ಆತನಷ್ಟು ಧೂರ್ತನೂ, ಕಪಟಿಯೂ, ಸ್ವಾರ್ಥಸಾಧುವೂ, ಪ್ರಜಾಪೀಡಕನೂ ಮತ್ತೊಬ್ಬ ನಾಗಲಿಲ್ಲವೆಂದು ಹೇಳಬಹುದು. ಆ ಕಪಟಿಯಾದ ಸಾಮ್ರಾಟನು ತಾನು ಒಳ್ಳೆಯ ಜಿತೇಂದ್ರಿಯನೆಂದು ಜನರಲ್ಲಿ ತೋರಿಸಲು ಯತ್ನಿಸುತ್ತಿದ್ದನು; ಆದರೆ ರಂಗಮಹಲಿನಲ್ಲಿ ರಮಣಿಯರೊಡನೆ ರಮಿಸುವಲ್ಲಿ ಅವನಂತಹ ಬಾದಶಹನು ಅವನೇ ಆಗಿಹೋದನು. ಬಾದಶಹನ ಹಲವು ಮುಖ್ಯ ರಾಣಿಯರಲ್ಲಿ ರಜಪೂತ ಕನ್ನೆಯರೂ ಇದ್ದರು. ಜೋಧಪುರೀ ಬೇಗಂ, ಜಯಪುರೀ ಬೇಗಂ

ಮುಂತಾದವರು ಪ್ರಸಿದ್ಧವಾದ ಆಯಾ ರಜಪೂತ ಮನೆತನದ ಹೆಣ್ಣು ಮಕ್ಕಳಾಗಿದ್ದರು. ಒಬ್ಬ ಕ್ರೈಸ್ತಮತದ ಸುಂದರಿಯು ಉದೇಪುರೀ ಬೇಗಂ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದ್ದಳು. ಔರಂಗಜೇಬನ ಅಣ್ಣನಾದ ದಾರಾನ ಪಟ್ಟದ ರಾಣಿಯರಲ್ಲಿ ಆಕೆಯು ಒಬ್ಬಳು. ದಾರಾನ ಇನ್ನೊಬ್ಬ ಪಟ್ಟದರಾಣಿಯು ರಜಪೂತ ಕುಮಾರಿಯಾಗಿದ್ದಳು. ಆದರೆ ಅಣ್ಣನನ್ನು ಕೊಲ್ಲಿಸಿದ ಬಳಿಕ ತನ್ನ ಅತ್ತಿಗೆಯಾದ ಉದೇಪುರಿಯ ರೂಪಕ್ಕೆ ಮರುಳಾಗಿ ಕುರಾಣದ ಅಪ್ಪಣೆ ಯಿರುವುದೆಂದು ತೋರಿಸಿ ಔರಂಗಜೇಬನು ಆಕೆಯನ್ನು ಲಗ್ನವಾದನು. ಇನ್ನೊಬ್ಬ ಪಟ್ಟದ ರಾಣಿಯನ್ನು ಆತನು ಲಗ್ನವಾಗತಕ್ಕವನೇ, ಆದರೆ ರಜಪೂತ ಜಾತಿಯ ಆ ಪತಿವ್ರತೆಯು ವಿಷಕುಡಿದು ಸತ್ತಳು!

ಔರಂಗಜೇಬ ಬಾದಶಹನ ಇಂತಹ ದುಷ್ಟ ಗುಣಗಳ ನೆನಪಾಗಿ, ಜಿಬುನ್ನೀಸೆಯ ಕ್ರೂರ ಸ್ವಭಾವವು ಮನಸ್ಸಿಗೆ ಹೊಳೆದು ಈ ರೂಪನಗರದ ದಂಡಯಾತ್ರೆಯ ಪರಿಣಾಮವು ಏನಾಗುವುದೋ ಎಂದು ಮುಬಾರಕನು ಚಿಂತಿಸಿದನು. ಕ್ರೂರತನದಲ್ಲಿಯೂ, ಪಾಪಾಚರಣೆಯಲ್ಲಿಯೂ ಜಿಬುನ್ನೀಸೆಯು ತಂದೆಯನ್ನು ಮೀರಿದ್ದಳು. ಜನಾನಖಾನೆಯ ಸಂಪೂರ್ಣವಾದ ಅಧಿಕಾರವು ಆಕೆಯ ಕೈಯಲ್ಲಿ ಇದ್ದಿತು. ಜಿಬುನ್ನಿಸೆಯ ಪ್ರೇಮವು ತನ್ನ ಮೇಲೆ ವಿಶೇಷವಾಗಿ ಇದ್ದರೂ, ಆ ಕಠಿಣಹೃದಯದ ಶಹಾಜಾದಿಯು ಹೊತ್ತುಬಿದ್ದರೆ ಕ್ಷಣದಲ್ಲಿ ತನ್ನ ತಲೆ ಹೊಡಿಸಲಿಕ್ಕೆ ಹಿಂದೆಮುಂದೆ ನೋಡಲಿಕ್ಕಿಲ್ಲವೆಂದು ಅವನು ತಿಳಿದಿದ್ದನು. ಇಂತಹ ಅನಾಹುತಗಳೂ, ಅನಾಚಾರಗಳೂ ಜನಾನಖಾನೆಯಲ್ಲಿ ಮೇಲಿಂದ ಮೇಲೆ ಆಗುತ್ತಿದ್ದವು. ಜಿಬುನ್ನೀಸೆಯ ಅಂಜಿಕೆಯಿಂದಲೇ ಮುಬಾರಕನು ತನ್ನ ಮದುವೆಯ ಹೆಂಡತಿಯಾದ ದರಿಯಾಬೀಬಿಯನ್ನು ಬಿಟ್ಟುಬಿಟ್ಟಿದ್ದನು; ಆದರೆ ದರಿಯಾಬೀಬಿಯು ತನ್ನ ಗಂಡನ ಮನಸ್ಸು ಒಲಿಸಿಕೊಳ್ಳುವುದ ಕ್ಕಾಗಿಯೂ, ಜೇಬುನ್ನೀಸೆಯ ಸೇಡು ತೀರಿಸಿಕೊಳ್ಳುವುದಕ್ಕಾಗಿಯೂ ಹೊಂಚುಹಾಕಿದ್ದಳು. ಇಂತಹ ಹಲವು ತೊಡಕಿನ ವಿಚಾರಗಳು ಮುಬಾರಕನ ಮನಸ್ಸಿನಲ್ಲಿ ಬಂದು, ಆತನು ಬಹಳ ಉದಾಸೀನನಾದನು. ಮುಬಾರಕನು ಹೆಸರಾದ ವೀರನು, ಮರಣಕ್ಕೆ ಅಂಜದವನು; ಆದರೆ ತನ್ನ ಪಾಪದ ಕೃತಿಗಳು ಅವನ ಮನಸ್ಸನ್ನು ಕೊರೆಯುತ್ತಿದ್ದುದರಿಂದ ಅಲ್ಲಾನ ದರ್ಬಾರದಲ್ಲಿ ತನಗೆ ಯಾವ ಶಾಸನವಾಗುವುದೋ ಎಂಬ ಚಿಂತೆಯಿಂದ ಆಗಾಗ ಆತನು ಹಣ್ಣಾಗುತ್ತಿದ್ದನು. ಆದರೆ ವಿಷಯಲಂಪಟರಿಗೆ ಇಂತಹ ಪಶ್ಚಾತ್ತಾಪವು ಸ್ಥಿರವಾದದ್ದಲ್ಲ ವೆಂಬುದು ವಾಡಿಕೆಯ ಮಾತೇ ಆಗಿರುವುದು. ಅದು ಹೇಗೇ ಇರಲಿ, ಮುಬಾರಕನು ರೂಪನಗರದ ಪಾಪಮೂಲವಾದ ದಂಡಯಾತ್ರೆಯು ತನಗೆ ಕ್ಷೇಮಕರವಾಗದೆಂದು ಭಾವಿಸುತ್ತ ಸೈನ್ಯದೊಡನೆ ರೂಪನಗರದ ಹಾದಿಯನ್ನು ಹಿಡಿದನು.

# ಅನಂತಮಿಶ್ರರು

ತನ್ನ ತಂದೆಯಾದ ವಿಕ್ರಮಸಿಂಹನು ಬಾದಶಹನಿಗೆ ಕಳಿಸಿದ ಓಲೆಯಿಂದ ಚಂಚಲ ಕುಮಾರಿಯು ದುಃಖಿತಳಾದಳು. ಆಕೆಯು ತನ್ನ ತಂದೆಯ ಮೇಲೆಯೂ ತಪ್ಪುಹೊರಿಸುವ ಹಾಗಿದ್ದಿಲ್ಲ; ಏಕೆಂದರೆ, ಹಾಗೆ ಪತ್ರ ಬರೆಯದಿದ್ದರೆ, ಬಾದಶಹನು ತನ್ನ ತಂದೆಯ ಚಂಡಾಡಿ ರೂಪನಗರದ ನಾಡನ್ನು ಮಣ್ಣುಗೂಡಿಸುತ್ತಿದ್ದನೆಂಬುದು ಆಕೆಗೆ ಗೊತ್ತಿದ್ದಿತು! ಈ ಪ್ರಸಂಗದಲ್ಲಿ ತಾನು ಏನು ಮಾಡಬೇಕೆಂದು ಆಕೆಯು ಆಲೋಚಿಸತೊಡಗಿದಳು. ಜೀವ ಹೋದರೂ ಬಾದಶಹನ ಕೈಹಿಡಿಯಲಿಕ್ಕಿಲ್ಲವೆಂಬ ನಿಶ್ಚಯದಿಂದ ಆಕೆಯು ಕದಲುವ ಹಾಗಿದ್ದಿಲ್ಲ. ಹೀಗೆ ಆಕೆಯು ಏನೇನೋ ಎಣಿಕೆಹಾಕುತ್ತಿರುವಾಗ, ಆಕೆಯ ದಾಸಿಯಾದ ನಿರ್ಮಲೆಯು ಆಕೆಯನ್ನು ಕುರಿತು—

ನಿರ್ಮಲೆ—''ಅವ್ವನವರೇ, ಈಗಿನ ಕಠಿಣ ಪ್ರಸಂಗದಲ್ಲಿ ನೀವು ಬಾದಶಹನ ಕೈಹಿಡಿಯುವುದೇ ನನಗೆ ನೆಟ್ಟಗೆ ಕಾಣುತ್ತದೆ. ಎಷ್ಟೋ ರಜಪೂತ ಕನ್ಯೆಯರು ಹಾಗೆಮಾಡಿ ಧನ್ಯರಾಗಿ ಹೋಗಿರುವುದಿಲ್ಲವೇ?''

ಚಂಚಲಕುಮಾರಿ—''ಹೀಗೆ ನೀನು ಹೇಳುವುದಕ್ಕಿಂತ ನನ್ನ ಬಳಿಯಿಂದ ನೀನು ಹೊರಟುಹೋಗುವುದು ನೆಟ್ಟಗೆ ಕಾಣುತ್ತದೆ; ನಿರ್ಮಲೇ, ನನಗೆ ಸುಖವು ಬೇಡ, ಸ್ವಾತಂತ್ರ್ಯದ ಗುಡಿಸಲವು ಬೇಕು!''

ನಿರ್ಮಲೆ—''ಹಾಗಾದರೆ ಏನು ಮಾಡಬೇಕೆನ್ನುವಿರಿ?''

ಚಂಚಲಕುಮಾರಿ—''ಮಹಾರಾಣಾ ರಾಜಸಿಂಹರ ಬೆನ್ನು ಬೀಳಬೇಕೆನ್ನುವೆನು.''

ನಿರ್ಮಲೆ—''ಅವರು ನಿಮ್ಮ ಬೆನ್ನು ಕಟ್ಟದಿದ್ದರೆ?''

ಚಂಚಲಕುಮಾರಿ—''ಇಗೋ, ಈ ನನ್ನ ಉಂಗುರವು ಇರುತ್ತದಲ್ಲ!''

ನಿರ್ಮಲೆ—''ಏನು? ನೀವು ವಿಷಕುಡಿದು ಸಾಯುವಿರಾ?''

ಚಂಚಲಕುಮಾರಿ—''ಮತ್ತೇನು ಮಾಡಲಿ? ಮಾನಗೇಡಿಯಾಗಿ ಬದುಕಬೇಕೆನ್ನುವೆಯೊ, ಏನು?''

ನಿರ್ಮಲೆ—''ನಿಮಗೆ ಏನು ಹೇಳಲಿಕ್ಕೂ ನಾನು ತಕ್ಕವಳಲ್ಲ, ನೀವು ಹೇಳಿದಂತೆ ಕೇಳುವುದಷ್ಟು ನನ್ನ ಕೆಲಸವು.''

ಚಂಚಲೆ—(ಕಣ್ಣೀರು ಸುರಿಸುತ್ತ) ''ನಿರ್ಮಲೆ, ನೀವೆಲ್ಲರೂ ಹೀಗೆ ನನ್ನ ಕೈಬಿಟ್ಟರೆ ನಾನೇನು ಮಾಡಬೇಕು? ವಿಷಕುಡಿದು ನಾನು ಸತ್ತೇನು; ಸಂಕಟ ಒದಗಿದಾಗ ಇದಕ್ಕೂ ಹೆಚ್ಚಿನ ಕೆಲಸವನ್ನು ಹೆಂಗಸರೇನು ಮಾಡಬಲ್ಲರು? ಆದರೆ ದುಷ್ಟ ಬಾದಶಹನಿಗೆ ನಾಮು ಹಚ್ಚದಿದ್ದರೆ, ನಾನು ಆತನ ಚಿತ್ರವನ್ನೂ, ಪತ್ರವನ್ನೂ ತುಳಿದದ್ದರಲ್ಲಿ ಏನು ಹುರುಳು ಇದ್ದಂತಾಯಿತು?''

ನಿರ್ಮಲೆ—''ನಿಮ್ಮನ್ನು ರಕ್ಷಿಸಿರೆಂದು ಹೇಳಲಿಕ್ಕೆ ಮಹಾರಾಣಾ ರಾಜಸಿಂಹರ ಬಳಿಗೆ ನಾನೇ ಹೋಗಿಬಿಡಲಾ?''

ಚಂಚಲಕುಮಾರಿ—''ಇಬ್ಬರೂ ಹೋಗೋಣ.''

ನಿರ್ಮಲೆ—''ಛಿ, ಛಿ! ನೀವು ಬರುವುದು ಸರಿಯಲ್ಲ, ಕಲ್ಲು–ಮುಳ್ಳು ತುಳಿಯುವುದು ನಿಮ್ಮಿಂದ ಆಗಲಾರದು. ಮೇಲೆ ಹಾದಿಯಲ್ಲಿ ಕಳ್ಳರು–ಕಾಕರ ಭಯ!''

ಈ ಮೇರೆಗೆ ಅವರು ವಿಚಾರಮಾಡುತ್ತ ಕುಳಿತಿರಲು, ಯಾವಳೋ ಒಬ್ಬ ಮುದುಕಿಯು ಮುತ್ತು ಮಾರಲಿಕ್ಕೆ ಬಂದಿರುವಳೆಂದು ಬಾಗಿಲ ಕಾಯುವವಳು ಹೇಳಿದಳು. ಅದಕ್ಕೆ ಚಂಚಲೆಯು—''ಈಗ ಮುತ್ತುಗಳು ನನಗೆ ಬೇಕಾಗಿಲ್ಲ''ವೆಂದು ಹೇಳಲು, ದಾಸಿಯು—''ಈ ಮಾತು ನಾನು ಮೊದಲೇ ಆಕೆಗೆ ಹೇಳಿದೆನು; ಆದರೆ ಆಕೆಯು ಕೇಳಲೊಲ್ಲಳು. ತಮ್ಮ ಸಂಗಡ ಏನೋ ಮಾತಾಡಬೇಕೆಂದು ಆಕೆಯು ಬಂದಿರುವಂತೆ ತೋರುತ್ತದೆ.''

ಚಂಚಲಕುಮಾರಿಯ ಅಪ್ಪಣೆಯಂತೆ ಮುತ್ತುಮಾರುವ ಮುದುಕಿಯು ಒಳಗೆ ಬಂದು, ಖೊಟ್ಟಿ ಮುತ್ತಿನ ಸರವನ್ನು ರಾಜಕುಮಾರಿಗೆ ತೋರಿಸಿದಳು. ಅದನ್ನು ನೋಡಿ ಚಂಚಲೆಯು—

ಚಂಚಲೆ—''ಇದಕ್ಕಾಗಿಯೇ ಏನು ನೀನು ಇಷ್ಟು ಚಂಡಿತನ ಮಾಡಿ ಒಳಗೆ ಬಂದದ್ದು?''

ಮುದುಕಿ—''ಇಲ್ಲ, ನಾನು ಈ ಖೊಟ್ಟಿ ಮುತ್ತು ತೋರಿಸಲಿಕ್ಕೆ ಬಂದಿಲ್ಲ, ನಿಮಗೆ ಏಕಾಂತದಲ್ಲಿ ಒಂದು ಸುದ್ದಿಯನ್ನು ಹೇಳಲಿಕ್ಕೆ ಬಂದಿದ್ದೇನೆ.''

ಚಂಚಲೆ—''ಹೇಳು, ಈ ನಿರ್ಮಲೆಯು ನನಗೆ ಹೊರಗಿನವಳಲ್ಲ, ಏನು ಹೇಳುವುದನ್ನು ಬೇಗನೆ ಹೇಳು.''

ಆ ಮುದುಕಿಯು ಜೋಧಪುರೀ ಬೇಗಮಳ ದಾಸಿಯಾದ ದೇವಿ ಎಂಬುದು ವಾಚಕರ ಮನಸ್ಸಿಗೆ ಹೊಳೆದಿರಬಹುದು. ದೇವಿಯು ಜೋಧಪುರಿಯ ಹಸ್ತದ ಮುದ್ರಿಕೆಯನ್ನು ತೋರಿಸಿ, ಆಕೆಯು ಹೇಳಿದ ಮಾತುಗಳನ್ನೆಲ್ಲ ಹೇಳಿದಳು. ತನ್ನ ಆಲೋಚನೆಗೆ ತನ್ನ ಹತ್ತಗಡೆಯವಳಾದ ಬೇಗಮಳ ಮಾತಿನಿಂದ ಕಸುವು ಬಂದದ್ದಕ್ಕಾಗಿ ಚಂಚಲೆಗೆ ಬಹಳ ಆನಂದವಾಯಿತು. ಆಕೆಯು ದೇವಿಯ ಮುಂದೆ ಬೇಗಮಳ ಉಪಕಾರವನ್ನು ಬಹಳವಾಗಿ ನೆನಿಸಿದಳು. ಆ ಸ್ವಾಮಿಭಕ್ತಳಾದ ದೇವಿಯು ಅಲ್ಲಿ ಒಂದು ಕ್ಷಣವೂ ನಿಲ್ಲದೆ, ರಾಜಕುಮಾರಿಯ ಅಪ್ಪಣೆ ಪಡೆದು ತನ್ನ ಒಡೆಯಳ ಬಳಿಗೆ ಈ ಸುದ್ದಿಯನ್ನು ಹೇಳುವುದಕ್ಕಾಗಿ ಹೊರಟುಹೋದಳು. ಹೋಗುವಾಗ ಆಕೆಯು ಬೇಕೆಂತಲೇ ಬೇಗಮಳ ಹಸ್ತದ ಮುದ್ರೆಯನ್ನು ಅಲ್ಲಿ ಬಿಟ್ಟುಹೋದಳು.

ಇತ್ತ ರಾಜಕುಮಾರಿಯೂ, ನಿರ್ಮಲೆಯೂ ಆಲೋಚನೆ ಹಾಕಿ ಹಾಕಿ ಕಡೆಗೆ, ತಮ್ಮ ಪುರೋಹಿತರಾದ ಅನಂತಮಿಶ್ರರನ್ನು ಮಹಾರಾಣಾ ರಾಜಸಿಂಹರ ಬಳಿಗೆ ಕಳಿಸಬೇಕೆಂದು ಗೊತ್ತಾಯಿತು. ಚಂಚಲಕುಮಾರಿಯ ಅಪ್ಪಣೆಯಂತೆ ನಿರ್ಮಲೆಯು ಅನಂದಮಿಶ್ರರನ್ನು ಕರಕೊಂಡು ಬಂದಳು. ಚಂಚಲೆಯು ಆ ಸತ್ವಸ್ಥ ಬ್ರಾಹ್ಮಣರ ಚರಣಕ್ಕೆರಗಲು, ಮಿಶ್ರರು ಆಕೆಯನ್ನು—''ಸೌಭಾಗ್ಯವತೀಭವ, ಪುತ್ರವತೀಭವ'' ಎಂದು ಆಶೀರ್ವದಿಸಿ, ಕರೆಸಿದ ಕಾರಣವನ್ನು ಕೇಳಿದರು. ಮಿಶ್ರರು ಚಂಚಲಕುಮಾರಿಯನ್ನು ಹೊಟ್ಟೆಯ ಮಗಳಂತೆ

ಪ್ರೀತಿಸುತ್ತಿದ್ದರು. ಮಹಾ ತೇಜಸ್ವಿಗಳಾದ ಅನಂತಮಿಶ್ರರಲ್ಲಿ ಚಂಚಲೆಯ ಭಕ್ತಿಯು ಬಹಳ. ಅನಂತಮಿಶ್ರರು ಬರಿಯ ಚಂಡಿಕೆ-ಜನಿವಾರಗಳ ಬ್ರಾಹ್ಮಣರಲ್ಲ, ಅವರು ಚಂಚಲೆಯ ಕ್ಷಾತ್ರತೇಜಸ್ಸಿಗೆ ಒಪ್ಪುವಂತಹ ಬ್ರಹ್ಮತೇಜಸ್ಸುಳ್ಳವರಾಗಿದ್ದರು. ಧರ್ಮಮೂರ್ತಿಗಳಾದ ಆ ಬ್ರಾಹ್ಮಣೋತ್ತಮರು ಚಂಚಲಕುಮಾರಿಯ ಯೋಗ್ಯ ವಿಚಾರಕ್ಕಾಗಿ ಆಕೆಯನ್ನು ಬಹಳವಾಗಿ ಹೊಗಳಿ, ಉದಯಪುರಕ್ಕೆ ರಾಣಾನ ಬಳಿಗೆ ಹೋಗಲು ಸಂತೋಷದಿಂದ ಒಪ್ಪಿಕೊಂಡರು. ಈ ಪ್ರಸಂಗವನ್ನು ರುಕ್ಮಿಣಿಯ ಪುರೋಹಿತನು ಶ್ರೀಕೃಷ್ಣನ ಬಳಿಗೆ ಹೋದದ್ದರ ನೆನಪಾಗಲು, ಹೀಗೆ ಭಗವಂತನ ಸ್ಮರಣವಾದದ್ದೊಂದು ಶುಭಸೂಚನೆಯೆಂದು ಆ ಭಾವಿಕ ಬ್ರಾಹ್ಮಣನು ತಿಳಿದುಕೊಂಡನು. ದಾರಿಯ ವೆಚ್ಚಕ್ಕಾಗಿ ಒಂದು ಮೊಹರು ತುಂಬಿದ ರೇಶಿಮೆಯ ಚೀಲವನ್ನು ಚಂಚಲೆಯು ಮಿಶ್ರರ ಕೈಯಲ್ಲಿ ಕೊಡಲು, ಅದನ್ನು ನೋಡಿ ಅವರು—''ಅಯ್ಯೋ! ಇಷ್ಟು ಮೊಹರುಗಳೇತಕ್ಕೆ? ಹಾದಿಯಲ್ಲೇನು ಮೊಹರುಗಳನ್ನೇ ತಿನ್ನಬೇಕಾಗಿದೆಯೇ?'' ಎಂದು ಐದು ಮೊಹರುಗಳನ್ನು ಇಟ್ಟುಕೊಂಡು, ಮೊಹರಿನ ಚೀಲವನ್ನು ರಾಜಕುಮಾರಿಯ ಕೈಯಲ್ಲಿ ಕೊಟ್ಟುಬಿಟ್ಟರು. ಆ ನಿಸ್ಪೃಹಿ ಬ್ರಾಹ್ಮಣನ ಮುಂದೆ ಹೆಚ್ಚು ಮಾತನಾಡುವ ಧೈರ್ಯವು ಚಂಚಲೆಗೆ ಆಗಲಿಲ್ಲ, ಅವರು ಐದು ಮೊಹರುಗಳನ್ನು ತಕ್ಕೊಂಡದ್ದೇ ತನ್ನ ಮೇಲಿನ ಅನುಗ್ರಹದ ಲಕ್ಷಣವೆಂದು ಆಕೆಯು ತಿಳಿದಳು. ಅನಂತಮಿಶ್ರನು ಅಲ್ಲಿಂದ ನೆಟ್ಟಗೆ ವಿಕ್ರಮಸಿಂಹನ ಬಳಿಗೆ ಹೋಗಿ, ತಾನು ಉದೇಪುರಕ್ಕೆ ಹೋಗಬೇಕಾಗಿರುವುದರಿಂದ ರಾಣಾ-ರಾಜಸಿಂಹರ ಹೆಸರಿನಿಂದ ಒಂದು ಪತ್ರವನ್ನು ಕೊಡಬೇಕೆಂದು ಕೇಳಿದನು. ವಿಕ್ರಮಸಿಂಹನು ಸಂತೋಷದಿಂದ ಒಂದು ಪತ್ರವನ್ನು ಬರೆದು ಕೊಡಲು, ಆ ಸರಳಹೃದಯದ ಬ್ರಾಹ್ಮಣನು ತನ್ನ ಮನೆಗೆ ಹೋದನು. ವಿಕ್ರಮಸಿಂಹನು ಈಗ ಉದೇಪುರಕ್ಕೆ ಯಾಕೆ ಹೋಗುವಿರೆಂದು ಮಿಶ್ರರನ್ನು ಕೇಳಲಿಲ್ಲ, ಅವರೂ ಹೇಳಲಿಲ್ಲ. ನಮ್ಮ ಪುರೋಹಿತರು ತಮ್ಮನ್ನು ಕಾಣಲಿಕ್ಕೆ ಬಂದಿರುವರೆಂದು ವಿಕ್ರಮಸಿಂಹನು ಗುರುತಿನಮಟ್ಟಿಗೆ ರಾಜಸಿಂಹನಿಗೆ ಪತ್ರಬರೆದುಕೊಟ್ಟಿದ್ದನು.

ರಾಜಪುರೋಹಿತರಾದ ಅನಂತಮಿಶ್ರರು ತಮ್ಮ ಗಂಟು-ಗದಡಿಗಳನ್ನು ಕಟ್ಟಿಕೊಂಡು ತಮ್ಮ ಹೆಂಡಿರು-ಮಕ್ಕಳಿಗೆ ಬಡಬ್ರಾಹ್ಮಣನಂತೆ ಉದೇಪುರದ ಹಾದಿಯನ್ನು ಹಿಡಿದರು; ಯಾಕೆಂದರೆ ಆಗ ರಾಜಪೌರೋಹಿತ್ಯದ ವೈಭವವನ್ನು ಅವರು ತೋರಿಸುವ ಹಾಗಿದ್ದಿಲ್ಲ. ಗುಪ್ತ ಕಾರ್ಯಕ್ಕಾಗಿ ಬಡಬ್ರಾಹ್ಮಣರಂತೆಯೇ ಅವರು ಹೋಗಬೇಕಾಗಿತ್ತು, ಅವರು ಮತ್ತೆ ಚಂಚಲ ಕುಮಾರಿಯ ಬಳಿಗೆ ಹೋಗಿ—''ಕುಮಾರೀ, ನೀನು ರಾಣಾನ ಹೆಸರಿನಿಂದ ಒಂದು ಪತ್ರ ಬರೆದುಕೊಡುವುದು ನೆಟ್ಟಗೆ ಕಾಣತ್ತದೆ. ಈ ಮಾತು ವಿಚಾರಾಂತದಲ್ಲಿ ನನಗೆ ಗೊತ್ತಾಯಿತು. ಬ್ರಾಹ್ಮಣರು ಪಶ್ಚಾತ್ ಬುದ್ಧಿಗಳೆಂಬ ಮಾತು ಸುಳ್ಳಲ್ಲ. ನೀನೇ ನೋಡು, ನಾನು ಬಾಯಿಮಾತಿ ನಿಂದ ಬೇಕಾದಷ್ಟು ಹೇಳಿದರೂ, ನಿನ್ನ ಪತ್ರದಿಂದ ರಾಣಾನ ಮನಸ್ಸು ಕರಗಿದಂತೆ ನನ್ನ ಮಾತುಗಳಿಂದ ಕರಗಲಿಕ್ಕಿಲ್ಲ. ಹುಂ! ಬರೆ ಬೇಗನೆ ಪತ್ರವನ್ನು! ಆ ದುಷ್ಟ ಬಾದಶಹನ ಸೈನ್ಯವು ಇಲ್ಲಿಗೆ ಬರುವುದರೊಳಗಾಗಿಯೇ ರಾಣಾನಿಗೆ ನಿನ್ನ ಪತ್ರವು ಮುಟ್ಟಬೇಕಾಗಿರುವುದು.

ಚತುರಳಾದ ಚಂಚಲಕುಮಾರಿಗೆ ಮಿಶ್ರರ ಮಾತಿನಿಂದ ಸಂತೋಷವಾಯಿತು. ತನ್ನ ಮನಸ್ಸಿನಲ್ಲಿದ್ದರೂ ಮಿಶ್ರರಂತಹ ಸತ್ವಸ್ಥ ಬ್ರಾಹ್ಮಣರ ಮುಂದೆ ಪತ್ರದ ಮಾತು ತೆಗೆಯುವ ಧೈರ್ಯವು ಆಕೆಗೆ ಆಗಿದ್ದಿಲ್ಲ; ತಾನು ಪ್ರತ್ಯಕ್ಷ ಹೋಗದಿದ್ದರೂ, ತಾನು ಕೈಮುಟ್ಟಿ ಬರೆದ ಪತ್ರವಾದರೂ ಹೋಗುವುದು ಅವಶ್ಯವೆಂದು ಆಕೆಯು ತಿಳಿದಿದ್ದಳು. ತನಗಾಗಿರುವ ತಾಪದಿಂದ ಹೃದಯ ಕರಗಿದ ಆ ಭುವನಸುಂದರಿಗೆ, ರಾಣಾನ ಹೃದಯವು ಕರಗಿ ನೀರಾಗುವಂತೆ ಪತ್ರ ಬರೆಯಲಿಕ್ಕೆ ತಡವಾಗಲಿಲ್ಲ. ಆಕೆಯು ಪತ್ರವನ್ನು ಮುಗಿಸಿ, ಅದರಲ್ಲಿ ತನ್ನ ಪ್ರೇಮವನ್ನು ಹಾಕಿ ಮಡಿಚಿ, ತನ್ನದೊಂದು ರತ್ನಕಂಕಣದೊಡನೆ ಅದನ್ನು ಅನಂತಮಿಶ್ರರ ಕೈಯಲ್ಲಿ ಕೊಟ್ಟಳು. ಪತ್ರ ಬರೆಯುವಾಗ ಬರತೊಡಗಿದ್ದ ಕಣ್ಣೀರ ಹನಿಗಳನ್ನು ಎಷ್ಟು ತಡೆದಿದ್ದರೂ, ಆಕೆಯ ಗಲ್ಲಗಳ ಮೇಲೆ ಬಿದ್ದಿದ್ದ ಒಂದೆರಡು ಹನಿಗಳಿಂದ ಆಕೆಯ ಸೌಕುಮಾರ್ಯದ ಸೌಂದರ್ಯವು ಹೆಚ್ಚಿದ್ದು ಅನಂತಮಿಶ್ರರ ಕಣ್ಣಿಗೆ ಬೀಳದೆ ಹೋಗಲಿಲ್ಲ. ಆಗ ಆ ಬ್ರಾಹ್ಮಣನು ಚಂಚಲೆಗೆ—

''ರಾಜಕುಮಾರೀ, ಸಮಾಧಾನ ತಾಳು. ಪತ್ರ ಬರೆಯುವಾಗ ನಿನ್ನ ಮನಸ್ಸಿಗೆ ಹಲವು ಕಾರಣಗಳಿಂದ ದುಃಖವಾಗಿರುವುದರಲ್ಲಿ ಸಂಶಯವಿಲ್ಲ. ನೀನು ಕಣ್ಣೀರು ಸುರಿಸುತ್ತ ಬರೆದ ಪತ್ರದಿಂದ ಮಹಾರಾಜನ ಕಣ್ಣೀರು ಉದುರಿ, ಆ ಪ್ರತಾಪಿಯು ಅಲಮಗೀರ ಬಾದಶಹನಿಂದ ಕಣ್ಣೀರು ಹಾಕಿಸದೆಬಿಡನು. ಈ ಬ್ರಾಹ್ಮಣನ ಮಾತನ್ನು ಸತ್ಯವೆಂದು ತಿಳಿದು ನಿಶ್ಚಿಂತಳಾಗಿರು, ಹೋಗಿಬರುತ್ತೇನೆ!''

ಈ ಮೇರೆಗೆ ನುಡಿದು ಬ್ರಾಹ್ಮಣನು ಹಾದಿಯನ್ನು ಹಿಡಿದನು. ರಾಜಪುರೋಹಿತನಾದ ಅನಂತಮಿಶ್ರನು ಹೀಗೆ ಬಡಬ್ರಾಹ್ಮಣನಂತೆ ಹೊರಟಿದ್ದು ಯಾರಿಗೂ ಆಶ್ಚರ್ಯಕರವಾಗಿ ತೋರಲಿಲ್ಲ; ಯಾಕೆಂದರೆ, ಅರಮನೆಯ ಪೌರೋಹಿತ್ಯದ ಕೆಲಸವಿದ್ದಾಗ ಮಾತ್ರ ಅನಂತ ಮಿಶ್ರರು ಅನಿರ್ವಾಹಪಕ್ಷ ರಾಜಪೌರೋಹಿತ್ಯದ ಆಡಂಬರಕ್ಕೆ ಒಳಗಾಗುತ್ತಿದ್ದರಲ್ಲದೆ, ಉಳಿದ ಪ್ರಸಂಗದಲ್ಲಿ ನಿಜವಾದ ಬ್ರಾಹ್ಮಣರ ಜನ್ಮಸಿದ್ಧವಾದ ಬಡತನವು ಅವರ ಬೆನ್ನು ಹತ್ತಿಯೇ ಇರುತ್ತಿತ್ತು. ಅನಂತಮಿಶ್ರರು ಕಾಲಕಾಲಕ್ಕೆ ಕರ್ಮಗಳನ್ನು ಮಾಡುತ್ತ ಹಗಲು ಮಾತ್ರ ಹಾದಿ ನಡೆಯುತ್ತ, ಸಾಯಂಕಾಲ ಸಂಧ್ಯಾವಂದನೆಯ ಹೊತ್ತಿನೊಳಗಾಗಿ ಊರು ಸೇರಿ ಯೋಗ್ಯ ಗುಡಿ–ಗುಂಡಾರ ನೋಡಿ ಇಳಿದುಕೊಳ್ಳುತ್ತ ಸಾಗಿದ್ದರು. ಹೀಗೆ ಪ್ರವಾಸ ಮಾಡುತ್ತ ಒಂದು ದಿನ ಅವರು ಒಂದು ಊರ ಧರ್ಮಶಾಲೆಯಲ್ಲಿ ಇಳಿದು ಕೊಳ್ಳುತ್ತಿರಲು, ಆ ಮೊದಲೆ ಅಲ್ಲಿ ನಾಲ್ಕು ಜನ ವ್ಯಾಪಾರಿಗಳು ಇಳಿದುಕೊಂಡಿದ್ದರು. ಅವರು ಉದೇಪುರಕ್ಕೆ ಹೋಗುವವರೆಂದು ಹೇಳಿದ್ದರಿಂದ ಅನಂತಮಿಶ್ರರಿಗೆ ಅನಾಯಾಸ ಸಂಗತಿ ಸಿಕ್ಕಿತೆಂದು ಸಮಾಧಾನವಾಯಿತು.

ಮರುದಿನ ಬೆಳಗಾಗುತ್ತಲೆ ಪ್ರಾತಃಕಾಲದ ಅಹ್ನಿಕವು ಮುಗಿಯಲು, ಮಿಶ್ರರು ವ್ಯಾಪಾರಸ್ಥರೊಡನೆ ಹಾದಿಯನ್ನು ಹಿಡಿದರು. ಅಲ್ಲಿಂದ ಉದೇಪುರವು ಆರುತಾಸಿನ ಹಾದಿಯಿದ್ದಿತು. ಮಾರ್ಗದಲ್ಲಿ ಮಧ್ಯಾಹ್ನದ ಕರ್ಮಗಳನ್ನು ತೀರಿಸಿಕೊಂಡು ಸಾಯಂಕಾಲದ ಸಂಧ್ಯಾವಂದನೆಗೆ ಮಿಶ್ರರು ಉದೇಪುರಕ್ಕೆ ಹೋಗಬಹುದಾಗಿತ್ತು. ಅವರು ಐದುತಾಸಿಗೆ ಒಂದು ನದಿಯ ತೀರಕ್ಕೆ ಹೋದರು. ಅದು ಕಟ್ಟಡವಿ; ಸುತ್ತುಮುತ್ತು ಗುಡ್ಡಗಳು ಕೋಟೆ ಕಟ್ಟಿದಂತೆ

ಹಬ್ಬಿಕೊಂಡಿದ್ದವು. ಮನುಷ್ಯರ ಸಂಚಾರವಿಲ್ಲ. ಅನಂತಮಿಶ್ರರ ಮಧ್ಯಾಹ್ನದ ನಿತ್ಯಕರ್ಮಗಳು ಮುಗಿದವು. ಅವರ ಭೋಜನವೂ ಆಯಿತು. ಅಷ್ಟರಲ್ಲಿ ಆ ವ್ಯಾಪಾರಸ್ಥರು ಉಂಡು, ಒಂದು ನಿದ್ದೆ ಮಾಡಿದ್ದರು. ಮಿಶ್ರರು ಊಟವಾದ ಕೂಡಲೆ ತಮ್ಮ ಗಂಟು–ಗದಡಿಗಳನ್ನು ಕಟ್ಟಿಕೊಂಡು ಬೇಗನೆ ಊರು ಮುಟ್ಟಬೇಕೆಂದು ವ್ಯಾಪಾರಸ್ಥರನ್ನು ಎಬ್ಬಿಸಿದ್ದು. ಅವರು—''ಇಷ್ಟು ಅವಸರವೇಕೆ ಸ್ವಾಮಿ! ಊರು ಇನ್ನೆಷ್ಟು ದೂರವಿದೆ, ಹೋಗೋಣವಂತೆ'' ಎಂದು ತಡಮಾಡಹತ್ತಿದರು. ಹೊರಗೆ ಒಂದು ತಾಸು ಹೊತ್ತು ಉಳಿದರೂ ಅವರು ಏಳಲೊಲ್ಲರು; ಆಗ ಮಿಶ್ರರು—''ನನಗೆ ಸಂಧ್ಯಾಕಾಲವಾಗುತ್ತದೆ, ನಾನು ಹೊರಡುವೆನು. ನೀವು ಹಿಂದಿನಿಂದ ಬರಬಹುದು'' ಎಂದು ಹಾದಿಹಿಡಿಯಲು, ಒಬ್ಬ ವ್ಯಾಪಾರಸ್ಥನು ಮಿಶ್ರರ ಹಾದಿಯನ್ನು ಕಟ್ಟಿ—''ಹಾರುವಾ, ಮುಂದಕ್ಕೆ ಹೆಜ್ಜೆಯಿಟ್ಟರೆ ಪರಿಣಾಮವಾಗಲಿಕ್ಕಿಲ್ಲ. ನಿನ್ನಲ್ಲಿದ್ದು ಬಿದ್ದುದನ್ನೆಲ್ಲ ಇಲ್ಲಿ ಇಟ್ಟುಬೇಕಾದಲ್ಲಿಗೆ ಹೋಗು.''

ಈಗ ವ್ಯಾಪಾರಸ್ಥರ ಸ್ವರೂಪವು ಅನಂತಮಿಶ್ರರ ಮನಸ್ಸಿಗೆ ಹೊಳೆದು, ಸಿಟ್ಟಿನಿಂದ ಅವರ ಕಣ್ಣುಗಳು ಕೆಂಡದಂತಾದವು. ಅತ್ಯಂತ ಸಾತ್ವಿಕರಾಗಿದ್ದ ಮಿಶ್ರರು, ಕ್ಷಣದಲ್ಲಿ ಜಮದಗ್ನಿ ಸ್ವರೂಪವನ್ನು ತಾಳಿ—''ದುಷ್ಟಾ, ಸರಿ ಹಿಂದಕ್ಕೆ! ಕಾರಣವಿಲ್ಲದೆ ನಾನು ಶೂದ್ರಸ್ಪರ್ಶ ಮಾಡುತ್ತಿರುವುದಿಲ್ಲ'' ಎಂದು ತಮ್ಮ ಟೊಂಕದಲ್ಲಿ ಗುಪ್ತವಾಗಿ ಇಟ್ಟುಕೊಂಡಿದ್ದ ಕಠಾರಿಯನ್ನು ಎತ್ತಿ ಗದ್ದರಿಸಿದರು. ಬ್ರಾಹ್ಮಣನ ಆ ಉಗ್ರಮೂರ್ತಿಯನ್ನು ನೋಡಿ ಬಂದ ಕಳ್ಳನು ಹಿಂದಕ್ಕೆ ಸರಿದು, ನಿಂತಲ್ಲಿ ನಿಂತುಬಿಟ್ಟು, ಬ್ರಾಹ್ಮಣನನ್ನು ನೋಡಹತ್ತಿದನು. ಅತ್ತ ಮಲಗಿದ್ದ ಮೂವರೂ ಮಲಗಿದಲ್ಲಿಯೇ ಬ್ರಾಹ್ಮಣನನ್ನು ನೋಡುತ್ತ ಮಲಗಿಬಿಟ್ಟರು. ಆ ಬ್ರಹ್ಮತೇಜಸ್ಸನ್ನು ಭೇದಿಸಿ ಹೋಗುವ ಧೈರ್ಯವು ಯಾರಿಗೂ ಆಗಲೊಲ್ಲದು. ಅವರು ಈತನು ಬರಿಯ ತುಕಡಿಮುರಕ ಬ್ರಾಹ್ಮಣನಲ್ಲವೆಂದು ತಿಳಿದು, ತಮ್ಮ ಶಸ್ತ್ರಗಳನ್ನು ಸಜ್ಜುಮಾಡಿಕೊಳ್ಳಹತ್ತಿದರು; ಆದರೆ ಬ್ರಾಹ್ಮಣನು ಸ್ಥಳಬಿಟ್ಟು ಕದಲದೆ, ಕ್ಷಣದಲ್ಲಿ ಇವರನ್ನು ತುಂಡರಿಸಿ ಚೆಲ್ಲುವೆನೆಂದು ದರ್ಪದಿಂದ ನಿಂತುಬಿಟ್ಟಿದ್ದನು. ಆ ಉಗ್ರಮೂರ್ತಿಯನ್ನು ನೋಡಿದವರಿಗೂ, ನೆನೆಸಿದವರಿಗೂ ಭಾರತೀಯ ವೀರಾಗ್ರಣಿ ದ್ರೋಣಾಚಾರ್ಯರ ನೆನಪಾಗದೆ ಇರಲಿಕ್ಕಿಲ್ಲವೆಂದು ನಮಗೆ ತೋರುತ್ತದೆ. ಆ ನಾಲ್ವರು ಕಳ್ಳರೂ ತಮ್ಮ ಶಸ್ತ್ರಗಳನ್ನು ಸಜ್ಜುಮಾಡಿಕೊಂಡು ಬ್ರಾಹ್ಮಣನ ಮೇಲೆ ಧುಮುಕಬೇಕೆಂದು ಒಳ್ಳೇ ಧೈರ್ಯಮಾಡಿ ಬರುತ್ತಿರಲು, ಹಿಂಸೆಗೆ ಹೇಸುವ ಬ್ರಾಹ್ಮಣನಿಂದ ಹಿಂಸೆ ಮಾಡಿಸಲಾರದೆ, ದುಷ್ಟಶಾಸನಕ್ಕಾಗಿ ಸಾಕ್ಷಾತ್ ಶ್ರೀಹರಿಯೇ ಅಲ್ಲಿಗೆ ಬರುವಂತೆ, ಒಬ್ಬ ರಜಪೂತ ವೀರನು ಕುದುರೆಯನ್ನು ಓಡಿಸುತ್ತ ಅಲ್ಲಿಗೆ ಬಂದನು! ಹೀಗೆ ಬ್ರಾಹ್ಮಣರು ಶಾಪದಿಂದಾಗಲಿ, ಶಸ್ತ್ರದಿಂದಾಗಲಿ ಶತ್ರುಶಾಸನ ಮಾಡಲು ಸಮರ್ಥರಾದ ಹೊರತು, ಧರ್ಮರಕ್ಷಣವೂ ಆಗಲಾರದು, ದೇವರೂ ಬ್ರಾಹ್ಮಣರ ಪಕ್ಷಗಟ್ಟಲಾರನು.

# ಪ್ರತಾಪದ ಪತ್ರವು!

ಆ ರಜಪೂತ ರಾವುತನು ಮಧ್ಯಮ ವಯಸ್ಸಿನ ಭವ್ಯಪುರುಷನಾಗಿದ್ದನು. ಆತನ ಟೊಂಕದಲ್ಲಿ ಖಡ್ಗವು ಅಲೆದಾಡುತ್ತಿತ್ತು ಆತನ ಬೆನ್ನಿಗೊಂದು ಢಾಲು ಇದ್ದು ಬಲಗೈಯಲ್ಲಿ ಬರ್ಚಿಯೂ, ಎಡಗೈಯಲ್ಲಿ 'ತಮಂಚ' ಎಂಬ ಭೀಷಣವಾದ ಬಂದೂಕೂ ಇದ್ದವು. ಮುಖದಲ್ಲಿ ಕುಲೀನತೆಯ ದರ್ಪವು ಉಕ್ಕುತ್ತಿತ್ತು ಆ ಮಹಾತೇಜಸ್ವಿಯನ್ನು ನೋಡಿದ ಕೂಡಲೆ, ಆ ನಾಲ್ವರು ಕಳ್ಳರೂ ಅಂಜಿ ಹಿಂದಕ್ಕೆ ಸರಿದರು; ಇನ್ನು ಸುಮ್ಮನಿದ್ದರೆ ಈ ಸ್ಥಿತಿಯಲ್ಲಿ ತಮ್ಮ ಪ್ರಾಣ ಉಳಿಯದೆಂದು ತಿಳಿದು, ಆ ನಾಲ್ವರೂ ಮತ್ತೆ ಅವನ ಮೇಲೆ ದುಮುಕಿದರು. ಆದರೆ ಅವರಲ್ಲಿ ಒಬ್ಬನು ಆ ರಾವುತನ ಕೈಖಡ್ಗಕ್ಕೆ ಬಲಿಯಾದನು; ಒಬ್ಬನು ರಾವುತನ ಬರ್ಚಿಯ ಇರಿತದಿಂದ ನೆಲಕ್ಕುರುಳಿದನು; ಮೂರನೆಯವನೊಬ್ಬನು ಹಿಂದಕ್ಕೆ ಸರಿದು ತನ್ನ ಬರ್ಚಿಯಿಂದ ರಾವುತನನ್ನು ಇರಿಯುತ್ತಿರಲು, ರಾವುತನ ತುಬಾಕಿಯ ಗುಂಡು ಸುಂಯ್‌ಗುಡುತ್ತ ಅವನ ಪ್ರಾಣಹರಣ ಮಾಡಿತು! ಮೂವರ ಈ ಸ್ಥಿತಿಯನ್ನು ನೋಡಿ ನಾಲ್ಕನೆಯವನು ರಾವುತನಿಗೆ ಸಾಷ್ಟಾಂಗವಾಗಿ ಎರಗಿ, ಪ್ರಾಣದಾನ ಮಾಡಬೇಕೆಂದು ಆತನನ್ನು ಬೇಡಿಕೊಂಡನು. ಅದಕ್ಕೆ ರಾವುತನು—

ರಾವುತ—''ರಜಪೂತನು ನೀನು, ಸಾವಿಗೆ ಇಷ್ಟು ಅಂಜುವುದೇಕೆ?''

ಕಳ್ಳ—''ಕೈಲಾದಷ್ಟು ಪ್ರಭುಗಳ ಸೇವೆ ಮಾಡುವುದಕ್ಕಾಗಿ.''

ರಾವುತ—''ನನ್ನ ಗುರುತು ನಿನಗೆ ಇರುವುದೋ?''

ಕಳ್ಳ—(ಮೊಣಕಾಲೂರಿ ಕೈಜೋಡಿಸಿ) ''ವೀರ ಕುಲತಿಲಕ–ಮಹಾರಾಣಾ–ರಾಜಸಿಂಹರ ಗುರುತು ಯಾರಿಗಿರಲಿಕ್ಕಿಲ್ಲ?''

ರಾಜಸಿಂಹ—''ಹಾದಿಬಡಿಯುವ ಕಳ್ಳನು ನೀನು ನನ್ನ ಸೇವೆ ಮಾಡುವುದೇನು?''

ಕಳ್ಳ—(ಕಣ್ಣೀರು ಒರಿಸಿಕೊಳ್ಳುತ್ತ) ''ಇಂದಿನಿಂದ ಮಹಾಪ್ರಭುಗಳ ಚರಣಸಾಕ್ಷಿಯಿಂದ ಕಳವು ಮಾಡುವುದನ್ನು ಬಿಟ್ಟುಬಿಟ್ಟೆನು! ಇನ್ನು ಪ್ರಭುಗಳ ಚರಣಸೇವೆಯಲ್ಲದೆ ನನಗೆ ಬೇರೆ ಕೆಲಸವಿಲ್ಲ.''

ರಾಜಸಿಂಹ—''ನಿನ್ನ ಹೆಸರೇನು?''

ಕಳ್ಳ—''ಮಾಣಕಲಾಲ.''

ರಾಜಸಿಂಹ—''ಮಾಣಕಲಾಲ, ಈ ನಿರಪರಾಧಿಗಳಾದ ಸತ್ವಶೀಲ ಬ್ರಾಹ್ಮಣರನ್ನು ಸಂಹರಿಸುವುದಕ್ಕಾಗಿ ಶಸ್ತ್ರವೆತ್ತಿದ ನಿನಗೆ ಏನು ಶಿಕ್ಷೆಮಾಡಬೇಕು?''

ಕಳ್ಳ—''ಪ್ರಭುಗಳ ಮನಸ್ಸಿಗೆ ಬಂದದ್ದನ್ನು.''

ರಾಜಸಿಂಹ—''ನಿನ್ನ ಒಂದು ಬೆರಳನ್ನು ಮುಂದೆಮಾಡು.''

ರಾಜಸಿಂಹನ ಈ ಅಪ್ಪಣೆಯ ಅರ್ಥವನ್ನು ತಿಳಿದು ಮಾಣಕಲಾಲನು ತನ್ನ ಎಡಗೈಯ ಕಿರಿಬೆರಳನ್ನು ತನ್ನ ಕಠಾರಿಯಿಂದ ಕೊಯ್ಯಹತ್ತಿದನು. ಬೆರಳು ಬೇಗನೆ ಕೊಯ್ಯದಿರಲು, ಅದನ್ನು

ಒಂದು ಕಲ್ಲಮೇಲಿಟ್ಟು, ಅದರ ಮೇಲಿನ ಕಠಾರಿಯನ್ನು ಕಲ್ಲಿನಿಂದ ಜಜ್ಜಿ ಬೆರಳನ್ನು ತುಂಡರಿಸಿದನು! ಈ ಸಾಹಸವನ್ನು ನೋಡಿ ರಾಜಸಿಂಹನು ಸಂತುಷ್ಟನಾದನು. ಮಾಣಿಕಲಾಲನಿಗೆ ತನ್ನ ಬೆರಳು ತುಂಡರಿಸುವಾಗ ಆದ ವ್ಯಥೆಯ ಲಕ್ಷ್ಯವು ಲೇಶವಾದರೂ ಇದ್ದಿಲ್ಲ. ಆತನು ತನ್ನ ಬೆರಳಿನಿಂದ ರಕ್ತವು ಸೋರುತ್ತಿರಲು, ಕೈಜೋಡಿಸಿ ಮಹಾರಾಣನನ್ನು ಕುರಿತು—

ಮಾಣಿಕಲಾಲ—"ಮಹಾಪ್ರಭುಗಳು ನನ್ನ ಅಪರಾಧಕ್ಕಾಗಿ ಇದಿಷ್ಟು ಶಿಕ್ಷೆಯನ್ನು ಮಂಜೂರು ಮಾಡಬೇಕು."

ರಾಜಸಿಂಹ—"ಸಾಕು, ಇದಕ್ಕೂ ಹೆಚ್ಚಿನ ಶಿಕ್ಷೆಬೇಡ; ಆದರೆ ಆಗಲೆ ನಿನ್ನ ಹೆಸರು ಏನೆಂದು ಹೇಳಿದೆ?"

ಮಾಣಿಕಲಾಲಾ—"ಪ್ರಭೋ, ಈ ರಜಪೂತ ಕುಲಕಲಂಕನ ಹೆಸರು ಮಾಣಿಕಲಾಲ."

ರಾಜಸಿಂಹ—"ಮಾಣಿಕಲಾಲ, ಇಂದಿನಿಂದ ನಿನ್ನನ್ನು ನನ್ನ ಸೈನ್ಯದಲ್ಲಿ ಸೇರಿಸಿ ಕೊಂಡಿದ್ದೇನೆ. ಉದೇಪುರಕ್ಕೆ ಬಂದು ನನ್ನನ್ನು ಕಾಣು, ನಿನಗೆ ಜಹಗೀರು ಹಾಕಿಕೊಡುವೆನು."

ಇಷ್ಟೆಲ್ಲ ಕೆಲಸಗಳು ಒಂದು ಕ್ಷಣದಲ್ಲಿ ಆದಂತಾದವು. ಇದನ್ನೆಲ್ಲ ಅನಂತಶರ್ಮನು ಗಾಂಭೀರ್ಯದಿಂದ ನೋಡುತ್ತ ನಿಂತುಕೊಂಡಿದ್ದನು. ವಿಕ್ರಮಸಿಂಹನಂತಹ ಶೂರ ರಜಪೂತ ರಾಜನ ಆ ಕುಲಪುರೋಹಿತನಿಗೆ, ಮಾಣಿಕಲಾಲನ ಸಾಹಸವನ್ನು ನೋಡಿ ಸಂತೋಷ ವಾಗಿತ್ತು "ಇಂತಹ ವೀರರು ಇನ್ನೂ ರಾಜಸ್ಥಾನದಲ್ಲಿ ಕಳ್ಳರು–ಕಾಕರಲ್ಲಿಯೂ ಇರುತ್ತಿರಲು, ಔರಂಗಜೇಬನ ಸೊಕ್ಕು ಇಳಿಸುವುದಕ್ಕೆ ತಡವೇನು ಆಗುವುದು?" ಎಂದು ಆತನು ಅಂದುಕೊಂಡು, ಮಹಾ ರಾಣಾನ ಭವ್ಯಮೂರ್ತಿಯ ವಿಷಯವಾಗಿಯೂ, ಆತನ ನ್ಯಾಯ ನಿಷ್ಠುರತೆಯ ವಿಷಯ ವಾಗಿಯೂ ಆದರಭಾವವನ್ನು ತಾಳಿದನು. ಇಷ್ಟರಲ್ಲಿ ರಾಜಸಿಂಹನು ಕುದುರೆಯಿಂದ ಇಳಿದು ಬ್ರಾಹ್ಮಣನನ್ನು ನಮಸ್ಕರಿಸಲು, ಬ್ರಾಹ್ಮಣನು ಆತನನ್ನು ಆಶೀರ್ವದಿಸುತ್ತ ಒಂದು ರತ್ನ ಕಂಕಣದಿಂದ ಸಹಿತವಾಗಿ ಎರಡು ಪತ್ರಗಳನ್ನು ರಾಣಾನ ಕೈಯಲ್ಲಿ ಕೊಟ್ಟನು. ರಾಣಾನು ಅತ್ಯಾದರದಿಂದ ಅವನ್ನು ಸ್ವೀಕರಿಸಿ ಒಂದೊಂದೇ ಪತ್ರವನ್ನು ಉತ್ಸುಕತೆಯಿಂದ ಓದತೊಡಗಿದನು. ಒಂದು ಪತ್ರವು ವಿಕ್ರಮಸಿಂಹನು ಆತನಿಗೆ ಬರೆದದ್ದಾಗಿತ್ತು, ಅದನ್ನು ಓದಿ ಅನಂತಶರ್ಮರನ್ನು ಪೂಜಿಸಿ ಸತ್ಕರಿಸುವುದು ತನ್ನ ಪವಿತ್ರ ಕರ್ತವ್ಯವೆಂದು ರಾಣಾನು ತಿಳಿದನು. ಇನ್ನೊಂದು ಪತ್ರವು ಚಂಚಲಕುಮಾರಿಯು ಆತನಿಗೆ ಬರೆದದ್ದಾಗಿತ್ತು, ಅದು ಮೊದಲಿನ ಪತ್ರದಷ್ಟು ಸಂಕ್ಷೇಪವಾಗಿದ್ದಿಲ್ಲ. ಮಹಾರಾಣಾನು ಸಾವಧಾನದಿಂದ ಅದನ್ನು ಓದತೊಡಗಿದನು. ಆಗ ಅನಂತಶರ್ಮರ ದೃಷ್ಟಿಗಳು ರಾಣಾನ ಮುಖದಲ್ಲಿ ನಟ್ಟುಹೋಗಿದ್ದವು. ಮಹಾರಾಣಾನು ಸಂಪೂರ್ಣವಾಗಿ ಒಮ್ಮೆ ಪತ್ರವನ್ನು ಓದಿದನು. ಆತನ ಗಂಭೀರ ಮುಖಮುದ್ರೆಯಲ್ಲಿ ಸಿಟ್ಟಿನ ಲಕ್ಷಣಗಳು ತೋರಹತ್ತಿದವು. ಅದನ್ನು ನೋಡಿ ಅನಂತಶರ್ಮರು ರಾಜಸಿಂಹನನ್ನು ಕುರಿತು—

ಅನಂತಶರ್ಮ—"ಗೋಬ್ರಾಹ್ಮಣ ಪ್ರತಿಪಾಲಕ ಪ್ರಭುವೇ! ನಿನಗೆ ಸಿಟ್ಟು ಬಹಳವಾಗಿ ಒಪ್ಪುವುದು. ದುಷ್ಟಶಾಸನ-ಶಿಷ್ಟಪರಿಪಾಲನಗಳು, ವಿಷ್ಣುವಿನ ಅಂಶವಾಗಿರುವ ನಿನ್ನ ಕರ್ತವ್ಯಗಳಾಗಿರುವವಷ್ಟೇ? ಆದರೆ, ಮಹಾ ತೇಜಸ್ವಿಯಾದ ನಮ್ಮ ರಾಜಪುತ್ರಿಯು ಬರೆದಿರುವ ಪತ್ರವನ್ನು ಒಮ್ಮೆ ಗಟ್ಟಿಯಾಗಿ ಓದಿಬಿಡು. ಬರುವ ಅವಸರದಲ್ಲಿ ನಾನು ಅದನ್ನು ಓದಿನೋಡಿರುವುದಿಲ್ಲ. ಅದನ್ನು ಓದಿತೋರಿಸೆಂದು ಚಂಚಲಕುಮಾರಿಗೆ ಹೇಳಲಿಕ್ಕೂ ನನಗೆ ಅವಕಾಶವು ದೊರೆಯಲಿಲ್ಲ. ದುಷ್ಟ ಔರಂಗಜೇಬನ ಸೈನ್ಯವು ರೂಪನಗರಕ್ಕೆ ಬರುವುದರೊಳಗೆ ಪತ್ರ ಮುಟ್ಟಿಸಬೇಕೆಂದು ಆತುರದಿಂದ ನಾನು ನಿನ್ನ ಬಳಿಗೆ ಬಂದುಬಿಟ್ಟಿರುವೆನು. ಮಹಾರಾಣಾ, ಓದು ಓದು, ನನ್ನ ಚಂಚಲೆಯು ಬರೆದಿರುವ ಪತ್ರವನ್ನು ಒಮ್ಮೆ ಗಟ್ಟಿಯಾಗಿ ಓದು!"

ಬ್ರಾಹ್ಮಣನ ಈ ಅಪ್ಪಣೆಯನ್ನು ರಾಜಸಿಂಹನು ಶಿರಸಾವಹಿಸಿ, ಪತ್ರವನ್ನು ಒಂದಕ್ಷರ ಬಿಡದಂತೆ ಹೀಗೆ ಓದತೊಡಗಿದನು!

"ಮಹಾರಾಣಾ — ರಾಜಸಿಂಹರ ಚರಣಗಳಿಗೆ ವಂದಿಸಿ, ಮಾಡಿಕೊಳ್ಳುವ ವಿಜ್ಞಾಪನೆಯು—

ತಾವು ಯಾವತ್ತೂ ರಜಪೂತರ ಶಿರೋಮಣಿಗಳಾಗಿರುವಿರಿ; ಅದರಂತೆಯೇ ಯಾವತ್ತು ಹಿಂದೂಜನರ ಚೂಡಾಮಣಿಗಳೂ ಆಗಿರುವಿರಿ! ನನ್ನಂತಹ ಅಪ್ರಬುದ್ಧ ಬಾಲಿಕೆಯ ಗುರುತು ತಮಗೆ ಹೇಗಿರಬೇಕು? ನನ್ನ ಮೇಲೆ ಮಾನಹಾನಿಯಾಗುವ ಪ್ರಸಂಗವು ಬಾರದಿದ್ದರೆ, ಹೀಗೆ ಉದ್ಧಟತನದಿಂದ ನಾನು ತಮಗೆ ಪತ್ರ ಬರೆಯುವ ಸಾಹಸವನ್ನು ಮಾಡುತ್ತಿರಲಿಲ್ಲ! ಒಬ್ಬ ಸಾಮಾನ್ಯ ಸ್ತ್ರೀಯು ಕಷ್ಟಕ್ಕೆ ಗುರಿಯಾಗಿ ಪತ್ರ ಬರೆದಿರುವಳೆಂದು ನನ್ನನ್ನು ಕ್ಷಮಿಸತಕ್ಕದ್ದು.

ಪತ್ರವನ್ನು ತಮ್ಮ ಬಳಿಗೆ ತಂದಿರುವ ಸತ್ಪುರುಷನು ನನ್ನ ಗುರುದೇವನು! ಅವರನ್ನು ಕೇಳಿದರೆ ನಾನೊಬ್ಬ ರಜಪೂತ ಕನ್ಯೆಯಿರುವೆನೆಂಬುದು ತಮಗೆ ಗೊತ್ತಾಗಬಹುದು. ನಮ್ಮ ರೂಪನಗರದ ರಾಜ್ಯವು ತೀರ ಸಣ್ಣದು. ನಮ್ಮ ತಂದೆಯಾದ ಪೂಜ್ಯ ವಿಕ್ರಮಸಿಂಹ ಸೋಳಂಕೆಯವರು ಅಲ್ಲಿಯ ಅರಸರು. ತಮ್ಮಂತಹ ದೊಡ್ಡವರ ಮುಂದೆ ನನ್ನನ್ನು ರಾಜಪುತ್ರಿಯೆಂದು ಹೇಳಿಕೊಳ್ಳುವುದು ಯೋಗ್ಯವಾಗಿರದಿದ್ದರೂ, ನಾನೊಬ್ಬ ರಜಪೂತ ಕನ್ಯೆಯಿರುವೆನೆಂದು ತಿಳಿದು ನನ್ನ ಮೇಲೆ ದಯೆಮಾಡಬೇಕು. ಯಾಕೆಂದರೆ ತಾವು ರಜಪೂತರಷ್ಟೇ ಅಲ್ಲ, ರಜಪೂತ ಮುಕುಟಮಣಿಗಳು. ಅಬಲೆಯರ ಮಾನ ರಕ್ಷಣವು ತಮ್ಮ ಕರ್ತವ್ಯವು!

ದಿಲ್ಲಿಯ ಔರಂಗಜೇಬ ಬಾದಶಹನು ನನ್ನನ್ನು ಲಗ್ನವಾಗಬೇಕೆಂದು ಇಚ್ಛಿಸುವನು; ಆದರೆ ಪವಿತ್ರವಾದ ರಜಪೂತ ಕುಲದಲ್ಲಿ ಹುಟ್ಟಿರುವ ನಾನು, ಆ ಬರ್ಬರ ಯವನರೊಡನೆ ಹೇಗೆ ಲಗ್ನವಾಗಬೇಕು? ಮಹಾರಾಣಾಜೀ, ಹಿಮಾಲಯದಲ್ಲಿ ಹುಟ್ಟಿರುವ ಭಾಗೀರಥಿಯು ಸಮುದ್ರವನ್ನಲ್ಲದೆ, ಬೇರೆ ಕ್ಷುದ್ರ ಜಲಾಶಯವನ್ನು ಕೂಡಬಹುದೇ? ಆದ್ದರಿಂದ ದಿಲ್ಲಿಗೆ ಮುಟ್ಟುವುದರೊಳಗಾಗಿಯೇ ವಿಷಕುಡಿದು ನಾನು ಸಾಯಬೇಕೆಂದು ನಿಶ್ಚಯಿಸಿರುತ್ತೇನೆ.

ಮಹಾರಾಣಾಜೀ, ಹಾಗೆ ವಿಷಪ್ರಾಶನ ಮಾಡುವ ಮೊದಲು, ತಮ್ಮಂತಹ ಪವಿತ್ರ ಕುಲದವರ ಸ್ಮರಣವು ನನಗೆ ಆಯಿತೆಂಬುದನ್ನು ತಮಗೆ ಅರಿಕೆಮಾಡಿಕೊಳ್ಳುವುದಕ್ಕಾಗಿಯೇ ತಮಗೆ ಈ ಪತ್ರವನ್ನು ಬರೆದಿದ್ದೇನೆ. ದಯವಾಡಿ ನನ್ನನ್ನು ಉದ್ಧತಳೆಂದು ಭಾವಿಸಬಾರದು. ಮರಣಕ್ಕೆ ಸಿದ್ಧಳಾದ ನಾನು, ತಮ್ಮಂಥ ಪವಿತ್ರ ಪುರುಷರ ಮುಂದೆ ನನ್ನ ಸಂಕಟವನ್ನು ತೋಡಿಕೊಳ್ಳದೆ ಹೇಗೆ ಇರಲಿ? ರಾಜಸ್ಥಾನದೊಳಗಿನ ಮಾರವಾಡ, ಜಯಪುರಗಳಂತಹ ಪ್ರತಿಷ್ಠಿತ ಕ್ಷತ್ರಿಯ ಅರಸರು, ತಮ್ಮ ಮನೆತನದ ಹೆಣ್ಣನ್ನು ಬಾದಶಹನ ಚರಣಕ್ಕೆರೆದು ಪ್ರತಿಷ್ಠೆಯನ್ನು ಹೆಚ್ಚಿಸಿಕೊಂಡಿರುವರು; ಆದರೆ ಅಂಥ ಕಲಂಕಕ್ಕೆ ಒಳಗಾಗದೆ ಮಹಾರಾಣಾ ಪ್ರತಾಪಸಿಂಹರು ಅರಣ್ಯವಾಸವನ್ನು ಭೋಗಿಸಿದರು. ಅಂಥ ವೀರಾಗ್ರಣಿಗಳ ವಂಶಜರು ತಾವಲ್ಲವೆ? ತಮ್ಮ ಪವಿತ್ರ ವಂಶದ ಪಾವಿತ್ರ್ಯವನ್ನು ಔರಂಗಜೇಬನಂಥ ಬಲಾಢ್ಯ ದುಷ್ಟ ಬಾದಶಹನ ಕಾಲದಲ್ಲಿಯೂ ತಾವು ಇನ್ನೂ ಕಾಯ್ದುಕೊಂಡಿರುವುದಿಲ್ಲವೆ? ಅಂದಬಳಿಕ ರೂಪನಗರದಂಥ ಪವಿತ್ರ ಮನೆತನದ ಕುಮಾರಿಯ ಕಷ್ಟವನ್ನು ಕೇಳಲಿಕ್ಕೆ ನಿಮ್ಮ ಹೊರತು ಬೇರೆ ಅಧಿಕಾರಿ ಪುರುಷರು ರಜಪೂತರಲ್ಲಿ ಯಾರು ಇರುವರು?

ಮಹಾರಾಣಾಜೀ, ನನ್ನ ವಯಸ್ಸು ಹದಿನೆಂಟು ವರ್ಷ. ಅಂದಬಳಿಕ ಭೂಮಿಯಲ್ಲಿ ಇನ್ನೂ ಬಾಳಿ ಬದುಕಿ ಇರಬೇಕೆಂಬ ಇಚ್ಛೆಯು ನನಗಿರುವುದು ಸ್ವಾಭಾವಿಕವು! ಆದರೆ ನನ್ನನ್ನು ಈಗಿನ ಪ್ರಾಣಸಂಕಟದಿಂದ ಮುಕ್ತಮಾಡಿ ಬದುಕಿಸುವ ಪುರುಷಶ್ರೇಷ್ಠರು ರಾಜಸ್ಥಾನದಲ್ಲಿ ಯಾರಿರುವರು? ಇದ್ದ ರಜಪೂತರೆಲ್ಲ ಔರಂಗಜೇಬನ ಕೈಗೊಂಬೆಗಳು. ತಾವೊಬ್ಬರೇ ರಜಪೂತ ಕುಲದ ಅಭಿಮಾನಿಗಳು. ತಾವೊಬ್ಬರೇ ಔರಂಗಜೇಬನ ಮುಂಗೈ ಹಿಡಿದು ಕೇಳಿದರೆ ಕೇಳಬಹುದು! ರಜಪೂತರ ಕುಲೀನ ರಾಜಕನ್ಯೆಯರನ್ನು ಹೀಗೆ ಲಗ್ನವಾಗಿರೆಂದು ಕೇಳಲಿಕ್ಕೆ ಆ ದುಷ್ಟ ಬಾದಶಹನಿಗೆ ಏನು ಅಧಿಕಾರವಿರುವುದು?

ದಿಲ್ಲೀಶ್ವರನ ದ್ವೇಷ ಕಟ್ಟಿಕೊಳ್ಳುವುದು ಎಂಥ ಕಷ್ಟದ ಕೆಲಸವೆಂಬುದನ್ನು ನಾನು ಬಲ್ಲೆನು; ಆದರೆ ಮಹಾರಾಣಾ ಪ್ರತಾಪಸಿಂಹರ ವಂಶಜರ ಮುಂದೆ ಅದನ್ನು ಹೇಳಲು, ಸಾಯಲಿಕ್ಕೆ ನಿಂತ ನಾನು ಅಂಜುವುದೇಕೆ? ಮಹಾರಾಣಾಜೀ, ನಿಮ್ಮ ಪೂರ್ವಜರಾದ ಸಂಗ್ರಾಮಸಿಂಹರವರು ಬಾಬರನಿಂದ ಸಿಂಹಾಸನವನ್ನು ಕಸಿದುಕೊಂಡಿದ್ದರು; ನಿಮ್ಮ ಪೂರ್ವಜರಾದ ಪ್ರತಾಪಸಿಂಹರವರು ಅಕಬರ ಬಾದಶಹನನ್ನು ಮಧ್ಯದೇಶದಿಂದ ಓಡಿಸಿದರು. ಅಂತಹ ಆ ಭುವನ ಭಾಸ್ಕರರ ಗಾದಿಯ ಮೇಲೆ ಕುಳಿತಿರುವ ತಮಗೆ, ಔರಂಗಜೇಬನ ಭಯವು ಎಷ್ಟರಮಟ್ಟಿಗಿರಬಹುದು? ನಿಮ್ಮ ಪರಾಕ್ರಮವು ನಿಮ್ಮ ಪೂರ್ವಜರ ಪರಾಕ್ರಮಕ್ಕಿಂತ ಹೀನವಾದದ್ದೇನು? ದಕ್ಷಿಣದಲ್ಲಿಯ 'ಗುಡ್ಡದ ಇಲಿ' (ಪಹಾಡ ಕಾ ಚೂಹಾ) ಎಂದು ಔರಂಗಜೇಬನು ತಿರಸ್ಕರಿಸುತ್ತಿದ್ದ ಶಿವಾಜಿಯು, ಔರಂಗಜೇಬನನ್ನು ಹಣ್ಣು-ಹಣ್ಣು ಮಾಡಿಬಿಟ್ಟಿರುವನಲ್ಲ; ಆತನು ನಿಮ್ಮ ವಂಶದವನೇ ಅಲ್ಲವೆ? ಮಹಾರಾಣಾಜೀ, ನಿಮ್ಮ ಶೌರ್ಯವನ್ನು ವರ್ಣಿಸಲಿಕ್ಕೆ ಪತ್ರವು ತಕ್ಕ ಸ್ಥಳವಲ್ಲ, ರಣಕ್ಷೇತ್ರವು ಅದಕ್ಕೆ ತಕ್ಕ ಸ್ಥಳವು! ನಾನಂತೂ ಔರಂಗಜೇಬನ ಕೈಯಿಂದ ನನ್ನನ್ನು ಬಿಡಿಸುವವರ ಪಾಣಿಗ್ರಹಣ ಮಾಡಿದರೆ ಮಾಡುವೆನು, ಇಲ್ಲವೆ ವಿಷಕುಡಿದು ಸಾಯುವೆನು. ಇದು ನನ್ನ ಪ್ರತಿಜ್ಞೆಯು!''

ಹೀಗೆ ಪತ್ರವನ್ನು ಓದುವ ರಾಣಾನ ಮುಖಮುದ್ರೆಯು ವೀರಾವೇಶದಿಂದ ಕೆಂಪಾಗುತ್ತಿರಲು, ಕೋಮಲಾಂತಃಕರಣದ ಅನಂತಶರ್ಮನ ಕಣ್ಣಿನಲ್ಲಿ ನೀರುಗಳು ಬಂದಿದ್ದವು. ಅಷ್ಟರಲ್ಲಿ ಮಹಾರಾಣಾನ ವೀರ ರಜಪೂತ ಪರಿವಾರವು ಅಲ್ಲಿಗೆ ಬಂದಿತು. ಅದನ್ನು ನೋಡಿ ಅನಂತಶರ್ಮರು ರಾಜಸಿಂಹನನ್ನು ಕುರಿತು—''ಮಹಾರಾಣಾಜೀ, ನಾನು ಇನ್ನು ಹೋಗಿಬರುವೆನು. ನಾನು ಉದೇಪುರಕ್ಕೆ ಬರುವ ಮೊದಲೇ ನನ್ನ ಕೆಲಸ ವಾಯಿತು; ಅಂದಬಳಿಕ ನಾನು ಇನ್ನು ಉದೇಪುರಕ್ಕೆ ಬರುವುದೇಕೆ? ನಿಮ್ಮ ಕುಲಸ್ವಾಮಿಯಾದ ಏಕಲಿಂಗಜಿಯು ನಿನ್ನನ್ನು ಪ್ರೇರಿಸಿದಂತೆ ಮಾಡು. ಯಾದವ ಕುಲೋತ್ತಮನಾದ ಶ್ರೀಕೃಷ್ಣನು ರುಕ್ಮಿಣಿಯ ಮೊರೆ ಕೇಳಿದ್ದು ನಿನಗೆ ಗೊತ್ತೇ ಇರುತ್ತದೆ. ನಮ್ಮ ರಾಜಕುಮಾರಿಯ ಯೋಗ್ಯತೆಯನ್ನು ನಾನು ಬಾಯಿಬಿಟ್ಟು ವರ್ಣಿಸುವುದಿಲ್ಲ, ಆಕೆಯ ರೂಪಸುಂದರಿ ಯಿರುವಂತೆ, ಗುಣಸುಂದರಿಯೂ ಇರುವುದರಿಂದ, ಆಕೆಯನ್ನು ನಾನು ಸರ್ವಸುಂದರಿಯೆಂದು ತಿಳಿದಿರುವೆನು. ಆಕೆಯ ಸ್ವಾಭಿಮಾನ– ಕ್ಷಾತ್ರ ತೇಜಗಳು ಅವರ್ಣನೀಯವಾಗಿರುವುವು! ನಿನಗೆ ಶರಣು ಹೊಕ್ಕು ನಿನ್ನ ಸಹಾಯದ ಹಾದಿಯನ್ನು ಆಕೆಯು ಅತ್ಯಾತುರದಿಂದ ನೋಡುತ್ತಿರುವಳು! ಮಹಾರಾಣಾ, ಇದು ಕೇವಲ ಚಂಚಲ ಕುಮಾರಿಯ ಮಾನರಕ್ಷಣದ ಪ್ರಸಂಗವೆಂದು ತಿಳಿಯಬೇಡ, ಭರತಭೂಮಾತೆಯ ಮಾನರಕ್ಷಣದ ಪ್ರಸಂಗವೆಂದು ತಿಳಿ. ನಮ್ಮ ಪ್ರಭುವಾದ ವಿಕ್ರಮಸಿಂಹನ ಯೋಗ್ಯತೆಯು ನಿನಗೆ ಗೊತ್ತಿರುವುದು; ಆದರೆ ಬಲಿಷ್ಠ ಬಾದಶಹನ ಮುಂದೆ ತನ್ನ ಆಟವೇನೂ ನಡೆಯದೆಂದು ತಿಳಿದು ಆತನು ನಿರ್ವಾಹವಿಲ್ಲದೆ ಮಗಳನ್ನು ದಿಲ್ಲಿಗೆ ಕಳಿಸಿಕೊಡಲು ಒಪ್ಪಿಕೊಂಡಿರುತ್ತಾನೆ'' ಎಂದು ಹೇಳಿ, ರಾಣಾನ ಅನುಮತಿಯಿಂದ ರೂಪನಗರದ ಹಾದಿಯನ್ನು ಹಿಡಿದರು.

## ವಿಚಿತ್ರ ದೈವಗತಿಯು!

ಮಹಾರಾಣಾ ರಾಜಸಿಂಹನ ಸಂಗಡ ನೂರೇನೂರು ಜನ ರಾವುತರಿದ್ದರು. ಅವರಲ್ಲಿ ಇಬ್ಬರು ಮಹಾರಾಣಾನ ಮಕ್ಕಳು, ಒಬ್ಬನು ಮಹಾರಾಣಾನ ಸಚಿವನು ಇದ್ದರು. ಇಷ್ಟು ಅಲ್ಪ ಪರಿವಾರದೊಡನೆ ಮಹಾರಾಣಾನು ಬೇಟೆಗೆ ಬಂದವನಾಗಿದ್ದನು ಆತನು ಚಂಚಲಕುಮಾರಿಗೆ ಸಹಾಯಮಾಡುವುದನ್ನು ಬಿಟ್ಟು, ಉದೇಪುರಕ್ಕೆ ಹೋಗಲಾರದೆ ತನ್ನ ಪರಿವಾರವನ್ನು ಕುರಿತು—''ವೀರರೇ, ಈಗ ಬಹಳಹೊತ್ತು ಆಗಿರುವುದು; ಹೊಟ್ಟೆಯೂ ಹಸಿದಿರುವುದು; ಆದರೆ ಉದಯಪುರಕ್ಕೆ ಹೋಗುವುದು ಈಗ ಶಕ್ಯವಾಗಿರುವುದಿಲ್ಲ; ಯಾಕೆಂದರೆ ವಿಪತ್ತಿಗೆ ಗುರಿಯಾಗಿರುವ ಒಬ್ಬ ರಾಜಕನ್ಯೆಯ ಮೊರೆ ಕೇಳಿ ಆಕೆಗೆ ಸಹಾಯ ಮಾಡದೆ ಅನ್ನಗ್ರಹಣ ಮಾಡುವುದು ಯೋಗ್ಯವಲ್ಲ, ವಿಲಂಬವಾದರೆ ನನ್ನನ್ನು ನಂಬಿರುವ ಚಂಚಲಕುಮಾರಿಯು ಪ್ರಾಣತ್ಯಾಗ ಮಾಡಬಹುದು; ಆದ್ದರಿಂದ ಒಂದು ಸಣ್ಣ ಯುದ್ಧಮಾಡುವುದಕ್ಕಾಗಿ ನೀವು

ರೂಪನಗರಕ್ಕೆ ಹೋಗಬೇಕಾಗಿದೆ. ಅಲ್ಲಿಗೆ ಹೋದಬಳಿಕವೇ ಊಟ-ಉಡಿಗೆ! ಯುದ್ಧಮಾಡುವ ಇಚ್ಛೆಯಿದ್ದವರು ನನ್ನ ಸಂಗಡ ಬರತಕ್ಕದ್ದು. ಹಸಿವೆ-ನೀರಡಿಕೆಗಳ ಕಾಟಕ್ಕೆ ಒಳಗಾದವರು ಉದೇಪುರಕ್ಕೆ ಹೊರಟುಹೋಗಬಹುದು'' ಎಂದು ನುಡಿದು, ಮಹಾರಾಣಾನು ಪುನಃ ಗುಡ್ಡವನ್ನು ಏರಹತ್ತಿದನು. ಕೂಡಲೆ ಆತನ ಎಲ್ಲ ಪರಿವಾರವು ಜಯಘೋಷ ಮಾಡುತ್ತ ಮಹಾರಾಣಾನನ್ನು ಹಿಂಬಾಲಿಸಿತು. ರೂಪನಗರದ ಹಾದಿಗೆ ಹತ್ತಿದ ಕೂಡಲೆ ಅವರೆಲ್ಲರೂ ಕುದುರೆಗಳನ್ನು ಓಡಿಸಹತ್ತಿದರು. ಮಹಾರಾಣಾನು ರೂಪನಗರದಿಂದ ದಿಲ್ಲಿಗೆ ಹೋಗುವ ಹಾದಿಯಲ್ಲಿ ಗುಡ್ಡಗಾಡಿನ ಇಕ್ಕಟ್ಟಿನ ಸ್ಥಳ ನೋಡಿ ಗುಡ್ಡದ ತುದಿಯ ಮೇಲೆ ತಳವೂರಿ ಬಾದಶಹನ ಸೈನ್ಯದ ಹಾದಿಯನ್ನು ನೋಡುತ್ತ ಅಡಗಿಕೊಂಡು ಕುಳಿತನು. ನೂರೇ ನೂರು ಜನರು ಸಾವಿರಾರು ಮೊಗಲ ಸೈನ್ಯದ ಮೇಲೆ ಬೀಳುವುದೆಂದರೆ ಅಂತಿಂತಹ ಸಾಹಸವಲ್ಲ!

ಔರಂಗಜೇಬನ ಅಪ್ಪಣೆಯಂತೆ ಮುಬಾರಕನು ಎರಡುಸಾವಿರ ಸೈನ್ಯದೊಡನೆ ರೂಪನಗರಕ್ಕೆ ಬಂದು ತಳವೂರಿ ಅಂದಿಗೆ ಎರಡು ದಿವಸಗಳಾಗಿದ್ದವು. ಬಾದಶಹನು ರಾಜಕುಮಾರಿಯನ್ನು ಕರೆತರುವಲ್ಲಿ ವಿಲಂಬ ಮಾಡಲಾಗದೆಂದು ಕಟ್ಟಪ್ಪಣೆ ಮಾಡಿದ್ದರಿಂದ, ಮುಬಾರಕನು ಮರುದಿನವೇ ದಿಲ್ಲಿಗೆ ಹೊರಡಬೇಕಾಗಿತ್ತು. ಮರುದಿನ ಬೆಳಗಾಯಿತು. ಸೂರ್ಯೋದಯ ವಾಗುವುದರೊಳಗೆ ದಿಲ್ಲಿಗೆ ಹೊರಡತಕ್ಕದ್ದೆಂದು ಮೊಗಲ ಸೈನಿಕರು ಸಿದ್ಧರಾಗಿದ್ದರು. ಬಾದಶಹನ ಗಂಭೀರವಾದ ಸೈನ್ಯದ ದರ್ಪವೂ, ಅಂದಚಂದಗಳೂ ನೋಡತಕ್ಕಂತಹವಾಗಿದ್ದವು. ಸೈನ್ಯವು ಕೋಟೆಯ ಬೈಲಿಗೆ ಬಂದು ಐದೈದು ರಾವುತರ ಒಂದೊಂದು ಸಾಲಿನಂತೆ ಸಾಲಾಗಿ ಹಾದಿಯನ್ನು ಹಿಡಿದು ಸಿದ್ಧವಾಗಿ ನಿಂತಿತು. ಬಂಗಾರದ ಪಲ್ಲಕ್ಕಿಯಲ್ಲಿ ಚಂಚಲಕುಮಾರಿಯು ಹೊರಡ ತಕ್ಕವಳಿದ್ದು, ಪಲ್ಲಕ್ಕಿಯ ಹಿಂದೆ ಸಹಸ್ರ ಸೈನ್ಯವು, ಮುಂದೆ ಸಹಸ್ರ ಸೈನ್ಯವು ಆಕೆಯನ್ನು ರಕ್ಷಿಸುತ್ತ ಸಾಗಬೇಕೆಂದು ಗೊತ್ತಾಗಿತ್ತು.

ಚಂಚಲಕುಮಾರಿಯು ಬೆಳಗಾಗುತ್ತಲೇ ಮೈ ತೊಳೆದು ತನ್ನ ಪೂಜೆ-ಪುನಸ್ಕಾರಗಳನ್ನು ತೀರಿಸಿಕೊಂಡಳು. ಆಕೆಯ ಸಖಿಯಾದ ನಿರ್ಮಲೆಯು ಆಕೆಯನ್ನು ವಸ್ತ್ರಾಲಂಕಾರಗಳಿಂದ ಅಲಂಕರಿಸತೊಡಗಿದಳು; ಆದರೆ ಈ ಅಲಂಕರಣವು ಬಾದಶಹನ ಒತ್ತಾಯದ ಮೂಲಕ ಆಗುತ್ತಿದ್ದದ್ದರಿಂದ, ಚಂಚಲಕುಮಾರಿಗಾಗಲಿ, ಆಕೆಯ ತಂದೆಗಾಗಲಿ, ನಿರ್ಮಲೆಗಾಗಲಿ ಸಮಾಧಾನಕರವಾಗಿದ್ದಿಲ್ಲ. ಇಡಿಯ ರೂಪನಗರವೇ ಅಸಮಾಧಾನದಿಂದ ತಳಮಳಿಸುತ್ತಿತ್ತೆಂದು ಹೇಳಬಹುದು. ಚಂಚಲಕುಮಾರಿಯಂತೂ ದಿಲ್ಲಿಗೆ ಹೋಗುವುದರೊಳಗಾಗಿ ವಿಷಕುಡಿದು ಸಾಯಬೇಕೆಂದು ಸಿದ್ಧವಾದವಳು, ಅಂದಬಳಿಕ ಆಕೆಗೆ ಈಗಿನ ಅಲಂಕಾರದ ಬಗೆಯು ಎಷ್ಟು ಸುಖಕರವಾಗಿರಬಹುದು? ಆಕೆಯು ನಿರ್ಮಲೆಯನ್ನು ಕುರಿತು—''ನಿರ್ಮಲೇ, ನಾನು ಪರಲೋಕಯಾತ್ರೆಗೆ ಹೊರಟಿರುವೆನೆಂದು ತಿಳಿದು ನನ್ನನ್ನು ಶೃಂಗರಿಸು! ಇನ್ನು ಒಂದೆರಡು ದಿನಗಳಲ್ಲಿ ಈ ದೇಹವು ಚಿತೆಯ ಮೇಲೆ ಮಲಗಬೇಕಾಗಿರುವುದು. ಸಖೀ, ಬ್ರಹ್ಮದೇವನು ನನ್ನನ್ನು ರೂಪನಗರದ ರಾಜಕುಮಾರಿಯಾಗಿ ಯಾಕೆ ಹುಟ್ಟಿಸಿರಬಹುದು! ನಾನು ಭೂಮಿಯಲ್ಲಿ ಹುಟ್ಟಿಬಂದು ಏನು ಮಾಡಿದ ಹಾಗಾಯಿತು? ನಾನು ಯವನ ಬಾದಶಹನ

ಬಲಾತ್ಕಾರದ ಪಾಣಿಗ್ರಹಣಕ್ಕಾಗಿಯೇ ಹುಟ್ಟಿಬಂದಿರುವೆನೇನು? ಹಾಯ್! ಪರಮೇಶ್ವರಾ! ನಿನ್ನ ಲೀಲೆಯ ಅಂತವು ಯಾರಿಗೆ ಹತ್ತುವುದು!''

ಈ ಮೇರೆಗೆ ದುಃಖಿಸಿ ಚಂಚಲಕುಮಾರಿಯು ದೇವಮಂದಿರವನ್ನು ಹೊಕ್ಕು ಶ್ರೀ ಶಂಕರನನ್ನು ಪೂಜಿಸಿ ನಮಸ್ಕರಿಸಿ ಪ್ರಾರ್ಥಿಸಿದಳು. ಆಗ ಚಂಚಲಕುಮಾರಿಗೆ ರಕ್ಷಕನು ಪರಮೇಶ್ವರನ ಹೊರತು ಯಾರೂ ಇದ್ದಿಲ್ಲ. ತಂದೆಯಂತೂ ಬಾದಶಹನ ಅಂಜಿಕೆಯಿಂದ ಗತಿಗೆಟ್ಟು ಹೋಗಿದ್ದನು. ತಾಯಿಯ ಸುಖವನ್ನಂತು ಆಕೆಯು ಬಹು ದಿನಗಳಿಂದ ಕಾಣೇ ಕಾಣಳು. ಮಹಾರಾಣಾನಿಗೆ ಆಕೆಯು ಪತ್ರವನ್ನು ಕಳಿಸಿದ್ದರೂ, ಇಷ್ಟು ಬೇಗನೆ ಆತನ ಸಹಾಯವು ತನಗೆ ಒದಗೀತೆಂಬ ನಂಬಿಗೆಯು ಆಕೆಗೆ ಆಗಲೊಲ್ಲದು. ಈ ಸ್ಥಿತಿಯಲ್ಲಿ ಆಕೆಯು ಏಕಾಗ್ರದಿಂದ ಶಿವಲಿಂಗವನ್ನು ದಿಟ್ಟಿಸುವಾಗ ಆಕೆಯ ಕಣ್ಣುಗಳೊಳಗಿಂದ ನೀರು ಬಂದವು. ಆಕೆಯು ಗದ್ಗದವಾಣಿಯಿಂದ ಪರಮೇಶ್ವರನನ್ನು ಕುರಿತು ಕೈಜೋಡಿಸಿ—''ಅನಾಥ ಬಂಧುವೆ, ಈ ಚಂಚಲಕುಮಾರಿಗೆ ನಿನ್ನ ಹೊರತು ಬೇರೆ ಗತಿಯಿಲ್ಲ. ನಿನ್ನ ದಯೆ ತಪ್ಪಿದರೆ ಯಾರಿದ್ದು ಏನು ಮಾಡುವರು? ನಿನ್ನ ಕೃಪೆಯಿಂದ ಗುಡ್ಡವೂ ಕಡ್ಡಿಯಾಗಿ ನನ್ನ ವಿಪತ್ತು ದೂರವಾಗುವುದು. ದೇವಾ, ನನ್ನ ಈ ಕೈಗಳು ನಿನ್ನ ಈ ಪೂಜೆಯಿಂದ ಪವಿತ್ರವಾಗಿರುವುವು; ನನ್ನ ಈ ಕಾಲುಗಳು ನಿನ್ನ ಪ್ರದಕ್ಷಿಣೆಯಿಂದ ಪವಿತ್ರವಾಗಿರುವುವು; ನನ್ನ ಈ ಕಣ್ಣುಗಳು ನಿನ್ನ ರೂಪವನ್ನು ನೋಡಿ ಪವಿತ್ರವಾಗಿರುವುವು; ಅದರಂತೆ ಎಲೈ ತ್ರಿಪುರಾರಿಯೇ! ನಿನ್ನ ಚರಿತ್ರ ಶ್ರವಣದಿಂದ ನನ್ನ ಕಿವಿಗಳೂ, ನಿನ್ನ ನಿರ್ಮಾಲ್ಯವನ್ನು ಮೂಸಿ ನನ್ನ ಮೂಗೂ, ನಿನ್ನ ಪ್ರಸಾದಗ್ರಹಣದಿಂದ ನನ್ನ ನಾಲಿಗೆಯೂ ಪವಿತ್ರವಾಗಿರುವುವು. ನೀಲಕಂಠನೇ, ಇಷ್ಟು ದಿನದ ನಿನ್ನ ಸೇವೆಯಿಂದ ಪವಿತ್ರವಾಗಿರುವ ಈ ಚಂಚಲಕುಮಾರಿಯ ಪವಿತ್ರ ದೇಹವು ಯವನಸ್ಪರ್ಶದಿಂದ ಅಪವಿತ್ರವಾಗುವುದು ನಿನ್ನ ಮನಸ್ಸಿಗೆ ಬರುವುದೇ? ಆಗಲಿ ದೇವಾ, ನಿನ್ನ ಇಚ್ಛೆಯಿಲ್ಲದೆ ಜಗತ್ತಿನ ಯಾವ ಕಾರ್ಯಗಳು ಆಗುವುವು? ನಿನ್ನ ಇಚ್ಛೆಗೆ ವಿರುದ್ಧವಾಗಿ ನಡೆಯಲು ಯಾರು ಎಷ್ಟರವರು? ಆದರೆ ದುಷ್ಟ ಔರಂಗಜೇಬನ ಅಹಂಕಾರದ ನಡತೆಯು ನಿನ್ನ ಕಣ್ಣಿಗೆ ಕಾಣಿಸಲೊಲ್ಲದೇನು? ಅಥವಾ ನಮ್ಮಂತಹ ಆಸ್ತಿಕರಿಗೆ ಆ ಮದಾಂಧನ ದ್ವಾರದಿಂದ ಶಾಸನ ಮಾಡಿಸಬೇಕೆಂದು ಬೇಕಂತ ನೀನು ಕಣ್ಣುಮುಚ್ಚಿ ಕೊಂಡಿರುವೆಯೋ? ಆದರೆ ದೇವಾ, ಈ ಚಂಚಲೆಯನ್ನು—ನಿನ್ನ ಪಾಮರಳಾದ ಸೇವಕಳನ್ನು ದುರ್ಮರಣದೋಷಕ್ಕೆ ಗುರಿಮಾಡಬೇಡ ಕಂಡೆಯಾ? ಆತ್ಮಹತ್ಯವು ಮಹಾ ಪಾಪವಲ್ಲವೇ? ಶಂಕರ ನೆನಿಸಿಕೊಂಡಿರುವ ನಿನಗೆ ಇದಕ್ಕೂ ಹೆಚ್ಚಿಗೆ ಏನು ಬೇಡಿಕೊಳ್ಳಲಿ? ಕೊಡು, ಯಮುನಮಂದಿರಕ್ಕೆ ಹೊರಟಿರುವ ಈ ಚಂಚಲೆಗೆ ಒಂದು ಬಿಲ್ವದಳವನ್ನು ಪ್ರಸಾದವಾಗಿ ಕೊಡು!''

ಈ ಮೇರೆಗೆ ಚಂಚಲಕುಮಾರಿಯು ಪ್ರಾರ್ಥಿಸಲು, ಶಿವಲಿಂಗದ ತಲೆಯ ಮೇಲಿನ ದೊಂದು ಬಿಲ್ವಮಂಜರಿಯು ಕಳಚಿಬಿದ್ದಿತು! ಚಂಚಲಕುಮಾರಿಯು ಅದನ್ನು ಅರ್ಚಕನ ಕೈಯಿಂದ ಭಕ್ತಿಪೂರ್ವಕವಾಗಿ ತೆಗೆದುಕೊಂಡು ಕಣ್ಣು–ಮೂಗುಗಳಿಗೆ ಹಚ್ಚಿಕೊಂಡು, ಪರಮೇಶ್ವರನ ಕೃಪೆ ಸಂಪಾದಿಸಿದ ನನಗೆ ಇನ್ನು ಯಮುನ ಬಾಧೆಯೇನೆಂಬ ಮಹಾ

ಧೈರ್ಯದಿಂದ ಆಕೆಯು ಶಿವಾಲಯದಿಂದ ಹೊರಬಿದ್ದಳು! ಆಗ ಆಕೆಯ ಹೃದಯವು ಶಾಂತವಾಗಿತ್ತು; ಮುಖವು ಪ್ರಸನ್ನವಾಗಿತ್ತು; ಜಗತ್ತಿನ ಲಕ್ಷ್ಯವು ಆಕೆಗೆ ಇದ್ದಿಲ್ಲ. ಅದಾವ ಯವನನು ನನ್ನ ಸ್ಪರ್ಶಮಾಡುವನೆಂಬ ಮಹಾಧೈರ್ಯದಿಂದ ಆಕೆಯು ತಂದೆಯನ್ನು ನಮಸ್ಕರಿಸಿ, ಆತನ ಅಪ್ಪಣೆ ಪಡೆದು ಪಲ್ಲಕ್ಕಿಯನ್ನು ಹತ್ತಿದಳು. ನಿರ್ಮಲೆಯೂ ತನ್ನ ಮೇಣೆಯಲ್ಲಿ ಕುಳಿತುಕೊಂಡಳು. ಚಂಚಲಕುಮಾರಿಯು ದಿಲ್ಲಿಗೆ ಬರಬೇಡೆಂದು ಎಷ್ಟು ಹೇಳಿದರೂ ನಿರ್ಮಲೆಯು ಕೇಳಲಿಲ್ಲ. ನಿಮಗಾದದ್ದು ನನಗಾಗಲೆಂದು ಧೈರ್ಯದಿಂದ ಆಕೆಯು ಹೊರಟುಬಿಟ್ಟಳು. ಚಂಚಲೆಯ ಬಂಗಾರದ ಪಲ್ಲಕ್ಕಿಯ ಜರತಾರಿಯ ಮೇಲುಮುಸುಕಿನ ಮೇಲೆ ಮುತ್ತಿನ ಝಾಲರಿಗಳು ತೂಗಾಡುತ್ತಿದ್ದವು. ಯಾವೊತ್ತು ಸೇವಕ ಪರಿವಾರವು ಪಲ್ಲಕ್ಕಿಯನ್ನು ಸುತ್ತುಗಟ್ಟಿತ್ತು. ಶಿವಪ್ರಸಾದವನ್ನು ಪಡೆದಿದ್ದ ಚಂಚಲೆಯ ಪ್ರಸನ್ನಹೃದಯವು ಪುನಃ ಅಸ್ವಸ್ಥವಾಗಲಿಲ್ಲ. ಪುನಃ ಆಕೆಯ ಕಣ್ಣೊಳಗಿಂದ ನೀರುಗಳು ಬರಲಿಲ್ಲ. ಚಿಂತಾಭಯಗಳು ಪುನಃ ಆಕೆಯನ್ನು ಸೋಂಕಲಿಲ್ಲ. ಜಗತ್ತೇ ಆಕೆಗೆ ತೃಣಪ್ರಾಯವಾಗಿ ತೋರಹತ್ತಿತು! ದೇವರ ಒಲುಮೆಯಾದವರನ್ನು ದೈನ್ಯವು ಯಾಕೆ ಅಂಟಿಕೊಳ್ಳುವುದು? ಚಂಚಲ ಕುಮಾರಿಯ ಪಲ್ಲಕ್ಕಿಯು ಮುಂದಕ್ಕೆ ಸಾಗಿದ ಕೂಡಲೆ ವಾದ್ಯಗಳು ಭೋರ್ಗರೆಯ ಹತ್ತಿದವು. ಸೈನ್ಯದ ಅಜ್ಜಗಾವಲಿನಿಂದ ಪಲ್ಲಕ್ಕಿಯು ದಿಲ್ಲಿಯ ಹಾದಿಯನ್ನು ಹಿಡಿಯಿತು.

ಮೊಗಲ ಸೈನ್ಯವು ಆ ಗುಡ್ಡಗಾಡು ಪ್ರದೇಶದ ಸೌಂದರ್ಯವನ್ನೂ, ಸೃಷ್ಟಿ ಚಮತ್ಕಾರವನ್ನೂ ನೋಡುತ್ತ ಆನಂದದಿಂದ ಹಾದಿಯನ್ನು ನಡೆಯಹತ್ತಿತು. ಮುಗಿಲು ಮುಟ್ಟುವ ಅಲ್ಲಿಯ ಪರ್ವತಶಿಖರಗಳನ್ನು ನೋಡಿ ಮೊಗಲರು ಬೆರಗಾದರು. ಕೆಲವರು ದೇವರ ಮಹಿಮೆಯನ್ನು ಹೊಗಳಹತ್ತಿದರು; ಕೆಲವರು ಆ ಪರ್ವತಪ್ರದೇಶದಲ್ಲಿ ಆಗುವ ಪ್ರತಿಧ್ವನಿಗಳನ್ನು ಕೇಳುವ ಕೌತುಕದಿಂದ ಬಗೆಬಗೆಯಾಗಿ ಕೂಗಹತ್ತಿದರು. ಅವರ ಈ ಗದ್ದಲಕ್ಕೆ ಪಕ್ಷಿಗಳ ಸಮೂಹವು ತಮ್ಮ ಗೂಡುಗಳಿಂದ ಹೊರಟು ಅತ್ತಿತ್ತ ಹಾರಾಡಹತ್ತಿದವು! ಪಶು–ಮೃಗಗಳು ಎಡತಾಕಹತ್ತಿದವು. ಕೆಲಕಡೆಯಲ್ಲಂತೂ ಬಿಸಿಲು ಬೀಳಲಿಕ್ಕೂ ಆಸ್ಪದ ವಿಲ್ಲದ್ದರಿಂದ ಹವೆಯು ಬಹಳ ತಂಪಾಗಿದ್ದಿತು. ಹೀಗೆ ಮೊಗಲ ಸೈನ್ಯವು ಚಕ್ಕಂದದಿಂದ ಸಾಗಿರುವಾಗ 'ಧಡಡಡಡ' ಎಂದು ಶಬ್ದಮಾಡುತ್ತ ಒಂದು ಪ್ರಚಂಡವಾದ ಕಲ್ಲುಬಂಡೆಯು ಮಗ್ಗಲಿನ ಪರ್ವತದಿಂದ ಉರುಳುತ್ತ ಬಂದು ಮೊಗಲಸೈನ್ಯದ ಮಧ್ಯದಲ್ಲಿ ಬಿದ್ದಿತು. ಅದರಿಂದ ಒಬ್ಬ ರಾವುತನು ಮರಣಹೊಂದಿ ಒಬ್ಬಿಬ್ಬರಿಗೆ ಬಲವಾದ ಗಾಯಗಳಾದವು. ಹೀಗೇ ಕಸ್ಮಾತ್ ಆದ ಅಪಘಾತದಿಂದ ಸೈನಿಕರು ಸುತ್ತುಮುತ್ತು ನೋಡಹತ್ತಿದರು; ಆದರೆ ಜನರ ಸುಳಿವಿಲ್ಲ! ಇದೆಲ್ಲಿಯ ಬಂಡೆಯು ಉರುಳಿತೆಂದು ಸೈನಿಕರು ನಾಲ್ಕೂ ಕಡೆಗೆ ನೋಡುತ್ತಿರಲು, ಮತ್ತೊಂದು ಬಂಡೆಯು ಉರುಳಿತು; ಅದರಿಂದ ರಾವುತರು ಜಿಬ್ಬಿಯಾಗು ತ್ತಿರಲು, ಮತ್ತೊಂದು ಬಂಡೆಯು ಉರುಳಿತು. ಇದರಿಂದ ಸೈನ್ಯದಲ್ಲಿ ಗದ್ದಲವಾಗಿ ಅವ್ಯವಸ್ಥೆ ಯುಂಟಾಯಿತು. ರಾವುತರು ಒಬ್ಬರ ಮೇಲೊಬ್ಬರು ಧುಮುಕುತ್ತ ಮುಂದಕ್ಕೆ ಓಡಹತ್ತಿದರು. ಆ ಪ್ರಸಂಗದಲ್ಲಿ ಜೀವದಾಸೆಯಿಂದ ತಮ್ಮ ತಮ್ಮೊಳಗೆ ಸೈನಿಕರು ಶಸ್ತ್ರವೆತ್ತಿ ಕಾದಲಿಕ್ಕೆ ಹಿಂದೆ

ಮುಂದೆ ನೋಡದಾದರು. ಬಂಡೆಗಳ ಮಳೆಯಂತೂ ಒಂದೇಸವನೆ ಸುರಿಯುತ್ತಲಿತ್ತು. ಒಬ್ಬರ ಹಿಂದೊಬ್ಬರಂತೆ ಸೈನಿಕರು, ಪಟಪಟ ಸಾಯಹತ್ತಿದರು. ಸೈನಿಕರಿಗೆ ಓಡಿಹೋಗಲಿಕ್ಕೆ ಮಾರ್ಗವು ಸಿಗದಾಯಿತು. ಆಗ ಒಬ್ಬರನ್ನೊಬ್ಬರು ದೂಡಿ ಒಬ್ಬರನ್ನೊಬ್ಬರು ತುಂಡರಿಸಿ ಅವರು ಮಾರ್ಗ ಮಾಡಿಕೊಳ್ಳಹತ್ತಿದರು. ಇಂಥ ಪ್ರಸಂಗದಲ್ಲಿ ಮೊಗಲ ಸೈನಿಕರು ಅಲ್ಲಾನ ಸ್ಮರಣ ಮಾಡುತ್ತ ಜೀವದ ಆಶೆದೊರೆಯಹತ್ತಿದರು. ಹೀಗಿರುವಾಗ ಒಂದು ಇಕ್ಕಟ್ಟಿನ ಮಾರ್ಗಕ್ಕೆ ದೊಡ್ಡದೊಂದು ಬಂಡೆಯು ಉರುಳಿ ಬಂದುಬಿದ್ದು ಹಾದಿಯು ಕಟ್ಟಾಗಿಹೋಗಿ, ಹಿಂದಿನ ಸೈನಿಕರು ಹಿಂದೆ, ಮುಂದಿನ ಸೈನಿಕರು ಮುಂದೆ ಆದರು. ಇಷ್ಟು ಅನರ್ಥವು ಒದಗಿದರೂ ಬಂಡೆಗಳನ್ನು ಯಾರು ಉರುಳಿಸುವರೆಂಬುದು ಯಾರಿಗೂ ಗೊತ್ತಾಗಲೊಲ್ಲದು. ಮುಂದಕ್ಕೆ ಹೋಗಲಿಕ್ಕೆ ಹಾದಿಯು ಇಲ್ಲದಂತಾದ್ದರಿಂದ ಚಂಚಲಕುಮಾರಿಯ ಪಲ್ಲಕ್ಕಿಯು ನಿಂತುಬಿಟ್ಟಿತು. ಆಗ ಪಲ್ಲಕ್ಕಿಯ ಬಳಿಯಲ್ಲಿ ಮೊಗಲರ ಸೋಗಿನಿಂದ ಸಾಗಿಬರುತ್ತಿದ್ದ ಮಾಣಿಕಲಾಲನು ಬೋಯಿಗಳನ್ನು ಕುರಿತು ಗಂಭೀರಸ್ವರದಿಂದ—''ಬೋಯಿಗಳೇ, ಬಹಳ ಜೋಕೆ. ಹೀಗೆ ಈ ಎಡಗಡೆಯ ಈ ಇಕ್ಕಟ್ಟಿನ ಹಾದಿಯಿಂದ ಪಲ್ಲಕ್ಕಿಯನ್ನು ಸಾಗಿಸಿರಿ. ಬಂಡೆಗಿಂಡೆ ಬಿದ್ದಾವು, ತಿರುಗಿರಿ ಎಡಕ್ಕೆ!'' ಎಂದು ಆಜ್ಞಾಪಿಸಿದನು. ಬೋಯಿಗಳಿಗಾದರೂ ಅಷ್ಟೇ ಬೇಕಾಗಿತ್ತು. ತಮ್ಮ ಮುಂದುಗಡೆ ನಡೆದಿದ್ದ ಗೊಂದಲವನ್ನೂ, ಹೊಡೆದಾಟವನ್ನೂ ನೋಡಿ, ತಮ್ಮ ಮೇಲೆಲ್ಲಿ ಬಂಡೆಗಳು ಉರುಳಿ ಬೀಳುವುವೋ ಎಂದು ಅವರು ಬೆದರಿದ್ದರು. ಆದ್ದರಿಂದ ತೀರ ಇಕ್ಕಟ್ಟಿನ ಹಾದಿಯಿಂದ ಅವರು ಪಲ್ಲಕ್ಕಿಯನ್ನು ಸಾಗಿಸಿಕೊಂಡು ನಡೆದರು. ನಿರ್ಮಲೆಯ ಮೇಣೆಯೂ ಪಲ್ಲಕ್ಕಿಯನ್ನು ಹಿಂಬಾಲಿಸಿ ಸಾಗಿತ್ತು. ಈ ಗದ್ದಲದ ಕಾರಣವು ಹಿಂದಿನ ಸೈನ್ಯಕ್ಕೆ ಗೊತ್ತಾಗ ದಾಯಿತು. ಸೇನಾಪತಿ ಹಸನಲ್ಲಿ ಖಾನನು ಸೈನ್ಯದ ಹಿಂಭಾಗದಲ್ಲಿದ್ದನು. ಮುಂದಿನ ಸೈನ್ಯದ ಈ ಅವ್ಯವಸ್ಥೆಯನ್ನು ನೋಡಿ ಆತನು ಸಂತಾಪಗೊಂಡನು; ಆದರೆ ಮಾಡುತ್ತಾನೇನು? ಆ ಇಕ್ಕಟ್ಟಿನ ಹಾದಿಯಲ್ಲಿ ಮುಂದಕ್ಕೆ ಸಾಗಿಬಂದು ಕಾರಣ ತಿಳಿದುಕೊಳ್ಳಲಿಕ್ಕೂ ಆತನಿಗೆ ಬರುವಹಾಗಿದ್ದಿಲ್ಲ.

ಹೀಗೆ ಪಲ್ಲಕ್ಕಿಯೂ, ಮೇಣೆಯೂ ಮಾಣಿಕಲಾಲನ ಅಪ್ಪಣೆಯಿಂದ ದಿಲ್ಲಿಯ ಹಾದಿಯನ್ನು ಬಿಟ್ಟು ಉದೇಪುರಕ್ಕೆ ಹೋಗುವ ಇಕ್ಕಟ್ಟಿನ ಹಾದಿಯನ್ನು ಹಿಡಿದು ಬಹು ಕಷ್ಟದಿಂದ ಸಾಗಿಹೋಗುತ್ತಿರಲು, ಆ ಹಾದಿಯ ಹಿಂದೆ ಒಂದು ದೊಡ್ಡ ಬಂಡೆಗಲ್ಲು ಉರುಳಿಬಂದು ಬಿದ್ದು ಆ ಹಾದಿಯೂ ಕಟ್ಟಾಗಿ ಹೋಯಿತು. ಪಲ್ಲಕ್ಕಿ–ಮೇಣೆಗಳು ಮುಂದಾದವು, ಮೊಗಲ ಸೈನಿಕರು ಹಿಂದಾದರು. ಬಂಡೆಯನ್ನು ದಾಟಿಹೋಗಲಿಕ್ಕೆ ರಾವುತರಿಗೆ ಬರಲೊಲ್ಲದು. ಅವರ ಕುದುರೆಗಳು ಮುಂದಕ್ಕೆ ಹೆಜ್ಜೆಯನ್ನು ಇಡಲೊಲ್ಲವು. ಅತ್ತ ಬಂಡೆಗಳಂತೂ ಮೇಲಿನಿಂದ ಉರುಳಿ ಬರುತ್ತಲೇ ಇದ್ದವು. ಇದನ್ನು ಮುಬಾರಕನು ನೋಡಿದನು. ತಾನು ದಿಲ್ಲಿಯಿಂದ ಬಾದಶಹನ ಅಪ್ಪಣೆ ಪಡೆದು ಬರುವಾಗ ರೂಪನಗರದ ಪ್ರಯಾಣವು ಸುಖಕರ ವಾಗಿರುವುದೋ ಇಲ್ಲವೋ ಎಂದು ಆಲೋಚಿಸಹತ್ತಿದ್ದು ಈಗ ಅವನಿಗೆ ನೆನಪಾಯಿತು. ಆ ಶೂರಪುರುಷನು ತಾನು ಕುದುರೆಯಿಂದ ಇಳಿದು ತನ್ನ ಸೈನಿಕರಿಗೆ—''ಇಳಿಯಿರಿ ಕುದುರೆ ಯಿಂದ! ಈ ಬಂಡೆಯನ್ನು ಹತ್ತಿ ಹಾರಿ ಕಾಲನಡಿಗೆಯಿಂದಲೇ ಪಲ್ಲಕ್ಕಿಯನ್ನು ಹಿಂಬಾಲಿಸುವಾ

ನಡೆಯಿರಿ'' ಎಂದು ಹೇಳಿ ತಾನು ಮೊದಲು ಬಂಡೆಯಿಂದ ಕೆಳಗೆ ಧುಮುಕಿದನು. ಕೂಡಲೆ ನೂರಾರು ಜನ ಮೊಗಲರು, ಬಂಡೆಯಿಂದ ಕೆಳಗೆ ಧುಮುಕಿ ಅವಸರದಿಂದ ಮುಂದಕ್ಕೆ ಸಾಗಿದರು. ಅಷ್ಟರಲ್ಲಿ ಪಲ್ಲಕ್ಕಿಯು ಅವರ ಕಣ್ಣಿಗೆ ಕಾಣದ ಹಾಗೆ ದೂರ ಹೋಗಿಬಿಟ್ಟಿತ್ತು. ಹಾದಿಯು ಬಹಳ ಇಕ್ಕಟ್ಟಿನದು. ನಡುನಡುವೆ ಬಂಡೆಗಳಿದ್ದದ್ದರಿಂದ ಬೇಗನೆ ಹೋಗುವುದು ಆಗಲೊಲ್ಲದು. ಅತ್ತ ಮೊಗಲ ವೇಷಧಾರಿಯಾದ ಮಾಣಿಕಲಾಲನು—''ಈಗ ದಿಲ್ಲಿಯ ದೊಡ್ಡ ಹಾದಿಯು ಹತ್ತುವುದೆಂ''ದು ಬೋಯಿಗಳಿಗೆ ಹೇಳಿ ಪಲ್ಲಕ್ಕಿಯನ್ನು ಒತ್ತರದಿಂದ ಉದೇಪುರದ ಹಾದಿಯನ್ನು ಹಿಡಿದು ಸಾಗಿಸಿಕೊಂಡು ನಡೆದಿದ್ದನು. ಮುಬಾರಕನು ಬಹಳ ಒತ್ತರದಿಂದ ಮುಂದಕ್ಕೆ ಸಾಗುತ್ತಿರಲು, ಮೇಲಿನಿಂದ ಬಂಡೆಗಳು ಉರುಳಿಬಂದು ಆತನ ಜನರು ಸಾಯುತ್ತಲೇ ಇದ್ದರು; ಆದರೂ ಆ ವೀರ ಮೊಗಲ ಸಿಪಾಯಿಗಳು ಜೀವದ ಹಂಗು ಇಲ್ಲದೆ ಸಾಗಿದ್ದರು. ಮುಂದೆ ಬಹಳ ದೂರ ಹೋದ ಬಳಿಕ ಎರಡು ಹಾದಿಗಳು ಒಡೆದಿದ್ದವು. ಯಾವ ಹಾದಿಯಿಂದ ಹೋಗಬೇಕೆಂಬುದು ಅವರಿಗೆ ತಿಳಿಯದಾಯಿತು. ತಾವು ಹಿಡಿದ ಹಾದಿಯೊಂದು, ಪಲ್ಲಕ್ಕಿ ಹೋದ ಹಾದಿಯೊಂದು—ಆದರೆ ಮುಂದೆ ಗತಿಯೇನೆಂದು ಮುಬಾರಕನು ಚಿಂತಿಸತೊಡಗಿದನು. ಚಿಂತೆಯಲ್ಲಿ ಕೆಲವು ಹೊತ್ತು ಹೋಯಿತು. ಕಡೆಗೆ ಆತನು, ಮನುಷ್ಯರು ಹೋಗಿರುವ ಚಿಹ್ನಗಳನ್ನು ಅರಿತು, ಅವು ಮೋಸದ ಚಿಹ್ನಗಳೆಂದು ತಿಳಿಯದೆ ಆ ಹಾದಿಯನ್ನು ಹಿಡಿದನು. ಅಷ್ಟರಲ್ಲಿ ಮಹಾರಾಣಾ ಜಯಸಿಂಹನು ತನ್ನ ಪರಿವಾರದೊಡನೆ ಗುಡ್ಡವಿಳಿದು, ಪಲ್ಲಕ್ಕಿಯ ಬಳಿಗೆ ಬರಲು, ಬೋವಿಗಳು ಬೆದರಿ ಪ್ರಾಣಭಯದಿಂದ ರಾಣಾನ ಅಪ್ಪಣೆಯಂತೆ ಉದೇಪುರದ ಹಾದಿಯನ್ನು ಹಿಡಿದು ಸಾಗಬೇಕಾಯಿತು. ಅತ್ತ ಮುಬಾರಕನು ತನ್ನ ಸೈನಿಕರೊಡನೆ ಎತ್ತಕಡೆಗೋ ದಿಕ್ಕುತಪ್ಪಿ ನಡೆದಿರುವಾಗ, ಸೇನಾಪತಿ ಹಸನಅಲ್ಲಿ ಖಾನನು ತನ್ನ ಸೇನೆಯ ಕಡೆಗೊಮ್ಮೆ, ಮುಬಾರಕನು ಹೋದ ಹಾದಿಯ ಕಡೆಗೊಮ್ಮೆ ನೋಡುತ್ತ ಮಂಗನಂತೆ ನಿಂತುಕೊಂಡುಬಿಟ್ಟನು! ಆತನ ಗತಿಯು, ''ಇದ್ದ ಊರಗೌಡ ಪರಊರ ಮಂಗನೆಂ''ಬಂತೆ ಆಯಿತು! ಪಲ್ಲಕ್ಕಿಯು ಕೈಬಿಟ್ಟು, ಹೋದದ್ದು ಹೋಗಿಬಿಟ್ಟಿತು! ಸೈನಿಕರು ಮುಂದುಗಾಣದೆ ನಿಂತವರು ನಿಂತುಬಿಟ್ಟರು. ದೈವಗತಿಯು ವಿಚಿತ್ರವಾದದ್ದು!

## ನಿರಾಶೆ

ಇತ್ತ ಮುಬಾರಕನು ತನ್ನ ಜನರೊಡನೆ ಆ ಇಕ್ಕಟ್ಟಿನ ದಾರಿಯನ್ನು ಹಿಡಿದು ಬಹುದೂರ ಹೋದನು; ಆದರೆ ಜನರ ಸುಳಿವಿಲ್ಲ, ಪಲ್ಲಕ್ಕಿಯನ್ನು ಸಾಗಿಸಿಕೊಂಡು ಹೋದವರು ಯಾರೆಂಬುದೂ ಆತನಿಗೆ ತಿಳಿಯಲಿಲ್ಲ. ಇದು ಕಳ್ಳರು-ಕಾಕರ ಕೆಲಸವಲ್ಲವೆಂದು ಆತನು ತರ್ಕಿಸಿದನು. ಆದರೆ ಇಂಥವರೇ ಚಂಚಲಕುಮಾರಿಯನ್ನು ಅಪಹರಿಸಿಕೊಂಡು ಹೋದ ರೆಂಬುದು ಆತನಿಗೆ ತಿಳಿಯದಾಯಿತು. ಮಧ್ಯಾಹ್ನದ ಬಿಸಿಲು, ಹೊಟ್ಟೆ ಹಸಿದದ್ದರಿಂದ ಸೈನಿಕರು

ಕಂಗಾಲಾದರು. ಬಂಡೆಗಲ್ಲುಗಳಲ್ಲಿ ಎಡವುತ್ತ ದಾರಿಯನ್ನು ನಡೆದು–ನಡೆದು ಅವರು ಬಹಳವಾಗಿ ದಣಿದಿದ್ದರು. ಏನಾದರೂ ಗೊತ್ತುಹಚ್ಚದೆ ಹೋಗಲಾಗದೆಂದು ಮುಬಾರಕನು ನಿಶ್ಚಯಿಸಿದನು; ಆತನ ಈ ನಿಶ್ಚಯವೇ ಆತನ ಸಂಕಟ–ಪರಂಪರೆಗಳಿಗೆ ಕಾರಣವಾಯಿತು. ಆತನು ತನ್ನ ಜನರೊಡನೆ ಆಲೋಚಿಸುತ್ತ ಆ ಕಣಿವೆಯ ಹಾದಿಯಲ್ಲಿ ಕುಳಿತಿರಲು, ಎದುರಿಗೆ ದೂರ ಯಾವುದೋ ಒಂದು ಪ್ರಾಣಿಯು ಅಡ್ಡಮಗ್ಗಲು ಹೋದಂತೆ ತೋರಿತು. ಆಗ ಮುಬಾರಕನು ತನ್ನ ಜನರಿಗೆ ಅಲ್ಲಿಯೇ ಸ್ವಲ್ಪ ಕುಳಿತುಕೊಳ್ಳಲು ಹೇಳಿ, ತಾನೊಬ್ಬನೇ ಆ ಹಾದಿಯು ಎತ್ತ ಹೋಗುತ್ತದೆಂಬುದನ್ನು ನೋಡಿಬರುವುದಕ್ಕಾಗಿ ಹೊರಟನು. ದಣಿದು ಹೆಣವಾಗಿದ್ದ ಸೈನಿಕರಿಗೂ ಅಷ್ಟೇ ಬೇಕಾಗಿತ್ತು, ಅವರು ತಮ್ಮ ಸೈನ್ಯವನ್ನು ಬಿಟ್ಟು ಏನಿಲ್ಲೆಂದರೂ ಎರಡು ಹರದಾರಿಯಾದರೂ ಬಂದಿರಬಹುದು. ಮುಬಾರಕನು ಅತ್ತ ಹೋಗಲು, ಆತನನ್ನು ಹಿಂಬಾಲಿಸಿ ಮತ್ತೊಬ್ಬ ಸೈನಿಕನು ಹೋದನು. ಅವರು ಆ ಎದುರಿನ ಅಡ್ಡ ಹಾದಿಯ ಕಡೆಗೆ ತಿರುಗಲು, ಸೈನಿಕರು ಅವರ ಕಣ್ಣಿಗೆ ಕಾಣಿಸದಂತಾದರು. ಅಷ್ಟರಲ್ಲಿ ಇತ್ತ ಅಲ್ಲಿಯೇ ಗುಡ್ಡದ ಮೇಲೆ ಹೊಂಚುಹಾಕಿಕೊಂಡು ಅವರ ಸಂಗಡಲೇ ಬರುತ್ತಿದ್ದ ರಾಜಸಿಂಹನ ಐವತ್ತು ಜನ ಶೂರ ರಜಪೂತರು ಅಕಸ್ಮಾತ್ತಾಗಿ ಅವರ ಮೇಲೆ ಬಿದ್ದು ಅವರಲ್ಲಿ ಸುದ್ದಿ ಹೇಳಲಿಕ್ಕೂ ಉಳಿಯದಂತೆ ಎಲ್ಲರನ್ನು ತುಂಡರಿಸಿ ಚೆಲ್ಲಿದರು. ರಜಪೂತರಿಗೆ ಆ ಗೂಢವಾದ ಪ್ರದೇಶದ ಗುಟ್ಟೆಲ್ಲ ಗೊತ್ತಿದ್ದುದರಿಂದ, ಹೀಗೆ ಶತ್ರುಗಳನ್ನು ನಾಶಮಾಡಲು ಅವರು ಸಮರ್ಥರಾದರು.

ಇತ್ತ ಮುಬಾರಕನು ಬಹಳ ಒತ್ತರದಿಂದ ನಡೆದು ತನ್ನ ಎದುರಿನ ಆ ಅಡ್ಡದಾರಿಗೆ ತಿರುಗಿದವನು ಹಾಗೆಯೇ ಸ್ವಲ್ಪ ಮುಂದಕ್ಕೆ ಹೋಗಲು, ಭಯಂಕರವಾದ ಕೊಳ್ಳವೂ, ರಮ್ಯವಾದ ವನಪ್ರದೇಶವೂ ಆತನ ಕಣ್ಣಿಗೆ ಬಿದ್ದವು. ಅತ್ತ ಬಹಳ ದೂರದಲ್ಲಿ ಕೆಲಜನರು ಪಲ್ಲಕ್ಕಿಯನ್ನು ಸಾಗಿಸಿಕೊಂಡು ಕಣಿವೆಯನ್ನು ಇಳಿಯುತ್ತಿರುವುದನ್ನು ಆತನು ನೋಡಿದನು. ಶತ್ರುಗಳು ಅತ್ತ ಸಾಗಿರಲು, ತಾನು ಇತ್ತ ಬಂದುಬಿಟ್ಟು ಸುಮ್ಮನೆ ಮೋಸಹೋದೆನೆಂದು ಆತನು ಪಶ್ಚಾತ್ತಾಪ ಪಟ್ಟನು. ತಾನು ಬಂದ ದಾರಿಯು ಕೊಳ್ಳದ ಓರೆಗುಂಟ ಕೆಳಗೆ ಹೋಗಿದ್ದು ಸಮೀಪದಲ್ಲಿಯೇ ಒಂದು ದೇವಾಲಯವಿರುವುದನ್ನು ಆತನು ನೋಡಿದನು. ಶತ್ರುಗಳು ಆ ದೇವಾಲಯದ ಬಳಿಗೆ ಬಂದರೂ ಬರಬಹುದೆಂದು ಆತನು ತರ್ಕಿಸಿ, ಇನ್ನಿಷ್ಟು ಮುಂದೆ ಹೋಗಿ ಹಾದಿಯನ್ನು ಚೆನ್ನಾಗಿ ನೋಡಿಬಂದು ತನ್ನವರನ್ನು ಕರೆತರಬೇಕೆಂದು ಆತನು ಮುಂದಕ್ಕೆ ಸಾಗಿದನು. ಆತನು ಸ್ವಲ್ಪ ಮುಂದಕ್ಕೆ ಹೋಗಿರಬಹುದು, ಅಷ್ಟರಲ್ಲಿ ಒಂದು ಭಯಂಕರವಾದ ಹುಲಿಯು ಆರ್ಭಟಿಸಿ ಅವನ ಮೈಮೇಲೆ ಹಾರಿತು! ಕ್ಷಣಾರ್ಧದಲ್ಲಿ ಮುಬಾರಕನು ಆ ಹುಲಿಗೆ ತುತ್ತಾಗುವವನು, ಅಷ್ಟರಲ್ಲಿ ಆತನನ್ನು ಹಿಂಬಾಲಿಸಿ ಬಂದಿದ್ದ ಒಬ್ಬ ತರುಣ ಸೈನಿಕನು, ತನ್ನ ತುಬಾಕಿಯಿಂದ ಆ ಹುಲಿಯನ್ನು ಕೊಂದನು. ಆ ಭಯಂಕರ ಮೃಗವು ಆರ್ಭಟಿಸಿ ನೆಲಕ್ಕೆ ಬಿದ್ದು ಉರುಳುತ್ತ ಕೊಳ್ಳದ ತಳಕ್ಕೆ ಹೋಯಿತು. ಮುಬಾರಕನು ಹಿಂದಿರುಗಿ ನೋಡಲು, ಒಬ್ಬ ತರುಣ ದಂಡಾಳುವು—"ಗಾಬರಿಯಾಗಬೇಡಿರಿ, ಕಾಲುಜಾರಿ ಕೊಳ್ಳದಲ್ಲಿ

ಬಿದ್ದೀರಿ'' ಎಂದು ಆತನನ್ನು ಎಚ್ಚರಗೊಳಿಸುತ್ತ ಹತ್ತರ ಹೋಗಿ ಆತನ ರಟ್ಟೆಯನ್ನು ಹಿಡಿದು ನಿಲ್ಲಿಸಿದನು. ಆಗ ಮುಬಾರಕನು ಅತ್ಯಂತ ಕೃತಜ್ಞತೆಯಿಂದ ಆ ದಂಡಾಳುವನ್ನು ಕುರಿತು—

ಮುಬಾರಕ—''ಪ್ರಿಯ ದೋಸ್ತ ಎಂತಹ ಸಂಕಟದಿಂದ ನನ್ನನ್ನು ಬದುಕಿಸಿದೆಯಲ್ಲ! ಹಾದಿಯನ್ನು ನೋಡುವ ಭರದಲ್ಲಿ ಮೈಮರೆತಿದ್ದ ನಾನು, ಇಷ್ಟು ಹೊತ್ತಿಗೆ ಹುಲಿಗೆ ತುತ್ತಾಗುತ್ತಿದ್ದೆನು; ಆದರೆ ನನ್ನ ಪ್ರಾಣರಕ್ಷಕಾ, ನೀನು ಇಲ್ಲಿಗೆ ಯಾವಾಗ ಬಂದೆ?''

ದಂಡಾಳು—''ನೀವು ಹೊರಟ ಕೂಡಲೆ ನಿಮ್ಮ ಬೆನ್ನ ಹಿಂದೆಯೇ ನಾನು ಬಂದೆನು; ಆದರೆ ಮುಂದೆ ದೃಷ್ಟಿಯಿದ್ದ ನೀವು ನನ್ನನ್ನು ನೋಡಲಿಲ್ಲ!''

ಮುಬಾರಕ—''ಅಷ್ಟು ಜನ ಸೈನಿಕರನ್ನು ಬಿಟ್ಟು ನೀನು ಒಬ್ಬನೇ ಬಂದ ಕಾರಣವೇನು? ನಿಮಗೆ ಅಲ್ಲಿಯೇ ವಿಶ್ರಮಿಸಬೇಕೆಂದು ನಾನು ಹೇಳಿದಿಲ್ಲವೆ?''

ದಂಡಾಳು—''ನಿಮ್ಮ ಸಂರಕ್ಷಣಕ್ಕಾಗಿಯೇ ದಿಲ್ಲಿಯಿಂದ ಬಂದಿದ್ದ ನಾನು ನಿಮ್ಮನ್ನು ಬಿಟ್ಟು ಇರುವ ಬಗೆಯೆತ್ತ?''

ಮುಬಾರಕ—''ನಿನ್ನ ದನಿಯ ಮೇಲಿಂದ ನೀನು ಹೆಂಗಸಿರುವೆಯೆಂಬಂತೆ ತೋರುತ್ತದೆ, ನಿನ್ನ ಹೆಸರೇನು?''

ದಂಡಾಳು—''ನನ್ನ ದನಿಯ ಗುರುತು ನಿಮಗೆ ಹತ್ತುವುದಿಲ್ಲವೋ?''

ಮುಬಾರಕ—(ಆಶ್ಚರ್ಯದಿಂದ) ''ಯಾರು? ದರಿಯಾ, ನೀನು ಇಲ್ಲಿಗೆ ಹೇಗೆ ಬಂದೆ? ಈ ಪುರುಷವೇಷವನ್ನು ಯಾವಾಗ ಧರಿಸಿದೆ?''

ದರಿಯಾ—''ದಿಲ್ಲಿಯಿಂದ ರೂಪನಗರಕ್ಕೆ ಹೊರಟುಬಂದಿದ್ದ ಸೈನ್ಯದ ಸಂಗಡಲೇ ನಾನು ಪುರುಷವೇಷದಿಂದ ಬಂದಿದ್ದು, ನಿಮ್ಮ ಮೈಗಾವಲಾಗಿ ಸಂಚರಿಸುತ್ತಿರುವೆನು. ನಾನಿಲ್ಲದಿದ್ದರೆ ಈಗ ನಿಮ್ಮ ಗತಿಯು ಏನಾಗುತ್ತಿತ್ತು? ಶಹಾಜಾದಿ ಜಿಬುನ್ನಿಸೆಯು ನಿಮ್ಮ ಮೇಲೆ ನನಗಿಂತ ಹೆಚ್ಚು ಪ್ರೇಮ ಮಾಡುವಳಲ್ಲವೆ?''

ಮುಬಾರಕ—(ನಾಚಿಕೆಯಿಂದ ತಲೆಬಾಗಿಸಿ) ''ಶಹಾಜಾದಿಯು ಯಾರನ್ನು ಪ್ರೀತಿಸುವುದಿಲ್ಲ? ಆಕೆಯ ಕ್ಷಣಿಕ ಪ್ರೇಮದಲ್ಲಿ ಯಾರು ವಿಶ್ವಾಸವಿಡಬೇಕು?''

ದರಿಯಾ—''ಪತಿವ್ರತೆಯರ ಪ್ರೇಮವನ್ನೂ ನೀವು ಹಾಗೆ ಚಂಚಲವಾದದ್ದೆಂತಲೇ ಭಾವಿಸುವಿರೋ? ಪ್ರಾಣನಾಥ, ಹೀಗೆ ವಿವಾಹಿತ ಸ್ತ್ರೀಯನ್ನು ಗೋಳಾಡಿಸುತ್ತ ಮನಸ್ಸಿಗೆ ಬಂದಂತೆ ನಡೆದರೆ, ಅಲ್ಲಾನು ಮೆಚ್ಚಬಹುದೋ?''

ಮುಬಾರಕ—(ಪ್ರೇಮದಿಂದ ಹೆಂಡತಿಯನ್ನು ಆಲಿಂಗಿಸಿ) ಇಲ್ಲ ದರಿಯೇ, ಇನ್ನುಮೇಲೆ ನಿನ್ನನ್ನು ನಾನು ಎಂದೂ ನಿರಾಕರಿಸುವುದಿಲ್ಲ, ಈ ಮಾತನ್ನು ನಿಜವೆಂದು ನಂಬು. ಇನ್ನು ಜಿಬುನ್ನಿಸೆಯ ರಂಗಮಹಲಿನಲ್ಲಿ ಕಾಲುಹಾಕಿದರೆ ಕೇಳು!''

ಈ ಮೇರೆಗೆ ನುಡಿದು ಮುಬಾರಕನು ತನ್ನ ಹೆಂಡತಿಯಾದ ದರಿಯೆಯೊಡನೆ ಬಂದ ದಾರಿಯಿಂದ ಹಿಂದಕ್ಕೆ ತಿರುಗಿದನು. ಆತನು ತನ್ನ ಸೈನಿಕರು ಕುಳಿತಿರುವ ಸ್ಥಳಕ್ಕೆ ಬರಲು, ಅಲ್ಲಿಯ ಭಯಂಕರ ನೋಟವು ಆತನ ಕಣ್ಣಿಗೆ ಬಿದ್ದಿತು. ತನ್ನ ದಂಡಾಳುಗಳೆಲ್ಲ ದೀರ್ಘ ನಿದ್ರೆಹೋಗಿದ್ದರು. ನಾಲ್ಕೂ ಕಡೆಗೆ ರಕ್ತವು ಸಿಡಿದು ಹಾದಿಯಲ್ಲಿ ರಕ್ತದ ಕೆಸರು ಆಗಿತ್ತು

ರಣಧೀರನಾದ ಮುಬಾರಕನಿಗೆ ಅದನ್ನು ನೋಡಿ ಬಹಳ ವ್ಯಸನವಾಯಿತು. ತಾನು ಇನ್ನು ಯಾವ ಮೋರೆಯಿಂದ ಬಾದಶಹನನ್ನು ಕಾಣಬೇಕೆಂದು ಆತನು ಚಿಂತಿಸತೊಡಗಿದನು. ಎರಡು ಸಹಸ್ರ ಸೈನ್ಯದ ಬಲವು ವ್ಯರ್ಥವಾಗಿ, ಯಾರಿಗೂ ಸುಳಿವು ಕೂಡ ಹತ್ತದಂತೆ ಇಷ್ಟು ಅನರ್ಥಮಾಡಿ ಯಾರು ಚಂಚಲಕುಮಾರಿಯನ್ನು ದಾಟಿಸಿಕೊಂಡು ಹೋಗಿರಬಹುದೆಂದು ಯೋಚಿಸುತ್ತಿರುವಾಗ, ಮುಬಾಕರನು ಕಲ್ಲುಗೊಂಬೆ ಯಂತೆ ನಿಂತಲ್ಲಿ ನಿಂತುಬಿಟ್ಟನು! ಆಗ ದರಿಯೆಯು ತನ್ನ ಪತಿಯನ್ನು ಕುರಿತು—

ದರಿಯೆ—''ವೀರವರ, ಇಷ್ಟು ಚಿಂತಿಸುವುದೇಕೆ? ಚಂಚಲಕುಮಾರಿಯಂತಹ ನಿರಪರಾಧಿಯಾದ ಬಾಲಿಕೆಯನ್ನು ಬಲಾತ್ಕಾರದಿಂದ ಎಳೆತರಿಸತೊಡಗಿದ್ದ ದುಷ್ಟ ಬಾದಶಹನಿಗೆ ತಕ್ಕ ಶಿಕ್ಷೆಯಾಗಿರಲು, ಹೀಗೆ ನೀವು ಚಿಂತಿಸುವುದೇಕೆ? ಹೀಗೆಯೇ ನಿಮ್ಮ ವಿಷಯಾಸಕ್ತ ಬಾದಶಹನು ಎಷ್ಟು ಜನ ರಜಪೂತ ತರುಣಿಯರನ್ನು ನರಕದಲ್ಲಿ ದೂಡಬೇಕೆನ್ನುತ್ತಿರುವನು? ಇಂತಹ ದುಷ್ಟನ ಚಾಕರಿಯನ್ನು ಮಾಡುವುದಕ್ಕಿಂತ, ಅಲ್ಲಾನು ಧ್ಯಾನಮಾಡುತ್ತ ಬಡತನದಿಂದ ಎಲ್ಲಿಯಾದರೂ ಹಳ್ಳಿಯಲ್ಲಿದ್ದು ಕಾಲಹರಣ ಮಾಡೋಣ ನಡೆಯಿರಿ! ಜನಾನಖಾನೆಯಲ್ಲಿ ಇಷ್ಟು ಜನ ಸುಂದರ ಬೇಗಂರು ಬಾದಶಹನ ಹೆಸರಿನಿಂದ ಕಲ್ಲು ಒಡೆಯುತ್ತಿರಲು, ಪಾಪ! ಚಂಚಲಕುಮಾರಿಯು ಆತನಿಗೆ ಏಕೆ ಬೇಕಾಗಿತ್ತು?''

ಮುಬಾರಕ—''ಪ್ರಿಯೇ, ನೀನನ್ನುವುದು ನಿಜವು. ಬಾದಶಹನ ಪಾಪ ಕೃತ್ಯಕ್ಕಾಗಿಯೂ, ಜನಾನಖಾನೆಯೊಳಗಿನ ಅನಾಚಾರಗಳಿಗಾಗಿಯೂ ನನ್ನ ಮನಸ್ಸು ಬಹಳವಾಗಿ ಹೇಸಿದೆ. ಕೆಟ್ಟ ಸಹವಾಸದಿಂದ ಮನುಷ್ಯನ ಮನಸ್ಸು ಕೆಡುತ್ತದೆಂಬುದು ಸುಳ್ಳಲ್ಲ. ನಾನು ದಿಲ್ಲಿಯಿಂದ ಬರುವಾಗಲೇ ನನಗೆ ಬಹಳ ಪಶ್ಚಾತ್ತಾಪವಾಗಿತ್ತು, ನೀನಂದಂತೆ ಒಂದು ಬಗೆಯಿಂದ ಆದದ್ದೇ ನೆಟ್ಟಗಾಯಿತು. ಪಾಪ! ಕುಲೀನಳಾದ ಚಂಚಲಕುಮಾರಿಯಿಂದ ದುಷ್ಟ ಉದೇಪುರಿ ಬೇಗಮಳ ಗುಡುಗುಡಿಯೊಳಗೆ ತಂಬಾಕು ಹಾಕಿಸುವೆನೆಂದು ಬಾದಶಹನು ಪ್ರತಿಜ್ಞೆ ಮಾಡುವುದು ಯಾವ ನ್ಯಾಯವು? ನಡೆ, ಇನ್ನು ಜಿಬುನ್ನಿಸೆಯ ರಂಗಮಹಲೂ ಬೇಡ, ದಿಲ್ಲಿಯೂ ಬೇಡ. ಎಲ್ಲಿಯಾದರೂ ಕಾಲಹರಣ ಮಾಡೋಣ; ಆದರೆ ಬಾದಶಹನ ಸೈನ್ಯದ ಗತಿಯೇನಾಗಿರ ಬಹುದು? ಸೇನಾಪತಿ ಹಸನಅಲ್ಲಿಖಾನನು ನಮ್ಮ ದಾರಿಯನ್ನು ನೋಡುತ್ತ ನಿಂತಿರ ಬಹುದಲ್ಲವೆ? ಆತನ ಬಳಿಗೆ ಹೋಗಿ ಒದಗಿದ ಸಂಗತಿಯನ್ನೆಲ್ಲ ಹೇಳಿ, ಮುಂದೆ ಏನು ಮಾಡಬೇಕೆಂಬುದನ್ನು ಗೊತ್ತುಮಾಡೋಣ.''

ಈ ಮೇರೆಗೆ ನುಡಿದು ಮುಬಾರಕನು ಬಾದಶಹನ ಸೈನ್ಯವಿದ್ದ ದಿಲ್ಲಿಯ ಹಾದಿಯ ಕಡೆಗೆ ಸಾಗಿದನು. ಅಷ್ಟರಲ್ಲಿ ಒಂಬತ್ತು ತಾಸು ಮೀರಿಹೋಗಿತ್ತು; ಮುಬಾರಕನು ದರಿಯಾಬೀಬಿ ಯೊಡನೆ ಬೇಗ ಬೇಗ ನಡೆದು ಸೈನ್ಯವಿರುವ ಸ್ಥಳವನ್ನು ಮುಟ್ಟಿದನು. ಹಸನಅಲ್ಲಿ ಖಾನನು ತನ್ನ ಸೈನ್ಯವನ್ನು ಮುಂದಕ್ಕೆ ಸಾಗಿಸಿ, ಆರಿಸಿದ ಇನ್ನೂರು ಜನ ವೀರರೊಡನೆ ಮುಬಾರಕನ ಹಾದಿಯನ್ನೇ ನೋಡುತ್ತ ಕುಳಿತುಕೊಂಡಿದ್ದನು. ಆತನು ಈ ಮೊದಲೇ ಮುಬಾರಕನನ್ನು ಹುಡುಕುವುದಕ್ಕಾಗಿ ತನ್ನ ದಂಡಾಳುಗಳನ್ನು ಕಳಿಸಿದ್ದನು; ಆದರೆ ಹೋದವರು ಅತ್ತೇ

ಹೋಗಿಬಿಟ್ಟಿದ್ದರು. ಹೀಗಾಗಿ ಹಸನಅಲ್ಲಿಯು ಬಹಳ ಚಿಂತೆಗೊಳಗಾದನು! ''ಒಳ್ಳೆಯವರ ಮಾನ ಹಳ್ಳಿಯಲ್ಲಿ ಹೋಯಿತೆನ್ನುವಂ''ತೆ ಆತನ ಗತಿಯಾಗಿತ್ತು. ತನ್ನಂತಹ ಶೂರ ಸೇನಾಪತಿಯೂ, ಮುಬಾರ ಕನಂತಹ ರಣಧೀರ ಸಹಾಯಕನೂ ಎರಡುಸಾವಿರ ಸೈನ್ಯದೊಡನೆ ಸಾಗಿಬಂದು, ಏನೂ ಸುಳಿವುಹತ್ತದೆ ರಾಜಕುಮಾರಿಯನ್ನು ಕಳೆದುಕೊಂಡದ್ದು ಎಂತಹ ನಾಚಿಕೆಗೇಡಿತನವೆಂದು ಆತನು ತನ್ನೊಳಗೆ ತನ್ನನ್ನು ತಿರಸ್ಕರಿಸಿಕೊಳ್ಳಹತ್ತಿದನು. ಆತನು ಮುಬಾರಕನ ಹಾದಿಯನ್ನು ನೋಡಿ ನೋಡಿ ಬೇಸತ್ತಿದ್ದನು. ಆತನ ಹೊಟ್ಟೆಯಲ್ಲಿಯೂ ಡೊಂಬರು ಆಡುತ್ತಿದ್ದರು; ಸೈನಿಕರಿಗೂ ಉಪವಾಸ! ಈ ಸ್ಥಿತಿಯಲ್ಲಿ ದಿಲ್ಲಿಯ ಬಾದಶಹನ ಆ ಒಗರಿನ ಸೇನಾಪತಿಯ ಸೊಂಡೆಯು ಒಣಗಿಹೋಗಿತ್ತು! ಇಂತಹ ಪ್ರಸಂಗಗಳು ಮೊಗಲ ಸೈನಿಕರಿಗೆ ಅಕಬರ ಬಾದಶಹನ ಕಾಲದಿಂದ ರಜಪೂತಸ್ಥಾನದಲ್ಲಿ ಮೇಲಿಂದ ಮೇಲೆ ಬಂದದ್ದರಿಂದ, ಮೊಗಲ ಬಾದಶಹರು ಶೂರ ರಜಪೂತರ ಗೊಡವೆಗೆ ಹೋಗಲಿಕ್ಕೆ ಬಹಳವಾಗಿ ಅಂಜುತ್ತಿದ್ದರು; ಆದರೂ ಅವರ ಐಶ್ವರ್ಯ-ಬಲಗಳ ಸೊಕ್ಕು ಅವರನ್ನು ಎಚ್ಚರಗೆಡಿಸಲು, ಅವರು ರಜಪೂತರನ್ನು ಆಗಾಗ ಕೆಣಕುತ್ತಿದ್ದರು. ಒಮ್ಮೊಮ್ಮೆ ಮೊಗಲರಿಂದ ರಜಪೂತರ ಸರ್ವನಾಶವೂ ಆಗುತ್ತಿತ್ತು; ಒಮ್ಮೊಮ್ಮೆ ಮೊಗಲ ಬಾದಶಹನು ಒಬ್ಬನೇ ಜೀವ ಉಳಿಸಿಕೊಂಡು ಪಾರಾಗಿ ಬರುವುದರೊಳಗೆ ಸಾಕುಬೇಕಾಗುತ್ತಿತ್ತು! ಇದನ್ನೆಲ್ಲ ಅರಿತಿದ್ದ ಹಸನಅಲಿಯು, ಬಹಳ ಹೊತ್ತಾದರೂ ಮುಬಾರಕನು ಬಾರದಿರುವುದನ್ನು ನೋಡಿ, ತಾನೇ ಆತನ ಶೋಧಕ್ಕಾಗಿ ತನ್ನ ಶೂರ ಪರಿವಾರದೊಡನೆ ಹೊರಡಬೇಕೆಂದು ಮಾಡಿದ್ದನು. ಅಷ್ಟರಲ್ಲಿ ದೂರ ಯಾರೋ ಇಬ್ಬರು ಬರುವುದು ಆತನ ಕಣ್ಣಿಗೆ ಬಿದ್ದಿತು. ಸಮೀಪಕ್ಕೆ ಬರಲು, ಮುಬಾರಕನು ಒಬ್ಬನೇ ಒಬ್ಬ ಸೈನಿಕನೊಡನೆ ಬರುವುದನ್ನು ನೋಡಿ, ಏನೋ ಅನರ್ಥವು ಒದಗಿರುವುದೆಂದು ಕಲ್ಪಿಸಿದನು. ಮುಬಾರಕನು ಹಸನಅಲಿಯ ಬಳಿಗೆ ಬಂದು ನಡೆದ ಅನರ್ಥವನ್ನೆಲ್ಲ ವರ್ಣಿಸಲು, ''ಯಾ ಅಲ್ಲಾ! ಯಾ ರಹಿಮನ್! ತೋಬಾ ತೋಬಾ'' ಎಂದು ಹಸನಅಲಿಯು ಅಸಮಾಧಾನ ಪಟ್ಟನು. ಮುಂದೇನು ಮಾಡಬೇಕೆಂದು ಇಬ್ಬರೂ ಆಲೋಚಿಸಿದರು. ಒಮ್ಮೆ ಅವರು, ತಮ್ಮ ಯಾವತ್ತೂ ಸೈನ್ಯದೊಡನೆ ಹಾಗೆಯೇ ರಾಜಕುಮಾರಿಯನ್ನು ಬೆನ್ನಟ್ಟಿ ಹೋಗಿ, ಸಿಕ್ಕಲ್ಲಿ ಆಕೆಯನ್ನು ಹಿಡಿದುತರಬೇಕೆಂದು ಮಾಡಿದರು. ಆದರೆ ಈಗಾದ ಬವಣೆಯು ಮನಸ್ಸಿನಲ್ಲಿ ಬರಲು, ಈ ಗುಡ್ಡಗಾಡಿನ ಪ್ರದೇಶದಲ್ಲಿ ಎಟ್ಟಿ, ರಜಪೂತರಿಂದ ಆಗಬೇಕಾಗಿರುವ ಮತ್ತಾವ ಅನರ್ಥದ ಪ್ರಸಂಗಗಳು ನಮಗಾಗಿ ಕಾದಿರುವುವೋ ಎಂದು ಬೆದರಿ ನಿರಾಶೆಯಿಂದ ದಿಲ್ಲಿಯ ಹಾದಿಯನ್ನು ಹಿಡಿದರು.

# ತೇಜಸ್ವಿಗಳ ವೈಭವವೇ ವೈಭವವು!

ರಾಜಸಿಂಹನು ಚಂಚಲಕುಮಾರಿಯನ್ನು ಉದೇಪುರಕ್ಕೆ ಕರೆದುಕೊಂಡು ಹೋದನೆಂಬ ಮಾತನ್ನು ವಾಚಕರು ಬಲ್ಲರಷ್ಟೆ! ಆತನು ಒಂದು ಸುಂದರವಾದ ರಾಜಗೃಹದಲ್ಲಿ ಆಕೆಯನ್ನು ಇಟ್ಟನು. ಆಕೆಯ ಪತ್ರವನ್ನು ಓದಿ ರಾಣಾನ ಮನಸ್ಸು ಚಂಚಲವಾಗಿತ್ತು, ತನ್ನನ್ನು ಮೊಗಲರ ಕೈಯೊಳಗಿಂದ ಬಿಡಿಸಿಕೊಂಡು ಹೋಗುವವನನ್ನು ಲಗ್ನವಾಗುವೆನೆಂದು ರಾಜಕುಮಾರಿಯು ಮಾಡಿದ ಪ್ರತಿಜ್ಞೆಯನ್ನು ಆತನು ಓದಿದ್ದನು. ಆದರೂ ಮಧ್ಯಮ ವಯಸ್ಸಿನ ತನ್ನನ್ನು ತರುಣ, ರಾಜಕುಮಾರಿಯು ಲಗ್ನವಾಗುವುದು ಯೋಗ್ಯವಾಗಬಹುದೋ, ಎಂಬ ವಿಚಾರವು ಆತನನ್ನು ಬಾಧಿಸಹತ್ತಿತು. ಆತನಿಗಾದರೂ ಆ ಸುಂದರ ತರುಣಿಯನ್ನು ಲಗ್ನವಾಗುವುದು ಅಷ್ಟು ಪ್ರಶಸ್ತವಾಗಿ ತೋರಲಿಲ್ಲ; ಆದರೆ ರಜಪೂತ ತರುಣಿಯರು ಸತ್ಯಪ್ರತಿಜ್ಞರೆಂಬ ಮಾತು ಆತನ ಮನಸ್ಸಿನಲ್ಲಿ ಬರಲು, ಚಂಚಲಕುಮಾರಿಯು ತನಗೆ ಬರೆದ ಪತ್ರವನ್ನು ಆಕೆಯ ತಂದೆಯಾದ ವಿಕ್ರಮಸಿಂಹನ ಕಡೆಗೆ ಕಳಿಸಿ, ಆತನ ವಿಚಾರವನ್ನು ತಿಳಿದುಕೊಳ್ಳಬೇಕೆಂದು ಮಾಡಿ ಪತ್ರವನ್ನು ರೂಪನಗರಕ್ಕೆ ಕಳಿಸಿದನು. ವಿಕ್ರಮಸಿಂಹನು ತನ್ನ ಮಾಂಡಲಿಕ ಅರಸನಾಗಿದ್ದರೂ, ಆತನ ರಾಜ್ಯವು ಚಿಕ್ಕದಾಗಿದ್ದರೂ ಆ ವೃದ್ಧನ ಯೋಗ್ಯತೆಯನ್ನು ರಾಜಸಿಂಹನು ಚೆನ್ನಾಗಿ ಬಲ್ಲವನಾಗಿದ್ದನು. ವಿಕ್ರಮಸಿಂಹನು ಶ್ರೇಷ್ಠತರದ ಸೇನಾಪತಿಯಾಗಿದ್ದನು. ಆತನ ಸೈನ್ಯವು ಚಿಕ್ಕದಾಗಿದ್ದರೂ ಯುದ್ಧದಲ್ಲಿ ಹಿಂದೆಗೆಯದಂತಹದಾಗಿತ್ತು. ನಿಜವಾಗಿಯೂ ವಿಕ್ರಮಸಿಂಹನು ಔರಂಗಜೇಬನನ್ನು ಬಹಳವಾಗಿ ದ್ವೇಷಿಸುತ್ತಿದ್ದನು; ಆದರೆ ಆ ಬಲಿಷ್ಠ ಬಾದಶಹನೊಡನೆ ದ್ವೇಷ ಬೆಳೆಸಿ, ವ್ಯರ್ಥವಾಗಿ ಮನುಷ್ಯ–ಸಂಹಾರವನ್ನುಂಟುಮಾಡುವುದು ಯೋಗ್ಯವಲ್ಲವೆಂದು ತಿಳಿದು ಆತನು ಬಾದಶಹನಿಗೆ ವಿರೋಧವಾಗಿ ನಡೆದುಕೊಳ್ಳುತ್ತಿದ್ದಿಲ್ಲ. ಒಬ್ಬ ರಾಜಸಿಂಹನ ಹೊರತು ಉಳಿದ ರಜಪೂತ ಅರಸರೆಲ್ಲ ಔರಂಗಜೇಬನಿಗೆ ಒಂದಿಲ್ಲೊಂದು ಬಗೆಯಿಂದ ಅನುಕೂಲವಾಗಿದ್ದರಿಂದ, ಇಡಿಯ ರಜಪೂತಸ್ಥಾನವು ಒಟ್ಟಾಗಿ ಆ ಯವನ ಬಾದಶಹನೊಡನೆ ಕಾದುವಂತೆ ಇದ್ದಿಲ್ಲ; ಆದ್ದರಿಂದಲೇ ವಿಕ್ರಮಸಿಂಹನಂಥ ಅಭಿಮಾನಿಗಳಾದ ಶೂರ ರಜಪೂತ ರಾಜರು, ಮನಸ್ಸಿಲ್ಲದಿದ್ದರೂ ಔರಂಗಜೇಬ ಬಾದಶಹನನ್ನು ಅನುಸರಿಸಿ ನಡೆಯುತ್ತಿದ್ದರು.

ಹೀಗೆ ಮಹಾರಾಣಾ ರಾಜಸಿಂಹನು ರೂಪನಗರಕ್ಕೆ ಪತ್ರವನ್ನು ಕಳಿಸಿ ವಿಕ್ರಮಸಿಂಹನ ವಿಚಾರವನ್ನು ತಿಳಿದುಕೊಂಡ ಬಳಿಕ ಏನು ಮಾಡುವುದನ್ನು ಮಾಡಬೇಕೆಂದು ನಿಶ್ಚಯಿಸಿದನು. ತನ್ನ ಪತ್ರದ ಉತ್ತರ ಬರುವವರೆಗೆ ಯಾವ ಮಾತಿನ ನಿರ್ಧಾರವೂ ಆಗದೆಂದು ತಿಳಿದು, ಉತ್ತರ ಬಂದಬಳಿಕ ಚಂಚಲಕುಮಾರಿಯನ್ನು ಕಾಣಬೇಕೆಂದು ಮಾಡಿದನು. ಆದರೆ ಇತ್ತ ಚಂಚಲಕುಮಾರಿಯು ಆಲೋಚಿಸತೊಡಗಿದಳು : ''ತಾನು ಸುಮ್ಮನೆ ರಾಣಾನ ಆತಿಥ್ಯವನ್ನು ಸ್ವೀಕರಿಸುತ್ತ ಕುಳಿತುಬಿಟ್ಟೆನಲ್ಲ, ರಾಣಾನು ತನ್ನನ್ನು ನಿರಾಕರಿಸಿ ಬಿಟ್ಟಿರಬಹುದೋ, ತನ್ನನ್ನು ಮೊಗಲರಿಂದ ಬಿಡಿಸಿಕೊಂಡು ಬಂದು ಎರಡು ದಿನಗಳಾದರೂ ತನ್ನನ್ನು ಕಾಣಲಿಕ್ಕೆ ರಾಣಾನು ಬರಲಿಲ್ಲವಲ್ಲ! ನನ್ನನ್ನು ಲಗ್ನವಾಗುವ ವಿಷಯದಲ್ಲಿ ರಾಣಾನು ಉದಾಸೀನನಾಗಿರಬಹುದೇ?''

ಎಂಬಿವೇ ಮೊದಲಾದ ವಿಚಾರಗಳು ಆಕೆಯ ಮನಸ್ಸಿನಲ್ಲಿ ಬಂದವು. ಇತ್ತ ರೂಪನಗರದಿಂದ ಉತ್ತರ ಬರುವುದು ತಡವಾಗಲಿಲ್ಲ. ವಿಕ್ರಮಸಿಂಹನು ಕೂಡಲೆ ಪತ್ರದ ಉತ್ತರವನ್ನು ರಾಣಾನಿಗೆ ಕಳಿಸಿದನು. ಆ ಗಂಭೀರವಾದ ಉತ್ತರವನ್ನು ಓದಿ ರಾಣಾನು ಸಂತುಷ್ಟನಾದನು. ಕೂಡಲೆ ರಾಣಾನು ಚಂಚಲಕುಮಾರಿಯನ್ನು ಕಾಣಲಿಕ್ಕೆ ಹೊರಟನು. ಮಹಾರಾಣಾನು ಅಕಸ್ಮಾತ್ ತನ್ನ ಬಳಿಗೆ ಬಂದದ್ದನ್ನು ನೋಡಿ ಚಂಚಲಕುಮಾರಿಗೆ ಸಂತೋಷವಾಯಿತು; ಆದರೆ ಆ ಗಂಭೀರ ಪುರುಷನೊಡನೆ ಮಾತನಾಡುವ ಪ್ರಸಂಗವು ಒದಗಿದ್ದರಿಂದ ಆಕೆಯ ಹೃದಯವು ನಡುಗಹತ್ತಿತು. ರಾಜಸಿಂಹನು ಬಂದ ಕೂಡಲೆ ಚಂಚಲೆಯು ಆಸನದಿಂದ ಎದ್ದು ವಿನಯದಿಂದ ತಲೆಬಾಗಿಸಿ ನಿಂತುಕೊಂಡಳು. ಆಕೆಯ ಸೌಂದರ್ಯವನ್ನು ನೋಡಿ ರಾಣಾನು ತೀರ ಮುಗ್ಧನಾಗಿಹೋದನು. ಆದರೂ ಆತನು ಧೈರ್ಯದಿಂದ ಆಕೆಯನ್ನು ಕುರಿತು—"ರಾಜಕನ್ಯೆ, ನೀನು ಬಂದು ಎರಡು ದಿನಗಳಾದವು; ವಿಶೇಷ ಕಾರಣದಿಂದ ನಿನ್ನನ್ನು ಕಾಣಲಿಕ್ಕೆ ನಾನು ಬರಲಿಲ್ಲ; ಆದರೆ ನಿನ್ನ ಮನಸ್ಸಿನಲ್ಲಿ ಏನಿರುವುದು ಹೇಳು. ನಿನ್ನ ಇಚ್ಛೆಯನ್ನು ತಿಳಿದುಕೊಳ್ಳುವುದಕ್ಕಾಗಿಯೇ ಇಂದು ನಾನು ನಿನ್ನ ಬಳಿಗೆ ಬಂದಿದ್ದೇನೆ. ನಿನ್ನ ತಂದೆಯ ಬಳಿಗೆ ನೀನು ಹೋಗಲಿಚ್ಛಿಸುವೆಯೇನು? ಹಾಗಿದ್ದರೆ ಹೇಳು, ಸಂತೋಷದಿಂದ ನಾನು ನಿನ್ನನ್ನು ರೂಪನಗರಕ್ಕೆ ಕಳಿಸುವೆನು" ಎಂದು ಕೇಳಲು, ಚಂಚಲಕುಮಾರಿಯ ಹೃದಯವು ಕಂಪಿಸಹತ್ತಿತು. ಆಕೆಯು ಏನೂ ಉತ್ತರ ಕೊಡಲಾರದೆ ಸುಮ್ಮನೆ ನಿಂತುಕೊಂಡಳು. ಆಗ ಮಹಾರಾಣಾನು ಒಂದು ಪತ್ರವನ್ನು ಆಕೆಯ ಕೈಯಲ್ಲಿ ಕೊಟ್ಟು ಕುತೂಹಲದಿಂದ ಆಕೆಯನ್ನು ಕುರಿತು—

ರಾಜಸಿಂಹ—"ಈ ಪತ್ರವನ್ನು ನೀನೇ ಬರೆದಿರುವೆಯೋ?"

ಚಂಚಲೆ—(ಧೈರ್ಯದಿಂದ) "ಹೌದು, ನಾನೇ ಬರೆದಿರುವೆನು."

ರಾಜಸಿಂಹ—"ದುಷ್ಟ ಔರಂಗಜೇಬನ ಕಾಟವು ತಪ್ಪಬೇಕಾದರೆ, ಬೇಗನೇ ನೀನು ಯೋಗ್ಯ ಪುರುಷನನ್ನು ಲಗ್ನವಾಗುವುದು ನೆಟ್ಟಗೆ ಕಾಣುತ್ತದೆ; ಆದ್ದರಿಂದ ನೀನು ರೂಪನಗರಕ್ಕೆ ಹೋಗಿ ನಿನ್ನ ತಂದೆಯ ಒಪ್ಪಿಗೆಯಂತೆ ಲಗ್ನಮಾಡಿಕೋ."

ಚಂಚಲೆ—"ಮಹಾರಾಜ, ಕ್ಷತ್ರಿಯರು ಕನ್ಯಾಹರಣವನ್ನು ವಿವಾಹಕ್ಕಾಗಿಯೇ ಮಾಡುತ್ತಿರುವರು. ಬೇರೆ ಕಾರಣಗಳಿಂದ ಕನ್ಯೆಯರನ್ನು ಅಪಹರಿಸುವುದು ದೊಡ್ಡ ಪಾಪವು! ತಾವು ಎಂತಹ ಪಾಪವನ್ನು ಕೈಕೊಳ್ಳುವುದಕ್ಕಾಗಿ ನನ್ನನ್ನು ಅಪಹರಿಸಿರುವಿರೆಂದು ನಾನು ಹೇಗೆ ತಿಳಿದುಕೊಳ್ಳಲಿ?"

ರಾಜಸಿಂಹ—"ನಿನ್ನನ್ನು ನಾನು ಅಪಹರಿಸಿರುವುದಿಲ್ಲ. ನಿನ್ನ ಪ್ರತಿಷ್ಠೆಯನ್ನೂ, ನನ್ನ ಕುಲಧರ್ಮವನ್ನೂ ರಕ್ಷಿಸುವುದಕ್ಕಾಗಿ ನಿನ್ನ ಪತ್ರದಂತೆ ಯವನರ ದವಡೆಯೊಳಗಿಂದ ನಿನ್ನನ್ನು ಬಿಡಿಸಿರುತ್ತೇನೆ! ಇನ್ನುಮೇಲೆ ನಿನ್ನನ್ನು ನಿನ್ನ ತಂದೆಯ ಬಳಿಗೆ ಕಳಿಸುವುದಷ್ಟು ನನ್ನ ರಾಜಧರ್ಮವಾಗಿರುತ್ತದೆ."

ಚಂಚಲೆ—''ಅದಂತೂ ಸರಿಯೆ! ಆದರೆ ನನ್ನ-ರಾಜಕನ್ಯೆಯ ಧರ್ಮವನ್ನು ನಾನು ಮರೆತಿರುವುದಿಲ್ಲ. ನಾನು ತಮ್ಮ ಚರಣಕ್ಕೆ ನನ್ನನ್ನು ಒಪ್ಪಿಸಿ ಬಿಟ್ಟಿರಲು, ಧರ್ಮದಿಂದ ನಾನು ತಮ್ಮ ಹೆಂಡತಿಯೇ ಆಗಿರುತ್ತೇನೆ; ಇನ್ನು ನನ್ನನ್ನು ಸ್ವೀಕರಿಸುವುದು ಬಿಡುವುದು ಮಹಾರಾಣಾರವರ ಇಚ್ಛೆಯು! ಮಹಾರಾಣಾಜೀ, ನಾನು ಈಗ ನಿರ್ಲಜ್ಜಳಂತೆ ಮಾತಾಡುತ್ತಿರುವುದಕ್ಕಾಗಿ ನನ್ನನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುವೆನು. ಮನಸ್ಸಿನಿಂದ ನಾನು ತಮ್ಮನ್ನು ಲಗ್ನವಾಗಿಬಿಡುತ್ತಿರುವದರಿಂದ, ಅನ್ಯಪುರುಷರು ನನ್ನ ಬಂಧುಗಳು! ಆದ್ದರಿಂದ ತಮ್ಮ ಅಪ್ಪಣೆಯಂತೆ ನಡೆಯುವುದು ನನ್ನ ಕರ್ತವ್ಯವಾಗಿರಲು, ತಾವು ರೂಪನಗರಕ್ಕೆ ಹೋಗೆಂದರೆ ನಾನು ರೂಪನಗರಕ್ಕೆ ಹೋಗುವೆನು; ಪತ್ರದೊಳಗಿನ ನನ್ನ ಪ್ರತಿಜ್ಞೆಯಂತೆ ನನ್ನನ್ನು ತಾವು ಸ್ವೀಕರಿಸಿದರೆ, ಚರಣಗಳನ್ನು ಸೇವಿಸುತ್ತ ಇಲ್ಲಿಯೇ ಇರುವೆನು.''

ರಾಜಸಿಂಹ—(ಗಾಂಭೀರ್ಯದಿಂದ) ''ರಾಜಕುಮಾರೀ, ನಿನ್ನ ಗುರುದೇವನಾದ ಅನಂತಮಿಶ್ರರು ಹೇಳಿದಂತೆ, ನಿಜವಾಗಿಯೇ ಸರ್ವಸುಂದರಿಯಾಗಿರುವ ನಿನ್ನನ್ನು ಲಗ್ನವಾಗುವ ರಾಜನು ನಿಶ್ಚಯವಾಗಿ ಧನ್ಯನು! ಆದರೆ ನಿನ್ನಂತಹ ಲೋಕೋತ್ತರ ಸುಂದರಿಯನ್ನು ಲಗ್ನವಾಗಲಿಕ್ಕೆ ನನಗೆ ನಾಚಿಕೆ ಬರುತ್ತದೆ; ಯಾಕೆಂದರೆ, ನನ್ನ ತಾರುಣ್ಯವು ಗತಿಸಿಹೋಗಿದೆ, ನಾನು ಅಷ್ಟು ಸುಂದರನೂ ಅಲ್ಲ!''

ಚಂಚಲೆ—''ಮಹಾರಾಣಾಜಿಯವರು ಬಲಿಷ್ಠರೂ, ವೀರರೂ, ಶರಣಾಗತ ರಕ್ಷಕರೂ ಇರುವರು. ಅಂಥವರನ್ನೇ ರಜಪೂತ ಕನ್ಯೆಯರು ತರುಣರೆಂದು ತಿಳಿಯುವರು! ಮಹಾರಾಜ, ಕೀರ್ತಿಯೇ ರಾಜರ ಸೌಂದರ್ಯವಾಗಿರುವುದಲ್ಲವೇ?''

ರಾಜಸಿಂಹ—''ಆದರೂ ರಾಜಕುಮಾರೀ, ಇನ್ನಿಷ್ಟು ವಿಚಾರಮಾಡು. ಅವಸರದಿಂದ ಮಾಡಿದ ಕಾರ್ಯವು ಪಶ್ಚಾತ್ತಾಪಕ್ಕೆ ಕಾರಣವಾದೀತು!''

ಚಂಚಲೆ—''ನಾನು ಪೂರ್ಣ ವಿಚಾರಮಾಡಿಯೇ ಪ್ರತಿಜ್ಞೆ ಮಾಡಿರುವೆನು; ತಾವು ನನ್ನನ್ನು ಲಗ್ನವಾಗದಿದ್ದರೆ ಇದೇ ಅರಮನೆಯಲ್ಲಿ ಅಗ್ನಿಪ್ರವೇಶ ಮಾಡುವೆನು!

ರಾಜಸಿಂಹ—''ಚಂಚಲಕುಮಾರೀ, ನಿನ್ನ ಪ್ರತಿಜ್ಞೆಗೆ ನಿನ್ನ ತಂದೆಯ ಒಪ್ಪಿಗೆಯಿಲ್ಲದಿದ್ದರೆ?''

ಚಂಚಲೆ—''ನಾನು ಸಾಯುವವರೆಗೆ ಲಗ್ನವನ್ನೇ ಮಾಡಿಕೊಳ್ಳುವುದಿಲ್ಲ; ಆದರೆ ಮಹಾರಾಜ, ನನ್ನ ತಂದೆಯು ಕಾರಣವಿಲ್ಲದೇ ನನ್ನ ಪ್ರತಿಜ್ಞೆಗೆ ವಿರೋಧಿಯಾಗಲಿಕ್ಕಿಲ್ಲ, ಆತನು ಚಂಚಲಕುಮಾರಿಯ ತಂದೆಯಿರುವನಲ್ಲವೇ?''

ರಾಜಸಿಂಹ—''ಹಾಗಾದರೆ ನಿನ್ನ ತಂದೆಯ ಈ ಉತ್ತರವನ್ನು ಓದು.''

ಈ ಮೇರೆಗೆ ನುಡಿದು ರಾಜಸಿಂಹನು, ರೂಪನಗರದಿಂದ ವಿಕ್ರಮಸಿಂಹನು ಬರೆದು ಕಳಿಸಿದ ಸ್ಪಷ್ಟ ಉತ್ತರವನ್ನು ಚಂಚಲಕುಮಾರಿಯ ಕೈಯಲ್ಲಿ ಕೊಟ್ಟನು. ಚಂಚಲಕುಮಾರಿಯು ಅದನ್ನು ಆತುರದಿಂದ ಓದತೊಡಗಿದಳು. ಆ ಉತ್ತರದ ಅಭಿಪ್ರಾಯವೇನೆಂದರೆ—

''ಮಹಾರಾಣಾ ರಾಜಸಿಂಹ, ಇಂದಿಗೆ ನೀವು ಯಾವತ್ತೂ ರಜಪೂತರಲ್ಲಿ ಅಗ್ರಗಣ್ಯರಾಗಿರುವಿರಿ; ಆದರೆ ಕಳ್ಳತನದಿಂದ ನನ್ನ ಮಗಳನ್ನು ಕದ್ದುಕೊಂಡು ಹೋಗಿ ನನ್ನ ಅಪಮಾನ ಮಾಡಿರುವಲ್ಲಿ ಸಂಶಯವಿಲ್ಲ. ನಾನು ಬಾದಶಹನ ವಿರುದ್ಧವಾಗಿ ನಡೆದು ಆತನೊಡನೆ ಯುದ್ಧ ಮಾಡಲಿಕ್ಕೆ ಹಿಂಜರಿಯುತ್ತಿರುವೆನೆಂದು ತಾವು ತಿಳಿಯಬಾರದು; ಆದರೆ ನಿರರ್ಥಕ ಮನುಷ್ಯ ಸಂಹಾರಕ್ಕೆ ಮನಸ್ಸುಮಾಡದೆ ಮಗಳನ್ನು ದಿಲ್ಲಿಗೆ ಕಳಿಸಿಕೊಟ್ಟಿದ್ದೆನು. ಹೀಗಿರಲು, ನನ್ನ ಉದ್ದೇಶವನ್ನು ತಿಳಿಯದೆ ನನ್ನ ಅಪಮಾನ ಮಾಡಿದ ತಾವು ನನ್ನ ಶತ್ರುಗಳಾದಿರಲ್ಲವೇ? ಅಂದಬಳಿಕ ನೀವು ನನ್ನ ಮಗಳನ್ನು ಹೇಗೆ ಲಗ್ನವಾಗುವಿರಿ?

ಮಹಾರಾಣಾಜೀ, ಪ್ರಾಚೀನಕಾಲದ ಕ್ಷತ್ರಿಯ ವೀರರು ಕನ್ಯಾಹರಣ ಮಾಡಿ ಲಗ್ನವಾಗಲಿಲ್ಲವೇನೆಂದು ನೀವು ಕೇಳಬಹುದು; ಅದರಂತೆ ಶ್ರೀಕೃಷ್ಣ, ಭೀಷ್ಮ, ಅರ್ಜುನ ಮೊದಲಾದ ಕ್ಷತ್ರಿಯ ವೀರರು ಕನ್ಯಾಹರಣ ಮಾಡಿದ್ದರ ಉದಾಹರಣೆಯನ್ನೂ ನೀವು ಮುಂದೆ ಮಾಡಬಹುದು! ಆದರೆ ಅಂತಹ ಶೌರ್ಯವು ನಿಮ್ಮಲ್ಲಿರುತ್ತದೆಂಬ ಮಾತು ಜಗತ್ತಿಗೆ ಗೊತ್ತಾಗ ಬೇಕಷ್ಟೇ? ಅಂತಹ ಅಲೌಕಿಕ ಶೂರರೇ ನೀವಾಗಿದ್ದರೆ, ಪರಕೀಯ ಯವನ ಬಾದಶಾಹಿಯ ಅಧಿಕಾರವು ಭರತವರ್ಷದ ಮೇಲೆ ಯಾಕೆ ಇರುತ್ತಿತ್ತು? ನರಿಯು ಸಿಂಹವನ್ನು ಸರಿಗಟ್ಟುವುದು ಯೋಗ್ಯವಾಗಬಹುದೇ? ನಾನು ರಜಪೂತನು, ಯವನನಿಗೆ ಕನ್ಯಾದಾನ ಮಾಡುವುದು ಲಾಂಛನವು, ಇದನ್ನೆಲ್ಲ ನಾನು ಬಲ್ಲೆನು; ಅದರಂತೆ ಆತ್ಮರಕ್ಷಣ ಮಾಡಿಕೊಳ್ಳುವ ಸಾಮರ್ಥ್ಯವು ನನ್ನಲ್ಲಿದ್ದರೆ, ಅಥವಾ ನನ್ನನ್ನು ರಕ್ಷಿಸುವಂತಹ ಬೇರೊಬ್ಬ ಸಮರ್ಥನು ರಜಪೂತಸ್ಥಾನದಲ್ಲಿ ಇರುವನೆಂಬ ನಂಬುಗೆಯು ನನಗೆ ಇದ್ದರೆ, ನಾನು ಔರಂಗಜೇಬ ಬಾದಶಹನಿಗೆ ಮಗಳನ್ನು ಸರ್ವಥಾ ಕೊಡುತ್ತಿದ್ದಿಲ್ಲ. ತಮ್ಮ ಭುಜದಲ್ಲಿ ಮೊಗಲ ಚಕ್ರವರ್ತಿಯ ಶಾಸನ ಮಾಡುವ ಸಾಮರ್ಥ್ಯವಿರುವುದೆಂಬ ನಂಬಿಗೆಯು ನನಗೆ ಆದರೆ, ಸಂತೋಷದಿಂದ ನಾನು ನಿಮಗೆ ನನ್ನ ಮಗಳನ್ನು ಲಗ್ನಮಾಡಿಕೊಡುವೆನು. ನಮ್ಮ ಚಂಚಲೆಯ ಪ್ರತಿಜ್ಞೆಯ ಅರ್ಥವನ್ನು ನೀವು ಚೆನ್ನಾಗಿ ವಿಚಾರ ಮಾಡಿರಿ. ಕಳ್ಳತನದಿಂದ ನನ್ನ ಮಗಳನ್ನು ಅಪಹರಿಸಿದ ಮಾತ್ರದಿಂದ, ನೀವು ಆಕೆಯನ್ನು ಮೊಗಲರ ದವಡೆಯೊಳಗಿಂದ ಬಿಡಿಸಿದ ಹಾಗಾಗಲಿಲ್ಲ.

ಮಹಾರಾಣಾಜೀ, ಮುಂದೆ ನಿಮ್ಮ ಶೌರ್ಯದ ಪರೀಕ್ಷೆಯಾಗುವ ಪ್ರಸಂಗವಿರುವುದರಿಂದ, ಈಗ ನೀವು ಸರ್ವಥಾ ನನ್ನ ಮಗಳನ್ನು ಲಗ್ನವಾಗಲಾಗದು. ಇದರ ಮೇಲೆಯೂ ನೀವು ಆಕೆಯನ್ನು ಬಲಾತ್ಕಾರದಿಂದ ಲಗ್ನವಾದರೆ, ನಿಮ್ಮಿಬ್ಬರನ್ನು ನಾನು ಶಪಿಸುತ್ತೇನೆ, ನನ್ನ ಸಮ್ಮತಿಯಿಲ್ಲದೆ ನನ್ನ ಮಗಳನ್ನು ಲಗ್ನವಾದರೆ, ನನ್ನ ಮಗಳು ವಿಧವೆಯೂ, ಮೃತಪ್ರಜೆಗಳುಳ್ಳವಳೂ, ಸಹಗಮನ ಮಾಡಲು ಅನುಜ್ಞೆ ದೊರೆಯದ್ದರಿಂದ ಬಾದಶಹನ ಜನಾನಖಾನೆಯಲ್ಲಿ ಸೇರಿ ಚಿರಕಾಲ ದುಃಖವನ್ನು ಭೋಗಿಸುವವಳೂ ಆಗುವಳು. ನಿಮ್ಮ ರಾಜ್ಯದಲ್ಲಿ ನರಿ–ನಾಯಿಗಳು ವಾಸಿಸುವುವು. ಇದು ನಾನು ಕೊಟ್ಟ ಶಾಪವೆಂದು ತಿಳಿಯಿರಿ! ಆದರೆ ಮಹಾರಾಣಾಜೀ, ಈ ವೃದ್ಧನ ಶಾಪವಚನಕ್ಕಾಗಿ ನೀವು ಕ್ಷೋಭಿಸಲಾಗದು, ಅದನ್ನು ತಿರಸ್ಕರಿಸಲೂ ಆಗದು; ನೀವು ನನ್ನ ಮಾತಿನಂತೆ ಲಗ್ನಮಾಡಿಕೊಳ್ಳದೆ, ನಿಮ್ಮ ಮೇಲೆ

ನಿಶ್ಚಯವಾಗಿ ಸಾಗಿಬರುವ ಬಾದಶಹನ ಮಗ್ಗಲು ಮುರಿದರೆ, ನಾನೇ ಸಂತೋಷದಿಂದ ನನ್ನ ಮಗಳನ್ನು ನಿಮ್ಮ ಕೈಯಲ್ಲಿ ಕೊಟ್ಟು ನಿಮಗೆ ಕನ್ಯಾದಾನ ಮಾಡಿಕೊಡುವೆನು.''

ಚಂಚಲಕುಮಾರಿಯು ತಂದೆಯ ಈ ಉತ್ತರವನ್ನು ಒಮ್ಮೆಯಲ್ಲ, ಎರಡು ಸಾರೆ ಓದಿ ಅಭಿಮಾನದಿಂದ ರಾಜಸಿಂಹನನ್ನು ನೋಡಲು ರಾಣಾನು—

ರಾಣಾ—''ಯಾಕೆ? ಪತ್ರವನ್ನು ಓದಿದೆಯಷ್ಟೆ? ಏನು ಮಾಡಬೇಕು ಹೇಳು?''

ಚಂಚಲಕುಮಾರಿ—(ಸ್ಪಷ್ಟ ಮಾತಿನಿಂದ) ''ನನ್ನ ತಂದೆಯವರು ಹೇಳಿದಂತೆ ಮಾಡಬೇಕು.''

ರಾಣಾ—''ಹಾಗಾದರೆ, ನೀನು ರೂಪನಗರಕ್ಕೆ ನಡೆ, ಇಂದೇ ನಿನ್ನನ್ನು ಕಳಿಸುವೆನು.''

ಚಂಚಲೆ—''ಇನ್ನು ಮೇಲಂತೂ ನಾನು ರೂಪನಗರಕ್ಕೆ ಹೋಗುವ ಹಾಗೆಯೇ ಇಲ್ಲ!''

ರಾಣಾ—''ಅದೇಕೆ?''

ಚಂಚಲೆ—''ನಮ್ಮ ತಂದೆಯವರು ಹೇಳಿದಂತೆ ದುಷ್ಟ ಔರಂಗಜೇಬ ಬಾದಶಹನ ಮಗ್ಗಲು ಮುರಿಯದೆ ನಾನು ರೂಪನಗರಕ್ಕೆ ಹೋಗಲೇ? ಹೀಗೆ ಹೋಗುವ ನನ್ನನ್ನು ವಿಕ್ರಮಸಿಂಹನು ತನ್ನ ಮಗಳೆಂದು ಆದರಿಸಬಹುದೆ? ಮಹಾರಾಜ, ಚಿತ್ತೂರ ವಿಕ್ರಮಶಾಲಿಗಳಾದ ರಾಜಕುಮಾರರು ಒಬ್ಬರಹಿಂದೊಬ್ಬರಂತೆ ಪಟ್ಟಕ್ಕೆ ಕುಳಿತು, ಚಿತ್ತೂರ ರಕ್ಷಣಕ್ಕಾಗಿ ಸಮರ ಭೂಮಿಯಲ್ಲಿ ತಮ್ಮ ರಕ್ತವನ್ನು ಚಲ್ಲಾಡಿದ್ದನ್ನು ನೀವು ಮರೆತಿರೇನು? ನೀವು ಆ ಮಹಾ ಪುಣ್ಯಪ್ರತಾಪಿಗಳ ವಂಶಜರಲ್ಲವೆ? ಅಂಥ ನೀವು ಶರಣಾಗತಳಾದ ಈ ಅಬಲೆಯನ್ನು ಕ್ಷುದ್ರ ರಾಜಭೋಗದ ಆಸೆಯಿಂದ ಪರಿತ್ಯಜಿಸುವಿರಾ? ನಾನು ನಿಮ್ಮ ಯೋಗ್ಯತೆಯನ್ನು ಅರಿಯದವಳಲ್ಲ! ವೀರಾಗ್ರಣಿ ಮಹಾರಾಣಾ ರಾಜಸಿಂಹರ ಧರ್ಮಪತ್ನಿಯು ನಾನು ರಾಣಾರವರ ಅರ್ಧಾಂಗಿ ಯಾಗಿರುವುದರಿಂದ, ಇದೋ ಈ ಕಟಾರಿಯು ನನ್ನ ಕೈಯಲ್ಲಿರುವವರೆಗೆ ಅದಾವ ಬಾದಶಹನು ನನ್ನ ನೆರಳಿಗೆ ಬರುವನು ನೋಡಿಕೊಳ್ಳುತ್ತೇನೆ! ಮಹಾರಾಜ, ನಿಮ್ಮ ಮುಂದೆ ನಿಂತಿರುವ ಈ ಸುಂದರ ಚಂಚಲೆಯು ಪ್ರಸಂಗ ಒದಗಿದಾಗ ರಣಚಂಡಿಯಾಗುವಳೆಂಬುದನ್ನು ಮರೆಯಬೇಡಿರಿ. ಕ್ಷತ್ರಿಯ ಕುಮಾರಿಯರಿಗೆ ಮರಣವೆಂದರೇನು? ಅದೊಂದು ಪ್ರೀತಿಯ ಆಟಿಗೆಯು!''

ಚಂಚಲೆಯ ಈ ಕ್ಷಾತ್ರತೇಜಸ್ಸನ್ನು ನೋಡಿ ರಾಜಸಿಂಹನು ಪರಮ ಸಂತುಷ್ಟನಾದನು. ಆತನು ಗದ್ಗದಸ್ವರದಿಂದ—''ಶಾಬಾಶ್, ಚಂಚಲಕುಮಾರೀ, ನಿನ್ನ ಈ ವೀರ ಮೂರ್ತಿಯು ನನ್ನ ಮನಸ್ಸನ್ನು ಬಹಳವಾಗಿ ಉತ್ಸಾಹಗೊಳಿಸುತ್ತದೆ. ನಿಜವಾಗಿಯೇ ನೀನು ನನ್ನ ರಾಣಿಯಾಗಲು ಯೋಗ್ಯಳಿರುತ್ತೀ; ನಿನ್ನ ತಂದೆಯ ಶಾಪಭಯದಿಂದ ಈಗ ನಾನು ನಿನ್ನ ಪಾಣಿಗ್ರಹಣ ಮಾಡದಿದ್ದರೂ, ಯವನ ಬಾದಶಹನ ಮಗ್ಗಲು ಮುರಿಯುವ ಈ ಕೈಯಲ್ಲಿ ಬೇಗನೆ ನಿನ್ನ ತಂದೆಯು ನಿನ್ನ ಕೈಯನ್ನು ಇಡುವನೆಂಬುದನ್ನು ಮರೆಯಬೇಡ!''

ಅಹಹ ತೇಜಸ್ವಿಗಳ ವೈಭವವೇ ವೈಭವವು!

# ಮಾಣಿಕಲಾಲನ ಅರ್ಧಾಂಗ

ಉದೇಪುರದ ಮಹಾರಾಣಾ ರಾಜಸಿಂಹನು ಚಂಚಲಕುಮಾರಿಯನ್ನು ಅಪಹರಿಸಿ ಕೊಂಡು ಹೋದ ಸುದ್ದಿಯು ಔರಂಗಜೇಬನ ಕಿವಿಗೆ ಬೀಳಲು, ಆತನು ಸಿಟ್ಟಿನಿಂದ ಹುಚ್ಚಾದನು. ಆತನು ರೂಪನಗರದಿಂದ ಬಂದ ಸೈನಿಕರಲ್ಲಿ ಕೆಲವರನ್ನು ಕೆಲಸದಿಂದ ದೂರಮಾಡಿದನು, ಕೆಲವರನ್ನು ಸೆರೆಯಲ್ಲಿಡಿಸಿದನು; ಆದರೆ ಮುಖ್ಯ ಅಪರಾಧಿಗಳಾದ ರಾಜಸಿಂಹನನ್ನೂ, ಚಂಚಲ ಕುಮಾರಿಯನ್ನೂ ಶಿಕ್ಷಿಸುವುದು ಅವನಿಗೆ ಕಠಿಣವಾಯಿತು. ಔರಂಗಜೇಬನ ರಾಜ್ಯದ ದೃಷ್ಟಿಯಿಂದ ಮೇವಾಡದ ರಾಜ್ಯವು ತೀರ ಸಣ್ಣದಿದ್ದರೂ, ಆಗಿನ ಕಾಲದಲ್ಲಿ ಇಡಿಯ ಭರತಖಂಡದೊಳಗೆ ಆ ರಾಜ್ಯದ ಮೇಲೆ ಏರಿಹೋಗುವಂತಹ ಒಬ್ಬ ಎದೆಗಾರರೂ ಇದ್ದಿಲ್ಲವೆಂದು ಹೇಳಬಹುದು. ನೋಡಿದರೆ ಔರಂಗಜೇಬನ ರಾಜ್ಯವು ಅಷ್ಟು ವಿಸ್ತಾರವಾದದ್ದು, ಆತನ ಸೇನಾಬಲವು ಅಷ್ಟು ಅಸಂಖ್ಯಾತವಾದದ್ದು, ಆತನ ವೈಭವವು ಅಷ್ಟು ಅಗಣ್ಯವಾದದ್ದು; ಆದರೆ ಅಂತಹ ಸಮರ್ಥ ಹಟಮಾರಿಯಾದ ಬಾದಶಹನು ಉದೇಪುರದ ರಾಜಸಿಂಹನ ಸಂಗಡ ಯುದ್ಧವೆಂದರೆ ಬೆದರಿಬೀಳುತ್ತಿದ್ದನು. ಅಕಬರ ಬಾದಶಹನ ಕಾಲದಿಂದಲೂ ಉದೇಪುರದ ಮಹಾರಾಣಾರವರು ಮೊಗಲರಿಗೆ ತಮ್ಮ ಪ್ರತಾಪವನ್ನು ತೋರಿಸುತ್ತ ಬಂದಿರುವರು. ಅಂಥ ಪ್ರಸಿದ್ಧ ಅಕಬರ ಬಾದಶಹನೆಂದರೇನು, ವೀರವರ ರಾಣಾ ಪ್ರತಾಪಸಿಂಹನಿಂದ ಸೋತು ಓಡಿಬರಬೇಕಾಯಿತು! ಮೇವಾಡದ ಮೇಲೆ ದಂಡೆತ್ತಿ ಹೋದವರು ತಿರುಗಿಬರುವುದು ಕಷ್ಟವಾಗಿತ್ತು. ಮೇವಾಡದ ಸುತ್ತುಮುತ್ತು ಮುಗಿಲನ್ನು ಮುಟ್ಟುವ ಗುಡ್ಡಗಳು ಕೆಡವಲಿಕ್ಕೆ ಬಾರದ ಗೋಡೆಗಳಂತೆ ಹಬ್ಬಿರುವುವು. ಹಿಂದೂ ಅರಸರ ಮುಕುಟಮಣಿಯಾದ ವೀರಶಿರೋಮಣಿ ರಾಜಸಿಂಹನು ಆ ಅಭೇದ್ಯ ರಾಜ್ಯವನ್ನು ಈಗ ಆಳುತ್ತಿದ್ದನು. ಈ ಅಲೌಕಿಕ ಪುರುಷನ ಯೋಗ್ಯತೆಯನ್ನು ನೋಡಿದರೆ, ಔರಂಗಜೇಬನ ದಿಲ್ಲಿಯ ಸಿಂಹಾಸನವು ಆ ರಜಪೂತ ವೀರನ ಕೈಸೇರದೆ ಇದ್ದದ್ದೊಂದು ಆ ಬಾದಶಹನ ಸುದೈವವೆಂದೇ ತಿಳಿಯತಕ್ಕದ್ದು. ಹಾಗಲ್ಲದಿದ್ದರೆ ರಜಪೂತ ರಾಜರೆಲ್ಲ ರಾಜಸಿಂಹನ ಒಡೆತನದಲ್ಲಿ ಒಟ್ಟುಗೂಡಿ ಬಾದಶಹನೊಡನೆ ಕಾದಿ ಬಾದಶಾಹಿ ಯನ್ನು ರಸಾತಳಕ್ಕೆ ಯಾವಾಗಲೋ ಹಾಕುತ್ತಿದ್ದರು. ಆದರೆ ಅಂತಹ ಸುದೈವವು ರಜಪೂತರದಲ್ಲದುದರಿಂದಲೇ ಅವರ ಒಕ್ಕಟ್ಟು ಆಗದೆ, ರಾಜಾ ಜಯಸಿಂಗ, ರಾಜಾ ಜಸವಂತಸಿಂಗರಂಥ ಬಲಿಷ್ಠ ರಜಪೂತ ರಾಜರು ಔರಂಗಜೇಬನ ಪಕ್ಷವನ್ನು ಬಿಡದೆ ಹೋದರು.

ಆದರೂ ಔರಂಗಜೇಬ ಬಾದಶಹನು ಯಾರಿಗೂ ಅಂಜದಂತಹ ಬಾದಶಹನೆಂತಲೇ ಹೇಳಬಹುದು. ಹಿಂದುಗಳನ್ನು ಪರಿಪರಿಯಿಂದ ಪೀಡಿಸುವುದಕ್ಕಾಗಿಯೇ ಆತನು ಅವತರಿಸಿ ಬಂದಂತಾಗಿತ್ತು. ಮುಸಲ್ಮಾನರ ರಾಜ್ಯದಲ್ಲಿ ಕೇವಲ ಹಿಂದುಗಳೇ ಕೊಡಬೇಕಾಗುತ್ತಿದ್ದ ಅಪಮಾನಕರವಾದ ಜಿಜಿಯಾ ಎಂಬ ತಲೆಭಾರದ ಕರವನ್ನು ಅಕಬರ ಬಾದಶಹನು ದೂರದೃಷ್ಟಿಯ ಉದಾರ ಮನಸ್ಸಿನಿಂದ ತೆಗೆದುಹಾಕಿದ್ದರು. ಆತನ ಉದಾರ ಚರಿತ್ರವನ್ನೇ ಆತನ

ಮಗನಾದ ಸಲೀಮನೂ, ಮೊಮ್ಮಗನಾದ ಶಹಾಜಹಾನನೂ ಸ್ಮರಿಸಿ, ಆ ದುಷ್ಟ ಕರವನ್ನು ತೆಗೆದುಹಾಕಿದ್ದರು; ಆದರೆ ಅಕಬರ ಬಾದಶಹನ ಮರಿಮಗನಾದ ಔರಂಗಜೇಬನು ಅದನ್ನು ಮತ್ತೆ ಹಿಂದೂ ಜನರ ಮೇಲೆ ಕೂಡಿಸಿದನು. ಕರವನ್ನು ಎತ್ತುವ ಕಠೋರತನದ ರೀತಿಗೆ ಹಿಂದೂಜನರು ಅಂಜಿಹೋಗಿದ್ದರೂ, ಅಂತರಂಗದಲ್ಲಿ ಅವರು ಬಾದಶಹನ ವಿಷಯವಾಗಿ ಸಂತಾಪ ಗೊಂಡಿದ್ದರು. ಲಕ್ಷಾವಧಿ ಹಿಂದುಜನರು ಈ ಕರವನ್ನು ಮಾಫಮಾಡಿ ತಮ್ಮನ್ನು ಕ್ಷಮಿಸಬೇಕೆಂದು ಕೈಜೋಡಿಸಿ ಔರಂಗಜೇಬನನ್ನು ಪ್ರಾರ್ಥಿಸಿದರು; ಆದರೆ ಕ್ಷಮಿಸುವುದನ್ನು ಆ ಬಾದಶಹನು ಕಲಿತದ್ದೇ ಇಲ್ಲ. ಬಾದಶಹನು ನಮಾಜಿಗಾಗಿ ಮಸೀದೆಗೆ ಹೋಗುವಾಗ ಹಿಂದೂ ಜನರು ಹಿಂಡುಗಟ್ಟಿ ಬಾದಶಹನನ್ನು ಪ್ರಾರ್ಥಿಸುವರು; ಆದರೆ ಇದು ಆ ಕ್ರೂರನಿಗೆ ತಡೆಯದೆ, ಆತನು ಸಿಟ್ಟಾಗಿ ಈ ಕಾಫಿರನನ್ನು ಆನೆಯಿಂದ ತುಳಿಸಿರೆಂದು ಆಜ್ಞಾಪಿಸುತ್ತಲೆ, ಮಾವುತರು ಆನೆಗಳನ್ನು ಜನಸಮೂಹದ ಮೇಲೆ ನೂಕಿ ಜನರನ್ನು ಸಂಹರಿಸುತ್ತಿದ್ದರು! ಔರಂಗಜೇಬನ ಅಧಿಕಾರಕ್ಕೆ ಒಳಪಟ್ಟ ಭರತವರ್ಷದ ಪ್ರದೇಶದಲ್ಲೆಲ್ಲ ಹಿಂದೂ ಜನರು ಜಿಜಿಯಾ ಕರವನ್ನು ಕೊಡಬೇಕಾಗುತ್ತಿತ್ತು, ಅಲ್ಲದೆ ಈ ದುಷ್ಟ ಬಾದಶಹನ ಕಾಲದಲ್ಲಿ ಸಿಂಧೂ ನದಿಯಿಂದ ಬ್ರಹ್ಮಪುತ್ರಾ ನದಿಯವರೆಗಿನ ಪ್ರದೇಶದೊಳಗಿನ ಹಿಂದೂಗಳ ದೇವಾಲಯಗಳೆಲ್ಲ ನಾಶವಾಗಿ, ಅವುಗಳ ಸ್ಥಳಗಳಲ್ಲಿ ಮಸೀದೆಗಳು ಕಟ್ಟಲ್ಪಟ್ಟವು. ಹಿಂದೂ ಜನರ ಎಲ್ಲ ಪವಿತ್ರ ಸ್ಥಾನಗಳು ಭ್ರಷ್ಟವಾದವು. ಕಾಶಿಯೊಳಗಿನ ವಿಶ್ವೇಶ್ವರ ದೇವಾಲಯವೂ, ಮಥುರೆಯೊಳಗಿನ ಕೇಶವನ ದೇವಾಲಯವೂ ಈ ಕ್ರೂರನಿಂದಲೇ ನಷ್ಟವಾದವು.

ಮುಂದೆ ಬರಬರುತ್ತ ರಜಪೂತರು ಜಿಜಿಯಾಕರ ಕೊಡಬೇಕೆಂದು ಬಾದಶಹನು ಆಜ್ಞಾಪಿಸಿದನು. ವಾಸ್ತವವಾಗಿ ರಜಪೂತರು ಔರಂಗಜೇಬನ ಪ್ರಜೆಗಳಲ್ಲ; ಆದರೆ ಬಲಿಷ್ಠ ಬಾದಶಹನ ಮುಂದೆ ಯಾರ ಆಟ ನಡೆಯಬೇಕು? ಮೊದಮೊದಲು ರಜಪೂತರು ಆ ಕರವನ್ನು ಕೊಡದಾದರು; ಆದರೆ ಉದೇಪುರದ ಮಹಾರಾಣಾನ ಹೊರತು ಉಳಿದ ರಜಪೂತರಲ್ಲಿ ಬಾದಶಹನನ್ನು ವಿರೋಧಿಸುವ ಸಾಮರ್ಥ್ಯವಿಲ್ಲದ್ದರಿಂದ, ಅವರೆಲ್ಲರೂ ಮೆತ್ತಗಾದರು. ಆ ಕಾಲದಲ್ಲಿ ಮೊಗಲರ ಮುಖ್ಯ ಸಹಾಯಕನಾದ ರಾಜಾ ಜಯಸಿಂಗನು ಮರಣ ಹೊಂದಿದ್ದನು. ಆತನ ತರುಣ ಪುತ್ರನೊಬ್ಬನು ದಿಲ್ಲಿಯಲ್ಲಿ ಸೆರೆಯಾಳಾದನು. ಅದರಿಂದ ಆತನು ಜಿಜಿಯಾಕರವನ್ನು ಕೊಡಬೇಕಾಯಿತು. ಜೋಧಪುರದ ಯಶವಂತ ಸಿಂಹನೂ ಆ ಕಾಲಕ್ಕೆ ಮರಣಹೊಂದಿದ್ದನು; ಆತನ ಹೆಂಡತಿಯಾದ ಚಂದ್ರಾವತೀರಾಣಿಯು ಜೋಧಪುರದ ರಾಜ್ಯವನ್ನು ಆಳುತ್ತಿದ್ದಳು. ಆಕೆಯು ಉದೇಪುರದ ಮಹಾರಾಣಾನ ಮನೆತನದವಳು; ಆಕೆಯು ಹೆಂಗಸಾದರೂ ಔರಂಗಜೇಬನ ಕಾರಭಾರಿಯನ್ನು ತನ್ನ ರಾಜ್ಯದಿಂದ ಹೊರಗೆ ಹಾಕಿದಳು; ಆದರೆ ಔರಂಗಜೇಬನು ಆಕೆಯನ್ನು ಶಾಸನಮಾಡಲಿಕ್ಕೆ ದೊಡ್ಡ ಸೈನ್ಯದೊಡನೆ ಬರುವನೆಂಬುದನ್ನು ಕೇಳಿ, ಆ ರಾಣಿಯು ಅಂಜಿ ಬಾದಶಹನೊಡನೆ ಒಡಂಬಡಿಕೆ ಮಾಡಿಕೊಂಡು ಜಿಜಿಯಾ ತೆರಿಗೆಗಾಗಿ ತನ್ನ ರಾಜ್ಯದ ಕೆಲವು ಭಾಗವನ್ನು ಬಾದಶಹನಿಗೆ ಬಿಟ್ಟುಕೊಟ್ಟು, ಜಗಳವನ್ನು ನಂದಿಸಿದಳು.

ಇಂತಹ ಪ್ರಸಂಗದಲ್ಲಿಯೂ ರಾಜಸಿಂಹನು ಬಾದಶಹನಿಗೆ ಜಿಜಿಯಾಕರವನ್ನು ಕೊಡಲಿಲ್ಲ. ಆ ಸಂಬಂಧದಿಂದ ಆತನು ಬಾದಶಹನಿಗೆ ಒಂದು ಬುದ್ಧಿವಾದದ ಪತ್ರವನ್ನು ಬರೆಯಲು, ಬಾದಶಹನ ಸಿಟ್ಟು ಬೆಂಕಿಯಾಗಿ ರಾಣಾನಿಗೆ—''ನೀನು ಬರಿಯ ಜಿಜಿಯಾ ತೆರಿಗೆಯೊಂದನ್ನೇ ನನಗೆ ಕೊಡಬೇಕಾಗುವುದಿಲ್ಲ, ನಿನ್ನ ರಾಜ್ಯದಲ್ಲಿಯ ದೇವಸ್ಥಾನಗಳನ್ನು ಕಾಲಿನಿಂದ ತುಳಿದು ನೆಲಸಮ ಮಾಡಲಿಕ್ಕೂ, ಆಕಳುಗಳ ತಲೆಗಳನ್ನು ಶಸ್ತ್ರಗಳಿಂದ ತುಂಡರಿಸಲಿಕ್ಕೂ ನನಗೆ ಕೊಡಬೇಕಾಗುವುದು.'' ಎಂದು ಆ ಪತ್ರಕ್ಕೆ ಉತ್ತರವನ್ನು ಬರೆದಿದ್ದನು. ಆ ಪತ್ರವನ್ನು ಓದಿ ರಾಜಸಿಂಹನು ಯುದ್ಧದ ಸಿದ್ಧತೆಯನ್ನು ಮಾಡತೊಡಗಿದನು. ರಾಜಸಿಂಹನು ತನಗೆ ಬುದ್ಧಿವಾದದ ಪತ್ರ ಬರೆದ ಸಿಟ್ಟಿನಲ್ಲಿ, ತಾನು ಕರೆಸಿಕೊಳ್ಳುತ್ತಿರುವ ಚಂಚಲಕುಮಾರಿಯನ್ನು ಆತನು ಅಪಹರಿಸಿಕೊಂಡು ಹೋದ ಸಿಟ್ಟೊಂದೂ ಕೂಡಿ, ಬಾದಶಹನು ಮೊದಲು ಉದೇಪುರದ ರಾಜ್ಯವನ್ನು ಮಣ್ಣುಗೂಡಿಸಿಯೇ ತೀರಬೇಕೆಂದು ನಿಶ್ಚಯಿಸಿದನು; ಆದರೆ ತನ್ನ ಎರಡುಸಾವಿರ ಸೈನ್ಯವನ್ನು ಒಂದೇ ನೂರು ಜನ ರಜಪೂತರು ಲಕ್ಷಿಸದೆ ರಾಜಕುಮಾರಿಯನ್ನು ಅಪಹರಿಸಿದ ಅಂಜಿಕೆಯು ಮಾತ್ರ ಬಾದಶಹನ ಮನಸ್ಸಿನೊಳಗಿಂದ ಹೋಗಿದ್ದಿಲ್ಲ. ಅದರಿಂದ ಆತನು ಮನಃಪೂರ್ವಕವಾಗಿ ಮೇವಾಡದ ದಂಡಯಾತ್ರೆಯ ಸಿದ್ಧತೆಯನ್ನು ನಡೆಸಿದನು. ಪಾರಸೀ ದೇಶದ ಅಥವಾ ಚೀನ ದೇಶದ ಬಲಿಷ್ಠ ಬಾದಶಹನ ಮೇಲೆ ದಂಡೆತ್ತಿ ಹೋಗುತ್ತಿರುವಂತೆ, ಬಾದಶಹನು ಯುದ್ಧದ ಸಿದ್ಧತೆಯನ್ನು ನಡೆಸಿದ್ದನು. ಇದರಿಂದ ರಾಜಸಿಂಹನಂತಹ ಚಿಕ್ಕ ರಾಜ್ಯದ ವೀರ ರಜಪೂತ ಅರಸನಿಗೆ ಬಾದಶಹನು ಎಷ್ಟು ಅಂಜುತ್ತಿದ್ದನೆಂಬುದು ಗೊತ್ತಾಗುವುದು. ರಜಪೂತರ ಮೇಲೆ ಬಾದಶಹನು ದಂಡೆತ್ತಿಹೋದದ್ದು ಇದೇ ಕಡೆಯದೆಂದು ಹೇಳಬಹುದು. ರೂಪನಗರದ ರಾಜಪುತ್ರಿಯ ಹರಣದ ಸಂಬಂಧದ ಈ ಭಯಂಕರ ಯುದ್ಧದಲ್ಲಿ ಮಹಾರಾಣಾನು ಅಥವಾ ಔರಂಗಜೇಬನು ಇವರಿಬ್ಬರಲ್ಲಿ ಯಾರೊಬ್ಬರ ನಾಶವು ಸಂಪೂರ್ಣವಾಗಿ ಆಗಿಯೇ ಆಗಬೇಕಾಗಿತ್ತು. ಅಂಥ ಕಠಿಣ ಪ್ರಸಂಗವು ಔರಂಗಜೇಬನ ಪಾಲಿಗೇ ಬಂದಿರುವಾಗ, ಉದಾರ ಭಾವದ ದಯಾಳು ರಾಜಸಿಂಹನು ಬಾದಶಹನನ್ನು ಕ್ಷಮಿಸಿದ್ದರಿಂದ ಬಾದಶಹನು ಉಳಿದ ಸೈನ್ಯದೊಡನೆ ದಿಲ್ಲಿಯನ್ನು ಕಂಡನು. ಇಲ್ಲದಿದ್ದರೆ ಒಬ್ಬ ಮೊಗಲನೂ ದಿಲ್ಲಿಯನ್ನು ಕಾಣುವಹಾಗಿದ್ದಿಲ್ಲ. ಈ ಅದ್ಭುತ ಯುದ್ಧದ ಸವಿಸ್ತರ ವರ್ಣನೆಯು ಬೇರೆ ಗ್ರಂಥಗಳಲ್ಲಿ ಬರಬೇಕಾಗಿತ್ತು; ಆದರೆ ಭರತ ಭೂಮಿಯ ಅವನತಕಾಲದಲ್ಲಿ ಅದು ಎಲ್ಲಿಯೋ ಅಡಗಿಹೋಗಿದೆ. ಆ ರಣಕೌಶಲ್ಯದ ಯುದ್ಧದ ವರ್ಣನೆಯು ಅಲ್ಪಸ್ವಲ್ಪ ಇನ್ನು ಮುಂದೆ ಬರುವುದು. ಇಂತಹ ಸ್ವಾಭಿಮಾನ ಹುಟ್ಟಿಸುವ ಐತಿಹಾಸಿಕ ಪ್ರಸಂಗಗಳು ಭಾರತೀಯರಾದ ನಮ್ಮ ಕಣ್ಣಮರೆಯಾಗಿರುವುದು ನಮ್ಮ ದುರ್ದೈವವೇ ಸರಿ.

ರಾಜಸಿಂಹನು ಸೈನ್ಯದ ಸರ್ವಸಿದ್ಧತೆಯನ್ನು ಮಾಡಿದನು. ಔರಂಗಜೇಬನಂತಹ ದುಷ್ಟ ಬಾದಶಹನ ಕಾಲದಲ್ಲಿ ಆತನ ದುಷ್ಟತನಕ್ಕೆ ತಕ್ಕಶಾಸನ ಮಾಡುವಂತಹ ವೀರರು ಭರತಭೂಮಿಯಲ್ಲಿ ಅಲ್ಲಲ್ಲಿ ಆಗ ಉತ್ಪನ್ನವಾಗಿದ್ದರು. ಅವರಲ್ಲಿ ದಕ್ಷಿಣಹಿಂದುಸ್ತಾನದಲ್ಲಿ

ಶಿವಾಜಿಯೂ, ಉತ್ತರ ಹಿಂದುಸ್ತಾನದಲ್ಲಿ ಮಹಾರಾಣಾ ರಾಜಸಿಂಹನೂ ಮುಖ್ಯರಾಗಿದ್ದರು. ಇವರಿಬ್ಬರ ಕಾಟದಿಂದಲೇ ಔರಂಗಜೇಬನು ಹಣ್ಣಾದನೆಂದು ಹೇಳಬಹುದು. ಆತನು ಇತ್ತ ರಾಜಸಿಂಹನನ್ನು ಬಗ್ಗುಬಡಿಯತೊಡಗಿದನೆಂದರೆ, ಅತ್ತ ಶಿವಾಜಿಯು ಬಾದಶಹನನ್ನು ಕೆಣಕುತ್ತಿದ್ದನು. ಅತ್ತ ಶಿವಾಜಿಯ ಸಮಾಚಾರದಲ್ಲಿ ಬಾದಶಹನು ತೊಡಗಿದರೆ ಇತ್ತ ರಾಜಸಿಂಹನು ಆತನಿಗೆ ತೊಂದರೆಕೊಡುತ್ತಿದ್ದನು. ಹೀಗಾಗಿ ಔರಂಗಜೇಬನ ಆಳ್ವಿಕೆಯು ಯುದ್ಧಮಯವಾಗಿ ಹೋಗಿತ್ತೆಂದು ಹೇಳಬಹುದು. ಆತನು ಒಮ್ಮೆ ರಾಜಸಿಂಹನನ್ನು ಗೊತ್ತಿಗೆ ಹಚ್ಚಿಬಿಟ್ಟು ಆಮೇಲೆ ಶಿವಾಜಿಯ ಮಗ್ಗಲು ಮುರಿಯಬೇಕೆಂದು ಮೇಲೆ ಹೇಳಿದಂತೆ ದೊಡ್ಡ ಸೈನ್ಯವನ್ನು ಕೂಡಿಸಿದ್ದನು. ಬಾದಶಹನು ಕೂಡಿಸಿದ ಈ ಪ್ರಚಂಡ ಸೇನಾಸಾಗರವನ್ನು ನೋಡಿ, ದಿಲ್ಲಿಯ ಜನರು ತತ್ತರಿಸಿದರು. ಹೀಗೆ ಉಭಯ ಪಕ್ಷದವರೂ ಕಸರಿಲ್ಲದಂತೆ ಯುದ್ಧದ ಸಿದ್ಧತೆಯನ್ನು ಮಾಡಿದರು. ರಾಜಸಿಂಹನು ಔರಂಗಜೇಬನೇ ತನ್ನ ಮೇಲೆ ಸಾಗಿಬರುವನೆಂದು ನಂಬಿದ್ದನು. ಆತನು ಈ ಪ್ರಸಂಗದಲ್ಲಿ ಬಾದಶಹನಿಗೆ ಒಂದು ಪತ್ರ ಬರೆದು ಕಳಿಸಬೇಕೆಂದು ಮಾಡಿದನು; ಆದರೆ ಆತನ ಬಳಿಗೆ ಪತ್ರ ಬರೆದು ಕಳಿಸುವುದು ಒಂದು ಕಷ್ಟದ ಕೆಲಸವೇ ಆಗಿತ್ತು. ರಾಜರು ಶತ್ರುಗಳ ಕಡೆಯ ದೂತರನ್ನು ಸಂಹರಿಸಬಾರದೆಂದು ರಾಜನೀತಿಯಿದ್ದರೂ, ಕ್ರೂರನಾದ ಔರಂಗಜೇಬ ಬಾದಶಹನು ಆ ನೀತಿಯನ್ನು ತುಳಿದು ಎಷ್ಟೋ ಜನ ದೂತರನ್ನು ಸಿಟ್ಟಿನ ಭರದಲ್ಲಿ ಸಂಹರಿಸಿದ್ದನು; ಆದರೂ ಮಾಣಿಕಲಾಲ ಸಿಂಹನು ತಾನು ಬಾದಶಹನಿಗೆ ಪತ್ರವನ್ನು ಕೊಟ್ಟು, ಅಲ್ಲಿಯ ಸಂಗತಿಯನ್ನು ತಿಳಿದುಕೊಂಡು ಯುಕ್ತಿಯಿಂದ ಸುರಕ್ಷಿತ ಬರುವೆನೆಂದು ಹೇಳಿದನು. ಜನಸಂಹಾರಕ್ಕೆ ಮನಸ್ಸು ಮಾಡದೆ ಇನ್ನೊಮ್ಮೆ ಬಾದಶಹನಿಗೆ ಬುದ್ಧಿವಾದದ ಪತ್ರವನ್ನು ಕಳಿಸಬೇಕೆಂದು ರಾಜಸಿಂಹನು ಯೋಚಿಸಿದ್ದನು. ಆ ಪತ್ರವನ್ನು ತಕ್ಕೊಂಡು ಬಾದಶಹನಲ್ಲಿಗೆ ಹೋಗಲಿಕ್ಕೆ ಮಾಣಿಕಲಾಲಸಿಂಹನೇ ಯೋಗ್ಯನೆಂದು ಗೊತ್ತಾಗಿ, ಮಾಣಿಕಲಾಲನು ಪರಿವಾರದೊಡನೆ ದಿಲ್ಲಿಗೆ ಹೊರಟನು.

ಈ ಮಧ್ಯದಲ್ಲಿ ವಾಚಕರಿಗೆ, ಒಂದು ಸಂಗತಿಯನ್ನು ತಿಳಿಸುವುದು ಅವಶ್ಯವಾಗಿರುವುದು. ಚಂಚಲಕುಮಾರಿಯ ಸಖಿಯಾದ ನಿರ್ಮಲೆಯ ಪರಿಚಯವು ವಾಚಕರಿಗಿರುವುದಷ್ಟೇ? ದಿಲ್ಲಿಗೆ ಬರಬೇಡೆಂದು ಚಂಚಲಕುಮಾರಿಯು ಆಕೆಗೆ ಎಷ್ಟು ಹೇಳಿದರೂ ಕೇಳದೆ ಆಕೆಯು ಆ ರಾಜಕುಮಾರಿಯೊಡನೆ ದಿಲ್ಲಿಗೆ ಬಂದಳೆಂಬುದನ್ನು ವಾಚಕರು ಮರೆತಿರಲಿಕ್ಕಿಲ್ಲ. ನಿರ್ಮಲೆಯು ಚತುರಳು, ಮಹಾ ದಿಟ್ಟಳು, ಅತ್ಯಂತ ಸ್ವಾಮಿನಿಷ್ಠಳು. ಆಕೆಯ ಈ ಗುಣಗಳನ್ನು ಅಲಂಕರಿಸುವಂತಹ ಸೌಂದರ್ಯವನ್ನೂ ಆಕೆಗೆ ದೇವರು ದಯಪಾಲಿಸಿದ್ದನು. ಮಾಣಿಕಲಾಲನ ಶೌರ್ಯ-ಚಾತುರ್ಯಗಳಿಗಾಗಿ ಆಕೆಯು ಆತನನ್ನು ಪ್ರೀತಿಸುತ್ತಿದ್ದಳು; ಆದರೆ ತನ್ನ ಒಡೆಯಳಾದ ಚಂಚಲಕುಮಾರಿಯ ಲಗ್ನವಾಗುವವರೆಗೆ ತಾನು ಲಗ್ನ ಮಾಡಿಕೊಳ್ಳಲಿಕ್ಕಿಲ್ಲವೆಂಬ ನಿಶ್ಚಯದಿಂದ ಮಾಣಿಕಲಾಲಸಿಂಹನನ್ನು ಆಕೆಯು ಲಗ್ನವಾಗಿದ್ದಿಲ್ಲ. ಆ ತರುಣ-ತರುಣಿ ಯರಿಬ್ಬರಲ್ಲಿಯ ಪರಸ್ಪರ ವಿಷಯದ ಅನುರಾಗವು ದಿನದಿನಕ್ಕೆ ಹೆಚ್ಚಾಗುತ್ತಲಿತ್ತು. ಮಾಣಿಕಲಾಲಸಿಂಹನು ದಿಲ್ಲಿಗೆ ಹೋಗುವುದನ್ನು ಕೇಳಿ, ಅಂತಹ ಕಠಿಣ ಪ್ರಸಂಗದಲ್ಲಿ ತನ್ನ

ಪ್ರೀತಿಪಾತ್ರವನ್ನು ಬಿಟ್ಟು ಉದೇಪುರದಲ್ಲಿರಲಾರದೆ ಆಕೆಯು ಚಡಪಡಿಸಿದಳು. ಮಾಣಿಕ ಲಾಲಸಿಂಹನಿಗೆ ಅಂತಹ ವಿಪತ್ತು ಒದಗಿದರೆ ತನ್ನಿಂದ ಆದಷ್ಟು ಸಹಾಯಮಾಡಿ, ಅದು ಸಾಧ್ಯವಾಗದಿದ್ದರೆ ಆತನ ಸಲುವಾಗಿ ತಾನು ಪ್ರಾಣಕೊಡಬೇಕೆಂದು ಆಕೆಯು ನಿಶ್ಚಯಿಸಿದಳು. ಅದಕ್ಕೆ ಮಾಣಿಕಲಾಲನೂ ಒಪ್ಪಿಕೊಂಡಿದ್ದನು. ಆಗ ನಿರ್ಮಲೆಯು ಚಂಚಲಕುಮಾರಿಯನ್ನು ಕುರಿತು—

ನಿರ್ಮಲೆ—''ನಾನೂ ದಿಲ್ಲಿಗೆ ಹೋಗುವೆನು.''

ಚಂಚಲೆ—''ಏತಕ್ಕೆ?''

ನಿರ್ಮಲೆ—''ನಿಮ್ಮ ಗುಡುಗುಡಿಯಲ್ಲಿ ತಂಬಾಕು ತುಂಬಲಿಕ್ಕೆ ಬಾ ಎಂದು ಉದೇಪುರೀ ಬೇಗಮಳನ್ನು ಕರೆಯಲಿಕ್ಕೆ!''

ಚಂಚಲೆ—''ಈ ಕೆಲಸವು ನಿನ್ನಿಂದಾಗುವುದೆ? ನೀನು ಕರೆದುದರಿಂದ ಬೇಗಮಳು ನನ್ನ ಗುಡುಗುಡಿಯಲ್ಲಿ ತಂಬಾಕು ತುಂಬಲಿಕ್ಕೆ ಇಲ್ಲಿಗೆ ಬಂದಹಾಗಾಯಿತೆ?''

ನಿರ್ಮಲೆ—''ಆಕೆಯು ಇಂದಿಲ್ಲ ನಾಳೆ ಉದೇಪುರಕ್ಕೆ ಬರುವಳೆಂದು ನಾನು ನಂಬಿರುವೆನು; ಏಕೆಂದರೆ ನಮ್ಮ ಗಣೇಶ ದೈವಜ್ಞರ ಭವಿಷ್ಯವು ಎಂದೂ ಸುಳ್ಳಾಗುವುದಿಲ್ಲ; ಆಕೆಯು ನಿಮ್ಮ ಗುಡುಗುಡಿಯಲ್ಲಿ ತಂಬಾಕು ತುಂಬಿದಾಗಲೇ ನಿಮ್ಮ ಲಗ್ನವಾಗುವುದೆಂದು ಅವರು ಹೇಳಿರುವರು; ಆದ್ದರಿಂದ ಈಗ ಹೋಗಿ ಆ ದುಷ್ಟ ಬೇಗಮಳ ಹೊಟ್ಟೆಯಲ್ಲಿ ಸಾಸಿವೆ ಅರೆದುಹಾಕಿ ಬರುವೆನು; ಅದಕ್ಕೆ ನೀವು ಸಹಾಯ ಮಾಡಬೇಕು.''

ಚಂಚಲೆ—''ನಿರ್ಮಲೆ, ನಾನೇನು ಸಹಾಯ ಮಾಡಬೇಕು?''

ನಿರ್ಮಲೆ—''ಬೇಗಮಳ ಹೆಸರಿನಿಂದ ಒಂದು ಪತ್ರವನ್ನು ಬರೆದು ಕೊಡಿರಿ. 'ನೀನು ನನ್ನ ಗುಡುಗುಡಿಯಲ್ಲಿ ತಂಬಾಕು ತುಂಬುವುದಕ್ಕೆ ಬೇಗನೆ ಉದೇಪುರಕ್ಕೆ ಬಾ' ಎಂದು ಅದರಲ್ಲಿ ಸ್ಪಷ್ಟವಾಗಿ ಬರೆಯಿರಿ. ಜನಾನಖಾನೆಯನ್ನು ಪ್ರವೇಶಿಸಲಿಕ್ಕೆ ಹೇಗೂ ಬಳಿಯಲ್ಲಿ ಜೋಧಪುರೀ ಬೇಗಮಳ ಹಸ್ತದ ಮುದ್ರೆಯು ಇರುವುದು.''

ಚಂಚಲೆ—''ಆಗಲಿ, ಅವಶ್ಯವಾಗಿ ಬರೆಯುವೆನು; ಆದರೆ ನಿರ್ಮಲೇ, ಮಾಣಿಕಲಾಲ ಸಿಂಹನನ್ನು ಅಗಲಿ ಇರಲಾರದೆ ನೀನು ದಿಲ್ಲಿಗೆ ಹೋಗುವುದಿಲ್ಲವಷ್ಟೇ?''

ನಿರ್ಮಲೆ–''ಅಪ್ಪನವರೇ, ನೀವು ಪತ್ರ ಬರೆದುಕೊಟ್ಟರೆ ಎರಡೂ ಕೆಲಸಗಳಾಗುವುವು. ನಾನು ಮಾಣಿಕಲಾಲಸಿಂಹರವರ ಅರ್ಧಾಂಗಿಯಾಗಬೇಕಾಗಿರುವುದಲ್ಲವೇ? ಅಂದಬಳಿಕ ಈಗಿನಿಂದಲೇ ಹಾಗೆ ಆಗುವ ಅಭ್ಯಾಸವನ್ನು ಮಾಡುವೆನು.''

# ನಿರ್ಮಲೆಯ ಸಾಹಸ

ಈ ಮೇರೆಗೆ ಚಂಚಲಕುಮಾರಿಗೆ ಹೇಳಿ ನಿರ್ಮಲೆಯು ಆಕೆಯಿಂದ ಪತ್ರವನ್ನೂ, ಜೋಧಪುರೀ ಬೇಗಮಳ ಹಸ್ತದ ಮುದ್ರೆಯನ್ನೂ ಇಸಿದುಕೊಂಡು ಹೊರಟಳು. ಆಕೆಯು ಮಾಣಿಕಲಾಲನೊಡನೆ ದಿಲ್ಲಿಗೆ ಹೊರಡುವ ಸಿದ್ಧತೆಯನ್ನು ಮಾಡತೊಡಗಿದಳು. ಮಾಣಿಕಲಾಲನೂ ಎಲ್ಲ ಸಿದ್ಧತೆಯನ್ನು ಮಾಡಿಕೊಂಡನು. ದಿಲ್ಲಿಯ ದರ್ಬಾರಕ್ಕೆ ದೂತನನ್ನು ಕಳಿಸುವುದಾದರೆ, ಬಾದಶಹನಿಗೆ ಕಾಣಿಕೆಯನ್ನು ಕಳಿಸಬೇಕಾಗುತ್ತಿತ್ತು ಇಂಗ್ಲಂಡ್, ಫ್ರಾನ್ಸ್, ಪೋರ್ತುಗಾಲ ಮೊದಲಾದ ಪಾಶ್ಚಿಮಾತ್ಯ ರಾಷ್ಟ್ರಗಳೊಳಗಿನ ಅರಸರೂ, ಔರಂಗಜೇಬನೇ ಮೊದಲಾದ ದಿಲ್ಲಿಯ ಬಾದಶಹರ ಕಡೆಗೆ ಹೀಗೆ ಕಾಣಿಕೆ ಕಳಿಸಿದ್ದನ್ನು ಇತಿಹಾಸದಲ್ಲಿ ಕಾಣಬಹುದು. ಅದರಂತೆಯೇ ರಾಜಸಿಂಹನಾದರೂ ಈಗ ಕಾಣಿಕೆಗಳನ್ನು ಕಳಿಸಿದ್ದರೂ, ಔರಂಗಜೇಬನಲ್ಲಿ ಆತನ ಶತ್ರುಭಾವವಿದ್ದುದರಿಂದ ಆತನು ಕಾಣಿಕೆಯ ವಿಶೇಷ ವಸ್ತುಗಳನ್ನು ಕಳಿಸಲಿಲ್ಲ. ಶುಭಮುಹೂರ್ತ ವನ್ನು ನೋಡಿ ಮಾಣಿಕಲಾಲನು ದಿಲ್ಲಿಗೆ ಹೊರಟನು. ಅವನ ಸಂಗಡ ಆನೆಗಳು, ಕುದುರೆಗಳು, ಪಲ್ಲಕ್ಕಿಗಳು, ಸೈನ್ಯವು ಮೊದಲಾದ ಎಲ್ಲ ಸರಂಜಾಮು ಹೊರಟಿತ್ತು. ದಿಲ್ಲಿಗೆ ಮುಟ್ಟಲಿಕ್ಕೆ ಕೆಲವು ತಿಂಗಳು ಬೇಕಾದವು. ಆತನು ಎಲ್ಲ ಸರಂಜಾಮುದೊಡನೆ ದಿಲ್ಲಿಗೆ ಹೋಗಿ, ತಾನು ಬಂದಿರುವ ಸುದ್ದಿಯನ್ನು ಬಾದಶಹನಿಗೆ ತಿಳಿಸಿದನು.

ಒಂದು ದಿನ ಬಾದಶಹನು ಮಾಣಿಕಲಾಲನಿಗೆ—''ಇಂದಿನ ಸಾಯಂಕಾಲದ ದರ್ಬಾರಕ್ಕೆ ತನ್ನನ್ನು ಕಾಣಲಿಕ್ಕೆ ಬರಬೇಕೆಂ''ದು ಹೇಳಿಕಳಿಸಿದನು. ಅದರಂತೆ ಮಾಣಿಕಲಾಲನು ಬಾದಶಹನ ದರ್ಬಾರವನ್ನು ಪ್ರವೇಶಿಸಿದನು. ಔರಂಗಜೇಬ ಬಾದಶಹನು ತನ್ನ ಅಮೀರ ಉಮರಾವುಗಳೊಡನೆ ದರ್ಬಾರದಲ್ಲಿ ಕುಳಿತುಕೊಂಡಿದ್ದನು. ಮಾಣಿಕಲಾಲನು ದರ್ಬಾರವನ್ನು ಪ್ರವೇಶಿಸಿದ ಕೂಡಲೆ ಕುರ್ನಿಸಾತ ಮಾಡಿದನು. ಹೆಜ್ಜೆಹೆಜ್ಜೆಗೆ ಕುರ್ನಿಸಾತ ಮಾಡುತ್ತ ಆತನು ಬಾದಶಹನ ಬಳಿಗೆ ಹೋದನು; ಯಾಕೆಂದರೆ ದರ್ಬಾರದಲ್ಲಿ ಹಾಗೆ ಹೋಗುವ ಪದ್ಧತಿಯು ರೂಢವಾಗಿತ್ತು. ಸಿಂಹಾಸನದ ಬಳಿಯಲ್ಲಿ ಹೋಗಿ ಮಾಣಿಕಲಾಲನು ಕಾಣಿಕೆಯ ವಸ್ತುಗಳನ್ನು ಬಾದಶಹನ ಮುಂದೆ ಇಟ್ಟನು. ಕಾಣಿಕೆಯ ಆ ವಸ್ತುಗಳನ್ನು ನೋಡಿದ ಕೂಡಲೆ ಬಾದಶಹನು ಮನಸ್ಸಿನಲ್ಲಿ ಸಂತಾಪಗೊಂಡನು; ಆದರೂ ಹೊರಗೆ ಅದನ್ನು ತೋರಗೊಡಲಿಲ್ಲ. ಏನೂ ಮಾತಾಡಲಿಲ್ಲ. ಕಾಣಿಕೆಯ ಒಡವೆಗಳನ್ನು ರತ್ನದ ಹಿಡಿಕೆಯ ಒರೆಗಾಣಿಸಿದ ಒಂದು ಕತ್ತಿಯೂ, ಒಂದು ಬಿಚ್ಚುಗತ್ತಿಯೂ ಇದ್ದವು. ಬಿಚ್ಚುಗತ್ತಿಯನ್ನೊಂದು ತಕ್ಕೊಂಡು ಉಳಿದ ವಸ್ತುಗಳನ್ನು ಕೈಮುಟ್ಟಿ ಬಿಟ್ಟುಕೊಟ್ಟನು. ಆಮೇಲೆ ಮಾಣಿಕಲಾಲನು ರಾಜಸಿಂಹನ ಪತ್ರವನ್ನು ಔರಂಗಜೇಬನಿಗೆ ಕೊಟ್ಟನು. ಬಾದಶಹನು ಪತ್ರವನ್ನು ಓದಿ ಅಸಂತುಷ್ಟನಾದರೂ, ತನ್ನ ಅಸಂತುಷ್ಟತೆಯನ್ನು ತೋರಗೊಡದೆ ಮಹಾರಾಣಾನ ಕ್ಷೇಮಸಮಾಚಾರಗಳನ್ನು ವಿಚಾರಿಸಿ, ಬಕ್ಷಿಯನ್ನು ಕರೆದು ಮಾಣಿಕಲಾಲನ ಸಮಾಚಾರಗಳನ್ನು ಯೋಗ್ಯರೀತಿಯಿಂದ ನೋಡಿ

ಕೊಳ್ಳಲು ಆಜ್ಞಾಪಿಸಿದನು. ಪತ್ರದ ಉತ್ತರವನ್ನು ನಾಳೆಗೆ ಕೊಡುವೆನೆಂದು ಮಾಣಿಕಲಾಲನಿಗೆ ಬಾದಶಹನು ಹೇಳಿದ ಬಳಿಕ ದರ್ಬಾರವು ಮುಗಿಯಿತು.

ದರ್ಬಾರವನ್ನು ಮುಗಿಸಿ ಹೊರಗೆ ಬಂದ ಬಳಿಕ ಔರಂಗಜೇಬನು ಮಾಣಿಕಲಾಲನನ್ನು ಕೊಲ್ಲಬೇಕೆಂದು ಆಜ್ಞಾಪಿಸಿದನು; ಆದರೆ ಮಾಣಿಕಲಾಲನು ಸಿಕ್ಕರಷ್ಟೇ ಕೊಲ್ಲುವುದು. ಚತುರನಾದ ಆ ರಜಪೂತನು ಬಾದಶಹನ ಸವಿನುಡಿಯ ಸತ್ಕಾರದ ಮಾತಿಗೆ ಮರುಳಾಗದೆ, ಸಾವಿರಾರು ಜನ ಅಮೀರ ಉಮರಾವರು ಹೊರಬಿದ್ದು ಹೋಗುವ ಗದ್ದಲದಲ್ಲಿ ಯಾವಾಗೋ ದರ್ಬಾರವನ್ನು ಬಿಟ್ಟು ಹೊರಗೆ ಹೋಗಿಬಿಟ್ಟಿದ್ದನು. ಬಾದಶಹನ ಗುಪ್ತಚಾರರು ದಿಲ್ಲಿಯಲ್ಲೆಲ್ಲ ಹುಡುಕಿದರು; ಆದರೆ ಆತನ ಗೊತ್ತು ಹತ್ತಲಿಲ್ಲ. ಬಳಿಕ ಬಾದಶಹನ ಸಿಪಾಯಿಗಳು ಮಾಣಿಕಲಾಲನ ಸೈನ್ಯವು ಇಳಿದಲ್ಲಿಗೆ ಹೋಗಿ ಹುಡುಕಿದರು. ಅಲ್ಲಿಯೂ ಮಾಣಿಕಲಾಲನು ಸಿಗಲಿಲ್ಲ. ನಿರ್ಮಲೆಯು ಒಂದು ಕೋಣೆಯಲ್ಲಿದ್ದಳು. ಗೋಪೆಯಿದ್ದುದರಿಂದ ಸಿಪಾಯಿಗಳು ಆಕೆಯ ಬಳಿಗೆ ಹೋಗದಾಗಿದ್ದರು. ಕಡೆಗೆ ಕೊತವಾಲನು ಆಕೆಯಿಂದ ಏನಾದರೂ ಗೊತ್ತಾದರೆ ನೋಡಬೇಕೆಂದು ಆಕೆಯ ಬಳಿಗೆ ಹೋಗಿ—

ಕೊತವಾಲ— ''ಮಹಾರಾಣಾನ ದೂತನ ಗುರುತು ನಿನಗಿರುವುದೋ? ಆತನ ಹೆಸರು ಮಾಣಿಕಲಾಲನೆಂದಿರುವುದು.''

ನಿರ್ಮಲೆ—''ಆತನ ಗುರುತು ನನಗೆ ಇರುವುದಿಲ್ಲ; ಆತನ ಹೆಸರನ್ನೂ ನಾನು ಕೇಳಿರುವುದಿಲ್ಲ.''

ಕೊತವಾಲ—''ನೀನು ಮಹಾರಾಣಾನ ದೂತನ ಸಂಗಡ ಉದೇಪುರದಿಂದ ಬಂದಿರುವುದಿಲ್ಲವೆ?''

ನಿರ್ಮಲೆ—''ನಾನು ಉದಯಪುರವನ್ನು ಎಂದೂ ನೋಡಿರುವುದಿಲ್ಲ.''

ಕೊತವಾಲ—''ಹಾಗಾದರೆ ನೀನು ಯಾರು?''

ನಿರ್ಮಲೆ—''ನಾನು ಜೋಧಪುರೀ ಬೇಗಮಳ ದಾಸಿಯು.''

ಕೊತವಾಲ—''ಜೋಧಪುರೀ ಬೇಗಮಳ ದಾಸಿಯರು ಜನಾನಖಾನೆಯನ್ನು ಬಿಟ್ಟು ಹೊರಗೆ ಬರುತ್ತಿರುವುದಿಲ್ಲ.''

ನಿರ್ಮಲೆ—''ನಾನಾದರೂ ಜನಾನಖಾನೆಯನ್ನು ಬಿಟ್ಟು ಎಂದೂ ಹೊರಬಿದ್ದಿರುವುದಿಲ್ಲ; ಆದರೆ ಹಿಂದೂ ದೂತನು ಬಂದಿರುವ ಸುದ್ದಿಯು ನಮ್ಮ ಬೇಗಮಳಿಗೆ ಗೊತ್ತಾದದ್ದರಿಂದ, ಆಕೆಯು ನನ್ನನ್ನು ಆತನ ಬಳಿಗೆ ಕಳಿಸಿರುವಳು.''

ಕೊತವಾಲ—''ಏತಕ್ಕೆ?''

ನಿರ್ಮಲೆ—''ಗಂಗಾಜಲವನ್ನೂ, ಶ್ರೀರಾಮನ ಚರಣಾಮೃತವನ್ನೂ ತರುವುದಕ್ಕಾಗಿ.''

ಕೊತವಾಲ—''ಅವು ದೂತನ ಬಳಿಯಲ್ಲಿ ಹೇಗೆ ಇರುವುವು?''

ನಿರ್ಮಲೆ—''ಎಲ್ಲ ರಜಪೂತರು ತಮ್ಮ ಬಳಿಯಲ್ಲಿ ಅವನ್ನು ತಂದಿರುವರು.''

ಕೊತವಾಲ—''ನೀನೊಬ್ಬಳೇ ಜನಾನಖಾನೆಯಿಂದ ಹೇಗೆ ಹೊರಗೆ ಬಂದೆ?''

ಕೊತವಾಲನ ಈ ಮಾತುಗಳನ್ನು ಕೇಳಿ ನಿರ್ಮಲೆಯು ಕೂಡಲೆ ಜೋಧಪುರೀ ಬೇಗಮಳ ಹಸ್ತದ ಮುದ್ರೆಯನ್ನು ತೋರಿಸಿದಳು. ಅದನ್ನು ನೋಡಿ ಕೊತವಾಲನು ನಿರ್ಮಲೆಗೆ ಸಲಾಮು ಮಾಡಿ—''ಇನ್ನು ನೀವು ನಿಮ್ಮ ಮನಸ್ಸಿಗೆ ಬಂದಲ್ಲಿಗೆ ಹೋಗಿರಿ, ನಿಮ್ಮನ್ನು ಯಾರೂ ಪ್ರತಿಬಂಧಿಸಲಾರರು'' ಎಂದು ಹೇಳಿದನು. ಆ ಹೊತ್ತು ಸಾಧಿಸಿ ನಿರ್ಮಲೆಯು—''ಕೊತವಾಲ ಸಾಹೇಬ, ನನ್ನ ಮೇಲಿಷ್ಟು ಮೆಹರ್ಬಾನಿಗೆ ಮಾಡಿರಿ. ನಾನು ಎಂದೂ ಜನಾನಖಾನೆಯನ್ನು ಬಿಟ್ಟು ಹೊರಗೆ ಬಂದವಳಲ್ಲದ್ದರಿಂದ ನನಗೆ ಜನಾನಖಾನೆಯ ಹಾದಿಯು ಗೊತ್ತಾಗಲಿಕ್ಕಿಲ್ಲ; ಆದ್ದರಿಂದ ಹಾದಿಯನ್ನು ತೋರಿಸಲಿಕ್ಕೆ ಯಾರಾದರೊಬ್ಬರನ್ನು ನನ್ನ ಸಂಗಡ ಕಳಿಸಿರಿ'' ಎಂದು ಹೇಳಿದಳು. ಕೂಡಲೆ ಕೊತವಾಲನು ಒಬ್ಬ ಸಶಸ್ತ್ರ ಸಿಪಾಯಿಯನ್ನು ಆಕೆಯ ಸಂಗಡ ಕಳುಹಿಸಿಕೊಟ್ಟು, ಸಿಪಾಯಿಗೆ—''ನೀನು ಜನಾನಖಾನೆಯ ಬಾಗಿಲವರೆಗೆ ಇವರನ್ನು ಕಳುಹಿಸಿ ಹೊರಟು ಬಾ'' ಎಂದು ಆಜ್ಞಾಪಿಸಿದನು.

ನಿರ್ಮಲೆಯು ಸಿಪಾಯಿಯ ಸಹಾಯದಿಂದ ಜನಾನಖಾನೆಯ ಬಾಗಿಲವರೆಗೆ ಹೋದ ಬಳಿಕ ಜೋಧಪುರಿಯ ಹಸ್ತದ ಮುದ್ರೆಯನ್ನು ದ್ವಾರರಕ್ಷಕರಿಗೆ ತೋರಿಸುತ್ತ ಆಕೆಯು ಜನಾನಖಾನೆಯಲ್ಲಿ ಸಾಗಿದಳು; ಆಕೆಯು ಎಂದೂ ಜನಾನಖಾನೆಯಲ್ಲಿ ಬಂದವಳಲ್ಲದ್ದರಿಂದ ಮೊದಮೊದಲು ಆಕೆಗೆ ದಿಕ್ಕು ತಪ್ಪಿದ ಹಾಗಾಯಿತು; ಆದರೂ ಆ ಧೂರ್ತಳಾದ ನಿರ್ಮಲೆಯು ತನ್ನ ಅಜ್ಞಾನವು ಜನರಿಗೆ ಗೊತ್ತಾಗದಂತೆ ಬಹಳ ಚಾತುರ್ಯದಿಂದ ಸಾಗಿಹೋಗಿ ಜೋಧಪುರಿಗೆ ಆಕೆಯ ಹಸ್ತದ ಮುದ್ರೆಯನ್ನು ತೋರಿಸಿದಳು. ಕೂಡಲೆ ಜೋಧಪುರಿಯು ಏಕಾಂತದಲ್ಲಿ ಆಕೆಯನ್ನು ಕರೆದುಕೊಂಡು ಹೋಗಿ, ಈ ಮುದ್ರೆಯು ನಿನ್ನ ಬಳಿಯಲ್ಲಿ ಹೇಗೆ ಬಂದಿತೆಂದು ಕೇಳಲು, ದೇವಿ ಎಂಬ ಹೆಸರಿನ ದಾಸಿಯು ರೂಪನಗರಕ್ಕೆ ಬಂದಾಗಿನಿಂದ ನಡೆದ ವೃತ್ತಾಂತವನ್ನೆಲ್ಲ ಹೇಳಿ ಚಂಚಲ ಕುಮಾರಿಯು ಕೊಟ್ಟ ಪತ್ರವನ್ನು ಬೇಗಮಳ ಕೈಯಲ್ಲಿ ಕೊಟ್ಟಳು. ಬೇಗಮಳು ಪತ್ರವನ್ನು ಆತುರದಿಂದ ಓದಿ ಮುಗಿಸಲು, ನಿರ್ಮಲೆಯು—''ಇದನ್ನಿಷ್ಟು ಹೇಗಾದರೂ ಮಾಡಿ ಉದೇಪುರೀ ಬೇಗಮಳಿಗೆ ಮುಟ್ಟುವಂತೆ ಮಾಡಬೇಕೆಂ''ದು ಬೇಡಿಕೊಂಡಳು. ಆಗ ಜೋಧಪುರಿಯು ಜನಾನಖಾನೆಯ ನಿಯಮದಂತೆ ನಿರ್ಮಲೆಗೆ ಉದೇಪುರೀ ಬೇಗಮಳ ಬಳಿಗೆ ಹೋಗುವ ಅಪ್ಪಣೆಯನ್ನು ಜಿಬುನ್ನಿಸೆಯಿಂದ ಸಂಪಾದಿಸಿ, ಆಕೆಯನ್ನು ಉದೇಪುರೀ ಬೇಗಮಳ ಬಳಿಗೆ ಅಂದೇ ರಾತ್ರಿಯಲ್ಲಿ ಕಳಿಸಿದಳು.

ನಿರ್ಮಲೆಯು ಉದೇಪುರಿಯ ಬಳಿಗೆ ಹೋದಾಗ ಆ ಅದ್ಭುತ ಸೌಂದರ್ಯಶಾಲಿಯು ಎಚ್ಚರವಿಲ್ಲದೆ ಬಿದ್ದಿದ್ದಳು. ನಿರ್ಮಲೆಯು ಆಕೆಯ ಬಳಿಗೆ ಹೋಗಿ ದೊಡ್ಡದೊಂದು ಸಲಾಮು ಮಾಡಲು, ಉದೇಪುರಿಯು ನಿರ್ಮಲೆಗೆ—

ಉದೇಪುರಿ—''ನೀನು ಯಾರು?''

ನಿರ್ಮಲೆ—''ನಾನು ಉದಯಪುರಿಯ ರಾಣಿಯ ದೂತಿಯು, ಪತ್ರವನ್ನು ತೆಗೆದುಕೊಂಡು ಬಂದಿದ್ದೇನೆ.''

ಉದೇಪುರಿ—(ಎಚ್ಚರಿಲ್ಲದ್ದರಿಂದ) ''ಛೇ ಛೇ! ನೀನು ಪಾರಸೀ ದೇಶದ ಬಾದಶಹನಿರುತ್ತೀ! ನನ್ನನ್ನು ಓಡಿಸಿಕೊಂಡು ಹೋಗುವುದಕ್ಕಾಗಿ ಮೊಗಲ ಬಾದಶಹನ ಕಡೆಯಿಂದ ಬಂದಿರುತ್ತೀ.''

ಈ ತಾಳವಿಲ್ಲದ ಮಾತುಗಳನ್ನು ಕೇಳಿ ನಿರ್ಮಲೆಯ ನಗೆಯು ಆಕೆಯ ಹೊಟ್ಟೆಯಲ್ಲಿ ಹಿಡಿಸದಾಯಿತು; ಆದರೂ ಆಕೆಯು ಪ್ರಯಾಸದಿಂದ ನುಂಗಿಕೊಂಡು ಚಂಚಲಕುಮಾರಿಯ ಪತ್ರವನ್ನು ಆಕೆಯ ಕೈಯಲ್ಲಿ ಕೊಟ್ಟಳು. ಬೇಗಮಳು ಪತ್ರವನ್ನು ಓದಿದ ಹಾಗೆ ಮಾಡಿ ಮತ್ತೊಮ್ಮೆ ಸರೆ ಕುಡಿದು ನಿರ್ಮಲೆಗೆ—''ನಿನಗೆ ಶರಾಬು ಬೇಕೇ?'' ಎಂದು ಕೇಳುತ್ತ ಮತ್ತೆ ಸರಾಯಿಯ ಸುವರ್ಣಪಾತ್ರೆಯನ್ನು ಬಾಯಿಗೆ ಹಚ್ಚಲು, ನಿರ್ಮಲೆಯು ಆ ಸಂಧಿಯನ್ನು ಸಾಧಿಸಿ ಅಲ್ಲಿ ನಿಲ್ಲದೆ ನೆಟ್ಟಗೆ ಜೋಧಪುರೀ ಬೇಗಮಳ ಬಳಿಗೆ ಬಂದುಬಿಟ್ಟಳು. ಆಗ ಜೋಧಪುರಿಯು ಎಲ್ಲ ಸುದ್ದಿಯನ್ನು ಕೇಳಿ ನಕ್ಕು, ಇನ್ನು ನೀನು ಇಲ್ಲಿ ನಿಲ್ಲದೆ, ನಾಳೇಗೇ ಮಾಣಿಕಲಾಲನೊಡನೆ ದಿಲ್ಲಿಯಿಂದ ಹೊರಟುಹೋಗೆಂದು ಹೇಳಿ, ತನ್ನ ವಿಶ್ವಾಸದ 'ಬನಾಸಿ' ಎಂಬ ಒಬ್ಬ ಖೊಜ್ಜಾನನ್ನು ಆಕೆಯ ಸಂಗಡ ಕಳಿಸಿ, ಈಕೆಯನ್ನು ಮಾಣಿಕಲಾಲನ ಬಳಿಗೆ ಕಳಿಸಬಾರೆಂದು ಆಜ್ಞಾಪಿಸಿದಳು. ತನ್ನ ಹೆಸರನ್ನು ಎಲ್ಲಿಯೂ ಹೇಳಲಾಗದೆಂದು ನಿರ್ಮಲೆಗೆ ಜೋಧಪುರಿಯು ಹೇಳಲು, ಅದಕ್ಕೆ ನಿರ್ಮಲೆಯು— ''ಬೇಗಮಸಾಹೇಬ, ನಾನು ರಜಪೂತ ಕನ್ಯೆಯಿರುವೆನು, ಅದರ ಚಿಂತೆ ನಿಮಗೆ ಬೇಡ'' ಎಂದು ಹೇಳಿ, ಬನಾಸಿ ಖೊಜ್ಜಾನನ್ನು ಹಿಂಬಾಲಿಸಿ ಹೊರಟಳು.

ನಿರ್ಮಲೆಯು ಒಳ್ಳೆಯ ಆನಂದದಿಂದ ಬನಾಸಿಯ ಬೆನ್ನುಹತ್ತಿ ರಾತ್ರಿ ಸಾಗಿದ್ದಳು. ಅವರು ಜನಾನಖಾನೆಯ ಬಾಗಿಲಿಗೆ ಹೋಗುವುದರೊಳಗಾಗಿ ಬನಾಸಿಯು, ''ಭಯಂಕರ ಪ್ರಸಂಗವು, ಓಡು ಓಡು'' ಎಂದು ನುಡಿದವನೇ ಎತ್ತಲೋ ಓಡಿಹೋಗಿಬಿಟ್ಟನು. ಅದರಿಂದ ನಿರ್ಮಲೆಗೆ ಅಡವಿಯಲ್ಲಿ ಕಣ್ಣುಕಟ್ಟಿ ಬಿಟ್ಟಂತಾಯಿತು. ಆ ಅರಿಯದ ಸ್ಥಳದಲ್ಲಿ ರಾತ್ರಿ ಆಕೆಯು ಎತ್ತ ಓಡಿ ಹೋಗಬೇಕು? ಆಕೆಯು ಮುಂದಕ್ಕೆ ಹೆಜ್ಜೆಯಿಡದೆ ಕಕ್ಕಾಬಿಕ್ಕಿಯಾಗಿ ನಾಲ್ಕೂಕಡೆಗೆ ನೋಡ ತೊಡಗಿದಳು; ಆದರೆ ಖೊಜ್ಜಾನು ಯಾಕೆ ಓಡಿಹೋದನೆಂಬುದು ಆಕೆಗೆ ತಿಳಿಯಲೊಲ್ಲದು. ಅಷ್ಟರಲ್ಲಿ ಒಬ್ಬ ಶುಭ್ರ ಪೋಷಾಕಿನ ಭವ್ಯ ಪುರುಷನು ಜನಾನಖಾನೆಯ ಬಾಗಿಲಕಡೆಯಿಂದ ನಿರ್ಮಲೆಯ ಕಡೆಗೆ ಬರುತ್ತಿದ್ದನು. ಈತನನ್ನೇ ಪಿಶಾಚಿಯೆಂದು ತಿಳಿದು ಅಂಜಿ ಖೊಜ್ಜಾನು ಓಡಿಹೋಗಿರಬಹುದೋ? ಆದರೆ ಪಿಶಾಚಿಯು ನನ್ನನ್ನೇನು ಮಾಡುತ್ತದೆ? ಎಂದು ಅಂದುಕೊಳ್ಳು ತ್ತಿರಲು, ಅಷ್ಟರಲ್ಲಿ ಆ ಭವ್ಯಪುರುಷನು ಆಕೆಯ ಹತ್ತಿರ ಬಂದು ಆಕೆಯನ್ನು ಕುರಿತು—

ಪುರುಷ—''ನೀನು ಯಾರು?''

ನಿರ್ಮಲೆ—''ನಾನು ಯಾರಾದರೂ ಇರಲೊಲ್ಲೆನೇಕೆ, ಅದನ್ನು ಕಟ್ಟಿಕೊಂಡು ನೀನು ಮಾಡುವುದೇನು?''

ಪುರುಷ—''ಎಲ್ಲಿಗೆ ಹೋಗುವೆ?''

ನಿರ್ಮಲೆ—''ಹೊರಗೆ''

ಪುರುಷ—''ಏತಕ್ಕೆ?''

ನಿರ್ಮಲೆ—''ಕೆಲಸವಿರುವುದು.''

ಪುರುಷ–''ಏನು ಕೆಲಸ?''

ನಿರ್ಮಲೆ—''ಹೇಳುವ ಇಚ್ಛೆಯಿಲ್ಲ''

ಪುರುಷ—''ನಿನ್ನ ಸಂಗಡ ಯಾರು ಬಂದಿದ್ದರು?''

ನಿರ್ಮಲೆ—''ಹೇಳುವ ಇಚ್ಛೆಯಿಲ್ಲ''

ಪುರುಷ—''ನೀನು ಹಿಂದೂವಿದ್ದಂತೆ ಕಾಣುತ್ತದೆ, ನಿನ್ನ ಜಾತಿ ಯಾವುದು?''

ನಿರ್ಮಲೆ—''ರಜಪೂತ.''

ಪುರುಷ—''ನೀನು ಜೋಧಪುರೀ ಬೇಗಮಳ ಬಳಿಯಲ್ಲಿರುವೆಯೋ?''

ನಿರ್ಮಲೆಗೆ ಈಗ ಜೋಧಪುರೀ ಬೇಗಮಳು ಹೇಳಿದ ಮಾತು ನೆನಪಾಗಿ, 'ಆದದ್ದಾಗಲಿ, ಬೇಗಮಳ ಹೆಸರು ಎಂದೂ ಹೇಳಲಿಕ್ಕಿಲ್ಲ' ಎಂದು ನಿಶ್ಚಯಿಸಿ ಆಕೆಯು ಆ ಪುರುಷನನ್ನು ಕುರಿತು–

ನಿರ್ಮಲೆ—''ನಾನು ಇಲ್ಲಿ ಇರುವವಳಲ್ಲ, ಇಂದೇ ಇಲ್ಲಿಗೆ ಬಂದಿದ್ದೇನೆ.''

ಪುರುಷ—''ಎಲ್ಲಿಂದ ಬಂದೆ?''

ಈ ಪ್ರಶ್ನೆಯನ್ನು ಕೇಳಿ ನಿರ್ಮಲೆಯು ಮನಸ್ಸಿನಲ್ಲಿ 'ಇನ್ನು ಸುಳ್ಳು ಯಾಕೆ ಹೇಳಬೇಕು? ಈತನು ನನ್ನನ್ನು ಮಾಡುವುದೇನು? ನಿಜವನ್ನೇ ಹೇಳಿ ಬಿಡೋಣ' ಎಂದು ಯೋಚಿಸಿ—

ನಿರ್ಮಲೆ—''ನಾನು ಉದಯಪುರದಿಂದ ಬಂದಿರುವೆನು.''

ಪುರುಷ—(ಆಶ್ಚರ್ಯದಿಂದ) ''ಏನು, ಉದೇಪುರದಿಂದ ಬಂದೆಯಾ? ಯಾತಕ್ಕೆ ಬಂದೆ?''

ನಿರ್ಮಲೆ—''ಅದು ನಿನ್ನ ಮುಂದೆ ಏಕೆ ಹೇಳಬೇಕು? ಹೀಗೆ ನನ್ನನ್ನು ಸುಮ್ಮನೆ ಏನಾದರೂ ಕೇಳುತ್ತ ನಿಂತುಕೊಳ್ಳದೆ, ನನ್ನನ್ನು ಜನಾನಖಾನೆಯ ಹೊರಗೆ ಹೋಗಗೊಟ್ಟರೆ ಉಪಕಾರವಾಗುವುದು.''

ಪುರುಷ—''ನಿನ್ನನ್ನು ವಿಚಾರಿಸಿ ನಾನು ಸಂತುಷ್ಟನಾದರೆ ಮಾತ್ರ ನಿನ್ನನ್ನು ಹೊರಗೆ ಹೋಗಗೊಡುವೆನು.''

ನಿರ್ಮಲೆ—''ಹೀಗೆ ಕೇಳುವವನು ನೀನು ಯಾರೆಂಬುದು ನನಗೆ ಗೊತ್ತಾದ ಹೊರತು ನಾನು ಉತ್ತರವನ್ನು ಕೊಡಲಾರೆನು.''

ಪುರುಷ—''ನಾನು ಆಲಮಗೀರ ಬಾದಶಹನು!''

ಈ ಮಾತು ಕೇಳಿದ ಕೂಡಲೆ ನಿರ್ಮಲೆಯು ಬೆರಗಾಗಿ—''ಹೀಗೋ'' ಎಂದು ಅರೆಮಾತು ಆಡಿ ನೆಲಕ್ಕೆ ಹಣೆ ಹಚ್ಚಿ ಸಲಾಮು ಮಾಡಿ ಕೈ ಜೋಡಿಸಿ—

ನಿರ್ಮಲೆ—''ಅಪ್ಪಣೆಯಾಗಬೇಕು.''

ಬಾದಶಹ—''ಇಲ್ಲಿ ನೀನು ಯಾರ ಕಡೆಗೆ ಬಂದಿದ್ದೆ?''

ನಿರ್ಮಲೆ—''ಉದಯಪುರೀ ಬೇಗಮಳಿಗೆ ಪತ್ರ ಕೊಡಲಿಕ್ಕೆ ಬಂದಿದ್ದೆನು.''

ಬಾದಶಹ—''ಎಲ್ಲಿಯ ಪತ್ರವು?

ನಿರ್ಮಲೆ—''ಉದೇಪುರದ ರಾಣಿಯು ಕೊಟ್ಟ ಪತ್ರವು.''

ಇದನ್ನು ಕೇಳಿದ ಕೂಡಲೆ ಬಾದಶಹನು ಬೆರಗಾಗಿ ನಿರ್ಮಲೆಯೊಡನೆ ಉದಯಪುರಿಯ ಮಹಲಿಗೆ ಹೋದನು. ಆತನು ನಿರ್ಮಲೆಯನ್ನು ಒಬ್ಬ ತಾರ್ತರಿಯ ಹೆಂಗಸಿನ ಕಾವಲಿನಲ್ಲಿ ಇರಿಸಿ, ಈಕೆಯನ್ನು ಎಲ್ಲಿಯೂ ಬಿಡಬೇಡವೆಂದು ಆಕೆಗೆ ಹೇಳಿ ಒಳಗೆ ಹೋದನು. ಆಗ ಉದೇಪುರಿಯು ನಿದ್ದೆ ಹೋಗಿದ್ದಳು. ನಿರ್ಮಲೆಯು ಕೊಟ್ಟಿದ್ದ ಪತ್ರವು ಆಕೆಯ ಬಳಿಯಲ್ಲಿಯೇ ಇದ್ದಿತು. ಆಗಿನ ಪದ್ಧತಿಯಂತೆ ಫಾರಸೀ ಭಾಷೆಯಲ್ಲಿ ಬರೆದಿದ್ದ ಆ ಪತ್ರವನ್ನು ತೆಗೆದುಕೊಂಡು ಬಾದಶಹನು ಓದಿನೋಡಲು, ಉರಿಯಲ್ಲಿ ಹುಲ್ಲು ಹಾಕಿದ ಹಾಗಾಗಿ ಸಿಟ್ಟಿನಿಂದ ಆತನು ಉರಿಯಹತ್ತಿದನು!

## ಗುಣಕ್ಕೆ ಮತ್ಸರವೆಲ್ಲಿ?

ಸಿಟ್ಟಿನ ಭರದಲ್ಲಿಯೇ ಬಾದಶಹನು ಹೊರಗೆ ಬಂದನು. ಆತನು ಬಂದ ರೀತಿಯಲ್ಲಿ ನೋಡಿದರೆ, ನಿರ್ಮಲೆಯ ಆಯುಷ್ಯವು ತೀರಿತೆಂದು ಯಾರಾದರೂ ಹೇಳಬಹುದಾಗಿತ್ತು ಬಾದಶಹನು ನಿರ್ಮಲೆಯ ಬಳಿಗೆ ಬಂದು ಕಣ್ಣು ಕೆಕ್ಕರಿಸಿ, ಗದ್ದರಿಸಿ—

ಬಾದಶಹ—''ನೀನು ಯಾರ ಅಪ್ಪಣೆಯಿಂದ ಉದೇಪುರೀಯ ಮಹಲಿನಲ್ಲಿ ಬಂದೆ?''

ನಿರ್ಮಲೆ—''ದಾಸಿಯನ್ನು ಕ್ಷಮಿಸಬೇಕು, ನಾನು ಈ ಪ್ರಶ್ನೆಯ ಉತ್ತರವನ್ನು ಕೊಡಲಾರೆನು!''

ಬಾದಶಹ ''ನಾನು ದುನಿಯಾದ ಬಾದಶಹನಾಗಿರಲು, ನನ್ನ ಪ್ರಶ್ನೆಗೆ ಉತ್ತರ ಕೊಡದಿರುವ ಧೈರ್ಯವು ಯಾರಿಗಾಗುವುದು?''

ನಿರ್ಮಲೆ—(ಕೈ ಜೋಡಿಸಿ ವಿನಯದಿಂದ)—''ದುನಿಯಾ ಹುಜೂರಿನದಿರುವುದು; ಆದರೆ ನಾಲಿಗೆಯು ನನ್ನದಿರುವುದು. ನನ್ನ ಇಚ್ಛೆಯಿಂದ ಅದು ಮಾತಾಡಿದ್ದರೆ, ದುನಿಯಾದ ಬಾದಶಹರು ಯಾವ ಉಪಾಯದಿಂದಲೂ ಅದನ್ನು ಮಾತನಾಡಿಸಲು ಸಮರ್ಥ ರಾಗಲಾರರು!''

ಬಾದಶಹ—(ದರ್ಪದಿಂದ) ''ಸಮರ್ಥರಾಗಲಿಕ್ಕಿಲ್ಲವೇ? ನಿನ್ನ ನಾಲಿಗೆಯನ್ನು ಚೂರು ಚೂರು ಮಾಡಿಸಿ ನಾಯಿಗಳ ಮುಂದೆ ಹಾಕಿಸೇನು?''

ನಿರ್ಮಲೆ—''ದಿಲ್ಲೀಶ್ವರರ ಇಚ್ಛೆಯು! ಅದರಿಂದ ನನ್ನ ನಾಲಿಗೆಯು ಮಾತಾಡಿದ ಹಾಗೆ ಆಗಲಿಲ್ಲ; ಮತ್ತು ತಮಗೆ ತಿಳಿಯತಕ್ಕ ಮಾತೂ ತಿಳಿದ ಹಾಗಾಗಲಿಲ್ಲ!''

ಬಾದಶಹ—''ಅಂತೆಯೇ ಈ ವರೆಗೆ ಅದನ್ನು ಕೊಯ್ದು ಚಲ್ಲಿಸಿರುವುದಿಲ್ಲ. ಇರಲಿ, ಈಗ ತಾರ್ತರಿ ಸ್ತ್ರೀಯಿಂದ ನಿನಗೆ ಬರೆ ಕೊಡಿಸಿ ನಿನ್ನ ನಾಲಿಗೆಯಿಂದ ಮಾತಾಡಿಸುತ್ತೇನೆ ನೋಡು.''

ನಿರ್ಮಲೆ—(ನಕ್ಕು) ''ಹಾಗೂ ಮಾತಾಡಿಸಬಹುದು; ಆದರೆ ಜಹಾಪನಾಹ! ಹಿಂದೂ ಸ್ತ್ರೀಯರು ತಮ್ಮ ಪತಿಯ ಶವದೊಡನೆ ಸುಟ್ಟುಕೊಂಡು ಸಾಯುವಾಗ, ಅವರು ಬರೆಗೆ ಯಾಕೆ ಅಂಜುವರು? ನನ್ನ ತಾಯಿ, ನನ್ನ ಅಬಜಿ, ನನ್ನ ಸೋದರತ್ತೆ ಇವರೆಲ್ಲರೂ ತಮ್ಮ ಪತಿಯ ಶವದೊಡದೆ ಸುಟ್ಟುಕೊಂಡೇ ಸತ್ತಿರುವರು; ಅಂದಬಳಿಕ ಬರೆ-ಗಿರೆಗಳ ಅಂಜಿಕೆಯು ನನಗಿಲ್ಲ. ಬೇಕಾದರೆ ಪರೀಕ್ಷಿಸಿಬಿಡಬೇಕು!''

ಬಾದಶಹ—''ಅನ್ನ ನೀರು ಕೊಡದೆ ನಿನ್ನನ್ನು ಸೆರೆಯಲ್ಲಿ ಹಾಕಿಬಿಟ್ಟರೆ?''

ನಿರ್ಮಲೆ—''ವ್ರತೋಪವಾಸಗಳನ್ನು ಮಾಡುತ್ತ ದೊಡ್ಡವರಾಗಿದ್ದ ನಾವು, ಉಪವಾಸಕ್ಕಂತೂ ಅಂಜುವುದೇ ಇಲ್ಲ. ಅನ್ನದ ಮಾತಂತೂ ಇರಲಿ, ಬಾಯಲ್ಲಿ ನೀರು ಹಾಕದೆ ಎಷ್ಟೋ ದಿವಸ ನಾನು ಇರಲಾರೆನು; ನಮ್ಮಲ್ಲಿ ಪಕ್ಷೋಪವಾಸಿಗಳುಂಟು, ಮಾಸೋಪವಾಸಿಗಳುಂಟು; ಜಹಾಪನಾಹ, ಸದಾ ವಾಯುಭಕ್ಷಣ ಮಾಡಿ ಜೀವಿಸುವವರೂ ನಮ್ಮಲ್ಲಿ ಉಂಟು! ಅಂದಬಳಿಕ ಹುಜೂರ ನನಗೆ ಉಪವಾಸದ ಅಂಜಿಕೆಯನ್ನು ಯಾಕೆ ತೋರಿಸುವಿರಿ? ಜೀವ ಕೊಟ್ಟೇನು, ನಿಮ್ಮ ಪ್ರಶ್ನೆಗೆ ಉತ್ತರವನ್ನು ಕೊಡಲಿಕ್ಕಿಲ್ಲ; ಬೇಕಾದರೆ ಪರೀಕ್ಷೆಯಾಗಿಹೋಗಲಿ!''

ನಿರ್ಮಲೆಯ ನಿರ್ಧಾರದ ಹಾಗೂ ಚಾತುರ್ಯದ ಮಾತುಗಳನ್ನು ಕೇಳಿ, ಬಾದಶಹನು ಆಕೆಯ ಧೈರ್ಯ-ಚಾತುರ್ಯಗಳಿಗಾಗಿ ಬೆರಗಾದನು. ಈಕೆಗೆ ಅಂಜಿಕೆ ತೋರಿಸಿದರೆ ಕೆಲಸವಾಗದೆಂದು ತಿಳಿದು, ಏನಾದರೂ ಆಸೆಹಚ್ಚುವ ನೆವದಿಂದ ಆಕೆಯನ್ನು ಕುರಿತು

ಬಾದಶಹ—''ನಿನ್ನ ಹೆಸರೇನು?''

ನಿರ್ಮಲೆ—''ನಿರ್ಮಲೆ''

ಬಾದಶಹ—''ನಿರ್ಮಲೇ, ನಿನ್ನ ಧೀರತನಕ್ಕೆ ಮೆಚ್ಚಿದೆನು. ನೀನು ಬಹಳ ಚತುರಳು; ಸ್ತ್ರೀಯರಲ್ಲಿ ರತ್ನವು ನಿನ್ನಂಥವಳನ್ನು ಹಿಂಸೆಪಡಿಸುವುದು ನನ್ನಿಂದಾಗದು. ನಿನ್ನಂಥಹ ಸ್ತ್ರೀರತ್ನವನ್ನು ರತ್ನಾಲಂಕಾರಗಳಿಂದಲೇ ಅಲಂಕರಿಸತಕ್ಕದ್ದು. ನಿನಗೆ ವಿಪುಲದ್ರವ್ಯ ಕೊಡುವೆನು, ಬೇಕಾದ ವಸ್ತು-ಒಡವೆ ಕೊಡುವೆನು. ದುನಿಯಾದ ಬಾದಶಹನು ಪ್ರಸನ್ನನಾದರೆ ನಿನಗೆ ಯಾವುದರ ಕೊರತೆಯಾದೀತು? ಅರಸು ಮೆಚ್ಚಿದರೆ ಅರ್ಧ ರಾಜ್ಯವು! ನಾನಂತೂ ಅರಸನು! ಬೇಕಾದದ್ದು ಬೇಡು.''

ನಿರ್ಮಲೆ—''ಸರಕಾರ, ಅದರಲ್ಲಿ ಸಂಶಯವೇನು? ಆದರೆ ರಜಪೂತ ಸ್ತ್ರೀಯರು ಪ್ರಸಂಗದಲ್ಲಿ ಮೃತ್ಯುವನ್ನು ಆನಂದದಿಂದ ಆಲಂಗಿಸುವಂತೆ, ಧನ-ದೌಲತ್ತನ್ನು ತಿರಸ್ಕರಿಸಿ ಕಾಲಿನಿಂದ ಒದೆಯುವರೆಂಬುದನ್ನು ಬಾದಶಹನು ಅರಿತಿರಬಹುದು! ನಾನೊಬ್ಬ ಸಾಮಾನ್ಯ ರಜಪೂತ ಸ್ತ್ರೀಯು, ನಾನು ವಸ್ತ್ರಾಲಂಕಾರಗಳನ್ನೂ, ದನ-ದೌಲತ್ತನ್ನೂ ತೆಗೆದುಕೊಂಡು ಏನುಮಾಡಲಿ? ದೊಡ್ಡ ಮನಸ್ಸಿನಿಂದ ನನ್ನನ್ನು ಹೊರಗೆ ಹೋಗಗೊಡಿರಿ, ಕೈಜೋಡಿಸಿ ಬೇಡಿಕೊಳ್ಳುತ್ತೇನೆ!''

ಬಾದಶಹ—''ಅದೊಂದನ್ನು ಬಿಟ್ಟು ಬೇಕಾದದ್ದು ಬೇಡಿಕೊ, ಕೊಡಲಿಕ್ಕೆ ಸಿದ್ಧನಿರುವೆನು.''

ನಿರ್ಮಲೆ—''ಬೇಡಿಕೊಳ್ಳುತ್ತಿದ್ದೆನು; ಆದರೆ ಆ ಅಮೂಲ್ಯ ರತ್ನವು ಬಾದಶಹರ ಭಾಂಡಾರದಲ್ಲಿಲ್ಲವೆಂಬುದನ್ನು ನಾನು ಬಲ್ಲೆನು, ಜಗತ್ತೂ ಬಲ್ಲದು!''

ಬಾದಶಹ—''ಅಂತಹ ಅಪರೂಪದ ರತ್ನವು ಯಾವುದು?''

ನಿರ್ಮಲೆ—''ನಾವು ಹಿಂದುಗಳು. ನಮ್ಮ ಧರ್ಮವೆಂಬ ರತ್ನವನ್ನು ನಾವು ಪ್ರಾಣಕ್ಕಿಂತಲೂ ಹೆಚ್ಚಾಗಿ ತಿಳಿಯುವೆವು. ನಮ್ಮ ಆ ರತ್ನವನ್ನು ಕಂಡರೆ ನಿಮಗೆ ದ್ವೇಷವು! ಅಂದಬಳಿಕ ನಿಮ್ಮ ಸಂಗ್ರಹದಲ್ಲಿ ಅದು ಹೇಗೆ ಇದ್ದೀತು? ಆದ್ದರಿಂದ ಜಹಾಪನಾಹ! ನನ್ನ ಬೆಳಗಿನ ಔಪಾಸನೆಯ ಹೊತ್ತಿಗೆ ನನ್ನನ್ನು ನನ್ನ ಮನೆಗೆ ಹೋಗಗೊಡಿರಿ. ದೇವರ ಪೂಜೆಯಾದ ನಂತರ ಬಾದಶಹರ ಔದಾರ್ಯಕ್ಕಾಗಿ ಅವರ ಕಲ್ಯಾಣ ಮಾಡೆಂದು ಏಕಲಿಂಗಜೀಯನ್ನು ನಾನು ಪ್ರಾರ್ಥಿಸುವೆನು.''

ನಿರ್ಮಲೆಯ ಚಾತುರ್ಯವನ್ನೂ, ಸಾಹಸವನ್ನೂ, ಧೈರ್ಯವನ್ನೂ ನೋಡಿ ಬಾದಶಹನು ಮತ್ತಿಷ್ಟು ಬೆರಗಾದನು; ಆದರೆ ಕೊಕ್ಕಿ ಮಾತಿನಿಂದ ತನ್ನನ್ನು ನೋಯಿಸಿದ್ದಕ್ಕಾಗಿ ಆತನು ಸಂತಾಪಗೊಂಡು—''ಸರಿ ಸರಿ! ನಿಲ್ಲು, ನಾನು ಮರೆತುಬಿಟ್ಟಿದ್ದೆನು'' ಎಂದು ನುಡಿದು, ಆತನು ಕೂಡಲೆ ಒಬ್ಬ ತಾರ್ತರಿ ಕಾವಲುಗಾರಳನ್ನು ಕರೆದು—''ಹೋಗು, ಪಾಕಶಾಲೆಯೊಳಗಿಂದ ಸ್ವಲ್ಪ ಗೋಮಾಂಸವನ್ನು ತೆಗೆದುಕೊಂಡು ಬಾ ಇಬ್ಬರು ಮೂವರು ಕೂಡಿ ಈ ಲೌಡಿಯ ಬಾಯಲ್ಲಿ ಅದನ್ನು ತುರುಕಿರಿ; ಅಂದರೆ ಈಕೆಯ ಪಿಶಾಚಧರ್ಮದ ವಿಷಯದ ಹುಚ್ಚು ಹಾಳಾಗಿ ಹೋಗುವುದು!'' ಎಂದು ಹೇಳಿದನು.

ಬಾದಶಹನ ಈ ಮಾತಿಗೂ ನಿರ್ಮಲೆಯು ಬೆದರಲಿಲ್ಲ. ಆಕೆಯು ಗಾಂಭೀರ್ಯದಿಂದ ಬಾದಶಹನನ್ನು ಕುರಿತು—''ನಿಮ್ಮ ಜನರಲ್ಲಿ ಈ ಕೆಟ್ಟ ಚಾಳಿಯು ಒಂದು ಕುಹಕ ಯುಕ್ತಿಯಾಗಿರುವುದನ್ನು ನಾನು ಬಲ್ಲೆನು. ಇದೇ ಯುಕ್ತಿಯ ಕಸುವಿನಿಂದಲೇ ಈ ಸುವರ್ಣ ಭೂಮಿಯನ್ನು ಮುಸಲ್ಮಾನರು ನೀವು ಕದ್ದಿರುತ್ತಿರಿ. ಆಕಳ ಹಿಂಡಿಗೆ ಹಿಂಡನ್ನು ದಂಡಿನ ಮುಂದೆ ತರುಬಿಕೊಂಡು ಯುದ್ಧಕ್ಕೆ ನಿಂತು, ಎಷ್ಟೋ ಯುದ್ಧಗಳಲ್ಲಿ ನೀವು ಜಯಗಳನ್ನು ಹೊಂದಿರುತ್ತೀರಿ. ಹಾಗೆ ಮಾಡದಿದ್ದರೆ ಹಿಂದುಗಳ ಶೌರ್ಯದ ಮುಂದೆ ನಿಮ್ಮ ಶೌರ್ಯದ ಆಟವೇನು ನಡೆಯುತ್ತಿತ್ತು? ಅಂತಹ ಪ್ರಸಂಗವು ಈಗ ನನಗೆ ಬಂದದ್ದರಿಂದಲೇ ಬಾದಶಹರ ಮುಂದೆ ನಾನು ಸ್ಪಷ್ಟವಾಗಿ ಹೇಳುತ್ತೇನೆ. ರಜಪೂತ ಸ್ತ್ರೀಯರು ಉಗ್ರ ವಿಷವನ್ನು ಸಂಗಡ ತೆಗೆದುಕೊಳ್ಳದೆ ಎಂದೂ ಹೊರಬೀಳುತ್ತಿರುವುದಿಲ್ಲವೆಂಬುದನ್ನು ಲಕ್ಷ್ಯದಲ್ಲಿಡಿರಿ. ನನ್ನ ಬಳಿಯಲ್ಲಿ ಉಗ್ರ ವಿಷವಿರುವುದು. ನಿಮ್ಮವರ ಗೋಮಾಂಸವು ನನ್ನ ಹೊಟ್ಟೆಯಲ್ಲಿ ಹೋಗುವುದರೊಳಗೆ ನಾನು ಪ್ರಾಣತ್ಯಾಗ ಮಾಡಬಲ್ಲೆನು! ಅಲಮಗೀರ ಬಾದಶಹಾ! ನಿಮಗೆ ಈ ಮಾತಿನ ಅನುಭವವು ಬಂದಿರುವದು; ಆದರೆ ಮರೆತಿರಬಹುದು. ನಿಮ್ಮ ಅಣ್ಣಂದಿರಾದ ದಾರಾ ಎಂಬವರನ್ನು ನೀವು ಕೊಲ್ಲಿಸಿ ಅವರ ಇಬ್ಬರು ರಾಣಿಯರೊಡನೆ ನಿಕಾ ಮಾಡಿ

ಕೊಳ್ಳಲಿಕ್ಕೆ ಹವಣಿಸಿದಿರಲ್ಲವೇ! ಆದರೆ ಉದೇಪುರಿ ಎಂದು ಸುಳ್ಳು ಸುಳ್ಳೇ ಹುಟ್ಟಿಸಿಕೊಂಡು ಹೇಳುತ್ತಿರುವ ಕ್ರಿಸ್ತೀಮತದ ದಾಸಿಯೊಬ್ಬಳು ನಿಮ್ಮ ಹವಣಿಕೆಗೆ ಸಂತೋಷದಿಂದ ಒಳಗಾಗಿ ಈಗ ಉದೇಪುರೀ ಬೇಗಮು ಎಂಬ ಹೆಸರಿನಿಂದ ನಿಮ್ಮ ಜನಾನಖಾನೆಯಲ್ಲಿ ವೈಭವವನ್ನು ಅನುಭವಿಸುತ್ತಿರುವಳು; ಆದರೆ ಇನ್ನೊಬ್ಬ ರಜಪೂತ ರಾಣಿಯು ವಿಷಪ್ರಾಶನ ಮಾಡಿ ಪ್ರಾಣಕೊಟ್ಟು ತನ್ನ ಪಾತಿವ್ರತ್ಯವನ್ನೂ, ದಾರ್ಮಿಕ ತೇಜವನ್ನೂ ಕಾಯ್ದುಕೊಂಡಿರುವಳು! ನಾನಾದರೂ ಆ ಸಾಧ್ವಿಯಂತೆಯೇ ಈಗ ಸ್ವರ್ಗದ ಹಾದಿಯನ್ನು ಹಿಡಿಯುವೆನು!''

ಬಾದಶಹನು ಸುಂದಾಗಿ ನಿಂತುಬಿಟ್ಟನು! 'ತಾನು ಭರತವರ್ಷದ ಸಾರ್ವಭೌಮನು; ಹುಬ್ಬು ಗಂಟಿಕ್ಕಿದ ಮಾತ್ರದಿಂದ ಬೇಕಾದದ್ದನ್ನು ಮಾಡಲು ಸಮರ್ಥನಾದವನು. ಇಂತಹ ನಾನು ಒಬ್ಬ ದಿಕ್ಕಿಲ್ಲದ ಪೋರಿಯಿಂದ ಮಾನಕಳೆದುಕೊಂಡು ಸುಮ್ಮನಾಗಬೇಕೆ? ನಿಜವಾಗಿಯೇ ಈ ತರುಣಿಯು ರತ್ನಪ್ರಾಯಳು. ಇಂತಹ ರತ್ನವನ್ನು ನಿರಾಕರಿಸದೆ ಈಕೆಯನ್ನು ವಶಪಡಿಸಿ ಕೊಳ್ಳಬೇಕು, ಎಂದು ಯೋಚಿಸಿ ಆತನು ಸವಿಮಾತುಗಳಿಂದ—

ಬಾದಶಹ— ''ಪ್ರಿಯೇ, ನಿನ್ನ ಹೆಸರೇನು? ಇನ್ನೊಮ್ಮೆ ಹೇಳು ಕೇಳೋಣ?''

ನಿರ್ಮಲೆ (ನಕ್ಕು)—''ಇದೇನು ಜಹಾಪನಾಹ! ಇನ್ನೂ ರಜಪೂತ ರಾಣಿಯರನ್ನು ಮತಾಡಿಕೊಳ್ಳಬೇಕೆನ್ನುವಿರೋ ಏನು? ಬಹಳ ಅಸಮಾಧಾನದ ಮಾತು! ನೀವು ಈಗ ಆ ಇಚ್ಛೆಯನ್ನು ಬಿಟ್ಟು ಬಿಡಬೇಕಾಗುವುದು; ಏಕೆಂದರೆ ನನ್ನ ಲಗ್ನವಾಗಿರುವುದು. ನನ್ನ ರಜಪೂತ ಪತಿಯು ಬದುಕಿ ಇರುವನು! ಸರಕಾರ, ಇನ್ನು ಈ ನಿರ್ಮಲೆಯನ್ನು ಹೆಚ್ಚು ಛಲಿಸಬೇಡಿರಿ, ಬಿಟ್ಟುಬಿಡಿರಿ.''

ಬಾದಶಹ—''ಹಾಗಾದರೆ ಆ ಮಾತು ಇದ್ದುಕೊಂಡು ಬಿಡಲಿ! ನಿರ್ಮಲೆ, ಕೆಲವು ದಿವಸ ನೀನು ನನ್ನ ರಂಗಮಹಲಿನಲ್ಲಿಯೇ ಇರಬೇಕು. ನನ್ನ ಈ ಅಪ್ಪಣೆಯನ್ನು ಮನ್ನಿಸದೆ ಇರಲಿಕ್ಕಿಲ್ಲವೆಂದು ನಾನು ಆಶಿಸುವೆನು.''

ನಿರ್ಮಲೆ—''ಹೀಗೆ ನನ್ನನ್ನು ಪ್ರತಿಬಂಧಿಸುವ ಕಾರಣವೇನು?''

ಬಾದಶಹ—''ಈಗಲೇ ನಾನು ನಿನ್ನನ್ನು ಕಳುಹಿಸಿಬಿಟ್ಟರೆ, ನನ್ನನ್ನು ಬಾಯಿಗೆ ಬಂದಂತೆ ನಿಂದಿಸುತ್ತ ನನ್ನ ದುರ್ಲೌಕಿಕವನ್ನು ನೀನು ಜನರಲ್ಲಿ ಮಾಡುವೆ; ಆದ್ದರಿಂದ ನೀನು ನನ್ನ ದೊಡ್ಡ ಮನಸ್ಸನ್ನು ವರ್ಣಿಸುವಂತೆ ನಿನ್ನ ಸಂಗಡ ನಾನು ನಡೆದುಕೊಳ್ಳಬೇಕಾಗಿರುವುದು! ನಿನ್ನ ಮನಸ್ಸು ಸುಪ್ರಸನ್ನವಾದ ಬಳಿಕ ನಿನ್ನನ್ನು ಬಿಟ್ಟುಬಿಡುವೆನು.''

ನಿರ್ಮಲೆ—''ನೀವು ಬಿಡದಿದ್ದರೆ ನಾನು ಇಲ್ಲಿಂದ ಹೋಗಲಾರೆನೆಂಬುದನ್ನು ನಾನು ಬಲ್ಲೆನು; ಆದ್ದರಿಂದ ಎರಡು ತಾಸುಗಳ ಸಂಬಂಧದಿಂದ ನೀವು ನನಗೆ ಪ್ರತಿಜ್ಞಾಪೂರ್ವಕವಾಗಿ ವಚನಕೊಟ್ಟರೆ, ನಾನು ನಿಮ್ಮ ರಂಗಮಹಲಿನಲ್ಲಿ ಇರುವೆನು.''

ಬಾದಶಹ—''ಯಾವ ಮಾತುಗಳವು?''

ನಿರ್ಮಲೆ—''ಹಿಂದುಗಳೇ ನನ್ನ ಊಟ–ಉಡಿಗೆಯ ವ್ಯವಸ್ಥೆ ಮಾಡಬೇಕು. ನನಗೆ ಮುಸಲ್ಮಾನರ ಸ್ಪರ್ಶವಾಗಬಾರದು.''

ಬಾದಶಹ—''ಇವೆರಡೂ ಮಾತುಗಳನ್ನು ನಡೆಸುವೆನೆಂದು ನಿನಗೆ ನಾನು ವಚನಕೊಡುವೆನು. ನಿನ್ನ ವ್ಯವಸ್ಥೆಯನ್ನು ಜೋಧಪುರೀ ರಾಣಿಯ ಮಹಲಿನಲ್ಲಿಯೇ ಮಾಡುವೆನು.''

ಈ ಮೇರೆಗೆ ಹೇಳಿ ಬಾದಶಹನು ಕೂಡಲೆ ಎಲ್ಲ ವ್ಯವಸ್ಥೆಯನ್ನು ಮಾಡಿಸಿದನು. ಅದರಿಂದ ನಿರ್ಮಲೆಗೆ ಬಹಳ ಸಂತೋಷವಾಯಿತೆಂದು ವಾಚಕರಿಗೆ ಹೇಳುವ ಕಾರಣವಿಲ್ಲ. ರೋಗಿ ಬಯಸಿದ್ದು ಹಾಲೋಗರ ವೈದ್ಯ ಹೇಳಿದ್ದೂ ಹಾಲೋಗರವೇ' ಎಂಬಂತಾಯಿತು. ಮರುದಿವಸ ಬಾದಶಹನು ನಿರ್ಮಲೆಯ ಪ್ರವೇಶವು ರಾಣೀವಾಸದಲ್ಲಿ ಹೇಗೆ ಆಯಿತೆಂದು ಜಿಬುನ್ನೀಸೆಯೊಡನೆ ಆಲೋಚಿಸತೊಡಗಿದ್ದನು. ಜಿಬುನ್ನಿಸೆಯು ಜನಾನಖಾನೆಯ ಮುಖ್ಯಳಾಗಿದ್ದು, ಆಕೆಯ ಒಪ್ಪಿಗೆಯಿಲ್ಲದೆ ಗಾಳಿಯೂ ಜನಾನಖಾನೆಯಲ್ಲಿ ಸುಳಿಯುವ ಹಾಗಿದ್ದಿಲ್ಲ; ಆದ್ದರಿಂದ ಬಾದಶಹನು ತನ್ನ ಆ ಮಗಳನ್ನು ಇದರ ಗೂಢವೇನೆಂದು ಕೇಳಿದನು; ಆದರೆ ಜಿಬುನ್ನಿಸೆಯು ಮದ್ಯಪಾನದಿಂದ ಅರವುಗೆಟ್ಟು ಬಿದ್ದಿರುವಾಗ ಜೋಧಪುರಿಯು ಯುಕ್ತಿಯಿಂದ ಆಕೆಯ ಒಪ್ಪಿಗೆಯನ್ನು ಪಡೆದದ್ದರಿಂದ, ಆ ವಿಲಾಸೀ ಶಹಾಜಾದಿಗೆ ಯಾವ ನೆನಪೂ ಇದ್ದಿಲ್ಲ. ಕಾವಲುಗಾರರಿಗೆ ನಿರ್ಮಲೆಯು ಬಂದದ್ದು ಗೊತ್ತಿದ್ದರೂ ಬಾದಶಹನ ಅಂಜಿಕೆಯಿಂದ ಅವರು ತಮಗೆ ಗೊತ್ತಿಲ್ಲವೆಂದು ಹೇಳಿಬಿಟ್ಟರು. ಆಗ ಬಾದಶಹನು ಎಲ್ಲ ಕಾವಲುಗಾರರನ್ನು ಕುರಿತು–''ಈಗ ಆ ಹೆಂಗಸು ಬಂದದ್ದರಿಂದ ಯಾವ ಹಾನಿಯೂ ಆಗಿರುವುದಿಲ್ಲ; ಆದರೆ ಆಕೆಯು ಇನ್ನು ಜನಾನಖಾನೆಯಿಂದ ಹೊರಗೆ ಹೋಗದಂತೆ ಎಲ್ಲರೂ ಎಚ್ಚರಪಡಿರಿ; ಆಕೆಯು ಇಲ್ಲದಂತಾದರೆ ನಿಮ್ಮೆಲ್ಲರ ಶಾಸನ ಮಾಡುವೆನು ಎಂದು ಆಜ್ಞಾಪಿಸಿದನು.

## ರಾಜಸೇವೆಯ ಸುಖ!

ರೂಪನಗರದಲ್ಲಿ ತನ್ನ ಸೈನ್ಯಕ್ಕೆ ಆದ ಅಪಜಯದಿಂದ ಸಂತಾಪಗೊಂಡು ಔರಂಗಜೇಬ ಬಾದಶಹನು ತನ್ನ ಸೈನಿಕರನ್ನು ಶಿಕ್ಷಿಸಿದ್ದನ್ನು ಹಿಂದೆ ಹೇಳಿದೆಯಷ್ಟೆ? ಅದರಂತೆ ಮುಬಾರಕನಿಗೂ ಶಿಕ್ಷೆಯಾಗತಕ್ಕದ್ದು; ಆದರೆ ಮುಬಾರಕನು ಮನಃಪೂರ್ವಕ ಕೆಲಸ ಮಾಡಿದ್ದು ಗೊತ್ತಾದದ್ದರಿಂದ ಬಾದಶಹನು ಆತನನ್ನು ಕ್ಷಮಿಸಿದ್ದನು. ಮುಬಾರಕನು ದಿಲ್ಲಿಗೆ ಬಂದ ಬಳಿಕ ತನ್ನ ಮದುವೆಯ ಹೆಂಡತಿಯಾದ ದರಿಯಾಬೀಬಿಯೊಡನೆ ಪ್ರೇಮದಿಂದ ಸಂಸಾರ ಮಾಡತೊಡಗಿದನು. ಮೊದಲಿನ ಅಧಿಕಾರವೇ ಈಗಲೂ ಉಳಿದದ್ದರಿಂದ ಅವನ ವೈಭವಕ್ಕೆ ಕೊರತೆಯಿದ್ದಿಲ್ಲ. ದರಿಯಾಬೀಬಿಯು ಗಂಡನ ಪ್ರೇಮವನ್ನು ಸಂಪಾದಿಸಿ ವೈಭವವನ್ನು ಅನುಭವಿಸಹತ್ತಿದಳು. ಮುಬಾರಕನೂ ಆಕೆಯೊಡನೆ ವಂಚನೆಯಿಲ್ಲದೆ ನಡೆದುಕೊಳ್ಳಹತ್ತಿದನು; ಅದರಿಂದ ಜಿಬುನ್ನಿಸೆಯ ದರ್ಶನಕ್ಕೆ ಹೋಗುವುದು ಆತನಿಂದಾಗದಾಯಿತು. ಮುಬಾರಕನು

ತಾನಾಗಿ ಯುದ್ಧದ ಸುದ್ದಿಯನ್ನು ಹೇಳಲಿಕ್ಕೆ ಬರುವೆನೆಂದು ಜಿಬುನ್ನಿಸೆಯು ಹಾದಿಯನ್ನು ನೋಡಿದಳು; ಆದರೆ ಬಹಳ ದಿವಸಗಳಾದರೂ ಆತನು ತನ್ನನ್ನು ಕಾಣಲಿಕ್ಕೆ ಬರಲಿಲ್ಲ; ಆದರಿಂದ ಶಹಾಜಾದಿಯು ಆತನನ್ನು ಕರೆಯುವುದಕ್ಕಾಗಿ ವಿಶ್ವಾಸದ ಅಸೀರುದ್ದೀನನೆಂಬ ಸೇವಕನನ್ನು ಕಳಿಸಿದಳು; ಆದರೂ ಮುಬಾರಕನು ಜಿಬುನ್ನಿಸೆಯ ಬಳಿಗೆ ಹೋಗಲಿಲ್ಲ. ಆತನು ಆ ಸೇವಕನನ್ನು ಕುರಿತು—''ಅಸಿರುದ್ದೀನ, ಶಹಾಜಾದಿಗೆ ನನ್ನ ಹಲವು ಸಲಾಮುಗಳನ್ನು ಹೇಳು. ಶಹಾಜಾದಿಗಿಂತಲೂ ಹೆಚ್ಚು ಪ್ರಿಯರಾದವರು ನನಗೆ ಯಾರೂ ಇಲ್ಲವೆಂತಲೂ ತಿಳಿಸು; ಆದರೆ ಖುದಾನ ಹಾಗೂ ಧರ್ಮದ ಭಯದಿಂದ ನಾನು ನನ್ನ ಮದುವೆಯ ಹೆಂಡತಿಯನ್ನು ಬಿಡಲಾರೆನು. ಪಾಪಕ್ಕೆ ನಾನು ಬಹಳವಾಗಿ ಅಂಜುತ್ತಿರುವೆನು; ಹೋಗು, ಇಷ್ಟು ಹೇಳಿ ಶಹಾಜಾದಿಗೆ ಮತ್ತೆ ಮತ್ತೆ ನನ್ನ ಸಲಾಮುಗಳನ್ನು ಹೇಳು.''

ಮುಬಾರಕನು ಹೀಗೆ ತನ್ನ ಅಪ್ಪಣೆಯನ್ನು ಮೀರಿ ತನಗೆ ಧರ್ಮೋಪದೇಶ ಮಾಡಿದ್ದಕ್ಕಾಗಿ ಜಿಬುನ್ನಿಸೆಯು ಸಂತಾಪಗೊಂಡಳು. ಆಕೆಯು ಅವಡುಗಚ್ಚಿ ಸಂತಾಪದಿಂದ—''ಶಹಾಜಾದಿಗೆ ಇಷ್ಟು ಅಪಮಾನವೆ? ತಿರಕನಿಗೆ ಇಷ್ಟು ಸೊಕ್ಕೇ? ನಾನು ಕರೆಯಿಸಿದರೆ ಬರುವುದಿಲ್ಲವೆ? ಇಷ್ಟು ಮಗರೂರಿಯೇ? ನೆನಪಿನಲ್ಲಿಡಲಿ, ಇದರ ಸೇಡು ತೀರಿಸಿಕೊಳ್ಳದಿದ್ದರೆ ನಾನು ಜಿಬುನ್ನಿಸೆಯೇ ಅಲ್ಲ'' ಎಂದು ನುಡಿದು, ದರಿಯೆಯನ್ನೂ, ಮುಬಾರಕನನ್ನೂ ನಾಶಗೊಳಿಸುವ ಪ್ರತಿಜ್ಞೆ ಮಾಡಿದಳು. ಅಂತಹ ಕರ್ಕಶ ಸ್ತ್ರೀಯ ಕೈಯಲ್ಲಿ ದೊಡ್ಡ ಅಧಿಕಾರವಿದ್ದ ಬಳಿಕ ಯಾವ ಮಾತಿಗೇನು ತಡವಾಗುವುದು? ತನ್ನ ತಂದೆಯಾದ ಔರಂಗಜೇಬನು ತನ್ನ ಬಳಿಗೆ ಬಂದಾಗ ಜಿಬುನ್ನಿಸೆಯು ರೂಪನಗರದ ಯುದ್ಧದ ಮಾತು ತೆಗೆದು, ಮುಬಾರಕನ ಮೇಲೆ ಇಲ್ಲದ ದೋಷಾರೋಪ ಮಾಡತೊಡಗಿದಳು. ಯಾವಾಗಲೂ ಮುಬಾರಕನ ವರ್ಣನೆಯನ್ನು ಮಾಡುತ್ತಿದ್ದ ತನ್ನ ಮಗಳು, ಇಂದು ಆತನ ಮೇಲೆ ಇಲ್ಲದ ಚಾಡಿ ಹೇಳುವುದನ್ನು ಕೇಳಿ ಬಾದಶಹನು ಶಂಕಿತನಾದನು. ಜಿಬುನ್ನಿಸೆಗೂ ಮುಬಾರಕನಿಗೂ ಮನಸ್ತಾಪವಾಗಿರಬೇಕೆಂದು ಆತನು ತರ್ಕಿಸಿದನು. ಬಹಳ ಸಂಶಯದ ಸ್ವಭಾವದ ಚಾಣಾಕ್ಷ, ಬಾದಶಹನಿಗೆ ಜಿಬುನ್ನಿಸೆಯ ಕೆಟ್ಟ ನಡತೆಯು ಗೊತ್ತು ಇದ್ದಿಲ್ಲವಂತಲ್ಲ, ಮದುವೆಯಾಗದಿರುವ ತನ್ನ ತಂಗಿಯರು ಹಾಗು ಹೆಣ್ಣುಮಕ್ಕಳ ನಡತೆಯು ಹೇಗಿರುವುದೆಂಬುದನ್ನು ಆತನು ಬಲ್ಲವನಾಗಿದ್ದನು. ಮುಬಾರಕನು ಜಿಬುನ್ನಿಸೆಯ ಜಾರನೆಂಬ ಸಂಶಯವೂ ಈ ಮೊದಲೆ ಆತನಿಗೆ ಬಂದಿತ್ತು; ಆದರೆ ಇಂದಿನ ಜಿಬುನ್ನಿಸೆಯ ಮಾತಿನಿಂದ ಆತನ ಸಂಶಯದ ಪರಿಹಾರವಾಯಿತು. ಇಂತಹ ಜಾರರ ಸಂಹಾರ ಮಾಡುತ್ತಿರುವುದು ಬಾದಶಹನ ವಾಡಿಕೆಯ ನಿಯಮವಾದದ್ದರಿಂದ, ಈ ಮೊದಲೆ ಮುಬಾರಕನನ್ನು ನಾಶಮಾಡಲು ಯೋಚಿಸಿದ್ದ ಆತನು ಕೂಡಲೆ ಬಕ್ಷಿಯನ್ನು ಕರೆಯಿಸಿ, ಮುಬಾರಕನನ್ನು ಸಂಹರಿಸಲು ಆಜ್ಞಾಪಿಸಿದನು!

ಈಗಿನಂತೆ ಉರುಲುಹಾಕಿ ಕೊಲ್ಲುವುದೊಂದೇ ಬಗೆಯ ಶಿಕ್ಷೆಯು ಮೊಗಲರ ಕಾಲದಲ್ಲಿ ಬಳಕೆಯಲ್ಲಿದ್ದಿಲ್ಲ, ಖಡ್ಗದಿಂದ ಚೆಂಡನ್ನು ಕತ್ತರಿಸುವುದು, ಆನೆಯ ಕಾಲಿನಿಂದ ತುಳಿಸುವುದು, ಜೀವಸಹಿತ ಹುಗಿಸುವುದು, ಹಾವುಗಳಿಂದ ಕಡಿಸುವುದು ಮುಂತಾದ ವಿವಿಧ ಶಿಕ್ಷೆಗಳು ಆಗ

ಬಳಕೆಯಲ್ಲಿದ್ದವು. ಬಾದಶಹನು ಈಗ ಮುಬಾರಕನನ್ನು ಹಾವು ಕಡಿಸಿ ಕೊಲ್ಲಿಸಬೇಕೆಂದು ಆಜ್ಞಾಪಿಸಿದನು. ಬಕ್ಷಿಯು ಎಂಟುಜನ ಶಿಪಾಯಿಗಳನ್ನು ಕಳಿಸಿ ಮುಬಾರಕನನ್ನು ಹಿಡಿದುತರಿಸಿದನು. ಮುಬಾರಕನು ಬಕ್ಷಿಯ ಮುಂದೆ ಬಂದು ನಿಂತಾಗ, ಬಕ್ಷಿಯ ಬಳಿಯಲ್ಲಿ ಎರಡು ಕಬ್ಬಿಣದ ಪಂಜರಗಳಿದ್ದವು. ಒಂದೊಂದು ಪಂಜರದಲ್ಲಿ ಒಂದೊಂದು ಕರಿಯ ಸರ್ಪ ಭೋರ್ಗರೆಯುತ್ತಿದ್ದವು. ಅವನ್ನು ನೋಡಿದ ಕೂಡಲೆ ಮುಬಾರಕನಿಗೆ ತನಗಾಗತಕ್ಕ ಶಿಕ್ಷೆಯು ಗೊತ್ತಾಯಿತು. ಆತನು ನಗುತ್ತ ಬಕ್ಷಿಯನ್ನು ಕುರಿತು—

ಮುಬಾರಕ—''ಏನು? ನನ್ನನ್ನು ಹಾವುಕಡಿಸಿ ಕೊಲ್ಲಬೇಕೆಂದು ಅಪ್ಪಣೆ ಯಾಗಿದೆಯೋ?''

ಬಕ್ಷಿ—''ಹೌದು, ಬಾದಶಹರು ಹಾಗೆ ಅಪ್ಪಣೆ ಮಾಡಿರುವರು.''

ಮುಬಾರಕ—''ಹಾಗೆ ಅಪ್ಪಣೆಮಾಡಲು ಕಾರಣವೇನು?''

ಬಕ್ಷಿ—''ಅದನ್ನು ನಾನರಿಯೆನು. ಕಾರಣವು ತಮಗೆ ಗೊತ್ತಿಲ್ಲವೋ?''

ಮುಬಾರಕ—''ಅನುಮಾನದಿಂದ ಗೊತ್ತಾಗಿರುವುದು, ಇನ್ನು ತಡವೇಕೆ?''

ಬಕ್ಷಿ—''ಯಾರು ತಡಮಾಡಬೇಕೆನ್ನುವರು?''

ಈ ಮೇರೆಗೆ ಬಕ್ಷಿಯು ನುಡಿದು ಕೂಡಲೆ ಮುಬಾರಕನ ಒಂದು ಕಾಲೊಳಗಿನ ಜೋಡನ್ನು ತೆಗೆದು ಪಂಜರದ ತೂತಿಗೆ ಕಾಲನ್ನು ಇಟ್ಟನು. ಕೃಷ್ಣಸರ್ಪವು ಅದಕ್ಕೆ ಕಚ್ಚಲು, ಕೂಡಲೆ ಮುಬಾರಕನ ಮೈಬಣ್ಣವು ಬದಲಾಗತೊಡಗಿತು. ಆಗ ಮುಬಾರಕನು ಬಕ್ಷಿಯನ್ನು ಕುರಿತು—''ಬಕ್ಷೀಸಾಹೇಬ, ಮುಬಾರಕನನ್ನು ಯಾಕೆ ಕೊಂದರೆಂದು ಯಾರಾದರೂ ಕೇಳಿದರೆ, ಶಹಾಜಾದಿ ಜಿಬುನ್ನಿಸೆಯ ಹೇಳಿಕೆಯಿಂದ ಕೊಂದರೆಂದು ದಯಮಾಡಿ ಹೇಳಿರಿ, ಎಂದು ಹೇಳಿದನು. ಆಗ ಬಕ್ಷಿಯು ಅಂಜುತ್ತಂಜುತ್ತ ದುಃಖದಿಂದ—''ಇನ್ನು ಮಾತಾಡ ಬೇಡಿರಿ! ಇನ್ನೊಂದು ಕಾಲನ್ನು ಎರಡನೆಯ ಪಂಜರದ ಮೇಲೆ ಇಡಿರಿ'' ಎಂದು ಹೇಳಿದನು. ಒಂದು ಹಾವಿನ ಕಡಿತದಿಂದ ಕೂಡಲೆ ಅಪರಾಧಿಯ ಜೀವವು ಹೋಗದಿದ್ದರೆ, ಮತ್ತೊಂದು ಹಾವಿನಿಂದ ಕಡಿಸುವ ಪದ್ಧತಿಯು ಮುಬಾರಕನಿಗೆ ಗೊತ್ತಿದ್ದಿತು. ಕೂಡಲೆ ಆತನು ಎರಡನೆಯ ಕಾಲೊಳಗಿನ ಜೋಡನ್ನು ತೆಗೆದು ಆ ಕಾಲನ್ನೂ ಪಂಜರದ ಮೇಲೆ ಇಟ್ಟನು. ಕೂಡಲೆ ಎರಡನೆಯ ಹಾವು ಅವನ ಆ ಕಾಲನ್ನು ಕಚ್ಚಿತು!

ಮುಬಾರಕನನ್ನು ಆ ಎರಡು ಮಹಾಸರ್ಪಗಳು ಕಚ್ಚಿದ್ದರಿಂದ, ಅವನ ಕೆಂಪು ಮೈಯು ನೀಲಿಯ ಬಣ್ಣದಾಯಿತು! ಆತನು ಭೂಮಿಯ ಮೇಲೆ ಮೊಣಕಾಲೂರಿ ಕುಳಿತು ಕೈಜೋಡಿಸಿ—''ಅಲ್ಲಾಹೋ ಅಕಬರ! ದೇವಾ, ನಾನು ಅತ್ಯಂತ ಪಾಪಿಯು, ನನ್ನನ್ನು ಕ್ಷಮಿಸಿ ಹೊಟ್ಟೆಯಲ್ಲಿ ಹಾಕಿಕೋ'' ಎಂದು ದೇವರನ್ನು ಪ್ರಾರ್ಥಿಸುತ್ತಿರುವಾಗಲೇ ಮುಬಾರಕನ ಜೀವವು ಹೊರಟು ಹೋಯಿತು!

ಈ ಸುದ್ದಿಯು ಕೂಡಲೆ ಜಿಬುನ್ನಿಸೆಗೆ ಆಕೆಯ ಚಾರರ ಮುಖದಿಂದ ಮುಟ್ಟಿತು. ಮುಬಾರಕನ ನಾಶವಾದದ್ದನ್ನು ಕೇಳಿದರೆ ನನಗೆ ಸಂತೋಷವಾಗುವುದೆಂದು ಆಕೆಯು

ತಿಳಿದಿದ್ದಳು; ಆದರೆ ಆ ಸುದ್ದಿಯನ್ನು ಕೇಳಿದ ಕೂಡಲೆ ಆ ಶಹಾಜಾದಿಯ ಕಣ್ಣುಗಳು ನೀರಿನಿಂದ ತುಂಬಿದವು. ಜೆಬುನ್ನಿಸೆಯು ಹೀಗೆ ಕಣ್ಣೀರು ಹಾಕಿದ್ದು ಇದೇ ಮೊದಲು ಎಂದು ಹೇಳಬಹುದು. ಆಕೆಯ ದುಃಖವು ಹೊಟ್ಟೆಯಲ್ಲಿ ಹಿಡಿಸದಾದ್ದರಿಂದ, ಆಕೆಯು ತನ್ನ ಕೋಣೆಯ ಬಾಗಿಲು ಇಕ್ಕಿಕೊಂಡು ಬಿಕ್ಕಿಬಿಕ್ಕಿ ಅಳಹತ್ತಿದಳು. ಅರಸರ ಮಕ್ಕಳಾದರೇನು, ಬಡವರ ಮಕ್ಕಳಾದರೇನು? ಎಲ್ಲರೂ ಮನುಷ್ಯರೇ ಅಲ್ಲವೇ? ತಮ್ಮ ಪ್ರೀತಿಯ ವಸ್ತುವಿನ ವಿಯೋಗವಾದರೆ ದುಃಖವಾಗುವುದು ಮನುಷ್ಯಸ್ವಭಾವವು. ಅದೊಂದು ತಡೆಯಲಾರದ ಮನಸ್ಸಿನ ವಿಕಾರವು! ಇನ್ನು ಬಡತನ– ದೈವುಳ್ಳತನಗಳು ಕರ್ಮದ ಫಲಗಳಾಗಿರುವುವು. ಜೆಬುನ್ನಿಸೆಯು ಪರಿಪರಿಯಿಂದ ದುಃಖಿಸು ತ್ತಿರುವಾಗ ಆಕೆಯ ಮನಸ್ಸಿನಲ್ಲಿ ಏನೋ ಬರಲು, ತನ್ನ ನಂಬಿಗೆಯ ಅಸಿರುದ್ದೀನನನ್ನು ಕರೆದು—''ಏನೋ ಅಸಿರುದ್ದೀನ, ಹಾವಿನ ವಿಷವನ್ನು ಇಳಿಸುವ ಔಷಧವು ನಿನಗೆ ಗೊತ್ತಿರುವುದೋ?''

ನಸೀರುದ್ದೀನ—''ನನಗೆ ಗೊತ್ತಿಲ್ಲ, ಹಾತೀಮಮಲನಿಗೆ ಔಷಧವು ಗೊತ್ತಿರುವುದೆಂದು ಕೇಳಿದ್ದೇನೆ.''

ಜೆಬುನ್ನಿಸೆ—''ಮುಬಾರಕನು ಅಲ್ಲಿ ಹಾವು ಕಡಿದು ಸತ್ತನೆಂಬುದನ್ನು ನೀನು ಕೇಳಿರುವೆಯಷ್ಟೇ? ಆತನನ್ನು ಎಲ್ಲಿ ಹುಗಿದಿರುವರು ನಿನಗೆ ಗೊತ್ತಿರುವದೇನು?''

ನಸೀರುದ್ದೀನ—''ನನಗೆ ಗೊತ್ತಿಲ್ಲವು. ಆದರೆ ಯಾರನ್ನಾದರೂ ಕೇಳಿದರೆ ಗೊತ್ತಾಗಬಹುದು. ಹೊಸ ಗುರುತು ನೋಡಿ ಹುಗಿದದ್ದರ ಗೊತ್ತು ಹಚ್ಚಿದರಾಯಿತು.''

ಜೆಬುನ್ನಿಸೆ—''ಇಗೋ, ಈ ಇನ್ನೂರು ಅಶರ್ಫಿಗಳನ್ನು ಕೊಡುವೆನು. ಇವುಗಳಲ್ಲಿ ಒಂದು ನೂರು ಆಶರ್ಫಿ ನೀನು ತೆಗೆದುಕೊಳ್ಳು; ಇನ್ನೊಂದು ನೂರನ್ನು ಹಾತಿಮಮಲನಿಗೆ ಕೊಡು. ಮುಬಾರಕನನ್ನು ಬದುಕಿಸಿದರೆ ಇನ್ನೂ ದೊಡ್ಡ ಇನಾಮನ್ನು ಕೊಡುವೆನು. ಮುಬಾರಕನು ಬದುಕಿದರೆ ಆತನನ್ನು ನನ್ನ ಬಳಿಗೆ ಕರೆದುಕೊಂಡು ಬಾ.''

ಇತ್ತ ನಸೀರುದ್ದೀನನು ಹಾತಿಮಮಲನನ್ನು ಕರೆದುಕೊಂಡು ಕಬರಸ್ಥಾನಕ್ಕೆ ಹೋಗಿ ಮುಬಾರಕನ ಶವವನ್ನು ಕಡೆಗೆ ತೆಗೆದು ಅದಕ್ಕೆ ಔಷಧ ಪ್ರಯೋಗ ಮಾಡುತ್ತಿರಲು, ಮಾಣಿಕಲಾಲನು ಉದಯಪುರಕ್ಕೆ ಹೋಗುವುದಕ್ಕಾಗಿ ಆ ಮಧ್ಯರಾತ್ರಿಯಲ್ಲಿ ಯಾರಿಗೂ ಗೊತ್ತಾಗದಂತೆ ಅದೇ ದಾರಿಯಿಂದ ಹೊರಟಿದ್ದನು. ನಿರ್ಮಲೆಯು, ತಾನು ಜೋಧಪುರೀ ಬೇಗಮಳ ಆಶ್ರಯದಲ್ಲಿ ಸುರಕ್ಷಿತವಾಗಿರುವೆನೆಂತಲೂ, ನೀನು ಕೂಡಲೆ ಉದೇಪುರಕ್ಕೆ ಹೋಗಿ ಯುದ್ಧದ ಸಿದ್ಧತೆಯನ್ನು ಮಾಡಬೇಕೆಂತಲೂ ಯುಕ್ತಿ–ಪ್ರಯುಕ್ತಿಗಳಿಂದ ಆತನಿಗೆ ಹೇಳಿಕಳುಹಿಸಿದ್ದಳು. ಮಾಣಿಕಲಾಲನು ಹಾದಿಯನ್ನು ಹಿಡಿದು ಹೋಗುತ್ತಿರುವಾಗ ಕಬರಸ್ಥಾನವು ಆತನಿಗೆ ಹತ್ತಿತು. ಅಲ್ಲಿ ಮುಬಾರಕನ ಶವವನ್ನು ಕಳವಿನಿಂದ ಹೊರಗೆ ತೆಗೆದುಕೊಂಡು ಕುಳಿತಿದ್ದ ಆ ಇಬ್ಬರು ಮಾಣಿಕಲಾಲನು ಬರುವುದನ್ನು ನೋಡಿದ ಕೂಡಲೆ ಓಡಿಹೋದರು. ಮಾಣಿಕಲಾಲನು ಕುದುರೆಯಿಂದ ಇಳಿದು ಶವವನ್ನು ನೋಡಿದನು. ಹಾವು ಕಡಿದು ಸತ್ತದ್ದು ಆತನಿಗೆ ಗೊತ್ತಾಯಿತು. ಸತ್ತ ಮನುಷ್ಯನು ಯಾರೆಂಬುದನ್ನು ಆತನು ದಿಲ್ಲಿಯಲ್ಲಿ ಕೇಳಿದ್ದನು.

ರೂಪನಗರದ ಯುದ್ಧದಲ್ಲಿ ಮುಬಾರಕನನ್ನು ಪ್ರತ್ಯಕ್ಷ ನೋಡಿಯೂ ಇದ್ದನು. ಕರ್ಮಧರ್ಮ ಸಂಯೋಗದಿಂದ ಹಾವಿನ ಉತ್ತಮವಾದ ಔಷಧವು ಆತನ ಬಳಿಯಲ್ಲಿ ಇದ್ದುದರಿಂದ, ಶೂರ ಮುಬಾರಕನು ಬದುಕಿದರೆ ನೋಡಬೇಕೆಂದು ಮಾಣಿಕಲಾಲನು ಯೋಚಿಸಿದನು. ಆದರೆ ಕಳವಿನಿಂದ ಹೊರಟಿದ್ದ ಆತನು ದಿಲ್ಲಿಯ ಅಷ್ಟು ಸಮೀಪದಲ್ಲಿ ನಿಲ್ಲುವ ಬಗೆ ಹೇಗೆ? ಆತನು ಆದಷ್ಟು ಬೇಗನೆ ಮುಂದಕ್ಕೆ ಹೋಗಬೇಕಾಗಿತ್ತು; ಆದ್ದರಿಂದ ಆತನು ಶವವನ್ನು ಕುದುರೆಯ ಮೇಲೆ ಹೇರಿಕೊಂಡು, ತಾನೂ ಕುದುರೆಯನ್ನು ಹತ್ತಿ ಓಡಿಸುತ್ತ ನಡೆದನು.

ಮಾಣಿಕಲಾಲನು ಬೆಳಗಾಗುವವರೆಗೆ ಹಾದಿಯನ್ನು ನಡೆದನು. ಮೂರು ದಿನಗಳ ವರೆಗೆ, ಹಾವು ಕಡಿದವರಿಗೆ ಜೀವಂತವಿರುತ್ತದೆಂಬುದು ಆತನಿಗೆ ಗೊತ್ತಿದ್ದಿತು. ಆತನು ಒಂದು ಗಿಡದ ಬುಡದಲ್ಲಿ ಮುಬಾರಕನ ಶವವನ್ನು ಇಳಿಸಿ, ಈತನ ಔಷಧದ ಜೋಡಣೆಯೊಳಗಿಂದ ಒಂದು ಗುಳಿಗೆಯನ್ನು ತೆಗೆದು, ತೆಯ್ದು ಶಸ್ತ್ರದಿಂದ ಮುಬಾರಕನ ಮೈಯಲ್ಲಿ ಅಲ್ಲಲ್ಲಿ ಗಾಯಮಾಡಿ, ಆ ಗಾಯಗಳಲ್ಲಿ ಆ ಔಷಧವನ್ನು ತುಂಬಿದನು; ಹೀಗೆ ಪೆಟ್ಟಿನ ಮೇಲೆ ಪೆಟ್ಟಿನಂತೆ ನಾಲ್ಕು ಸಾರೆ ಔಷಧವನ್ನು ತುಂಬಲು, ಆತನಿಗೆ ಎಚ್ಚರಹುಟ್ಟಿ, ಆತನು ಕಣ್ಣುತೆರೆದು ಮಾಣಿಕಲಾಲನನ್ನು ನೋಡತೊಡಗಿದನು. ಆಗ ಮಾಣಿಕಲಾಲನು ಸ್ವಲ್ಪ ದೂರದಲ್ಲಿರುವ ಕುರಿಯಹಿಂಡಿಗೆ ಹೋಗಿ ಕುರಿಯ ಹಾಲನ್ನು ತಂದು ಮುಬಾರಕನಿಗೆ ಕುಡಿಸಿದನು. ಕೆಲಹೊತ್ತಿನ ಮೇಲೆ ಮುಬಾರಕನು ಪೂರಾ ಎಚ್ಚತ್ತನು. ತನಗೆ ಹಾವು ಕಡಿದದ್ದು ಆತನ ನೆನಪಿಗೆ ಬಂದಿತು. ಆತನು ಮಾಣಿಕಲಾಲನನ್ನು ಕುರಿತು—

ಮುಬಾರಕ—''ನನ್ನ ಜೀವವನ್ನು ಯಾರು ಬದುಕಿಸಿದರು? ನೀವು ಬದುಕಿಸಿದರೋ?''

ಮಾಣಿಕಲಾಲ—''ಹೌದು, ನಾನೇ ಬದುಕಿಸಿದೆನು.''

ಮುಬಾರಕ—''ನೀವು ನನ್ನನ್ನು ಯಾಕೆ ಬದುಕಿಸಿದಿರಿ! ನಿಮ್ಮ ಗುರುತು ನನಗೆ ಹತ್ತಿತು. ನಾನು ನಿಮ್ಮೊಡನೆ ಕಾದಿರುತ್ತೇನೆ. ಆಗ ನೀವು ನನ್ನನ್ನು ಸೋಲಿಸಿದ್ದಿರಿ.''

ಮಾಣಿಕಲಾಲ—''ನನಗೂ ನಿಮ್ಮ ಗುರುತು ಹತ್ತಿರುತ್ತದೆ; ಆದರೆ ನಿಮ್ಮ ಅವಸ್ಥೆಯು ಹೀಗೆ ಯಾಕಾಯಿತು?''

ಮುಬಾರಕ—''ಅದನ್ನು ಈಗ ಹೇಳಲಾರೆನು, ಯೋಗ್ಯ ಪ್ರಸಂಗದಲ್ಲಿ ಹೇಳೇನಂತೆ. ಈಗ ಉದೇಪುರಕ್ಕೆ ನೀವು ಹೋಗುತ್ತಿರುವಿರೋ?''

ಮಾಣಿಕಲಾಲ—''ಹೌದು.''

ಮುಬಾರಕ—''ನನ್ನನ್ನೂ ಸಂಗಡ ಕರೆದುಕೊಂಡು ಹೋಗುವಿರಾ? ನನಗೆ ರಾಜಶಾಸನವಾಗಿರುವುದರಿಂದ ನಾನು ತಿರುಗಿ ದಿಲ್ಲಿಗೆ ಹೋಗುವ ಹಾಗಿಲ್ಲೆಂಬುದು ನಿಮ್ಮ ಮನಸ್ಸಿಗೆ ಹೊಳೆದಿರಬಹುದು.''

ಮಾಣಿಕಲಾಲ—''ನಿಮ್ಮ ಮರಣದ ಸುದ್ದಿಯನ್ನು ನಾನು ದಿಲ್ಲಿಯಲ್ಲಿಯೇ ಕೇಳಿರುವೆನು. ನಿಮ್ಮ ಇಚ್ಛೆಯಿದ್ದರೆ ಸಂತೋಷದಿಂದ ನಾನು ನಿಮ್ಮನ್ನು ಉದಯಪುರಕ್ಕೆ ಕರೆದುಕೊಂಡು ಹೋಗುವೆನು.''

ಮುಬಾರಕನು ಉದಯಪುರಕ್ಕೆ ಬರುವೆನೆಂದು ಹೇಳಿದ್ದರಿಂದ ಮಾಣಿಕಲಾಲನು ಆತನ ಸಲುವಾಗಿ ಒಂದು ಕುದುರೆಯನ್ನು ಕೊಂಡು ಆತನೊಡನೆ ಉದಯಪುರಕ್ಕೆ ಹೊರಟನು. ಇತ್ತ ಮುಬಾರಕನ ಹೆಂಡತಿಯಾದ ದರಿಯಾಬೀಬಿಗೆ ಗಂಡನು ಸತ್ತ ಸುದ್ದಿಯನ್ನು ಕೇಳಿ ಹುಚ್ಚು ಹಿಡಿಯಿತು. ಅತ್ತ ನಸೀರುದ್ದೀನನು—''ಮುಬಾರಕನು ಬದುಕಲಿಲ್ಲವೆಂ''ದು ಸುದ್ದಿಯನ್ನು ಹೇಳಿದ್ದರಿಂದ, ಜಿಬುನ್ನಿಸೆಯು ದುಃಖಪಟ್ಟು ನಿರಾಶಳಾದಳು!

## ಬಾದಶಹನ ಮನೋರಾಜ್ಯ!

ಔರಂಗಜೇಬನು ಮೇವಾಡದ ಮಹಾರಾಣಾ ಜಯಸಿಂಹನನ್ನು, ಬರಿಯ ಸೋಲಿಸ ಬೇಕೆಂತಲೇ ಅಲ್ಲ, ದುರ್ಯೋಧನನು ಪಾಂಡವರನ್ನು ಸಮೂಲ ನಾಶಮಾಡಲು ಇಚ್ಛಿಸಿದಂತೆ, ಜಯಸಿಂಹನನ್ನು ಸಮೂಲ ನಾಶಮಾಡಬೇಕೆಂದು ಇಚ್ಛಿಸಿದ್ದರಿಂದ, ಆತನು ಪ್ರಚಂಡ ಸೈನ್ಯವನ್ನು ಕೂಡಿಸಬೇಕಾಯಿತು. ಆ ಮಾನದಿಂದ ಸೈನ್ಯವನ್ನು .ಕೂಡಿಸಲಿಕ್ಕೆ ವಿಲಂಬವೂ ಆಯಿತು. ಕೌರವ–ಪಾಂಡವರ ಯುದ್ಧವು ಕುರುಕ್ಷೇತ್ರದಲ್ಲಿ ಆದಂದಿನಿಂದ ಇತ್ತ ಇಷ್ಟು ದೊಡ್ಡ ಸೈನ್ಯವನ್ನು ಕೂಡಿಸುವ ಪ್ರಸಂಗವು ಕ್ವಚಿತ್ತಾಗಿ ಬಂದಿರಬಹುದೆಂದು ತೋರುತ್ತದೆ. ಉತ್ತರದಲ್ಲಿ ಕಾಶ್ಮೀರ ದೇಶದಿಂದ ದಕ್ಷಿಣದಲ್ಲಿ ಕೇರಳ ದೇಶದವರೆಗೆ, ಪೂರ್ವದಲ್ಲಿ ಬ್ರಹ್ಮಪುತ್ರಾ ನದಿಯ ಪ್ರದೇಶದಿಂದ ಪಶ್ಚಿಮದಲ್ಲಿ ಬಾಲ್ಹಿಕ ದೇಶದವರೆಗೆ ಇರುವ ಔರಂಗಜೇಬನ ಸೈನ್ಯವೆಲ್ಲ ಉದಯಪುರದ ರಾಜ್ಯದ ಮೇಲೆ ಸಾಗಿಬರುತ್ತಲಿತ್ತು. ದಕ್ಷಿಣದಲ್ಲಿ ವಿಜಾಪೂರ–ಗೋವಳಕೊಂಡಗಳ ಬಾದಶಹರ ಸಂಗಡ ಹಾಗು ಶಿವಾಜಿಯ ಸಂಗಡ ಕಾದತೊಡಗಿದ್ದ ಔರಂಗಜೇಬನ ಹಿರಿಯಮಗನಾದ ಶಹಾಅಲಮನ ಕೈಕೆಳಗಿನ ಬಲಿಷ್ಠ ಸೈನ್ಯವು ಉತ್ತರಕ್ಕೆ ಸಾಗಿ, ಹಾದಿಯೊಳಗಿನ ಹಳ್ಳಿಗಳನ್ನೂ, ಪಟ್ಟಣಗಳನ್ನೂ ಸುಲಿಯುತ್ತ ಮೇವಾಡದ ಮೇಲೆ ಸಾಗಿಬಂದಿತು. ಬಾದಶಹನ ಮತ್ತೊಬ್ಬ ಮಗನ ಹೆಸರು ಎರಡನೆಯ ಶಹಾಅಲಮ ಅಥವಾ ಮುಅಝೀಮ ಎಂಬುದಾಗಿತ್ತು. ಆತನು ಬಂಗಾಲದ ಅಧಿಪತಿಯಾಗಿದ್ದು, ತನ್ನ ಕೈಕೆಳಗಿನ ಲಕ್ಷಾವಧಿ ಸೈನ್ಯವನ್ನು ಸಾಗಿಸಿಕೊಂಡು ಬಂದು ಮೇವಾಡದ ಪರ್ವತಶಿಖರವನ್ನು ಏರಿ ರಜಪೂತರನ್ನು ಯುದ್ಧಕ್ಕಾಗಿ ಕರೆದನು. ಪಂಜಾಬ, ಕಾಬೂಲ, ಕಾಶ್ಮೀರಗಳಲ್ಲಿಯ ಪ್ರಚಂಡ ಸೈನ್ಯದ ಆಧಿಪತ್ಯವನ್ನು ಔರಂಗಜೇಬನ ಮೂರನೆಯ ಮಗನಾದ ಅಕಬರಶಹನು ವಹಿಸಿ, ಉದಯಪುರದ ಮೇಲೆ ಸಾಗಿಬರುತ್ತಲಿದ್ದನು. ನಡುಗಡ್ಡೆಯನ್ನು ಸಮುದ್ರವು ಸುತ್ತಿಕೊಂಡಿರುವಂತೆ, ಔರಂಗಜೇಬನ ಸೇನಾಸಾಗರವು ಮೇವಾಡದ ರಾಜ್ಯವನ್ನು ಸುತ್ತಿಕೊಂಡಿತು; ಆದರೆ ಇಂತಹ ಪ್ರಚಂಡ ಸೈನ್ಯವನ್ನು ನೋಡಿ ರಾಜಸಿಂಹನು ಸ್ವಲ್ಪವೂ ಹೆದರಲಿಲ್ಲವೆಂಬುದು ಆಶ್ಚರ್ಯದ ಸಂಗತಿಯೇ ಸರಿ!

ಹೀಗೆ ನಾಲ್ಕೂ ದಿಕ್ಕುಗಳಿಂದ ಸಾಗಿಬಂದಿರುವ ಬಾದಶಹನ ಸೇನಾಸಾಗರವನ್ನು ನೋಡಿ, ರಣಪಂಡಿತನಾದ ವೀರಾಗ್ರಣಿ ರಾಜಸಿಂಹನು ತನ್ನ ಸೈನ್ಯದಲ್ಲಿ ಮೂರು ಭಾಗಗಳನ್ನು ಮಾಡಿ, ಅಲ್ಲಲ್ಲಿ ಆಯಕಟ್ಟಿನ ಸ್ಥಳಗಳನ್ನು ನೋಡಿ ಒಂದೊಂದು ಭಾಗವನ್ನು ನಿಲ್ಲಿಸಿದನು. ಖಡ್ಗ-ಧನುರ್ಬಾಣಗಳ ಯುದ್ಧದಲ್ಲಿ ಪೌರಾಣಿಕ ಕಾಲದಿಂದಲೂ ಭಾರತೀಯರನ್ನು ಸರಿಗಟ್ಟುವವರು ಯಾರೂ ಇದ್ದಿಲ್ಲವೆಂದು ಹೇಳಬಹುದು. ಅಂತಹ ಯುದ್ಧವಿಶಾರದರಾದ ಭಾರತೀಯ ವೀರರ ಪೌರಾಣಿಕ ಕಾಲದಿಂದಿತ್ತ ಕಡೆಯ ಮಾಲಿಕೆಯಲ್ಲಿ ರಾಜಸಿಂಹನ ಹೆಸರು ಪ್ರಕಾಶಿಸುತ್ತಿರುವುದು! ರಾಜಸಿಂಹನು ಪರ್ವತದ ಬುಡದ ಬೈಲುಪ್ರದೇಶವನ್ನು ತೆರವು ಇಟ್ಟುಬಿಟ್ಟು, ತನ್ನ ಸೈನ್ಯವನ್ನು ಪರ್ವತದ ಶಿಖರಗಳ ಮೇಲೆ ಅಲ್ಲಲ್ಲಿ ಒಟ್ಟುಗೂಡಿಸಿದನು. ತನ್ನ ಸೈನ್ಯದ ಒಂದು ಭಾಗದ ಒಡೆತನವನ್ನು ತನ್ನ ಹಿರಿಯ ಮಗನಾದ ಕುಮಾರ ಜಯಸಿಂಗನಿಗೆ ಕೊಟ್ಟು, ಆತನನ್ನು ಉದೇಪುರದ ಬಳಿಯ ಪರ್ವತಶಿಖರಕ್ಕೆ ಕಳಿಸಿದನು. ಚಿಕ್ಕ ಮಗನಾದ ಭೀಮಸಿಂಗನನ್ನು ಸೈನ್ಯದ ಎರಡನೆಯ ಭಾಗದ ಸೇನಾಪತಿಯನ್ನಾಗಿ ಮಾಡಿ, ಪಶ್ಚಿಮದಿಕ್ಕಿನ ಪರ್ವತದ ಮೇಲೆ ಆತನನ್ನು ಕಳಿಸಿದನು. ತನಗೆ ಹೊತ್ತಿನಲ್ಲಿ ಹೊರಗಿನಿಂದ ಸಹಾಯ ದೊರೆಯಲಿಕ್ಕೆ ಮಾರ್ಗವಿರಬೇಕೆಂದು ತಿಳಿದು ಪೂರ್ವದಿಕ್ಕನ್ನು ತೆರವು ಇಟ್ಟು, ತಾನು ಸ್ವತಃ ಸೈನ್ಯದ ಮೂರನೆಯ ಭಾಗದ ಸೇನಾಪತಿಯಾಗಿ 'ನಯನ' ಎಂಬ ಹೆಸರಿನ ಕಂದರದಲ್ಲಿ ಅಡಗಿಕೊಂಡು ಕುಳಿತನು. ರಾಜಸಿಂಹನ ಈ ಬಗೆಯ ಚಾತುರ್ಯದ ಸೇನಾರಚನೆಯಿಂದ ಔರಂಗಜೇಬನ ಬಂಗಾಲ ಪ್ರಾಂತದ ಹಾಗು ದಕ್ಷಿಣದೇಶದ ಸೈನ್ಯಗಳಿಗೆ ಮಿಸುಕಾಡಲಿಕ್ಕೆ ಮಾರ್ಗವಿಲ್ಲದಾಗಿ, ಅವು ಶಸ್ತ್ರಗಳನ್ನು ಎತ್ತಲಾರದೆ ಕೈಮುಚ್ಚಿಕೊಂಡು ಕುಳಿತುಕೊಳ್ಳಬೇಕಾಯಿತು. ಮುಲತಾನದ ಸೈನ್ಯವು ರಾಜಸಿಂಹನ ಹೊಡೆತದಿಂದ ದಿಕ್ಕುಗೆಟ್ಟು ಓಡಿ ಹೋಯಿತು!

ಇತ್ತ ಔರಂಗಜೇಬ ಬಾದಶಹನ ಅಪ್ಪಣೆಯಂತೆ ಆತನ ಮೂರನೆಯ ಮಗ ಅಕಬರಶಹನು ತನ್ನ ಐವತ್ತು ಸಾವಿರ ಸೈನ್ಯವನ್ನು ಕಟ್ಟಿಕೊಂಡು ಗುಡ್ಡಗಾಡ ಹಾದಿಯಿಂದ ಉದೇಪುರವನ್ನು ಮುಟ್ಟಿದನು. ಹಾದಿಯಲ್ಲಿ ಆತನನ್ನು ಯಾರೂ ಪ್ರತಿಬಂಧಿಸಲಿಲ್ಲ. ಅಕಬರಶಹನು ಉದೇಪುರವನ್ನು ಪ್ರವೇಶಿಸಿದಾಗ ಅಲ್ಲಿಯ ತೋಟಪಟ್ಟಿಗಳು ಹಾಳಾಗಿರುವುದನ್ನು ನೋಡಿ, ಮೊದಲು ಅಸಮಾಧಾನಪಟ್ಟನು; ಆದರೆ ಕಡೆಯಲ್ಲಿ ಆತನಿಗೆ, ರಜಪೂತರೇ ಅದನ್ನು ಹಾಳುಮಾಡಿ ತನಗೆ ಅಂಜಿ ಎಲ್ಲಿಯೋ ಅವರು ಓಡಿಹೋಗಿರುವರೆಂಬುದು ಗೊತ್ತಾಯಿತು. ಅಕಬರಶಹನು ಒಂದು ವಿಸ್ತಾರವಾದ ಸ್ಥಳ ನೋಡಿ ಸೈನ್ಯದ ಬೀಡುಬಿಟ್ಟು, ಸೈನಿಕರಿಗೆ ಆನಂದದಿಂದ ಕಾಲಹರಣಮಾಡಲು ಆಜ್ಞಾಪಿಸಿದನು. ತನ್ನ ಪ್ರಚಂಡ ಸೈನ್ಯದ ಮುಂದೆ ರಜಪೂತರ ಪಾಡೇನೆಂದು ಆ ಶಹಾಜಾದನು ತಿಳಿದಿದ್ದನು. ಸೈನ್ಯದಲ್ಲಿ ನಾಚು-ರಂಗುಗಳು ನಡೆದವು. ಮದ್ಯಪಾನಾದಿ ಅನಾಚಾರಗಳೂ ಸಾಗಿದವು. ಹೀಗೆ ಬಾದಶಹನ ಸೈನ್ಯವು ಚಕ್ಕಂದದಿಂದ ಕಾಲಹರಣ ಮಾಡುತ್ತಿರುವಾಗ ಕುಮಾರ ರಾಜಸಿಂಹನು ತನ್ನ ವೀರ ಸೈನಿಕರೊಡನೆ ಅಕಸ್ಮಾತ್ತಾಗಿ ಸಾಗಿಬಂದು ಮೊಗಲ ಸೈನ್ಯವನ್ನು ತುಂಡರಿಸಹತ್ತಿದನು.

ಪಾಪ! ಅನುಭವವಿಲ್ಲದ ಅಕಬರಶಹನು ರಜಪೂತರ ರಣರಕ್ಕಸತನವನ್ನು ಅರಿಯೇ ಅರಿಯನು! ಆಗಿನ ಯುದ್ಧದಲ್ಲಿ ಬಾದಶಹನ ಐವತ್ತುಸಾವಿರ ಸೈನ್ಯವು ಎಷ್ಟು ಪರಿಶ್ರಮದಿಂದ ಕಾದಿದರೂ ಕುಮಾರ ಜಯಸಿಂಹನ ಪರಾಕ್ರಮದ ಮುಂದೆ ಅದರ ಆಟವು ನಡೆಯಲಿಲ್ಲ, ಕುಮಾರ ಜಗಸಿಂಗನು ಮೊಗಲ ಸೈನ್ಯವನ್ನು ತುಂಡರಿಸಿ ಚೆಲ್ಲಿದನು. ಉಳಿದ ಸೈನಿಕರು ಓಡಿದರು. ಕಡೆಗೆ ಅಕಬರಶಹನು ನಾಲ್ಕುಜನ ಅಂಗರಕ್ಷಕರೊಡನೆ ಗುಜರಾಥದ ಕಡೆಗೆ ಓಡಿಹೋದದ್ದರಿಂದ ಬದುಕಿ ಉಳಿದನು. ಆತನು ತನ್ನ ಉಳಿದ ಸೈನ್ಯದೊಡನೆ ಒತ್ತಟ್ಟಿಗೆ ಸಿಕ್ಕಿಕೊಂಡು ಬೀಳಬೇಕಾಯಿತು.

ಹೀಗೆ ಬಾದಶಹನ ಇಬ್ಬರು ಮಕ್ಕಳೂ ಶಸ್ತ್ರವೆತ್ತಲಿಕ್ಕೂ ಮಾರ್ಗವಿಲ್ಲದಂತೆ ಸಿಕ್ಕಿಬಿದ್ದುಬಿಟ್ಟಿದ್ದರು. ಅಕಬರಶಹನ ಸೈನ್ಯದ ಸಂಹಾರವಾಗಿ ಆತನು ಗುಜರಾಥದ ಕಡೆಗೆ ಓಡಿ ಅಲ್ಲಿಯೊತ್ತಟ್ಟಿಗೆ ಸಿಕ್ಕಿಬಿದ್ದನು. ಮುಲ್ತಾನದ ಸೈನ್ಯವಂತೂ ರಾಜಸಿಂಹನ ಹೊಡೆತದಿಂದ ದಿಕ್ಕುಗೆಟ್ಟು ಓಡಿಹೋಗಿತ್ತು ಇನ್ನು ಯುದ್ಧ ಮಾಡಲಿಕ್ಕೆ ಉಳಿದದ್ದೆಂದರೆ, ಸ್ವತಃ ಬಾದಶಹನ ಸೈನ್ಯವು. ಆತನು ಉದಯಸಾಗರ ಸರೋವರದ ದಂಡೆಯಲ್ಲಿ ಸೈನ್ಯದ ತಳವೂರಿ ಕುಳಿತುಕೊಂಡಿದ್ದನು. ತನ್ನ ಸೈನ್ಯಗಳ ಗತಿಯು ಹೀಗಾದುದನ್ನು ನೋಡಿ ಬಾದಶಹನು ಸಂತಾಪದಿಂದ ತಾನೇ ಸೈನ್ಯವನ್ನು ಸಾಗಿಸಿಕೊಂಡು ಹೋಗಲು ಸಿದ್ಧನಾದನು. ಮೊಗಲ ಬಾದಶಹರು ಯುದ್ಧಕ್ಕೆ ಹೋಗುವಾಗ ಸಂಗಡ ಬೇಗಮೆಯರನ್ನು ಕರೆದುಕೊಂಡು ಹೋಗುವ ಸಾಂಪ್ರದಾಯವಿತ್ತು, ಅದರಂತೆ ಔರಂಗಜೇಬನು ತನ್ನ ಯಾವತ್ತೂ ಬೇಗಮೆರನ್ನು ಸಂಗಡ ಕರೆದುಕೊಂಡು ಬಂದಿದ್ದನಲ್ಲದೆ, ಆತನ ಮಗಳಾದ ಜಿಬುನ್ನಿಸಾ ಶಹಾಜಾದಿಯೂ ಆತನ ಸಂಗಡ ಬಂದಿದ್ದಳು. ಜೋಧಪುರೀ ಬೇಗಮಳ ಸಂಗಡ ನಿರ್ಮಲೆಯೂ ಬಂದಿದ್ದಳು. ರಾಜಧಾನಿಯಲ್ಲಿಯಂತೆ ಬೇರೆ ಬೇರೆ ಬೇಗಮೆಯರು ಬೇರೆ ಬೇರೆ ರಾಹುಟಿಗಳಲ್ಲಿ ವಾಸಿಸುತ್ತಿದ್ದರು. ರಾತ್ರಿಯಾದ ಬಳಿಕ ಬಾದಶಹನು ಜೋಧಪುರೀ ಬೇಗಮಳ ರಾಹುಟಿಗೆ ಬಂದು ಮಾತನಾಡುತ್ತ ಕುಳಿತಿದ್ದನು. ತನ್ನ ಸೈನ್ಯದ ದುರ್ದೆಸೆಯಾದದ್ದರಿಂದ ಒಳಗೆ ನೊಂದುಕೊಂಡಿದ್ದ ಬಾದಶಹನು, ನಿರ್ಮಲೆಯ ಸಂಗಡ ಮಾತನಾಡಿ ತನ್ನ ಮನಸ್ಸನ್ನು ಸಮಾಧಾನಪಡಿಸಿ ಕೊಳ್ಳುವುದಕ್ಕಾಗಿಯೇ ಅಲ್ಲಿಗೆ ಬಂದಿದ್ದನೆಂದು ಹೇಳಬಹುದು. ಬಾದಶಹನು ನಿರ್ಮಲೆಯನ್ನು 'ಇಮಲಿ ಬೇಗಮೆ' ಎಂದು ಕರೆಯುತ್ತಿದ್ದನು. ಆತನು ಉಲ್ಲಾಸಪಟ್ಟವನಂತೆ ಆಕೆಯನ್ನು ಕುರಿತು—

ಬಾದಶಹ—''ಇಮಲಿ ಬೇಗಮೇ, ನೀನು ನನ್ನವಳೋ, ರಜಪೂತರವಳೋ?''

ನಿರ್ಮಲೆ—''ಜಹಾಪನಾರು ಯಾವತ್ತೂ ದುನಿಯಾದ ವಿಚಾರ ಮಾಡುತ್ತಿರುವಿರಿ. ಈ ಮಾತಿನ ನಿರ್ಣಯವನ್ನು ತಾವೇ ಮಾಡಬೇಕು.''

ಬಾದಶಹ—''ನೀನು ರಜಪೂತನ ಮಗಳು, ರಜಪೂತ ಹೆಂಗಸು, ರಜಪೂತಳ ಸಖಿಯು ಇರುವುದರಿಂದ ರಜಪೂತರವಳೇ ಸರಿ. ನನ್ನವಳು ಹೇಗೆ ಆದೀ!''

ನಿರ್ಮಲೆ—(ಶಾಂತರೀತಿಯಿಂದ) ''ಜಹಾಪನಾಹ! ಇದೇನು ಯೋಗ್ಯ ನಿರ್ಣಯವಾಯಿತೋ? ನಾನು ರಜಪೂತ ಸ್ತ್ರೀಯಿರುವಂತೆ ಜೋಧಪುರೀ ಬೇಗಮು ಸಾಹೇಬರೂ ರಜಪೂತ ಸ್ತ್ರೀಯಾಗಿರುವರು; ಅದರಂತೆ ನಿಮ್ಮ ತಾಯಿ, ನಿಮ್ಮ ಅಜ್ಜಿ ಮೊದಲಾದವರೂ ರಜಪೂತರ ಮಕ್ಕಳೇ ಆಗಿದ್ದಿಲ್ಲವೇನು? ಅವರು ನಿಮ್ಮವರಲ್ಲವೇ?''

ಔರಂಗಜೇಬ—''ನೀನು ಹೇಳುವವರೆಲ್ಲರೂ ಮೊಗಲ ಬಾದಶಹರ ರಾಣಿಯರಾಗಿದ್ದರು, ನೀನು ರಜಪೂತ ಸ್ತ್ರೀಯಾಗಿರುತ್ತೀ!''

ನಿರ್ಮಲೆ—(ಮುಗುಳುನಗೆಯಿಂದ) ''ನಾನು ಶಹಾನಶಹಾ ಅಲಮಗೀರರವರ ಇಮಲೀ ಬೇಗಮಳಾಗಿರುವುದಿಲ್ಲವೇನು?''

ಬಾದಶಹ— ''ಇಲ್ಲ, ನೀನು ರೂಪನಗರದ ಚಂಚಲಕುಮಾರಿಯ ಸಖಿಯಾಗಿರುತ್ತೀ.''

ನಿರ್ಮಲೆ—''ಜೋಧಪುರೀ ಬೇಗಮರೂ ರೂಪನಗರ ಚಂಚಲ ಕುಮಾರಿಯ ಸಖಿಯಾಗಿರುತ್ತಾರೆ.''

ಔರಂಗಜೇಬ— ''ಹಾಗಾದರೆ ಈ ನ್ಯಾಯದಿಂದ ನೀನೂ ನನ್ನವಳಾದೆ. ಆದರೆ ಇಮಲೀಬೇಗಮು, ನಾನು ನಾಳೆ ಉದಯಪುರದ ಮೇಲೆ ದಂಡೆತ್ತಿ ಹೋಗಿ ಅದನ್ನು ಸ್ವಾಧೀನಪಡಿಸಿಕೊಳ್ಳುವೆನು. ಆಗ ನಮ್ಮವಳಾದ ನೀನು ನನ್ನದೊಂದು ಕೆಲಸ ಮಾಡುವೆಯಾ?''

ನಿರ್ಮಲೆ—''ಶಹಾನಶಹರು ಯಾವ ಕೆಲಸವೆಂಬುದನ್ನು ಮೊದಲು ಹೇಳಬೇಕು, ಆಮೇಲೆ ವಚನ ಕೊಡುವೆನು.''

ಬಾದಶಹ—''ನಿನ್ನ ಸಖಿಯಾದ ಚಂಚಲಕುಮಾರಿಯು ನನ್ನ ಕೈಸೇರುವಂತೆ ನೀನು ಮಾಡಬೇಕು; ಯಾಕೆಂದರೆ ಆಕೆಯು ವಿಷಕುಡಿದಾಗಲಿ, ಬೆಂಕಿಯಲ್ಲಿ ಸುಟ್ಟುಕೊಂಡಾಗಲಿ ಸತ್ತಾಳೆಂಬ ಅಂಜಿಕೆಯು ನನಗಿದೆ! ಆಕೆಯನ್ನು ನಾನು ಬೇಗಮಳಾಗಿ ಮಾಡಿಕೊಳ್ಳಬೇಕಾಗಿರುವುದರಿಂದ, ನಮ್ಮವಳಾದ ನೀನು, ಆಕೆಯು ಜೀವದಿಂದ ನನ್ನ ಕೈಗೆ ಸಿಗುವಂತೆ ಮಾಡಬೇಕು.''

ಬಾದಶಹನ ಈ ಮಾತುಗಳನ್ನು ಕೇಳಿ ನಿರ್ಮಲೆಯು ಮನಸ್ಸಿನಲ್ಲಿ ನಕ್ಕಳು. ''ಹಾಲಿಲ್ಲ– ಬಟ್ಟಲಲ್ಲಿ ಗುಟುಕ್ಕೆಂದಂತೆ'' ಬಾದಶಹನು ಮಾತಾಡುತ್ತಿರುವುದನ್ನು ನೋಡಿ ಆಕೆಗೆ ನಗೆಯು ಬಂದದ್ದು ಆಶ್ಚರ್ಯವಲ್ಲ. ಬಾದಶಹನು ನಿರ್ಮಲೆಯ ಗುಣಗಳಿಗೂ, ಸೌಂದರ್ಯಕ್ಕೂ ಲುಬ್ಧನಾಗಿಹೋದದ್ದರಿಂದ, ಆತನಿಗೆ ನಿರ್ಮಲೆಯ ಹೃದಯದ ನಿಜವಾದ ಸ್ವರೂಪವು ಗೊತ್ತಾಗಿದ್ದಿಲ್ಲವೆಂದು ಹೇಳಬಹುದು. ಚಂಚಲಕುಮಾರಿಯ ಹಿತಕ್ಕಾಗಿ ಕಷ್ಟಪಡುತ್ತಿರುವ ನಿರ್ಮಲೆಯು ಬಾದಶಹನನ್ನು ಕುರಿತು—

ನಿರ್ಮಲೆ—''ಜಹಾಪನಾಹ, ಮೊದಲು ಉದಯಪುರವನ್ನಂತು ಸ್ವಾಧೀನಪಡಿಸಿಕೊಳ್ಳಿರಿ; ಆಮೇಲೆ ಚಂಚಲಕುಮಾರಿಯನ್ನು ಒಪ್ಪಿಸುವುದು ನನಗೆ ಕೂಡಿತು; ಆದರೆ ಆಕೆಯನ್ನು ಜೀವದಿಂದಲೇ ನಿಮಗೆ ಒಪ್ಪಿಸುವೆನೆಂದು ತಮಗೆ ನಾನು ಹೇಗೆ ನಂಬಿಗೆಯಿಂದ ಹೇಳಲಿ?''

ಬಾದಶಹ—''ನಿನ್ನಲ್ಲಿ ನನಗೆ ನಂಬಿಗೆಯಿದೆ. ನೀನು ಈ ಕಾರ್ಯವನ್ನು ಯುಕ್ತಿಯಿಂದ ಸಾಧಿಸುವುದಕ್ಕಾಗಿ ಬೇಕಾದರೆ ಈಗಲೇ ಉದೇಪುರಕ್ಕೆ ಹೋಗಬಹುದು.''

ನಿರ್ಮಲೆ—''ಅನಕಾ ಖಾವಿಂದರವರ ಸೈನ್ಯದ ಸಂಗಡಲೇ ಇದ್ದು ಸಮಯ ನೋಡಿ ಉದೇಪುರಕ್ಕೆ ಹೋಗುವೆನು. ಬೇಕಾದಾಗ ನನಗೆ ಹೋಗಗೊಡುವಂತೆ ಜೋಧಪುರೀ ಬೇಗಮರಿಗೆ ಅಪ್ಪಣೆ ಮಾಡಿರಬೇಕು.''

ಬಾದಶಹ—''ಅವಶ್ಯವಾಗಿ ಅಪ್ಪಣೆ ಮಾಡುವೆನು, ಇಮಲೀ ಬೇಗಮ! ನಿನ್ನ ಗುಣಗಳಿಗೆ ಲುಬ್ದನಾಗಿದ್ದ ನಾನು ನಿನಗೆ ವಚನ ಕೊಡುತ್ತೇನೆ. ನಿನಗೆ ಅಂತಹ ಪ್ರಸಂಗ ವೇನಾದರೂ ಬಂದರೆ, ನೀನು ನನಗೆ ತಿಳಿಸಿದಲ್ಲಿ ನಿನ್ನನ್ನು ಕೃಪಾದೃಷ್ಟಿಯಿಂದ ನಾನು ನೋಡದೆ ಇರುವುದಿಲ್ಲ.''

ನಿರ್ಮಲೆ—(ಬಾದಶಹನಿಗೆ ಸಲಾಮು ಮಾಡಿ) ''ನಾನು ಬೇಡಿಕೊಳ್ಳುವುದನ್ನು ಈಗಲೇ ಬೇಡಿಕೊಂಡುಬಿಡುತ್ತೇನೆ. ಮೊಗಲರಿಗೂ, ರಜಪೂತರಿಗೂ ಕಲ್ಯಾಣವಾಗುವಂತಹ ಒಡಂಬಡಿಕೆಯನ್ನು ಮಾಡಿಕೊಳ್ಳುವ ಪ್ರಸಂಗ ಒದಗಿದಾಗ ನನ್ನ ಸೂಚನೆಗಳನ್ನು ಕೃಪಾದೃಷ್ಟಿಯಿಂದ ನೋಡಬೇಕು.''

ಬಾದಶಹ—''ಅಂತಹ ಪ್ರಸಂಗ ಬಂದರೆ ಯೋಗ್ಯ ವಿಚಾರ ಮಾಡಲಾಗುವುದು.''

ಔರಂಗಜೇಬನ ಈ ಉತ್ತರವನ್ನು ಕೇಳಿ ನಿರ್ಮಲೆಯು ತಾನು ಸಾಕಿದ್ದೊಂದು ಪಾರಿವಾಳವನ್ನು ಆತನಿಗೆ ತೋರಿಸಿ—''ಈ ಪಾರಿವಾಳವು ಕಲಿಸಿದ್ದಿರುತ್ತದೆ. ಇದು ನಿಮ್ಮ ಬಳಿಯಲ್ಲಿರಲಿ! ತಮಗೆ ನನ್ನ ನೆನಪಾದಾಗ ಇದರ ಕೊರಳಿನಲ್ಲಿ ಪತ್ರವನ್ನು ಕಟ್ಟಿ ಹಾರಿಸಿ ಬಿಡಿರಿ, ಅದು ನನ್ನ ಬಳಿಗೆ ಬರುವುದು. ಅದರ ಮುಖಾಂತರವಾಗಿಯೇ ನಾನು ತಮಗೆ ಪತ್ರ ಬರೆದು ಬೇಡಿಕೊಳ್ಳುವೆನು.''

ಇಷ್ಟು ಮಾತು–ಕಥೆಗಳಾದ ಬಳಿಕ ಔರಂಗಜೇಬನು ರಾಹುಟಿಯಿಂದ ಹೊರಬಿದ್ದು ದಂಡೆತ್ತಿಹೋಗುವ ಸಿದ್ಧತೆಯನ್ನು ಮಾಡತೊಡಗಿದನು.

## ವಿನಾಶಕಾಲಕ್ಕೆ ವಿಪರೀತ ಬುದ್ಧಿ!

ಬೆಳಗೆ ಬೆಳಗಾಗುತ್ತಿರಲು, ಬಾದಶಹನ ಸೈನ್ಯವು ಮುಂದಕ್ಕೆ ಸಾಗಿತು. ಹಾದಿಯನ್ನು ಸರಿಮಾಡುವ ಜನರು ಹಾದಿಯನ್ನು ಸರಿಮಾಡುತ್ತ ಮುಂದಕ್ಕೆ ನಡೆದರು. ತೋಪುಗಳನ್ನು ಎಳೆಯುವ ಎತ್ತುಗಳು ಸೊಕ್ಕಿರುವುದರಿಂದ ಒತ್ತರದಿಂದ ಸಾಗಿದವು. ಒಟ್ಟಿನಲ್ಲಿ ಸೈನ್ಯವು ಬಹಳ ದೊಡ್ಡದಿದ್ದುದರಿಂದ ಅದರ ಕಾಲತುಳಿತಕ್ಕೆ ಧೂಳೆದ್ದು ಕತ್ತಲೆ ಮುಸುಕಿದಂತಾಗತೊಡಗಿತು. ತೋಪುಗಳನ್ನು ನೋಡಿಯೇ ಜನರ ಹೃದಯಗಳು ನಡುಗುತ್ತಿದ್ದವು. ತೋಪುಖಾನೆಯ ಹಿಂದೆ ಖಜಾನೆಯನ್ನು ಕಾಯುವ ಸೈನ್ಯವು ಸಾಗಿಬರುತ್ತಲಿತ್ತು, ಅವಿಶ್ವಾಸ ಸ್ವಭಾವದ ಔರಂಗಜೇಬನು

ತಾನು ಹೋದಲ್ಲಿ ತನ್ನ ಖಜಾನೆಯನ್ನು ಸಂಗಡ ಒಯ್ಯುತ್ತಿದ್ದನು. ಈ ಖಜಾನೆಯ ಹಿಂದಿನಿಂದ ಆನೆ-ಒಂಟೆಗಳ ಮೇಲೆ ಹೇರಿದ ದಫ್ತರಖಾನೆಯು ಸಾಗಿಬರುತ್ತಲಿತ್ತು. ದಫ್ತರಖಾನೆಯ ಹಿಂದೆ ಗಂಗಾಜಲದಿಂದ ತುಂಬಿದ ಪಕಾಲಿಗಳನ್ನು ಹೇರಿದ ಎತ್ತುಗಳೂ, ಒಂಟೆಗಳೂ ಸಾಗಿದ್ದವು. ಯಾಕೆಂದರೆ ಬಾದಶಹನು ಯಾವಾಗಲೂ ಗಂಗಾಜಲವನ್ನೇ ಕುಡಿಯುತ್ತಿದ್ದನು. ಗಂಗಾಜಲದ ಹಿಂದೆ ಆಹಾರದ ಪದಾರ್ಥಗಳು, ಅವುಗಳ ಹಿಂದೆ ಪೋಷಾಕು-ಜವಾಹಿರುಗಳು ಮೊದಲಾದ ಪದಾರ್ಥಗಳು ಸಾಗಿದ್ದವು. ಅವುಗಳ ಹಿಂದೆ ಅಸಂಖ್ಯ ಕಾಲಾಳುಗಳು ಸೈನ್ಯವು ಸಾಗಿಬರುತ್ತಿತ್ತು.

ಈ ಮೇರೆಗೆ ಸೈನ್ಯದ ಮುಂಭಾಗವು ಸಾಗಿರುವಾಗ ಅದರ ಮಧ್ಯಭಾಗದಲ್ಲಿ ಸ್ವತಃ ಬಾದಶಹನು ಹಾಗು ಆತನ ಖಾಸ ಸೈನ್ಯವು ಸಾಗಿಬರುತ್ತಿದ್ದವು. ಬಾದಶಹನ ಮುಂದೆ ಆನೆ-ಒಂಟೆಗಳ ಮೇಲೆ ಲೋಭಾನದ ಹೊಗೆಯು ಹೊರಟು, ಅದರ ಸುವಾಸನೆಯು ಎಷ್ಟೋ ಹರದಾರಿಗಳವರೆಗೆ ಪಸರಿಸುತ್ತಲಿತ್ತು. ಆ ಧೂಪದ ಆನೆ-ಒಂಟೆಗಳ ಹಿಂದೆ ಶೃಂಗರಿಸಿದ ಕುದುರೆಗಳನ್ನು ಹತ್ತಿಕೊಂಡು ಹಾದಿಯ ಎರಡೂ ಮಗ್ಗಲು ಹಿಡಿದು ಒಳ್ಳೇ ಶಿಸ್ತಿನಿಂದ ಸಾಲಾಗಿ ಬರುವ ಕುದುರೆಗಳು ಶೋಭಿಸುತ್ತಿದ್ದವು. ಆ ಕುದುರೆಯ ಸಾಲುಗಳ ಮಧ್ಯದಲ್ಲಿ ಮುತ್ತು-ರತ್ನಗಳಿಂದ ಮುಚ್ಚಿಹೋಗಿರುವ ಕುದುರೆಯನ್ನೇರಿ ಬಾದಶಹನ ಸವಾರಿಯು ಸಾಗಿಬರುತ್ತಲಿತ್ತು. ಆತನ ತಲೆಯ ಮೇಲೆ ಮುತ್ತಿನ ಝಾಲರದಿಂದೊಪ್ಪುವ ಛತ್ರವನ್ನು ಹಿಡಿದಿದ್ದರು. ಬಾದಶಹನ ಹಿಂದಿನಿಂದ ಆತನ ಶೂರರಾದ ರಾವುತರು ಸಾಗಿಬರುತ್ತಿದ್ದರು. ಆ ರಾವುತರ ಹಿಂದಿನಿಂದ ಬೇಗಮರು ಹಿಂಡು ಸಾಗಿಬರುತ್ತಲಿತ್ತು. ಅವರಲ್ಲಿ ಮುಖ್ಯರಾದ ಉದೇಪುರೀಬೇಗಮು, ಜೋಧಪುರೀ ಬೇಗಮು ಮೊದಲಾದವರು ಶೃಂಗರಿಸಿದ ಆನೆಗಳ ಮೇಲಿನ ಅಂಬಾರಿಯಲ್ಲಿ ಕುಳಿತು ಸಾಗಿಬರುತ್ತಲಿದ್ದರು. ಜಿಬುನ್ನಿಸೆಯ ಆನೆಯೂ ಒಳ್ಳೇ ವೈಭವದಿಂದ ಸಾಗಿಬರುತ್ತಲಿತ್ತು. ಅದರ ಹಿಂದೆ ಮತ್ತೆ ಸೈನಿಕರ ಸಾಲುಗಳು ಸಾಗಿಬರುತ್ತಿದ್ದವು. ಅವರ ಹಿಂದೆ ದಿಲ್ಲಿಯ ವ್ಯಾಪಾರಸ್ಥರ ಹಾಗು ದೊಡ್ಡ ದೊಡ್ಡ ಸಾಹುಕಾರರ ಹಿಂಡು ಸಾಗಿಬರುತ್ತಿತ್ತು. ಇವೇ ಮೊದಲಾದ ಗೌರವದ ಜನರ ಗುಂಪುಳ್ಳದ್ದು ಸೈನ್ಯದ ಮಧ್ಯಭಾಗವಾಗಿತ್ತು.

ಸೈನ್ಯದ ಮೂರನೆಯ ಹಿಂದಿನ ಭಾಗದಲ್ಲಿ ಕಾಲಾಳ ಸೈನ್ಯವು ಸಾಗಿದ್ದು, ಎಲ್ಲಕ್ಕೂ ಹಿಂದೆ ಸಣ್ಣಪುಟ್ಟ ದಾಸಿಯರು, ಕೂಲಿಕಾರರು, ಪಾತರದವರು ಮೊದಲಾದವರು ಸಾಗಿಬರುತ್ತಲಿದ್ದರು. ಆಷಾಢ-ಶ್ರಾವಣಮಾಸಗಳಲ್ಲಿಯ ಗಂಗಾ ಪ್ರವಾಹವು ತನ್ನ ದಂಡೆಯ ಮೇಲಿನ ಹಳ್ಳಿಗಳನ್ನು ಕೊಚ್ಚಿಕೊಂಡು ಒತ್ತರದಿಂದ ಸಮುದ್ರದ ಕಡೆಗೆ ಸಾಗಿಹೋಗುತ್ತಿರುವುದಕ್ಕಿಂತಲೂ ಹೆಚ್ಚು ಒತ್ತರವಾಗಿ, ಬಾದಶಹನ ಪ್ರಚಂಡ ಸೈನ್ಯವು ಉದಯಪುರದ ಕಡೆಗೆ ಸಾಗಿಹೋಗುತ್ತಲಿತ್ತು; ಆದರೆ ಅಕಸ್ಮಾತ್ತಾಗಿ ಆ ವೇಗದ ಪ್ರವಾಹಕ್ಕೆ ವಿಘ್ನವುಂಟಾಯಿತು. ಮೊದಲು ಶಹಾಜಾದಾ ಅಕಬರನು ಉದಯಪುರಕ್ಕೆ ಹೋದ ದಾರಿಯಿಂದಲೇ ಬಾದಶಹನು ಈಗ ಸೈನ್ಯದೊಡನೆ ಸಾಗಿದ್ದನು. ಅಕಬರನ ಸೋಲಿನ ಸೇಡು ತೀರಿಸಿಕೊಳ್ಳುವುದು ಬಾದಶಹನಿಗೆ ಅವಶ್ಯವಾಗಿದ್ದಿತು. ಹಾದಿಯಲ್ಲಿ ಕುಮಾರ ಜಯಸಿಂಹನ ಸೈನ್ಯವು ಎದುರಾದರೆ ಅದನ್ನು ತುಂಡರಿಸಿ ಉದೇಪುರಕ್ಕೆ

ಹೋಗಿ ಅದನ್ನು ಸುಲಿದು ಸುಟ್ಟು ಸೂರೆ ಮಾಡಬೇಕೆಂದು ಬಾದಶಹನು ಹೊರಟಿದ್ದನು; ಆದರೆ ಆತನು ಗುಡ್ಡದ ಕಣಿವೆಯ ಹಾದಿಯನ್ನು ಹೋಗುವಷ್ಟರಲ್ಲಿ ಮಗ್ಗಲಿನ ಗುಡ್ಡದ ಮೇಲೆ ರಾಜಸಿಂಹನ ಸೈನ್ಯವು ಸಜ್ಜಾಗಿರುವುದು ಆತನ ಕಣ್ಣಿಗೆ ಬಿದ್ದಿತು. ಹೀಗೆ ಶತ್ರುವು ಮಗ್ಗುಲಲ್ಲಿ ಯುದ್ಧಕ್ಕೆ ಸಿದ್ಧನಾಗಿರುವಾಗ ತನಗೆ ನಿಶ್ಚಯವಾಗಿ ಸೋಲು ಬರವುದೆಂದು ತಿಳಿದು, ಬಾದಶಹನು ಹಿಂದಕ್ಕೆ ತಿರುಗಿ ರಾಜಸಿಂಹನ ಸೈನ್ಯಕ್ಕೆ ಎದುರಾಗಬೇಕೆಂದು ಮಾಡಿದನು. ಆದರೆ ಗುಡ್ಡದ ಇಕ್ಕಟ್ಟಿನ ಸ್ಥಳದಲ್ಲಿ ಆತನ ಪ್ರಚಂಡ ಸೈನ್ಯಕ್ಕೆ ಹಾಗೆ ಮಾಡಲು ಅನುಕೂಲವಾಗ ಲೊಲ್ಲದು. ಬಾದಶಹನು ಹಟಮಾರಿತನದಿಂದ ಹಾಗೆ ತಿರುಗಿದ್ದರೆ ಜಯಸಿಂಹನು ಗುಡ್ಡದ ಮೇಲಿಂದ ಇಳಿದುಬಂದು ಬಾದಶಹನ ಸೈನ್ಯವನ್ನು ಇತ್ತಂಡವಾಗಿ ಮಾಡಿ ಅದನ್ನು ತುಂಡರಿಸಿ ಚೆಲ್ಲಬಹುದಾಗಿತ್ತು; ಆದ್ದರಿಂದ ಯುದ್ಧವಿಶಾರದನಾದ ಬಾದಶಹನಿಗೆ ದಿಗಿಲುಬಿದ್ದು ಮುಂದೇನು ಮಾಡಬೇಕೆಂಬ ಆಲೋಚನೆಯುಂಟಾಯಿತು!

ಬಾದಶಹನು ಉದಯಪುರಕ್ಕೆ ಹೋಗುವ ಎರಡನೆಯ ದಾರಿಯನ್ನು ವಿಚಾರಿಸ ತೊಡಗಿದನು. ಆದರೆ ಆತನಿಗೆ ಮತ್ತೊಂದು ದಾರಿಯು ಗೊತ್ತಾಗಲೊಲ್ಲದು. ಆತನು ನಿರ್ಮಲೆಗೆ ಹಾದಿಯನ್ನು ಕೇಳಿಸಲು, ತಾನು ಗೋಷೆಯ ಹೆಂಗಸಾದದ್ದರಿಂದ ತನಗೆ ಹಾದಿಯು ಗೊತ್ತಿಲ್ಲವೆಂದು ಆಕೆಯು ಹೇಳಿ ಕಳಿಸಿದಳು. ಕೆಲಹೊತ್ತಿನ ಮೇಲೆ ಬಖ್ತಖಾನನೆಂಬ ಬಾದಶಹನ ಮನಸಬದಾರನು ಬಾದಶಹನ ಬಳಿಗೆ ಬಂದು, ಉದೇಪುರಕ್ಕೆ ಹೋಗುವುದೊಂದು ಹಾದಿಯು ತೆರವು ಇರುತ್ತದೆಂತಲೂ, ಅದು ಬಹಳ ಕಿರಿದಾಗಿದ್ದರೂ ಒಳದಾರಿಯಾಗಿರುವುದೆಂದಲೂ, ಆ ದಾರಿಯಲ್ಲಿ ರಜಪೂತರ ಸೈನ್ಯದ ಸುದ್ದಿಯಿರುವು ದಿಲ್ಲವೆಂತಲೂ ಒಬ್ಬ ಮೊಗಲ ವ್ಯಾಪಾರಸ್ಥನು ತನಗೆ ಹೇಳಿದನೆಂದು ಅರಿಕೆಮಾಡಿಕೊಂಡನು. ತಾನು ಕಣ್ಣುಟ್ಟ ಆ ಹಾದಿಯನ್ನು ನೋಡಿ ಬಂದಿರುವೆನೆಂತಲೂ ಆ ಮನಸಬದಾರನು ಬಾದಶಹನಿಗೆ ಹೇಳಿದನು. ಆ ಕಠಿಣ ಮಾರ್ಗದಿಂದ ಬಾದಶಹನು ಹೊಗಲಿಕ್ಕಿಲ್ಲವೆಂದು ತಿಳಿದು, ರಾಜಸಿಂಹನು ಅಲ್ಲಿ ಸೈನ್ಯವನ್ನು ಇಟ್ಟಿದ್ದಿಲ್ಲ; ಆದರೆ 'ವಿನಾಶಕಾಲಕ್ಕೆ ವಿಪರೀತ ಬುದ್ಧಿ'ಯೆನ್ನುವಂತೆ ಬಾದಶಹನು ಮಾಡಬಾರದಷ್ಟು ಚಿಕಿತ್ಸೆ ಮಾಡಿದರೂ, ಕಡೆಗೆ ಅದೇ ದಾರಿಯಿಂದಲೇ ಹೋಗಲಿಕ್ಕೆ ಸಿದ್ಧನಾದನು. ತನ್ನ ಉಳಿದ ಸೈನ್ಯದ ಭಾಗವು ಹಿಂದಿನಿಂದ ಬರಲೆಂದು ಹೇಳಿ, ಬೇಗಮರು, ಖಜಾನೆ, ಅನ್ನಸಾಮಗ್ರಿ ಮೊದಲಾದವನ್ನು ಹಿಂದೆಬಿಟ್ಟು, ತನ್ನ ಖಾಸ ಸೈನ್ಯದೊಡನೆ ಆ ಇಕ್ಕಟ್ಟಿನ ಕಠಿಣ ಮಾರ್ಗವನ್ನು ಪ್ರವೇಶಿಸಿದನು. ಹೀಗೆ ತನ್ನ ಬೇಟೆಯು ದಾವತಿಯಿಲ್ಲದೆ ಬಲೆಯಲ್ಲಿ ಬೀಳುವುದನ್ನು ನೋಡಿ ರಾಜಸಿಂಹನು ಸಮಾಧಾನ ಪಟ್ಟು, ಬಾದಶಹನ ಸೈನ್ಯದೊಡನೆ ಗುಡ್ಡದ ಮೇಲಿಂದ ಆ ಹಾದಿಯ ಕಡೆಗೆ ತಾನೂ ಸಾಗಿದನು. ಬಾದಶಹನು ತನ್ನ ಖಾಸ ಸೈನ್ಯದೊಡನೆ ಮುಂದಕ್ಕೆ ಸಾಗಿಹೋಗಿ ಕಣಿವೆಯನ್ನು ಹೊಕ್ಕನು. ಇನ್ನು ಬೇಗಮರು ಕಣಿವೆಯನ್ನು ಸೇರತಕ್ಕವರು, ಅಷ್ಟರಲ್ಲಿ ರಾಜಸಿಂಹನು ಗುಡ್ಡದ ಮೇಲಿಂದ ಸೈನ್ಯದೊಡನೆ ಇಳಿದು ಬಂದುಬೇಗಮರಿದ್ದ ಸೈನ್ಯದ ಭಾಗಕ್ಕೆ ಎದುರಾದನು. ಅದನ್ನು ನೋಡಿ ಬೇಗಮರು ಕೈಕಾಲುಬಿಟ್ಟರು. ಯುದ್ಧಮಾಡಿದರೆ ಬೇಗಮರಿಗೆ ಗಾಯ

ವಾದೀತೆಂದು ತಿಳಿದು ಬಾದಶಹನ ಸೈನ್ಯದವರು ಶಸ್ತ್ರಗಳನ್ನು ಒರೆಗಳಿಂದ ಕೂಡ ಹಿರಿಯಲಿಲ್ಲ; ಆದ್ದರಿಂದ ರಾಜಸಿಂಹನ ಸೈನ್ಯದವರು ಅನಾಯಾಸವಾಗಿ ಬೇಗಮರನ್ನು ಸೆರೆಹಿಡಿಯ ಬಹುದಾಗಿತ್ತು; ಹೆಂಗಸರ ಗೊಡವೆಗೆ ರಜಪೂತರು ಸರ್ವಥಾ ಹೋಗತಕ್ಕ ವರಲ್ಲದಿದ್ದರೂ ರಾಜಸಿಂಹನು ಚಂಚಲಕುಮಾರಿಯು ಹೇಳಿದಂತೆ ಉದೇಪುರೀ ಬೇಗಮ ಳೊಬ್ಬಳನ್ನು ಉದಯಪುರಕ್ಕೆ ಕಳಿಸುವುದಕ್ಕಾಗಿ ಸ್ವಾಧೀಪಡಿಸಿಕೊಂಡು, ಉಳಿದ ಬೇಗಮರನ್ನೆಲ್ಲ ಬಾದಶಹನ ಬಳಿಗೆ ಹೋಗಗೊಟ್ಟನು. ಮಾಣಿಕಲಾಲನು ಮುಬಾರಕನ ಹೇಳಿಕೆಯಂತೆ ಜಿಬುನ್ನಿಸಾ ಶಹಾಜಾದಿ ಯೊಬ್ಬಳನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಮಹಾರಾಣಾನನ್ನು ಪ್ರಾರ್ಥಿಸಲು, ಆಕೆಯೊಬ್ಬಳು ಉದೇಪುರೀ ಬೇಗಮರೊಡನೆ ಉದೇಪುರಕ್ಕೆ ಹೋಗ ಬೇಕಾಯಿತು! ಅವರ ಸಂಗಡ ನಿರ್ಮಲೆಯೂ ಹೋದಳೆಂದು ಬೇರೆ ಹೇಳುವ ಕಾರಣವಿಲ್ಲ.

ಬೇಗಮರೆಲ್ಲ ಕಣಿವೆಯನ್ನು ಪ್ರವೇಶಿಸಿದ ಬಳಿಕ ರಾಜಸಿಂಹನು ಬಾದಶಹನ ಅಮೋಘವಾದ ಖಜಾನೆಯನ್ನು ಸಂಪೂರ್ಣವಾಗಿ ಸುಲಿದು, ಬಾದಶಹನ ಅನ್ನಸಾಮಗ್ರಿ ಯಲ್ಲಿಯ ಯೋಗ್ಯ ಪದಾರ್ಥಗಳನ್ನು ತನ್ನ ಅನ್ನ ಸಾಮಗ್ರಿಯಲ್ಲಿ ಕೂಡಿಸಿ, ಉಳಿದ ಮಾಂಸ ಮೊದಲಾದವನ್ನು ನರಿ–ನಾಯಿ–ಹದ್ದುಗಳ ಪಾಲುಮಾಡಿದನು. ಬಾದಶಹನ ಖಜಾನೆಯೂ, ಅನ್ನಸಾಮಗ್ರಿಯೂ ಕೈಸೇರಿದ್ದರಿಂದ ರಾಜಸಿಂಹನಿಗೆ ದೊಡ್ಡ ಲಾಭವಾಯಿತು. ಈ ಸಂಧಿಯಲ್ಲಿ ಮೊಗಲ ಸೈನ್ಯವು ರಾಜಸಿಂಹನೊಡನೆ ಯುದ್ಧಕ್ಕೆ ಸಿದ್ಧವಾಗಲು, ಆತನು ಅದಕ್ಕೆ ಹಾದಿಯನ್ನು ಬಿಟ್ಟು ಹಿಂದಕ್ಕೆ ಸರಿದನು. ಕೂಡಲೆ ಮುಸಲ್ಮಾನ ಸೈನಿಕರು ದೀನದೀನ ಶಬ್ದಮಾಡುತ್ತ ಕಣಿವೆಯನ್ನು ಪ್ರವೇಶಿಸಿದರು. ಈ ಪ್ರಸಂಗದಲ್ಲಿ ರಾಜಸಿಂಹನು ತನ್ನ ಸೈನಿಕರಿಗೆ—"ವೀರರೇ, ನೀವು ಬಾದಶಹನ ಸೈನ್ಯವನ್ನು ಪ್ರತಿಬಂಧಿಸುವ ಗೊಡವೆಗೆ ಹೋಗಬೇಡಿರಿ. ಅನಯಾಸ ವಾಗಿಯೇ ಅವರು ಸಾವಿನ ಹಾದಿಯಲ್ಲಿ ಬೀಳುತ್ತಿರುವರು. ರಕ್ತದ ಹನಿಯನ್ನೂ ಕೆಡವದೆ ಬಾದಶಹನನ್ನು ಹಣ್ಣುಮಾಡುವ ಹಾದಿಯು ದೇವರ ದಯದಿಂದ ಸಿಕ್ಕಿರುವಾಗ, ಸುಮ್ಮನೆ ಸೈನ್ಯದ ಸಂಹಾರವನ್ನು ಯಾಕೆ ಮಾಡಬೇಕು?" ಎಂದು ಹೇಳಿ, ಬಾದಶಹನ ಸೈನ್ಯವನ್ನೆಲ್ಲ ಸುರಕ್ಷಿತವಾಗಿ ಕಣಿವೆಯೊಳಗೆ ಹೋಗಗೊಟ್ಟನು. ಈ ಎಲ್ಲ ಅನುಕೂಲತೆಯು ಮುಬಾರಕ ನಿಂದ ತನಗೆ ಆಯಿತೆಂದು ರಾಜಸಿಂಹನು ತಿಳಿದು, ಅತ್ಯಂತ ಕೃತಜ್ಞತೆಯಿಂದ ಮಾಣಿಕಲಾಲ ನನ್ನು ಕುರಿತು"ಮಾಣಿಕಲಾಲ, ಮೊಗಲ ವ್ಯಾಪಾರಸ್ಥನ ವೇಷದಿಂದ ಮುಬಾರಕನು ಈ ಕಠಿಣ ಮಾರ್ಗವನ್ನು ಬಾದಶಹನಿಗೆ ತೋರಿಸದಿದ್ದರೆ, ರಣಭೂಮಿಯಲ್ಲಿ ರಕ್ತದ ಕಾಲುವೆಯನ್ನು ಹರಿಸಬೇಕಾಗುತ್ತಿತ್ತು; ಈ ಉಪಕೃತಿಗಾಗಿ ನಾನು ಮುಬಾರಕನನ್ನು ಈಗಲೇ ಅಭಿನಂದಿಸ ಬೇಕಾಗಿದೆ; ಆದ್ದರಿಂದ ಆತನನ್ನು ಕರೆಸು. ನಿನ್ನ ಹೇಳಿಕೆಯಂತೆ ಆತನನ್ನು ಈಗ ಒಂದು ಸೈನ್ಯದ ಮುಖ್ಯಾಧಿಕಾರಿಯನ್ನಾಗಿ ಮಾಡಿದ್ದರೂ, ಆತನಿಂದಾದ ಸಹಾಯವು ಬಹಳ ಮಹತ್ವದ್ದಾದ್ದ ರಿಂದ ಆತನನ್ನು ಇದಕ್ಕೂ ಹೆಚ್ಚು ಸತ್ಕರಿಸುವುದು ಅವಶ್ಯವಾಗಿರುವುದು" ಎಂದು ಹೇಳಿದನು. ಕೂಡಲೆ ಮಾಣಿಕಲಾಲನು ಮುಬಾರಕನನ್ನು ಕರೆತರಲು, ರಾಜಸಿಂಹನು ಆತನನ್ನು ಬಹಳವಾಗಿ ಹೊಗಳಿ—

ರಾಜಸಿಂಹ—''ಮುಬಾರಕ, ನಿನ್ನ ಚಾತುರ್ಯದಿಂದ ನಮ್ಮ ಬಹುಜನರ ಪ್ರಾಣ ರಕ್ಷಣವಾಗಿ, ಬಾದಶಹನು ಅನಾಯಾಸವಾಗಿ ಬಲೆಯಲ್ಲಿ ಸಿಕ್ಕಿಬಿದ್ದನು. ನಿನ್ನ ಗುರುತನ್ನು ಯಾರಾದರೂ ಹಿಡಿದಿದ್ದರೆ, ನಿನ್ನ ಜೀವವು ಉಳಿಯುತ್ತಿದ್ದಿಲ್ಲ; ಒಟ್ಟಿನಲ್ಲಿ ನಮ್ಮ ಹಿತದ ಸಲುವಾಗಿ ನೀನು ಬಹು ದೊಡ್ಡ ಸಹಾಯ ಮಾಡಿದೆ.''

ಮುಬಾರಕ—(ಕೈ ಜೋಡಿಸಿ) ''ಮಹಾರಾಜ, ನನ್ನನ್ನು ಹುಗಿದುಬಂದದ್ದು ಎಲ್ಲರಿಗೂ ಗೊತ್ತಿದ್ದುದರಿಂದ, ನನ್ನ ಗುರುತು ಹತ್ತಿದರೂ ನನ್ನನ್ನು ಮುಬಾರಕನೇ ಎಂದು ಯಾರೂ ತಿಳಿಯುವ ಹಾಗಿದ್ದಿಲ್ಲ. ನಿಮ್ಮವರಾದ ಮಾಣಿಕಲಾಲಸಿಂಹರವರಿಂದ ನನ್ನ ಪ್ರಾಣರಕ್ಷಣ ವಾಗಿರುವಾಗ, ಪುಣ್ಯಶಾಲಿಗಳಾದ ನಿಮ್ಮ ಪ್ರಭಾವವೇ ನನ್ನಿಂದ ಈ ಕಾರ್ಯವನ್ನು ಮಾಡಿಸಿತು! ಮಹಾರಾಜ, ಇದರಲ್ಲಿ ನನ್ನ ಪ್ರತಿಷ್ಠೆಯೇನು?''

ರಾಜಸಿಂಹ—''ಮುಬಾರಕ, ನಿಮ್ಮಂತಹ ನಿಸ್ಪೃಹಿ ವೀರರಿಗೆ ನಿನ್ನ ಈ ಮಾತುಗಳು ಬಹಳವಾಗಿ ಒಪ್ಪುತ್ತವೆ; ಆದರೂ ಈ ಪ್ರಸಂಗದಲ್ಲಿ ನಾನು ನಿನ್ನ ಹಿತವೇನು ಮಾಡಲಿ ಹೇಳು.''

ಮುಬಾರಕ—''ಮಹಾರಾಜ, ನನ್ನ ಉದ್ಧಟತನಕ್ಕಾಗಿ ಕ್ಷಮಿಸಬೇಕು! ನಾನು ಮೊಗಲನಿದ್ದು ಮೊಗಲಬಾದಶಹನ ಕೇಡು ಬಗೆದಿರುತ್ತೇನೆ. ನಾನು ಮುಸಲ್ಮಾನನಿದ್ದು ಹಿಂದೂ ಅರಸರ ಪ್ರತಿಷ್ಠೆಯನ್ನು ಹೆಚ್ಚಿಸುವ ಕೆಲಸ ಮಾಡಿದ್ದೇನೆ. ನಾನು ಬಾದಶಹನ ಅನ್ನವನ್ನು ಉಂಡು ಆತನ ಅಹಿತವನ್ನು ಚಿಂತಿಸಿರುತ್ತೇನೆ; ಸುಳ್ಳು ಮಾತಾಡಿ ಸ್ವಾಮಿದ್ರೋಹ ಮಾಡಿದ್ದೇನೆ. ನನ್ನ ಈ ಎಲ್ಲ ಅಪರಾಧಗಳಿಗಾಗಿ ನನ್ನನ್ನು ತೋಫಿನ ಬಾಯಿಗೆ ಕೊಟ್ಟು ಆಕಾಶದಲ್ಲಿ ಹಾರಿಸಿಬಿಡಬೇಕು! ಇನ್ನು ಬದುಕಿ ಇರಲು ನಾನು ಇಚ್ಛಿಸುವುದಿಲ್ಲ.''

ರಾಜಸಿಂಹ—(ಆಶ್ಚರ್ಯದಿಂದ) ''ನಿನ್ನ ಮನಸ್ಸಿಗೆ ಇಷ್ಟು ದುಃಖವಾಗಿದ್ದರೆ, ಇಂತಹ ಕೆಲಸವನ್ನು ನೀನು ಯಾಕೆ ಮಾಡಿದೆ? ನನಗೆ ಮೊದಲೇ ಈ ಮಾತು ತಿಳಿಸಲಿಕ್ಕಿಲ್ಲವೆ? ನಾನು ಬೇರೊಂದು ಹಾದಿಯಿಂದ ನನ್ನ ಕಾರ್ಯವನ್ನು ಸಾಧಿಸುತ್ತಿದ್ದೆನು. ಒಬ್ಬರ ಮನಸ್ಸನ್ನು ನೋಯಿಸುವುದು ನನಗೆ ಸೇರುವುದಿಲ್ಲ.''

ಮುಬಾರಕ—''ಮಹಾರಾಣಾಜೀ, ತಾವು ಸತ್ಯಪಕ್ಷಪಾತಿಗಳೆಂಬುದು ಜಗತ್ಪ್ರಸಿದ್ಧ ವಾಗಿರುವುದು. ಬಾದಶಹನ ಅನ್ನದಿಂದ ಬೆಳೆದ ದೇಹವನ್ನು ಬಾದಶಹನು ಸರ್ಪದಂಶದಿಂದ ನಾಶಮಾಡಿಬಿಟ್ಟನು; ಈ ದೇಹವು ಕೇವಲ ತಮ್ಮ ಪುಣ್ಯದಿಂದ ಬದುಕಿ ಉಳಿದದ್ದರಿಂದ ತಮ್ಮ ಹಿತವನ್ನು ಮಾಡಲು ಬದ್ಧವಾಗಿದೆ; ಅಂತೆಯೇ ಅಲ್ಲಾನು ಈ ಕಾರ್ಯವನ್ನು ಮಾಡಲು ನನ್ನನ್ನು ಪ್ರೇರಿಸಿದನು; ಆದರೆ ಮಹಾರಾಜ, ಈ ಕಾರ್ಯಕ್ಕಾಗಿ ನಿಮ್ಮಿಂದ ಪ್ರತಿಫಲ ಪಡೆಯುವುದು ಯೋಗ್ಯವಾಗಬಹುದೇ? ಇದರ ಮೇಲೆಯೂ ನನಗೇನಾದರೂ ಕೊಡ ಬೇಕೆಂದು ತಾವು ಇಚ್ಛಿಸುತ್ತಿದ್ದರೆ, ನನ್ನ ಸ್ವಾಮಿಯೆಂಬ ಅಭಿಮಾನವು ಹೋಗದಿರುವ ನನಗೆ, ಔರಂಗಜೇಬ ಬಾದಶಹನ ಪಕ್ಷದಿಂದ ನಿಮ್ಮೊಡನೆ ಯುದ್ಧಮಾಡಲಿಕ್ಕೆ ಅಪ್ಪಣೆ ಕೊಡಿರಿ; ಇದಲ್ಲದೆ ನನ್ನನ್ನು ಅನ್ಯಾಯದಿಂದ ಕೊಲ್ಲಿಸಿದ ಜೆಬುನ್ನಿಸಾ ಶಹಾಜಾದಿಯನ್ನು

ನಾನು ಒಮ್ಮೆ ಕಾಣುವುದಕ್ಕಾಗಿ ಒಪ್ಪಿಗೆಯನ್ನು ದಯಪಾಲಿಸಿರಿ. ಇವೆರಡರ ಹೊರತು ನನ್ನ ಮೂರನೆಯ ಬೇಡಿಕೆಯು ಯಾವುದೂ ಇರುವುದಿಲ್ಲ.''

ಮುಬಾರಕನ ಈ ಮಾತುಗಳಿಗೆ ಉದಾರಮನಸ್ಸಿನ ರಾಜಸಿಂಹನು ಬಹಳವಾಗಿ ಮೆಚ್ಚಿದನು. ಮಾಣಿಕಲಾಲನ ಮುಖಾಂತರವಾಗಿ ಮುಬಾರಕನ ಮರಣದ ಸುದ್ದಿಯನ್ನು ಈ ಮೊದಲೆ ಮಹಾರಾಣಾನು ಸಂಪೂರ್ಣವಾಗಿ ಕೇಳಿದ್ದನು. ಆತನು ಮುಬಾರಕನನ್ನು ಕುರಿತು—''ಮುಬಾರಕ, ನೀನು ಅತ್ಯಂತ ಉದಾರ ಹೃದಯದ ವೀರನಿರುತ್ತೀ. ನಿಮ್ಮಂತಹ ವೀರರು ಔರಂಗಜೇಬ ಬಾದಶಹನ ಪದರಿನಲ್ಲಿರುವುದರಿಂದಲೇ ಆತನ ಹಲವು ಪಾಪಕೃತ್ಯಗಳ ಪ್ರಾಯಶ್ಚಿತ್ತವು ಇನ್ನೂವರೆಗೆ ಆತನಿಗೆ ದೊರೆಯದೆ ಹೋಗಿರುತ್ತದೆ; ನಾಳೆ ನೀನು ಅವಶ್ಯವಾಗಿ ಔರಂಗಜೇಬ ಬಾದಶಹನ ಬಳಿಗೆ ಹೋಗು. ಮಾಣಿಕಲಾಲನು ನಿನಗೆ ಜಿಬುನ್ನಿಸಾ ಬೇಗಮಳನ್ನು ಕಾಣುವ ಯೋಗವನ್ನು ತಂದುಕೊಡುವನು'' ಎಂದು ಹೇಳಿ, ಆತನನ್ನು ಬಹಳವಾಗಿ ಸನ್ಮಾನಿಸಿ ಕಳುಹಿದನು.

## ಬಾದಶಹನ ದೈನ್ಯ!

ಇತ್ತ ಔರಂಗಜೇಬ ಬಾದಶಹನು ಭಯಂಕರವಾದ ಸಂಕಟಕ್ಕೆ ಗುರಿಯಾಗಿದ್ದನು. ಆತನ ಯಾವತ್ತೂ ಸೈನ್ಯವು ಕಣಿವೆಯನ್ನು ಪ್ರವೇಶಿಸಿದ ಕೂಡಲೆ ಹೊತ್ತುಮುಳುಗಿ ಕತ್ತಲೆ ಮುಸುಕಿತು; ಆದರೆ ಆ ಕಣಿವೆಯ ಹಾದಿಯು ಇನ್ನೂ ಎಷ್ಟು ಉದ್ದ ಇರುವುದೆಂಬುದು ಯಾರಿಗೂ ಗೊತ್ತಾಗ್ತಲೊಲ್ಲದು. ಕತ್ತಲಲ್ಲಿ ಒಬ್ಬರ ಮೋರೆ ಒಬ್ಬರಿಗೆ ಕಾಣಲೊಲ್ಲವು. ಯಾವತ್ತು ಕಣಿವೆಯಲ್ಲಿ ಬೆಳಕುಮಾಡುವಷ್ಟು ಮಶಾಲಿ ದೀವಟಿಗೆ, ಹಿಲಾಲು ಮೊದಲಾದ ಸಾಧನಗಳು ಬಾದಶಹನ ಸೈನಿಕರ ಬಳಿಯಲ್ಲಿ ಇದ್ದಿಲ್ಲ. ಬೇಗಮರ ಸುತ್ತಮುತ್ತು ಮಾತ್ರ ಅಲ್ಪಸ್ವಲ್ಪ ಬೆಳಕುಮಾಡಿದರು. ಉಳಿದ ಕಡೆಯಲ್ಲೆಲ್ಲ ಕಗ್ಗತ್ತಲೆ ಮುಸುಕಿತು. ಹಾದಿಯು ಮೊದಲೇ ಗುಡ್ಡಗಾಡು ಹಾದಿಯ ತುಂಬೆಲ್ಲ ಸಣ್ಣದೊಡ್ಡ ಕಲ್ಲುಗಳು ಬಿದ್ದಿರುವುದರಿಂದ ಸೈನಿಕರು ಕತ್ತಲಲ್ಲಿ ಎಡವತೊಡಗಿದರಲ್ಲದೆ, ಎಷ್ಟೋ ಜನರು ಎಡವಿ ಬಿದ್ದೂಬಿಟ್ಟರು! ಬಿದ್ದವರನ್ನು ಎಡವಿ ಕುದುರೆಗಳು ಮುಗ್ಗರಿಸಲು, ಮೇಲಿನ ರಾವುತರು ಬೀಳತೊಡಗಿದರು. ಹಿಂದಿನವರು ಮುಂದಿನವರ ಮೇಲೆ ಅಪ್ಪಳಿಸಹತ್ತಿದರು. ಆನೆಯ ಕಾಲಲ್ಲಿ ಸಿಕ್ಕು ಎಷ್ಟೊ ಜನರು ಸತ್ತರು. ಆನೆಗಳು ಬೆದರಿ ಓಡಲು, ಅವುಗಳ ಮೇಲೆ ಕುಳಿತಿದ್ದ ಹೆಂಗಸರು ಮಾಗಿದ್ದ ಮಾವಿನ ಹಾಡುಗಳಂತೆ ಕೆಳಗೆ ನಡು ನಡುವೆ ಬೀಳತೊಡಗಿದರು! ಒಟ್ಟಿಗೆ ಆ ಕಣಿವೆಯ ಹಾದಿಯಲ್ಲಿ ಆಗ ಎಲ್ಲ ಕಡೆಯಲ್ಲಿ ಗದ್ದಲವೆದ್ದು ಹೋಯಿತು. ಪಲ್ಲಕ್ಕಿ ಹೊರುವವರಂತೂ ತೀರ ಕೈಕಾಲು ಗೆಟ್ಟರು. ಕಾಲಾಳುಗಳು ದಣಿದಿದ್ದರಿಂದ ಮುಂದಕ್ಕೆ ಹೆಜ್ಜೆ ಇಡದಾದರು. ಹೀಗೆ ಸೈನ್ಯದಲ್ಲಿ ಹಾಹಾಕಾರವಾದದ್ದರಿಂದ, ಸೈನ್ಯವು ಮುಂದಕ್ಕೆ ಹೋಗದಂತೆ ಬಾದಶಹನು ಆಜ್ಞಾಪಿಸಿದನು.

ಅಲ್ಲಿ ರಾಹುಟಿ ಹೊಡೆಯಲಿಕ್ಕಂತು ಸ್ಥಳವೇ ಇದ್ದಿಲ್ಲ. ಬಹಳ ಪ್ರಯಾಸದಿಂದ ಬೇಗಮರ ಮಟ್ಟಿಗೊಂದು ಸಣ್ಣ ರಾಹುಟಿಯನ್ನು ನಿಲ್ಲಿಸಿದರು. ಉಳಿದವರೆಲ್ಲ ಗೂಟಗಳಂತೆ ನಿಂತಲ್ಲಿ ನಿಂತುಬಿಟ್ಟರು! ಕೆಲಕೆಲವರು ಬಹಳ ಪ್ರಯತ್ನಮಾಡಿ ಹಾದಿಯ ಮಗ್ಗಲಿನ ಗುಡ್ಡಗಳ ಸಾಲಿಗೆ ಆತುಕೊಂಡು ನಿಂತುಕೊಂಡಿದ್ದರು. ರಾತ್ರಿಯ ಊಟದ ಮಾತಂತೂ ಎತ್ತುವ ಹಾಗಿದ್ದಿಲ್ಲ! ಅನ್ನಸಾಮಗ್ರಿಯೆಲ್ಲ ರಜಪೂತರ ಕೈಸೇರಿಹೋಗಿತ್ತು. ಆ ಕಣಿವೆಯ ಹಾದಿಯಲ್ಲಿ ಕುದುರೆಗಳಿಗೆ ಹುಲ್ಲು ಸಿಗದಾಗಿರಲು, ಮನುಷ್ಯರ ಊಟದ ಮಾತೇಕೆ? ಹಗಲೆಲ್ಲ ಹಾದಿಯನ್ನು ನಡೆದು ಹೊಟ್ಟೆಯು ಕರಿಕರಿ ಹಸಿದಿರಲು, ಊಟಕ್ಕೆ ಮಾರ್ಗವಿಲ್ಲದ್ದರಿಂದ ಸೈನಿಕರು ಹಣ್ಣಾದರು. ಊಟ–ನಿದ್ರೆಗಳಿಲ್ಲದಾಗಲು ಒಂದೇ ರಾತ್ರಿಯಲ್ಲಿ ಸೈನಿಕರ ಮುಸುಡೆಗಳು ಒಣಗಿ ಅವರು ಕಸುವುಗೆಟ್ಟುಹೋದರು. ಬಾದಶಹನಿಗೆ ಅನ್ನವಿಲ್ಲದ್ದೊಂದು ದುಃಖವಾಗಿರುವಾಗ ರಜಪೂತರು ಉದೇಪುರಿಯನ್ನು, ಜಿಬುನ್ನಿಸೆಯನ್ನು ಸೆರೆಹಿಡಿದುಕೊಂಡು ಹೋದರೆಂಬ ಸುದ್ದಿ ಮುಟ್ಟಲು, ಆತನು ಗಾಯದ ಮೇಲೆ ಬರೆ ಕೊಟ್ಟಂತೆ ವ್ಯಥೆಪಟ್ಟನು. ಆಗ ಬಾದಶಹನು ಸೈನಿಕರ ಮೇಲೆ ಬಹಳ ಸಿಟ್ಟಾದನು. ಎಲ್ಲ ಸೈನ್ಯವನ್ನು ಸಂಹರಿಸುವ ಸಾಮರ್ಥ್ಯವು ಆತನೊಬ್ಬನಲ್ಲಿದ್ದರೆ, ಆಗಿನ ಸಿಟ್ಟಿನ ಭರದಲ್ಲಿ ಆತನು ಸೈನಿಕರನ್ನೆಲ್ಲ ತುಂಡರಿಸಿ ಚೆಲ್ಲುತ್ತಿದ್ದನು. ಸೈನಿಕರಾದರೋ ಬಾದಶಹನ ಮೇಲೆ ಒಳಗೆ ಸಂತಾಪಗೊಂಡಿದ್ದರು. ಹೀಗೆ ಸೈನ್ಯದಲ್ಲೆಲ್ಲ ಸಂತಾಪ–ದುಃಖಗಳು ಉಂಟಾಗಿರಲು, ರಾತ್ರಿಯಲ್ಲಿ ಗುಡ್ಡಗಳ ಮೇಲೆ ಕಟ್ಟಿಗೆ ಕಡಿಯುವ ಸಪ್ಪಳವು ಕೇಳಿಸತೊಡಗಿತು; ಆದರೆ ಅದರ ಕಾರಣವು ಮಾತ್ರ ಯಾರಿಗೂ ಗೊತ್ತಾಗಲೊಲ್ಲದು. ಕೆಲವರು ಅದು ಭೂತಗಳ ಚೇಷ್ಟೆಯೆಂದು ತಿಳಿದರು.

ಹೀಗಿರುವಾಗ ಒಮ್ಮೆ ಬೆಳಗಾಯಿತು. ಬಾದಶಹನು ಮೊದಲು ಕಣಿವೆಯಿಂದ ಹೊರಬೀಳಬೇಕೆಂದು ತಿಳಿದು ಸೈನ್ಯಕ್ಕೆ ಮುಂದಕ್ಕೆ ಸಾಕಬೇಕೆಂದು ಕೂಡಲೆ ಅಪ್ಪಣೆ ಮಾಡಿದನು. ಕಣಿವೆಯನ್ನು ದಾಟಿ ಬೈಲಿಗೆ ಹೋದರೆ ಊಟವನ್ನಾದರೂ ಕಂಡೇವೆಂದು ಸೈನಿಕರು ನಾ ಮುಂದೆ ನೀ ಮುಂದೆ ಅನ್ನುತ್ತ ಹಾದಿಯನ್ನು ನಡೆಯಹತ್ತಿದರು. ಸೈನ್ಯದಲ್ಲಿ ವ್ಯವಸ್ಥೆಯು ಉಳಿಯದಾಯಿತು. ಒಬ್ಬರ ಭಯವು ಒಬ್ಬರಿಗಿಲ್ಲದಾಯಿತು. ಸೈನಿಕರು ಅವಸರದಿಂದ ಸಾಗಿ ಕಣಿವೆಯ ದಾರಿಯ ಮೋರೆಗೆ ಮುಗಿಬಿದ್ದು ಹೋಗುತ್ತಾರೆ, ದಾರಿಯು ಬಂದಾಗಿಹೋಗಿದೆ! ರಜಪೂತರು ರಾತ್ರಿಯೆಲ್ಲ ಶ್ರಮಪಟ್ಟು, ಕಟ್ಟಿಗೆ–ಕಲ್ಲುಗಳಿಂದ ಹಾದಿಯ ಮೋರೆಯನ್ನು ಮುಚ್ಚಿಬಿಟ್ಟಿದ್ದರು. ಆನೆ–ಕುದುರೆ–ಮನುಷ್ಯರಂತೂ ಇರಲಿ, ಬೆಕ್ಕು–ನಾಯಿಗಳು ಕೂಡ ಅತ್ತಕಡೆಗೆ ಹೋಗುವ ಹಾಗಿದ್ದಿಲ್ಲ. ಇದನ್ನು ಕೇಳಿ ಬಾದಶಹನಿಗೆ ದಿಗಿಲುಬಿದ್ದು, ದಾರಿಯಲ್ಲಿಯ ಕಲ್ಲು–ಕಟ್ಟಿಗೆಗಳನ್ನು ತೆಗೆದು ಚೆಲ್ಲಿ ಹಾದಿಯಲ್ಲಿ ಮಾಡಬೇಕೆಂದು ಆತನು ಕಾಲಾಳುಗಳಿಗೆ ಆಜ್ಞಾಪಿಸಿದನು. ಅವರು ದೀನ್–ದೀನ್ ಎಂದು ಒದರುತ್ತ ಆವೇಶದಿಂದ ಹಾದಿಯನ್ನು ಬಿಡಿಸತೊಡಗಲು, ಗುಡ್ಡಗಳ ಮೇಲಿನಿಂದ ಕಲ್ಲುಗಳ ಮಳೆಯು ಸುರಿಯಹತ್ತಿತು. ಆಗ ಯಾರ ಹಲ್ಲು ಮುರಿದವು, ಯಾರ ಕೈಕಾಲು ಮುರಿದವು, ಯಾರು ಸತ್ತರು! ನಡುನಡುವೆ ತುಬಾಕಿಗಳ ಗುಂಡುಗಳೂ ಸೈನಿಕನ್ನು ಕೊಲ್ಲಹತ್ತಿದವು. ಅಂದಬಳಿಕ ಹಾದಿಯು ಹೇಗಾಗಬೇಕು? ಆಗ ಬಾದಶಹನು ಸಂತಾಪ

ಗೊಂಡು ಸೈನಿಕರನ್ನು ಹಿಂದಕ್ಕೆ ಕರೆಸಿ ತಾವು ಬಂದ ದಾರಿಯಿಂದ ಹೊರಬಿದ್ದು ಹೋಗಬೇಕೆಂದು ನಿಶ್ಚಯಿಸಿದನು. ಬಾದಶಹನ ಅಪ್ಪಣೆಯಂತೆ ಸೈನಿಕರು ಬಂದ ದಾರಿಯಿಂದ ಹೊರಬೀಳುವುದಕ್ಕಾಗಿ ಹಿಂದಿರುಗಿ ಸಾಗಿದರು. ಸೈನ್ಯದಲ್ಲಿ ಆಗ ಗೊಂದಲವೆದ್ದು ಹೋಯಿತು. ಬಿಸಿಲ ತಾಪವು ಹೆಚ್ಚಾದಂತೆ ಜನರ ಹೊಟ್ಟೆಯಲ್ಲಿ ಕಸಿವಿಸಿಯಾಗಹತ್ತಿತು. ಸೈನಿಕರು ಕಷ್ಟಪಡುತ್ತ ಒತ್ತರದಿಂದ ಸಾಗಿ, ಬಂದ ದಾರಿಯ ಬಾಯಿಗೆ ಹೋಗುತ್ತಾರೆ, ಅದೂ ಕಟ್ಟಾಗಿಹೋಗಿದೆ! ಅದನ್ನು ರಜಪೂತರು ಕಲ್ಲು-ಕಟ್ಟಿಗೆಗಳಿಂದ, ಇರುವೆ ನುಸಿಯದಂತೆ ಮುಚ್ಚಿಬಿಟ್ಟಿದ್ದರು. ಅದನ್ನು ಸೈನಿಕರು ತೆಗೆದು ಹಾದಿಯನ್ನು ಮಾಡಬೇಕೆಂದರೆ ಗುಡ್ಡದ ಮೇಲಿನ ಸೈನಿಕರ ಕಾಟ! ಆ ಅವಸರದಲ್ಲಿ ರಜಪೂತರ ತೋಪುಗಳು ಹಾರಹತ್ತಿದವು; ಅದರ ಸಪ್ಪಳಕ್ಕೆ ಆನೆ-ಕುದುರೆಗಳು ಬೆದರಹತ್ತಿದವು. ಒಟ್ಟಿಗೆ ಬಾದಶಹನೂ, ಆತನ ಸೈನಿಕರೂ ಪ್ರಾಣಸಂಕಟಕ್ಕೆ ಗುರಿಯಾದರು!

ಕಷ್ಟಪಟ್ಟು ಬಂದ ದಾರಿಯಿಂದ ಹೊರಬಿದ್ದು ಹೋಗಿಯೇಬಿಡಬೇಕೆಂದು ಹಟ ಹಿಡಿದಿದ್ದರೆ ರಜಪೂತರು ಒಬ್ಬೊಬ್ಬರನ್ನಾಗಿ ಎಲ್ಲ ಸೈನ್ಯವನ್ನೂ ತುಂಡರಿಸದೆ ಬಿಡುತ್ತಿದ್ದಿಲ್ಲ. ಆಗ ಬಾದಶಹನು ಎಲ್ಲ ಸೇನಾಪತಿಗಳನ್ನೂ ಕರೆಯಿಸಿ ಆಲೋಚನೆಯನ್ನು ಕೇಳಿದನು. ಏನೇ ಆಗಲಿ, ಕಣಿವೆಯಿಂದ ಹೊರಬಿದ್ದ ಹೊರತು ಮಾರ್ಗವಿಲ್ಲವೆಂದು ತಿಳಿದು, ಎಲ್ಲ ಸೈನ್ಯವು ದಾರಿಯ ಮೇಲೆ ನುಗ್ಗಬೇಕೆಂದು ಅಪ್ಪಣೆಯಾಯಿತು; ಆದರೆ ಎಷ್ಟು ಜನರು ನುಗ್ಗಿ ಏನು ಮಾಡುವರು? ರಜಪೂತರ ಕಲ್ಲು-ಗುಂಡು-ತೋಪುಗಳ ಹೊಡೆತಗಳಿಂದ ಪ್ರಾಣಕಳೆದು ಕೊಳ್ಳುವುದರ ಹೊರತು, ಹೆಚ್ಚಿನ ಲಾಭವೇನೂ ಆಗಲಿಲ್ಲ. ರಜಪೂತರ ತೋಪುಗಳ ಅಬ್ಬರವು ಹೆಚ್ಚಿದಂತೆ ಆನೆ, ಕುದುರೆ, ಒಂಟೆಗಳು ಬೆದರಿ-ದಿಕ್ಕುಗೆಟ್ಟು ಓಡಹತ್ತಿದವು. ಮೇಲೆ ರಣಗುಟ್ಟುವ ಮಧ್ಯಾಹ್ನದ ಬಿಸಿಲು, ಅದರಲ್ಲಿ ರಜಪೂತರು ಸುರಿಸುವ ತೋಪು-ತುಬಾಕಿಗಳ ಬೆಂಕಿಯ ಮಳೆ, ಹೊಟ್ಟೆಯಲ್ಲಿ ಹಸಿವು- ನೀರಡಿಕೆಗಳ ತಾಪ! ಹೀಗಾಗಿ ಸೈನಿಕರಿಗೆ 'ಖುದಾ, ತಟ್ಟನೆ ನಮ್ಮ ಪ್ರಾಣವು ಏಕೆ ಹೋಗುವುದಿಲ್ಲ'ವೆನ್ನುವ ಹಾಗೆ ಆಯಿತು! ಅತ್ತ ಬೇಗಮರು ಒಂದೇಸವನೆ ಆಕ್ರೋಶಮಾಡಿ ಅಳತೊಡಗಿದರು. ಒಂದು ತುತ್ತು ಅನ್ನ, ಒಂದು ಗುಟುಕು ನೀರು ಸಿಕ್ಕೀತೋ ಅನ್ನುವ ಹಾಗೆ ಎಲ್ಲರಿಗೆ ಆಗಿಹೋಗಿತ್ತು! ಇದನ್ನೆಲ್ಲ ನೋಡಿ ಬಾದಶಹನು ತನ್ನ ತಲೆಯ ಮೇಲಿನ ರತ್ನಖಚಿತ ಕಿರೀಟವನ್ನು ನೆಲಕ್ಕೆ ಬಿಸುಟಿ, ಒಂದು ಕಲ್ಲನ್ನು ತಲೆಯ ಮೇಲೆ ಹೊತ್ತುಕೊಂಡು ನಿಂತನು! ಆತನ ಜನ್ಮದಲ್ಲಿ ಹೀಗೆ ಅನ್ನ-ನೀರಿಲ್ಲದೆ ಉಪವಾಸ ಕಷ್ಟಪಟ್ಟದ್ದು ಇದೇ ಮೊದಲು ಎಂದು ಹೇಳಬಹುದು. ಆತನು ಹತಾಶನಾದನು- ಯಾವ ಉಪಾಯವೂ ಆತನಿಗೆ ತೋಚದಾಯಿತು. ಆತನು ದುಃಖ-ತಾಪಗಳಿಂದ ಬೇಯುತ್ತಿರಲು, ಅವನಿಗೆ ನಿರ್ಮಲೆಯ ನೆನಪಾಯಿತು. ಆತನು ಆಕೆ ಕೊಟ್ಟಿರುವ ಪಾರಿವಾಳದ ಕಾಲಿಗೆ ಒಂದು ಪತ್ರವನ್ನು ಬರೆದು ಕಟ್ಟಿ, ಅದನ್ನು ಹಾರಿಸಿದನು!

ಹೀಗೆ ಆಲಮಗೀರ, ಅಂದರೆ ಜಗತ್ತನ್ನು ಗೆಲ್ಲುವ ಬಾದಶಹನು ಒಂದು ತುತ್ತು ಅನ್ನಕ್ಕೆ ಗತಿಯಿಲ್ಲದೆ ಒಬ್ಬ ಹೆಂಗಸಿನ ಸಹಾಯದ ಹಾದಿಯನ್ನು ನೋಡುತ್ತ ಕೈಮುಚ್ಚಿ ಮುಗಿಲ ಕಡೆಗೆ ಮೋರೆಮಾಡಿ ಕುಳಿತುಕೊಳ್ಳಬೇಕಾಯಿತು. ದೇವರು ಮನುಷ್ಯನ ಅಹಂಕಾರದ ಖಂಡನವನ್ನು

ಹೇಗೆ ಮಾಡುತ್ತಾನೆಂಬುದು ತಿಳಿಯುವುದಿಲ್ಲ. ದೇವರು ನಡೆಸುವ ತನಕ ಮನುಷ್ಯನಿಗೆ ಯಾರ ಲಕ್ಷ್ಯವೂ ಇರುವುದಿಲ್ಲ; ತಾನೇ ಸರ್ವತಂತ್ರ ಸ್ವತಂತ್ರನೆಂಬ ಸೊಕ್ಕಿನಿಂದ ಮೆರೆಯುತ್ತಾನೆ! ಒಂದು ಸ್ವಲ್ಪ ಕೊಂಕಿದರೆ ಅವನ ಸೊಂಡೆಯು ಒಣಗಿ ಹೋಗುತ್ತದೆ. ಬಾದಶಹನು ನಿರಾಶೆಯಿಂದ ನಿರ್ಮಲೆಯ ಹಾದಿಯನ್ನು ನೋಡುತ್ತಿರುವಾಗ ಹೊತ್ತುಮುಳುಗಿ ಕತ್ತಲಾಯಿತು. ಅಂದೂ ಯಾರಿಗೂ ಊಟವಿಲ್ಲ; ಎಲ್ಲಿಯಾದರೂ ಸ್ವಲ್ಪ ಕುಳಿತುಕೊಂಡೇ ವೆಂದರೆ ಸೈನಿಕರಿಗೆ ಸ್ಥಳವಿಲ್ಲ! ಹೀಗೆ ವಿವಿಧ ಕಷ್ಟಗಳನ್ನು ಭೋಗಿಸುತ್ತ ರಾತ್ರಿಯನ್ನು ಕಳೆಯುತ್ತಿರಲು, ಅತ್ತ ನಿರ್ಮಲೆಯು ಬಾದಶಹನು ಕಳಿಸಿದ ಪತ್ರವನ್ನು ಚಂಚಲಕುಮಾರಿಗೆ ತೋರಿಸಿ, ಬಾದಶಹನಿಗೆ ಈ ಕಠಿಣ ಕಾಲದಲ್ಲಿ ಸಹಾಯ ಮಾಡಲಿಕ್ಕೆ ತನಗೆ ಅಪ್ಪಣೆ ಕೊಡಬೇಕೆಂದು ಬೇಡಿಕೊಂಡಳು. ಅದಕ್ಕೆ ಕೋಮಲಹೃದಯದ ಚಂಚಲಕುಮಾರಿಯು ಒಪ್ಪಿಕೊಳ್ಳಲು, ನಿರ್ಮಲೆಯು ಬಾದಶಹನ ಪತ್ರವನ್ನು ತನ್ನ ಪ್ರಿಯನಾದ ಮಾಣಿಕಲಾಲನಿಗೆ ತೋರಿಸಿ, ಹೇಗಾದರೂ ಮಾಡಿ ಮಹಾರಾಣಾರವರು ಬಾದಶಹನೊಡನೆ ಒಡಂಬಡಿಕೆ ಮಾಡಿಕೊಳ್ಳುವಂತೆ ಮಾಡಬೇಕೆಂದು ಹೇಳಿಕೊಂಡಳು. ಬಾದಶಹನು ಪತ್ರದಲ್ಲಿ ನಿರ್ಮಲ ಕುಮಾರಿಗೆ—"ಇಮಲಿಬೇಗಮ! ನಿನ್ನ ಬಾದಶಹನ ಅವಸ್ಥೆಯು ಏತಕ್ಕೂ ಬಾರದಾಗಿದೆ. ಆತನಿಗೆ ಒಪ್ಪತ್ತಿನ ಊಟಕ್ಕೆ ಗತಿಯಿಲ್ಲದೆಹೋಗಿದೆ. ಹೀಗೆ ಇನ್ನೆರಡು ದಿನಗಳು ಹೋದರೆ, ಸೈನ್ಯಸಹಿತವಾಗಿ ಆತನು ಉಪವಾಸ ಸಾಯುವುದು ನಿಶ್ಚಯವು! ಇಂತಹ ವಿಪತ್ತಿನಲ್ಲಿ ನಿನ್ನಿಂದ ನಿನ್ನ ಬಾದಶಹನಿಗೆ ಒಂದು ತುತ್ತು ಅನ್ನ ಸಿಕ್ಕರೂ ಭಾಗ್ಯವಾಗುವ ಹಾಗಿದೆ" ಎಂದು ಬರೆದಿದ್ದನು! ನಿರ್ಮಲೆಗೆ ಅಷ್ಟು ಮನಸ್ಸು ಬಿಚ್ಚಿ ಪತ್ರ ಬರೆಯುವಷ್ಟು ಬಾದಶಹನು ಆಕೆಯನ್ನು ತನ್ನವಳೆಂದು ತಿಳಿದಿದ್ದನು. ಆಕೆಯ ಸಂಗಡ ಮನಸ್ಸು ಬಿಚ್ಚಿ ನಡೆದುಕೊಂಡಷ್ಟು ಬಾದಶಹನು ಮತ್ತಾರ ಸಂಗಡಲೂ ಇಡಿಯ ಆಯುಷ್ಯದಲ್ಲಿ ನಡೆದುಕೊಂಡಿದ್ದಿಲ್ಲವೆಂದು ಹೇಳಬಹುದು.

ಮಾಣಿಕಲಾಲನು ಆ ಪತ್ರವನ್ನು ರಾಜಸಿಂಹನಿಗೆ ತೋರಿಸಲು, ಆ ಉದಾರಹೃದಯದ ಮಹಾರಾಣಾನ ಮನಸ್ಸು ಕರಗಿತು! ಆತನು ತನ್ನ ಮಂತ್ರಿ ಸೇನಾಪತಿಗಳ ದರ್ಬಾರು ನೆರೆಸಿ, ಮುಂದೆ ಏನುಮಾಡಬೇಕೆಂದು ಆಲೋಚಿಸಿದನು. ಅನಾಯಾಸವಾಗಿ ದುಷ್ಟ ಬಾದಶಹನು ತನ್ನ ದುಷ್ಕರ್ಮದ ಫಲವನ್ನು ಭೋಗಿಸುವನಾದ್ದರಿಂದ ಸೈನ್ಯದೊಡನೆ ಆತನನ್ನು ಹಾಗೆಯೇ ಸಾಯಗೊಡಬೇಕೆಂದು ಬಹಳ ಜನರು ಅಭಿಪ್ರಾಯಪಟ್ಟರು! ಆದರೆ ಉದಾರಚರಿತನಾದ ಮಹಾರಾಣಾನಿಗೆ ಇದು ಸರಿದೋರಲಿಲ್ಲ. ಬಾದಶಹನು ತನ್ನ ವೈರಿಯಾಗಿದ್ದರೂ, ಆತನು ಎಷ್ಟು ದುಷ್ಟನೂ, ಪರಹಿಂಸಕನೂ ಆಗಿದ್ದರೂ ಹೀಗೆ ಆತನನ್ನು ಸೈನ್ಯ ಸಹಿತ ಉಪವಾಸ ಸಾಯ ಗೊಡುವುದು ಆ ವೀರಪುಂಗವನ ಮನಸ್ಸಿಗೆ ಬರಲಿಲ್ಲ. ಭೂತದಯೆಯಿಂದ ಆತನ ಹೃದಯವು ಕರಗಿ ನೀರಾಯಿತು! ಸೈನಿಕರ, ಆನೆ-ಕುದುರೆಗಳ, ಹೆಂಗಸರ ಕಷ್ಟವನ್ನು ನೆನೆಸಿ ಆತನ ಕಣ್ಣೀರುಗಳು ಉದುರಿದವು. ಇಂತಹ ಪ್ರಸಂಗವು ಎಂತಹ ವೈರಿಗೂ ಬರಬಾರದೆಂದು ಆತನು ಮರುಗಿದನು. ಆಗ ಆತನು ಕರುಣಾಮಯನಾಗಿ ಕಂಪಿತ ಸ್ವರದಿಂದ—"ವೀರರೇ,

ಔರಂಗಜೇಬ ಬಾದಶಹನು ಅತ್ಯಂತ ದುಷ್ಟನಾದ್ದರಿಂದ ನೀವು ಹೀಗೆ ಒಂದು ಕ್ಷಣ ಕಠೋರತನ ತೋರಿಸಬಹುದಲ್ಲದೆ, ಭೂತದಯಾಪರರಾದರೆ ಪ್ರತಾಪಿ ಕ್ಷತ್ರಿಯ ವೀರರ ವಂಶದ ನಿಮ್ಮ ಹೃದಯಗಳು ಉತ್ತರಕ್ಷಣದಲ್ಲಿ ಕರಗುವುದರಲ್ಲಿ ಸಂಶಯವಿಲ್ಲ. ನಮ್ಮ ವೀರ ಕ್ಷತ್ರಿಯರ ಶೌರ್ಯವೂ, ಪರಾಕ್ರಮವೂ ಯಾರ ಮುಂದೆ? ಸಮರಭೂಮಿಯಲ್ಲಿ ಕಾದಲು ಸಡ್ಡುಹೊಡೆದು ನಿಂತ ವೈರಿಗಳ ಮುಂದೆ! ಅದರಂತೆ, ನಮ್ಮ ಶಾಸನ ಧುರೀಣ ಕ್ಷತ್ರಿಯರ ಸಿಟ್ಟು ಯಾರ ಮುಂದೆ? ಉಂಡುಟ್ಟು ಸೊಕ್ಕಿ ಲೋಕವನ್ನು ಹಿಂಸಿಸುವ ದುಷ್ಟರ ಮುಂದೆ! ಆದರೆ ಒಂದು ತುತ್ತು ಅನ್ನಕ್ಕೂ, ಒಂದು ಗುಟುಕು ನೀರಿಗೂ ಗತಿಯಿಲ್ಲದೆ ಹೆಂಡಿರು–ಮಕ್ಕಳೊಡನೆ ಹಾಗೂ ತನ್ನ ಚತುರಂಗ ಬಲದೊಡನೆ ಅಕಸ್ಮಾತ್ ಸಂಕಟಕ್ಕೆ ಗುರಿಯಾಗಿರುವ ಬಾದಶಹನ ಮುಂದೆ ನಮ್ಮ ಆ ಶೌರ್ಯ– ಕ್ರೋಧಗಳನ್ನು ತೋರಿಸಿದರೆ, ನಮ್ಮ ಪವಿತ್ರ ಕ್ಷಾತ್ರ ವೃತ್ತಿಗೆ ಕಲಂಕವುಂಟಾಗಲಿಕ್ಕಿಲ್ಲವೆ? ನಮ್ಮ ವೀರ ಸ್ವರ್ಗಸ್ಥ ಪಿತೃಗಳು ನಮ್ಮನ್ನು ತಿರಸ್ಕರಿಸಲಿಕ್ಕಿಲ್ಲವೆ? ನಾವು ಸೂರ್ಯ–ಚಂದ್ರ ವಂಶದ ಕ್ಷತ್ರಿಯರಿರುವೆವು. ನಮ್ಮ ಮೂಲಪುರುಷರ ಶತ್ರುಗಳಾದ ರಾಹು–ಕೇತುಗಳು ಗ್ರಹಣಕಾಲದಲ್ಲಿ ಪೂರ್ಣಚಂದ್ರನನಲ್ಲದೆ ಕಲಾಹೀನ ಚಂದ್ರನನ್ನು ನುಂಗುವುದಿಲ್ಲ. ಈ ಮಾತನ್ನು ಲಕ್ಷ್ಯದಲ್ಲಿಟ್ಟು ಬಾದಶಹನನ್ನು ಬಿಟ್ಟುಬಿಡಿರಿ. ಆತನು ಉಂಡುಟ್ಟು ಧಷ್ಟಪುಷ್ಟನಾಗಿ ಮತ್ತೆ ನಿಮ್ಮ ಮೇಲೆ ಸಾಗಿಬಂದರೆ ಅವನನ್ನು ಹಿಚುಕಿ ಆತನ ರಕ್ತವನ್ನು ನಾಲ್ಕೂಕಡೆಗೆ ಚಿಮ್ಮಿಸೋಣ! ನಾವು ಹತಬಲರೇ? ನಮ್ಮ ರಣದ ಪಾಂಡಿತ್ಯವು ನಷ್ಟವಾಗಿದೆಯೇ? ನಮ್ಮ ಮೇಲಿನ ಏಕಲಿಂಗಜಿಯ ಕೃಪೆಯು ತಪ್ಪಿದೆಯೇ? ನಮ್ಮ ಕ್ಷಾತ್ರಧರ್ಮವು ಲುಪ್ತವಾಗಿದೆಯೆ? ರಣದಲ್ಲಿ ಸತ್ತರೆ ಸ್ವರ್ಗವು, ಗೆದ್ದರೆ ರಾಜ್ಯವು ಎಂಬ ಕ್ಷಾತ್ರಧರ್ಮದ ಕಟ್ಟಕಡೆಯ ಫಲದ ಮರವು ನಮಗೆ ಆಗಿದೆಯೆ? ಆದ್ದರಿಂದ ಬಾದಶಹನನ್ನು ಯಾವ ಬಗೆಯಿಂದಲೂ ಈಗ ಕಾಡದೆ ಆತನನ್ನು ನಿಶ್ಶಸ್ತ್ರನನ್ನಾಗಿ ಮಾಡಿ ಹೊರಬಿದ್ದು ಹೋಗುವಂತೆ ಮಾಡೋಣ! ಆ ನಮ್ಮ ಪೂರ್ವಜರ ಶೌರ್ಯವನ್ನು ನೆನೆಸಿರಿ; ಉದಾರ ಚಾರಿತ್ರ್ಯವನ್ನು ನೆನಪುಮಾಡಿಕೊಳ್ಳಿರಿ; ಅಂದರೆ ಮರಣೋನ್ಮುಖನಾಗಿರುವ ಬಾದಶಹನ ಸಂಗಡ ಯಾವ ಮಾತಿನ ಅರೆದಾಟವನ್ನೂ ಹೆಚ್ಚಾಗಿ ಮಾಡದೆ, ನಮ್ಮ ಉದಾರ ಚಾರಿತ್ರ್ಯವು ನಮ್ಮ ಸಂತತಿಗೆ ಮೇಲುಪಙ್ಕ್ತಿಯಾಗುವಂತೆ ಮಾಡುವುದೇ ಯೋಗ್ಯವೆಂದು ನಿಮಗೆ ತೋರಬಹುದು! ಆಲಮಗೀರನು ಹಸಿದು ಕಂಗಾಲಾಗಿ ಲಕ್ಷಾವಧಿ ಜನರೊಡನೆ ಹೊಟ್ಟೆಗೆ ಹಾಕಿರೆಂದು ನಿನ್ನನ್ನು ಬೇಡಿಕೊಳ್ಳುತ್ತಿರುವುದರಿಂದ, ಹಸಿದ ಅತಿಥಿಯೆಂದು ತಿಳಿದು ಆತನಿಗೆ ಹೊಟ್ಟೆತುಂಬ ಅನ್ನಹಾಕಿ ಪುಣ್ಯ ಕಟ್ಟಿಕೊಳ್ಳಿರಿ!

# ಮುಯ್ಯಕ್ಕೆ ಮುಯ್ಯ!

ರಾಜಸಿಂಹನು ಉದಯಪುರಿಯನ್ನೂ, ಜೆಬುನ್ನಿಸೆಯನ್ನೂ ಸೆರೆಹಿಡಿದು ನಿರ್ಮಲೆಯ ಸಂಗಡ ಅವರನ್ನು ಚಂಚಲಕುಮಾರಿಯ ಕಡೆಗೆ ಉದಯಪುರಕ್ಕೆ ಕಳಿಸಿದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಚಂಚಲ ಕುಮಾರಿಯು ಅವರಿಬ್ಬರನ್ನು ಸ್ವತಂತ್ರವಾದ ಸ್ಥಳದಲ್ಲಿ ಇರಿಸಿ ಅವರ ಆದರ ಸತ್ಕಾರಗಳನ್ನು ಸರಿಯಾಗಿ ಮಾಡಿಸಿದ್ದಳು. ನಿರ್ಮಲೆಯು, ದಿಲ್ಲಿಯ ಯಾವತ್ತೂ ವೃತ್ತಾಂತವನ್ನು ಚಂಚಲಕುಮಾರಿಯ ಮುಂದೆ ಹೇಳಿದಳು. ತಾನು ಕಳಿಸಿದ ಪತ್ರದಂತೆ ಉದೇಪುರಿಯು ತಾನಿದ್ದಲ್ಲಿಗೆ ಗುಡಗುಡಿಯನ್ನು ತುಂಬುವುದಕ್ಕಾಗಿ ಬಂದದ್ದನ್ನು ನೋಡಿ, ಚಂಚಲಕುಮಾರಿಗೆ ಬಹಳ ಸಮಾಧಾನವಾಯಿತು. ಈ ವಿಲಕ್ಷಣ ಯೋಗವು ದೇವರ ಕೃಪೆಯಿಂದಲೆ ಒದಗಿತೆಂದು ಆಕೆಯು ತಿಳಿದಳು. ಒಮ್ಮೊಮ್ಮೆ ಅಶಕ್ಯ ಸಂಗತಿಗಳೂ ಶಕ್ಯವಾಗಿ ಹೋಗುತ್ತವೆ. ದಿಲ್ಲೀ ಬಾದಶಹನ ಪ್ರೀತಿಯ ಬೇಗಮಳೂ, ಪ್ರತ್ಯಕ್ಷಮಗಳೂ ತನ್ನ ಸೆರೆಯಾಳಾಗುವುದು ಅಶಕ್ಯವಾದದ್ದೆಂದು ಚಂಚಲಕುಮಾರಿಯು ತಿಳಿದಿದ್ದಳು. ಈ ಅಶಕ್ಯ ಸಂಗತಿಯೂ ಶಕ್ಯವಾಯಿತಲ್ಲ! ಎಂಬ ಸಂತೋಷವು ಆಕೆಗೆ ಪುನಃ ಪುನಃ ಆಗುತ್ತಿರುವಾಗ, ಆ ನಿರ್ಮಲ ಹೃದಯದ ಚಂಚಲೆಗೆ ತನ್ನ ಗುರುದೇವನಾದ ಅನಂತಮಿಶ್ರನ ನೆನಪಾಯಿತು. ಆ ಸತ್ಯವಾದಿಯಾದ ತಪಸ್ವಿ ಬ್ರಾಹ್ಮಣನ ಕೃಪೆಯ ವರದ ವಾಣಿಯಿಂದಲೇ ಈ ಅಘಟಿತ ಘಟನೆಯಾಯಿತೆಂದು ಆಕೆಯು ತಿಳಿದು ಕೊಂಡಳು! ಹೀಗೆ ದೇವರಲ್ಲಿಯೂ, ಗುರುಗಳಲ್ಲಿಯೂ ಭಕ್ತಿಯು ಉತ್ಪನ್ನವಾಗುತ್ತಿರಲು, ಉದಯಪುರೀ ಬೇಗಮಳ ವಿಷಯದ ಆಕೆಯ ಈರ್ಷೆಯು ಅಳಿದುಹೋಯಿತು! ಪಾಪ! ಯಾರಿಗೂ ಇಂತಹ ಹೊತ್ತು ಬರಬಾರದು. ಬಾದಶಹನ ಮನೆಯವರು ನಮ್ಮ ಮನೆಗೆ ಯಾಕೆ ಬಂದಾರು? ಅಂಥವರ ಅನಾದರ ಅವಮಾನಗಳನ್ನು ಮಾಡುವುದು ದೊಡ್ಡಿಸ್ತನವಲ್ಲ!

ಈ ಮೇರೆಗೆ ಚಂಚಲಕುಮಾರಿಯು ಯೋಚಿಸಿ, ನಿರ್ಮಲೆಯನ್ನು ಕುರಿತು— ''ನಿರ್ಮಲೆ, ಹೋಗು, ಉದೇಪುರೀ ಬೇಗಮಳನ್ನು ಕರೆದುಕೊಂಡು ಬಾ; ನಾನೆ ಆಕೆಯಿದ್ದಲ್ಲಿಗೆ ಬರುತ್ತಿದ್ದೆನು; ಆದರೆ ಯಾರಿಗೆ ಗೊತ್ತು? ಮದಾಂಧನಾದ ಬಾದಶಹನ ಸಹವಾಸದಿಂದ ಉದೇಪುರಿಯೂ ಮದಾಂಧಳಾಗಿರಬಹುದು. ಮದಾಂಧರು ಎರಡನೆಯವರ ಸೌಜನ್ಯವನ್ನು ಹೇಡಿತನವೆಂದು ಭಾವಿಸುವರು; ಆದ್ದರಿಂದ ನೀನೇ ಹೋಗಿ ಬೇಗಮಳನ್ನು ಕರೆದುಕೊಂಡು ಬಾ ಹೋಗು'' ಎಂದು ಹೇಳಿದಳು. ನಿರ್ಮಲೆಗೆ ಅಷ್ಟೇ ಬೇಕಾಗಿತ್ತು ತಾನು ಒಯ್ದ ಪತ್ರದಂತೆ ಉದೇಪುರಿಯು ಗುಡುಗುಡಿಯಲ್ಲಿ ತಂಬಾಕು ತುಂಬಿದ್ದನ್ನು ಯಾವಾಗ ನೋಡೇನೆಂದು ಆಕೆಯು ಹಾದಿಯನ್ನೇ ನೋಡುತ್ತಿದ್ದಳು; ಆದ್ದರಿಂದ ಆಕೆಯು ತನ್ನ ಒಡೆಯಳ ಅಪ್ಪಣೆಯಂತೆ ತಟ್ಟನೆ ಉದೇಪುರಿಯ ಬಳಿಗೆ ಹೋಗಿ, ಚಂಚಲಕುಮಾರಿಯರು ನಿಮ್ಮನ್ನು ಕರೆಯುವರೆಂದು ಹೇಳಿದಳು. ಅದನ್ನು ಕೇಳಿ ಉದೇಪುರಿಗೆ ಮರಣಪ್ರಾಯ ದುಃಖವಾಯಿತು! ಬಾದಶಹನ ಬೇಗಮಳಾದ ತನ್ನನ್ನು ಒಬ್ಬ ಯಕಃಶ್ಚಿತ ಸಂಸ್ಥಾನಿಕನ ಮಗಳು ಕರೆಸುವ ಪ್ರಸಂಗ

ಬರಬೇಕೇ? ಎಷ್ಟೋ ದೊಡ್ಡ ದೊಡ್ಡ ರಜಪೂತ ಸಂಸ್ಥಾನಿಕರು ಬಾದಶಹನ ಪಾದಗಳ ಮೇಲೆ ಉರುಳಾಡುತ್ತಿರಲು, ಈ ರೂಪನಗರದ ಸಂಸ್ಥಾನದ ಪೋರಿಯ ಯೋಗ್ಯತೆಯೇನು? ಆಗಲಿ, ಇದರ ಸೇಡು ತೀರಿಸಿ ಕೊಳ್ಳದಿದ್ದರೆ ಉದೇಪುರಿಯೇ ಅಲ್ಲ ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತ ಸಿಟ್ಟಿನಿಂದ ಉರಿಯುತ್ತಲೇ ನಿರ್ಮಲೆಯನ್ನು ಹಿಂಬಾಲಿಸಿ ಹೊರಟಳು! ದುರಹಂಕಾರಿಗಳ ಮಾತು ಹೀಗೆಯೇ ಸರಿ! ತಮ್ಮ ಹೊರತು ಜಗತ್ತು ಅವರಿಗೆ ತುಚ್ಛವಾಗಿ ತೋರುವುದು!

ಇತ್ತ ಚಂಚಲಕುಮಾರಿಯು ಬಾದಶಹನ ಬೇಗಮಳ ಮರ್ಯಾದೆಗನುಸರಿಸಿ ತನ್ನ ಆಸನದಷ್ಟೇ ಗೌರವದ ಆಸನವನ್ನು ಆಕೆಗಾಗಿ ಸಿದ್ಧಪಡಿಸಿದ್ದಳು. ಬೇಗಮಳು ಬಂದ ಕೂಡಲೆ ಕುಮಾರಿಯು ಎದ್ದುನಿಂತು ಮುಂದಕ್ಕೆ ಬಂದು ಆಕೆಯನ್ನು ಬರಮಾಡಿಕೊಂಡು ಆಸನದ ಮೇಲೆ ಕುಳ್ಳಿರಿಸಿದಳು. ಈ ಮೊದಲೆ ಚಂಚಲಕುಮಾರಿಯು ತರ್ಕಿಸಿದ್ದೇ ನಿಜವಾಯಿತು! ಚಂಚಲ ಕುಮಾರಿಯ ಈ ಸೌಜನ್ಯದ ಆದರವನ್ನು ಸೊಕ್ಕಿನವಳಾದ ಬೇಗಮಳು ಹೇಡಿತನವೆಂದು ತಿಳಿದುಕೊಂಡಳು. ಆಕೆಯು ತಿರಸ್ಕಾರದಿಂದ ಚಂಚಲಕುಮಾರಿಯನ್ನು ನೋಡುತ್ತ—

ಉದೇಪುರಿ—''ಅಂಜುಬುರುಕರಾದ ಹಿಂದುಗಳು ನೀವು ಮೊದಲು ಏನಾದರೂ ಮಾಡಿಬಿಡುತ್ತೀರಿ; ಹಿಂದಿನಿಂದ ಪಶ್ಚಾತ್ತಾಪಪಡುತ್ತೀರಿ! ಚಂಚಲಕುಮಾರೀ, ವ್ಯರ್ಥವಾಗಿ ಮೃತ್ಯುವಿಗೆ ಔತಣಕೊಟ್ಟಂತೆ ನನ್ನ ಉಸಾಬರಿಗೆ ನೀನು ಯಾಕೆ ಬಂದೆ?''

ಬೇಗಮಳ ಈ ಉದ್ಧಟತನದ ಮಾತುಗಳನ್ನು ಕೇಳಿ ಕ್ಷತ್ರಿಯ ಕುಮಾರಿಯ ಸೌಜನ್ಯವು ಶಿಥಿಲವಾಯಿತು; ಆದರೂ ಆಕೆಯು ಸಮಾಧಾನವನ್ನು ತಾಳಿ ಬೇಗಮಳನ್ನು ಕುರಿತು— ''ಬೇಗಮಸಾಹೇಬರು ಸ್ವಲ್ಪ ಸಮಾಧಾನದಿಂದ ಕುಳಿತುಕೊಳ್ಳಬೇಕು. ಹಿಂದಿನದನ್ನು ನೆನೆಸಿ ಹಿತ್ತಲಲ್ಲಿ ಅತ್ತರೆಂಬಂತೆ ಮಾಡಬಾರದು.'' ನಿಮ್ಮ ದುರಾತ್ಮನಾದ ಬಾದಶಹನು ಮಹಾರಾಣಾರವರ ಕೈಯಲ್ಲಿ ಪೂರಾ ಸಿಕ್ಕು ಅನ್ನಕ್ಕೆ ಗತಿಯಿಲ್ಲದೆ ಕಂಗಾಲಾಗಿ ಬೇಡಿಕೊಳ್ಳು ತ್ತಿರುವುದನ್ನು ನೆನೆಸಿ ನೀವು ನಾಲಿಗೆಯನ್ನು ಸ್ವಲ್ಪ ಬಿಗಿಯಾಗಿ ಹಿಡಿಯಿರಿ. ಎಲೈ ಉದೇಪುರೀ, ಇನ್ನೂ ನಿನ್ನ ಸೊಕ್ಕು ತಗ್ಗಿರುವುದಿಲ್ಲವೇ? ನೀನು ಈಗ ನನ್ನ ಸೆರೆಯಾಳಾಗಿರುವೆಯೆಂಬುದನ್ನು ಮರೆತೆಯೇನು? ನಮ್ಮ ನಿರ್ಮಲ ಕುಮಾರಿಯೊಡನೆ ನಿನಗೆ ನಾನು ಕಳಿಸಿದ ಪತ್ರವನ್ನೆಲ್ಲಿ ಬಿಟ್ಟುಬಂದೆ? ನಿರ್ಮಲೆ, ಹೋಗು, ಗುಡಗುಡಿಯನ್ನು ತಂದು ಈ ಸೊಕ್ಕಿನ ಬೇಗಮಳ ಮುಂದಿಡು, ನನ್ನ ಮುಂದೆ ಈಕೆಯು ಅದರಲ್ಲಿ ತಂಬಾಕವನ್ನು ತುಂಬಲಿ! ಮಂದಿಯಲ್ಲಿ ದೊಡ್ಡಿಸ್ತನವಿದ್ದರಷ್ಟೇ ಅವರಿಗೆ ದೊಡ್ಡಿಸ್ತನದ ಬೆಲೆ ಗೊತ್ತಾಗುವುದು!''

ಚಂಚಲಕುಮಾರಿಯು ಈ ಗಟ್ಟಿಮುಟ್ಟ ಮಾತುಗಳನ್ನು ಕೇಳಿ ಉದೇಪುರಿಯು ತತ್ತರಿಸಿದಳು! ಆ ಅಭಿಮಾನಿಯಾದ ಬೇಗಮಳ ಕಣ್ಣುಗಳೊಳಗಿಂದ ಬಳಬಳ ನೀರುಗಳು ಸುರಿಯಹತ್ತಿದವು. ಆ ಸೌಂದರ್ಯಶಾಲಿನಿಯ ಈಗಿನ ಸೌಂದರ್ಯವು ಒಂದು ಬಗೆಯಿಂದ ಬಹಳ ಮೋಹಕವಾಗಿದ್ದಿತು; ಆ ಸುಂದರಿಯ ಮುಖದಲ್ಲಿ ಈರ್ಷೆ, ಅಸೂಯೆಗಳ ದುಷ್ಟ ಕಲೆಗಳು ಈಗ ಅಳಿದುಹೋಗಿ, ಸ್ತ್ರೀಜಾತಿಯ ಸ್ವಾಭಾವಿಕ ಗುಣಗಳಾದ ಲಜ್ಜೆ–ಭಯಗಳ

ಚಿಹ್ನಗಳು ಆಕೆಯ ಮುಖದಲ್ಲಿ ತೋರಿದ್ದರಿಂದ ಆಕೆಯ ಸೌಂದರ್ಯಕ್ಕೆ ಸೌಕುಮಾರ್ಯ ವನ್ನು ತೊಡೆದಂತಾಗಿತ್ತು! ಬೇಗಮಳ ಮೈಯು ಜೋರೆಂದು ಬೆವತಿತು. ಆಕೆಯ ಮುಖದಲ್ಲಿ ಬೆವರಹನಿಗಳು ಮಿನುಗಹತ್ತಿದವು. ಆಕೆಯು ಸೌಮ್ಯಸ್ವರದಿಂದ ಚಂಚಲಕುಮಾರಿಯನ್ನು ಕುರಿತು—

ಉದೇಪುರಿ—''ಚಂಚಲಕುಮಾರೀ, ಬಾದಶಹನ ಬೇಗಮಳಿಗೆ ನೀನು ಗುಡುಗುಡಿ ಯನ್ನು ತುಂಬಲಿಕ್ಕೆ ಹೇಳಬಹುದೇ? ನಿನ್ನ ಈ ಉದ್ಧಟತನಕ್ಕೆ ನನಗೆ ಯಾಕೆ ಸಿಟ್ಟು ಬರಲಿಕ್ಕಿಲ್ಲ ಹೇಳು?''

ಚಂಚಲಕುಮಾರಿ—''ಮೊದಲೇ ಇಷ್ಟು ಮೆತ್ತಗಾಗಿದ್ದರೆ ಗುಡುಗುಡಿಯು ನಿನ್ನ ಮುಂದೆ ಬರುತ್ತಿದ್ದಿಲ್ಲ. ಉದೇಪುರೀ, ರೂಪನಗರದ ಈ ಚಂಚಲಕುಮಾರಿಯು ಮಂದಿಯ ಗುಡುಗುಡಿ ತುಂಬುವ ಕೆಲಸವನ್ನೇ ಮಾಡುತ್ತಾಳೆಂದು ನೀನು ತಿಳಿದಿರುವೆಯೋ ಏನು? ಬಾದಶಹನ ಮನೆಯ ನಾಯಿಗಳಾದ ನಿಮಗೆ ಅಹಂಕಾರವೆಷ್ಟು? ಚಂಚಲಕುಮಾರಿ ಯಿಂದ ಗುಡುಗುಡಿಯನ್ನು ತುಂಬಿಸಬೇಕೆಂದು ನೀನು ನಿನ್ನ ದುಷ್ಟ ಗಂಡನೊಡನೆ ಮಾತಾಡುತ್ತಿರುವಾಗ, ನಿನ್ನ ಮೈಮೇಲೆ ಎಚ್ಚರವಿತ್ತೇನು? ಎಲ್ಲ ರಜಪೂತ ಕುಮಾರಿಯರೂ ನಿಮ್ಮ ಗಂಡ–ಹೆಂಡಿರ ಲೋಳೆ ಬಳಿಯುವುದಕ್ಕಾಗಿಯೇ ಹುಟ್ಟಿರುವರೆಂದು ನೀವು ತಿಳಿದಿರುತ್ತೀರಾ? ಮನುಷ್ಯನ ಅಹಂಕಾರಕ್ಕಾದರೂ ಮೇರೆ ಇರಬೇಕಾಗುವುದು. ಹೊತ್ತು ಬಂದಾಗ ಎಂತಹ ಮಹಾತ್ಮರು ಏನೇನೋ ಕೆಲಸ ಮಾಡಿರುವರು; ನಿಮ್ಮಂತಹ ವಿಷಯಸುಖದ ರೊಜ್ಜಿನೊಳಗಿನ ನೊರಜುಗಳ ಪಾಡೇನು? ತುಂಬು ತುಂಬು ನಿನ್ನ ಅಹಂಕಾರವು ನಷ್ಟವಾಗುವುದಕ್ಕಾಗಿಯೂ, ನನ್ನ ಪ್ರತಿಜ್ಞೆಯು ಸತ್ಯವಾಗುವುದಕ್ಕಾಗಿಯೂ ಒಮ್ಮೆ ನನ್ನ ಗುಡುಗುಡಿಯಲ್ಲಿ ತಂಬಾಕವನ್ನು ನನ್ನ ಮುಂದೆ ತುಂಬಿಬಿಡು!

ಬೇಗಂ—''ಚಂಚಲಕುಮಾರೀ, ಇದೆಂತಹ ನಿನ್ನ ಪ್ರತಿಜ್ಞೆಯು! ಬಾದಶಹನ ಬೇಗಮಳ ಮುಂದೆಯೂ ನಿನ್ನ ಪ್ರತಿಜ್ಞೆಯೇ?''

ಚಂಚಲಕುಮಾರಿ—''ಮತ್ತೂ ನಿನ್ನ ಕೆಟ್ಟ ಹುಚ್ಚು ಹೋಗಲೊಲ್ಲದು, ದುರಹಂಕಾರವು ಇಳಿಯಲೊಲ್ಲದು! ಉದೇಪುರೀ, ನೀನು ಹೆಸರಿನ ಉದೇಪುರಿಯು! ಉದೇಪುರದ ರಾಜಕನ್ನಿಕೆಯನ್ನು ಲಗ್ನವಾಗಬೇಕೆಂದು ಅಕಬರ ಬಾದಶಹನಿಂದ ನಿನ್ನ ಗಂಡನವರೆಗೆ ನಾಲ್ಕುಮಂದಿ ಬಾದಶಹರೂ ಹೆಣಗಿ ಹೆಣಗಿ ಮಣ್ಣುಮುಕ್ಕಿ ಹೋದರು! ಉದೇಪುರದ ಸತ್ವಸ್ಥ ರಾಜಕನ್ಯೆಯರ ಉಗುರೂ ಬಾದಶಹನ ಕಣ್ಣಿಗೆ ಬೀಳುವುದು ಅಶಕ್ಯವಾಗಿರುವಾಗ, ಅವರೊಡನೆ ಲಗ್ನವಾಗುವ ಮಾತೇಕೆ? ಆದರೆ ಎಲ್ಲಿಯವಳೋ ಕಿರಸ್ತಾನರ ತೊತ್ತು ನೀನು ಉದೇಪುರಿಯೆಂದು ಹೆಸರಿಟ್ಟುಕೊಂಡು ಸೌಂದರ್ಯದ ಸೊಗಸಿನಿಂದ ಬಾದಶಹನ ಕೈಹಿಡಿದಿರುತ್ತೀ. ಘನವಂತನಾದ ದಾರಾಶಿಕೋನ ಕೈಹಿಡಿದ ನೀನು, ಆತನ ತಮ್ಮನ ಕೈಯನ್ನು ಹಿಡಿದಿರುವುದನ್ನು ನೋಡಿ ರಜಪೂತ ಕನ್ಯೆಯರು ನಾವು ಹೇಸುವೆವು! ನೀನು ನಿಜವಾದ ರಜಪೂತಳಾಗಿದ್ದರಷ್ಟೆ, ರಜಪೂತರ ಪ್ರತಿಜ್ಞೆಯ ಮಹತ್ವವು ನಿನಗೆ ತಿಳಿಯುವುದು?''

ಚಂಚಲಕುಮಾರಿಯ ಈ ಮರ್ಮಭೇದಕ ಮಾತುಗಳಿಂದ ಉದೇಪುರಿಯು ತೀರ ಹಣ್ಣಾದಳು. ತಾನು ಮೊದಲಿಗೆ ಸೌಜನ್ಯವನ್ನು ಕಾಯ್ದುಕೊಳ್ಳದೆಯಿದ್ದದ್ದು ತಪ್ಪಾಯಿತೆಂದು ಆಕೆಯು ಪಶ್ಚಾತ್ತಾಪಪಟ್ಟಳು. ಆಕೆಯು ದೈನ್ಯದಿಂದ ಚಂಚಲಕುಮಾರಿಯನ್ನು ಕುರಿತು—

ಬೇಗಂ—''ಚಂಚಲಕುಮಾರೀ, ನೀನು ಏನು ಅಂದರೂ ನಾನು ಈಗ ಸುಮ್ಮನಿರ ಬೇಕಾಗಿದೆ; ಆದರೆ ನನಗೆ ಗುಡುಗುಡಿ ತುಂಬಲಿಕ್ಕೆ ಬರುವುದಿಲ್ಲ. ಹೇಗೆ ಮಾಡಲಿ?''

ಚಂಚಲಕುಮಾರಿ—''ನಿನಗೆ ತುಂಬಲಿಕ್ಕೆ ಬರದಿದ್ದರೆ ನನ್ನ ದಾಸಿಯು ಕಲಿಸುವಳು, ಆಮೇಲೆ ತುಂಬು.''

ಬೇಗಮಳಿಗೆ ಮಾತನಾಡಲಿಕ್ಕೆ ಬರದಾಯಿತು. ಆಕೆಯು ತಲೆಬಾಗಿಸಿ ಸುಮ್ಮನೆ ಕುಳಿತುಕೊಂಡಳು. ದುರಹಂಕಾರಿಗಳ ಅಹಂಕಾರವನ್ನು ಹೀಗೆ ಇಳಿಸದಿದ್ದರೆ ಅವರು ಹಾದಿಗೆ ಹತ್ತುವುದಿಲ್ಲ, ಅವರ ಕಲ್ಯಾಣವು ಆಗುವುದಿಲ್ಲ! ಒಬ್ಬೊಬ್ಬನಿಗೆ ಒಂದೊಂದು ಬಗೆಯ ಅಹಂಕಾರವಿರುತ್ತದೆ. ಅವರ ಅಹಂಕಾರವೇ ಅವರನ್ನೂ, ಅವರಲ್ಲಿದ್ದ ಸದ್ಗುಣಗಳನ್ನೂ ಮಣ್ಣುಗೂಡಿಸಿಬಿಟ್ಟಿರುವುದು! ಆ ನಾಶಕಾರಕ ಆಹಂಕಾರವು ನಷ್ಟವಾಗಲಿಕ್ಕೂ ಪುಣ್ಯವೂ, ಸತ್ಸಂಗವೂ ಬೇಕಾಗುತ್ತದೆ. ಅಹಂಕಾರದ ಶಿಖರಕ್ಕೇರಿದ ಉದಯಪುರಿಗೆ ಚಂಚಲ ಕುಮಾರಿ ಯಂತಹ ತೇಜಸ್ವಿನಿಯಾದ ಸಜ್ಜನಳ ಸಮಾಗಮವಾದದ್ದರಿಂದ, ಆ ಬೇಗಮಳು ನೆಲಕ್ಕೆ ಬಿದ್ದಂತಾಗಿ ಹಣ್ಣಾದಳು. ಆಕೆಯಲ್ಲಿ ಪಶ್ಚಾತ್ತಾಪವು ತಲೆದೋರಿತು; ಅದರ ಹಿಂದೆಯೇ ವಿವೇಕವು ಹುಟ್ಟಿತು. ಚಂಚಲಕುಮಾರಿಯ ಮಾತು ಸುಳ್ಳಲ್ಲವೆಂದು ತಿಳಿದು ಆಕೆಯು ಕನಿಕರದಿಂದ ಮತ್ತೆ ಚಂಚಲಕುಮಾರಿಯನ್ನು ಕುರಿತು—

ಬೇಗಂ—''ಕುಮಾರೀ, ನಾನು ಗುಡುಗುಡಿಯನ್ನು ತುಂಬಲೇಬೇಕೆನ್ನುವೆಯಾ? ಮೊದಲಿನ ನಿನ್ನ ಸೌಜನ್ಯಕ್ಕೆ ಈಗಿನ ನಿನ್ನ ನಿಷ್ಠುರತನವು ಒಪ್ಪುವುದೇ? ಎಲ್ಲಿ ಇದೆ ತಂಬಾಕು? ತಾ, ಗುಡುಗುಡಿಯನ್ನು ತುಂಬುವೆನು.''

ಈ ಮೇರೆಗೆ ನುಡಿದು ಬೇಗಮಳು ಕೈಯಲ್ಲಿ ಗುಡುಗುಡಿ ಹಿಡಿದದ್ದನ್ನು ನೋಡಿ ಚಂಚಲಕುಮಾರಿಯ ಸರಳ ಹೃದಯವು ಕರಗಿತು! ತನ್ನ ಕ್ಷತ್ರಿಯ ಸ್ವಭಾವದ ಕಾಠಿಣ್ಯಕ್ಕಾಗಿ ಆಕೆಯು ಮನಸ್ಸಿನಲ್ಲಿ ಮರಗಿದಳು. ಆ ಸುಜನಳು ತಟ್ಟನೆ ಮುಂದಕ್ಕೆ ಬಂದು ಬೇಗಮಳ ಕೈಯೊಳಗಿನ ಗುಡುಗುಡಿಯನ್ನು ಇಸಿದುಕೊಂಡು ಬೇಗಮಳೊಡನೆ ಅರ್ಧಾಸನದಲ್ಲಿ ಕುಳಿತು ಅತ್ಯಂತ ಪ್ರೇಮದಿಂದ—''ಬೇಗಂ, ಬೇಡ ಬೇಡ; ಗುಡುಗುಡಿಯನ್ನು ತುಂಬಬೇಡ. ನೀನು ತುಂಬುತ್ತೇನೆಂದ ಮಾತೇ ನನಗೆ ಸಾಕಾಯಿತು. ಈಗ ಮಾತ್ರ ನೀನು ನಿಜವಾಗಿಯೇ ದಿಲ್ಲೀಶ್ವರನ ಬೇಗಮಳಾಗಿ ನನಗೆ ಕಾಣುತ್ತೀ. ಪಶ್ಚಾತ್ತಾಪದಿಂದ ನಿನ್ನ ಹೃದಯವು ಶುದ್ಧವಾಗಿರುವುದು, ನನ್ನ ಹೃದಯವೂ ಶುದ್ಧವಾಗಿರುವುದು. ಕ್ಷುದ್ರ ಮಾನವರಾದ ನಮಗೆ ಇಷ್ಟು ಅಹಂಕಾರವೇತಕ್ಕಮ್ಮಾ!''

ಈ ಮೇರೆಗೆ ನುಡಿದು ಚಂಚಲಕುಮಾರಿಯು ಬೇಗಮಳನ್ನು ಸಮಾಧಾನಪಡಿಸಿ, ಆಕೆಯಿರುವ ಸ್ಥಳದವರೆಗೆ ಆಕೆಯನ್ನು ಕಳಿಸಿ, ಆಕೆಯ ಅಪರೋಪಚಾರಗಳನ್ನು ತನಗಿಂತಲೂ ಹೆಚ್ಚಾಗಿ ನೋಡಿಕೊಳ್ಳಬೇಕೆಂದು ದಾಸಿಯರಿಗೆ ಆಜ್ಞಾಪಿಸಿದಳು. ಅವರಿಬ್ಬರ ಹೃದಯದಲ್ಲಿ

ನಿಜವಾದ ಪ್ರೇಮೋದಯವಾದಾಗ ಅವರಲ್ಲಿ ಹಿಂದೂ-ಮುಸಲ್ಮಾನರೆಂಬ ಭೇದವು ಉಳಿಯಲಿಲ್ಲ, ಶ್ರೇಷ್ಠ-ಕನಿಷ್ಠ ಭಾವವು ಕಂಡುಬರಲಿಲ್ಲ. ಶುದ್ಧ ಪ್ರೇಮದ ಪ್ರಭಾವವೇ ಅಂತಹದು!

ಹೀಗೆ ಉದಯಪುರಿಯ ಸಂಭಾವನೆಯಾದದ್ದು ಜಿಬುನ್ನಿಸೆಯ ಕಿವಿಗೆ ಮುಟ್ಟಲು, ಇನ್ನು ನನ್ನ ಸ್ವರೂಪನಿರ್ಣಯವೇನಾಗುವುದೋ ಎಂದು ಆ ಶಹಾಜಾದಿಯು ಚಿಂತಿಸ ತೊಡಗಿದಳು. ಉದಯಪುರಿಯು ಚಂಚಲಕುಮಾರಿಯ ಮಾನಖಂಡನ ಮಾಡಬೇಕೆಂದು ಯೋಚಿಸಿದ್ದರಿಂದ, ಆಕೆಯ ಸೇಡು ತೀರಿಸುವುದಕ್ಕಾಗಿ ರಾಣಾ-ರಾಜಸಿಂಹನು ಆಕೆಯನ್ನು ಸೆರೆಹಿಡಿದು ಚಂಚಲಕುಮಾರಿಯ ಬಳಿಗೆ ಕಳಿಸಿದ್ದರೂ ಕಳಿಸಿರಬಹುದೆಂದು ಜಿಬುನ್ನಿಸೆಯು ತರ್ಕಿಸಿದಳು; ಆದರೆ ಅಂತಹ ಪ್ರಸಕ್ತಿಗೆ ತನ್ನ ಸಂಬಂಧವಿಲ್ಲದಿರುವಾಗ, ಉಳಿದ ಎಲ್ಲ ಬೇಗಮರನ್ನು ಬಿಟ್ಟು ನನ್ನನ್ನು ಸೆರೆಹಿಡಿದ ಕಾರಣವೇನಿರಬೇಕೆಂಬುದು ಆಕೆಗೆ ತಿಳಿಯ ದಾಯಿತು. ಮುಬಾರಕನ ಮರಣದಿಂದ ಆಕೆಯು ಮೊದಲೇ ದುಃಖಿತಳಾಗಿದ್ದಳು. ಆ ಶೂರ ಪುರುಷನನ್ನು ಅನ್ಯಾಯದಿಂದ ಕೊಲ್ಲಿಸಿದ ಪಶ್ಚಾತ್ತಾಪದಿಂದ ಆಕೆಯ ಜೀವನಕ್ಕೆ ಸುಖವಿದ್ದಿಲ್ಲ. ಈ ಸ್ಥಿತಿಯಲ್ಲಿ ತನ್ನನ್ನು ರಾಜಸಿಂಹನು ಹಿಡಿದು ತಂದ ಕಾರಣವು ಗೊತ್ತಾಗದ್ದರಿಂದ ಆಕೆಯು ಮತ್ತಿಷ್ಟು ಆಲೋಚನೆಗೆ ಒಳಗಾದಳು.

## ಸತ್ಸಮಾಗಮದ ಪ್ರಭಾವ!

ಜಿಬುನ್ನಿಸೆಯು ಹೀಗೆ ಆಲೋಚಿಸುತ್ತಿರುವಾಗ ನಿರ್ಮಲೆಯು ಆಕೆಯನ್ನು ಚಂಚಲಕುಮಾರಿಯ ಬಳಿಗೆ ಕರೆದುಕೊಂಡು ಹೋಗಲು, ಚಂಚಲ ಕುಮಾರಿಯು ಅತ್ಯಂತ ಆದರದಿಂದ ಆಕೆಯನ್ನು ಸತ್ಕರಿಸಿದಳು. ಆಕೆಗೆ ಕುಳಿತುಕೊಳ್ಳುವುದಕ್ಕಾಗಿ ಬಹುಮಾನದ ಆಸನವನ್ನು ಕೊಟ್ಟಿದ್ದಳು. ಆಕೆಯೊಡನೆ ಬಗೆಬಗೆಯ ಸವಿಮಾತುಗಳನ್ನು ಆಡಿದಳು. ಜಿಬುನ್ನಿಸೆಯಾದರೂ ಚಂಚಲಕುಮಾರಿಯೊಡನೆ ಬಹಳ ಸೌಜನ್ಯದಿಂದ ನಡೆದುಕೊಂಡಳು. ಅವರಿಬ್ಬರಲ್ಲಿ ಜಗಳವು ಬರುವಂತಹ ಯಾವ ಮಾತುಕಥೆಗಳೂ ನಡೆಯಲಿಲ್ಲ. ಜಿಬುನ್ನಿಸೆಯ ಆದರಾತಿಥ್ಯದಲ್ಲಿ ಯಾವ ತರದ ಕೊರತೆಯೂ ಬಾರದಂತೆ ನಡೆದುಕೊಳ್ಳಬೇಕೆಂದು ನಿರ್ಮಲೆಗೆ ಚಂಚಲಕುಮಾರಿಯು ಹೇಳಿದಳು. ಕಡೆಗೆ ತಾಂಬೂಲ ಸುಗಂಧ-ದ್ರವ್ಯಾದಿ ಗಳಿಂದ ಶಹಾಜಾದಿಯ ಸತ್ಕಾರವಾಯಿತು. ಈ ಆದರೋಪಚಾರವನ್ನು ಜಿಬುನ್ನಿಸೆಯು ಆಶ್ಚರ್ಯದಿಂದ ನೋಡುತ್ತಲಿದ್ದಳು. ಆಕೆಯು ಚಂಚಲಕುಮಾರಿಯ ಸೌಜನ್ಯಕ್ಕೆ ತನ್ನ ಕ್ರೂರತನದ ಸೊಕ್ಕಿನ ನಡತೆಯನ್ನು ಹೋಲಿಸಿ ಮನಸ್ಸಿನಲ್ಲಿ ನಾಚಿಕೊಂಡಳು. ಮುಬಾರಕನ ಮರಣದಿಂದಲೇ ಜಿಬುನ್ನಿಸೆಯ ಕಠಿಣಹೃದಯವು ಮಿದುವಾಗುತ್ತ ಬಂದಿತ್ತು, ಆಕೆಯು ನಮ್ರಭಾವದಿಂದ ಚಂಚಲಕುಮಾರಿಯನ್ನು ಕುರಿತು—

ಜಿಬುನ್ನಿಸೆ—''ನನ್ನನ್ನು ಉದಯಪುರಕ್ಕೆ ಕರೆತಂದ ಕಾರಣವೇನು? ಇದರ ಉತ್ತರವು ನನಗೆ ಕೇಳಲಿಕ್ಕೆ ಬರುವ ಹಾಗಿರುವುದೇ?''

ಚಂಚಲಕುಮಾರಿ—''ಅದರಲ್ಲಿ ಕೇಳಲಿಕ್ಕೆ ಬಾರದ್ದೇನೂ ಇರುವುದಿಲ್ಲ. ನಿಮಗೆ ಬೇಕಾಗಿದ್ದವರೊಬ್ಬರು ನಿಮ್ಮನ್ನು ಕಾಣಬೇಕೆಂದು ಇಚ್ಛಿಸಿದ್ದರಿಂದ ನಿಮ್ಮನ್ನು ಕರೆದುಕೊಂಡು ಬರಬೇಕಾಯಿತು.

ಜಿಬುನ್ನಿಸೆ—''ಅವರ ಹೆಸರೇನು ದಯಮಾಡಿ ಹೇಳುವಿರಾ?''

ಚಂಚಲಕುಮಾರಿ—''ಅವರ ಹೆಸರು ಮುಬಾರಕ.''

ಚಂಚಲಕುಮಾರಿಯ ಈ ಮಾತನ್ನು ಕೇಳಿದ ಕೂಡಲೆ ಜಿಬುನ್ನಿಸೆಯು ಹೌಹಾರಿ ಚಂಚಲಕುಮಾರಿಯ ಮುಖವನ್ನು ನೋಡುತ್ತ ಕುಳಿತುಕೊಂಡಳು. 'ನನ್ನ ಮುಬಾರಕನೇ ನನ್ನನ್ನು ಕಾಣಲಿಚ್ಛಿಸಿರಬಹುದೇನು? ಛೆ! ಸತ್ತವರೆಲ್ಲಿಯಾದರೂ ತಿರುಗಿ ಬರುವುದುಂಟೆ? ಯಾವ ಮುಬಾರಕನಾಗಿರಬಹುದು?' ಎಂಬಿವೇ ಮೊದಲಾದ ವಿಚಾರಗಳಲ್ಲಿ ಮಗ್ನವಾಗಿರುವಾಗ ಆಕೆಯ ಮನಸ್ಸು ಅಸ್ವಸ್ಥವಾಯಿತು. ಆಗ ಆಕೆಯು ಚಂಚಲಕುಮಾರಿಯನ್ನು ಕುರಿತು—

ಜಿಬುನ್ನಿಸೆ—''ರಾಜಕುಮಾರೀ, ಯಾವ ಮುಬಾರಕನು? ನಮ್ಮ ಮುಬಾರಕನಂತೂ ಸತ್ತುಹೋಗಿರುವನು!''

ಚಂಚಲೆ—''ಆ ಸತ್ತುಹೋಗಿದ್ದ ನಿಮ್ಮ ಮುಬಾರಕನೇ ಮತ್ತೆ ಹೊಸದಾಗಿ ಹುಟ್ಟಿಬಂದಿರುತ್ತಾನೆ; ಆದರೆ ಶಹಾಜಾದೀ, ಆ ಶೂರ ಸರದಾರರು ಹೇಗೆ ಹೇಗೆ ಹುಟ್ಟಿ ಬಂದರೆಂಬುದನ್ನು ಅವರ ಮುಖದಿಂದ ನೀನೇ ಕೇಳು!''

ರಾಜಕುಮಾರಿಯ ಈ ಮಾತುಗಳನ್ನು ಕೇಳಿದ ಕೂಡಲೆ ಜಿಬುನ್ನಿಸೆಯು ಆನಂದದಿಂದ ಪರವಶಳಾದಳು. ಆಕೆಯು ಲಜ್ಜೆದೊರೆದು ಚಂಚಲಕುಮಾರಿಯ ಕಾಲಿಗೆರಗಿ ಕಣ್ಣೀರು ಸುರಿಸುತ್ತ—''ರಾಜಕುಮಾರೀ, ನೀನು ವ್ಯರ್ಥ ಮಾತನಾಡುವವಳಲ್ಲವೆಂಬುದನ್ನು ನಾನು ಬಲ್ಲೆನು. ಅಸತ್ಯವಂತೂ ನಿನ್ನ ಮುಖದಿಂದ ಹೊರಡಲಾರದು! ಬಾದಶಾಹೀ ಮನೆತನದವರಾದ ನಾವು ದುರಭಿಮಾನದ ಅಹಂಕಾರದಿಂದ ರಜಪೂತರಾದ ನಿಮ್ಮನ್ನು ಎಷ್ಟು ತಿರಸ್ಕರಿಸುತ್ತಿದ್ದರೂ, ನಿಮ್ಮ ಶೌರ್ಯದ ಭಯವೂ, ಸದ್ಗುಣಗಳ ವರ್ಚಸ್ಸೂ ನಮ್ಮ ಹೃದಯವನ್ನು ದುರ್ಬಲ ಮಾಡುತ್ತಿರುವುವೆಂಬುದರಲ್ಲಿ ಸಂಶಯವಿಲ್ಲ! ರಾಜಕುಮಾರೀ, ನಮ್ಮ ಆ ಮುಬಾರಕನನ್ನು ನಾನು ಯಾವಾಗ ಕೇಳಲಿ? ಆತನು ನನ್ನನ್ನು ಯಾವಾಗ ಕಾಣುವನು? ನೀಚಳಾದ ನಾನು ಆ ಸರಳ ಹೃದಯದ ಸರದಾರನ ಕಾಲಿಗೆರಗಿ ಯಾವಾಗ ಕ್ಷಮೆ ಬೇಡುವೆನೆನ್ನುವ ಹಾಗೆ ನನ್ನಲ್ಲಿ ಆಗಿದೆ.''

ಚಂಚಲಕುಮಾರಿ—''ಬರಿಯ ಕ್ಷಮೆ ಬೇಡಿದರೆ ನನಗೆ ಸಮಾಧಾನವಾಗುವುದಿಲ್ಲ; ಆದರೆ ಶಹಾಜಾದೀ, ನನ್ನ ಮಾತನ್ನು ನೀನು ಮನಸ್ಸಿಗೆ ಹಚ್ಚಿಕೊಳ್ಳದಿದ್ದರೆ ಒಂದು ಮಾತು ಹೇಳುತ್ತೇನೆ; ಅದು ಕೇವಲ ನಿನ್ನ ಹಿತದ್ದೇ ಆಗಿರುವುದು!''

ಜಿಬುನ್ನಿಸೆ—(ಕೈಜೋಡಿಸಿ) ''ಹೇಳು, ಅವಶ್ಯವಾಗಿ ಹೇಳು. ನಿನ್ನ ಮಾತನ್ನು ಸರ್ವಥಾ ಮೀರುವುದಿಲ್ಲ, ಇದಕ್ಕೆ ಅಲ್ಲಾನೇ ಸಾಕ್ಷಿಯು!''

ಚಂಚಲಕುಮಾರಿ—''ನೀನು ಮುಬಾರಕನನ್ನು ಲಗ್ನಮಾಡಿಕೋ.''

ಜಿಬುನ್ನಿಸೆ—''ಹಾಗೆ ಲಗ್ನಮಾಡಿಕೊಳ್ಳಲಿಕ್ಕೆ ಬರುವ ಹಾಗಿದ್ದರೆ, ಇಷ್ಟುಹೊತ್ತಿಗೆ ಲಗ್ನಮಾಡಿಕೊಂಡು ಬಿಡುತ್ತಿದ್ದೆನು; ಆದರೆ ಹಾಗೆ ಮಾಡಿಕೊಳ್ಳಲಿಕ್ಕೆ ಬರುವಹಾಗಿಲ್ಲ.''

ಚಂಚಲಕುಮಾರಿ—''ಅದೇಕೆ?''

ಜಿಬುನ್ನಿಸೆ—''ಶಹಾಜಾದಿಯರು ಶಹಾಜಾದಿಯರೊಡನೆಯೇ ಲಗ್ನವಾಗಬೇಕೆಂದು ಬಾದಶಹರು ಇಚ್ಛಿಸುತ್ತಿರುವರು. ದೊಡ್ಡಿಸ್ತನದ ದೃಷ್ಟಿಯಿಂದ ಇದು ಯೋಗ್ಯವಾದದ್ದೇ ಇರುತ್ತದೆ.''

ಚಂಚಲಕುಮಾರಿ—''ಹಾಗಾದರೆ ನೀನು ಮುಬಾರಕನನ್ನು ಯಾಕೆ ಪ್ರೀತಿಸುವೆ? ಶಹಾಜಾದೀ, ದಿಲ್ಲೀಶ್ವರನ ದೊಡ್ಡ ಮನೆತನದ ನೀನು ಸಿಟ್ಟು ಮಾತ್ರ ಆಗಬೇಡ! ನಿಮ್ಮ ಶಹಾಜಾದಿಯರ ಈ ರೀತಿಯು ರಜಪೂತ ಕುಮಾರಿಯರಾದ ನಮಗೆ ಸರ್ವಥಾ ಮನಸ್ಸಿಗೆ ಬರುವುದಿಲ್ಲ, ನೋಡು! ಅಲ್ಲವ್ವಾ! ವಿವಾಹವಾದ ಮಾತ್ರದಿಂದ ಪ್ರೇಮವು ಉತ್ಪನ್ನ ವಾಗುವುದನ್ನೂ, ಪ್ರೇಮವು ಉತ್ಪನ್ನವಾದ ಮಾತ್ರದಿಂದ ವಿವಾಹವಾಗುವುದನ್ನೂ ಮಾತ್ರ ನಾವು ಬಲ್ಲೆವು; ಆದರೆ ಪ್ರೇಮಕ್ಕೂ, ವಿವಾಹಕ್ಕೂ ಸಂಬಂಧವಿಡದೆ ನೀವು ನಡೆದು ಕೊಳ್ಳುವುದನ್ನು ನೋಡಿ ನಾವು ಹೇಸುವೆವಷ್ಟೇ ಅಲ್ಲ, ನಿಮ್ಮನ್ನು ಸ್ಪಷ್ಟವಾಗಿ ತಿರಸ್ಕರಿಸಿಯೂ ತಿರಸ್ಕರಿಸುವೆವು! ಜಿಬುನ್ನಿಸೇ, ನಾನು ನಿನ್ನ ಒಡಹುಟ್ಟಿದ ತಂಗಿಯೆಂದು ತಿಳಿದು ನನ್ನ ಮಾತನ್ನು ಕ್ಷಮಿಸು, ಸಿಟ್ಟಾಗಬೇಡ!''

ಜಿಬುನ್ನಿಸೆ—''ತಂಗೀ ಚಂಚಲೇ, ಸರ್ವಥಾ ನನಗೆ ಸಿಟ್ಟು ಬರುವುದಿಲ್ಲ, ನಿನ್ನ ಒಂದೇ ದಿನದ ಸಹವಾಸದಿಂದ ನನ್ನ ಹೃದಯದಲ್ಲಿಯ ಈರ್ಷೆ, ಅಸೂಯಾದಿ ಗುಣಗಳ ಕಸುವು ಕಡಿಮೆಯಾಗಿ, ಹೃದಯವು ಬಹುಮಟ್ಟಿಗೆ ಶುದ್ಧವಾಗಿರುತ್ತದೆ; ಆದರೆ ತಂಗೀ, ಪ್ರೇಮವು ಅಂಧವಾಗಿರುವುದರಿಂದ ಹೇಗೆ ಮಾಡಬೇಕು?''

ಚಂಚಲೆ—''ನಾವು ವಿವೇಕವನ್ನು ಬಿಡುವುದರಿಂದ ಮತ್ತು ದೇವರ ಹಾಗೂ ಗುರುಹಿರಿಯರ ಭಯವನ್ನು ಲೆಕ್ಕಿಸದೆ ಮನಸ್ಸಿಗೆ ಬಂದಹಾಗೆ ನಡೆಯುವುದರಿಂದ ನಮ್ಮ ವಿವೇಕವು ನಷ್ಟವಾಗಲು, ನಮ್ಮ ಪ್ರೇಮವು ಹೀನಸ್ಥಿತಿಯನ್ನು ಹೊಂದುವುದು; ಅಂತಹ ಅಶುದ್ಧ ಪ್ರೇಮವನ್ನು ನೀನು ಅಂಧಪ್ರೇಮವೆಂದು ತಿಳಿಯುವುದು ಸರಿಯಲ್ಲ! ತಂಗೀ, ಶುದ್ಧ ಪ್ರೇಮವು ಯೋಗ್ಯ ಸ್ಥಾನದಲ್ಲಿಯಲ್ಲದೆ ಬೇರ ಸ್ಥಾನದಲ್ಲಿ ಹೇಗೆ ಅಂಧವಾಗುವುದು?''

ಜಿಬುನ್ನಿಸೆ—''ತಿಳಿಯಿತು, ನಿನ್ನ ಮಾತಿನ ಮರ್ಮವು ನನಗೆ ತಿಳಿಯಿತು! ಶುದ್ಧ ಪ್ರೇಮವೇ ಅಯೋಗ್ಯ ಸ್ಥಾನದಲ್ಲಿ ಅಂಧವಾದರೆ ಹೇಗೆ ಮಾಡಬೇಕು ಹೇಳು?''

ಚಂಚಲಕುಮಾರಿ—''ಹಾಗೆ ಅಂಧವಾಗುವುದು ಅಶಕ್ಯವೆಂದು ನಾನಂತೂ ತಿಳಿದಿರುವೆನು; ನೀನೆಂದಂತೆ ಶುದ್ಧ ಪ್ರೇಮವೇ ಅಯೋಗ್ಯ ಸ್ಥಾನದಲ್ಲಿ ಅಂಧವಾದರೆ, ಅದರ ತಪ್ಪಿಗಾಗಿ ಪ್ರೇಮಕ್ಕೆ ಪಾತ್ರನಾದವನನ್ನು ಪತಿಯೆಂದು ತಿಳಿದು ಲಗ್ನ ಮಾಡಿಕೊಳ್ಳಬೇಕು.''

ಜಿಬ್ಬುನಿಸೆ—''ಲಗ್ನವಾಗಲಿಕ್ಕೆ ಬಾರದಹಾಗಿದ್ದರೆ?''

ಚಂಚಲಕುಮಾರಿ—''ಸಾಯುವವರೆಗೆ ಬ್ರಹ್ಮಚರ್ಯದಿಂದಿರಬೇಕು. ಜಿಬುನ್ನಿಸೇ, ಇಂತಹ ಅನವಸ್ಥೆಯು ತಾರುಣ್ಯದ ಭರದಲ್ಲಿ ಆಗುವ ಸಂಭವವು ವಿಶೇಷವಾಗಿರುವುದರಿಂದಲೇ ನಮ್ಮ ಹಿಂದೂ ಜನರಲ್ಲಿ ತಾಯಿ–ತಂದೆಗಳ ಇಚ್ಛೆಯಂತೆ ಲಗ್ನವಾಗುವ ರೀತಿಯೇ ಕಾಲಕ್ಕನುಸರಿಸಿ ರೂಢವಾಗಿರುವುದು; ಅದರಂತೆ ಹೆಣ್ಣುಮಕ್ಕಳು ಪ್ರೌಢರಾಗುವುದರೊಳಗೇ ಲಗ್ನ ಮಾಡಿಬಿಡುವ ಪದ್ಧತಿಯೂ ಬಳಕೆಯಲ್ಲಿ ಬಂದಿರುತ್ತದೆ; ಅದಿರಲಿ, ಈಗ ನೀನು ಮುಬಾರಕನನ್ನು ಲಗ್ನವಾದರೆ ಆಗುವ ಹಾನಿಯೇನು ಹೇಳು?''

ಜಿಬುನ್ನಿಸೆ—''ನಮ್ಮಿಬ್ಬರ ಶಿರಚ್ಛೇದವಾಗುವುದು.''

ಚಂಚಲೆ—''ಖುದಾನು ಮೆಚ್ಚಬೇಕಾದರೆ ನೀನು ಶಿರಚ್ಛೇದದ ಭಯವನ್ನು ಹಿಡಿಯುವುದು ಯೋಗ್ಯವಲ್ಲ. ನೀವು ಇಂತಹ ದುರ್ಬಲ ಹೃದಯದವರಾದದ್ದರಿಂದಲೇ ನಮ್ಮ ರಜಪೂತ ಸತಿಯರ ಸಹಗಮನವನ್ನು ಕಂಡು ನಡುಗುತ್ತೀರಿ!''

ಜಿಬುನ್ನಿಸೆ—(ಕೈಜೋಡಿಸಿ) ''ಚಂಚಲಕುಮಾರೀ, ನೀನು ಹುಡಿಗೆಯಾದರೂ ನಿನ್ನನ್ನು ನಾನು ತಾರಕಗುರುವೆಂದು ತಿಳಿಯುವೆನು. ಮುಬಾರಕನು ನನ್ನನ್ನು ಕಾಣಬಂದರೆ ನಿಶ್ಚಯವಾಗಿ ನಾನು ಆತನನ್ನು ಲಗ್ನಮಾಡಿಕೊಳ್ಳುವೆನು; ಆದರೆ ಈ ಕೆಲಸದಲ್ಲಿ ನೀನು ವಿಲಂಬವಾಗಗೊಡಬೇಡೆಂದು ಪ್ರಾರ್ಥಿಸುತ್ತೇನೆ.''

ಚಂಚಲಕುಮಾರಿ—''ಇಲ್ಲ, ಸರ್ವಥಾ ವಿಲಂಬ ಮಾಡುವುದಿಲ್ಲ, ಮಹಾರಾಣಾರವರು ತಮ್ಮ ರಾಜಧಾನಿಯೊಳಗಿನ ಮುಸಲ್ಮಾನರ ಸಲುವಾಗಿ ಒಂದು ಮಸೀದೆಯನ್ನು ಕಟ್ಟಿಸಿರುವರು. ಇಂದು ನಾಲ್ಕುತಾಸು ರಾತ್ರಿಯಲ್ಲಿ ಆ ಪವಿತ್ರ ಸ್ಥಾನದಲ್ಲಿ ನೀನು ಮುಬಾರಕನನ್ನು ಲಗ್ನ ಮಾಡಿಕೋ. ಎಂದಾದರೂ ಒಂದು ದಿನ ನಾವು ಸಾಯಲೇಬೇಕಾಗಿರುವುದಲ್ಲವೇ?''

ಜಿಬುನ್ನಿಸೆ—''ಅವಶ್ಯವಾಗಿ ಲಗ್ನಮಾಡಿಕೊಳ್ಳುವೆನು; ಆದರೆ ಮುಬಾರಕನು ನನ್ನನ್ನು ಕಾಣಲಿಕ್ಕೆ ಯಾವಾಗ ಬರುವನು?''

ಚಂಚಲಕುಮಾರಿ—''ಒಂದು ತಾಸು ರಾತ್ರಿಗೆ ನಿನ್ನಲ್ಲಿಗೆ ಬರುವಂತೆ ಮಾಣಿಕಲಾಲಸಿಂಹನು ವ್ಯವಸ್ಥೆ ಮಾಡಿರುವನು. ಆ ಪುಣ್ಯವಂತನೇ ಮುಬಾರಕನ ಪ್ರಾಣವನ್ನು ಉಳಿಸಿರುವನು!''

ಜಿಬುನ್ನಿಸೆಗೆ ಪರಮಾನಂದವಾಯಿತು. ಆಕೆಯು ಲಗ್ನಮಾಡಿಕೊಳ್ಳುವೆನೆಂಬ ನಿಶ್ಚಯದಿಂದ ಲೇ ನಿಶ್ಚಿಂತಳಾದಳು! ಆಕೆಯ ಜನ್ಮದಲ್ಲಿ ಅನುಭವಕ್ಕೆ ಬಾರದ ಶಾಂತಿಯು ಈಗ ಆಕೆಯ ಆತ್ಮಕ್ಕೆ ಪ್ರಾಪ್ತವಾಯಿತು. ಆಕೆಯು ಚಂಚಲಕುಮಾರಿಯ ಅನುಜ್ಞೆ ಪಡೆದು ತನ್ನ ಮನೆಗೆ ಹೊರಟಳು. ಆಕೆಯು ಬೇಡಬೇಡವೆಂದರೂ ಆಕೆಯನ್ನು ಕಳಿಸುತ್ತ ಆಕೆಯ ಮನೆಯವರೆಗೆ ಚಂಚಲಕು ಮಾರಿಯು ಹೋದಳು.

ಜಿಬುನ್ನಿಸೆಯ ಹೃದಯವು ಆನಂದದ ತೆರೆಗಳಿಂದ ಅಲ್ಲೋಲಕಲ್ಲೋಲವಾಗುತ್ತಿರಲು, ಆಕೆಯು ತನ್ನ ಪ್ರೀತಿಯ ಮುಬಾರಕನ ಹಾದಿಯನ್ನು ನೋಡುತ್ತ ಕುಳಿತುಕೊಂಡಳು. ಅಷ್ಟರಲ್ಲಿ ಮುಬಾರಕನು ಬರಲು, ಜಿಬುನ್ನಿಸೆಯು ಧಾವಿಸಿ ಹೋಗಿ ಆತನ ಚರಣಕ್ಕೆರಗಿ ಕಣ್ಣೀರುಗಳಿಂದ

ಆತನ ಪಾದಗಳನ್ನು ತೊಳೆಯುತ್ತ—"ಪ್ರಿಯ ಮುಬಾರಕ, ಕ್ಷಮಿಸು—ಈ ರಾಕ್ಷಸಿಯ ಸರ್ವಾಪರಾಧಗಳನ್ನು ಕ್ಷಮಿಸು! ಈಗ ಹೆಚ್ಚಿನ ಮಾತು ಬೇಡ. ಮೊದಲು ನಮ್ಮಿಬ್ಬರ ಲಗ್ನವಾಗಬೇಕು! ನಡೆ, ಮಸೀದೆಗೆ ಹೋಗಿ ಮೊದಲು ನಿಕಾಮಾಡಿಕೊಳ್ಳೋಣ"

ಮುಬಾರಕ—(ಆಶ್ಚರ್ಯದಿಂದ) "ಶಹಾಜಾದೀ, ಈ ವಿಪರೀತ ಬುದ್ಧಿಯು ನಿನಗೆ ಹೇಗೆ ಉತ್ಪನ್ನವಾಯಿತು? ಏಳು ಏಳು, ನಿನ್ನ ಅಪರಾಧವನ್ನು ನಾನು ಸಂಪೂರ್ಣವಾಗಿ ಕ್ಷಮಿಸಿದ್ದೇನೆ. ಹಾಗೆ ಕ್ಷಮಿಸದಿದ್ದರೆ, ನಿನ್ನ ಮುಖಾವಲೋಕನವನ್ನೂ ನಾನು ಮಾಡುತ್ತಿದ್ದಿಲ್ಲ."

ಜಿಬುನ್ನಿಸೆ—"ನಾನು ಧನ್ಯಳಾದೆನು; ಆದರೆ ನಮ್ಮಿಬ್ಬರ ಲಗ್ನವಾಗುವತನಕ ನಾನು ಒಂದೂ ಮಾತನಾಡುವುದಿಲ್ಲ; ನಮ್ಮಿಬ್ಬರ ಲಗ್ನದ ಕಾರಣವು, ನನಗಾದ ಪವಿತ್ರ ಹೃದಯದ ಚಂಚಲಕುಮಾರಿಯ ಒಂದು ದಿವಸದ ಸಹವಾಸವೆಂಬುದನ್ನು ಮಾತ್ರ ಈಗ ಹೇಳದೆ ಇರಲಾರೆನು."

ಅದೇ ರಾತ್ರಿ ಮಸೀದೆಯಲ್ಲಿ ಇಸ್ಲಾಮಿ ಧರ್ಮವಿಧಿಯಂತೆ ಅವರಿಬ್ಬರ ಲಗ್ನವಾಗಿ, ಪವಿತ್ರವಾದ ದಾಂಪತ್ಯವು ಅವರಲ್ಲಿ ಉಂಟಾಯಿತು! ಅದರಿಂದ ಅವರ ಮಲಿನವಾದ ರಾಜಸಪ್ರೇಮವು ಶುದ್ಧ ಸಾತ್ವಿಕ ಸ್ವರೂಪವನ್ನು ಹೊಂದಿತು. ಲಗ್ನದ ವಿಧಿಯು ಮುಗಿದ ಬಳಿಕ ಮುಬಾರಕನು ತನ್ನ ಹೆಂಡತಿಯಾದ ಜಿಬುನ್ನಿಸೆಯನ್ನು ಆಕೆಯ ಸ್ಥಳಕ್ಕೆ ಕಳಿಸಿದನು. ಪ್ರೇಮದ ಭರದಲ್ಲಿ ಆತನು ತನ್ನ ಪ್ರಾಣವು ಬದುಕಿದ ರೀತಿಯನ್ನು ಸಮಗ್ರವಾಗಿ ಹೇಳಿದನು. ಅದನ್ನು ಕೇಳಿ ಜಿಬುನ್ನಿಸೆಯು ಮಾಣಿಕಲಾಲನನ್ನು ಮಹಾ ಸತ್ಪುರುಷನೆಂದು ಭಾವಿಸಿದಳು. ಆ ನೂತನ ದಂಪತಿಗಳ ಮಾತಿನ ಭರದಲ್ಲಿ ರಾತ್ರಿಯು ಬಹಳವಾಗಲು, ಮುಬಾರಕನು ಜಿಬುನ್ನಿಸೆಯನ್ನು ಕುರಿತು—"ಪ್ರಿಯೇ, ರಾತ್ರಿಯು ಬಹಳವಾಯಿತು. ನೀನು ಚಂಚಲ ಕುಮಾರಿಯ ಸೆರೆಯಾಳಾಗಿರುತ್ತೀಯೆಂದು ನಾನು ಹೇಳುವ ಕಾರಣವಿಲ್ಲ; ಆದರೂ ನಿನ್ನ ಬಿಡುಗಡೆಯು ಬೇಗನೆ ಆಗುವುದೆಂಬುದರಲ್ಲಿ ನನಗೆ ಸಂಶಯವಿಲ್ಲ. ಇನ್ನು ನಾನು ಹೋಗುವೆನು ಅನ್ನಲು, ಜಿಬುನ್ನಿಸೆಯು—"ಪ್ರಿಯ ಮುಬಾರಕ, ಇನ್ನು ನಾವು ದಿಲ್ಲಿಗೆ ಹೋಗುವುದೇ ಬೇಡ, ಎಲ್ಲಿಯಾದರೂ ಬಡವರಾಗಿ ಸುಖದಿಂದ ಕಾಲಹರಣ ಮಾಡೋಣ. ನನ್ನ ತಂದೆಯು ನಿನ್ನ ಪ್ರಾಣಹರಣ ಮಾಡುವನೆಂಬ ಭಯವು ನನ್ನನ್ನು ಬಾಧಿಸುತ್ತಿರುವುದು! ಯಾಕೆ ನನ್ನ ಮಾತಿಗೆ ನಿನ್ನ ಒಪ್ಪಿಗೆಯಿರುವುದಲ್ಲವೇ?" ಎಂದು ಕೇಳಿದಳು. ಅದಕ್ಕೆ ಮುಬಾರಕನು ಉಸುರ್ಗರೆದು—"ಜಿಬುನ್ನಿಸೇ, ನಿನ್ನನ್ನು ಲಗ್ನಮಾಡಿಕೊಂಡಾಗಲೇ ನಾನು ಜೀವದ ಆಶೆಯನ್ನು ಬಿಟ್ಟಿದ್ದೇನೆ; ಆದರೆ ಅಲ್ಲಾನ ಇಚ್ಛೆಯಿದ್ದಂತಾಗಲಿ! ಈಗ ನಡೆದಿರುವ ಯುದ್ಧದ ಕಥೆಯಂತೂ ಮುಗಿಯಲಿ, ಆಮೇಲೆ ಬೇಕಾದಹಾಗೆ ಮಾಡೋಣ; ಆದರೆ ಆಲಮಗೀರನ ದವಡೆಯೊಳಗಿಂದ ಪಾರಾಗಿ ಹೋಗುವುದು ಸುಲಭವಲ್ಲವೆಂಬುದನ್ನು ನಾವಿಬ್ಬರೂ ನೆನಪಿನಲ್ಲಿ ಇಡೋಣ!"

# ಒಡಂಬಡಿಕೆ

ಹಿಂದೆ ಹದಿನೈದನೆಯ ಪ್ರಕರಣದ ಕಥೆಯಲ್ಲಿ ಹೇಳಿದಂತೆ, ಮಹಾರಾಣಾ ರಾಜಸಿಂಹನು ದರ್ಬಾರದಲ್ಲಿ ತನ್ನ ವೀರ ಪರಿವಾರವನ್ನು ಕುರಿತು ಬೋಧಿಸಲು, ಅರೆದಾಟವಾಗಿ ಕಡೆಗೆ ಕೆಳಗಿನ ಕರಾರುಗಳಂತೆ ಬಾದಶಹನೊಡನೆ ಒಡಂಬಡಿಕೆ ಮಾಡಿಕೊಳ್ಳುವುದು ಗೊತ್ತಾಯಿತು.

1. ಬಾದಶಹನು ಶಸ್ತ್ರಗಳನ್ನು ಗುಡ್ಡದ ಕಣಿವೆಯಲ್ಲಿ ಇಟ್ಟು ಹೊರಬಿದ್ದು ಉದಯಪುರದ ರಾಜ್ಯದ ಗಡಿಯನ್ನು ಬಿಟ್ಟು ಹೋಗಬೇಕು.

2. ಜಿಜಿಯಾ ತೆರಿಗೆಯನ್ನು ಕೂಡಿಸಬಾರದು, ದೇವಸ್ಥಾನಗಳ ಗೊಡವೆಗೆ ಹೋಗ ಬಾರದು.

3. ಸೆರೆಯಲ್ಲಿರುವ ಉದೇಪುರೀ ಬೇಗಮಳನ್ನೂ, ಜೆಬುನ್ನಿಸಾ ಶಹಾಜಾದಿಯನ್ನೂ ರಾಣಾನು ಬಂಧಮುಕ್ತಮಾಡಿ ಬಿಡಬೇಕು.

ಈ ಗೊತ್ತುವಳಿಗಳಿಂದ ಒಡಂಬಡಿಕೆಯ ಪತ್ರವು ಬರೆದು ಸಿದ್ಧವಾಯಿತು. ಆದರೆ ಬಾದಶಹನಿಗೆ ಅದನ್ನು ಮುಟ್ಟಿಸುವ ಬಗೆ ಹೇಗೆ? ಕಣಿವೆಯೊಳಗೆ ಸಿಕ್ಕಿಕೊಂಡವರಿಗೆ ಹೊರಗೆ ಬರಲಿಕ್ಕೆ ಮಾರ್ಗವಿಲ್ಲದಿರುವಂತೆ, ಹೊರಗಿದ್ದವರಿಗೆ ಒಳಗೆ ಹೋಗಲಿಕ್ಕೂ ಮಾರ್ಗವಿದ್ದಿಲ್ಲ, ಮೇಲಾಗಿ ಪತ್ರ ತಂದವನನ್ನು ಬಾದಶಹನು ತುಂಡರಿಸಿ ಚೆಲ್ಲುವನೆಂಬ ಭಯವಂತೂ ಎಲ್ಲರಿಗೂ ಇದ್ದೇ ಇತ್ತು, ಅಂದಬಳಿಕ ಬೇಕೆಂತಲೆ ಸಾವಿನ ಬಾಯಿಗೆ ಯಾರು ಸಿಗುವರು? ರಾಣಾನ ಅಪ್ಪಣೆಯಾದರಂತೂ ನಿರ್ವಾಹವೇ ಇದ್ದಿಲ್ಲ. ರಾಣಾನಾದರೂ ಈ ಮಾತಿನ ವಿಚಾರಮಾಡುತ್ತ ಯಾರನ್ನು ಕಳಿಸಬೇಕೆಂದು ಆಲೋಚಿಸತೊಡಗಿದನು. ಆಗ ಮಾಣಿಕಲಾಲನು ಮಹಾರಾಣಾನನ್ನು ಕುರಿತು ಕೈಜೋಡಿಸಿ—''ಪ್ರಭುಗಳು ನನ್ನನ್ನು ಆಜ್ಞಾಪಿಸಿದರೆ, ಬಾದಶಹನಿಗೆ ನಾನು ಪತ್ರವನ್ನು ಮುಟ್ಟಿಸುವೆನು'' ಎಂದು ಬೇಡಿಕೊಂಡನು. ಮಾಣಿಕ ಲಾಲನ ಶೌರ್ಯ–ಚಾತುರ್ಯಗಳ ವಿಷಯದಲ್ಲಿ ಯಾರಿಗೂ ಸಂಶಯವಿದ್ದಿಲ್ಲ. ಆತನನ್ನೇ ಕಳಿಸಬೇಕೆಂದು ರಾಜಸಿಂಹನು ನಿಶ್ಚಯಿಸಿ, ಒಡಂಬಡಿಕೆಯ ಪತ್ರವನ್ನು ಮಾಣಿಕಲಾಲನ ಕೈಯಲ್ಲಿ ಕೊಟ್ಟನು.

ಮಾಣಿಕಲಾಲನು ಉದಯಪುರಕ್ಕೆ ಹೋಗಿ ನಿರ್ಮಲಕುಮಾರಿಯನ್ನು ಕಂಡು ಒಡಂಬಡಿಕೆಯ ಕರಾರುಗಳನ್ನು ಆಕೆಗೆ ತಿಳಿಸಿದನು. ಆಗ ನಿರ್ಮಲೆಯು ಮಾಣಿಕಲಾಲನಿಗೆ ಮುಬಾರಕನ ಲಗ್ನದ ಸುದ್ದಿಯನ್ನು ಹೇಳಿ, ಇದರಿಂದ ಬಾದಶಹನು ಸಿಟ್ಟಾಗಿ ಮಾಡಬಹುದಾದ ಅನರ್ಥವನ್ನು ವಿವರಿಸಿದಳು. ಜೆಬುನ್ನಿಸೆಯು ಜನಾನಖಾನೆಯ ಕಾಯದೆಗೆ ವಿರುದ್ಧವಾಗಿ ಒಬ್ಬ ಸೇನಾಪತಿಯನ್ನು ಲಗ್ನ ಮಾಡಿಕೊಂಡು ಬಾದಶಾಹಿಯ ಅಪಮಾನ ಮಾಡಿದ್ದಕ್ಕಾಗಿ ಆಕೆಯು ವಿಷ ಕುಡಿದು ಸಾಯಬೇಕಾಗಿತ್ತು, ಮುಬಾರಕನು ಯಾವುದೊಂದು ಉಪಾಯದಿಂದ ಜೀವಕ್ಕೆ ಎರವಾಗಬೇಕಾಗಿತ್ತು, ಈ ಅನರ್ಥವು ತಪ್ಪಬೇಕಾದರೆ ಒಡಂಬಡಿಕೆಯ ಕರಾರುಗಳಲ್ಲಿ

ಬಾದಶಹನು ತನ್ನ ಮಗಳನ್ನೂ, ಅಳಿಯನನ್ನೂ ಕ್ಷಮಿಸುವುದೊಂದು ಕರಾರನ್ನು ಹಾಕಬೇಕೆಂದು ನಿರ್ಮಲೆಯು ಮಾಣಿಕಲಾಲನಿಗೆ ಹೇಳಿದಳು ಹಾಗೆ ಮಾಡುವುದು ಮಾಣಿಕಲಾಲನಿಗೆ ಅವಶ್ಯವಾಗಿ ತೋರಿದ್ದರಿಂದ, ಆತನು ಪುನಃ ರಾಜಸಿಂಹನ ಬಳಿಗೆ ಹೋಗಿ ಏಕಾಂತದಲ್ಲಿ ಈ ಮಾತನ್ನೆಲ್ಲ ತಿಳಿಸಿದನು. ಅದಕ್ಕೆ ರಾಜಸಿಂಹನು—''ಈ ವಿಷಯವಾಗಿ ಬಾದಶಹನಿಗೆ ನಾನೊಂದು ಬೇರೆ ಪತ್ರ ಕೊಡುವೆನು, ಅದನ್ನು ಒಡಂಬಡಿಕೆಯ ಸಂಗಡ ಬಾದಶಹನಿಗೆ ಕೊಡು'' ಎಂದು ಹೇಳಿ, ಒಂದು ಪತ್ರವನ್ನು ಬರೆದು ಮಾಣಿಕಲಾಲನ ಕೈಯಲ್ಲಿ ಕೊಟ್ಟನು.

ಮಾಣಿಕಲಾಲನು ಪುನಃ ನಿರ್ಮಲೆಯ ಬಳಿಗೆ ಬಂದು ಎಲ್ಲ ಸಂಗತಿಯನ್ನು ತಿಳಿಸಿ ಮಹಾರಾಣಾನು ಬಾದಶಹನಿಗೆ ಪತ್ರ ಬರೆದದ್ದನ್ನು ತೋರಿಸಲು, ನಿರ್ಮಲೆಯು ಬಾದಶಹನಿಗೆ ಮುಟ್ಟಿಸುವುದಕ್ಕಾಗಿ ತಾನೂ ಒಂದು ಪತ್ರವನ್ನು ಬರೆದು ಮಾಣಿಕಲಾಲನ ಕೈಯಲ್ಲಿ ಕೊಟ್ಟಳು. ಆ ಪತ್ರದಲ್ಲಿ ನಿರ್ಮಲೆಯು ಬರೆದದ್ದೇನೆಂದರೆ—

''ಶಾಹ ಶಾಹ,

ದಾಸಿಯ ಅಸಂಖ್ಯ ಕುರನೀಸಗಳು! ಹುಜೂರು ಮಾಡಿದ ಅಪ್ಪಣೆಯನ್ನು ದಾಸಿಯು ತಲೆಯಲ್ಲಿ ಹೊತ್ತು ಪಾಲಿಸಿದ್ದೇನೆ. ಇನ್ನು ಹೂಜೂರಿನ ಮಂಜೂರಿಯು ದೊರೆತರಾಯಿತು. ಖಾವಿಂದ, ಜಹಾಪನಾಹ, ನಾನು ಕಟ್ಟಕಡೆಯಲ್ಲಿ ಹುಜೂರಿನ ಭಿಕ್ಷೆ ಬೇಡಿಕೊಂಡಿರುವುದನ್ನು ನೆನಪಿಗೆ ತಂದುಕೊಂಡು ಈಗ ಒಡಂಬಡಿಕೆ ಮಾಡಿಕೊಳ್ಳಬೇಕು.

ಹುಜೂರಿನ,

ಇಮಲಿ ಬೇಗಂ''

ಈ ಮೇರೆಗೆ ಪತ್ರಗಳನ್ನು ಮಾಣಿಕಲಾಲನು ತನ್ನ ಕಲಿಸಿದ ಪಾರಿವಾಳದ ಕಾಲಿಗೆ ಕಟ್ಟಿ ಅದನ್ನು ಹಾರಿಸಿದನು. ಅದರ ಕಾಲಿನಲ್ಲಿ ಮೂರು ಪತ್ರಗಳ ಭಾರವಿದ್ದುದರಿಂದ ಅದು ಹೇಗಾದರೂ ಹಾರುತ್ತ ಹೋಗಿ ಔರಂಗಜೇಬನ ತಲೆಯ ಮೇಲೆ ಆಡಹತ್ತಿತು. ಅದೇ ಕಾಲದಲ್ಲಿ ಔರಂಗಜೇಬನು ಆಕಾಶದ ಕಡೆಗೆ ಮುಖವೆತ್ತಿ ನೋಡುತ್ತಲಿದ್ದನು. ಪಾರಿವಾಳವು ಆತನ ಬಳಿಯಲ್ಲಿ ಇಳಿಯಿತು. ಆತನು ಅದರ ಕಾಲೊಳಗಿನ ಮೂರೂ ಪತ್ರಗಳನ್ನು ಬಿಚ್ಚಿಕೊಂಡು ಓದಿನೋಡಿದನು. ರಾಜಸಿಂಹನ ಯಾವತ್ತೂ ಕರಾರುಗಳಿಗೆ ಒಪ್ಪಿ ಅದರಂತೆ ಕೂಡಲೆ ಬರೆದು ಪಾರಿವಾಳದ ಮುಖಾಂತರ ಮಹಾರಾಣಾನಿಗೆ ತಿಳಿಸಿದನು. ಬಳಿಕ ಮಹಾರಾಜಾನು ಸಂಧಿಯ ಪತ್ರಕ್ಕೆ ಸಿಕ್ಕಾ ಮೊರ್ತಬುಗಳೂ, ಭಾದಶಹರ ರುಜುವೂ ಆಗಿಬರಬೇಕೆಂದು ತಿಳಿಸಿದನು. ಬಾದಶಹನ ಮುನಸಿಯು ಸಂಧಿಯ ಪತ್ರವನ್ನು ಬರೆದನು. ಅದರ ಮೇಲೆ ಬಾದಶಹನು ತನ್ನ ಹಸ್ತದ ಮುದ್ರೆಯನ್ನು ಒತ್ತಿಸಿ, ಸ್ವತಃ ತನ್ನ ಕೈಯಿಂದ ''ಮಂಜೂರ'' ಎಂಬ ಶಬ್ದವನ್ನು ಬರೆದನು. ಜಿಬುನ್ನಿಸೆಯನ್ನೂ, ಮುಬಾರಕನನ್ನೂ ಕ್ಷಮಿಸುವೆನೆಂದು ಬಾದಶಹನು ಒಪ್ಪಿಕೊಂಡನು; ಆದರೆ ಈ ವಿವಾಹವು ನಾಲ್ಕು ಜನರ ಕಿವಿಗೆ ಬೀಳದಂತೆ ಗುಪ್ತವಾಗಿ ಇಡಬೇಕೆಂದು ತಿಳಿಸಿದನು.

ಸಂಧಿಯ ಪತ್ರವು ಕೈಗೆ ಬಂದ ಕೂಡಲೆ ಮೊಗಲ ಸೈನ್ಯವನ್ನು ಮುಕ್ತಮಾಡಬೇಕೆಂದು ರಾಜಸಿಂಹನು ಆಜ್ಞಾಪಿಸಿದನು. ಆನೆ ಮೊದಲಾದವುಗಳ ಸಹಾಯದಿಂದ ರಜಪೂತರು ಕಣಿವೆಯ ಬಾಯಿಯನ್ನು ತೆರೆದರು. ಉದೇಪುರಿಯೂ, ಜಿಬುನ್ನಿಸೆಯೂ ಬಾದಶಹನ ಬೇಗಮರ ಹಿಂಡಿನಲ್ಲಿ ಬಂದು ಕೂಡಲು, ಔರಂಗಜೇಬನು ಮುಖ ತಗ್ಗಿಸಿಕೊಂಡು ಸೈನ್ಯದೊಡನೆ ಕಣಿವೆಯಿಂದ ಹೊರಬಿದ್ದು ನಡೆದನು. ಉದಯಸಾಗರದ ಮೇಲೆ ಆತನ ಸೈನ್ಯದ ಬೀಡುಬಿಟ್ಟಿತು. ರಾಜಸಿಂಹನು ದಯಾವಂತನಾಗಿ ಬಾದಶಹನ ಯಾವತ್ತೂ ಸೈನ್ಯಕ್ಕೆ ಆಹಾರದ ಪದಾರ್ಥಗಳನ್ನು ಒದಗಿಸಿಕೊಟ್ಟನು. ಆ ದಿನ ರಾತ್ರಿಯನ್ನು ಔರಂಗಜೇಬನು ಉದಯಸಾಗರದ ದಂಡೆಯ ಮೇಲೆ ಕಳೆದನು.

ಬಾದಶಹನು ಛಾವಣಿಯೊಳಗಿನ ರಂಗಮಹಲನ್ನು ಪ್ರವೇಶಿಸಲು, ಜಿಬುನ್ನಿಸೆಯು ಕೈಜೋಡಿಸಿಕೊಂಡು ತಂದೆಯ ಮುಂದೆ ಬಂದು ನಿಂತುಕೊಂಡಳು. ಬಾದಶಹನು ಆಕೆಯನ್ನು ಕುರಿತು—''ನೀನು ಸ್ವಬುದ್ಧಿಯಿಂದ ಲಗ್ನಮಾಡಿಕೊಂಡಿರುವುದಿಲ್ಲೆಂಬ ಮಾತು ನನಗೆ ಗೊತ್ತಿರುವುದು; ಆದ್ದರಿಂದ ನಿನ್ನ ತಪ್ಪನ್ನು ನಾನು ಕ್ಷಮಿಸಿದ್ದೇನೆ; ಆದರೆ ಲಗ್ನದ ಮಾತು ಹೊರ ಬೀಳದಂತೆ ಎಚ್ಚರದಿಂದ ಇರು'' ಎಂದು ಹೇಳಿದನು. ಆಮೇಲೆ ಬಾದಶಹನು ಉದೇಪುರಿಯನ್ನು ಕಂಡನು. ನಾಯಿಯ ಬಾಲವು ಡೊಂಕವೆನ್ನುವಂತೆ, ಆಕೆಯು ತನ್ನ ಸ್ವಭಾವಕ್ಕನುಸರಿಸಿ ಚಂಚಲಕುಮಾರಿಯ ಮೇಲೆ ಇಲ್ಲದ್ದೊಂದು ಹೇಳಿದಳು. ಅದನ್ನು ಕೇಳಿ ಬಾದಶಹನು ಸಂತಾಪಗೊಂಡನು; ಆತನಿಗೆ ಪರಮಾವಧಿ ದುಃಖವೂ ಆಯಿತು!

ಮರುದಿವಸ ದರ್ಬಾರವು ನೆರೆಯಿತು; ಬಾದಶಹನು ಅಲ್ಲಿಗೆ ಹೋಗುವ ಮೊದಲು ಮುಬಾರಕನನ್ನು ಏಕಾಂತದಲ್ಲಿ ಕರೆಯಿಸಿ ಆತನನ್ನು ಕುರಿತು—''ನೀನು ನನ್ನ ಅಳಿಯನಾದುದರಿಂದ ನಿನ್ನ ತಪ್ಪನ್ನು ಕ್ಷಮಿಸಿರುತ್ತೇನೆ. ನನ್ನ ಆಪ್ತನಾದ ನಿನ್ನನ್ನು ಹೀನಸ್ಥಿತಿಯಲ್ಲಿಡಲಾರೆನಾದ್ದರಿಂದ ನಿನ್ನನ್ನು ಇವತ್ತಿನಿಂದ ಹತ್ತುಸಾವಿರ ಮನಸಬದಾರನನ್ನಾಗಿ ಮಾಡಿರುತ್ತೇನೆ. ಹುಕುಮು ಈಗ ನಿನ್ನ ಕೈಗೆ ಬೀಳಬಹುದು; ಆದರೆ ಇಲ್ಲಿ ನೀನು ಇರಲಾಗದು; ಯಾಕೆಂದರೆ ಶಹಾಜಾದಾ ಅಕಬರನು ಜಯಸಿಂಹನ ಕೈಯಲ್ಲಿ ಸಿಕ್ಕುಬಿದ್ದಿರುವುದರಿಂದ, ಆತನನ್ನು ಬಿಡಿಸಿಕೊಂಡು ಜಯಸಿಂಹನ ಶಾಸನ ಮಾಡಬೇಕಾಗಿರುವುದು. ಆ ಕೆಲಸಕ್ಕಾಗಿ ದಿಲೇರಖಾನನು ಸೈನ್ಯದೊಡನೆ ಮುಂದೆ ಹೊರಟಿದ್ದಾನೆ. ನಿನ್ನಂತಹ ವೀರನ ಅವಶ್ಯಕತೆಯು ಅಲ್ಲಿ ವಿಶೇಷವಾಗಿರುವುದು. ನೀನು ಇಂದೇ ದಿಲೇರಖಾನನ ಸಹಾಯಕ್ಕಾಗಿ ಹೊರಟುಹೋಗು'' ಎಂದು ಆಜ್ಞಾಪಿಸಿದನು. ಇದನ್ನು ಕೇಳಿ ಮುಬಾರಕನಿಗೆ ಆನಂದವಾಗಲಿಲ್ಲ, ಇದು ತನ್ನ ಮೃತ್ಯುವಿನ ಸೂಚನೆಯೆಂದು ಆತನು ತರ್ಕಿಸಿದನು. ಆತನ ತರ್ಕವು ಸುಳ್ಳೂ ಇದ್ದಿಲ್ಲ. ಹೀಗೆ ಮುಬಾರಕನನ್ನು ಆಜ್ಞಾಪಿಸಿದ ಬಾದಶಹನು ತನ್ನ ಒಬ್ಬ ನಂಬಿಗೆಯ ಸೇವಕನ ಮುಖಾಂತರವಾಗಿ ದಿಲೇರಖಾನನಿಗೆ ಒಂದು ಗುಪ್ತ ಪತ್ರವನ್ನು ಬರೆದು ಕಳಿಸಿದನು. ಅದರಲ್ಲಿ—''ಮುಬಾರಕನು ಯುದ್ಧದಲ್ಲಿ ಮರಣಹೊಂದಿದರಂತೂ ಸರಿಯೇ; ಮರಣಹೊಂದದಿದ್ದರೆ ಏನಾದರೂ ಮಾಡಿ ಇಂದೇ ಅವನನ್ನು ಕೊಲ್ಲಿಸಬೇಕು'' ಎಂದು ಬರೆದಿತ್ತು. ದಿಲೇರಖಾನನಿಗೆ ಮುಬಾರಕನ ಗುರುತು ಇದ್ದಿಲ್ಲ. ಬಾದಶಹನ ಅಪ್ಪಣೆಯನ್ನು ಪಾಲಿಸಲು ಆತನು ಸಿದ್ಧನಾದನು.

ಇಷ್ಟೆಲ್ಲ ಆದಬಳಿಕ ಔರಂಗಜೇಬನು ದರ್ಬಾರದಲ್ಲಿ ಬಂದು ಕುಳಿತು ಎಲ್ಲರನ್ನು ಉದ್ದೇಶಿಸಿ—"ನಾವು ಗುಡ್ಡಗಾಡ ಜನರ ಬಲೆಯಲ್ಲಿ ಸಿಕ್ಕಿದ್ದರಿಂದ ಒಡಂಬಡಿಕೆಯನ್ನು ಮಾಡಿಕೊಂಡಿರುವೆವು; ಆದರೆ ಅದಕ್ಕೆ ಸರ್ವಥಾ ನಮ್ಮ ಒಪ್ಪಿಗೆಯಿರುವುದಿಲ್ಲ. ಒಬ್ಬ ಯಕಃಶ್ಚಿತ ಜಮೀನದಾರನೊಡನೆ ಬಾದಶಹನ ಒಡಂಬಡಿಕೆ ಎಂತಹದು! ನಾನು ಒಡಂಬಡಿಕೆಯ ಚೀಟಿಯನ್ನು ಹರಿದು ಗಾಳಿಗೆ ಹಾರಿಸಿಬಿಡುತ್ತೇನೆ. ರೂಪನಗರದ ರಾಜಕನ್ಯೆಯನ್ನು ನಮಗೆ ಒಪ್ಪಿಸದಿರುವುದು ರಾಜಸಿಂಹನ ದೊಡ್ಡ ಅಪರಾಧವು. ರೂಪನಗರದ ವಿಕ್ರಮಸಿಂಹನು ತನ್ನ ಮಗಳನ್ನು ನನಗೆ ಒಪ್ಪಿಸಿರುವುದರಿಂದ, ಆ ಚಂಚಲಕುಮಾರಿಯ ಮೇಲೆ ರಾಜಸಿಂಹನ ಅಧಿಕಾರವು ಸರ್ವಥಾ ಇರುವುದಿಲ್ಲ. ಆಕೆಯನ್ನು ನನಗೆ ತಂದು ಒಪ್ಪಿಸಿದ ಹೊರತು ನಾನು ರಾಜಸಿಂಹನನ್ನು ಎಷ್ಟುಮಾತ್ರವೂ ಕ್ಷಮಿಸಲಾರೆನು. ಆಕೆಯ ಸಲುವಾಗಿ ಯುದ್ಧವು ಹೀಗೆಯೇ ಮುಂದಕ್ಕೆ ಸಾಗುವುದು. ರಾಣಾನ ರಾಜ್ಯದಲ್ಲಿ ಆಕಳುಗಳು ಕಣ್ಣಿಗೆ ಬಿದ್ದಕೂಡಲೆ ನಮ್ಮ ಜನರು ಅವರನ್ನು ತುಂಡರಿಸಿ ಚೆಲ್ಲುವರು; ಜಿಜಿಯಾ ತೆರಿಗೆಯನ್ನು ಎಲ್ಲ ಕಡೆಯಲ್ಲಿಯೂ ಎತ್ತಲಾಗುವುದು; ಮೂರ್ತಿಗಳನ್ನು ಒಡೆದು ಗುಡಿಗಳನ್ನು ಕೆಡವಲಾಗುವುದು!"

ಕೂಡಲೆ ಈ ಸುದ್ದಿಯು ಎಲ್ಲ ಕಡೆಗೆ ಹಬ್ಬಿತು. ದಿಲೇರಖಾನನು ಉದೇಪುರದ ಮೇಲೆ ಸಾಗಿಬರುವನೆಂಬ ಸುದ್ದಿಯು ರಾಜಸಿಂಹನಿಗೆ ಹತ್ತಿತು. ಆಗ ರಾಜಸಿಂಹನು ಔರಂಗಜೇಬನ ಕಡೆಗೆ ತನ್ನ ದೂತನನ್ನು ಕಳಿಸಿ—"ಒಡಂಬಡಿಕೆಯಾಗಿರುವಾಗ ಪುನಃ ಯುದ್ಧದ ಪ್ರಸಕ್ತಿಯೇಕೆ?" ಎಂದು ಕೇಳಿದನು. ಅದಕ್ಕೆ ಬಾದಶಹನು—"ಒಬ್ಬ ಸಾಧಾರಣ ಜಮೀನದಾರನೊಡನೆ ಒಡಂಬಡಿಕೆ ಯೆಂತಹದು! ಚಂಚಲಕುಮಾರಿಯನ್ನು ನನ್ನ ಕಡೆಗೆ ಕಳಿಸಿದ ಹೊರತು ನಾನು ನಿನ್ನನ್ನು ಕ್ಷಮಿಸಲಾರೆನು" ಎಂದು ಉತ್ತರಕೊಟ್ಟನು. ಅದಕ್ಕೆ ರಾಜಸಿಂಹನು—"ನಾನು ಇನ್ನೂ ಬದುಕಿ ಇರುವೆನು. ರೂಪನಗರದ ರಾಜಕನ್ಯೆಯನ್ನು ಹರಣ ಮಾಡಿದ್ದು ಬಾದಶಹನ ಕಣ್ಣಿನಲ್ಲಿ ಒತ್ತುತ್ತಿರುವುದಲ್ಲವೇ? ಒಳ್ಳೇದು, ಇನ್ನು ಮುಂದೆ ಏನಾಗುತ್ತ ದೆಂಬುದನ್ನು ನೋಡಲಿ!"

ರಾಜಸಿಂಹನು ರಾಜನೀತಿಯಲ್ಲಿಯೂ, ರಣನೀತಿಯಲ್ಲಿಯೂ ಅದ್ವಿತೀಯ ಪಂಡಿತ ನಾಗಿದ್ದನು. ಮೊಗಲರು ತನ್ನ ರಾಜ್ಯದ ಗಡಿಯನ್ನು ದಾಟಿ ಹೋಗುವವರೆಗೆ ಆತನು ತನ್ನ ಸೈನ್ಯ ತಳವನ್ನು ಕೀಳಲಿಲ್ಲ. ಇತ್ತ ದಿಲೇರಖಾನನು ಶಹಾಜಾದಾ ಅಕಬರನನ್ನು ಬಿಡಿಸುವುದಕ್ಕಾಗಿ ಮುಬಾರಕನ ಸಹಾಯದೊಂದಿಗೆ ಹೊರಟಿದ್ದನಷ್ಟೆ? ರಾಜಸಿಂಹನು ಆತನ ಸಮಾಚಾರವನ್ನು ತಕ್ಕೊಂಡು ಕುಮಾರ ಜಯಸಿಂಹನ ಸಂಕಟವನ್ನು ದೂರಮಾಡಬೇಕಾಗಿತ್ತು. ಆ ಕೆಲಸಕ್ಕಾಗಿ ರಾಣಾನು ಗೋಪೀಚಂದ ರಾಠೋಡನನ್ನು ಸೈನ್ಯದೊಡನೆ ಕಳಿಸಬೇಕಾಗಿತ್ತು; ಆದರೆ ತನ್ನ ಸ್ವಲ್ಪ ಸೈನ್ಯವು ದಿಲೇರಖಾನನ ಪ್ರಚಂಡ ಸೈನ್ಯಕ್ಕೆ ಈಡಾಗಲಿಕ್ಕಿಲ್ಲವೆಂದು ತಿಳಿದು ಆತನು ಆಲೋಚಿಸುತ್ತಿದ್ದನು. ಅಷ್ಟರಲ್ಲಿ ಚಂಚಲಕುಮಾರಿಯ ತಂದೆಯಾದ ವಿಕ್ರಮಸಿಂಹನು ಎರಡುಸಾವಿರ ಸೈನ್ಯದೊಡನೆ ತನ್ನನ್ನು ಕಾಣುವುದಕ್ಕಾಗಿ ಬಂದಿರುವನೆಂದು ಸೇವಕನು ಹೇಳಿದನು. ವಿಕ್ರಮಸಿಂಹನು ತನ್ನ ಪಕ್ಷವನ್ನೇ ವಹಿಸಬಂದಿರುವನೆಂಬ ನಂಬಿಕೆಯು

ರಾಣಾನಿಗಾಗಲಿಲ್ಲ. ಆತನು ವಿಕ್ರಮಸಿಂಹನಿಗೆ—''ವಿಕ್ರಮಸಿಂಹಜೀ, ನೀವು ಒಬ್ಬರೇ ನನ್ನನ್ನು ಕಾಣಲಿಕ್ಕೆ ಬರುವಹಾಗಿದ್ದರೆ, ಈಗಲೇ ಬಂದು ನನ್ನನ್ನು ಕಾಣಬಹುದು; ಆದರೆ ಎರಡುಸಾರೆ ರಾವುತರೊಡನೆ ನೀವು ನನ್ನನ್ನು ಕಾಣುವ ಹಾಗಿದ್ದರೆ, ಸಮರಭೂಮಿಯು ಸಿದ್ಧವಾಗಿರುವುದು; ಅಲ್ಲಿ ನಿಮ್ಮನ್ನು ಕಾಣಲಿಕ್ಕೆ ಸೈನ್ಯಸಹಿತವಾಗಿ ನಾನೇ ಬರುವೆನು'' ಎಂದು ಹೇಳಿಕಳಿಸಲು, ವಿಕ್ರಮಸಿಂಹನು ಒಬ್ಬನೇ ರಾಣಾನನ್ನು ಕಾಣಲಿಕ್ಕೆ ಬಂದು ರಾಣಾನಿಗೆ ಕಾಣಿಕೆಯನ್ನು ಒಪ್ಪಿಸಿದನು; ಆದರೆ ರಾಜಸಿಂಹನು ಆ ಕಾಣಿಕೆಯನ್ನು ಸ್ವೀಕರಿಸದೆ—''ಈಗ ಈ ಕಾಣಿಕೆಯು ಮೊಗಲ ಬಾದಶಹನಿಗೆ ಮುಟ್ಟತಕ್ಕದ್ದು'' ಎಂದು ಹೇಳಿದನು.

ಮಹಾರಾಣಾ ರಾಜಸಿಂಹನ ಈ ಮಾತಿನ ಉತ್ತರವಾಗಿ ವಿಕ್ರಮಸಿಂಹನು—''ಮಹಾರಾಣಾಜೀ, ನನ್ನನ್ನು ಕ್ಷಮಿಸಬೇಕು. ಮಹಾರಾಣಾ ರಾಜಸಿಂಹನು ಬದುಕಿ ಇರುವ ವರೆಗೆ ಇನ್ನು ಯಾವ ರಜಪೂತನೂ ಔರಂಗಜೇಬನೇ ಮೊದಲಾದ ಮೊಗಲ ಬಾದಶಹನಿಗೆ ಕಾಣಿಕೆ ಕೊಟ್ಟಾನೆಂದು ನಾನಂತೂ ತಿಳಿಯುವುದಿಲ್ಲ. ಈಗ ನಾನು ಮುದುಕನಾಗಿದ್ದರೂ, ನನ್ನ ಭುಜಬಲವು ಇನ್ನೂ ತಗ್ಗದಿರುವುದರಿಂದ, ನನ್ನ ಎರಡುಸಾವಿರ ಜನ ರಾವುತರೊಡನೆ ಮೊದಲು ಮಹಾರಾಣಾರವರ ಸೇವೆಯಲ್ಲಿ ಯಶಸ್ಸನ್ನು ಸಂಪಾದಿಸಿ, ಆಮೇಲೆ ಏನು ಮಾತನಾಡುವುದನ್ನು ಮಾತನಾಡುವೆನು'' ಎಂದು ನುಡಿದನು. ಆ ವೃದ್ಧ ವೀರನ ಮಾತುಗಳನ್ನು ಕೇಳಿ ರಾಣಾನು ಸಂತುಷ್ಟನಾಗಿ—''ವಿಕ್ರಮಸಿಂಹಜೀ, ನಿಮ್ಮ ಮಾತುಗಳು ಸಾಳುಂಕಿ ವಂಶದ ವೀರರಿಗೆ ಬಹಳವಾಗಿ ಒಪ್ಪುತ್ತವೆ. ತಾವು ಸರ್ವ ಅಧಿಪತ್ಯವನ್ನು ಕೈಕೊಂಡು ಗೋಪೀಚಂದರೊಡನೆ ಮಾಣಿಕಲಾಲನ ಸಹಾಯದಿಂದ ದಿಲೇರಖಾನನ ಮೇಲೆ ಸಾಗಿ ಹೋಗಬೇಕು'' ಎಂದು ಆಜ್ಞಾಪಿಸಿದನು.

## ವಿವಾಹ ಸಮಾರಂಭ!

ವಿಕ್ರಮಸಿಂಹನೂ, ಗೋಪೀನಾಥ ರಾಠೋಡನೂ, ಮಾಣಿಕಲಾಲ ಸಿಂಹನೂ ತಮ್ಮ ತಮ್ಮ ಸೈನ್ಯಗಳೊಡನೆ ದಿಲೇರಖಾನನ ಸಮಾಚಾರ ತಕ್ಕೊಳ್ಳುವುದಕ್ಕಾಗಿ ಹೊರಟರು. ಅವರು ತಮ್ಮ ಸೈನ್ಯಗಳನ್ನು ಮೂರು ಕಡೆಗೆ ಸಾಗಿಸಿಕೊಂಡು ಹೋಗಿ ಆಯಕಟ್ಟಿನ ಸ್ಥಳ ನೋಡಿ ನಿಂತುಕೊಂಡರು. ವಿಕ್ರಮಸಿಂಹನ ರಾವುತರ ಸೈನ್ಯಕ್ಕೆ ಅಡಗಿಕೊಂಡು ನಿಲ್ಲಲಿಕ್ಕೆ ಬರುವ ಹಾಗಿಲ್ಲದ್ದರಿಂದ, ದಿಲೇರಖಾನನಿಗೆ ಆತನಿರುವ ಸ್ಥಳವು ಗೊತ್ತಾಯಿತು. ಆಗ ಆ ಮೊಗಲ ಸೇನಾಪತಿಯು ವಿಕ್ರಮಸಿಂಹನ ಸೈನ್ಯದ ಮೇಲೆ ಸಾಗಿಹೋಗುವುದಕ್ಕೆ ತನ್ನ ಶೂರರಾದ ಮೊಗಲ ರಾವುತರನ್ನು ಆಜ್ಞಾಪಿಸಿದನು. ಆಗ ಉಭಯ ಪಕ್ಷದ ರಾವುತರಲ್ಲಿ ಯುದ್ಧವು ಆರಂಭ ವಾಯಿತು. ವಿಕ್ರಮಸಿಂಹನು ಸ್ವಲ್ಪ ಹೊತ್ತು ಕಾದಿ ತನ್ನ ಸೈನ್ಯದೊಡನೆ ಹಿಂದಕ್ಕೆ ಸರಿದನು. ಆತನು ಸೋತು ಹಿಂದಕ್ಕೆ ಸರಿದನೆಂದು ಮೊಗಲರು ಆತನ ಮೇಲೆ ಆವೇಶದಿಂದ

ಸಾಗಿಹೋದರು; ಆದರೂ ಯುದ್ಧಕುಶಲನಾದ ವಿಕ್ರಮಸಿಂಹನು ಅವರೊಡನೆ ಕಾದದೆ ಹಿಂದಕ್ಕೆ ಸರಿಯುತ್ತ ಸರಿಯುತ್ತ ಮಾಣಿಕಲಾಲನು ಸೈನ್ಯದೊಡನೆ ಅಡಗಿಕೊಂಡು ಕುಳಿತಿರುವ ಸ್ಥಳದ ವರೆಗೆ ಸಾಗಿದನು. ಚತುರನಾದ ಮಾಣಿಕಲಾಲನು ಹಾಗೆಯೇ ಮೊಗಲ ಸೈನ್ಯವನ್ನು ಮುಂದಕ್ಕೆ ಸಾಗಿಸಿಬಿಟ್ಟನು. ಮೊಗಲ ಸೈನ್ಯವು ಮುಂದಕ್ಕೆ ಸಾಗಿರುವಾಗ ಅದರ ಮುಂದೆ ವಿಕ್ರಮಸಿಂಹನ ರಾವುತರು, ಎಡಕ್ಕೆ ಮಾಣಿಕಲಾಲನ ಕಾಲಾಳ ಸೈನ್ಯವು, ಬಲಕ್ಕೆ ಗೋಪೀನಾಥ ರಾಠೋಡನ ಸೈನ್ಯವು ಆಗಿ ಮೊಗಲ ಸೈನ್ಯವು, ಈ ಮೂರೂ ಸೈನ್ಯಗಳ ನಡುವೆ ಸಿಕ್ಕಿತು. ಮೂರೂಕಡೆಯ ರಜಪೂತ ಸೈನಿಕರು ಅದರ ಮೇಲೆ ಬಿದ್ದು ಆ ಮೊಗಲ ಸೈನ್ಯವನ್ನು ಸಂಹರಿಸಹತ್ತಿದರು. ಆಗ ಪ್ರಕಟವಾದ ಮೊಗಲರ ಪರಾಕ್ರಮವು ಪ್ರಶಂಸನೀಯವಾಗಿತ್ತು. ಅಷ್ಟರಲ್ಲಿ ಕುಮಾರ ಜಯಸಿಂಹನೂ ಹಿಂದಿನಿಂದ ಬಂದು ಮೊಗಲ ಸೈನ್ಯದ ಮೇಲೆ ಬಿದ್ದನು. ಹೀಗೆ ಘೋರ ಯುದ್ಧವು ನಡೆದಿರುವಾಗ ಮುಬಾರಕನ ಶೂರ ಸೈನಿಕರು ಒಳ್ಳೆಯ ಶೌರ್ಯವನ್ನು ತೋರಿಸಹತ್ತಿದರು. ಆಗಿನ ಮುಬಾರಕನ ಪರಾಕ್ರಮವನ್ನು ನೋಡಿ ರಜಪೂತ ವೀರರು ಮೆಚ್ಚಿದರು. ಮುಬಾರಕನ ಸೈನ್ಯವು ಕ್ರಮಕ್ರಮವಾಗಿ ಸಣ್ಣಾಗುತ್ತ ಹೋಯಿತು; ಆದರೂ ಮುಬಾರಕನು ರಣಭೂಮಿಯಿಂದ ಹಿಂದಕ್ಕೆ ಸರಿಯದಾದನು. ಆಗ ಮಾಣಿಕಲಾಲನು ಗಟ್ಟಿಯಾಗಿ ಕೂಗಿ ತನ್ನ ರಜಪೂತ ಸೈನ್ಯವನ್ನು ಕುರಿತು—''ವೀರರೇ, ಇನ್ನು ಆ ಮೊಗಲ ವೀರರೊಡನೆ ಕಾದದೆ ಅವರನ್ನು ಸುರಕ್ಷಿತವಾಗಿ ಹೋಗಗೊಡಿರಿ. ಅಂತಹ ವೀರರು ಕ್ಷೀಣಬಲರಾಗಿರಲು, ಅವರನ್ನು ಸಂಹರಿಸುವುದು ನಮ್ಮ ಧರ್ಮವಲ್ಲ'' ಎಂದು ಹೇಳಿದನು. ಅದನ್ನು ಕೇಳಿ ಮುಬಾರಕನು—''ಮಾಣಿಕಲಾಲ, ಈವರೆಗೆ ನಾನು ಯುದ್ಧದಲ್ಲಿ ಎಂದೂ ಓಡಿಹೋಗಿರುವುದಿಲ್ಲ, ಈಗಾದರೂ ಓಡಿಹೋಗುವುದಿಲ್ಲ, ನನ್ನಂತೆ ನನ್ನ ಸೈನಿಕರೂ ಸಮರಭೂಮಿಯಿಂದ ಚಲಿಸಲಾರರು'' ಎಂದು ಹೇಳಿ, ಶೌರ್ಯದಿಂದ ಕಾದಹತ್ತಿದನು. ಅಷ್ಟರಲ್ಲಿ ಗುಡ್ಡದ ಮೇಲಿಂದ ತುಬಾಕಿಯದೊಂದು ಗುಂಡು ಸುಂಯ್‌ಗುಟ್ಟುತ್ತ ಬಂದು ಮುಬಾರಕನ ತಲೆಗೆ ಬಡಿದು, ಕೂಡಲೆ ಆತನು ನೆಲಕ್ಕೆ ಬಿದ್ದು ಮರಣಹೊಂದಿದನು. ಹೀಗೆ ಮುಬಾರಕನನ್ನು ಕೊಂದವರು ಯಾರೆಂದು ಮಾಣಿಕಲಾಲನು ನೋಡುತ್ತಿರಲು, ಒಬ್ಬ ಹೆಂಗಸು ಗುಡ್ಡದ ಮೇಲೆ ನಿಂತು ಗುಂಡು ಹೊಡೆದಿದ್ದಳು! ಆಕೆಯ ತುಬಾಕಿಯಿಂದ ಇನ್ನೂ ಹೊಗೆಯು ಹೊರಡುತ್ತಿತ್ತು, ಆಕೆಯು ಬೇರೆ ಯಾರೂ ಆಗಿರದೆ, ಮುಬಾರಕನ ಹೆಂಡತಿಯಾದ ಹುಚ್ಚಿ ದರಿಯಾ ಬೀಬಿಯೇ ಆಗಿದ್ದಳು! ಆಗ ಮೊಗಲ ಸೈನ್ಯವು ಸಿಕ್ಕತ್ತ ಓಡತೊಡಗಿತು; ಕೈಗೆ ಸಿಕ್ಕವರು ಪ್ರಾಣ ಕಳೆದುಕೊಂಡರು. ಶಹಾಜಾದಾ ಅಕಬರನೂ, ದಿಲೇರಖಾನನೂ ಬಹಳ ಕಷ್ಟದಿಂದ ಓಡಿಹೋಗಿ ಬಾದಶಹನನ್ನು ಕೂಡಿದರು. ತನ್ನ ಸೈನ್ಯದ ಈ ಸೋಲನ್ನು ನೋಡಿ ಬಾದಶಹನು ಬಹಳ ದುಃಖಿತನಾದನು. ಆತನ ಯುದ್ಧೋಲ್ಲಾಸವು ಕುಗ್ಗಿತು.

ಬಾದಶಹನು ಹೊರಗೆ ಎಷ್ಟು ಒಗರಿನ ಮಾತುಗಳನ್ನಾಡಿದರೂ, ಆತನ ಅಂತರಂಗದಲ್ಲಿ ರಾಜಸಿಂಹನೊಡನೆ ಕಾದುವ ಧೈರ್ಯವಿದ್ದಿಲ್ಲ, ಹಾಗೆ ಕಾದುವುದರಿಂದ ಆತನಿಗೆ ತನ್ನ ಸೈನ್ಯದ ಸಂಹಾರವಲ್ಲದೆ ಬೇರೆ ಲಾಭವೂ ತೋರಲಿಲ್ಲ. ತಾನು ಹಟಕ್ಕೆ ಬಿದ್ದು ಹೀಗೆಯೇ ರಾಜಸಿಂಹನಂತಹ ಶೂರ ರಜಪೂತನೊಡನೆ ಕಾದಹತ್ತಿದರೆ, ಬಹಳ ಕಾಲದ ವರೆಗೆ

ಲಾಭವಿಲ್ಲದ ಯುದ್ಧದಲ್ಲಿ ಕಾಲಹರಣ ಮಾಡಬೇಕಾಗುವುದೆಂದು ಆತನು ತಿಳಿಸಿದನು. ಇದಲ್ಲದೆ ಎಲ್ಲ ರಜಪೂತರು ರಾಜಸಿಂಹನ ಕೈಕೆಳಗೆ ಒಟ್ಟುಗೂಡಿ ತನ್ನ ಮೇಲೆ ಶಸ್ತ್ರ ಹಿಡಿಯಬಹುದೆಂದು ಆತನು ತಿಳಿದಿದ್ದನು. ಆತನು ಈಗ ದಕ್ಷಿಣ ಹಿಂದುಸ್ತಾನದಲ್ಲಿರುವ ವಿಜಾಪುರ, ಗೋವಳಕೊಂಡಗಳ ರಾಜ್ಯಗಳನ್ನೂ, ದಿನದಿನಕ್ಕೆ ಪ್ರಬಲವಾಗುತ್ತಿರುವ ಮರಾಠರನ್ನೂ ಮುರಿಬಡಿಯಬೇಕಾಗಿತ್ತು; ಆದುದರಿಂದ ಔರಂಗಜೇಬನು ಇತ್ತ ಉತ್ತರ ಹಿಂದುಸ್ಥಾನದೊಳಗಿನ ರಜಪೂತರ ಕಾಟವು ತಪ್ಪುವುದಕ್ಕಾಗಿ ರಾಜಸಿಂಹ ನೊಡನೆ ಒಡಂಬಡಿಕೆಯನ್ನು ಮಾಡಿಕೊಂಡು, ದಕ್ಷಿಣದ ಕಡೆಗೆ ಸಾಗಿದನು. ಹೀಗೆ ಒಮ್ಮೆ ದಕ್ಷಿಣಕ್ಕೆ ಸಾಗಿದ ಬಾದಶಹನು ತಿರುಗಿ ದಿಲ್ಲಿಗೆ ಬರಲೇ ಇಲ್ಲ. ಆತನು ದಕ್ಷಿಣ ಹಿಂದುಸ್ತಾನದಲ್ಲಿ ಅಖಂಡ ಇಪ್ಪತ್ತೈದು ವರ್ಷ ಕಾದಿ, ವಿಜಾಪುರ–ಗೋವಳಕೊಂಡಗಳ ರಾಜ್ಯಗಳನ್ನು ಮಣ್ಣುಗೂಡಿಸಿದನು. ಬಾದಶಹನು ಮಹಾರಾಷ್ಟ್ರರ ಕಾಟವನ್ನು ತಾಳಲಾರದೆ ಹಿಂದಕ್ಕೆ ಸರಿಯುತ್ತ ಸರಿಯುತ್ತ ಅಹಮ್ಮದನಗರಕ್ಕೆ ಬಂದು ಅಲ್ಲಿ ಮುಪ್ಪಿನ ಮುದುಕನಾದ ಆತನು ಮರಣಹೊಂದಿದನೆಂಬುದನ್ನು ಇತಿಹಾಸಜ್ಞರು ಬಲ್ಲರು.

ಹೀಗೆ ರಾಜಸಿಂಹನು ಪೂರ್ಣ ಜಯಶಾಲಿಯಾಗಲು, ವಿಕ್ರಮಸಿಂಹನು ತನ್ನ ಮಗಳಾದ ಚಂಚಲಕುಮಾರಿಯನ್ನು ಆತನಿಗೆ ಲಗ್ನಮಾಡಿಕೊಡುವುದನ್ನು ನಿಶ್ಚಯಿಸಿದನು. ತನ್ನ ಆ ನಿಶ್ಚಯವನ್ನು ರಾಜಸಿಂಹನಿಗೆ ತಿಳಿಸಲು, ರಾಜಸಿಂಹನು ಸಂತೋಷದಿಂದ ಒಪ್ಪಿದನು. ಜಯಶಾಲಿಯಾದ ರಾಜಸಿಂಹನು ಮಹೋತ್ಸವದಲ್ಲಿ ಉದಯಪುರವನ್ನು ಹೊಕ್ಕನು. ಈ ಯುದ್ಧದಲ್ಲಿ ರಾಜಸಿಂಹನ ಕುಮಾರರು ಬಹಳ ಪರಾಕ್ರಮದಿಂದ ಕಾದಿ ರಣಕೌಶಲ್ಯದ ಪಾಠವನ್ನು ತನ್ನ ತಂದೆಯ ಗುರುತ್ವದಲ್ಲಿ ಕಲಿತುಕೊಂಡರು. ವಿಕ್ರಮಸಿಂಹನು ತನ್ನ ಕುಲಪುರೋಹಿತರಾದ ಅನಂತಮಿಶ್ರರನ್ನು ಮುಂದೆ ಮಾಡಿಕೊಂಡು ತನ್ನ ಮಗಳಾದ ಚಂಚಲಕುಮಾರಿಯೊಡನೆ ರಾಜಸಿಂಹನ ಬಳಿಗೆ ಬಂದನು. ಆ ಭೂದೇವ ಅನಂತಮಿಶ್ರನ ಸಾಕ್ಷಿಯಿಂದ ವಿಕ್ರಮಸಿಂಹನು ತನ್ನ ಮಗಳ ಹಸ್ತವನ್ನು ರಾಜಸಿಂಹನ ಹಸ್ತದಲ್ಲಿಟ್ಟು ತನ್ನ ಮಗಳನ್ನು ಕುರಿತು—''ಕುಮಾರೀ, ಇಂದು ನನ್ನ ಮನಸ್ಸಿನ ಬಯಕೆಯು ಪೂರ್ಣವಾಯಿತು! ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿದ್ದರಿಂದ ಮಹಾರಾಣಾ ರಾಜಸಿಂಹರಂತಹ ಕುಲದೀಪಕರಿಗೆ ನಿನ್ನನ್ನು ದಾನಮಾಡಿ ನನ್ನ ಸಾಳುಂಕಿ ವಂಶವನ್ನೇ ಧನ್ಯವಾಗಿ ಮಾಡಿಕೊಂಡೆನು! ನನ್ನ ಶಾಪವಚನವನ್ನು ನಾನು ಪಶ್ಚಾತ್ತಾಪದಿಂದ ವ್ಯರ್ಥಗೊಳಿಸಿದ್ದೇನೆ. ನನ್ನ ಈ ಧನ್ಯತೆಗೆ ತಪೋಧನರಾದ ನಮ್ಮ ಪುರೋಹಿತ ಅನಂತ ಮಿಶ್ರರ ಪರಮಾನುಗ್ರಹವು ಕಾರಣವಾಗಿರುವುದನ್ನು ನಾನು ಮರೆಯಲಾರೆನು. ಇಂತಹ ಮಹಾತ್ಮರ ಮಹಾತ್ಮ್ಯದಿಂದಲೇ ಸಾಳುಂಕಿ ಮನೆತನವು ಇಂದಿಗೂ ಔರಂಗಜೇಬನ ಶರೀರಸಂಬಂಧದ ಕಲಂಕಕ್ಕೆ ಗುರಿಯಾಗದೆ ಇರುವುದು'' ಎಂದು ಹೇಳಿ, ಆನಂದಾಶ್ರುಗಳು ಉದುರುತ್ತಿರಲು, ರಾಜಸಿಂಹನನ್ನು ಅತ್ಯಾದರದಿಂದ ನೋಡಿದನು. ಈ ಆನಂದದ ಪ್ರಸಂಗವನ್ನು ನೋಡಿ ಭೂಸುರೋತ್ತಮರಾದ ಅನಂತಮಿಶ್ರರ ಕಣ್ಣುಗಳು ಬಾಷ್ಪಪೂರ್ಣವಾದವು! ಚಂಚಲ ಕುಮಾರಿಯು ರಾಜಸಿಂಹ ನೊಡನೆ ತಮ್ಮ ಚರಣಕ್ಕೆ ಎರಗುತ್ತಿರಲು, ಮಿಶ್ರರು ಅತ್ಯಂತ ವಾತ್ಸಲ್ಯದಿಂದ ಆಕೆಯನ್ನು

ಹಿಡಿದೆತ್ತಿ ಕಂಠವು ಸದ್ಗದಿತವಾಗಿರಲು, ಕಂಪಿತ ಸ್ವರದಿಂದ ಆಕೆಯನ್ನು—''ಸೌಭಾಗ್ಯವತಿಯಾಗಮ್ಮಾ ವೀರ ಪ್ರಸುವಾಗು'' ಎಂದು ಆಶೀರ್ವದಿಸಿದರು! ಪ್ರಿಯವಾಚಕರೇ, ಬ್ರಹ್ಮಕ್ಷಾತ್ರಗಳ ಸಮ್ಮೇಲನದ ವೈಭವವನ್ನು ನೋಡಿದಿರೇನು? ಅನಂತಶರ್ಮರಂತಹ ತಪೋಧನ ಬ್ರಾಹ್ಮಣರೂ, ರಾಜಸಿಂಹನಂತಹ ಪರಾಕ್ರಮಿಗಳಾದ ಉದಾರ ಚರಿತ್ರದ ಧರ್ಮಿಷ್ಠ ಕ್ಷತ್ರಿಯರೂ, ಚಂಚಲಕುಮಾರಿಯಂತಹ ಕುಲವಧುಗಳೂ ಉದಯವಾಗುತ್ತಿರುವ ವರೆಗೆ ಭರತಭೂಮಿಯು ಹೇಗೆ ಅಧನ್ಯವಾಗುವುದು? ರೂಪನಗರದಿಂದ ಬೀಗರು ಬಂದರು, ನಾಲ್ಕೂ ಕಡೆಯಿಂದ ವಧೂ–ವರರ ಪಕ್ಷದ ಆಪ್ತೇಷ್ಟರು ಕೂಡಿದರು; ಬ್ರಾಹ್ಮಣರ ಸಮೂಹವು ನೆರೆಯಿತು. ಲಗ್ನಸಮಾರಂಭದಲ್ಲಿ ದಿನಗಳು ಒಂದೊಂದಾಗಿ ಕಳೆದು ಹೋಗುತ್ತಿರುವುದು ಜನರಿಗೆ ಗೊತ್ತಾಗದೆ ಹೋಯಿತು, ರಾಜಸಿಂಹನ ವಿಜಯದ ಕೀರ್ತಿಯೊಡನೆ ಧರ್ಮಮೂಲವಾದ ಆತನ ವಿವಾಹದ ಸುಮಂಗಲ ಕೀರ್ತಿಯೂ ಲೋಕ ಕಲ್ಯಾಣ ಕಾರಕವಾಗಿ ದಿಕ್ಕುದಿಕ್ಕಿಗೆ ಪಸರಿಸಹತ್ತಿತು!

**ಸಮಾಪ್ತ**

ಗಳಗನಾಥ ಸಮಗ್ರ ಸಾಹಿತ್ಯ

# ನಿಮ್ಮ ನೆನೆದಾಗಲೆ ಉದಯ

'ಗಳಗನಾಥ' ಹಾವೇರಿ ಜಿಲ್ಲೆಯ ಒಂದು ಹಳ್ಳಿ. ವೆಂಕಟೇ
ತಿರಕೋ ಕುಲಕರ್ಣಿಯವರು ತಮ್ಮ ಈ ಹಳ್ಳಿಯ ಹೆಸರನ್
ಕಾವ್ಯನಾಮವಾಗಿ ಬಳಸುವ ಮೂಲಕ, ಅದನ್ನು ಸಾಹಿತ್ಯದ
ಚಿರಸ್ಥಾಯಿಗೊಳಿಸಿದರು.

ಧಾರವಾಡದ ಗಂಡುಮಕ್ಕಳ ಟ್ರೇನಿಂಗ್ ಕಾಲೇಜು ಇವ
ಸಾಹಿತ್ಯಿಕ ವ್ಯಕ್ತಿತ್ವವನ್ನು, ಅಗಡಿ ಆನಂದಾಶ್ರಮ ಇವರ ಆಧ್ಯಾತ್ಮಿ
ವ್ಯಕ್ತಿತ್ವವನ್ನು ರೂಪಿಸಿದವು. ಈ ಎರಡೂ ಆಯಾಮಗಳ
ಆಧಾರವಾದುದು ಅವರ ಕನ್ನಡ ಶಾಲೆಯ ಶಿಕ್ಷಕವೃತ್ತಿ. ಹೊಸಗನ್ನ
ಸಾಹಿತ್ಯಿಕ ಪರಿಸರವನ್ನು ಮೈಸೂರು ಪ್ರದೇಶದಲ್ಲಿ ರಾಜರ ಆಸ್ಥಾ
ವಿದ್ವಾಂಸರು ಸೃಷ್ಟಿಸಿದರೆ, ಉತ್ತರ ಕರ್ನಾಟಕದಲ್ಲಿ ಅಂತ
ಪರಿಸರವನ್ನು ಕನ್ನಡ ಶಾಲೆಯ ಮಾಸ್ತರರು ಸೃಷ್ಟಿಸಿದರು. ಇವರ
ಎದ್ದು ಕಾಣುವ ಹೆಸರು, ಗಳಗನಾಥ ಮಾಸ್ತರು.

೨೦ನೆಯ ಶತಮಾನದಲ್ಲಿ ಗದ್ಯಯುಗವನ್ನು ಆಳಿದುದ
ಕಾದಂಬರಿ. ಹೀಗಾಗಿ ಈ ಶತಮಾನವನ್ನು "ಕಾದಂಬ
ಪ್ರಧಾನಯುಗ" ವೆಂದು ಕರೆಯಬಹುದಾಗಿದೆ. ಇದು ನವೋದಯ
ಪ್ರಗತಿಶೀಲ, ನವ್ಯವೆಂಬ ಮೂರು ಹಂತಗಳಲ್ಲಿ ಸಾಗಿ ಬಂದಿ
ಇವುಗಳಲ್ಲಿ ಪ್ರಗತಿಶೀಲವೆಂಬುದು ಒಂದು ಪ್ರಯೋಗವಾ
ಉಳಿಯಿತೇ ಹೊರತು, ಪರಂಪರೆಯಾಗಿ ಬೆಳೆಯಲಿಲ್ಲ. ಇತ್ತೀಚೆ
ನವ್ಯ ಕಾದಂಬರಿ ಬಂದು ಪರಂಪರೆಯಾಗಿ ಬೆಳೆಯುತ್ತಲಿದ್ದರೂ ಅದ
ಸಂಖ್ಯೆ ಕಡಿಮೆ. ಆದುದರಿಂದ ಇಂದಿಗೂ ಕಾದಂಬರಿ ಕ್ಷೇತ್ರವನ
ಬಹುಪಾಲು ವ್ಯಾಪಿಸಿದುದು ನವೋದಯಪ್ರಜ್ಞೆಯ ಕಾದಂಬರಿ. ಈ
ಪ್ರಜ್ಞೆಯ ಮೂಲಪುರುಷರಲ್ಲಿ ಮುಖ್ಯವೆನಿಸಿದ್ದಾರೆ. ಕಾದಂಬ
ಪಿತಾಮಹ ಗಳಗನಾಥರು.

ಸಾಹಿತ್ಯವನ್ನು ಸೃಷ್ಟಿಸುವವನು ಸಾಹಿತಿಯಾದರೂ ಅದ
ವಾರಸುದಾರರು ಸಹೃದಯರು. ಈಗಿನಂತೆ ಪುಸ್ತಕದ ಉತ್ಪಾದನೆ
ಅನುಕೂಲವಿಲ್ಲದ ಪ್ರಾಚೀನಕಾಲದಲ್ಲಿಯೂ ಇವರು ಉತ್ತಮ ಸಾಹಿತ
ಕೃತಿಗಳನ್ನು ತಲೆಮಾರಿನಿಂದ ತಲೆಮಾರಿಗೆ ಪ್ರತಿಮಾಡುತ್ತ
ಮಾಡಿಸುತ್ತ ಬಂದಿದ್ದಾರೆ. ಹೀಗಿರುವಾಗ ಎಲ್ಲ ಬಗೆ
ಅನುಕೂಲತೆಗಳನ್ನು ಹೊಂದಿರುವ ಇಂದಿನ ಕಾಲದವರಾದ ನಾ
ಅವುಗಳ ಮರುಮುದ್ರಣ ವಿಷಯದಲ್ಲಿ ಹೆಚ್ಚು ಆಸಕ್ತಿವಹಿಸುವದು ತೀ
ಸಹಜ. ಆದುದರಿಂದ, ಪ್ರಾಚೀನ ಹಸ್ತಪ್ರತಿಗಳ ಪರಿಷ್ಕರಣ - ಮುದ್ರಣ
ಮರುಮುದ್ರಣದಂತೆ ನವೋದಯಕಾಲೀನ ಯಂತ್ರಪ್ರತಿಗಳನ
ಮತ್ತೆ ಮತ್ತೆ ಅಚ್ಚಿಸಿ ಓದುಗರಿಗೆ ಒದಗಿಸುತ್ತಲಿದ್ದೇವೆ.

ಎಂ. ಎಂ. ಕಲಬುಗಿ
ಪ್ರಧಾನ ಸಂಪಾದಕ


ISBN 978-93-81822-41-8

Rs. 2000/- (Set of 6 Volumes)

ಗಳಗನಾಥರ ವರ್ಣಚಿತ್ರ ಕೃಪೆ : ಎಸ್.ಸಿ. ದೇಸಾಯಿ